# ಜೀವನ-ರಸಾಯನ-ಚಿಕಿತ್ಸಾಶಾಸ್ತ್ರ

ಅರ್ಥಾತ್

# ಹನ್ನೆರಡು-ಕ್ಷಾರ-ಚಿಕಿತ್ಸಾಶಾಸ್ತ್ರ

ಲೇಖಕ

**ಡಾ. ಗೋಪಾಳ ಸದಾಶಿವ ಪಳಸುಲೆ**

ಎಲ್. ಎಮ್. ಆ್ಯಂಡ ಎಸ್. (ಸ್ಪೆಶಲ್) ಎಲ್. ಎಚ್. ಎಮ್. ಎಸ್.

ಇನ್‌ಫ್ಲುಎಂಜಾ, ಮಹಾಮಾರಿ ಅಥವಾ ಕಾಲರಾ, ಬಾಲರೋಗ ಚಿಕಿತ್ಸೆ,
ಹೋಮಿಯೋಪಥಿಯ ಲಘುನಿಘಂಟು ಮೊದಲಾದ ಮರಾಠಿ
ಪುಸ್ತಕಗಳ ಹಾಗು ಫಿಜಿಶಿಯನ್ಸ ಹ್ಯಾಂಡಬುಕ್ ಆಫ್
ಬಾಯೊಕೆಮಿಸ್ಟ್ರಿ ಎಂಬ ಇಂಗ್ಲಿಷ ಪುಸ್ತಕದ ಲೇಖಕ

ಭಾಷಾಂತರಕಾರ

**ನಾರಾಯಣ ತಿರುಮಲರಾವ ದಾತಾರ,** ಬಿ. ಎ.

ವಕೀಲ, ಬೆಳಗಾವ

೧೯೩೭

ಬೆಲೆ ೩ ರೂಪಾಯಿ

ಪ್ರಕಾಶಕರು:
**ಗೋಪಾಳ ಸದಾಶಿವ ಪಳಸುಲೆ**
೨೨ ಬುಧವಾರ, ಪುಣೆ ನಂ. ೨



ಮುದ್ರಕ:
**ಕೆ. ಆರ್. ಭಿಸೆ**
ಕರ್ನಾಟಕ ಪ್ರಿಂಟಿಂಗ ವರ್ಕ್ಸ್,
ಧಾರವಾಡ.

# ಪ್ರಸ್ತಾವನೆ

ಇತ್ತೀಚೆಗೆ ಮಹಾರಾಷ್ಟ್ರದಲ್ಲಿ (ಕರ್ನಾಟಕದಲ್ಲಿ ಸಹ) ಜೀವನ ರಸಾಯನದ ಔಷಧಗಳು ಹೆಚ್ಚು ಪ್ರಮಾಣದಲ್ಲಿ ಉಪಯೋಗಿಸಲ್ಪಡುತ್ತಿವೆ. ಎಷ್ಟೋ ಡಾಕ್ಟರರು ತಮ್ಮ ಆಸ್ಪತ್ರಿಗಳಲ್ಲಿ ಸಹ ಈ ಔಷಧಗಳನ್ನು ಹೆಚ್ಚು ಕಡಿಮೆ ಪ್ರಮಾಣದಲ್ಲುಪಯೋಗಿಸಲಾರಂಭಿಸಿದ್ದಾರೆ. ಚಿಕಿತ್ಸೆಯ ತತ್ವ, ಔಷಧಗಳನ್ನು ಸಿದ್ಧಮಾಡುವ ಕೃತಿ, ಅವುಗಳನ್ನು ತೆಗೆದುಕೊಳ್ಳುವ ಪದ್ಧತಿ ಇವುಗಳಲ್ಲಿ ಕಂಡುಬರುವ ಸೌಕರ್ಯವೂ, ಸೌಲಭ್ಯವೂ, ಇವೇ ಮುಂತಾದ ವುಗಳು ಈ ಚಿಕಿತ್ಸಾಪದ್ಧತಿಯ ಮುಖ್ಯ ಗುಣಗಳು. ಹೋಮಿಯೋ ಪಥಿಯ ಹೊರತಾಗಿ ಇತರ ಯಾವದೇ ಔಷಧ ಪದ್ಧತಿಯಲ್ಲಿ ಇಷ್ಟು ಸುಲಭತನವು ಕಂಡುಬರುವದಿಲ್ಲ. ಈ ಔಷಧಗಳಿಂದ ಬರುವ ಗುಣವು ತೀವ್ರ ಬರುವದು ಹಾಗೂ ಬಹುಕಾಲ ತಡೆಯುವದು. ಈ ಪದ್ಧತಿಯ ಔಷಧಗಳಿಗೂ ಇತರ ಅಂದರೆ ಆಯುರ್ವೇದಿಕ ಅಥವಾ ಅಲೋಪಥಿಯ ಪದ್ಧತಿಯ ಔಷಧಗಳಿಗೂ ಬಹಳೇ ಅಭ್ಯಂತರವುಂಟು. ಈ ಪದ್ಧತಿಯಲ್ಲಿ ತಪ್ಪಿ ಬೇರಾವ ಔಷಧಗಳು ತೆಗೆದುಕೊಳ್ಳಲ್ಪಟ್ಟಾಗ್ಯೂ ಅಥವಾ ತಪ್ಪುತಡೆ ಯಿಂದ ಹೆಚ್ಚುಕಡಿಮೆ ಸೇವಿಸಲ್ಪಟ್ಟಾಗ್ಯೂ ಇತರ ಪದ್ಧತಿಗಳ ಔಷಧ ಗಳಿಂದಾಗುವಂತೆ ಆಗಲಿ ಆಗುವಷ್ಟಾಗಲಿ ಅಪಾಯವಾಗಲಾರದು. ಎಷ್ಟೋ ಸಲ ಈ ಔಷಧಗಳಿಂದ ಬಹಳೇ ಆಶ್ಚರ್ಯಕಾರಕ ಗುಣವು ಕಂಡುಬಂದಿದೆ. ಮತ್ತು ವೈದ್ಯನು ಏನಾದರೂ ಜಾದುಗಾರಿಕೆಯಿಂದ ಮಾಟಮಾಡಿದನೋ ಎಂದು ಸಂದೇಹವುಂಟಾಗುವದು. ಶಾಸ್ತ್ರೀಯ ದೃಷ್ಟಿಯಿಂದಾಗಲಿ ಗುಣ ಕೊಡುವ ದೃಷ್ಟಿಯಿಂದಾಗಲಿ ಈ ಪದ್ಧತಿಯಲ್ಲಿ ಇತರ ಯಾವದೇ ಪದ್ಧತಿ ಗಿಂತ ನ್ಯೂನತೆ ಇಲ್ಲದ್ದರಿಂದ ಈ ಪದ್ಧತಿಯಲ್ಲಿ ಸುಲಭತೆ ಮತ್ತು ನಿರುಪ ದ್ರವತೆಗಳೂ ಇರುವದರಿಂದಲೂ ದಿನದಿನಕ್ಕೆ ಈ ಔಷಧಗಳ ಕಡೆಗೆ ಜನರ ಲಕ್ಷವು ಹೆಚ್ಚುಹೆಚ್ಚಾಗಿ ಎಳೆಯಲ್ಪಡುವದು ಸ್ವಾಭಾವಿಕವೇ ಸರಿ.

ಜೀವನರಸಾಯನಶಾಸ್ತ್ರದ ಮೇಲೆ ಇಲ್ಲಿಯವರೆಗೆ ಮಹಾರಾಷ್ಟ್ರ ಭಾಷೆಯಲ್ಲಿ ಮತ್ತು ಬಹುತರವಾಗಿ ಕನ್ನಡದಲ್ಲಿಯೂ ಬರೆಯಲ್ಪಟ್ಟ ಗ್ರಂಥಗಳಿಗಿಂತ ಬೇರೆ ಪದ್ಧತಿಯಿಂದ ಈ ಗ್ರಂಥವು ಬರೆಯಲ್ಪಟ್ಟಿದೆಂಬುದು ಮೇಲೆ ಮೇಲೆ ನೋಡಿದರೂ ಯಾರಿಗೂ ಕಂಡುಬರುವದು: ಗ್ರಂಥದಲ್ಲುಲ್ಲೇಖಿಸಿದ ಯಾವತ್ತು ವಿಷಯಗಳ ಬಗ್ಗೆ ವಿವೇಚನ ಸಾಕಲ್ಯದಿಂದ ಮಾಡದಿದ್ದಾಗ್ಯೂ ವಿಶದವಾಗಿ ತಿಳಿಯುವಷ್ಟರ ಮಟ್ಟಿಗೆ ಸಾಕಷ್ಟು ವಿಸ್ತಾರದಿಂದ ತಿಳಿಸಿ ಹೇಳುವ ಪ್ರಯತ್ನ ಮಾಡಿದೆ. ಡಾಕ್ಟರರೂ, ವೈದ್ಯರೂ ಸಾಮಾನ್ಯಜನರೂ ಇದನ್ನುಪಯೋಗಮಾಡಿಕೊಳ್ಳಬೇಕೆಂಬುವ ಉದ್ದೇಶವು ಸಾಧ್ಯವಾಗುವ ದೃಷ್ಟಿಯು ಇಡಲ್ಪಟ್ಟಿದೆ. ಎಷ್ಟರಮಟ್ಟಿಗೆ ಆ ಉದ್ದೇಶವು ಸಾಧ್ಯವಾಗಿದೆಂಬುದನ್ನು ಓದುಗರೇ ನಿರ್ಣಯಿಸತಕ್ಕದ್ದು. ಕಠಿಣ ಹಾಗೂ ಶಾಸ್ತ್ರೀಯ ಶಬ್ದಗಳನ್ನು ಶಕ್ಯವಿದ್ದಷ್ಟು ತಪ್ಪಿಸಿ ಸಾಮಾನ್ಯ ಜನರಿಗೆ ತಿಳಿಯುವಂಥ ಸುಲಭ ಭಾಷೆಯನ್ನುಪಯೋಗಿಸುವ ಯತ್ನ ಮಾಡಿದೆ. ಆದುದರಿಂದ ಗ್ರಂಥ ತಿಳಕೊಳ್ಳಲು ಕಠಿಣವಾಗಲಿಕ್ಕಿಲ್ಲೆಂದು ನಮ್ಮ ನಂಬಿಗೆ. ಗ್ರಂಥವನ್ನೂ ಅದರಲ್ಲಿ ಹೇಳಿದಂಥ ಔಷಧಗಳನ್ನು ಹತ್ತಿರ ಇಟ್ಟುಕೊಂಡಲ್ಲಿ ವೈದ್ಯರಿಗೂ ಡಾಕ್ಟರರಿಗೂ ಉಪಯೋಗವಾಗುವದು. ಇಷ್ಟೇ ಅಲ್ಲ ಶಹರದಲ್ಲಿಯ ಹಾಗೂ ಹಳ್ಳಿಕೊಳ್ಳಿಯಲ್ಲಿಯ ಜನರಿಗೆ ವೈದ್ಯನ ಸಹಾಯವಿಲ್ಲದೆ ಸಹ ಎಷ್ಟೋ ಪ್ರಸಂಗಗಳಲ್ಲಿ ರೋಗನಿವಾರಣೆಯ ಕಾರ್ಯವು ಸುಲಭಸಾಧ್ಯವಾಗುತ್ತದೆ. ಪರೋಪಕಾರಬುದ್ಧಿಯಿಂದ ಇಷ್ಟಮಿತ್ರರಿಗೂ ಬಡಬಗ್ಗರಿಗೂ ಈ ಔಷಧಗಳುಪಯೋಗಮಾಡಿಕೊಟ್ಟು ಅವರ ಕೃತಜ್ಞತೆಯನ್ನು ಸಂಪಾದಿಸಲು ಸಂಧಿದೊರೆಯುವದು.

ಈ ಗ್ರಂಥದಲ್ಲಿ "ವಿಷಯಪ್ರವೇಶ" "೧೨ ಕ್ಷಾರಗಳ ಗುಣಧರ್ಮ" "ನಿದಾನ" "ಸಾಮಾನ್ಯ ರೋಗಗಳೂ ಅವುಗಳ ಚಿಕಿತ್ಸೆಯೂ," ಮತ್ತು ಕೊನೆಗೆ "ಭಾವನಾಕೋಶ" ವೆಂಬ ಐದು ಪ್ರಕರಣಗಳು ಸೇರಿಸಲ್ಪಟ್ಟಿವೆ. 'ವಿಷಯಪ್ರವೇಶ' ವೆಂಬ ಪ್ರಕರಣದಲ್ಲಿ ಈ ಚಿಕಿತ್ಸಾಶಾಸ್ತ್ರದ ತತ್ವ ಹಾಗೂ ಸಿದ್ಧಾಂತವೇನೆಂಬುದರ ಬಗ್ಗೆ ಊಹಾಪೋಹವನ್ನೂ ಇತರ ಚಿಕಿತ್ಸಾಶಾಸ್ತ್ರಗಳ ಸಂಗಡ ತುಲನೆಯನ್ನೂ ಮಾಡಿದ್ದು ಕಂಡು ಬರುವದು. ಮಿಕ್ಕ ನಾಲ್ಕೂ ಪ್ರಕರಣಗಳಲ್ಲಿ ಪ್ರತಿ ಒಂದು ಪ್ರಕರಣದ ಪ್ರಾರಂಭದಲ್ಲಿ ಬೇರೆ

ಬೇರೆ ಪ್ರಸ್ತಾವನೆ ಜೋಡಿಸಿದ್ದು ಆಯಾ ಪ್ರಕರಣದಲ್ಲಿಯ ವಿಷಯವು ಹೇಗೆ ತಿಳಿಸಲು ಪ್ರಯತ್ನಮಾಡಿದೆಂಬದನ್ನು ಸವಿಸ್ತಾರವಾಗಿ ತಿಳಿಸಲಾಗಿದೆ. ವಾಚಕರು ಆಯಾ ಪ್ರಸ್ತಾವನೆಗಳನ್ನವಶ್ಯ ಓದತಕ್ಕದ್ದು.

ಗುಣಧರ್ಮ ಪ್ರಕರಣದಲ್ಲಿ ೧೨ ಕ್ಷಾರಗಳ ಸವಿಸ್ತರ ವೃತ್ತಾಂತ ವನ್ನು ಶರೀರದ ಬೇರೆ ಬೇರೆ ಭಾಗಗಳನ್ನು ಕಲ್ಪಿಸಿ ಆಯಾ ಭಾಗಗಳ ಕೇಗೆ ಕೊಟ್ಟಿರುತ್ತದೆ. ಇಷ್ಟು ಸವಿಸ್ತರ ವೃತ್ತಾಂತವು ಇತರ ಯಾವದೇ ಮಹಾರಾಷ್ಟ್ರ ಗ್ರಂಥಗಳಲ್ಲಿ ದೊರೆಯುವದಿಲ್ಲ. ಔಷಧದ ಶಕ್ತಿಯೆಂದ ರೇನು, ಅದನ್ನು ಹೇಗೆ ಗೊತ್ತುಪಡಿಸಬೇಕು. ಪ್ರತಿಯೊಂದು ಔಷಧವು ಯಾವ ಸಾಮರ್ಥ್ಯ (ಶಕ್ತಿ) ವುಳ್ಳದ್ದಿರಬೇಕು, ಬೇರೆ ಬೇರೆ ಬೇನೆಗಳಲ್ಲಿ ಆ ಔಷಧದ ಶಕ್ತಿ ಯಾವದಿರಬೇಕು, ಬೇರೆ ಔಷಧಗಳಿಗೂ ಅದರ ಸಂಬಂಧವು ಏನು ಎಂಬುದರ ಬಗ್ಗೆ ಸಹ ಇದೇ ಪ್ರಕರಣದಲ್ಲಿ ವಿಚಾರ ಮಾಡಲಾಗಿದೆ. ಈ ವಿಷಯದ ಸಂಬಂಧದಿಂದ ಇಂಗ್ಲಿಷ ಗ್ರಂಥಗಳಲ್ಲಿ ಕೊಡಲ್ಪಟ್ಟ ವೃತ್ತಾಂತವು ಈ ಪ್ರಕರಣದಲ್ಲಿ ಸಾಕಷ್ಟು ಸಂಗ್ರಹಿಸಲ್ಪಟ್ಟಿದೆ. ಸಾರಾಂಶ ವಾಗಿ ಹೇಳುವದೇನಂದರೆ ಈ ಪ್ರಕರಣವನ್ನು ಓದಿದರೆ ಇಂಗ್ಲಿಷ ಗ್ರಂಥಗ ಳನ್ನು ಓದಿದವರಿಗೆ ಸಹ ಅನೇಕ ಇಂಗ್ಲಿಷ ಗ್ರಂಥಗಳೊಳಗಿಂದ ಒತ್ತಟ್ಟಿಗೆ ತಂದಿಟ್ಟ ವೃತ್ತಾಂತವನ್ನು ಓದಿದ ಶ್ರೇಯಸ್ಸು ದೊರೆಯುವ ದೆಂದು ನಂಬಿಗೆಯುಂಟು.

"ನಿದಾನ" ಪ್ರಕರಣದಲ್ಲಿ ಕೊಟ್ಟ ಅನುಮಾನಗಳು ವೈದ್ಯರಿಗೂ ಸಾಮಾನ್ಯಜನರಿಗೂ ಉಪಯೋಗವಾಗುವಂಥವಿವೆ. ರೋಗಿಯನ್ನು ಕಂಡ ಕೂಡಲೆ ಅವನಿಗೆ ಯಾವರೋಗವಿರಬಹುದೆಂಬುದಾಗಿ ಸ್ಥೂಲಮಾನದಿಂದ ಕಲ್ಪನೆ ಮಾಡಲು ಸುಲಭವಾಗುವಂತೆ ಸಮಾಚಾರವನ್ನು ಹೇಳುವ ಪ್ರಯತ್ನಮಾಡಿದೆ. ೧೨ ಕ್ಷಾರಗಳ ಬಗ್ಗೆ ಕೊಟ್ಟ ಸೂಚಕ ಅನುಮಾನಗಳಿಂದ ಸಹ ಇದೇ ದೃಷ್ಟಿಯಿಂದುಪಯೋಗವಾಗುವದೆಂದು ನಂಬಿಗೆಯುಂಟು. ಮೊದಲು ಸ್ವಲ್ಪ ವೇಳೆ ಹತ್ತುವದು ಮುಂದೆ ಕಾಲಾವಧಿಯ ಮೇಲೆ ಅನುಭವ ಬಂದಹಾಗೆ ಇದನ್ನು ತಿಳಿದುಕೊಳ್ಳುವದು ಕಠಿಣವಾಗಲಾರದು. ಈ ಸೂಚಕಾನುಮಾನುಗಳೂ ಚಿಕಿತ್ಸಾಪ್ರಕರಣದಲ್ಲಿ ಹೇಳಿದ ವಿವೇಚನವೂ, ಲಕ್ಷದಲ್ಲಿ ಇಟ್ಟುಕೊಂಡಲ್ಲಿ, ರೋಗಿಗೆ ಇದ ರೋಗದ ನಿದಾನ ಮಾಡಲಿಕ್ಕೆ

ಸುಲಭವಾಗುವದು. ಚಿಕಿತ್ಸಾ ಪ್ರಕರಣದಲ್ಲಿ ರೋಗದ ಬಗ್ಗೆ ಮಾಡಿದ ವಿವೇಚನವು ವೈದ್ಯರಿಗೂ ಸಾಮಾನ್ಯ ಜನರಿಗೂ ಉಪಯೋಗವಾಗುವದೆಂಬದರ ಬಗ್ಗೆ ಸಂದೇಹಲ್ಲ. ಪ್ರಕರಣದ ಪ್ರಾರಂಭದಲ್ಲಿ ಇದರ ಬಗ್ಗೆ ಸವಿಸ್ತರ ವೃತ್ತಾಂತ ಕೊಟ್ಟೇ ಇದೆ. ಅದನ್ನು ಅವಶ್ಯ ಓದಬೇಕು.

ಹೋಮಿಯೋಪಥಿ ಅಥವಾ ಜೀವನರಸಾಯನಶಾಸ್ತ್ರ ಇವುಗಳ ಜ್ಞಾನವಿಲ್ಲದ ಡಾಕ್ಟರರಿಗೂ ಸಾಮಾನ್ಯ ಜನರಿಗೂ "ಭಾವನಾಕೋಶ"ವೆಂಬ ಪ್ರಕರಣವು ಹೊಸ ಮಾದರಿಯದೆಂದು ಕಾಣುವದು. ಇತರ ಯಾವದೇ ಚಿಕಿತ್ಸಾಶಾಸ್ತ್ರದಲ್ಲಿ ಭಾವನಾಕೋಶದ ಕಲ್ಪನೆಯು ಕಂಡುಬರುವದಿಲ್ಲ. ರೋಗವು, ಅದನ್ನು ತಿಳಿದುಕೊಳ್ಳುವ ಸಾಧನಗಳು (ಲಕ್ಷಣಗಳು ಮುಂತಾದವು), ಅದರ ಮೇಲಿನ ಔಷಧಗಳು– ಇಷ್ಟರ ಮೇಲಿಂದ ಇತರ ಚಿಕಿತ್ಸಾಶಾಸ್ತ್ರದ ಕಾರ್ಯಭಾಗವು ಸಾಗಿಹೋಗುತ್ತದೆ. ಆದರೆ ಕೇವಲ ಭಾವನೆಗಳ ಮೇಲೆಯೇ ಯಾವ ಶಾಸ್ತ್ರದ ಕಟ್ಟಡವು ನಿಲ್ಲತಕ್ಕದ್ದದೆ ಹಾಗೂ ಯಾವ ಭಾವನೆಗಳ ಅನುರೋಧದಿಂದಲೇ ವಿಕೃತವಿಜ್ಞಾನಶಾಸ್ತ್ರದ ದೃಷ್ಟಿಯಿಂದ ಶರೀರದಲ್ಲಿ ಏನೇನು ಅನಿಷ್ಟ ಬದಲಾವಣೆಗಳಾಗಿರಬಹುದೆಂದು ಕಾಯಾಸ ಕಟ್ಟತಕ್ಕ ಅವಶ್ಯಕತೆ ಇರುವದಿಲ್ಲವೋ ಅಂಥ ಭಾವನಾಪ್ರಧಾನ ಚಿಕಿತ್ಸಾಶಾಸ್ತ್ರದಲ್ಲಿ ಭಾವನಾಕೋಶದ ಅವಶ್ಯಕತೆ ಬಹಳೇ ಇರುವದೆಂಬದು ಭಾವನಾಕೋಶದ ಪ್ರಾರಂಭದಲ್ಲಿ ಕೊಟ್ಟ ಪ್ರಸ್ತಾವನೆಯ ಮೇಲಿಂದಲೂ ಲಕ್ಷ್ಯದಲ್ಲಿ ಬರುವದು. ಅದು ತಿಳಿಯಲು ಮೊದಲು ಸ್ವಲ್ಪ ಕಠಿಣ ಕಾಣುವದು. ಅದರಲ್ಲಿ ಒಂದಾವರ್ತಿ ಗತಿಯಾದಲ್ಲಿ ಅದು ತೀವ್ರವೇ ಸುಲಭವಾಗಿ ತಿಳಿಯುವದು.

ಚಿಕಿತ್ಸಾಶಾಸ್ತ್ರದ ತತ್ತ್ವ ಹಾಗೂ ಔಷಧಗಳ ಗುಣಧರ್ಮ ಇವುಗಳ ಪರಿಚಯ ಸಂಪೂರ್ಣವಾಗಿ ಮಾಡಿಕೊಳ್ಳದ ಹೊರತು ಔಷಧಗಳನ್ನು ಕೊಡುವ ಗೋಜಿಗೆ ಹೋಗಬಾರದು. ಪರಿಚಯವು ಪೂರ್ಣ ಆಗದ ಹೊರತು ಯೋಗ್ಯ ಔಷಧ ಕೊಡಲು ಶಕ್ಯವೂ ಇಲ್ಲ, ಕೊಟ್ಟರೆ ಯಶ ಬರುವ ಸಂಭವವೂ ಕಡಿಮೆ. ತಪ್ಪಿ ಬೇಡಾದ ಔಷಧ ಕೊಟ್ಟಲ್ಲಿ ಅಪಾಯ ಬಹಳಾಗಲಿಕ್ಕಿಲ್ಲ ಇದು ನಿಜ. ಆದರೆ ಹೀಗೆ ಮಾಡಿದ್ದರಿಂದ ನಮ್ಮದೇ ನಮ್ಮಲ್ಲಿ ಅವಿಶ್ವಾಸವುಂಟಾಗಿ ಈ ಚಿಕಿತ್ಸಾಶಾಸ್ತ್ರದ ಬಗ್ಗೆ ತಪ್ಪುತಿಳುವಳಿಕೆ

ಮಾತ್ರ ವುಂಟಾಗುವದು. ಆದುದರಿಂದ ಇಂಥ ಅವ್ಯಾಪಾರೇಷು ವ್ಯಾಪಾರ ಮಾಡದೇ ಇರುವದೇ ಲೇಸು. ಈ ಔಷಧಗಳನ್ನು ಕೊಳ್ಳುವಾಗ ಇತರ ಯಾವ ಔಷಧಗಳನ್ನೂ ಕೊಡಬಾರದು. ಒಂದು ಕಾಲಕ್ಕೆ ಒಂದೇ ಶಾಸ್ತ್ರಕ್ಕೆ ಅನುಸರಿಸಿಯೇ ಔಷಧ ಕೊಡುವದು ವಿಹಿತ. ಇದಲ್ಲದೆ ಪ್ರಾತಃ ಕಾಲದಲ್ಲಿ ಆಯುರ್ವೇದದಲ್ಲಿಯ ಕಷಾಯ, ಸಾಯಂಕಾಲದಲ್ಲಿ ಅಲೋಪಾಥಿಯ ಇಂಜೆಕ್ಶನ್ ರಾತ್ರಿಯಲ್ಲಿ ಈ ಔಷಧ ಹೀಗೆ ಮಾತ್ರ ಮಾಡಕೂಡದು. ಹೀಗಾದ್ದರಿಂದ ರೋಗಿಯು ಮೇಲೆ ಮಾತ್ರ ಕೆಟ್ಟ ಪರಿಣಾಮವಾಗುವದು. ಆದುದರಿಂದ ಈ ಔಷಧ ಕೊಡುವಾಗ ಇತರ ಯಾವದೂ ಔಷಧ ಕೊಡಗೂಡದು.

ಈ ಗ್ರಂಥದಲ್ಲಿ ಮನುಷ್ಯನು ತನ್ನ ಸ್ವಾಸ್ಥ್ಯವನ್ನು ಕಾಯಲು ವ್ಯಾಯಾಮ ಯಾವದು ಮಾಡಬೇಕು; ಸ್ನಾನ ಹೇಗೆ ಮಾಡಬೇಕು, ಎಂಥ ಅನ್ನವನ್ನು ತಿನ್ನಬೇಕು; ಬೇರೆ ಯಾವ ನಿಯಮಗಳನ್ನು ಹೇಗೆ ಪಾಲಿಸಬೇಕು, ಇಂಥ ಮುಂತಾದ ಸಮಾಚಾರವನ್ನು ಈ ಗ್ರಂಥದಲ್ಲಿ ಕೊಟ್ಟಿಲ್ಲ. ಇದರ ಬಗ್ಗೆ ಎಲ್ಲರಿಗೂ ಸರ್ವಸಾಧಾರಣ ತಿಳುವಳಿಕೆ ಇದ್ದೇ ಇರುತ್ತದೆ. ಹೆಚ್ಚಿನ ಸಮಾಚಾರ ಕೊಡುವದಾದರೆ ಸ್ವಲ್ಪದರಲ್ಲಿ ಕೊಡಲು ಶಕ್ಯವಿಲ್ಲ. ಇದರ ಬಗ್ಗೆ ಬೇರೆ ಗ್ರಂಥವನ್ನೇ ಬರೆಯುವದು ಉಚಿತ. ಇದರ ಮಹತ್ವವು ಇಷ್ಟು ಇರುವುದು. ಇದೆಲ್ಲ ಸಂಗತಿಯು ನಿಜವಾಗಿ ಆರೋಗ್ಯ ಶಾಸ್ತ್ರದಲ್ಲಿಯೇ ಸಮಾವೇಶವಾಗುವದು. ವೈದ್ಯ ಶಾಸ್ತ್ರದಲ್ಲಿ ಸಾಮಾಜಿಕರೀತ್ಯಾ ದೊರೆಯುವದಿಲ್ಲ. ಈ ಸಂದರ್ಭದಲ್ಲಿ ಸ್ವತಂತ್ರ ಪುಸ್ತಕಗಳೇ ಬರೆಯಲ್ಪಟ್ಟಿರುವವು. ರೋಗ ಬಂದು ಹೋದನಂತರ ರೋಗಿಯು ಹೇಗೆ ನಡಕೊಳ್ಳಬೇಕೆಂಬದರ ಬಗ್ಗೆ ಅಲ್ಲಲ್ಲಿ ಆಯಾ ರೋಗಗಳ ವಿವೇಚನೆಯ ಕೆಳಗೆ ತಿಳಿಯಿಸಿ ಹೇಳಿಯೇ ಇದೆ.

ಹಾಗೆಯೇ ಸಾಮಾನ್ಯ ಜನರಿಗೆ ಗ್ರಂಥವು ತಿಳಿಯುವದರ ಸಲುವಾಗಿ ಹಾಗೂ ಆದರಿಂದ ಪುಸ್ತಕ ತಿಳಿಯಲು ಸುಲಭವಾಗುವದಕ್ಕೋಸ್ಕರ ಇಂಥ ಗ್ರಂಥಗಳಲ್ಲಿ ಶಾರೀರಶಾಸ್ತ್ರ ಹಾಗೂ ಇಂದ್ರಿಯ ವಿಜ್ಞಾನಶಾಸ್ತ್ರ ಇವುಗಳ ಬಗ್ಗೆ ಸ್ವಲ್ಪ ಸ್ಥೂಲಮಾನದಿಂದ ವಿವೇಚನ ಮಾಡುವದು ಅವಶ್ಯ ವಿರುವದೆಂದು ಕೆಲ ಜನರ ಅಪೇಕ್ಷೆ ಇರುವದುಂಟು. ಆದರೆ ಹೀಗೆ

ಮಾಡುವದರಿಂದ ಗ್ರಂಥವು ಮಿತಿಮೀರಿ ಬೆಳೆದು ಹೋಗಿ ಸಾಮಾನ್ಯ ಜನ
ರಿಗೆ ಬೆಲೆಗೆ ಕೊಂಡುಕೊಳ್ಳುವದಕ್ಕೆ ಅಸಾಧ್ಯವಾಗುವದು. ಆದುದರಿಂದ
ಇಂಥ ಆನುಷಂಗಿಕ ವಿಷಯಗಳ ಬಗ್ಗೆ ಬೇರೆ ಸ್ವತಂತ್ರ ಗ್ರಂಥವನ್ನು ಬರೆ
ಯುವದೇ ಉಚಿತ. ಬೇರೆ ಮಾರ್ಗವಿಲ್ಲ. ಅನೇಕ ವಿಷಯಗಳ ಬಗ್ಗೆ
ಸ್ವಲ್ಪ ಸ್ವಲ್ಪ ಬರೆದ ಗ್ರಂಥವನ್ನೋದಿಕೊಂಡು ಎಲ್ಲ ವಿಷಯಗಳ ಬಗ್ಗೆ
ತೀರ ಸ್ವಲ್ಪ ಜ್ಞಾನವುಂಟಾಗಿ ಯಾವ ವಿಷಯದ ಬಗ್ಗೂ ಪೂರ್ಣ ಜ್ಞಾನವು
ಪ್ರಾಪ್ತಿಯಾಗುವದಿಲ್ಲ. ಇದಕ್ಕೂ ಮುಖ್ಯ ವಿಷಯದ ಬಗ್ಗೆ ಪೂರ್ಣ
ಜ್ಞಾನ ಉಂಟಾಗುವಂತೆ ಸಂಪೂರ್ಣ ವಿವೇಚನಮಾಡುವದೇ ಲೇಸು.
ಮತ್ತು ಆನುಷಂಗಿಕ ವಿಷಯಗಳ ಬಗ್ಗೆ ವಿಷಯಜ್ಞಾನವುಂಟಾಗುವಷ್ಟು
ತಿಳಿಸಿಹೇಳುವದು ಅವಶ್ಯವಿರುತ್ತದೆ ಮತ್ತು ಆ ಮೇರೆಗೆ ಈ ಗ್ರಂಥದಲ್ಲಿ
ಸಹ ನಾವು ಅವಶ್ಯವಿದ್ದಷ್ಟು ವಿವೇಚನಮಾಡಿದ್ದೇವೆ ? ಹೊರತಾಗಿ
ಇತ್ತೀಚೆಗೆ ಶಾಲೆಗಳಲ್ಲಿ ಪ್ರಚಲಿತವಿರುವ ಎಲ್ಲ ಕ್ರಮಿಕ ಪುಸ್ತಕಗಳಲ್ಲಿ ಈ
ವಿಷಯದ ಬಗ್ಗೆ ವಿವೇಚನವಿರುವದು ಕಂಡು ಬರುತ್ತದೆ. ಇದಲ್ಲದೆ ಓದು
ಗಾರರು ಸಹ ಇಂಥ ಆನುಷಂಗಿಕ ವಿಷಯಗಳ ಬಗ್ಗೆ ತಮ್ಮ ಅಭಿರುಚಿ
ಯನ್ನು ಬೆಳೆಯಿಸಿಕೊಳ್ಳುವ ಬಗ್ಗೆ ಆಯಾ ವಿಷಯಗಳ ಮೇಲೆ ಬರೆಯಲ್ಪಟ್ಟ
ಸ್ವತಂತ್ರ ಗ್ರಂಥಗಳನ್ನು ಓದುವ ಯತ್ನ ನಡೆಸಿರುತ್ತಾರೆ.

ಪ್ರಸ್ತುತ ಗ್ರಂಥದಲ್ಲಿ ನಾವು ಕೆಲವು ಹೊಸ ಶಬ್ದಗಳನ್ನು ರಚಿಸಿ
ದ್ದೇವೆ. ಈ ಶಬ್ದಗಳ ಬಗ್ಗೆ ಮತಭೇದವಾಗುವ ಸಂಭವವಿದೆ. ಆದರೆ
ರಚಿತವಾದ ಶಬ್ದಗಳು ಯಾವ ಅರ್ಥದಿಂದ ಉಪಯೋಗಿಸಿವೆ ಹಾಗೂ ಯಾವ
ಇಂಗ್ಲಿಷ ಶಬ್ದಗಳ ಪ್ರತಿ ಶಬ್ದಗಳೆಂದು ರಚಿತವಾಗಿವೆ ಇದನ್ನು ಸ್ಪಷ್ಟವಾಗಿ
ಹೇಳಿದ್ದರಿಂದ ಮತಭೇದವಾಗುವ ಸಂಭವವು ಕಡಿಮೆ. ನಾವು ರಚಿಸಿದ
ಶಬ್ದಗಳಕಿಂತ ಹೆಚ್ಚು ಉಚಿತ ಶಬ್ದಗಳನ್ನು ಯಾರಾದರೂ ಸೂಚಿಸಿದಲ್ಲಿ
ಅವುಗಳನ್ನು ಮುಂದಿನ ಸಂಚಿಕೆಗಳಲ್ಲಿ ಆನಂದದಿಂದ ಉಪಯೋಗಿಸುವೆವು.
ಈ ಪುಸ್ತಕವು ಯಾವದೊಂದು ವಿಶಿಷ್ಟ ಪುಸ್ತಕದ ಭಾಷಾಂತರವಿರುವದಿಲ್ಲ.
ಎಷ್ಟೋ ಪುಸ್ತಕಗಳ ಆಧಾರದಿಂದ ಅದು ಬರೆದದ್ದು ಇರುವದು. ಆಧರಿಸ
ಲ್ಪಟ್ಟ ಗ್ರಂಥಗಳೊಳಗಿಂದ ಆಯಾ ವಿಷಯಗಳ ಬಗ್ಗೆ ಯೋಗ್ಯ ಕಂಡ

ಸಂಗತಿಗಳನ್ನಷ್ಟು ಸ್ವೀಕರಿಸಿ ನಮ್ಮ ಅಲ್ಪ ಸ್ವಲ್ಪ ಅನುಭವಕ್ಕೆ ಸರಿ ಕಂಡದ್ದನ್ನಷ್ಟು ಕೂಡಿಸಿ ಈ ಗ್ರಂಥದಲ್ಲಿ ಸಮಾವೇಶಮಾಡಲಾಗಿದೆ.

ಈ ಗ್ರಂಥದ ಮರಾಠೀ ಭಾಷೆಯಲ್ಲಿಯ ಮೊದಲನೇ ಸಂಚಿಕೆಯು ಸನ್ನ ೧೯೩೭ ಇಸ್ವಿಯ ಸಪ್ಟೆಂಬರ ತಿಂಗಳದಲ್ಲಿ ಮತ್ತು ಎರಡನೇ ಸಂಚಿಕೆಯು ಸನ್ನ ೧೯೪೩ ಇಸ್ವಿಯ ಮಾರ್ಚ ತಿಂಗಳದಲ್ಲಿ ಪ್ರಸಿದ್ಧವಾದವು. ಸುದೈವದಿಂದ ಮೂರನೇ ಸಂಚಿಕೆಯನ್ನು ಹೊರಡಿಸತಕ್ಕ ಸುಪ್ರಸಂಗವು ಬರುವ ವರ್ಷದಲ್ಲಿ ಬರುವದೆಂದು ಕಾಣುತ್ತದೆ. ಇದರ ಮೇಲಿಂದ ಈ ಗ್ರಂಥದ ಉಪಯುಕ್ತತೆ, ಆವಶ್ಯಕತೆ, ಲೋಕಪ್ರಿಯತೆ ಸ್ಪಷ್ಟವಾಗಿ ಕಂಡುಬರುವವು. ಪುಣ್ಯಾಪತ್ತನದ ಡೆಕ್ಕನ ವ್ಹರ್ನ್ಯಾಕ್ಯುಲರ ಟ್ರಾನ್ಸ್ಲೇಶನ ಸೋಸಾಯಟಿಯವರು ಈ ಗ್ರಂಥವನ್ನು ಸನ್ಮಾನಿಸಿ ಅದಕ್ಕಾಗಿ ಪಾರಿತೋಷಿಕವನ್ನು ಸಹ ಕೊಟ್ಟಿದ್ದಾರೆ. ಈ ಗ್ರಂಥದ ಬಗ್ಗೆ ವರ್ತಮಾನ ಪತ್ರಗಳಲ್ಲಿಯೂ ಮಾಸಪತ್ರಿಕೆಗಳಲ್ಲಿಯೂ ಎಷ್ಟೋ ಅನುಕೂಲ ಅಭಿಪ್ರಾಯಗಳು ಬಂದಿವೆ. ಪ್ರತಿಕೂಲ ಟೀಕೆಯು ಎಲ್ಲಿಯೂ ಬಂದಿಲ್ಲ. ಎಷ್ಟೋ ವಿದ್ವಾಂಸರೂ ಸಾಮಾನ್ಯ ವಾಚಕರೂ ಅನುಕೂಲ ಅಭಿಪ್ರಾಯಗಳನ್ನು ವ್ಯಕ್ತಪಡಿಸುವರು.

ಈ ಗ್ರಂಥದ ಮೊದಲನೇ ಸಂಚಿಕೆಯು ಪ್ರಸಿದ್ಧವಾದ ನಂತರ ಬೇರೆ ಬೇರೆ ಪ್ರಾಂತಗಳಲ್ಲಿ ಎಷ್ಟೋ ಸದ್ಗೃಹಸ್ಥರು ಈ ಗ್ರಂಥದ ರೂಪಾಂತರಗಳನ್ನು ಬೇರೆ ಬೇರೆ ಭಾಷೆಗಳಲ್ಲಿ—ಅಂದರೆ ಹಿಂದೀ, ಗುಜರಾಥೀ, ಕನ್ನಡ ಮುಂತಾದ ಭಾಷೆಗಳಲ್ಲಿ- ಮಾಡಿಸಬೇಕೆಂದು ಸೂಚಿಸಿದರು. ಆ ಸೂಚನೆಗಳಿಗನುಸರಿಸಿ, ಏನಾದರೂ ಯತ್ನಮಾಡಬೇಕೆಂದು ನಮಗೂ ತೋಚಹತ್ತಿತು. ಯಾವದಾದರೊಂದು ಕಲ್ಪನೆ ಮನಸ್ಸಿನಲ್ಲಿ ಬಂದಕೂಡಲೆ ಸಾಧ್ಯವಾಗುತ್ತದಂತಲ್ಲ. ಎಷ್ಟೋ ವ್ಯಾವಹಾರಿಕ ತೊಂದರೆಗಳುಂಟಾಗಿ ಉಪಕ್ರಮವು ಹಿಂದೆ ಬೀಳುತ್ತದೆಂಬದು ನಿತ್ಯದ ಅನುಭವವೇ ಸರಿ. ಇಂಥ ಉದ್ಯಮಕ್ಕೆ ಮುಖ್ಯ ಅಡಚಣಿಯೆಂದರೆ ಯೋಗ್ಯ ಭಾಷಾಂತರಕಾರನ ದುರ್ಲಭತೆ. ಯೋಗ್ಯ ಗೃಹಸ್ಥರ ಬಗ್ಗೆ ಬಹು ಯತ್ನಮಾಡಲಾಯಿತು. ಅಂಥ ಮನುಷ್ಯನು ಇವತ್ತಿನವರೆಗೆ ದೊರೆಯದ್ದರಿಂದ ನಮ್ಮ ಕಾರ್ಯವು ನಿಂತು ಹೋಯಿತು. ಮೊದಲು ಹಿಂದೀ ಭಾಷಾಂತರವನ್ನು ಮಾಡುವನು

ನಿಶ್ಚಯಿಸಿ ಬನಾರಸ ಹಿಂದು ವಿಶ್ವ ವಿದ್ಯಾಲಯದಲ್ಲಿಯ ವೈದ್ಯಕ ಶಾಖೆಯ ಪ್ರೊಫೆಸರರಾದ ಡಾ. ಭಾಸ್ಕರ ಗೋವಿಂದ ಘಾಣೇಕರ B. Sc., M. B. B. S. ಇವರಿಗೆ ಆ ಕೆಲಸವನ್ನು ಒಪ್ಪಿಸಲಾಯಿತು. ಅವರಾದರೂ ಸ್ವೀಕೃತ ಕಾರ್ಯವನ್ನು ಎರಡು ವರ್ಷಗಳ ಪೂರ್ವದಲ್ಲಿ ಅಂದರೆ ೧೯೩೫ ಇಸ್ವಿಯಲ್ಲಿ ಆನಂದದಿಂದ ಮುಗಿಸಿದರು. ಆದ್ದರಿಂದ ನಮಗೆ ಈ ಗ್ರಂಥದ ಹಿಂದೀ ಭಾಷಾಂತರವು ಸಾಧ್ಯವಾಯಿತು.

ಕನ್ನಡ ಭಾಷಾಂತರ ಮಾಡಲಿಕ್ಕೆ ಯೋಗ್ಯರಿದ್ದ ಗೃಹಸ್ಥರ ಹೆಸರುಗಳನ್ನು ಸೂಚಿಸಲಿಕ್ಕೆ ಕರ್ನಾಟಕದಲ್ಲಿಯ ನಮ್ಮ ಕೆಲ ಸ್ನೇಹಿತರಿಗೆ ನಾವು ಹೇಳಿಕೊಂಡಿದ್ದೆವು. ಒಬ್ಬಿಬ್ಬರ ಸಂಗಡ ಪತ್ರ ವ್ಯವಹಾರ ಆಗಿತ್ತು. ಅಷ್ಟಕ್ಕೇ ನಿಂತುಹೋಯಿತು. ಕಡೆಗೆ ಬೆಳಗಾಂವಿಯಲ್ಲಿ ನಮ್ಮ ಮಿತ್ರರಾದ ಶ್ರೀ. ಬಾಪುರಾವ ಬೋಂದ್ರೆ ವಕೀಲ ಇವರಿಂದ ಶ್ರೀ. ನಾರಾಯಣರಾವ ತಿರುಮಲರಾವ ದಾತಾರ ಇವರು ಭಾಷಾಂತರ ಮಾಡಲು ಯೋಗ್ಯರೆಂದು ಅವರ ಹೆಸರು ಸೂಚಿಸಲ್ಪಟ್ಟಿತು. ಬೆಳಗಾಂವಿಯ ಸುಪ್ರಸಿದ್ಧ ಡಾಕ್ಟರರಾದ ಸಾವಣೂರ ಹಣಮಂತರಾಯರು L. M. & S. ಇವರಾದರೂ ಶ್ರೀ. ದಾತಾರ ನಾರಾಯಣರಾಯರ ಹೆಸರನ್ನೇ ಸೂಚಿಸಿದರು. ಇಷ್ಟೇ ಅಲ್ಲ. ಅವರಿಗೆ ಈ ಕೆಲಸ ಒಪ್ಪಿಸಿದಲ್ಲಿ ತಾವು ಮನಮುಟ್ಟಿ ಸಹಾಯ ಸಹ ಮಾಡುವೆವೆಂದು ಪತ್ರದಿಂದ ಆಸ್ಥೆಪೂರ್ವಕವಾಗಿ ತಿಳಿಸಿದರು. ಆ ಮೇರೆಗೆ ಶ್ರೀ. ದಾತಾರ ನಾರಾಯಣರಾಯರಿಗೆ ಭಾಷಾಂತರದ ಕಾರ್ಯವು ಒಪ್ಪಿಸಲ್ಪಟ್ಟಿತು. ಅವರಾದರೂ ತತ್ಪರತೆಯಿಂದ ಅದನ್ನು ಒಪ್ಪಿಸಿಕೊಂಡು ಶಕ್ಯವಿದ್ದಷ್ಟು ತೀವ್ರವಾಗಿ ಮಾಡಿಕೊಟ್ಟರು. ಆದ್ದರಿಂದ ಅವರ ಆಭಾರ ಗೌರವ ಪೂರ್ವಕವಾಗಿ ಮನ್ನಿಸುವದು ಅವಶ್ಯವಿದೆ. ಶ್ರೀ. ನಾರಾಯಣರಾವ ತಿರುಮಲರಾವ ದಾತಾರ ಇವರು ಮುಂಬಯಿ ವಿಶ್ವವಿದ್ಯಾಲಯದ ಬಿ. ಎ. ಪಾಸ ಆಗಿದ್ದು ೪೦-೪೨ ವರ್ಷ ಬೆಳಗಾಂವಿ ಜಿಲ್ಲೆಯಲ್ಲಿ ವಕೀಲಿ ಕೆಲಸ ಮಾಡುತ್ತಿರುವರು. ಅವರ ತಾಯ್ನುಡಿ ಕನ್ನಡ: ಅವರು ಕನ್ನಡ ಕಲಿತವರು. ಮತ್ತು ವಾಙ್ಮಯ (ಯಾವದೇ ಭಾಷೆಯ) ವಿಷಯವು ಚಿಕ್ಕಂದಿನಿಂದ ಅವರ ಅಭಿರುಚಿಯಾಗಿದ್ದು ವಿಶೇಷವಾಗಿ ಇಂಗ್ಲಿಷ ವಾಙ್ಮಯ ಬರೆಯಲು ಅವರು ಜಾಣರು. ಇಂಗ್ಲಿಷ ವರ್ತಮಾನ ಪತ್ರಗಳಲ್ಲಿ ಅವರು

ರಾಜಕೀಯ ವಿಷಯಗಳ ಮೇಲೆ ಮೇಲಿಂದಮೇಲೆ ಲೇಖಗಳನ್ನು ಕೊಡುತ್ತಿರುವರು. ಓದುವ ಹಾಗೂ ಬರೆಯುವ ವ್ಯಾಸಂಗ ಅವರದು ಬಹಳಿದ್ದುದರಿಂದ ಈ ಭಾಷಾಂತರದ ಕೆಲಸವನ್ನು ಅವರಿಗೆ ಒಪ್ಪಿಸಲ್ಪಟ್ಟಿತು.

ಮೈಸೂರು ಬೆಂಗಳೂರು ಪ್ರಾಂತದಲ್ಲಿಯ ಕನ್ನಡಕ್ಕೂ, ಮಹಾರಾಷ್ಟ್ರದ ಸಂಗಡ ಹೆಚ್ಚು ಸಂಬಂಧವಿದ್ದ ಬೆಳಗಾಂವಿ, ವಿಜಾಪೂರ ಮುಂತಾದ ಪ್ರದೇಶದಲ್ಲಿಯ ಕನ್ನಡಕ್ಕೂ ಬಳ್ಳಾರಿ ಮೊಗಲಾಯಿ ಮುಂತಾದ ಪ್ರಾಂತಗಳ ಕನ್ನಡಕ್ಕೂ ಅಲ್ಪಸ್ವಲ್ಪ ವ್ಯತ್ಯಾಸವುಂಟೆಂದು ಕೇಳಿದ್ದೇವೆ. ಎಲ್ಲರಿಗೂ ಶಕ್ಯ ಮಟ್ಟಿಗೆ ತಿಳಿಯುವಂತೆ ಬರೆಯಲಿಕ್ಕೆ ಯತ್ನಿಸಲು ಶ್ರೀ. ನಾರಾಯಣರಾಯರಿಗೆ ಸೂಚಿಸಲಾಗಿತ್ತು. ಅವರಾದರೂ ಶಕ್ಯವಾದ ಮಟ್ಟಿಗೆ ಯತ್ನಮಾಡಿದಂತೆ ತಿಳಿಯುತ್ತದೆ. ಹೊರ್ತಾಗಿ ಧಾರವಾಡದಲ್ಲಿಯ ನಮ್ಮ ಮಿತ್ರರಾದ ಶ್ರೀ. ರಾ. ಗೋ. ಹುಕ್ಕೇರಿಕರರೂ ಕರ್ನಾಟಕ ಪ್ರಿಂಟಿಂಗ ವರ್ಕ್ಸದ ಮಾಲಕರಾದ ಶ್ರೀ. ವಿ. ಯ. ಜತಾರರೂ ಪ್ರೂಫಗಳನ್ನು ಓದುವ ಕಾಲಕ್ಕೆ ಕನ್ನಡ ಭಾಷಾಕೋವಿದರ ಕಡಿಂದ ಆ ದೃಷ್ಟಿಯಿಂದ ಯತ್ನಮಾಡಿ ಶಕ್ಯವಿದ್ದ ಮಟ್ಟಿಗೆ ಎಷ್ಟೋ ಸ್ಥಳಗಳಲ್ಲಿ ತಿದ್ದುಪಡಿಮಾಡಿಸಿದಂತೆ ತಿಳಿಯುತ್ತದೆ. ಆದರೂ ಈ ಬಗ್ಗೆ ಮಾಡಿದ ಯತ್ನವು ಎಷ್ಟು ಮಟ್ಟಿಗೆ ಸಾಧ್ಯವಾಗಿದೆಂಬದನ್ನು ನಿರ್ಣಯಿಸುವರು ಓದುಗರೇ ಸರಿ.

ಭಾಷಾಂತರವು ಮಾಡಿದ್ದಾದನಂತರ ಅದನ್ನು ಅಚ್ಚು ಹಾಕುವದೆಲ್ಲಿಂಬ ಪ್ರಶ್ನವು ಸಹಜವೇ ಉತ್ಪನ್ನವಾಯಿತು. ಈ ಬಗ್ಗೆ ನಮ್ಮ ಮಿತ್ರರಾದ ಶ್ರೀ. ಬಾಪೂರಾವ ಜೋಂಧ್ಳೆಯವರು ಮಾಡಿದ ಸೂಚನೆ ನಮಗೆ ಉಚಿತವೆನಿಸಿ ನಾವು ಆ ಕೆಲಸವನ್ನು ಧಾರವಾಡದ ಪ್ರಸಿದ್ಧ ಕರ್ನಾಟಕ ಪ್ರಿಂಟಿಂಗ ಪ್ರೆಸ್ಸದ ಕಡೆಗೆ ಒಪ್ಪಿಸಿದೆವು. ಅಚ್ಚು ಹಾಕುವ ಕೆಲಸ ಅವರಿಂದ ಎಷ್ಟು ಸುಂದರವಾಗಿಯೂ, ಕಾಲಕ್ಕೆ ಸರಿಯಾಗಿಯೂ ಜೋಕೆಯಿಂದಲೂ ಆಗುವದೆಂಬದರ ಬಗ್ಗೆ ಕರ್ನಾಟಕದಲ್ಲಿ ಅವರು ಹೆಸರು ಪಟ್ಟವರಿದ್ದುದರಿಂದ ಅವರ ಬಗ್ಗೆ ಹೆಚ್ಚು ಬರೆಯುವದು ಅನವಶ್ಯಕ. ಅದಕ್ಕೆ ಬೇರೆ ಸಾಕ್ಷಿಯೇ ಬೇಕಿಲ್ಲ, ಈ ಗ್ರಂಥವನ್ನು ನೋಡಿದರೆ ಸಾಕು. ಆದರೂ ಈ ಸಂದರ್ಭದಲ್ಲಿ ಒಂದು ಸಂಗತಿಯನ್ನು ಹೇಳದೆ ಇರಲಾರೆವು. ಅದೇನೆಂದರೆ- ಲೇಖಕರು ಒಂದು ಊರಲ್ಲಿ ಭಾಷಾಂತರ ಕರ್ತರು ಮತ್ತೊಂದು ಕಡೆ ಛಾಪಖಾನೆ ಮೂರನೇ

ಸ್ಥಳದಲ್ಲಿ ಇಂಥ ಎಷ್ಟೋ ತೊಂದರೆಗಳಿದ್ದಾದರೂ ಅವುಗಳನ್ನು ಲೆಕ್ಕಿಸದೆ ಶಕ್ಯವಿದ ಮಟ್ಟಿಗೆ ಈ ಕೆಲಸವನ್ನು ತೊಂದರೆ ಇಲ್ಲದೆ ತೀವ್ರವಾಗಿ ಛಾಪಖಾನೆಯ ಮಾಲಕರಾದ ಶ್ರೀ. ವಿ. ಯ. ಜತಾರರವರು ಏರ್ಪಾಟು ಮಾಡಿದ್ದಕ್ಕಾಗಿ ನಾವು ಆಭಾರವನ್ನು ಎಷ್ಟು ಮನ್ನಿಸಿದರೂ ಕಡಿಮೆ.

ಶ್ರೀ ಬಾಪೂರಾವ ಬೋಂದ್ರೆ, ಡಾಕ್ಟರ ಸವಣೂರ ಹಣಮಂತರಾಯರು ಮತ್ತು ಧಾರವಾಡದ ಶ್ರೀ. ರಾ. ಗೋ. ಹುಕ್ಕೇರಿ ಈ ಮೂವರು ಈ ಗ್ರಂಥದ ಬಗ್ಗೆ ಆತ್ಮತ್ವ ಭಾವನೆಯಿಂದ ಬಹಳೇ ಸಹಾಯ ಮಾಡಿದ್ದಾರೆ; ಅಂತಃಕರಣಪೂರ್ವಕ ಅವರ ಆಭಾರಮನ್ನಿಸುವದು ಅತ್ಯಾವಶ್ಯಕ. ಈ ಗ್ರಂಥಕ್ಕೆ ಲಖನೌಗಿರಣಿಯ ಸ್ವದೇಶಿ ಕಾಗದವು ಉಪಯೋಗಿಸಲ್ಪಟ್ಟಿದೆ.

ಪುಣೆ,
ಜ್ಯೇಷ್ಠ ಶು. ೧೨ ಶಕೆ ೧೮೫೫ }

**ಗೋ. ಸ. ಹಳಸುಲೆ**

# ಭಾಷಾಂತರ ಕರ್ತನ ಪ್ರಸ್ತಾವನೆ



ಸಂಪೂರ್ಣ ಆರ್ಯಾವರ್ತದಲ್ಲಿ ಆಯುರ್ವೈದ್ಯವೆಂದರೆ ಆಯುರ್ವೇದ-ಶಾಸ್ತ್ರವು ಪ್ರಧಾನ ಸ್ಥಾನವನ್ನು ಹೊಂದಿಸಿಕೊಂಡಿರತಕ್ಕದ್ದು. ಆದರೆ ವಸ್ತುಸ್ಥಿತಿಯು ಕಾಲಕ್ಕನುಸರಿಸಿ ಹಾಗಿರದೆ ಇತರ ವೈದ್ಯಕ ಪದ್ಧತಿಗಳು ನಮ್ಮೀ ವಿಶಾಲ ಭಾರತಭೂಮಿಯಲ್ಲಿ ತಮ್ಮ ತಮ್ಮ ಮಟ್ಟಿಗೆ ಮುಂದಣ ಸ್ಥಾನ ಪಡೆಯಲು ಯತ್ನಿಸುತ್ತಿವೆ. ಅವುಗಳಲ್ಲಿ ಅಲೋಪಥಿಯೆಂಬ ಇಂಗ್ಲಿಷರಲ್ಲಿ ಹೆಚ್ಚಾಗಿ ರೂಢವಾಗಿದ್ದ ವೈದ್ಯಕ ಪದ್ಧತಿಯು ರಾಜಾಶ್ರಯದ ಮೂಲಕ ಅಗ್ರಸ್ಥಾನವನ್ನು ಪಡೆದಿರುವದು. ಇತರ ವೈದ್ಯಕ ಪದ್ಧತಿಗಳಿಗೆ ( ಅಂದರೆ "ಹೋಮಿಯೋಪಥಿ" "ಬಾಯೋಕೆಮಿಸ್ಟ್ರಿ" ಮುಂತಾದವುಗಳಿಗೆ ). ರಾಜಾಶ್ರಯವಿಲ್ಲದ್ದರಿಂದ ತಮ್ಮ ತಮ್ಮ ಗುಣಾವಗುಣಗಳ ಮೇಲಿಂದಲೇ ತಮಗೆ ಉಚಿತವಿದ್ದ ಸ್ಥಾನವನ್ನು ಗಳಿಸಬೇಕಾಗಿದೆ. ಈಗ ನಮಗೆ 'ಬಾಯೋಕೆಮಿಸ್ಟ್ರಿ' ಎಂಬ ವೈದ್ಯಕ ಪದ್ಧತಿಯ ಹೊರತು ಇತರ ಪದ್ಧತಿಗಳ ಬಗ್ಗೆ ಹೇಳತಕ್ಕದ್ದಿರುವದಿಲ್ಲ. 'ಬಾಯೋಕೆಮಿಸ್ಟ್ರಿ' ಅಂದರೆ ಜೀವನರಸಾಯನ ಚಿಕಿತ್ಸಾಪದ್ಧತಿ ಅಥವಾ ಹನ್ನೆರಡು ಕ್ಷಾರ ಚಿಕಿತ್ಸಾಪದ್ಧತಿಯ ಸಂಬಂಧದಿಂದಷ್ಟೇ ಕೆಲ ಸಂಗತಿಗಳನ್ನು ನಿವೇದಿಸತಕ್ಕದ್ದಿದೆ. ಇದಕ್ಕೆ ರಾಜಾಶ್ರಯವಿಲ್ಲದಿದ್ದರೂ ಅದು ತನ್ನ ಗುಣಾಧಿಕ್ಯದಿಂದ ತನ್ನ ಕಡೆಗೆ ಜನರ ಮನಸ್ಸುಗಳನ್ನು ಆಕರ್ಷಿಸುತ್ತಿದೆ. ಈ ಪದ್ಧತಿಯಲ್ಲಿ ಕೆಲ ವಿಶಿಷ್ಟ ಗುಣಗಳು ಇತರ ವೈದ್ಯಕಗಳಲ್ಲಿ ಇಲ್ಲದಂಥವು ಇದ್ದದರಿಂದ ಇದು ಜನರ ಪ್ರೀತಿಯನ್ನು ಸಂಪಾದಿಸುತ್ತಿದೆ. ಆ ಗುಣಗಳು ಯಾವವೆಂದರೆ— ಈ ಔಷಧಗಳು ಸೇವಿಸಲಿಕ್ಕೆ ಸ್ವಾದು, ಸುಲಭ; ಕೊಳ್ಳಲಿಕ್ಕೆ ಹೋದಲ್ಲಿ ಬೆಲೆ ತೀರ ಕಡಿಮೆ; ತಪ್ಪಿ ಬೇಕಾದ ಔಷಧ ಸೇವಿಸಿದಲ್ಲಿಯೂ ಪ್ರಮಾಣ ಮೀರಿ ಹೆಚ್ಚು ಸೇವಿಸಿದಲ್ಲಿಯೂ ಅನಪಾಯಕಾರಕ ( ಗಂಡಾಂತರವಿಲ್ಲದವು ); ಗುಣದ ದೃಷ್ಟಿಯಿಂದ ನೋಡಿದಾಗ್ಯೂ ಇತರ ಔಷಧಗಳಿಗಿಂತಲೂ ಗುಂಜಿ ತೂಕ ಹೆಚ್ಚು – ಹೀಗಿದ್ದದರಿಂದ ಈ ಔಷಧಗಳ ಕಡೆಗೆ ಜನರ ಚಿತ್ತವು

-ಳೆಯಲ್ಪಡುವದು ಸಾಹಜಿಕವೇ ಸರಿ. ಈ ಔಷಧಗಳ ಪ್ರಸಾರವನ್ನು ಬೆಳೆಯಿಸುವ ಹೇತುವಿನಿಂದ ಪುಣೆಯಲ್ಲಿಯ ಪ್ರಸಿದ್ಧರೂ ಜಾಣರೂ ಆದ ಡಾಕ್ಟರ ಗೋಪಾಳರಾವ ಪಳಸುಲೆಯವರು ಜೀವನ ರಸಾಯನ ಚಿಕಿತ್ಸಾ ಶಾಸ್ತ್ರವೆಂಬ ಗ್ರಂಥವನ್ನು ಬರೆದು ಪ್ರಸಿದ್ಧಗೊಳಿಸಿ ಮಹಾರಾಷ್ಟ್ರೀಯರಲ್ಲಿ ಈ ಪದ್ಧತಿಯ ಔಷಧಗಳ ಬಗ್ಯೆ ಆದರವನ್ನು ಹುಟ್ಟಿಸಿ ಈ ಔಷಧಗಳ ಪ್ರಚಾರ ಹೆಚ್ಚಿಗೆ ಮಾಡಿದರು. ಅದೇ ಪ್ರಕಾರ ಈ ಔಷಧಗಳ ಪ್ರಚಾರ ಕನ್ನಡಿಗರಲ್ಲಿ ಮಾಡುವ ಉದ್ದೇಶದಿಂದ ಆ ಗ್ರಂಥವನ್ನು ಕನ್ನಡದಲ್ಲಿ ರೂಪಾಂತರ ಮಾಡುವ ಕುರಿತು ಯತ್ನನಡಿಸಿದರು. ರೂಪಾಂತರ ಮಾಡುವವರ ಸಹಾಯ ಪಡೆಯಲು ನಮ್ಮೊಬ್ಬ ಮಹನೀಯ ಸ್ನೇಹಿತರಾದವರಿಗೆ ಕೇಳಲಾಗಿ ಅವರು ನನ್ನ ಹೆಸರು ಸೂಚಿಸಿದರು. ಆ ಕೆಲಸ ಬಹು ಕಠಿಣವೂ ದೊಡ್ಡದೂ, ನನ್ನಂಥ ಸರ್ವಸಾಧಾರಣ ಮನುಷ್ಯನಿಗೆ ಶಾಸ್ತ್ರಜ್ಞರ ಸಾಹಾಯ್ಯವಿಲ್ಲದೆ ತಿಳಿಯದಂಥಾದ್ದೂ ಇದ್ದದರಿಂದ ನಾನು ನನ್ನಿಂದಾಗದು ಎಂದು ಮೊದಲು ಹೇಳಿಕೊಂಡೆನು. ಆ ಕೆಲಸ ಕೈಕೊಳ್ಳಲು ನನ್ನ ಮುಖ್ಯ ಅಡಚಣಿ–ನನ್ನಿಂದ ಇಂಥ ದೊಡ್ಡ ಕಾರ್ಯ ನೀಗಲಿಕ್ಕಿಲ್ಲೆಂಬ ನನ್ನ ಭಾವನೆ– ನನ್ನ ಸ್ನೇಹಿತರಿಗೆ ನಿಜವೆಂದು ತೋರಲಿಲ್ಲ. ಅವರು ಹೆಚ್ಚಿಗೆ ಜುಲುಮೆ ಮಾಡಹತ್ತಿದರು ಅವರ ಮಾತು ಮೀರಲು ನನ್ನಲ್ಲಿ ಸಾಮರ್ಥ್ಯವಿಲ್ಲದ್ದರಿಂದ ಕೊನೆಗೆ ಈ ಪ್ರಸ್ತುತ ಭಾಷಾಂತರದ ಕೆಲಸ ಕೈಕೊಳ್ಳಬೇಕಾಯಿತು. ನನಗಿಂತ ಹೆಚ್ಚಿನ ಪಾತ್ರತೆಯುಳ್ಳವರು ಈ ಕೆಲಸ ಕೈಕೊಂಡಿದ್ದರೆ ಒಳ್ಳೆಯದಾಗಿತ್ತು. ಆದರೂ ತನಗಿಂತ ಮಿಗಿಲಾದ ಲೇಖನಕಾರರು ಇರುವರೆಂಬ ಅರಿವು ಕೈಕೊಂಡ ಕಾರ್ಯವನ್ನು ಮುಗಿಯಿಸಲೇಬೇಕೆಂಬ ಬುದ್ಧಿಯುಳ್ಳ ಸಾಮಾನ್ಯ ಯೋಗ್ಯತೆಯುಳ್ಳ ಲೇಖಕನಿಗೆ ತಡೆಯನ್ನುಂಟುಮಾಡಲಾರದು.

ಕೆಲಸದ ಮಹತ್ವ ಹಾಗೂ ಘನತೆಯ ಕಲ್ಪನೆ ಸಾಕಷ್ಟು ಇಲ್ಲದಲೆ ನಾನು ಕೆಲಸ ಮಾಡಲು ಒಪ್ಪಿದೆ. ಇತ್ತ ಕಡೆಗೆ ಕೈಕೊಂಡ ಕೆಲಸ ಮಾಡಿಯೇ ತೀರಬೇಕೆಂಬ ಭಾವನೆ, ಇನ್ನೊಂದು ಕಡೆಗೆ "प्रांशुलभ्ये फले लोभादुद्बाहुरिव वामनः" ಎಂಬ ಮಹಾಕವಿ ಉಕ್ತಿಯಂತೆ ಉಪಹಾಸ್ಯಕ್ಕೆ ಪಾತ್ರನಾಗುವೆನೆಂಬ ಹೆದರಿಕೆ ದೀರ್ಘೋದ್ಯೋಗದಿಂದ ಕಠಿಣ ಕೆಲಸ ಸಹ ಸಾಧ್ಯವಾಗುವದೆಂಬ ವಿಶ್ವಾಸದಿಂದ ನನ್ನ ಪರಮ ಸ್ನೇಹಿತರಾದ ಹಾಗೂ ಪರೋಪಕಾರಿ

ಗಳಾದ ಡಾಕ್ಟರ ಹಣಮಂತರಾವ ಸಾವಣೂರ L. M. & S. ಇವರಿಗೆ ಕೈಕೊಂಡ ಸಂಗತಿಯನ್ನು ತಿಳಿಸಿದೆನು, ಅವರು ಪೂರ್ಣ ಸಹಾಯಮಾಡುವೆ ನೆಂದು ಉತ್ತೇಜನ ಕೊಟ್ಟರು. ಹುರಿದುಂಬಿಸಿದರು. ಗ್ರಂಥದಲ್ಲಿಯ ಕಠಿಣ ಭಾಗಗಳನ್ನು ತಿಳಿಸಿ ಹೇಳಿದರು. ವಿಷಯ ಜ್ಞಾನಮಾಡಿಕೊಟ್ಟರು. ನನ ಗೋಸ್ಕರ ತಮ್ಮ ಬಹು ಅಮೌಲ್ಯಕಾಲವನ್ನು ವೆಚ್ಚಮಾಡಿದರು. ಅವರ ಸಹಾಯದ ಹೊರ್ತು ಕೆಲಸ ಕಡೆಗಾಣಲು ಸಾಧ್ಯವಿದ್ದಿಲ್ಲ. ಆದ್ದರಿಂದ ಅವರ ಉಪಕಾರ ನಾನು ಮರೆಯಲಾರೆನು. ನಾನಂತೂ ಕೈಕೊಂಡ ಕಾರ್ಯ ವನ್ನು ಕಡೆಗಾಣಿಸಿದ್ದೇನೆ. ಅದು ಎಷ್ಟರ ಮಟ್ಟಿಗೆ ಸಾಧಿಸಿರುವದು ಇದನ್ನು ನಿಶ್ಚಯಿಸುವರು ಓದುಗಾರರೇ ಸರಿ.

ಇನ್ನೊಂದು ಸಂಗತಿಯನ್ನು ನಿವೇದಿಸದೇ ಇರಲಾರೆನು. ನಾವು ಕನ್ನಡಿಗರು ದುರ್ದೈವಿಗಳೇ ಸರಿ. ಕರ್ನಾಟಕವು ಅಥವಾ ಕನ್ನಡ ಪ್ರಾಂತವು ಹಲವು ಭಾಗಗಳಾಗಿ ಹರಿದು ಹಂಚಲ್ಪಟ್ಟು ಬೇರೆ ಬೇರೆ ರಾಜಕೀಯ ಆಳಿಕೆ ಗಳಿಗೆ ಒಳಪಟ್ಟಿರುವದು. ಪ್ರತಿಯೊಂದು ಭಾಗವು ತನ್ನ ಪ್ರಾಂತಿಕ ವೈಶಿಷ್ಟ್ಯ ವನ್ನು ಬೆಳಿಸಿಕೊಂಡು ಇನ್ನೊಬ್ಬರಿಗೆ ತಿಳಿಯದಾಗಿರುವದು. ಬೆಳಗಾಂವಿ ವಿಜಾಪೂರ ಭಾಗದ ಕನ್ನಡವು ನಯವಿನಯಗಳಿಂದ ಯುಕ್ತವಾದ ಮೈಸೂರ ಕನ್ನಡಿಗರಿಗೆ ರುಚಿಸದಿರುವದು. ಅದೇಮೇರಿಗೆ ಮೊಗಲಾಯಿ ಕನ್ನಡವು ಇತರ ಪ್ರಾಂತದವರಿಗೆ ಫಾರಶಿ ಉರ್ದುಗಳಿಂದ ಮಿಶ್ರಿತವಾದ್ದರಿಂದ ವಿಚಿತ್ರ ವೆಂದು ತೋರುವದು. ಆದರೂ ಒಂದು ಕಡೆಯ ಕನ್ನಡು ಇನ್ನೊಂದ ಕಡೆಯವರಿಗೆ ತೀರ ತಿಳಿಯುವದಿಲ್ಲೆನ್ನುವಹಾಗಿಲ್ಲ. ಅದರಲ್ಲಿ ಔಷಧವನ್ನು ಹೇಳುವ ಗ್ರಂಥವು ಸಾಹಿತ್ಯ ಗ್ರಂಥವಾಗಲಾರದು. ಅದು ರಸ, ಭಾವ, ಅಲಂಕಾರ ಶಬ್ದ ಮಾಧುರ್ಯ ಮುಂತಾದವುಗಳನ್ನು ಹೇಳುವ ಹೊತ್ತಿಗೆ ಯಲ್ಲ. ಗ್ರಂಥದ ಮುಖ್ಯೋದ್ದೇಶವು ಕೊನೆಗಂಡರೆ ನಾನು ಕೃತಕೃತ್ಯ ನಾದೆನೆಂದು ನನ್ನ ಭಾವನೆ. ಓದುಗರು ಕೂಡ ಇದೇ ಅಭಿಪ್ರಾಯವನ್ನಿಟ್ಟು ಕೊಂಡು ಗ್ರಂಥವನ್ನು ಓದುವರೆಂದು ಭರವಸೆ. ಸಾಹಿತ್ಯದ ದೃಷ್ಟಿಯಿಂದ ಈ ಗ್ರಂಥಕ್ಕೆ ಯಾವದೇ ಸ್ಥಾನವಿರಲಿ "ದ್ವಾದಶಕ್ಷಾರ (ಹನ್ನೆರಡು ಕ್ಷಾರ) ಚಿಕಿತ್ಸಾ ಶಾಸ್ತ್ರ"ವನ್ನು ಸರಿಯಾಗಿ ತಿಳಿಸಿಕೊಟ್ಟು ಈ ಪದ್ಧತಿಗಾಗಿ ತುಸು

ಮಟ್ಟಿಗಾದರೂ ಕನ್ನಡಿಗರಲ್ಲಿ ಜ್ಞಾನಾಭಿರುಚಿಗಳನ್ನು ಹುಟ್ಟಿಸಿದರೆ ನಾನು ಕೈಕೊಂಡ ಕಾರ್ಯವು ಸಫಲವಾಯಿತೆಂದು ನನ್ನ ಮತ.

ಇನ್ನೊಂದು ಸಂಗತಿಯ ಬಗ್ಗೆ ಹೇಳತಕ್ಕದ್ದಿದೆ. ಅದೇನೆಂದರೆ - ಈ ಗ್ರಂಥದ ವಿಷಯವು ಶಾಸ್ತ್ರೀಯವಿರುವದರಿಂದ ಅಲ್ಲಲ್ಲಿ ಪಾರಿಭಾಷಿಕ ಶಬ್ದಗಳು ಅಲ್ಲಲ್ಲಿ ಬಂದಿವೆ. ಅವುಗಳನ್ನು ಅಲ್ಲಲ್ಲಿ ತಿಳಿಸಿ ಹೇಳುವ ಹಾಗೂ ಸಾಧಾರಣ ಜನರಿಗೆ ಭೋಧವಾಗುವಂತೆ ಕನ್ನಡ ಶಬ್ದಗಳ ಉಪಯೋಗ ಮಾಡುವ ಯತ್ನಮಾಡಿದೆ. ಆದರಿಂದ ಸಾಧಾರಣ ಜ್ಞಾನವಿದ್ದ ಜನರಿಗೆ ಸಹ ಈ ಗ್ರಂಥವನ್ನು ತಿಳಿದುಕೊಳ್ಳಲು ತೊಂದರೆಯಾಗಲಿಕ್ಕಿಲ್ಲೆಂಬ ನಂಬಿಕೆ, ಗ್ರಂಥಾರಂಭದಲ್ಲಿ ಕೊಟ್ಟ 'ವಿಷಯಪ್ರವೇಶ'ವೆಂಬ ಭಾಗವನ್ನು ಓದಿದರಿಂದ ಈ ಶಾಸ್ತ್ರದ ಬಗ್ಗೆ ಸಾಕಷ್ಟು ಜ್ಞಾನವುಂಟಾಗುವದು ಮತ್ತು ಗ್ರಂಥದ ಕೊನೆಗೆ ಕೊಟ್ಟ ಭಾವನಾಕೋಶದ ಮೇಲಿಂದ ಬೇನೆಯ ಮೇಲಿನ ಔಷಧವನ್ನು ನಿಶ್ಚಯಿಸಲು ಬಹಳೇ ಸಹಾಯವಾಗುವದು. ಯಾವದೇ ಗ್ರಂಥದ ಕೊನೆಗೆ Index ವೆಂದು ಕೊಡುವ ಪದ್ಧತಿಗೆ ಅನುಸರಿಸಿ ಭಾವನಾಕೋಶವನ್ನು ಸಿದ್ಧಮಾಡಿದೆ. ಆದರಿಂದ ಬೇಗನೇ ರೋಗದ ಮೇಲಿನ ಔಷಧದ ಜ್ಞಾನವಾಗುವದು. ಅದರ ಮೇಲಿಂದ ಮೂಲ ಗ್ರಂಥದದಲ್ಲಿಯ ಆ ವಿಷಯದ ಮೇಲಿನ ವಿವೇಚನ ನೋಡಿದಲ್ಲಿ ಪೂರ್ಣ ಜ್ಞಾನವಾಗಿ ರೋಗ ನಿವಾರಣೆಗೆ ಸಹಾಯ್ಯವಾಗುವದು.

ಬೆಳಗಾಂವ,
ಜ್ಯೇಷ್ಠ ಶುದ್ಧ ೧೨ ಶಕೆ ೧೮೫೫ } ನಾರಾಯಣ ತಿರುಮಲರಾವ ದಾತಾರ

---

# ಅನುಕ್ರಮಣಿಕೆ

# ವಿಷಯಪ್ರವೇಶ

ವಿಷಯಾನುಕ್ರಮಣಿಕೆ :— ವ್ಯಾಖ್ಯೆ ; ವ್ಯಾಪ್ತಿ ; ಡಾಕ್ಟರ ಶೂಜಲರ ; ಆಧಾರಭೂತ ಕಲ್ಪನೆ ; ಶರೀರದ ಘಟಕ ; ಸೇಂದ್ರಿಯ ಹಾಗೂ ನಿರಿಂದ್ರಿಯ ಘಟಕಗಳು ; ಚಿಕಿತ್ಸಾಶಾಸ್ತ್ರದ ತತ್ತ್ವ ಹಾಗೂ ಸಿದ್ಧಾಂತ ; ಮಾನವೀ ಶರೀರವು ಹೇಗೆ ಸಿದ್ಧಿಸುತ್ತದೆ ; ರಕ್ತದ ಘಟಕಗಳು ; ಧಾತುಗಳ ಸಂವರ್ಧನವು ; ಪಿಂಡಗಳ ನಿರಿಂದ್ರಿಯ ಘಟಕಗಳು ; ಪಿಂಡಗಳ ಅಂತರ್ವ್ಯಾಪಾರ ; ರೋಗೋತ್ಪತ್ತಿ ; ರೋಗನಿವೃತ್ತಿ ; ಸೇಂದ್ರಿಯ ಪದಾರ್ಥಗಳನ್ನು ಕ್ಷಾರಗಳು ಹೇಗೆ ಉಪಯೋಗಿಸಿಕೊಳ್ಳುತ್ತವೆ ; ಹನ್ನೆರಡು ಕ್ಷಾರ ಔಷಧಗಳ ಹೆಸರು ; ಸೂಕ್ಷ್ಮಪ್ರಮಾಣ ; ಔಷಧಗಳನ್ನು ಮಾಡುವ ಪದ್ಧತಿ ; ಖಲನಮಾಡಿದ್ದರಿಂದ ಔಷಧಗಳ ಗುಣಗಳು ಕಡಿಮೆಯಾಗುವದಿಲ್ಲ ; ಔಷಧಗಳ ಯೋಜನೆ ಇಲ್ಲವೆ ಅವುಗಳನ್ನು ಆರಿಸುವದು ಹೇಗೆ ; ಔಷಧಗಳು ಎಷ್ಟು ; ಎಷ್ಟು ಸಾರೆ ಮತ್ತು ಯಾವ ಯಾವ ಕಾಲಕ್ಕೆ ಕೊಡಬೇಕು ; ಔಷಧಗಳ ಶಕ್ತಿಯೆಂದರೇನು ; ಯೋಗ್ಯ ಶಕ್ತಿಯ ಯೋಜನೆ ; ಈ ಔಷಧಗಳಿಂದ ಅಪಾಯವಾಗುವದೋ ; ಹೊಸ ಶೋಧಗಳು ; ಇತರ ಚಿಕಿತ್ಸಾಶಾಸ್ತ್ರಗಳ ಸಂಗಡ ತುಲನೆ ; ಚಿಕಿತ್ಸೆಯ ಪ್ರಕಾರ ; ಉಪಸಂಹಾರ.

**ವ್ಯಾಖ್ಯೆ :—** ಈ ಗ್ರಂಥದಲ್ಲಿ ನಾವು ವಿವೇಚಿಸತಕ್ಕ ವೈದ್ಯಕಪ್ರಕ್ರಿಯೆಕ್ಕೆ ಇಂಗ್ಲಿಷಭಾಷೆಯಲ್ಲಿ " **ಬಾಯೋಕೆಮಿಸ್ಟ್ರಿ** " ಎಂಬ ಹೆಸರು. ಇದಕ್ಕೆ " **೧೨ ಟಿಶ್ಯೂ ರೆಮಿಡೀಜ** " ಎಂದೂ ಅನ್ನುವರು. **ಬಾಯೋಕೆಮಿಸ್ಟ್ರಿ** ಅಥವಾ **ಟ್ವೆಲ್ವ್ ಟಿಶ್ಯೂ ರೆಮಿಡೀಜ** ಇವುಗಳ ಭಾಷಾಂತರ ನಾವು ಮಹಾರಾಷ್ಟ್ರದಲ್ಲಿ "**ಜೀವನರಸಾಯನ ಚಿಕಿತ್ಸಾಶಾಸ್ತ್ರ**" ಮತ್ತು **೧೨ ಕ್ಷಾರ ಚಿಕಿತ್ಸಾಪದ್ಧತಿ**ಯೆಂದು ಮಾಡಿದ್ದೇವೆ. " ಬಾಯೊಸ "

ಎಂಬ ಗ್ರೀಕಭಾಷೆಯಲ್ಲಿಯ ಶಬ್ದದ ಅರ್ಥ ಆಂಗ್ಲಭಾಷೆಯಲ್ಲಿಯ "Life" ಅಂದರೆ ಜೀವನವೆಂದು ಅನ್ನಬಹುದು. Chemistry ಅಂದರೆ "ರಸಾಯನಶಾಸ್ತ್ರ." ಅಂತೂ ಬಾಯೋಕೆಮಿಸ್ಟ್ರಿ ಅಂದರೆ ಜೀವನರಸಾಯನಶಾಸ್ತ್ರವೆಂಬರ್ಥ. ಯಾವದೊಂದು ಪದಾರ್ಥದ ಘಟಕ ದ್ರವ್ಯಗಳಾವುವು ಮತ್ತು ಅವುಗಳಲ್ಲಿ ಏನೇನು ವ್ಯತ್ಯಾಸ (ಬದಲು) ವಾಗುವವು ಈ ವಿಷಯದ ವಿವೇಚನಮಾಡುವ ಶಾಸ್ತ್ರಕ್ಕೆ ರಸಾಯನಶಾಸ್ತ್ರವೆಂಬ ಹೆಸರು. ಈ ವ್ಯಾಖ್ಯೆಯಮೇರೆಗೆ ಜೀವನರಸಾಯನಶಾಸ್ತ್ರವೆಂದರೆ ಯಾವುದರಲ್ಲಿ ಸಜೀವ ಪ್ರಾಣಿಮಾತ್ರಗಳ ಶರೀರದಲ್ಲಿಯ ಪದಾರ್ಥಗಳ ಘಟಕಗಳಾವುವು, ಅವು ಹೇಗೆ ಸಂಭವಿಸುತ್ತವೆ, ಅವುಗಳಲ್ಲಿ ವ್ಯತ್ಯಾಸಗಳು ಹೇಗೆ ಮತ್ತು ಯಾವ ಕಾರಣಗಳಿಂದುಂಟಾಗುತ್ತವೆ ಈ ಸಂಗತಿಗಳ ವಿವೇಚನ (ಮಾಹಿತಿ) ವಿರುವದು ಅದಕ್ಕೆ **ಜೀವನರಸಾಯನಶಾಸ್ತ್ರ**ವೆಂಬರ್ಥವು ಶಬ್ದಶಃ ಆಗುತ್ತದೆ. ಇಷ್ಟೇ ಅಲ್ಲ, ರೂಢಿಯಿಂದ ಇನ್ನೂ ಹೆಚ್ಚಿನ ಅರ್ಥವೂ ಇದರಲ್ಲಿ ಸಮಾವಿಷ್ಟವಾಗುತ್ತದೆ. ಅದೇನೆಂದರೆ— ಪ್ರಾಣಿಮಾತ್ರಗಳ ಶರೀರದ ಘಟಕಗಳು ಯಾವ್ಯಾವವು, ಶರೀರದಲ್ಲಿಯ ಬೇರೆಬೇರೆ ಅವಯವಗಳು ಹೇಗೆ ಅಂದರೆ ಯಾವ ಪದ್ಧತಿಯಿಂದ ಆಗುತ್ತವೆ, ಶರೀರವಿಕೃತಿ ಅಂದರೆ ರೋಗ, ರೋಗಗಳು ಹೇಗೆ ಮತ್ತು ಯಾವ ಕಾರಣಗಳಿಂದ ಉತ್ಪನ್ನವಾಗುತ್ತವೆ, ಅವುಗಳ ಸ್ವರೂಪ ಮತ್ತು ಕಾರಣಗಳು, ಶರೀರದಲ್ಲಿ ಕೊರತೆ ಹೊಂದಿದ ಕ್ಷಾರಗಳನ್ನು ಸಾಕಷ್ಟು ಹುಟ್ಟಿಸಿ ಇಲ್ಲವೆ ಪೂರೈಸಿ ಪ್ರಕೃತಿಯನ್ನು ನಿರಾಮಯಗೊಳಿಸುವದು ಅಂದರೆ ರೋಗವನ್ನು ಇಲ್ಲದಂತೆ ಮಾಡುವದು ಇವೇ ಮುಂತಾದವುಗಳು ಯಾವ ಶಾಸ್ತ್ರದಲ್ಲಿ ವಿಚಾರಿಸಲ್ಪಡುತ್ತವೆ ಅದಕ್ಕೇ **ಜೀವನರಸಾಯನಶಾಸ್ತ್ರ**ವೆಂಬ ಹೆಸರು.

**ವ್ಯಾಪ್ತಿ :—** ೧೯ನೇ ಶತಮಾನದ ಉತ್ತರಾರ್ಧದಲ್ಲಿ ಯುರೋಪಖಂಡದಲ್ಲಿಯ ಜರ್ಮನದೇಶದಲ್ಲಿ ವೈದ್ಯಶಾಸ್ತ್ರದಲ್ಲಾದ ಶೋಧಗಳಲ್ಲಿ ಈ ವೈದ್ಯಶಾಸ್ತ್ರದ ಸಮಾವೇಶಮಾಡಬಹುದು. ವೈದ್ಯಶಾಸ್ತ್ರದಲ್ಲಿ ಈ ವೈದ್ಯಪ್ರಕ್ರಿಯೆಯು ಹೊಸ ಶೋಧವೇ ಸರಿ. ಜೀವನರಸಾಯನಶಾಸ್ತ್ರವೆಂದರೆ ಆಮೂಲಾಗ್ರ ವೈದ್ಯಶಾಸ್ತ್ರವಲ್ಲ. ಇದೊಂದು **ಚಿಕಿತ್ಸಾಶಾಸ್ತ್ರವಷ್ಟೇ.**

ವೈದ್ಯಶಾಸ್ತ್ರಕ್ಕೆ ಹೊಂದಿದ ಮಹತ್ವದ ಹಾಗೂ ಪ್ರಮುಖ ಅಂಗವಿದು. ಇದರಲ್ಲಿ ಕೇವಲ ಔಷಧಗಳ ಚಿಕಿತ್ಸೆಯಷ್ಟೇ ವಿಚಾರಿಸಲ್ಪಡುತ್ತದೆ. ವೈದ್ಯ ಶಾಸ್ತ್ರದ ಇತರ ಅಂಗಗಳ ವಿಚಾರವು ಈ ಶಾಸ್ತ್ರದಲ್ಲಿ ಬರಲಾರದು. ಅವುಗಳಬಗ್ಗೆ ಇತರತ್ರ ವೈದ್ಯಶಾಸ್ತ್ರದಲ್ಲಿ ಶಾಸ್ತ್ರಜ್ಞರು ಮಾಡಿದ ಶೋಧ ಗಳು ಸ್ಥೂಲಮಾನದಿಂದ ಗೃಹೀತ ಹಿಡಿಯಲ್ಪಟ್ಟಿವೆ. ರೋಗಗಳ ಚಿಕಿತ್ಸೆಗೆ ಸಂಬಂಧಿಸುವದರಮಟ್ಟಿಗೆ ರೋಗದ ಉತ್ಪತ್ತಿ ಮುಂತಾದ ವಿಷಯಗಳ ವಿಚಾರವನ್ನು ಈ ಶಾಸ್ತ್ರದಲ್ಲಿ ಹೆಚ್ಚುಕಡಿಮೆಯಾಗಿ ತಮ್ಮ ತಿಳುವಳಿಕೆಯ ಮಟ್ಟಿಗೆ ಜೀವನರಸಾಯನಶಾಸ್ತ್ರಜ್ಞರು ಮಾಡುತ್ತಾರೆಂಬುದು ನಿಜ. ಇಷ್ಟೇ ಅಲ್ಲ, ಇಷ್ಟರಮಟ್ಟಿಗೆ ವಿಚಾರಮಾಡುವದು ಅಪರಿಹಾರ್ಯವೇ ಸರಿ. ಆದಾಗ್ಯೂ ಆ ವಿಷಯವು ಈ ಶಾಸ್ತ್ರದ ಮುಖ್ಯ ಉದ್ದೇಶವಲ್ಲವೆಂಬ ಸಂಗತಿಯನ್ನು ಮರೆಯಕೂಡದು. ಮಾನವೀ ಶರೀರದಲ್ಲುದ್ಭವಿಸುವ ರೋಗಗಳನ್ನು ಯಾವ ಚಿಕಿತ್ಸಾಪದ್ಧತಿಯಿಂದ ಹೋಗಲಾಡಿಸಬೇಕೆಂಬದರ ವಿಚಾರವು ಪ್ರಾಮುಖ್ಯದಿಂದ ಈ ಪದ್ಧತಿಯಲ್ಲಿ ಮಾಡಲ್ಪಡುತ್ತದೆ. ಆದ್ದರಿಂದ ನಾವು ಈ ಶಾಸ್ತ್ರಕ್ಕೆ **ಜೀವನರಸಾಯನ ಚಿಕಿತ್ಸಾಶಾಸ್ತ್ರ**ವೆಂಬ ಹೆಸರು ಕೊಟ್ಟಿದ್ದೇವೆ. ವೈದ್ಯಶಾಸ್ತ್ರದ ಪ್ರಮುಖ ಅಂಗಗಳು ಎರಡು. ಅವು ಯಾವ ವೆಂದರೆ– ಕಾಯಚಿಕಿತ್ಸೆ ಮತ್ತು ಶಸ್ತ್ರಚಿಕಿತ್ಸೆ. ಮೊದಲನೇ ಅಂಗದಲ್ಲಿ ಹೊಟ್ಟೆಯಲ್ಲಿ ಔಷಧಗಳನ್ನು ಕೊಟ್ಟು ರೋಗಗಳು ಪರಿಹರಿಸಲ್ಪಡುತ್ತವೆ. ಮತ್ತು ಎರಡನೇ ಅಂಗದಲ್ಲಿ ಶಸ್ತ್ರಕ್ರಿಯೆಯಿಂದ ರೋಗಗಳ ನಿವಾರಣೆ ಮಾಡಲ್ಪಡುತ್ತದೆ. ಇವೆರಡರಲ್ಲಿ ಕಾಯಚಿಕಿತ್ಸೆ ಅಂದರೆ ಶರೀರದಲ್ಲಿ ಔಷಧ ವನ್ನು ಕೊಟ್ಟು ರೋಗಿಯನ್ನು ನೆಟ್ಟಗೆ ಮಾಡುವದು ನಾವು ಕೈಕೊಂಡ ಶಾಸ್ತ್ರದ ಮರ್ಯಾದೆಯು. *

**ಡಾಕ್ಟರ ಶೂಜಲರ :**— ಜರ್ಮನಿಯಲ್ಲಿ ಓಲ್‌ಡೆನಬರ್ಗವೆಂಬ ಪಟ್ಟಣದಲ್ಲಿ ಇರತಕ್ಕ **ಡಾಕ್ಟರ ವುಇಲಿಯಮ್ ಶೂಜಲರ** ಎಂಬುವರು ಈ ಶಾಸ್ತ್ರದ ಸಂಸ್ಥಾಪಕರೂ ಪ್ರವರ್ತಕರೂ ಇರುವರು. **ಶೂಜಲರ**

---

* ಶಸ್ತ್ರಕ್ರಿಯೆಯಿಂದಲೇ ನೆಟ್ಟಗಾಗುವ ಎಷ್ಟೋ ರೋಗಗಳೂ ೧೨ ಕ್ಷಾರ ಔಷಧ ಗಳಿಂದ ನೆಟ್ಟಗಾಗಿವೆ ಮತ್ತು ಬಂದ ಗುಣವೂ ಸ್ಥಿರವಾಗಿವೆಂಬ ಅನುಭವವೂವುಂಟು.

ಸಾಹೇಬರು ಈ ಶಾಸ್ತ್ರದ ಸಂಬಂಧದಿಂದ ತಮ್ಮ ವಿಚಾರಗಳನ್ನು ನಿಶ್ಚಿತ ಮಾಡಿ ಅವುಗಳಿಗೆ ಶಾಸ್ತ್ರೀಯ ಸ್ವರೂಪವನ್ನು ಕೊಡುವ ಪೂರ್ವದಲ್ಲಿ ಯುರೋಪಖಂಡದಲ್ಲಿ ಹಲಕೆಲವು ಶೋಧಕರು ಈ ವಿಷಯಕ್ಕೆ ಸೂಚಕ ಮತ್ತು ಪೋಷಕವಾಗುವಂಥ ತಮ್ಮ ವಿಚಾರಗಳನ್ನು ಹಲಕೆಲಮಟ್ಟಿಗೆ ಪ್ರಸಿದ್ಧಗೊಳಿಸಿದ್ದರು. ಆ ವಿಚಾರಗಳಿಗೇನೆ ಚಾಲನಕೊಟ್ಟು ಅವುಗಳಲ್ಲಿ ಅಂತರ್ಭೂತವುಳ್ಳಂಥ ಮೂಲತತ್ವಗಳ ಆಧಾರವೇ ಈ ಹೊಸ ಶಾಸ್ತ್ರದ ಕಟ್ಟಡಕ್ಕೆ ತಳಹದಿಯಾಗಿರುವದು.

**ಆಧಾರಭೂತ ಕಲ್ಪನೆ**:— " ಮಾನವೀಶರೀರದ ಪ್ರತಿಯೊಂದು ಮಹತ್ವದ ಘಟಕಪದಾರ್ಥವು ರೋಗನಿವಾರಣೆ ಮಾಡುವ ಕಾರ್ಯದಲ್ಲಿಯ ಪ್ರಮುಖ ಉಪಚಾರವಾದುದು " " ಶರೀರದಲ್ಲಿಯ ಯಾವ ಇಂದ್ರಿಯಗಳಮೇಲೆ ಈ ಘಟಕಗಳ ಕಾರ್ಯವು ಆಗುವಂತದೆಯೋ ಅಲ್ಲಿಯೇ ಆ ಘಟಕಗಳ ಉಪಯೋಗ ಆಗುತ್ತದೆ. ( ಇತರತ್ರ ಅಷ್ಟುಮಟ್ಟಿಗೆ ಉಪಯೋಗವಾಗುವದಿಲ್ಲ. ) ಇಂದ್ರಿಯಗಳ ಮೇಲೆ ಸ್ವಾಭಾವಿಕರೀತ್ಯಾ ಯಾವ ಪದಾರ್ಥಗಳ ಉಪಯೋಗವಾಗುವದೋ ಆ ಪದಾರ್ಥಗಳ ಉಪಚಾರದಿಂದಲೇ ರೋಗಗಳನ್ನು ನೆಟ್ಟಗೆ ಮಾಡಬಹುದು. " " ಮನುಷ್ಯ ಪ್ರಾಣಿಯು ಪಿಂಡಮಯನಾಗಿದ್ದಾನೆ. " " ಅನೇಕ ಪಿಂಡಗಳ ವಿಶಿಷ್ಟ ಆಕಾರದ ಮೂರ್ತಿಯೇ ಮನುಷ್ಯನ ಶರೀರವು ಮತ್ತು ಪಿಂಡಗಳ ವಿಪರ್ಯಸ್ತ ಸ್ಥಿತಿಯೇ ರೋಗವು " " ಇಂದ್ರಿಯಗಳ ರಚನೆಯೂ ಜೀವನ ಶಕ್ತಿ ( Vitality ) ಯೂ ಶರೀರದಲ್ಲಿಯ ನಿರಿಂದ್ರಿಯ ಘಟಕಗಳ ಅವಶ್ಯಕ ಪ್ರಮಾಣದ ಮೇಲೆ ಅವಲಂಬಿಸಿರುತ್ತವೆ. " ಇವೇ ಮುಂತಾದ ವಾಕ್ಯಗಳು ಮತ್ತು ವಿಚಾರಗಳು ಯುರೋಪದಲ್ಲಿಯ ಆಕಾಲದ ಶಾಸ್ತ್ರೀಯ ಶೋಧಕರ ವ್ಯಾಖ್ಯಾನಗಳಲ್ಲಿಯೂ ಲೇಖಗಳಲ್ಲಿಯೂ ಬರಹತ್ತಿದ್ದವು. ಮೇಲಿನ ವಾಕ್ಯಗಳು ಅಲ್ಪವಾಗಿ ಕಂಡರೂ ಅವು ಬಹಳೇ ಮಹತ್ವವುಳ್ಳವು. **ಡಾ. ಶೂಜಲರ**ರ ವಿಚಾರಗಳಿಗೆ ಈ ಮತ್ತು ಇಂಥ ವಿಚಾರಗಳಿಂದಲೇನೇ ಚಾಲನೆಯು ದೊರಕಿತು. ಅವರು ಕೇವಲ ವಿಚಾರಸೃಷ್ಟಿಯಲ್ಲಿಯೇ ಸುತ್ತಾಡಲಿಲ್ಲ. ಅವರು ತಮ್ಮ ವಿಚಾರಗಳಿಗೆ ಮೂರ್ತಸ್ವರೂಪವನ್ನು ಕೊಡುವ

ಗೋಸ್ಕರ ತಮ್ಮ ರೋಗಿಗಳಿಗೆ ಅದೇ ಮಾರ್ಗದಿಂದಲೇ ಔಷಧೋಪಚಾರ ಮಾಡಲಾರಂಭಿಸಿದರು. ಮತ್ತು ಯಶಸ್ಸನ್ನೂ ಸಂಪಾದಿಸಿದರು. **ಜೀವನ ರಸಾಯನ ಚಿಕಿತ್ಸಾಶಾಸ್ತ್ರವು** ಅವರ ಅನುಭವದ ಮೂರ್ತಫಲವೇ ಸರಿ.

ಮೇಲೆ ಉದ್ಧೃತವಾದ ಬೇರೆ ಬೇರೆ ವಾಕ್ಯಗಳಲ್ಲಿಯ ಕಲ್ಪನೆ ಏನೆಂದರೆ:— ಮನುಷ್ಯನ ಶರೀರವು ಯಾವ ಘಟಕ (Constituent.) ಪದಾರ್ಥಗಳಿಂದ ರಚಿತವಾಗಿದೆಯೋ ಆ ಘಟಕಪದಾರ್ಥಗಳನ್ನೇ ಆ ಶರೀರದಲ್ಲುದ್ಭವಿಸುವ ಅನೇಕ ರೋಗಗಳಿಗೆ ಉಪಚಾರವೆಂದುಪಯೋಗಿಸಿ ರೋಗಗಳನ್ನು ಇಲ್ಲದಂತೆ ಮಾಡಬಹುದು. ಶರೀರದಲ್ಲಿ ಅನೇಕ ಇಂದ್ರಿಯಗಳೂ ಅವಯವಗಳೂ ಇವೆ. ಆ ಇಂದ್ರಿಯಗಳು ಹಾಗೂ ಆ ಅವಯವಗಳು ಯಾವ್ಯಾವ ಘಟಕಪದಾರ್ಥಗಳಿಂದ ಮೂಲಾರಂಭದಲ್ಲಿ ರಚಿತವಾಗಿವೆಯೋ ಆಯಾ ಘಟಕಪದಾರ್ಥಗಳನ್ನೇ ಹೊಟ್ಟೆಯಲ್ಲಿ ಔಷಧರೂಪದಿಂದ ಕೊಟ್ಟು ಆಯಾ ಇಂದ್ರಿಯಗಳ ಮತ್ತು ಅವಯವಗಳ ರೋಗಗಳನ್ನು ನೆಟ್ಟಗೆ ಮಾಡಬಹುದು.

**ಶರೀರದ ಘಟಕಗಳು**:— ಮನುಷ್ಯನು ಹವೆ ಮತ್ತು ಪಾರ್ಥಿವಪದಾರ್ಥಗಳಿಂದ ರಚಿತನಾದವನು. ಸತ್ತನಂತರ ಅವನು ಹವೆ ಮತ್ತು ಬೂದಿ (ಪಾರ್ಥಿವಪದಾರ್ಥ) ಇವುಗಳಲ್ಲಿ ತಿರಿಗಿ ಕೂಡಿಕೊಳ್ಳುವನು. ಮನುಷ್ಯನ ಶರೀರವಾಗಲಿ ಯಾವದೊಂದು ಅವಯವವಾಗಲಿ ಸುಟ್ಟು ಬೂದಿಯಾದನಂತರ ಆ ಶರೀರದ ಮತ್ತು ಅವಯವದ ಬೂದಿಯಲ್ಲಿ ಯಾವ ಪದಾರ್ಥಗಳು ದೊರೆಯುತ್ತವೋ ಅವೇ ಪದಾರ್ಥಗಳು ಆ ಶರೀರದ ಅವಯವಗಳ ಅವಶ್ಯಕ ಘಟಕಗಳಿರಲಿಕ್ಕೇಬೇಕು. ಬೂದಿಯಲ್ಲಿ ದೊರೆಯತಕ್ಕ ಪದಾರ್ಥಗಳಷ್ಟೇ ಈ ಪಂಚಭೂತಾತ್ಮಕದೇಹದ ಘಟಕಪದಾರ್ಥಗಳೆಂದು ಹೇಳಕೂಡದು. ಪ್ರಾಣವು ಶರೀರವನ್ನು ಬಿಟ್ಟುಹೋದನಂತರ ಮತ್ತು ಜ್ವಲನಕ್ರಿಯೆ ನಡೆದ ಕಾಲಕ್ಕೆ ಎಷ್ಟೋ ಪದಾರ್ಥಗಳು ನಷ್ಟವಾಗುತ್ತವೆ. ನಷ್ಟವಾದ ಪದಾರ್ಥಗಳು ಸಹ ಆ ಶರೀರದ ಘಟಕಗಳು ಎಂಬದು ನಿರ್ವಿವಾದ ಮಾತೇ ಸರಿ. ಶರೀರದಲ್ಲಿಯ ಬೇರೆ ಬೇರೆ ತರಹದ ಮತ್ತು ಆಕಾರದ ಧಾತುಗಳೂ ಅವಯವಗಳೂ ಹೇಗೆ ಸಿದ್ಧವಾಗುತ್ತವೆಂಬದನ್ನು ನಿಶ್ಚಯಿಸ

ಬೇಕಾದರೆ ಮನುಷ್ಯನು ಸತ್ತನಂತರ ನಷ್ಟವಾಗುವ ಪದಾರ್ಥಗಳು ಎಷ್ಟು ಅವಶ್ಯಕ ಮತ್ತು ಮಹತ್ವವುಳ್ಳವು ಅಷ್ಟೇ ಬೂದಿಯಲ್ಲಿ ದೊರೆಯುವ ಪದಾರ್ಥಗಳು ಸಹ ಸರಿಯಾದ ಮಹತ್ವವುಳ್ಳವೂ ಅವಶ್ಯವುಳ್ಳವೂ ಇರುವ ವೆಂಬದು ನಿರ್ವಿವಾದ ಸಂಗತಿಯು. ಶರೀರದ ಘಟಕಪದಾರ್ಥಗಳು ಯಾವ್ಯಾವವು ಎಂಬುದು ಜೀವನರಸಾಯನಚಿಕಿತ್ಸಾಶಾಸ್ತ್ರವು ಹುಟ್ಟುವ ಪೂರ್ವದಲ್ಲಿ ಅರಿಕೆಯಿರಲಿಲ್ಲವೆಂತಲ್ಲ. ಅದಕ್ಕೂ ಪೂರ್ವದಲ್ಲಿ ಎಷ್ಟೋ ವರ್ಷ ಅರಿಕೆಯಿತ್ತು; ಆದರೆ ರೋಗನಿವಾರಣೆಗೆ ಯಾವ ಅವಶ್ಯಕ ಘಟಕ ಪದಾರ್ಥದ ಉಪಯೋಗವೇನು ಮತ್ತು ಮಹತ್ವವೆಷ್ಟು ಎಂಬ ಸಂಗತಿಗಳ ಪ್ರತ್ಯಕ್ಷ ಅನುಭವ ಮಾತ್ರ ಶಾಸ್ತ್ರಜ್ಞರು ತೆಗೆದುಕೊಂಡಿರಲಿಲ್ಲ. ಬಹಳೇಕೆ ಈ ಮಾತಿನ ಕಡೆಗೆ ಶಾಸ್ತ್ರಜ್ಞರ ಲಕ್ಷ್ಯವೇ ಹೋಗಿರಲಿಲ್ಲ. ಇದರ ಶೋಧವು ಜೀವನರಸಾಯನಚಿಕಿತ್ಸಾಶಾಸ್ತ್ರದಿಂದಲೇ ಆಯಿತು.

**ಸೇಂದ್ರಿಯ ಮತ್ತು ನಿರಿಂದ್ರಿಯ ಘಟಕಗಳು** :— ಮಾನವೀ ಶರೀರದ ಘಟಕಗಳಲ್ಲಿ ಎರಡು ವರ್ಗಗಳು ಕಲ್ಪಿಸಲ್ಪಟ್ಟಿವೆ. ೧ ಸೇಂದ್ರಿಯ (organic), ೨ ಮತ್ತು ನಿರಿಂದ್ರಿಯ. (inorganic).

ಜಗತ್ತಿನಲ್ಲಿಯ ಯಾವತ್ತೂ ಪದಾರ್ಥಗಳಲ್ಲಿ ಪ್ರಾಣಿಜ, ಉದ್ಭಿಜ ಮತ್ತು ಖನಿಜ ಎಂಬ ಮೂರು ವರ್ಗಗಳನ್ನು ಕಲ್ಪಿಸಿ ಮೊದಲಿನ ಎರಡು ವರ್ಗಗಳ ಪದಾರ್ಥಗಳಿಗೆ ಸೇಂದ್ರಿಯ ಎಂತಲೂ ೩ನೇ ವರ್ಗದಲ್ಲಿಯ ಪದಾರ್ಥಗಳಿಗೆ ನಿರಿಂದ್ರಿಯ ಎಂತಲೂ ತಿಳಿಯಲ್ಪಟ್ಟದೆ. ರಸಾಯನಶಾಸ್ತ್ರದ ಆಧುನಿಕ ಶೋಧದ ಪ್ರಕಾರ ಯಾವುದರಲ್ಲಿ ಕಾರ್ಬನವಿರುವದೋ ಅದಕ್ಕೆ ಸೇಂದ್ರಿಯ ಮತ್ತು ಕಾರ್ಬನರಹಿತ ಪದಾರ್ಥಕ್ಕೆ ನಿರಿಂದ್ರಿಯವೆಂಬ ಸಂಜ್ಞೆ ಕೊಡಲ್ಪಟ್ಟಿದೆ. ಶರೀರವು ಸುಟ್ಟುಹೋದನಂತರ ಬೂದಿಯಲ್ಲಿ ದೊರೆಯುತಕ್ಕ ಪದಾರ್ಥಗಳು ಕಾರ್ಬನರಹಿತವಾದ ಖನಿಜ ನಿರಿಂದ್ರಿಯ ಪದಾರ್ಥಗಳು. ಸತ್ತನಂತರ ಇಲ್ಲದಂತಾಗುವ ಪದಾರ್ಥಗಳಲ್ಲಿ ನೀರು ಇದೊಂದು ನಿರಿಂದ್ರಿಯ ಪದಾರ್ಥವಿದ್ದು ಉಳಿದ ಯಾವತ್ತು ಪದಾರ್ಥಗಳು ಕಾರ್ಬನಯುಕ್ತ ಅಂದರೆ ಸೇಂದ್ರಿಯ ಪದಾರ್ಥಗಳಿರುವವು. ರಕ್ತದ ಪೃಥಕ್ಕರಣ ಮಾಡಿ-ದರೆ ಅದರಲ್ಲಿ ಸಹ ಸೇಂದ್ರಿಯ ಹಾಗೂ ನಿರಿಂದ್ರಿಯ ಪದಾರ್ಥಗಳು ದೊರೆ

ಯುತ್ತವೆ. ಸಕ್ಕರೆ, ಸೆಣಿ, (fat) ಮತ್ತು ಇತರ ಕಲ್ಕಮಯ (ಆಲ್ಬ್ಯುಮಿನ) ಪದಾರ್ಥಗಳು ಸೇಂದ್ರಿಯ ಪದಾರ್ಥಗಳು. ನೀರು ಮತ್ತು ಹಲವು ಖನಿಜ ಪದಾರ್ಥಗಳು ನಿರಿಂದ್ರಿಯಗಳು. ಈ ಖನಿಜ ಪದಾರ್ಥಕ್ಕೇನೆ **ಜೀವನಕ್ಷಾರ**ವೆಂದೆನ್ನುತ್ತಾರೆ. ಮನುಷ್ಯನ ಶರೀರದಲ್ಲಿ ೯೯ ನೀರು, ೯೯ **ಜೀವನಕ್ಷಾರ** ಮತ್ತು ೧೯ ಸೇಂದ್ರಿಯ ಪದಾರ್ಥಗಳು ದೊರೆಯುವವು.

**ಚಿಕಿತ್ಸಾಶಾಸ್ತ್ರದ ತತ್ವ ಮತ್ತು ಸಿದ್ಧಾಂತ:—** ನಿರಿಂದ್ರಿಯ ಪದಾರ್ಥಗಳು ಶರೀರದ ಘಟಕಗಳೆಂಬದು ಶಾಸ್ತ್ರಜ್ಞರಿಗೆ ಮೊದಲಿನಿಂದಲೇ ಗೊತ್ತಿದ್ದ ಸಂಗತಿಯು. ಆದರೂ ಈ ನಿರಿಂದ್ರಿಯ ಜೀವನಕ್ಷಾರಗಳ ಮಹತ್ವವೆಷ್ಟೆಂಬ ಸಂಗತಿಯ ಕಡೆಗೆ ಇತ್ತೀಚಿನವರೆಗೆ ಯಾರದೂ ಲಕ್ಷ್ಯವು ವೇಧಿಸಲ್ಪಟ್ಟಿದ್ದಿಲ್ಲ. ಶರೀರದಲ್ಲಿ ಅದು ಬಹಳೇ ಕಡಿಮೆ ಪ್ರಮಾಣದಲ್ಲಿದ್ದದರಿಂದ ಅದರ ಮಹತ್ವವಿಲ್ಲೆಂದು ತಿಳಿಯಲ್ಪಟ್ಟಿತ್ತು. "ಇಂದ್ರಿಯಗಳ ರಚನೆ ಮತ್ತು ಜೀವನಶಕ್ತಿ (Vitality) ಇವು ಶರೀರದಲ್ಲಿಯ ನಿರಿಂದ್ರಿಯ ಘಟಕಗಳ ಆವಶ್ಯಕ ಪ್ರಮಾಣದ ಮೇಲೆ ಅವಲಂಬಿಸಿವೆ" ಈ ಅರ್ಥಪೂರ್ಣ ವಾಕ್ಯವು ಪ್ರಸಿದ್ಧಿಗೆ ಬಂದನಂತರ ಇದರ ಕಡೆಗೆ ಶಾಸ್ತ್ರಜ್ಞರ ಲಕ್ಷ್ಯವು ಎಳೆಯಲ್ಪಟ್ಟಿತು. ಮತ್ತು ಈಗ ಸಿದ್ಧವಾಗಿರುವದೇನಂದರೆ, ಸೇಂದ್ರಿಯ ಪದಾರ್ಥಗಳ ಮಾನದಿಂದ ನಿರಿಂದ್ರಿಯ ಕ್ಷಾರಗಳ ಪ್ರಮಾಣವು ಶರೀರದಲ್ಲಿ ಬಹಳೇ ಕಡಿಮೆ ಇರುತ್ತದೆಂಬದು ನಿಜ. ಆದರೂ ಮಾನವೀ ಶರೀರದಲ್ಲಿಯ ಪ್ರತಿಯೊಂದು ಪಿಂಡದ ಸಜೀವತ್ವವೂ ಓಜಸ್ಸೂ ಈ ನಿರಿಂದ್ರಿಯ ಕ್ಷಾರಗಳ ಅವಶ್ಯಕ ಪ್ರಮಾಣದಮೇಲೆ ಸಂಪೂರ್ಣವಾಗಿ ಅವಲಂಬಿಸಿರುತ್ತವೆ. ಸುಣ್ಣ, ಪೊಟ್ಯಾಶಿಯಮ್ ಮುಂತಾದ ನಿರಿಂದ್ರಿಯ ಕ್ಷಾರಗಳು ಶರೀರದಲ್ಲಿ ಯೋಗ್ಯ ಪ್ರಮಾಣದಲ್ಲಿ ಇರದೇ ಹೋದರೆ ನೀರು ಮತ್ತು ಮಿಕ್ಕಾದ ಸೇಂದ್ರಿಯ ಪದಾರ್ಥಗಳು ಸರ್ವಥೈವ ನಿಷ್ಕ್ರಿಯಗಳೂ ನಿರುಪಯೋಗಿಗಳೂ ಆಗುವವು. ಕೇವಲ ಅವುಗಳಿಂದಲೇ ಶರೀರದಲ್ಲಿಯ ಯಾವದೇ ಕಾರ್ಯವು ಆಗಲಾರದು. ಜೀವನ ಕ್ಷಾರಗಳೇ ಶರೀರದ ಶಕ್ತಿದಾಯಕ ಸಂವರ್ಧಕ ಕರ್ತೃತ್ವವುಳ್ಳ ಹಾಗೂ ಆಧಾರಭೂತ ಘಟಕಗಳು. ಆಲ್ಬ್ಯುಮಿನ್, ಶರ್ಕರಾ, ಇತರ ಸೇಂದ್ರಿಯ ಪದಾರ್ಥಗಳು, ಹಾಗೂ ನೀರು ಇವು ನಿಷ್ಕ್ರಿಯ ಪದಾರ್ಥ

ಗಳಿರುತ್ತವೆ. ಮತ್ತು ಕ್ಷಾರಗಳು ಶರೀರದಲ್ಲಿ ಪಿಂಡಸಂವರ್ಧನೆಯ ಕಾರ್ಯದಲ್ಲಿ ಅವುಗಳ ಉಪಯೋಗಮಾಡಿಕೊಳ್ಳುವವು. ಈ ಕ್ಷಾರಗಳು ಇಲ್ಲದೆ ಹೋದರೆ ಈ ಸೇಂದ್ರಿಯ ಪದಾರ್ಥಗಳ ಉಪಯೋಗವು ಸ್ವತಂತ್ರ ವಾಗಿ ಏನೂ ಇರುವದಿಲ್ಲ. ಪ್ರತಿಯೊಂದು ಕ್ಷಾರದ ಕಾರ್ಯಕ್ಷೇತ್ರವು ಸ್ವತಂತ್ರವಿದೆ. ಪ್ರತಿಯೊಂದು ಕ್ಷಾರವು ಸೇಂದ್ರಿಯ ಪದಾರ್ಥಗಳಲ್ಲಿ ಯಾವದಾದರೊಂದು ವಿಶಿಷ್ಟ ಪದಾರ್ಥದ ಸಂಗಡ ಸಂಬಂಧವನ್ನಿಟ್ಟು ಶರೀರದ ಸ್ವಾಸ್ಥ್ಯವನ್ನು ರಕ್ಷಣಮಾಡುವ ಕಾರ್ಯವನ್ನು ತನ್ನ ಸಾಮ ರ್ಥ್ಯದ ಮಟ್ಟಿಗೆ ಮಾಡುತ್ತಿರುತ್ತದೆ. ಶರೀರದ ಸ್ವಾಸ್ಥ್ಯವು ಸಾಧಿಸಬೇಕಾದರೆ ಹಳೇ ಪಿಂಡಗಳು ಇಲ್ಲದಂತೆ ಆಗೋಣ ಮತ್ತು ಹೊಸ ಪಿಂಡಗಳು ನಿರ್ಮಾಣ ವಾಗೋಣ ಈ ದ್ವಿವಿಧಕಾರ್ಯವು ಶರೀರದಲ್ಲಿ ಅವ್ಯಾಹತ ನಡದೇ ಇರತಕ್ಕದ್ದು. ರಕ್ತದಲ್ಲಿ ಈ ಸಂವರ್ಧಕ ಮತ್ತು ಕರ್ತೃತ್ವವುಳ್ಳ ಕ್ಷಾರಗಳ ಸಾಮುಗ್ರಿಯು ಸಾಕಷ್ಟು ಇಲ್ಲದವಿನಃ ಹೊಸ ಪಿಂಡಗಳು ನಿರ್ಮಾಣವಾಗು ವದಿಲ್ಲ. ಮತ್ತು ಹೊಸಪಿಂಡಗಳು ಆಗದೇ ಇರೋಣದರಿಂದಲೇ ರೋಗೋ ತ್ಪತ್ತಿಯು ಆಗುತ್ತದೆ. ಕ್ಷಾರದ ಸಾಮುಗ್ರಿಯು ಸಾಕಷ್ಟು ಆದರೆ ಹಳೇ ಪಿಂಡಗಳ ಸ್ಥಳದಲ್ಲಿ ಹೊಸ ಪಿಂಡಗಳು ಹುಟ್ಟುತ್ತವೆ. ಈ ಮೇರೆಗೆ ಶರೀರದ ಸುಸ್ಥಿತಿಯು ಕಾಯಲ್ಪಡುತ್ತದೆಂದು **ಜೀವನಚಿಕಿತ್ಸಾಶಾಸ್ತ್ರಜ್ಞರ** ಅಭಿಪ್ರಾಯವುಂಟು. ಇಂಥ **ಜೀವನ ಕ್ಷಾರ**ಗಳು ಶರೀರದಲ್ಲಿ ೧೨ ಡೇ ಇರುತ್ತವೆಯೆಂದು **ಡಾ. ಶೂಜಲರರ** ಕಾಲದಲ್ಲಿ ತಿಳಿಯಲ್ಪಟ್ಟಿತ್ತು. ಈ ಕ್ಷಾರಗಳಲ್ಲಿ ಒಂದರದಾಗಲಿ ಅನೇಕ ಕ್ಷಾರಗಳದಾಗಲಿ ಪ್ರಮಾಣದಲ್ಲಿ ನ್ಯೂನತೆಯುಂಟಾದ ಕೂಡಲೆ ಪಿಂಡಗಳಲ್ಲಿಯ ಕ್ಷಾರಗಳ ಅಣುಗಳ ಗತಿ ಯಲ್ಲಿ ವ್ಯತ್ಯಾಸವುಂಟಾಗುವದು. ಅಂದರೆ ವಿಕೃತ ಸ್ಥಿತಿಯುಂಟಾಗುವದು.. ಈ ವಿಕೃತ ಸ್ಥಿತಿಗೇನೇ ರೋಗವೆನ್ನುವರು. ಕೊರತೆ ಹೊಂದಿದ ಪಿಂಡ ಕ್ಷಾರಗಳನ್ನು ಸೂಕ್ಷ್ಮ ಪ್ರಮಾಣದಿಂದ ಪೂರೈಸಿಕೊಟ್ಟು ಅಣುಗಳ ಗತಿ ಯನ್ನು ಸಮನಾಗಿಡಬಹುದು ಮತ್ತು ಈ ವ್ಯತ್ಯಾಸವನ್ನು ಅಥವಾ ವಿಕೃತ ಸ್ಥಿತಿಯನ್ನು ಇಲ್ಲದಂತೆ ಮಾಡಬಹುದು. ಅಂದರೆ ರೋಗವನ್ನು ನೆಟ್ಟಗೆ ಮಾಡಬಹುದು. ಈ ವಿಕೃತ ಸ್ಥಿತಿಯು ಶರೀರದ ಬೇರೆ ಬೇರೆ ಭಾಗಗಳಲ್ಲಿ ಬೇರೆ ಬೇರೆ ತರಹದಿಂದ ಕಂಡುಬರುತ್ತದೆ. ಈ ಬೇರೆ ಬೇರೆ ಭಾಗಗಳಲ್ಲಿಯ

ಬೇರೆ ಬೇರೆ ತರಹಗಳಿಗೆ ಅಥವಾ ಸ್ವರೂಪಗಳಿಗೆ ಬೇರೆ ಬೇರೆ ರೋಗ ನಿದರ್ಶಕ ಹೆಸರುಗಳು ಕೊಡಲ್ಪಟ್ಟಿವೆ. ಆದರೂ ರೋಗಗಳ ಈ ಹೆಸರುಗಳ ಮೇಲಿಂದ ನಿಜವಾದ ಅಪಾಯವೇನು, ಎಲ್ಲಿ ಮತ್ತು ಯಾವಕಾರಣಗಳ ಮೂಲಕ ಈ ಸ್ಥಿತಿಯುಂಟಾಗಿದೆ ಇದರ ಸಮ್ಯಗ್‌ಜ್ಞಾನವು ಉಂಟಾಗುವದಿಲ್ಲ. ಮಾನವೀ ಪ್ರಾಣಿಗಳಿಗಾಗತಕ್ಕ ಎಲ್ಲ ರೋಗಗಳ ರಹಸ್ಯಗಳೆಲ್ಲ ಈ ಸಂವರ್ಧಕ ಹಾಗೂ ಕರ್ತೃತ್ವವುಳ್ಳ ಕ್ಷಾರಗಳ ಪ್ರಮಾಣದ ನ್ಯೂನತೆ ಅಥವಾ ಕೊರತೆಯಲ್ಲಿಯೇ ಉಂಟು. ಶರೀರಕ್ಕೆ ಸಂಭವಿಸುವ ದುಃಖ, ವ್ಯಥೆ, ಮುಂತಾದ ಇತರ ಭಾವನೆಗಳು ರಕ್ತದಲ್ಲಿಯ ಯಾವದಾದರೊಂದು ನಿರಿಂದ್ರಿಯ ಕ್ಷಾರದಲ್ಲಿಯ ಪ್ರಮಾಣದ ಕೊರತೆಯ ದ್ಯೋತಕಗಳೇ ಸರಿ. ಶರೀರದಲ್ಲಿಯ ಜೀವನಕ್ಷಾರಗಳ ಯೋಗ್ಯ ಮತ್ತು ಸಮ ಪ್ರಮಾಣದ ಮೇಲೆಯೇ ಶರೀರದ ನಿರಾಮಯಸ್ಥಿತಿ, ಸ್ವಾಸ್ಥ್ಯ ಮತ್ತು ಸಾಮರ್ಥ್ಯಗಳು ಅವಲಂಬಿಸಿರುತ್ತವೆಂಬುವದೇ ಜೀವನರಸಾಯನ ಶಾಸ್ತ್ರಜ್ಞರ ಸಿದ್ಧಾಂತವು.

ಜೀವನರಸಾಯನಶಾಸ್ತ್ರದ ತತ್ವ ಮತ್ತು ಸಿದ್ಧಾಂತಗಳ ಸಂಬಂಧದಿಂದ ಮೇಲೆ ಮಾಡಿದ ವಿವೇಚನವು ಹೆಚ್ಚು ಸ್ಪಷ್ಟವಾಗಿ ತಿಳಿಯಬೇಕೆಂದು ಮಾನವೀಶರೀರದ ರಚನೆ ಹೇಗೆ ಆಗುತ್ತದೆಂಬದನ್ನು ಸ್ವಲ್ಪದರಲ್ಲಿ ತಿಳಿಸಿಹೇಳುವ ಅವಶ್ಯಕತೆಯುಂಟು ಅದು ಕೆಳಗೆ ಬರೆದ ಪ್ರಕಾರ ಇರುತ್ತದೆ.

**ಮಾನವೀಶರೀರವು ಹೇಗೆ ಸಿದ್ಧಿಸುತ್ತದೆ:—** ಅನ್ನ ನೀರು ಮತ್ತು ಹವೆ ಈ ಮೂರು ಪದಾರ್ಥಗಳು ಮಾನವೀಶರೀರದ ಜೀವನಶಕ್ತಿಯ ಮುಖ್ಯಾಧಾರಗಳಿವೆ. ಈ ಮೂರು ಪದಾರ್ಥಗಳಿಂದಲೇ ಮಾನವೀಶರೀರದ ಘಟಕಗಳು ಆಗುತ್ತವೆ. ಪಾರ್ಥಿವಪದಾರ್ಥ ಮತ್ತು ಹವೆ ಇವುಗಳಿಂದ ಮನುಷ್ಯನು ಆಗಿರುತ್ತಾನೆಂದು ಈ ಮೊದಲೇ ಹೇಳಿದೆ. ಅನ್ನ ಮತ್ತು ನೀರು ಇವು ಪಾರ್ಥಿವಪದಾರ್ಥಗಳೇ ಸರಿ. ನೀರು ಪ್ರತ್ಯಕ್ಷ ಪಾರ್ಥಿವವೆಂದರೆ ಖನಿಜಪದಾರ್ಥವೇ ಇರುತ್ತದೆ. ಅನ್ನವು ಸಹ ಅಪ್ರತ್ಯಕ್ಷರೀತಿಯಿಂದ ಖನಿಜವೆಂದು ಒಪ್ಪಬೇಕಾಗುವದು. ಅನ್ನವೆಂದರೆ ಉದ್ಭಿಜ

ಪದಾರ್ಥ. ಅದು ವನಸ್ಪತಿಯು. ಅದು ಪೃಥ್ವಿಯಲ್ಲಿಯೇ ಅಂದರೆ ಭೂಮಿಯಲ್ಲಿಯೇ ಉದ್ಭವಿಸುತ್ತದೆ ಅಂದರೆ ಬೆಳೆಯುತ್ತದೆ ಮತ್ತು ಅದನ್ನು ತಿಂದದ್ದರಿಂದಲೇ ಮನುಷ್ಯನು ಪೋಷಿತನಾಗುತ್ತಾನೆ. ಅಂದರೆ ಮನುಷ್ಯನ ಶರೀರಸಂವರ್ಧನಕ್ಕೂ ಸಂಗೋಪನಕ್ಕೂ ಅವಶ್ಯವಿದ್ದ ಬಹುತರ ಪದಾರ್ಥಗಳು ವನಸ್ಪತಿದ್ವಾರಾ (ಅನ್ನದ್ವಾರಾ) ಪೃಥ್ವಿಯೊಳಗಿಂದಲೇ ಪೂರೈಸಲ್ಪಡುತ್ತವೆಂಬದು ಸಹಜವೇ ಧ್ಯಾನದಲ್ಲಿ ಬರಲಿಕ್ಕೆಸಾಕು. ವನಸ್ಪತಿಗಳು ಹುಟ್ಟಿ ಬೆಳೆಯಬೇಕಾದರೆ ಯಾವ ಪದಾರ್ಥಗಳ ಅವಶ್ಯಕತೆಯದೆಯೋ ಆ ಪದಾರ್ಥಗಳು ಪೃಥ್ವಿಯಲ್ಲಿ ಇಲ್ಲದಿದ್ದರೆ ಆ ವನಸ್ಪತಿಗಳು ಹುಟ್ಟುವದು ಅಶಕ್ಯವಾಗುವದು. ಇದು ಎಷ್ಟು ನಿಜವೋ ಅಷ್ಟೇ ನಿಜವು, ಇನ್ನೊಂದು ಸಂಗತಿಯು ಅದು ಯಾವದೆಂದರೆ— ಮಾನವೀಶರೀರಾವಯವಗಳಿಗೆ ಅವಶ್ಯವುಳ್ಳ ಪದಾರ್ಥಗಳು ಅವನು ತಿನ್ನುವ ಅನ್ನದೊಳಗಿಂದ ಸಿಗದೇ ಹೋದರೆ ಮನುಷ್ಯನ ಬೆಳೆಗೆಯು ನಿಂತುಹೋಗುವದು. ಇದು ವಿಶದವಾಗಿ ತಿಳಿಯುವಂಥ ಮಾತು. ಈ ಪದಾರ್ಥಗಳು ಶರೀರಕ್ಕೆ ಹೇಗೆ ಪೂರೈಸಲ್ಪಡುತ್ತವೆ?

ಈ ಪದಾರ್ಥಗಳು ಅನ್ನ, ನೀರು ಮತ್ತು ಹವೆ ಇವುಗಳ ದ್ವಾರಾ ಪೂರೈಸಲ್ಪಡುತ್ತವೆ. ಅನ್ನ ಮತ್ತು ನೀರು ಮುಖದಿಂದ ಅಂದರೆ ಬಾಯಿಯಿಂದ ಅನ್ನನಲಿಕೆಯ ದ್ವಾರದಿಂದ ಜಠರದಲ್ಲಿ ಹಾಗೂ ಕರಳುಗಳಲ್ಲಿ ಇಳಿಯುತ್ತವೆ. ಮುಖ, ಜಠರ, ಉದರಭಾಗಗಳಲ್ಲಿರತಕ್ಕ ಯಕೃತ್‌ ಅಗ್ನ್ಯಾಶಯ ( Pancreas ) ಹಾಗು ಕರಳು ಮುಂತಾದವುಗಳಲ್ಲಿ (ತಯಾರ) ಆಗುವ ಪಾಚಕರಸದ ಕಾರ್ಯವು ಅನ್ನದ ಮೇಲೆ ಆಗಿ ಅದು ( ಅನ್ನವು ) ಕರಗಿದಂತಾಗುವದು. ಅದಕ್ಕೆ ದ್ರವರೂಪವು ಪ್ರಾಪ್ತವಾಗುತ್ತದೆ. ಆ ದ್ರವರೂಪ ಪದಾರ್ಥದಲ್ಲಿಯ ಸಾಕಷ್ಟು ಭಾಗವನ್ನು ಶೋಷಣಮಾಡುವ ಕಾರ್ಯವು ಕರಳುಗಳಲ್ಲಾಗುತ್ತದೆ. ಅನ್ನಾಂಶವನ್ನು ತಕ್ಕೊಂಡು ಹೋಗುವ ಈ ದ್ರವಪದಾರ್ಥವು ಲಸಿಕಾವಾಹಿನಿ ಹಾಗೂ ರಕ್ತವಾಹಿನಿ ಇವುಗಳ ದ್ವಾರಾ ಫುಪ್ಫುಸದ ಕಡೆಗೆ ವೈಯಲ್ಪಡುತ್ತದೆ. ಅಲ್ಲಿ ಈ ದ್ರವ ಪದಾರ್ಥದ ಸಂಗಡ ಹವೆಯ ಸಂಬಂಧ ಬಂದು ಅದರಲ್ಲಿ ಪ್ರಾಣವಾಯು

ವಿಸ ಸಂಗಡ ಕಲೆಯಲ್ಪಡುತ್ತದೆ. ಮತ್ತು ಶುದ್ಧರಸಸ್ವರೂಪವನ್ನು ಹೊಂದಿ ಈ ರಸದ್ರವ್ಯವು ಹೃದಯದಲ್ಲಿ ಸೇರುತ್ತದೆ. ಹೃದಯದಿಂದ ಧಮನಿಗಳ ಹಾಗೂ ಕೇಶವಾಹಿನಿಗಳ ದ್ವಾರಾ ಈ ರಕ್ತವು ಶರೀರದ ಎಲ್ಲ ಭಾಗಗಳಲ್ಲಿ ಸಂಚರಿಸುತ್ತದೆ. ಹಾಗೂ ಸಂದಿಗೊಂದಿಗಳಲ್ಲಿಯ ಪ್ರತಿಬಂದು ಅವಯವಗಳಿಗೆ ಪೋಷಕದ್ರವ್ಯವನ್ನು ಮುಟ್ಟಿಸುತ್ತದೆ. ಶರೀರದಲ್ಲಿಯ ಪ್ರತಿಬಂದು ಸಣ್ಣ ದೊಡ್ಡ ಭಾಗಗಳ ಸಂಗಡ ನಿತ್ಯಶಃ ಸಂಬಂಧಬರುವ ಪದಾರ್ಥವೆಂದರೆ ಒಂದೇ ರಕ್ತವು. ಒಳಗಿನ ಅವಯವಗಳಿಗೆ ಪೋಷಕ ದ್ರವ್ಯಗಳನ್ನು ವೈದುಮುಟ್ಟಿಸುವ ಕಾರ್ಯವನ್ನು ಮಾಡುವ ಸಾಧನವು ರಕ್ತದಹೊರತು ಇತರ ಯಾವದೂ ಇಲ್ಲ. ರಕ್ತದೊಳಗಿಂದೇನೆ ಅನ್ನ, ನೀರು (ಪಾರ್ಥಿವಪದಾರ್ಥ) ಮತ್ತು ಹವೆ ಇವು ಪ್ರತಿಯೊಂದು ಅವಯವಗಳಿಗೆ ದೊರೆಯುತ್ತವೆ. ಕೇಶವಾಹಿನಿಗಳೊಳಗಿಂದ ರಕ್ತವು ಹರಿಯುತ್ತಿರುವಾಗ ವಾಹಿನಿಗಳ ಸೂಕ್ಷ್ಮಗೋಡೆಗಳೊಳಗಿಂದ (ಪಾರ್ಶ್ವಭಾಗಗಳಿಂದ) ರಕ್ತದಲ್ಲಿಯ ದ್ರವಪದಾರ್ಥವು (ಪ್ಲಾಜ್ಮಾ Plasma) ಕೆಳಗೆ ಅತ್ತ ಇತ್ತ ಸೋರುತ್ತಿರುತ್ತದೆ. ಈ ಸೋರುತ್ತಿರುವ ಪದಾರ್ಥದೊಳಗಿಂದಲೇ ಬೇರೆ ಬೇರೆ ಸ್ಥಾನದಲ್ಲಿಯ ಪ್ರತಿಯೊಂದು ಅವಯವವು ತನ್ನ ಜೀವನಾಂಶವನ್ನು ಎಳಕೊಳ್ಳುತ್ತದೆ ಮತ್ತು ತನ್ನ ಪೋಷಣವನ್ನು ಮಾಡಿಕೊಳ್ಳುತ್ತದೆ. ಶರೀರದಲ್ಲಿಯ ಪ್ರತಿಯೊಂದು ಅವಯವಕ್ಕೆ ಬೇಕಾಗುವ ಯಾವತ್ತೂ ಪದಾರ್ಥಗಳು ರಕ್ತದಲ್ಲಿರುತ್ತವೆ. ಶರೀರಕ್ಕೆ ಬೇಕಾಗುವ ಯಾವತ್ತೂ ಸಾಮುಗ್ರಿಯನ್ನು ಪೂರೈಸುವ ಸಾಮರ್ಥ್ಯವು ರಕ್ತದಲ್ಲಿದೆ. ರಕ್ತದ್ವಾರದಿಂದ ಯಾವ ಅನ್ನವು ಯಾವ ಅವಯವಗಳಿಗೆ ಮುಟ್ಟಿಸಲ್ಪಡುತ್ತದೋ ಆಯಾ ಅವಯವಗಳಿಗೆ ಯಾವ ಯಾವ ತರಹದ ಅನ್ನವು ಬೇಕಾಗಿರುತ್ತದೋ ಆಯಾ ತರಹದ ಅನ್ನವು ಅದರಲ್ಲಿ ಇರುತ್ತದೆ ಆದ್ದರಿಂದಲೇನೇ ಪ್ರತಿಯೊಂದು ಅವಯವಗಳ ಸಂವರ್ಧನ ಮತ್ತು ಸಂಗೋಪನವಾಗುತ್ತದೆ ಮತ್ತು ಆಯಾ ಅವಯವಕ್ಕೆ ತನ್ನ ತನ್ನ ಕಾರ್ಯವನ್ನು ಮಾಡಲು ಸಾಮರ್ಥ್ಯವುಂಟಾಗುತ್ತದೆ. ಸೋರುತ್ತಿರುವ ರಕ್ತೋದಕದೊಳಗಿಂದ ದೊರೆಯತಕ್ಕ ಪೋಷಕದ್ರವ್ಯವು ಪ್ರೊಟೊಪ್ಲಾಜಮ ಎಂಬ ದ್ರವ್ಯಕ್ಕೆ ಸಮಾನವೇ ಇರುತ್ತದೆ. ಪ್ರೊಟೊಪ್ಲಾಜಮ ಅಂದರೆ ಸಜೀವ-

ಅಣು— ಇದೊಂದು ಜಾಗರೂಕ (ಕ್ಷೋಭಶೀಲ) ಪದಾರ್ಥವದೆ. ಶರೀರದಲ್ಲಿ * ಸಜೀವಪದಾರ್ಥವಿದೊಂದೇ.

---

* ಇಂದ್ರಿಯ ವಿಜ್ಞಾನಶಾಸ್ತ್ರಜ್ಞರು ಸಜೀವ ಪದಾರ್ಥದ ೫ ಲಕ್ಷಣಗಳನ್ನು ಹೇಳಿದ್ದಾರೆ. ಅವ್ಯಾವವೆಂದರೆ:—

೧. **ಜಾಗರೂಕತೆ:**— (Irritability) ಚೇತನೋತ್ಪಾದಕ ಕಾರಣಗಳಿಂದ ಪದಾರ್ಥದಲ್ಲಿ ಬದಲಾವಣೆಯು ದೃಷ್ಟ್ಯೋತ್ಪತ್ತಿಗೆ ಬರೋಣವೆಂದರೇ ಜಾಗರೂಕತೆ. ಸ್ನಾಯುಗಳಲ್ಲಿ ಗತಿ ಅಥವಾ ಚಲನವಲನವುಂಟಾಗುವದೇ ಜಾಗರೂಕತೆಯ ಪ್ರಮುಖ ಉದಾಹರಣವು.

೨. **ಸಾತ್ಮೀಕರಣಶಕ್ತಿ:**— ಸ್ವೀಕರಿಸಿದ ಪೋಷಕದ್ರವ್ಯವನ್ನು ತನ್ನಂತೆಯೇ ಹೊಡಿಕೊಂಬೋಣ ಅಂದರೆ ಅದಕ್ಕೆ ಪ್ರೊಟೊಪ್ಲಾಜಮುದ ಸ್ವರೂಪ ಅಥವಾ ಸಜೀವತ್ವವನ್ನುಂಟುಮಾಡಿಕೊಡೋಣ.

೩. **ಸಂವರ್ಧಶಕ್ತಿ:**— ಪುಷ್ಟ ಆಗೋಣ. ತನ್ನಂತೆ ಮಾಡಿಕೊಂಬುವ ಶಕ್ತಿಯ ಸ್ವಾಭಾವಿಕ ಪರಿಣಾಮವೇ ಇದು.

೪. **ದ್ವೈಧೀಕರಣ ಅಥವಾ ಸಂತತ ನಿರ್ಮಾಣಶಕ್ತಿ:**— ಸಂವರ್ಧನದ್ದೇ ಇದೊಂದು ಪ್ರಕಾರವುಂಟು.

೫. **ವಿಸರ್ಜನಶಕ್ತಿ:**— ತ್ಯಾಜ್ಯ ಅಂದರೆ ಬೇಡಾದ ಪದಾರ್ಥವನ್ನು ಶರೀರದ ಹೊರಗೆ ದೂಕಿಬಿಡುವ ಶಕ್ತಿ. ಮೇಲೆ ಹೇಳಿದ ಯಾವತ್ತೂ ಲಕ್ಷಣಗಳು ಕೆಲಪದಾರ್ಥಗಳಲ್ಲಿರುವದಿಲ್ಲ. ಆದರೂ ಅವುಗಳಿಗೆ ಸಜೀವಪದಾರ್ಥವೆನ್ನುವದುಂಟು. ೨ನೇ ಮತ್ತು ೫ನೇ ಲಕ್ಷಣಗಳು ಮಾತ್ರ ಆ ಪದಾರ್ಥಗಳಲ್ಲಿರಲೇಬೇಕು. ಈ ಸಜೀವ ಪದಾರ್ಥಗಳು ಒಂದೇಸವನೇ ರಾಸಾಯನಿಕ ವಿಕ್ರಿಯೆಯನ್ನು ಹೊಂದುತ್ತಲೇ ಇರುತ್ತವೆ. ಈ ವಿಕ್ರಿಯೆಯನ್ನು ಹೊಂದುವ ಕ್ರಮದಲ್ಲಿ ಒಂದು ಕಡೆ ಅವು ತಮ್ಮ ಸಂರಕ್ಷಣವನ್ನು ಮಾಡಿಕೊಳ್ಳುತ್ತವೆ. ಆದರೆ ಇನ್ನೊಂದು ಕಡೆ ಸವೆಯುತ್ತ ಹೋಗಿ ಇಲ್ಲದಂತಾಗುತ್ತವೆ ಅಂದರೆ ಸಾಯುತ್ತವೆ. (ಇದು ಆಕ್ಸಿಡೇಶನದ ಸ್ವಾಭಾವಿಕ ಪರಿಣಾಮವು). ಸಜೀವಪದಾರ್ಥಗಳ ಅಣುರೇಣುಗಳಲ್ಲಿ ಸಾರ್ವಕಾಲ ನಡೆದ ಅಂತರ್ಗತ ಕ್ರಮಕ್ಕೆ ಮೆಟಾಬಾಲಿಜಮ್ ಅಥವಾ ಜಯಾಪಜಯವೆಂದನ್ನುತ್ತಾರೆ. ಪ್ರೋತದ್ರವ್ಯಗಳೂ (ಪ್ರೋಟೀನ್ಸ Proteans) ಸಜೀವ ಪದಾರ್ಥಗಳಲ್ಲಿ ಯಾವಾಗಾಗಲಿ ಇರತಕ್ಕಂಥವೇ ಸರಿ. ಸಜೀವವಿಲ್ಲದಂಥ ಪದಾರ್ಥಗಳಲ್ಲಿ ಮತ್ತು ಸಜೀವ ಪದಾರ್ಥಗಳ ಉದ್ಯೋಗದಿಂದ ಉಂಟಾಗದೆ ಇದ್ದ ಪದಾರ್ಥಗಳಲ್ಲಿ ಈ ಪ್ರೋತದ್ರವ್ಯಗಳು ದೊರೆಯುವದಿಲ್ಲ. ಆದ್ದರಿಂದ ಪ್ರೋತದ್ರವ್ಯಗಳಲ್ಲಿ ಜಯಾಪಜಯವಾಗೋಣವು ಜೀವನಶಕ್ತಿಯ ಸಾಮರ್ಥ್ಯದ (Vitality) ಮುಖ್ಯ ಲಕ್ಷಣವೆಂದು ತಿಳಿಯಲ್ಪಡುತ್ತದೆ.

ಇತರ ಎಲ್ಲ ಪದಾರ್ಥಗಳಿಗೆ ಮೃತ ಅಥವಾ ನಿರ್ಜೀವ ಅಥವಾ ಜಡ ಅನ್ನಬಹುದು. ಈ ಸಜೀವ ಅಣು ಸರ್ವ ಶರೀರತುಂಬಾ ಪ್ರಸರಿಸಿದೆ. ಶರೀರದ ೧/೫ನೇ ಭಾಗ ಈ ಸಜೀವಪದಾರ್ಥದಿಂದ, ಉಳಿದ ೪/೫ ಭಾಗ ಮೃತ, ನಿರ್ಜೀವ, ಅಥವಾ ಜಡಪದಾರ್ಥದಿಂದ ಆಗಿದೆ. ಈ ಸಜೀವ ಅಣು ಎಂಬ ಪದಾರ್ಥವು ನತ್ರಯುಕ್ತವೂ, ಮೆತ್ತನದೂ, ಗುಂಡಿನೋಪಾದಿಯಲ್ಲಿಯೂ, ಕ್ಷಣಕ್ಷಣಕ್ಕೆ ಆಕಾರವನ್ನು ಬದಲಿಸಿ ಭಿನ್ನಾಕಾರವನ್ನು ಹೊಂದತಕ್ಕಂಥಾದ್ದೂ (ಚಂಚಲ) ಆದ್ದರಿಂದಲೇ ನಿರಾಕಾರವೆನಿಸಿಕೊಳ್ಳುವಂಥಾದ್ದೂ ಘನವೂ ದ್ರವಪದಾರ್ಥದಿಂದ ಯುಕ್ತವೂ ಹೊಳವುಳ್ಳದ್ದೂ ಒಂದೇ ದ್ರವ್ಯವುಳ್ಳದ್ದೂ ಇರುತ್ತದೆ. ಈ ಹೊಳೆಯುವಂಥ ದ್ರವಪದಾರ್ಥದಲ್ಲಿ ಸಣ್ಣ ಸಣ್ಣ ಕಣಗಳಿರುತ್ತವೆ. ಆ ಕಣಗಳು ಕಲೆತವೆಂದರೆ ಅದಕ್ಕೆ ಸಜೀವತ್ವವು ಪ್ರಾಪ್ತವಾಗುತ್ತದೆ. ಈ ಸಜೀವಪದಾರ್ಥದಿಂದಲೇನೇ ಪಿಂಡಗಳು ಬೆಳೆಯುತ್ತವೆ. ಪಿಂಡಗಳಲ್ಲಿ ಸ್ವಾಭಾವಿಕರೀತ್ಯಾ ಸಂವರ್ಧನದ ಅಂದರೆ ಬೆಳೆಯುವ ಶಕ್ತಿಯುಂಟು. ಪ್ರಥಮ ಒಂದು ಪಿಂಡವು ಹುಟ್ಟುತ್ತದೆ. ಮುಂದೆ ಒಂದಕ್ಕೆ ಎರಡಾಗುತ್ತವೆ. ಎರಡಕ್ಕೆ ನಾಲ್ಕು ನಾಲ್ಕಕ್ಕೆ ಎಂಟು, ಎಂಟಿಗೆ ೧೬ ಈ ಪ್ರಮಾಣದಿಂದ ಪಿಂಡಗಳು ವರ್ಧಮಾನಪ್ರಮಾಣದಿಂದ ಬೆಳೆಯುತ್ತ ಹೋಗುತ್ತವೆ. ಮತ್ತು ಅವುಗಳಿಂದಲೇ ಬೇರೆ ಬೇರೆ ಧಾತುಗಳು ಆಗುತ್ತವೆ. ಇದೇ ಪದ್ಧತಿಯಿಂದ ಶರೀರಸಂವರ್ಧನೆಗೆ ಅವಶ್ಯವಿದ್ದ ಬೇರೆ ಬೇರೆ ತರಹದ ಅವಯವಗಳೂ ಇಂದ್ರಿಯಗಳೂ ಆಗುತ್ತವೆ. ಧಾತು, ಅವಯವ ಅಥವಾ ಇಂದ್ರಿಯ ಇವುಗಳನ್ನು ಹುಟ್ಟಿಸುವ ಈ ಪದ್ಧತಿಗಾಗಿ ಸೇಂದ್ರಿಯ ಮತ್ತು ನಿರೀಂದ್ರಿಯವೆಂಬ ಎರಡೂ ಘಟಕ ಪದಾರ್ಥಗಳ ಅವಶ್ಯಕತೆಯುಂಟು. ಮತ್ತು ಇವೆರಡೂ ಪದಾರ್ಥಗಳು ರಕ್ತದಲ್ಲಿ ದೊರೆಯುತ್ತವೆ. ಬಹಳೇಕೆ, ರಕ್ತದ ಕಾರ್ಯವು ಶರೀರದಲ್ಲಿ ಯಾವ ತರಹದ್ದಿದೆ ಎಂಬ ಸಂದರ್ಭದಲ್ಲಿ ಹೀಗೆ ಮಾಡಲ್ಪಟ್ಟ ವಿವೇಚನದ ಮೇಲಿಂದ ಕಂಡುಬರುವದೇನಂದರೆ— ರಕ್ತದಲ್ಲಿ ಇವೆರಡೂ ಪದಾರ್ಥಗಳು ಅವಶ್ಯವಿರಲೇಬೇಕು. ಇಲ್ಲದಿದ್ದರೆ ಶರೀರದ ಬೆಳವಣಿಗೆಯೇ ಆಗಲಿಕ್ಕಿಲ್ಲ.

**ರಕ್ತದ ಘಟಕಗಳು :—** ಸಕ್ಕರೆ, ನೆಣಯುಕ್ತ ಪದಾರ್ಥ ಮತ್ತು

ಕಲ್ಕಮಯ ಪದಾರ್ಥ (ಆಲ್‌ಬ್ಯೂಮಿನಸ) ಗಳು ರಕ್ತದ ಸೇಂದ್ರಿಯಘಟಕಗಳಿರುತ್ತವೆ. ಮತ್ತು ಅವೇ ಅವಯವಗಳ ಶಾರೀರಿಕ ತಳಹದಿಯು. ನೀರು, ಪೊಟ್ಯಾಶ್, ಲಾಯಿಮು, ಆಯರ್ನ, ಸಿಲಿಕಾ, ಮ್ಯಾಗ್ನೆಶಿಯಮು, ಸೊಡಿಯಮ್ ಮುಂತಾದ ಕ್ಷಾರಗಳು ನಿರಿಂದ್ರಿಯ ಘಟಕಪದಾರ್ಥಗಳು. ಸೇಂದ್ರಿಯ ಪದಾರ್ಥವು ಅವಯವಗಳ ಶಾರೀರಿಕರಚನೆಯ ತಳಹದಿಯೆಂದು ತಿಳಿದರೆ ನಿರೀಂದ್ರಿಯ ಪದಾರ್ಥವು ಅವುಗಳಲ್ಲಿಯ ರಾಸಾಯನಿಕ ವಿಕ್ರಿಯೆ (ಬದಲಾವಣೆ) ಯನ್ನುಂಟುಮಾಡುವ ಮುಖ್ಯ ವಸ್ತುವೆಂದೂ ತಿಳಿಯಲಿಕ್ಕೂ ಅಡ್ಡಿಯಿಲ್ಲ. ಯಾವತರಹದ ವಿಶಿಷ್ಟ ಪಿಂಡವನ್ನುಂಟುಮಾಡುವ ಕಾರ್ಯವಾದರೂ ಇದೇ ನಿರಿಂದ್ರಿಯ ಪದಾರ್ಥದ ಮೇಲೆ ಒಪ್ಪಿಸಲ್ಪಟ್ಟಿದೆ ಎಂದು ತಿಳಿಯಲ್ಪಟ್ಟಿದೆ. ಕಾಲಕಾಲಕ್ಕೆ ಇವುಗಳಲ್ಲಿ ಇತರ ಕ್ಷಾರಗಳು ಸಹ ದೊರೆಯುತ್ತವೆ. ಆದರೂ ಮೇಲೆ ಹೇಳಿದ ಕ್ಷಾರಗಳು ಮಹತ್ವವುಳ್ಳವು ಇದ್ದು ಯಾವಾಗಲೂ ಶರೀರದಲ್ಲಿದ್ದೇ ಇರುತ್ತವೆ. ಪ್ರಾಣಿಮಾತ್ರದ ಶರೀರಗಳಲ್ಲಿ ಹೊಸ ಪಿಂಡಗಳನ್ನುತ್ಪನ್ನ ಮಾಡಿ ಧಾತುಗಳನ್ನುಂಟುಮಾಡುವ ಕಾಲಕ್ಕೆ ಸೇಂದ್ರಿಯ ಮತ್ತು ನಿರಿಂದ್ರಿಯ ಪದಾರ್ಥಗಳು ಅವಶ್ಯವಿದ್ದಮಟ್ಟಿಗೆ ಮತ್ತು ಯೋಗ್ಯ ಪ್ರಮಾಣದಲ್ಲಿಯೂ ಇರುವದು ಅವಶ್ಯಕವು. ರಕ್ತದಲ್ಲಿ ಇವುಗಳ ಅಸ್ತಿತ್ವವಿದ್ದಾಗರಿಂದಲೇ ಎಲ್ಲ ಇಂದ್ರಿಯ, ಅವಯವ, ಧಾತು ಮುಂತಾದವುಗಳು ಮೊದಲು ಸಿದ್ಧವಾಗುತ್ತವೆ ಮತ್ತು ಅವುಗಳ ಸ್ಥಾನವೂ, ಕಾರ್ಯವೂ, ನಿಶ್ಚಿತ ಮಾಡಲ್ಪಡುತ್ತವೆ. ಇದರಲ್ಲಿ ತಪ್ಪುತಡೆಯು ಆದಲ್ಲಿ ಕಾರ್ಯದಲ್ಲಿ ಸಹ ತಪ್ಪುತಡೆಯುಂಟಾಗುತ್ತದೆ. ವಿಷಯವನ್ನು ನೆಟ್ಟಗೆ ತಿಳಿಸಬೇಕಾದರೆ, ಧಾತುಗಳು ಹೇಗೆ ಹುಟ್ಟುತ್ತವೆ ಇದನ್ನು ಸ್ವಲ್ಪ ತಿಳಿಸಿಹೇಳುವ ಅವಶ್ಯಕತೆಯುಂಟು.

**ಧಾತುಗಳ ಸಂವರ್ಧನ:—** ಸೃಷ್ಟಿಯಲ್ಲಿಯ ಇತರ ಸಜೀವ ವಸ್ತುಗಳ ಶರೀರದಂತೆಯೇ ಮಾನವೀಶರೀರವಾದರೂ ಪಿಂಡಗಳಿಂದಲೇ (ಸೆಲ್‌ದಿಂದಲೇ) ರಚಿತವಾಗಿದೆ. ಅನೇಕ ಪಿಂಡಗಳನ್ನೊತ್ತಟ್ಟಿಗೆ ತಂದಿಟ್ಟ ವಿಶೇಷ ಆಕಾರದ ಗೋಲಕ ಅಥವಾ ಮೂರ್ತಿಯೇ ಮನುಷ್ಯನ ಶರೀರವು

ಎಂದೆನ್ನಬಹುದು. ಸ್ತ್ರೀ ಮತ್ತು ಪುರುಷ ಇವರ ಶುಕ್ರಶೋಣಿತಗಳ (ಸ್ಪರಮಾಟೊಜೂನ ಮತ್ತು ಓವ್ಹಮ್ Spermatozoon and Ovum) ಸಂಬಂಧವು ಸಂಯೋಗಕಾಲಕ್ಕೆ ಆಗಿ ಅದರಿಂದ ಅತಿಶಯ ಸೂಕ್ಷ್ಮವಾದ ಒಂದು ಪಿಂಡವು ಸಿದ್ಧವಾಗುವದು. ಈ ಪಿಂಡದಲ್ಲಿ ದ್ವೈಧೀಕರಣದ ಶಕ್ತಿಯು (ಬೆಳೆಯುವ) ಸೈಸರ್ಗಿಕವಾಗಿಯೇ ಇರುತ್ತದೆ. ಈ ಪಿಂಡದಿಂದ ಒಂದರಿಂದ ಎರಡು, ಎರಡರಿಂದ ನಾಲ್ಕು, ನಾಲ್ಕರಿಂದ ಎಂಟು, ಎಂಟ ರಿಂದ ಹದಿನಾರು ಈ ರೀತಿಯಿಂದ ಬೆಳೆಯುತ್ತಹೋಗಿ ಬೇರೆ ಆಕೃತಿಯ ಪಿಂಡಗಳು ಸಿದ್ಧವಾಗುತ್ತವೆ ಮತ್ತು ಅವುಗಳಲ್ಲಿ ಕಾರ್ಯಧಾರಣಮಾಡುವ ಶಕ್ತಿಯು ಇರುತ್ತದೆ. ಮತ್ತು ಅವುಗಳಿಂದ ಬೇರೆ ಬೇರೆ ಧಾತುಗಳು ಸಿದ್ಧ ವಾಗುತ್ತವೆಂದು ಈ ಮೊದಲೇ ಹೇಳಿದೆ. ಸಮಾನಗುಣಧರ್ಮಗಳುಳ್ಳಂಥ ಸಂಶ್ಲಿಷ್ಟ (ಒತ್ತಟ್ಟಿಗೆ ಬಂದ) ಪಿಂಡಗಳೆಂದರೇ ಧಾತುಗಳು.

ಸಮಾನಗುಣಧರ್ಮಗಳುಳ್ಳ ಪಿಂಡಗಳನ್ನು ಒತ್ತಟ್ಟಿಗೆ ತಂದಿಟ್ಟ ಸಿದ್ಧತೆಗೆ ಅಥವಾ ಕಟ್ಟಡಕ್ಕೆ "ಟಿಶ್ಯೂ" ಅನ್ನುತ್ತಾರೆ. ಈ ಧಾತುವಿ ನಿಂದಲೇ ಸ್ವತಂತ್ರ ಇಂದ್ರಿಯಗಳು ಸಿದ್ಧಿಸುತ್ತವೆ. ಧಾತುಗಳ ಕಟ್ಟಡಗಳು (ವಿಶಿಷ್ಟಕಾರ್ಯಕ್ಕನುಸರಿಸಿ) ಪರಿಸ್ಥಿತಿಯ ಮಾನದಿಂದ ಭಿನ್ನ ಬಿನ್ನ ತರಹವುಳ್ಳವಿರುತ್ತವೆ. ಅಂದರೆ ಬೇರೆ ಬೇರೆ ಧಾತುಗಳು ಹುಟ್ಟುತ್ತವೆ. ಆಂಗ್ಲ ವೈದ್ಯಶಾಸ್ತ್ರದ ಪ್ರಕಾರ ಮಾನವೀ ಶರೀರವು ಮುಖ್ಯತಃ ನಾಲ್ಕು ಧಾತುಗಳಿಂದ ಸಿದ್ಧಿಸಲ್ಪಟ್ಟಿದೆ. * ಈ ನಾಲ್ಕು ಮುಖ್ಯ ಧಾತುಗಳ ಹೊರ್ತಾಗಿ ಯಾವ ಧಾತುಗಳ ರಚನೆಯಲ್ಲಿ ಸ್ವಲ್ಪ ಮಟ್ಟಿಗೆ ಹೆಚ್ಚುಕಡಿಮೆ ಯುಂಟು ಅಂಥವುಗಳಿಗೆ ಉಪಧಾತುಗಳೆನ್ನುತ್ತಾರೆ. ಆದರೆ ಅವುಗಳ

* ಆಯುರ್ವೇದದಲ್ಲಿ ನಮ್ಮ ಶರೀರವು ಏಳುಧಾತುಗಳಿಂದ ರಚಿತವಾಗಿದೆಂದೆನ್ನು ತ್ತಾರೆ. ಅವು ಯಾವವೆಂದರೆ– ರಸ, ರಕ್ತ, ಮಾಂಸ, ಮೇಧಸ್ಸು, ಅಸ್ಥಿ, ಮಜ್ಜಾ ಮತ್ತು ಶುಕ್ರ. ಇಂಗ್ರಜೀ ಶಾಸ್ತ್ರದವು. ರಸ, ರಕ್ತ; ಮೇದ ಅಸ್ಥಿ ಇವುಗಳನ್ನು ಸಂಯೋಜಕ ಧಾತುಗಳಲ್ಲಿ ಸಮಾವೇಶಮಾಡುತ್ತಾರೆ. ಮಜ್ಜಾ ಎಂಬುವದು ಮಸ್ತಿಷ್ಕ ಧಾತುವಿನಲ್ಲಿ ಬರಬಹುದು. ಆದರೆ ಮಜ್ಜಾ ಅಂದರೆ ಅಸ್ಥಿಗಳಲ್ಲಿಯ ತಿಳಲು ಎಂದು ತಿಳಿದರೆ ಅದು ಸಂಯೋಜಕಧಾತುಗಳಲ್ಲಿ ಸಮಾವೇಶಮಾಡಬಹುದು. ಶುಕ್ರವೆಂಬ ಧಾತುವು ಇಂಗ್ರೇಜಿ ಶಾಸ್ತ್ರದಲ್ಲಿ ಸ್ವತಂತ್ರವೆಂದು ತಿಳಿದಿಲ್ಲ.

ಸಂಬಂಧ ಮುಖ್ಯ ಧಾತುಗಳ ಸಂಗಡಲೆ ಬರುವದರಿಂದಲೂ ಮತ್ತು ಅವು ಗಳ ವಿಸ್ತೃತ ವಿವೇಚನಮಾಡುವದು ಈ ಸ್ಥಳದಲ್ಲಿ ಅವಶ್ಯಕತೆ ಇಲ್ಲದ್ದ ರಿಂದಲೂ ಇಲ್ಲಿ ಅವುಗಳ ಬಗ್ಗೆ ಹೆಚ್ಚಿಗೆ ವಿವೇಚನಮಾಡುವದಿಲ್ಲ. ಆಂಗ್ಲ ಶಾಸ್ತ್ರದಲ್ಲಿ ಈ ನಾಲ್ಕು ಧಾತುಗಳಿಗೆ ೧. ಅಸ್ತರ ಧಾತು (Epithelial tissue) ೨. ಸಂಯೋಜಕ ಧಾತು (Connective tissue) ೩. ಸ್ನಾಯುಧಾತು (Muscular tissue) ೪. ಮಸ್ತಿಷ್ಕ ಧಾತು (Nerveous tissue) ಎಂಬ ಸಂಜ್ಞೆಗಳುಂಟು. ಈ ನಾಲ್ಕು ಧಾತುಗಳ ರಚನೆಯೂ ಕಾರ್ಯಗಳೂ ತೀರ ಭಿನ್ನವಿರುತ್ತವೆ. ಶರೀರದಲ್ಲಿಯ ಯಾವದೇ ಅವಯವವಾಗಲಿ ಇಂದ್ರಿಯವಾಗಲಿ ಈ ನಾಲ್ಕು ಧಾತುಗಳಲ್ಲಿ ಯಾವದಾದರೊಂದು ಧಾತುವಿನಿಂದಾಗಲಿ ಉಪಧಾತುವಿನಿಂದಾಗಲಿ ರಚಿತವಾಗಿರುತ್ತದೆ. *

ಈ ನಾಲ್ಕು ಧಾತುಗಳ ಮತ್ತು ಉಪಧಾತುಗಳ ಕಾರ್ಯವೇ ಎಲ್ಲ ಶರೀರದ ಕಾರ್ಯವೆಂದನ್ನಬಹುದು. ತಮ್ಮ ವೃದ್ಧೀಕರಣ (ವರ್ಧಮಾನ) ಸಾಮರ್ಥ್ಯದ ಬಲದಿಂದಲೇ ಬೇರೆ ಬೇರೆ ಆಕೃತಿ ಮತ್ತು ಪ್ರಕೃತಿ (ಕಾರ್ಯ) ಧಾರಣಮಾಡುವ ಪಿಂಡಗಳನ್ನು ನಿರ್ಮಾಣಮಾಡುವ ಶಕ್ತಿಯು ಪಿಂಡಗಳಲ್ಲಿ ನಿಸರ್ಗತಃ ಇರುತ್ತದೆ. ಆದ್ದರಿಂದಲೆ ಬೇರೆ ಬೇರೆ ಕಾರ್ಯವೂ ಆಕಾರ ಧಾರಣಮಾಡತಕ್ಕ ಧಾತುಗಳೂ ಅವುಗಳಿಂದ ಬೇರೆ ಬೇರೆ ಇಂದ್ರಿಯ ಗಳೂ ಅವಯವಗಳೂ ಶರೀರದಲ್ಲಿ ಉತ್ಪನ್ನವಾಗುತ್ತವೆ. ಪಿಂಡಗಳ ರಚನೆ

---

* ಕೆಳಗೆ ಹೇಳಿದ ನಾಲ್ಕು ಕಾರಣಗಳಿಂದ ಬೇರೆ ಬೇರೆ ಧಾತುಗಳು ಸಿದ್ಧವಾಗುತ್ತವೆ. ಆ ಕಾರಣಗಳಾವವಂದರೆ—

೧. ಅನೇಕ ಪಿಂಡಗಳು ಏಕತ್ರ ಕೂಡಿಕೊಂಡು ಬೇರೆ ಬೇರೆ ತರದ ಜೂಗಗಳು ಸಿದ್ಧಿಸಲ್ಪಡುತ್ತವೆ.

೨. ಪಿಂಡಗಳ ರಚನೆಯಲ್ಲಿಯೇ ಭಿನ್ನತೆ ಇರುತ್ತದೆ.

೩. ಪಿಂಡಗಳಲ್ಲಿ ಪಿಂಡಾಂತರ್ಗತ ಇತರ ಪದಾರ್ಥಗಳು ತುಂಬಿಕೊಂಡು ಇರುತ್ತವೆ.

೪. ಪಿಂಡಗಳಲ್ಲಿಯ ಸಜೀವವಸ್ತುಗಳ ಮೇಲೆ ರಾಸಾಯನಿಕ ಕ್ರಿಯೆಯು ಸಂಭವಿಸಿ ಪಿಂಡಗಳಲ್ಲಿ ಹೆಚ್ಚುಕಡಿಮೆಯಾಗುವದುಂಟು.

ಆಕಾರ, ಮತ್ತು ಅವುಗಳ ಕಾರ್ಯ ಇವುಗಳಿಗೆ ಅನುಸರಿಸಿ ಅವುಗಳಿಂದ ಸಿದ್ಧವಾದ ಧಾತುಗಳ ಬೇರೆಬೇರೆ ವರ್ಗಗಳು ಮೇಲೆ ಹೇಳಿದಂತೆ ಮಾಡಲ್ಪಟ್ಟಿವೆ. ಶರೀರಕ್ಕೆ ಉಪಯೋಗವಿರುವ ಬೇರೆ ಬೇರೆ ಅವಯವ ಮತ್ತು ಇಂದ್ರಿಯಗಳು ಧಾತುವಿನಿಂದಲೇ ಸಿದ್ಧವಾಗುತ್ತವೆ. ಈ ಅವಯವ ಮತ್ತು ಇಂದ್ರಿಯಗಳು ಸಿದ್ಧವಾಗಲಿಕ್ಕೆ ಯಾವ ಪದಾರ್ಥಗಳ ಅವಶ್ಯಕತೆ ಉಂಟೆಂಬದು ಈ ಮೊದಲೇ ಹೇಳಿದೆ. ಬೇರೆ ಬೇರೆ ಧಾತುಗಳಲ್ಲಿ (ಪಿಂಡಗಳಲ್ಲಿ) ನಿರಿಂದ್ರಿಯ ಕ್ಷಾರಗಳ ಘಟಕಗಳಾವುವು ಎಂಬದನ್ನು ಮುಂದೆ ಹೇಳಿದೆ.

**ಪಿಂಡಗಳ ನಿರಿಂದ್ರಿಯ ಘಟಕಗಳು:**— ಮ್ಯಾ. ಫಾ.; ಫೆ. ಫಾ.; ಸೋ. ಫಾ.; ಕಾ. ಫಾ. ಇವು ಮಸ್ತಿಷ್ಕ ಪಿಂಡಗಳ ನಿರಿಂದ್ರಿಯ ಘಟಕಗಳು. ಸ್ನಾಯು ಧಾತುಪಿಂಡಗಳಲ್ಲಿ ಮೇಲೆ ಹೇಳಿದ ನಾಲ್ಕೂ

---

ಅಸ್ತರಧಾತುವಿನಲ್ಲಿ ಪಿಂಡಗಳು ಒಂದರ ಮೇಲೊಂದು ಮತ್ತು ಸಮೀಪದಲ್ಲಿಯೇ ಇದ್ದದ್ದು ಕಂಡು ಬರುತ್ತದೆ. ಅವು ಒಂದಕ್ಕೊಂದು ಹೊಂದಿರುತ್ತವೆ. ಬೇಕಾದರೆ ಅಲ್ಲಿ ಸಂಧಾನ ದ್ರವ್ಯವಿಲ್ಲ. ಸಂಯೋಜಕ ಧಾತುಗಳಲ್ಲಿ ಒತ್ತಟ್ಟಿಗೆ ತರುವಂಥ ಸಂಧಾನ ದ್ರವ್ಯವು (ಸಿಮೆಂಟ ಅಥವಾ ಸರಿಸದಂಥ ಪದಾರ್ಥವು) ಹೆಚ್ಚು ಪ್ರಮಾಣದಲ್ಲಿರುತ್ತದೆ. ಆದ್ದರಿಂದ ಅದರ ಸ್ವರೂಪವು ಬೇರೆಯೇ ಇರುತ್ತದೆ. ಇದರಲ್ಲಿ ಬೇರೆ ಬೇರೆ ಪದಾರ್ಥಗಳು ತುಂಬಿಕೊಂಡಿರುತ್ತವೆ. ಉದಾಹರಣಾರ್ಥವಾಗಿ ಅಸ್ಥಿಗಳಲ್ಲಿಯ ಸುಣ್ಣ, ಮಾಂಸ ಧಾತುವಿನ ಪಿಂಡಗಳು ಉದ್ದಾಗಿರುತ್ತವೆ. ಅವುಗಳಿಂದಲೇ ಬೇರೆ ಬೇರೆ ಮಾಂಸದ ತಂತುಗಳು ಸಿದ್ಧವಾಗಲಿಕ್ಕೆ ಸಹಾಯವಾಗುತ್ತದೆ. ಮಸ್ತಿಷ್ಕ ಪಿಂಡಗಳ ಮಾಟವು ಬೇರೆ ತರಹದ್ದು. ಅವುಗಳಿಗೆ ಬೇರೆ ಬೇರೆ ತಂತುಗಳ ಉದ್ದ ಉದ್ದ ಒಂದು ಎರಡು ಅಥವಾ ಅನೇಕ ಟೊಂಗೆಗಳು ಒಡೆದಿರುತ್ತವೆ. ಈ ನಾಲ್ಕೂ ಧಾತುಗಳ ಪಿಂಡಗಳ ಮೇಲೆ ರಾಸಾಯನಿಕ ಕ್ರಿಯೆಯಿಂದ ವಿಕ್ರಿಯೆಯುಂಟಾಗಿ ಅವುಗಳ ಆಕಾರದಲ್ಲಿ ಮತ್ತು ಕಾರ್ಯದಲ್ಲಿ ವ್ಯತ್ಯಾಸವುಂಟಾಗುತ್ತದೆ ಮತ್ತು ಅದರಿಂದ ಉಪಧಾತುಗಳು ಸಿದ್ಧಿಸಲ್ಪಡುತ್ತವೆ. ಈ ವ್ಯತ್ಯಾಸದಿಂದ ಮನುಷ್ಯನ ಶರೀರದಲ್ಲಿ ನಾನಾವಿಧ ಇಂದ್ರಿಯಗಳು ಉಂಟಾಗುತ್ತವೆ. ಎಷ್ಟೋ ಪಿಂಡಗಳು ಹೇಗವೆ ಅಂದರೆ ಅವುಗಳಲ್ಲಿ ಏನೂ ವ್ಯತ್ಯಾಸವಾಗದೆ ತಮ್ಮ ಪೂರ್ವಸ್ವರೂಪವನ್ನು ಹಾಗೇ ಇಟ್ಟುಕೊಂಡು ಶರೀರದಲ್ಲಿ ತಮ್ಮ ಕಾರ್ಯವನ್ನು ಮಾಡುತ್ತವೆ. ಇದರ ಉದಾಹರಣವೆಂದರೆ— ರಕ್ತದಲ್ಲಿಯ ಕಣಗಳು (ರಕ್ತಪಿಂಡ). ಯಾವ ಧಾತುವಿನಿಂದ ಯಾವ ಅವಯವಗಳು ಸಿದ್ಧವಾಗುತ್ತವೆ ಅದನ್ನು ಸ್ವಲ್ಪದರಲ್ಲಿ ಕೆಳಗೆ ಹೇಳುತ್ತೇವೆ:—

ಫಾಸ್ಫೇಟಗಳು ಇರುತ್ತವೆ. ಇಷ್ಟೇ ಅಲ್ಲ, ಕಾ. ಮಾ. ಇದು ಸಹ ಇರುತ್ತದೆ. ಸಂಯೋಜಕ ಧಾತುಪಿಂಡಗಳಲ್ಲಿ ಸಿ. ಕ್ಷಾರವು ಮುಖ್ಯವಾಗಿ ಇರುತ್ತದೆ. ಆದರೆ ಸ್ಥಿತಿಸ್ಥಾಪಕ ಧಾತುಪಿಂಡಗಳಲ್ಲಿ ಸಂಯೋಜಕ ಧಾತುವಿನ ಉಪ ಧಾತುವಾದ ಕಲ್ಕೆ. ಫ್ಲೊ. ಎಂಬ ಧಾತುವು ವಿಶೇಷವಾಗಿ ದೊರೆಯುತ್ತದೆ. ಅಸ್ಥಿಪಿಂಡಗಳಲ್ಲಿ (ಸಂಯೋಜಕ ಧಾತು) ಕಲ್ಕೆ. ಫ್ಲೊ; ಕಲ್ಕೆ. ಫಾ.; ಮ್ಯಾ. ಫಾ. ವಿಶೇಷ ಪ್ರಮಾಣದಲ್ಲಿ ದೊರೆಯುತ್ತವೆ. ಸ್ನಾಯು; ಜ್ಞಾನ ತಂತು; ಮೆದುಳು; ಮತ್ತು ಸಂಯೋಜಕ ಧಾತು ಇವುಗಳಲ್ಲಿ ಕಲ್ಕೆ. ಫಾ. ಕಡಿಮೆ ಪ್ರಮಾಣದಲ್ಲಿ ಇರುತ್ತದೆ. ತರುಣಾಸ್ಥಿ ಮತ್ತು ಶ್ಲೇಷ್ಮಲ ತ್ವಚೆ ಇವುಗಳ ಪಿಂಡಗಳಲ್ಲಿ ನೆ. ಮಾ. ಎಂಬ ಕ್ಷಾರವು ಹೆಚ್ಚು ಪ್ರಮಾಣದಲ್ಲಿ ದೊರೆಯುತ್ತದೆ. ಶರೀರದಲ್ಲಿಯ ಎಲ್ಲ ದಪ್ಪ ಮತ್ತು ತೆಳ್ಳಗಿನ ಪದಾರ್ಥಗಳಲ್ಲಿ

---

ಪೊಳ್ಳಿನ ಮೇಲೆ ಹೊಚ್ಚಲ್ಪಟ್ಟ ಯಾವತ್ತೂ ಹೊದಿಕೆಗಳು, ಅಂಡನಲಿಕೆ, ವಾಹಿನಿಗಳ ಗೋಡೆಯ(ಪಾರ್ಶ್ವಭಾಗ) ಒಂದು ಪದರು ಶ್ಲೇಷ್ಮಲ ತ್ವಚೆ, ತೊಗಲು ಇವೆಲ್ಲವು ಅಸ್ತರ ಧಾತುವಿನಿಂದಲೇ (Epithelial) ಸಿದ್ಧವಾಗಿರುತ್ತವೆ.

ಸ್ನಾಯು, ಮಜ್ಜಾತಂತು, ರಕ್ತವಾಹಿನಿಗಳು, ಗ್ರಂಥಿ ಮತ್ತು ಅಂತರಿಂದ್ರಿಯಗಳ ಮೇಲಿನ ಹೊದಿಕೆಗಳು, ಅಸ್ಥಿ, ಹಲ್ಲು, ಶಕ್ತಿ, ತರುಣಾಸ್ಥಿ, ಹಾಗೂ ಅಸ್ಥಿಬಂಧನಗಳು, ಅಸ್ಥ್ಯಾವರಣ, ಪುರುಷನ ಜನನೇಂದ್ರಿಯ ಮತ್ತು ವೃಷಣ, ಕಣ್ಣುರೆಪ್ಪೆಯ ಕೆಳಗಿನ ಭಾಗ ಮುಂತಾದವುಗಳು ಸಂಯೋಜಕ ಧಾತುಗಳ ಉದಾಹರಣಗಳು. ಶರೀರದಲ್ಲಿಯ ಯಾವತ್ತೂ ಐಚ್ಛಿಕ ಸ್ನಾಯುಗಳು, ರಕ್ತವಾಹಿನಿಗಳ ಗೋಡೆಯ ಒಂದು ಪದರು, ಅನ್ನಮಾರ್ಗ, ಕರಳು, ಬಸ್ತಿ, ಗರ್ಭಾಶಯ, ಹೃದಯ ಮುಂತಾದವುಗಳಲ್ಲಿರ ತಕ್ಕ ಅನೈಚ್ಛಿಕ ಸ್ನಾಯು-ಇವೆಲ್ಲವು ಮಾಂಸ ಅಥವಾ ಸ್ನಾಯು (Muscular) ಧಾತುಗಳಿಂದಲೇ ಆದದ್ದು. ಪೃಷ್ಠವಂಶರಜ್ಜು, ಮೆದುಳಿನಭಾಗ, ನಾಡೀಕೇಂದ್ರ ಮಜ್ಜಾತಂತು ಇವುಗಳಲ್ಲಿ ಮಸ್ತಿಷ್ಕ (Nervous.) ಧಾತುವು ಇರುತ್ತವೆ. ಒಂದೇ ಧಾತುವಿನಿಂದಲೇ ಅವಯವವು ಸಿದ್ಧವಾಗುತ್ತದೆ ಹೀಗಲ್ಲ. ಯಾವ ಧಾತುವು ಯಾವ ಅವಯವದಲ್ಲಿ ಸಿಗುತ್ತದೆ ಇದನ್ನು ಸಾಧಾರಣತಃ ಮೇಲೆ ಹೇಳಿದೆ. ಇತರ ಧಾತುಗಳು ಸಹ ಹೆಚ್ಚುಕಡಿಮೆ ಪ್ರಮಾಣದಲ್ಲಿ ಇರುತ್ತವೆ, ರಕ್ತವಾಹಿನಿಗಳ ಉದಾಹರಣವೇ ಸಾಕು. ಅವುಗಳ ಗೋಡೆಗಳಲ್ಲಿ ಮೂರು ಪದರುಗಳಿರುತ್ತವೆ. ಅವುಗಳಲ್ಲಿ ಒಂದು ಅಸ್ತರ ಧಾತುವಿನದು, ಎರಡನೆಯದು ಸಂಯೋಜಕ ಧಾತುವಿನದು ಮೂರನೆಯದು ಸ್ನಾಯುಧಾತುವಿನದು. ಈ ಮೂರೂ ಧಾತುಗಳಿಂದ ಕೂಡಿ ರಕ್ತವಾಹಿನಿಗಳ ಗೋಡೆಗಳಾಗುತ್ತವೆಂದು ತಿಳಿಯತಕ್ಕದ್ದು.

ನೇಟ್ರಿಯಮ್ ಮೂರವೆಂಬ ಕ್ಷಾರವು ದೊರೆಯುತ್ತದೆ. ಕೂದಲು ಮತ್ತು ಕಣ್ಣಿಕನ್ನಡಿ (ನೇತ್ರದರ್ಪಣ) ಇವುಗಳಲ್ಲಿ ಇತರ ಕ್ಷಾರಗಳಿದ್ದು ಫೇರಮ್ ಸಹ ಕೆಲವು ಪ್ರಮಾಣದಲ್ಲಿ ದೊರೆಯುವದು. ಮುಂದೆ ಗುಣಧರ್ಮ ಪ್ರಕರಣದಲ್ಲಿ ಕ್ಷಾರಗಳ ಕಾರ್ಯಕ್ಷೇತ್ರವನ್ನು ಹೇಳುವ ಸಂದರ್ಭದಲ್ಲಿ ಯಾವ ಕ್ಷಾರವು ಯಾವ ಭಾಗದ ಮೇಲೆ ತನ್ನ ಕಾರ್ಯವನ್ನು ಮಾಡ ಬಹುದೆಂಬದನ್ನು ಹೇಳಿರುತ್ತದೆ. ಯಾವ ಭಾಗವಲ್ಲಿ ಬೇನೆಯಾಗಿದೆಂಬದು ತಿಳಿದರೆ ಅಲ್ಲಿ ಯಾವ ಕ್ಷಾರವು ಕಡಿಮೆಯಾಗಿರಬಹುದು ಮತ್ತು ಲಕ್ಷಣ ಗಳ ಮೇಲಿಂದ ಸಹ ಯಾವ ಕ್ಷಾರವು ಕಡಿಮೆಯಾಗಿದೆಂಬದು ತಿಳಿದು ಕೊಳ್ಳಲಿಕ್ಕೆ ಬಂದರೆ ವಿಶಿಷ್ಟಭಾಗದಲ್ಲಿಯ ವಿಕೃತ ಇಂದ್ರಿಯದಲ್ಲಿ ವ್ಯತ್ಯಾಸ ವಾಗಿದೆಯೋ ಅದನ್ನು ತಿಳಕೊಳ್ಳಲಿಕ್ಕೆ ಸುಲಭವಾಗುತ್ತದೆ. ಈ ಕ್ಷಾರಗಳು ಯೋಗ್ಯ ಪ್ರಮಾಣದಲ್ಲಿ ಇರದ ಹೊರತು ಆಯಾ ಅವಯವಗಳು ಸಿದ್ಧ ವಾಗುವದೇ ಇಲ್ಲ, ಮತ್ತು ಆಯಾ ಅವಯವಗಳಲ್ಲಿ ಆಯಾ ಕ್ಷಾರಗಳು ಕಡಿಮೆಯಾಗದ ವಿನಃ ರೋಗವೂ ಉದ್ಭವಿಸುವದಿಲ್ಲ ಮತ್ತು ಆ ಆ ಕ್ಷಾರ ಗಳನ್ನು ಪೂರೈಸಿಕೊಟ್ಟ ಪಕ್ಷದಲ್ಲಿಯೇ ರೋಗನಿವಾರಣೆಯಾಗುತ್ತದೆಂಬದು ಸಹಜವೇ ಲಕ್ಷದಲ್ಲಿ ಬರುವುದು.

**ಪಿಂಡಗಳ ರೂಪಾಂತರ:—** ಹಳೇ ಪಿಂಡಗಳು ನಷ್ಟವಾಗೋಣ ಮತ್ತು ಹೊಸ ಪಿಂಡಗಳು ಸಿದ್ಧವಾಗೋಣ ಈ ಕಾರ್ಯವು ಸುವ್ಯವ ಸ್ಥಿತ ರೀತಿಯಿಂದ ನಡೆದ ಪಕ್ಷದಲ್ಲಿಯೇ ಶರೀರದ ಸ್ವಾಸ್ಥ್ಯವು ಉಳಿ ಯುವದು ಎಂಬದನ್ನು ಮೊದಲೇ ಹೇಳಿದ್ದೇವೆ. ಶರೀರಸ್ವಾಸ್ಥ್ಯಕ್ಕೆ ಅವಶ್ಯಕವಿರುವ ಈ ಪಿಂಡಗಳ ಅಂತರ್ಗತ ಕ್ರಮವು ಹೇಗೆ ನಡೆಯುತ್ತ ದೆಂಬದರ ದಿಗ್ದರ್ಶನವನ್ನು ಸ್ಥೂಲಮಾನದಿಂದ ಕೆಳಗೆ ಮಾಡಿದ್ದೇವೆ. ಹವೆಯಲ್ಲಿರುವ ಪ್ರಾಣವಾಯುವು ಶರೀರದಲ್ಲಿಯ ಶ್ವಸನೇಂದ್ರಿಯ ದ್ವಾರಾ ರಕ್ತದಲ್ಲಿ ಸೇರುತ್ತದೆ ಮತ್ತು ಅಲ್ಲಿಂದ ರಕ್ತದ್ವಾರಾ ಶರೀರ ದಲ್ಲಿಯ ಯಾವತ್ತು ಧಾತುಗಳಿಗೆ ಹೋಗಿ ಮುಟ್ಟುತ್ತದೆ. ಹೊಸ ಪಿಂಡ ಗಳನ್ನು ಸಿದ್ಧಪಡಿಸಬೇಕಾದರೆ ಧಾತುಗಳಲ್ಲಿದ್ದ ಸೇಂದ್ರಿಯ ಪದಾರ್ಥ ಗಳ ಉಪಯೋಗವಾಗುತ್ತದೆ. ಈ ಸೇಂದ್ರಿಯ ಪದಾರ್ಥಗಳ ಮೇಲೆ ಪ್ರಾಣ

ವಾಯುವಿನ ಕ್ರಿಯೆಯು ಆದನಂತರ ಆ ಸೇಂದ್ರಿಯ ಪದಾರ್ಥಗಳೇ ಶರೀರದಲ್ಲಿಯ ನಾಲ್ಕೂ ಧಾತುಗಳಿಗೆ (ಅಸ್ಥಿರ, ಸಂಯೋಜಕ, ಸ್ನಾಯು ಮತ್ತು ಮಸ್ತಿಷ್ಕ) ಆಧಾರಗಳಾಗುತ್ತವೆ. ಪ್ರಾಣವಾಯುವಿನ ಕ್ರಿಯೆಯಿಂದ ಸಿದ್ಧವಾದ ಪದಾರ್ಥಗಳಲ್ಲಿ ಯಾವ ಪದಾರ್ಥವೂ ಮೂಲಸ್ವರೂಪದಲ್ಲಿ ರಕ್ತದಲ್ಲಿ ದೊರೆಯುವದಿಲ್ಲ. ಆದರೆ ರಕ್ತದಲ್ಲಿಯ ಕಲ್ಕಮಯ (Albuminons) ಪದಾರ್ಥಗಳ ಸಹಾಯದಿಂದ ಅವು ಧಾತುಗಳಲ್ಲಿ ಸಿದ್ಧವಾಗುತ್ತವೆ. ಈ ಪದಾರ್ಥಗಳ ಮೇಲೆ ಅಲ್ಲಿಯ ನಿರಿಂದ್ರಿಯ ಕ್ಷಾರಗಳ ರಾಸಾಯನಿಕ ಕ್ರಿಯೆಯಾಗಿ ಆದರಿಂದ ಹೊಸ ಪಿಂಡಗಳು ಸಿದ್ಧವಾಗುತ್ತವೆ. ಹೊಸ ಪಿಂಡಗಳು ಆಗುವಾಗ್ಗೆ ಹಳೇ ಪಿಂಡಗಳು ನಾಶಹೊಂದುತ್ತವೆ. ಸೇಂದ್ರಿಯ ಪದಾರ್ಥಗಳ ಮೇಲೆ ಪ್ರಾಣವಾಯುವಿನ ಕ್ರಿಯೆಯಾಗಿ ಹೊಸ ಪಿಂಡಗಳ ಹುಟ್ಟುವಿಕೆಗೆ ಒಂದು ತರದ ತಳಕಟ್ಟಡವೇ ಸಿದ್ಧವಾಗುತ್ತದೆ. ಹೆಚ್ಚೇನು ಹೇಳುವದು, ಸೇಂದ್ರಿಯ ಪದಾರ್ಥವೇ ಹೊಸ ಪಿಂಡಗಳ ತಳಕಟ್ಟಡವು. ಇದನ್ನು ಮೇಲೆ ಹೇಳಿದ್ದೇವೆ. ಈ ಸೇಂದ್ರಿಯ ಪದಾರ್ಥದ ಮೇಲೆ ಆಗುವ ಪ್ರಾಣವಾಯುವಿನ ಕಾರ್ಯವಾಗಿ ಹಳೇ ಪಿಂಡಗಳು ನಾಶಹೊಂದುತ್ತವೆ. ಮತ್ತು ಹೊಸ ಪಿಂಡಗಳು ಸಿದ್ಧವಾಗುತ್ತಿರುತ್ತವೆ. ಈ ಕ್ರಿಯೆಗೇ ಆಕ್ಸಿಡೇಶನ ಅಥವಾ ಉರ್ವಣವೆಂಬ ಹೆಸರು. ಈ ಉರ್ವಣದ ಸ್ವಾಭಾವಿಕ ಪರಿಣಾಮವೇನೆಂದರೆ— ಹಳೇ ಪಿಂಡಗಳ ನಾಶ. ಇದೇ ಸಂಗತಿಯನ್ನು ಇನ್ನೊಂದು ರೀತಿಯಿಂದ ಹೇಳಬೇಕಾದರೆ ಹೀಗೆ ಹೇಳಬಹುದು. ಅದು ಹೇಗೆಂದರೆ— ಹೊಸ ಪಿಂಡಗಳನ್ನು ಸಿದ್ಧಮಾಡುವ ಕಾರ್ಯವು ನಿರಿಂದ್ರಿಯ ಕ್ಷಾರಗಳ ಮೇಲೆ ಮುಖ್ಯತಃ ಅವಲಂಬಿಸಿರುತ್ತದೆ ಮತ್ತು ಹಳೇ ಪಿಂಡಗಳನ್ನು ನಾಶಗೊಳಿಸುವ ಕೆಲಸವು ಉರ್ವಣವೆಂಬದರ ಕಡೆಗೆ ಒಪ್ಪಿಸಲ್ಪಟ್ಟಿದೆ. ಶರೀರದಲ್ಲಿ ಈ ಕ್ರಿಯೆಯು ಅವ್ಯಾಹತ ನಡೆದಿರುತ್ತದೆ. ಈ ಕಾರ್ಯವು ಅವ್ಯಾಹತ ನಡೆದದ್ದರಿಂದ ಶರೀರದಲ್ಲಿಯ ತ್ಯಾಜ್ಯ ಪದಾರ್ಥಗಳನ್ನು ಹೊರಗೆ ಹಾಕುವ ಕೆಲಸಕ್ಕೆ ಸಹಾಯವಾಗುತ್ತದೆ. ಸೇಂದ್ರಿಯ ಪದಾರ್ಥಗಳ ಜ್ವಲನಕ್ರಿಯೆಯಿಂದಲೇ ಬೇರೆಬೇರೆ ಕ್ಷಾರಗಳು ಮತ್ತು ರಸಗಳು ಸಿದ್ಧವಾಗುತ್ತವೆ. ಯೂರಿಯಾ, ಯುರಿಕ ಆಸಿಡ, ಸಲ್ಫ್ಯುರಿಕ ಆಸಿಡ,

ಫಾಸ್ಫೊರಿಕ ಆಸಿಡ, ಲ್ಯಾಕ್ಟಿಕ ಆಸಿಡ, ಕಾರ್ಬಾನಿಕ ಆಸಿಡ ಎಂಬ ಪದಾರ್ಥಗಳು ಈ ಜ್ವಲಸಕ್ರಿಯೆ ಅಥವಾ ಉರ್ವಣವೆಂಬ ಕ್ರಿಯೆಯಿಂದ ಸಿದ್ಧವಾಗುತ್ತವೆ. ಮಸ್ತಿಷ್ಕಧಾತು, ಮೆದುಳು, ಪೃಷ್ಠವಂಶರಜ್ಜು, ರಕ್ತದಲ್ಲಿಯ ಕಣ– ಇವುಗಳಲ್ಲಿ ಕಂಡುಬರುವ "ಲೆಸಿಥಿನ" ಎಂಬ ಪದಾರ್ಥದ ಉರ್ವಣವಾಗಿ ಫಾಸ್ಫಾರಿಕ ಆಸಿಡವು ಸಿದ್ಧವಾಗುತ್ತದೆ. ದುಗ್ಧಶರ್ಕರೆಯು ವಿಪಾಕದಿಂದ (ಹುಳಿಯಾಗೋಣವರಿಂದ) ಲ್ಯಾಕ್ಟಿಕ ಆಸಿಡ ಆಗುತ್ತದೆ. ಮತ್ತು ಅದರಿಂದ ಕಾರ್ಬಾನಿಕ ಆಸಿಡ ಮತ್ತು ನೀರು ಸಿದ್ಧವಾಗುತ್ತವೆ. ಸಲ್ಫ್ಯುರಿಕ ಆಸಿಡ ಮತ್ತು ಕಾರ್ಬಾನಿಕ ಆಸಿಡ ಇವುಗಳ ಸಂಬಂಧವು ಕಾರ್ಬೋನೇಟಗಳ ಸಂಗಡ ಬಂದನಂತರ ಸಲ್ಫೇಟಗಳೂ ಫಾಸ್ಫೇಟಗಳೂ ಸಿದ್ಧವಾಗುತ್ತವೆ. ಇದೇ ಪ್ರಕಾರ ಮತ್ತು ಬೇರೆ ಪದಾರ್ಥಗಳೂ ಸಿದ್ಧವಾಗುತ್ತವೆ. ಆದರೆ ಅವೆಲ್ಲವುಗಳನ್ನು ಇಲ್ಲಿ ತಿಳಿಸಿ ಹೇಳುವ ಕಾರಣವಿಲ್ಲ. ಶರೀರದಲ್ಲಿ ಅವೆಲ್ಲವುಗಳ ಉಪಯೋಗವು ಬೇರೆಬೇರೆ ತರದಿಂದ ಆಗುತ್ತದೆ. ಈ ಸೇಂದ್ರಿಯ ಪದಾರ್ಥಗಳ ಉರ್ವಣದಿಂದ ಕಡೆಗೆ ಉತ್ಪನ್ನವಾಗುವ ತ್ಯಾಜ್ಯಪದಾರ್ಥಗಳೆಂದರೆ ಯೂರಿಯಾ (ಮೂತ್ರಾಮ್ಲ= ಮೂತ್ರದಲ್ಲಿಯ ಆಮ್ಲಪದಾರ್ಥ); ಕಾರ್ಬಾನಿಕ ಆಸಿಡ (ಕರ್ಬಾಮ್ಲ) ಮತ್ತು ನೀರು ಇವೇ ಇರುತ್ತವೆ. ಈ ಪದಾರ್ಥಗಳೂ ಕ್ಷಾರಗಳೂ ಶರೀರದಲ್ಲಿ ಧಾತುಗಳಿಂದ ಬೇರೆಬೇರೆಯಾಗುತ್ತವೆ ಮತ್ತು ಆ ಸ್ಥಳವಲ್ಲಿ ಪೂರ್ಣ ಉರ್ವಣಹೊಂದದಂಥ ಇತರ ಸೇಂದ್ರಿಯ ಪದಾರ್ಥಗಳು ಬರುತ್ತವೆ ಮತ್ತು ಅವುಗಳ ಮೇಲೆ ಉರ್ವಣದ ಕಾರ್ಯವು ಆಗಿ ಮೇಲೆ ಹೇಳಿದ ಪ್ರಕಾರ ಅವುಗಳ ರೂಪಾಂತರವಾಗುತ್ತದೆ. ಮೇಲೆ ಹೇಳಿದ ಪ್ರಕಾರ ಧಾತುಗಳಲ್ಲಿ ರೂಪಾಂತರಹೊಂದಿ ಸಿದ್ಧವಾದಂಥ ಮೂತ್ರಾಮ್ಲ, ಕರ್ಬಾಮ್ಲ ನೀರು ಮುಂತಾದ ಪದಾರ್ಥಗಳು– ರಸವಾಹಿನಿಸಂಯೋಜಕ ಧಾತು ಮತ್ತು ಸಿರಗಳು ಇವುಗಳದ್ವಾರಾ ಪಿತ್ತಾಶಯ, ಫುಪ್ಫುಸ, ಮೂತ್ರಪಿಂಡ ಮತ್ತು ತ್ವಚೆ ಮುಂತಾದ ಸ್ಥಾನಗಳ ಕಡೆಗೆ ಒಯ್ಯಲ್ಪಡುತ್ತವೆ ಮತ್ತು ಅಲ್ಲಿಂದಲೇ ಮಲ, ಮೂತ್ರ, ಬೆವರು, ಉಸಿರು ಮುಂತಾದ ರೂಪದಿಂದ ಶರೀರದ ಹೊರಗೆ ಅವುಗಳ ವಿಸರ್ಜನವಾಗುತ್ತದೆ. ಈ ರೀತಿಯಿಂದ ಅವ್ಯಾಹತ ನಡೆದ ಪಿಂಡಗಳ ಕ್ರಮವು ಶರೀರದ ಸ್ವಾಸ್ಥ್ಯಕ್ಕೆ

ಪೋಷಕವೂ ಸಮರ್ಥವೂ ಕಾರಣೀಭೂತವೂ ಆಗುವಂತೆ ನಡೆಸಲ್ಪಡುತ್ತದೆ. ಪಿಂಡಗಳಲ್ಲಿ ಅವ್ಯಾಹತ ನಡೆದ ಈ ಕ್ರಮವು ಅಥವಾ ರೂಪಾಂತರವು ಪ್ರಮಾಣಬದ್ಧ ಮತ್ತು ವ್ಯವಸ್ಥಿತ ರೀತಿಯಿಂದ ಸಾಗಬೇಕಾದ ಸ್ಥಿತಿಗೇನೇ ಪ್ರಕೃತಿಸ್ವಾಸ್ಥ್ಯ, ನಿರಾಮಯ ಅವಸ್ಥೆ ಅಥವಾ ನಿರೋಗಿಪ್ರಕೃತಿಯೆಂದೆನ್ನಬಹುದು. ಶರೀರದಲ್ಲಿಯ ಎಲ್ಲ ಧಾತುಗಳಿಗೆ ಪೋಷಕದ್ರವ್ಯಗಳು ಮುಟ್ಟಿದ್ದರಿಂದ ಅವುಗಳಲ್ಲುಂಟಾಗುವ ಕೊರತೆಯ ಪೂರೈಕೆಯು ನಾವು ತಿನ್ನುವ ಅನ್ನ, ಕುಡಿಯುವ ನೀರು ಇವುಗಳ ಪಚನದಿಂದಲೇ ಆಗುತ್ತದೆ. ಕೊರತೆಯಿದ್ದ ಸ್ಥಾನದಲ್ಲಿ ಮತ್ತು ಅವಶ್ಯವಿದ್ದ ಪ್ರಮಾಣದಲ್ಲಿ ಪೂರೈಕೆಯು ಆದರೆ ಅಣುರೇಣುಗಳ ಚಲನವಲನದಲ್ಲಿ ಸಹ ಏನೂ ವ್ಯತ್ಯಾಸವುಂಟಾಗುವದಿಲ್ಲ. ಹೀಗೆ ಆದರೆನೇ ಹಳೇ ಪಿಂಡಗಳ ನಾಶ ಹೊಸ ಪಿಂಡಗಳ ಸಿದ್ಧಿ ಮತ್ತು ಶರೀರದಲ್ಲಿಯ ತ್ಯಾಜ್ಯಪದಾರ್ಥಗಳ ದಬ್ಬಲ್ಪಡುವಿಕೆಯು ಈ ಕಾರ್ಯಗಳು ಸುವ್ಯವಸ್ಥಿತರೀತಿಯಿಂದ ಸಾಗುತ್ತವೆ ಮತ್ತು ಪ್ರಕೃತಿಸ್ವಾಸ್ಥ್ಯವು ಬಹುಕಾಲ ಉಳಿಯುತ್ತದೆ.

**ರೋಗೋತ್ಪತ್ತಿಯೆಂದರೇನು?** :—ಪ್ರತಿಯೊಂದು ಅವಯವದಲ್ಲಿ (ಯಾವ ಪಿಂಡಗಳಿಂದ ಅವಯವವು ಸಿದ್ಧವಾಗಿರುತ್ತದೆ ಆ ಪಿಂಡಗಳಲ್ಲಿ) ರಕ್ತದಿಂದ ಸೋರುವಂಥ **ರಕ್ತದಲ್ಲಿರತಕ್ಕ ಪದಾರ್ಥದೊಳಗಿಂದ** ತನ್ನ ತನ್ನ ಪೋಷಣಕ್ಕೆ ಅವಶ್ಯಕವಿರುವ ಪದಾರ್ಥಗಳನ್ನು ವಿಂಗಡಿಸಿಕೊಳ್ಳುವ ಸಾಮರ್ಥ್ಯವು ನಿಸರ್ಗತಃ ಇದ್ದೇ ಇರುತ್ತದೆ. ಶರೀರದಲ್ಲಿಯ ಯಾವ ಪಿಂಡವೂ (cell) ತನ್ನ ಪೋಷಣವನ್ನು ತನ್ನ ಮನಸ್ಸಿಗೆ ಬಂದಂತೆ ಮಾಡಿಕೊಳ್ಳುವದಿಲ್ಲ. ತನ್ನ ಮಾರ್ಗದಲ್ಲಿ ಅಥವಾ ತನ್ನ ಹಿಡಿತದಲ್ಲಿ ಬಂದ ಪದಾರ್ಥಗಳನ್ನೆಲ್ಲ ಅದು ಮನಸ್ಸಿಗೆ ಬಂದಂತೆ ಅಥವಾ ಅವಿಚಾರತನದಿಂದ ತಿಂದುಬಿಡುವದಿಲ್ಲ. ತನ್ನ ಸಮೀಪದಲ್ಲಿದ್ದ ಪದಾರ್ಥಗಳಲ್ಲಿ ತನಗೆ ಅವಶ್ಯವಿದ್ದ ಹಾಗೂ ತನ್ನ ಪೋಷಣಕ್ಕೆ ಯೋಗ್ಯವಿದ್ದಂಥ ಪದಾರ್ಥದೊಳಗಿಂದ ಆರಿಸಿತಕ್ಕೊಳ್ಳುವ ಶಕ್ತಿಯು ಅಥವಾ ಜ್ಞಾನವು ಪ್ರತಿಯೊಂದು ನಿರೋಗಿ ಪಿಂಡದಲ್ಲಿ ಇರುತ್ತದೆ. ತನ್ನ ಅನ್ನವನ್ನು ತಾನೇ ಆರಿಸಿಕೊಂಡು ತಿನ್ನುತ್ತದೆ. ಅವುಗಳಿಗೆ ಉಣಿಸಬೇಕಾಗುವದಿಲ್ಲ. ಅವುಗಳಿಗೆ ಅವಶ್ಯವಿಲ್ಲದ

ಅನ್ನವನ್ನು ಕೊಟ್ಟರೆ ಅವು ತಿನ್ನುವದಿಲ್ಲ. ಮತ್ತು ಅಂಥ ಅನ್ನವು ಅವುಗಳಿಗೆ ಜೀರ್ಣವಾಗುವದೂ ಇಲ್ಲ. ಪಿಂಡಗಳ ಅಂತರ್ಭಾಗದಲ್ಲಿ ಅನ್ನದ ಶೋಷಣವಾಗೋಣ ಅನಂತರ ದ್ವೈಧೀಕರಣ ಪದ್ಧತಿಯಿಂದ ಪಿಂಡಗಳ ಸಂವರ್ಧನವಾಗೋಣ ಈ ಕಾರ್ಯಗಳು ಸರ್ವಸ್ವಿ ಪಿಂಡಗಳ ಕಾರ್ಯಗಳೇ ಸರಿ. ಈ ಪ್ರಯೋಗದ ಹೊರ್ತು ಇನ್ನೂ ವರೆಗೆ ಶಾಸ್ತ್ರಜ್ಞರಿಗೆ ಪಿಂಡಸಂವರ್ಧನದ ಇತರ ಮಾರ್ಗವು ದೊರೆತಿಲ್ಲ. ಪಿಂಡಗಳಿಗೆ ತಮಗೆ ಅವಶ್ಯವಿದ್ದ ಪೋಷಕ ದ್ರವ್ಯಗಳನ್ನಾರಿಸಿಕೊಳ್ಳುವ ನಿಸರ್ಗಸಿದ್ಧ ಜ್ಞಾನವು ಹೇಗೆ ಇರುತ್ತದೆಂಬದನ್ನು "ಅಮೀಬಾ" ಎಂಬ ಹೆಸರಿನ ಒಂದು ಪಿಂಡಮಯ ಪ್ರಾಣಿಯ ಉದಾಹರಣದ ಮೇಲಿಂದ ಶಾಸ್ತ್ರಜ್ಞರು ಸಿದ್ಧಮಾಡಿ ತೋರಿಸಿದ್ದಾರೆ. "ಅಮೀಬಾ" ಪ್ರಾಣಿಯ ಶರೀರವು ಕೇವಲ ಪಿಂಡಗಳಿಂದಲೇ ಆದದ್ದು ಇರುತ್ತದೆ. ಇತರ ಪ್ರಾಣಿಗಳಂತೆ ಈ ಪ್ರಾಣಿಯ ಶರೀರದಲ್ಲಿ ಹೆಚ್ಚು ಪಿಂಡಗಳು ಇರುವದಿಲ್ಲ. ಅದರ ಹತ್ತರ ಖಾದ್ಯ ಪದಾರ್ಥದ ಹೊರ್ತು ಇತರ ಪದಾರ್ಥಗಳನ್ನಿಟ್ಟರೆ ಅವುಗಳನ್ನು ಅದು ಹೊಟ್ಟೆಯಲ್ಲಿ ಹಾಕಿಕೊಳ್ಳುವದೇ ಇಲ್ಲ. ತನ್ನ ಕಾಲಿನಿಂದ ಅದನ್ನು ನೂಕಿಬಿಡುತ್ತದೆ ಮತ್ತು ತನ್ನ ಪೋಷಣಕ್ಕೆ ಅವಶ್ಯವಿದ್ದವುಗಳನ್ನಷ್ಟೇ ತಪ್ಪದೆ ಸ್ವೀಕರಿಸುತ್ತದೆ. "ಅಮೀಬಾ"ದ ಈ ಸಣ್ಣ ಉದಾಹರಣವು ಅರ್ಥಪೂರ್ಣವಿದ್ದು ಅದರ ಮೇಲಿಂದ ಪಿಂಡಗಳ ನಿಸರ್ಗಸಿದ್ಧ ಜ್ಞಾನವು ಎಂಥ ತರದ್ದು ಇರುತ್ತದೆಂಬದು ಸಿದ್ಧವಾಗುತ್ತದೆ. ಮಾನವೀಶರೀರದಲ್ಲಿಯ ಪಿಂಡಗಳಿಗೆ ಸಹ ಇದೇ ನಿಯಮವು ಹತ್ತುತ್ತದೆ. ಮಾನವೀಶರೀರದಲ್ಲಿಯ ಪಿಂಡಗಳು ಅನ್ನದೊಳಗಿಂದ ತಮಗೆ ಅವಶ್ಯವಿದ್ದ ಅನ್ನವನ್ನಷ್ಟೇ ಸ್ವೀಕರಿಸುತ್ತವೆ. ಅವುಗಳ ಘಟಕದ್ರವ್ಯಗಳಿಗೆ ಯಾವ ಪದಾರ್ಥಗಳು ಪರಕೀಯ ಅಥವಾ ಅವಶ್ಯವಿಲ್ಲದಂಥವುಗಳನ್ನು ಸ್ವೀಕರಿಸುವದೇ ಇಲ್ಲ. ಅಂಥವುಗಳನ್ನು ಸ್ವೀಕರಿಸಲಿಕ್ಕೆ ಬಲಾತ್ಕಾರಮಾಡಕೂಡದು. ಬಲಾತ್ಕಾರ ಮಾಡಿದರೆ ಅವುಗಳಿಗೆ ಅಪಾಯವಾಗುತ್ತದೆ. ಇಷ್ಟೇ ಅಲ್ಲ, ಸಾವು ಸಹ ಇಂಥ ಬಲಾತ್ಕಾರದಿಂದ ಒದಗುವದು. ಈ ತತ್ವಕ್ಕನುಸರಿಸಿಯೇ "ವ್ಹಿರಕೋ" ಎಂಬ ಪ್ರಸಿದ್ಧ ಜರ್ಮನ ಶಾಸ್ತ್ರಜ್ಞನು ಹೀಗೆ ಅನ್ನುತ್ತಾನೆ— ಪಿಂಡಗಳಲ್ಲಿ ವ್ಯತ್ಯಾಸವಾಗೋಣ ಅಥವಾ ಪಿಂಡಗಳಿಗೆ ಅನೈಸರ್ಗಿಕ ಅಥವಾ ಕ್ರಮವಿರುದ್ಧ

ಸ್ವರೂಪ ಪ್ರಾಪ್ತವಾಗೋಣವೆಂದರೆನೇ ರೋಗೋತ್ಪತ್ತಿಯು ಎಂಬದನ್ನು ಎಲ್ಲರೂ ಒಪ್ಪುವರು. ಈ ತರದಿಂದ ರೋಗದ ಮೀಮಾಂಸೆ ಆದನಂತರ ರೋಗವು ಹೇಗೆ ಇಲ್ಲದಂತಾಗುವದು ಈ ಪ್ರಶ್ನೆಯು ತಾನೇ ಉದ್ಭವಿಸುತ್ತದೆ. ಅದನ್ನು ಜೀವನ ರಸಾಯನ ಶಾಸ್ತ್ರಜ್ಞರು ಕೆಳಗೆ ಬರೆದ ಪ್ರಕಾರ ಹೇಳುತ್ತಾರೆ. ರೋಗವೆಂದರೆ ಯಾವದೊಂದು ಸಜೀವ ಅಥವಾ ನಿರ್ಜೀವ ಪದಾರ್ಥವಲ್ಲ. ಅದೊಂದು ಪಿಂಡಗಳ ವ್ಯತ್ಯಾಸ ಹೊಂದಿದಂಥ ಸ್ಥಿತಿಯು ಅಂದರೆ ಅವುಗಳ ಅಸ್ವಾಭಾವಿಕ ಪರಿಸ್ಥಿತಿಯೇ ರೋಗವೆಂಬುದು ಮೇಲಿನ ವಿವೇಚನದಿಂದ ಲಕ್ಷ್ಯದಲ್ಲಿ ಬರುವದು. ಈ ಪರಿಸ್ಥಿತಿಯು ಯಾಕೆ ಉಂಟಾಗುತ್ತದೆ? ಪಿಂಡಗಳ ಪೋಷಣಕ್ಕೆ ಅವಶ್ಯಕವಿದ್ದ ಪದಾರ್ಥಗಳು ಪೂರ್ಣ ಪ್ರಮಾಣದಿಂದ ಅವುಗಳಿಗೆ ದೊರೆಯದೆ ಇರೋಣ ಅಥವಾ ಅವುಗಳಿಗೆ ಬೇಡಾದ ಪದಾರ್ಥಗಳನ್ನು ಬಲಾತ್ಕಾರದಿಂದ ಅವುಗಳಿಗೆ ಪೂರೈಸಿಕೊಡೋಣ ಇವುಗಳ ಮೇಲಿಂದ ಈ ಪರಿಸ್ಥಿತಿಯು ಉಂಟಾಗುತ್ತದೆ. ಅವಶ್ಯಕ ಪದಾರ್ಥಗಳನ್ನು ಪೂರೈಸಿಕೊಟ್ಟು ಹಾಗೂ ಬೇಡಾದ ಪದಾರ್ಥಗಳು ಅವುಗಳಿಗೆ ದೊರೆಯದಂತೆ ಮಾಡಿದರೆ ಮೇಲೆಹೇಳಿದ ಅಸ್ವಾಭಾವಿಕ ಸ್ಥಿತಿಯು ಉತ್ಪನ್ನವಾಗಲಾರದು. ಒಂದು ವೇಳೆ ನಿರ್ಮಾಣವಾದರೂ ಅವಶ್ಯಕ ಪದಾರ್ಥಗಳನ್ನು ಯೋಗ್ಯ ರೀತಿಯಿಂದ ಪೂರೈಸಿಕೊಟ್ಟರೆ ರೋಗನಿವೃತ್ತಿಯಾಗುವದು ಎಂದು ಜೀವನರಸಾಯನಶಾಸ್ತ್ರಜ್ಞರ ಮತವಿದೆ. ಎಷ್ಟೋ ಸಾರೆ ಹವೆಯಲ್ಲಿ ಹೆಚ್ಚುಕಡಿಮೆಯಾದದ್ದರಿಂದ ಶರೀರದಲ್ಲಿಯ ಅವಶ್ಯಕ ಪದಾರ್ಥಗಳ ಮೇಲೆ ಪರಿಣಾಮವಾಗಿ ಅವು ಕಡಿಮೆಯಾಗುತ್ತವೆ. ಮತ್ತು ಹಲವು ಆನುವಂಶಿಕ ಗುಣದೋಷಗಳಿಂದ ಹಾಗೂ ವಿಶಿಷ್ಟ ಚಟ ಅಥವಾ ವ್ಯಸನಗಳಿಂದಲೂ ಮತ್ತು ಕೆಲವು ಕಾರಣಗಳಿಂದಲೂ ಹಲವು ಪ್ರಕೃತಿಗಳಿಗೆ ಎಷ್ಟೋ ಪದಾರ್ಥಗಳು ಹಿತಾವಹವಾಗುವದಿಲ್ಲ. ಯಾವ ಪದಾರ್ಥಗಳು ಯಾವ ಪ್ರಕೃತಿಗೆ ಸಾತ್ಮ್ಯ (ಎಂದರೆ ತಂಮವು ಎಂದು) ಮಾಡಿಕೊಳ್ಳಲು ಶಕ್ಯವಿಲ್ಲ ಅಂಥ ಪದಾರ್ಥಗಳು ಆಯಾ ಪ್ರಕೃತಿಗಳಿಗೆ ಪರಕೀಯ ಅಥವಾ ವಿರುದ್ಧವೆಂದು ತಿಳಕೊಳ್ಳಬೇಕು. ಮುಖ್ಯತಃ ಆನುವಂಶಿಕ ದೋಷಗಳಿಂದಲೇ ಕಫ, ವಾತ, ಪಿತ್ತ ಮುಂತಾದ ಪ್ರಕೃತಿಗಳು ನಿರ್ಮಾಣವಾಗುತ್ತವೆ. ಮಾತಾಪಿತೃಗಳ ಶುಕ್ರಶೋಣಿತದಿಂದ ಸಿದ್ಧವಾದಂಥ ಪಿಂಡಗಳಲ್ಲಿರುವಂಥ ಗುಣದೋಷಾತ್ಮಕ ಘಟಕಗಳೇ ಆ ಘಟಕಗಳಿಂದ

ನಿರ್ಮಾಣವಾದ ಶರೀರದಲ್ಲಿ ಇರತಕ್ಕವೇ ಸರಿ. ಬೀಜಾಂಕುರನ್ಯಾಯು ದಿಂದ ಬೀಜದಲ್ಲಿ ಇದ್ದದ್ದೇ ಅಂಕುರದಲ್ಲಿರುವದು ಸ್ಪಷ್ಟವಾದ ಮಾತು. ಆದ್ದರಿಂದಲೇ ಯಾವ ಪದಾರ್ಥದಿಂದ ಪಿಂಡವು ನಿರ್ಮಾಣವಾಗುತ್ತದೆ, ಆ ಪದಾರ್ಥವನ್ನೇ ರೋಗನಿವಾರಣದ ಕಾರ್ಯದಲ್ಲಿ ಉಪಯೋಗಿಸ ತಕ್ಕಂಥ ಅವಶ್ಯಕ ಪದಾರ್ಥವು ಮತ್ತು ಅದನ್ನು ಪ್ರಯೋಗಿಸಿದರೆ ರೋಗ ನಿವಾರಣೆಯಾಗುವದೆಂಬದು ಸ್ವತಃ ಸಿದ್ಧಮಾತೇ ಸರಿ. ಹಿಂದಕ್ಕೆ ಹೇಳಿದಂತೆ ನಿರಿಂದ್ರಿಯ ಕ್ಷಾರಗಳೇ ಮಾನವೀಶರೀರದ ಅವಶ್ಯಕವಾದ, ಮಹತ್ವವಾದ, ಮತ್ತೂ ಕರ್ತೃತ್ವವುಳ್ಳ ಘಟಕಗಳು ಇವೆ ಮತ್ತು ಅವು ಶರೀರದಲ್ಲಿ ಯೋಗ್ಯ ಪ್ರಮಾಣದಲ್ಲಿಲ್ಲದಿದ್ದರೆ ಪಿಂಡಗಳೇ ಹುಟ್ಟುವದಿಲ್ಲ. ಅರ್ಥಾತ್ ನಿರಿಂದ್ರಿಯ ಪದಾರ್ಥಗಳು ಕಡಿಮೆಯಾದರೆ ಪಿಂಡಗಳ ಸ್ಥಿತಿಯು ಬದಲು ಹೊಂದಿ ರೋಗೋತ್ಪತ್ತಿಯಾಗುವದು. ಮತ್ತು ಪಿಂಡಗಳ ಪೋಷಣಕ್ಕೆ ಮತ್ತು ಸಂವರ್ಧನಕ್ಕೆ ಅವಶ್ಯಕವಿದ್ದ ಕ್ಷಾರಗಳನ್ನು ಔಷಧದರೂಪದಿಂದ ಕೊಟ್ಟರೆ ರೋಗನಿವಾರಣೆಯಾಗಬೇಕೆಂಬ ಸಾಧಾರಣ ಅನುಮಾನ ಹೊರಡುವದು ಸಹಜವು. ಯಾವ ಪದಾರ್ಥಗಳು ಪಿಂಡಗಳ ಘಟಕಗಳಲ್ಲ, ಯಾವ ವಿಷಪದಾರ್ಥಗಳು ಯಾವುಗಳ ಸಂಗಡ ತಾದಾತ್ಮ್ಯವಾಗುವುದಿಲ್ಲ, ಅಂಥವು ಶರೀರಕ್ಕೆ ಪರಕೀಯ ಪದಾರ್ಥಗಳು; ಅಂಥವುಗಳನ್ನು ಔಷಧವೆಂದು ಉಪಯೋಗಿಸಿದರೆ ರೋಗವು ನೆಟ್ಟಗಾಗದು ಎಂದು ಹೇಳುವದೇ ಅನ ವಶ್ಯಕ. ಸಾಧ್ಯವಿದ್ದಂಥ ಎಲ್ಲ ರೋಗಗಳು ರುಧಿರಾಭಿಸರಣ ದ್ವಾರ ದಿಂದಲೇ ನಿಸರ್ಗತಃ ನೆಟ್ಟಗಾಗುತ್ತವೆ. ಮಾನವೀಶರೀರದ ಘಟಕಭಾಗ ಗಳು ರಕ್ತವಾಹಿನಿಗಳೊಳಗಿಂದ ಶರೀರದಲ್ಲಿ ಸರ್ವತ್ರ ಒಯ್ಯಲ್ಪಡುತ್ತವೆ. ಮತ್ತು ಸುತ್ತಲಿನ ಧಾತುಗಳಲ್ಲಿ ಈ ಘಟಕಗಳೂ ಕೇಶವಾಹಿನಿಗಳ ದ್ವಾರಾ ಶೋಷಿಸಲ್ಪಡುತ್ತವೆ. ರಕ್ತದಲ್ಲಿ ನೀರು, ನೈಟ್ರೋಜನ್, ಫೆರಮ್, ಕಾಲೀ, ಕಲ್ಕೇರಿಯಾ, ಮ್ಯಾಗ್ನೆಶಿಯಾ, ಸಿಲಿಕಾ ಮುಂತಾದ ನಿರಿಂದ್ರಿಯ ಕ್ಷಾರ ಪದಾರ್ಥಗಳು ಯೋಗ್ಯ ಪ್ರಮಾಣದಲ್ಲಿದ್ದರೆ ಯಾವಾಗಲೂ ನಿರೋಗಿ ಸ್ಥಿತಿಯು ಇರಲು ಶಕ್ಯವುಂಟು. ರಕ್ತದಲ್ಲಿಯ ಒಂದು ಅಥವಾ ಹೆಚ್ಚು ನಿರಿಂದ್ರಿಯ ಘಟಕ ಪದಾರ್ಥಗಳು ಕಡಿಮೆಯಾದರೆ ಶರೀರದಲ್ಲಾವದಾದ ರೊಂದು ಭಾಗದಲ್ಲಿ ವ್ಯತ್ಯಾಸವುಂಟಾಗುತ್ತದೆ ಮತ್ತು ಯಾವದಾದರೊಂದು

ಬೇನೆಯ ಭಾವನೆಯೂ ( ವೇದನೆ, ತಾಪ, ವಟ್ಟಿ, ಅರುಚಿ ಮುಂತಾದವು ) ಉತ್ಪನ್ನವಾಗುತ್ತದೆ. ಈ ಭಾವನೆಯೇ ಭಾವೀ ಗಂಡಾಂತರದ ಪೂರ್ವ ಚಿನ್ಹವು. ಮತ್ತು ನ್ಯೂನತೆಯನ್ನು ಪೂರೈಸಿಕೊಡುವ ಕಾಲವು ಒದಗಿದೆಂದು ಸೂಚಿಸುತ್ತವೆ. ರಕ್ತದಲ್ಲಿ ಮಹತ್ವದ ಘಟಕಪದಾರ್ಥಗಳು ಸಮಪ್ರಮಾಣದಲ್ಲಿದ್ದರೂ ಒಂದು ವೇಳೆ ರೋಗೋತ್ಪತ್ತಿಯಾಗುವ ಸಂಭವವಿದೆ. ಇದರ ಕಾರಣವೇನಂದರೆ ರಕ್ತದಲ್ಲಿಯ ಕ್ಷಾರಪದಾರ್ಥಗಳು ಯಾವದೊಂದು ಕಾರಣದಿಂದ ಆಯಾ ಅವಯವಗಳಲ್ಲಿ ಸೇರದೆ ಇದ್ದ ಮೂಲಕ ಅವುಗಳ ಪೋಷಣವು ಆಗುವದಿಲ್ಲ. ಕ್ಷಾರವು ಕಡಿಮೆಯಾಗಲಿ ಇಲ್ಲವೆ ಪೋಷಣ ದ್ರವ್ಯವು ಲಭಿಸದೆ ಇರಲಿ, ಇವುಗಳಲ್ಲಿ ಯಾವದೇ ಕಾರಣವಿರಲಿ, ಭಾವನಾದ್ವಾರದಿಂದ ಕಂಡುಬರುವ ಕ್ಷಾರವು ಕಡಿಮೆಯಾಗಿದೆ ಎಂದು ತಿಳಕೊಂಡು ಅದನ್ನು ಸೂಕ್ಷ್ಮ ಪ್ರಮಾಣದಲ್ಲಿ ಪೂರೈಸಿಕೊಡುವದು ಅವಶ್ಯಕವದೆ. ಅದರಿಂದ ರಕ್ತದಲ್ಲಿಯ ಘಟಕಗಳು ಕಡಿಮೆಯಾಗಿದ್ದರೆ ತುಂಬಿಬರುವವು. ಅಥವಾ ದೂಷಿತ ಭಾಗಕ್ಕೆ ಪೋಷಕ ದ್ರವ್ಯವು ದೊರಕಿ ಸ್ವಾಭಾವಿಕ ಪರಿಸ್ಥಿತಿಯು ನಿರ್ಮಾಣವಾಗುವದು. ಬೇರೆ ಬೇರೆ ಧಾತುಗಳು ಸ್ವಾಭಾವಿಕ ಅಥವಾ ಸುಸ್ಥಿತಿಯಲ್ಲುಳಿದರೆ ಶರೀರದ ನಿರಾಮಯ ಸ್ಥಿತಿಯು ಉಳಿಯುತ್ತದೆ. ಬೇರೆ ಬೇರೆ ಧಾತುಗಳನ್ನು ಸಿದ್ಧಪಡಿಸಲಿಕ್ಕೆ ಅವಶ್ಯವಿದ್ದ ಕ್ಷಾರಗಳ ಪ್ರಮಾಣವು ಅವಶ್ಯವಿದ್ದಷ್ಟು ಉಳಿದರೆ ಧಾತುಗಳು ನಿರೋಗಿ ಸ್ಥಿತಿಯಲ್ಲಿ ಉಳಿಯಲು ಶಕ್ಯವುಂಟು. ನಿರಿಂದ್ರಿಯ ಕ್ಷಾರಗಳಲ್ಲಿ ಯಾವದಾದರೊಂದರಲ್ಲಿಯ ಪ್ರಮಾಣದಲ್ಲಿ ಅನಿಯಮಿತತನವು ಉತ್ಪನ್ನವಾದರೆ ಅಲ್ಲಿಯ ಪರಿಸ್ಥಿತಿಯು ಬದಲಿಸುತ್ತದೆ. ಮತ್ತು ರೋಗವು ಉತ್ಪನ್ನವಾಗುತ್ತದೆ. ಅದರಿಂದ ಪಿಂಡಗಳ ಕಾರ್ಯವು ಸಾಕಷ್ಟು ಆಗುವದಿಲ್ಲ. ಧಾತುಗಳು ಮತ್ತು ಇಂದ್ರಿಯಗಳು ವಿಕೃತ ಸ್ಥಿತಿಯನ್ನು ಹೊಂದುತ್ತವೆ. ಮತ್ತು ರೋಗದ ಸ್ವರೂಪವು ಬೆಳೆಯುತ್ತ ಹೋಗುತ್ತದೆ. ಯಾವ ಕ್ಷಾರಗಳು ಅಣುಗಳ ಗತಿಯಲ್ಲಿ ವ್ಯತ್ಯಾಸವನ್ನುಂಟು ಮಾಡುತ್ತವೆ ಆ ಕ್ಷಾರಗಳನ್ನು ಸೂಕ್ಷ್ಮಪ್ರಮಾಣದಲ್ಲಿ ಕೊಟ್ಟು ಸ್ವಾಭಾವಿಕ ಪಿಂಡವೃದ್ಧಿಯನ್ನು ಒದಗಿಸಿಕೊಡುವದೇ ರೋಗನಿವೃತ್ತಿಯು. ಇದನ್ನು ಯಶಸ್ವಿರೀತಿಯಿಂದ ಮಾಡುವದರ ಸಲುವಾಗಿ ಬೇರೆಬೇರೆ ಧಾತುಗಳನ್ನುಂಟು

ಮಾಡಲಿಕ್ಕೆ ಯಾವ ಯಾವ ಕ್ಷಾರಗಳ ಅವಶ್ಯಕತೆಯುಂಟು ಮತ್ತು ಅವುಗಳ ಸ್ವಾಭಾವಿಕ ಕಾರ್ಯಗಳಾವವೆಂಬದು ಗೊತ್ತಿರುವದು ಅವಶ್ಯವದೆ. ಅದನ್ನು ಹಿಂದೆ ೧೭ನೆಯ ಪುಟದ ಮೇಲೆ ಮತ್ತು ಮುಂದೆ ೧೨ ಕ್ಷಾರಗಳ ಗುಣ ಧರ್ಮವೆಂಬ ಪ್ರಕರಣದಲ್ಲಿ ಹೇಳಿದ್ದೇವೆ. ಅದೇ ಪ್ರಕಾರ "ಸಾಮಾನ್ಯ ರೋಗ ಮತ್ತು ಅವುಗಳ ಚಿಕಿತ್ಸೆ"ಎಂಬ ಪ್ರಕರಣದಲ್ಲಿ ಸಹ ಬೇರೆ ಬೇರೆ ರೋಗಗಳ ವಿಭಾಗಗಳಲ್ಲಿ ಬೇರೆಬೇರೆ ರೋಗಗಳಲ್ಲಿ ಯಾವ ಯಾವ ಧಾತುಗಳು ಅಥವಾ ಅವಯವಗಳು ದೂಷಿತವಾಗಿರುವವು ಮತ್ತು ಯಾವ ಯಾವ ಕಾಲಕ್ಕೆ ಯಾವ ಯಾವ ಔಷಧವನ್ನು ಪರಿಸ್ಥಿತಿಗನುಸರಿಸಿ ಕೊಡತಕ್ಕದ್ದು ಆಯಾ ಸಮಯದಲ್ಲಿ ಸವಿಸ್ತರ ರೀತಿಯಿಂದ ವರ್ಣಿಸಿದೆ. ಈ ಸ್ಥಳದಲ್ಲಿ ಅವುಗಳ ಬಗ್ಗೆ ಹೆಚ್ಚಿನ ವಿವೇಚನವು ಅನವಶ್ಯಕ.

**ಕ್ಷಾರಗಳು:—** ಸೇಂದ್ರಿಯ ಪದಾರ್ಥಗಳನ್ನು ಹೇಗೆ ಉಪಯೋಗಿಸಿಕೊಳ್ಳುತ್ತವೆ. ಪ್ರತಿಯೊಂದು ಕ್ಷಾರದ ಕಾರ್ಯವು ಸ್ವತಂತ್ರವಿರುತ್ತದೆ. ಪ್ರತಿಯೊಂದು ಕ್ಷಾರವು ಸೇಂದ್ರಿಯ ಪದಾರ್ಥಗಳಲ್ಲಿಯ ಯಾವದೊಂದು ವಿಶಿಷ್ಟ ಪದಾರ್ಥದ ಸಂಗಡ ಸಂಬಂಧವನ್ನಿಟ್ಟು ಶರೀರದ ಸುಸ್ಥಿತಿಯ ಕಾರ್ಯವನ್ನು ತನ್ನ ಮಟ್ಟಿಗೆ ಸ್ವತಂತ್ರ ರೀತಿಯಿಂದ ಮಾಡುತ್ತಿರುತ್ತದೆಂಬದನ್ನು ಹಿಂದೆ ೯ನೆಯ ಪುಟದ ಮೇಲೆ ಹೇಳಿದ್ದೇವೆ. ಸೇಂದ್ರಿಯ ಪದಾರ್ಥಗಳ ಸಂಗಡ ಸಂಬಂಧವಿಡುವಂಥ ಗುಣವು ಆಯಾ ಕ್ಷಾರಗಳಲ್ಲಿ ಜಾತ್ಯಾ ಕಂಡುಬರುತ್ತದೆ. ಉದಾಹರಣಾರ್ಥ ನೋಡಿರಿ— ಕಾಲೀಮೂರವೆಂಬ ಕ್ಷಾರವು ರಕ್ತದಲ್ಲಿಯ ಫೈಬ್ರಿನವೆಂಬ ಪದಾರ್ಥದ ಸಂಗಡ ಸಂಬಂಧವನ್ನಿಟ್ಟು ತನ್ನ ಕಾರ್ಯವನ್ನು ಸ್ವತಂತ್ರ ರೀತಿಯಿಂದ ಮಾಡುತ್ತಿರುತ್ತದೆ. ಯಾವದಾದರೊಂದು ಕಾರಣದಿಂದ ಈ ಕ್ಷಾರದ ಪ್ರಮಾಣವು ಕಡಿಮೆಯಾದರೆ, ಕಾಲೀಮೂರವೆಂಬ ಕ್ಷಾರವನ್ನು ತೊಡಗಿಸಿ ಶರೀರಸಂವರ್ಧನದ ಕಾರ್ಯಕ್ಕೆ ಉಪಯೋಗವಾದಿಕೊಳ್ಳಲು ಸಾಕಷ್ಟು ಪೂರೈಕೆಯು ಇಲ್ಲದ್ದರಿಂದ, ಫಿಬ್ರಿನದ ಕೆಲ ಭಾಗವು ನಿಷ್ಕ್ರಿಯ ಅಥವಾ ನಿರುದ್ಯೋಗ ಸ್ಥಿತಿಯಲ್ಲಿ ಉಳಿಯುತ್ತದೆ. ಆದರಿಂದ ಪಿಂಡಗಳಿಗೆ ಅದರ ಬೇಸರ ಹುಟ್ಟಿ ಅದು ಮೂಗು, ಪುಪ್ಪುಸ, ಮೂತ್ರಪಿಂಡ, ಪಚನೇಂ

ದ್ರಿಯ, ಕರಳು ಮುಂತಾದವುಗಳದ್ವಾರಾ ಹೊರಗೆ ಸೂಕಲ್ಪಡುತ್ತದೆ. ಆದ್ದರಿಂದ ಆಯಾ ಭಾಗಗಳು ದೂಷಿತವಾಗುತ್ತವೆ ಮತ್ತು ಅದಕ್ಕೆ ಸ್ಥಾನಪರತ್ವದಿಂದ, ಚಳಿ ಸೆಗಡಿ, ಕೆಮ್ಮು, ಅತಿಸಾರ ಮುಂತಾದ ಹೆಸರುಗಳು ಕೊಡಲ್ಪಡುತ್ತವೆ. ಅದೇ ಪ್ರಕಾರ ಕಲ್ಕೇರಿಯಾಫಾಸ (ಲಾಯಿಮ ಫಾಸ್ಫೇಟ) ಮತ್ತು ಆಲ್ಬೂಮೆನ ಇವುಗಳಲ್ಲಿ ಸ್ನೇಹಾಕರ್ಷಣಶಕ್ತಿ ಇರುತ್ತದೆ. ಆದರೆ ಕಲ್ಕೇರಿಯಾಫಾಸದ ಅಣುಗಳು ಇರತಕ್ಕ ಪ್ರಮಾಣಕ್ಕಿಂತ ಕಡಿಮೆಯಾದರೆ ಅಲ್ಬುಮಿನದ ಕೆಲ ಭಾಗವು ಕಾರ್ಯಹೀನವಾಗಿ ಉಳಿದು ಮೂತ್ರಪಿಂಡದ್ವಾರಾ ಹೊರಗೆ ತಳ್ಳಲ್ಪಡುತ್ತದೆ. ಈ ರೀತಿಯಿಂದ "ಪೃಕ್ಕದಾಹ"ವೆಂಬ ರೋಗದ ಉತ್ಪತ್ತಿಯಾಗುತ್ತದೆ. ಎಷ್ಟೋ ಸಮಯದಲ್ಲಿ ಕಾರ್ಯಹೀನಗಳಾಗಿ ಅಡ್ಡಾಡುವ ಅಲ್ಬ್ಯೂಮೇನದ ಭಾಗಗಳು ಸಾಕಷ್ಟಕ್ಕಿಂತ ಹೆಚ್ಚು ಪ್ರಮಾಣದಲ್ಲಿ ತ್ವಚೆಯ ಕಡೆಗೆ ಹೋಗಿದ್ದು ರಂಧ್ರದ್ವಾರಾ ಹೊರಗೆ ದೂಡಲ್ಪಡದಿದ್ದರೆ ತ್ವಚೆಯೊಳಗಿಂದ ಹರಿದು ಹೊರಸೂಸಿಬರುತ್ತವೆ ಆಗ್ಗೆ ಉರಿಷ್ಯೆಣು (Exema) ಎಂಬ ತ್ವಚೆಯ ರೋಗವುಂಟಾಗುತ್ತದೆ. ಈ ಕೊರತೆಯನ್ನು ತುಂಬಿತೆಗೆದು ಕ್ಷಾರಗಳಲ್ಲಿಯ ಸಮತೆಯನ್ನು ಪ್ರಸ್ಥಾಪಿಸುವದಕ್ಕೋಸ್ಕರ "ಕಲ್ಕೇರಿಯಾಫಾಸ" ಎಂಬ ಕ್ಷಾರವನ್ನು ಸೂಕ್ಷ್ಮಪ್ರಮಾಣದಲ್ಲಿ ಪೂರೈಸಿಕೊಟ್ಟರೆ, ಶರೀರದಲ್ಲಿಯ "ಆಲ್ಬೂಮೆನ್ನವು" ಯೋಗ್ಯಪ್ರಮಾಣದಲ್ಲಿ ಹಂಚಲ್ಪಟ್ಟು ಶರೀರಸಂವರ್ಧನದ ಕಾರ್ಯವು ಸಾಧಿಸಿ ರೋಗನಿವೃತ್ತಿಯಾಗುತ್ತದೆ. ಅಸ್ಥಿಯಲ್ಲಿ ಸುಣ್ಣ (ಕಲ್ಕೇರಿಯಾಫಾಸ)ವಿರುತ್ತದೆಂಬದು ಸರ್ವರಿಗೆ ತಿಳದಮಾತೇ ಸರಿ. ಎಷ್ಟೋ ಸಲ ಚಿಕ್ಕ ಮಕ್ಕಳು ಅಶಕ್ತ ಮತ್ತು ರೇಗಿಕೊಳ್ಳುವ ಸ್ವಭಾವವುಳ್ಳವು ಇರುತ್ತವೆ. ಅವುಗಳಿಗೆ ನಡೆಯಲು ಆಗುವದಿಲ್ಲ. ಹಲ್ಲು ಬರುವ ಕಾಲದಲ್ಲಿ ಬಹಳೇ ಕಷ್ಟವಾಗುತ್ತದೆ. ಇದರ ಕಾರಣವೇನೆಂದರೆ ಅಸ್ಥಿಯಲ್ಲಿ ಸುಣ್ಣದ ಪ್ರಮಾಣವು ಕಡಿಮೆಯಿರುತ್ತದೆ; ಮತ್ತೇನೂ ಅಲ್ಲ. ಇಂಥ ಮಕ್ಕಳಿಗೆ ಸುಣದ ಕೊರತೆಯನ್ನು ತುಂಬಿಕೊಡುವದಕ್ಕೋಸ್ಕರ "ಕಲ್ಕೇರಿಯಾಫಾಸ" ಕ್ಷಾರವನ್ನು ಕೊಟ್ಟರೆ ಮಕ್ಕಳು ನಿರೋಗಿ, ಮತ್ತು ಉಲ್ಲಾಸವುಳ್ಳವುಗಳಾಗಿ ಆಟಗಳನ್ನಾಡಹತ್ತುತ್ತವೆ. ಅಸ್ಥಿ ಮತ್ತು ಕಲ್ಕೇರಿಯಾಫಾಸ ಇವುಗಳಲ್ಲಿದ್ದ ಸಂಬಂಧವು ಇದರ ಮೇಲಿಂದ ಸ್ಪಷ್ಟವಾಗಿ ಕಂಡು

ಬರುತ್ತದೆ. ಉರ್ವಣ (Oxidation)ದ ಕಾರ್ಯದಿಂದ ಸಿದ್ಧವಾದ ಯುರಿಕ ಆ್ಯಸಿಡ, ಸೋಡಿಯುಮ್‌ದ (ನೇಟ್ರುಮ್‌ಸಲ್ಫ) ಸಂಗಡ ಕಲತು ಸೋಡಿಯುಮ್‌ಯುರೇಟವೆಂಬ ಹೊಸ ಪದಾರ್ಥವು ಸಿದ್ಧವಾಗುತ್ತದೆ. ಮಾನವೀ ಶರೀರಕ್ಕೆ ಇದರ ಉಪಯೋಗವೇ ಇಲ್ಲದ್ದರಿಂದ ಇದು ಹೊರಗೆ ಹಾಕಲ್ಪಡುತ್ತದೆ. ಸಂಪೂರ್ಣವಾಗಿ ಶರೀರದ ಹೊರಗೆ ಹೋಗದೆಯಿದ್ದರೆ ಅದು ಸಂಧಿ (ಸಂದು)ಗಳ ಸುತ್ತಮುತ್ತಲು ನಿಂತುಕೊಂಡಿರುತ್ತದೆ. ಮತ್ತು ಅದೇ ಸ್ಥಳದಲ್ಲಿ ಕಲ್ಕಮಯ ಪದಾರ್ಥಗಳೂ ನಿಂತುಕೊಂಡಿರುತ್ತವೆ. ಈ ರೀತಿಯಿಂದ "ಅಂತುಲಿ" ವಾತವೆಂಬ ರೋಗವು ಉದ್ಭವಿಸುತ್ತದೆ. ಸೇಂದ್ರಿಯ ಪದಾರ್ಥಗಳ ಉರ್ವಣ (oxidation)ದಿಂದ ಸಿದ್ಧವಾದ ನೀರನ್ನು ನೇಟ್ರುಮ್‌ಸಲ್ಫವೆಂಬ ಕ್ಷಾರವು ನಾಶಗೊಳಿಸುತ್ತದೆ. ನೇಟ್ರುಮ್‌ಸಲ್ಫದ ಕಾರ್ಯದಲ್ಲಿ ವ್ಯತ್ಯಾಸವುಂಟಾದರೆ (ಅಂದರೆ ಪ್ರಮಾಣವು ಕಡಿಮೆಯಾದರೆ) ಉರ್ವಣಕ್ರಿಯೆ (oxidation) ಯಿಂದ ಸಿದ್ಧವಾದ ನೀರು ಶರೀರದಿಂದ ಹೊರಗೆ ತೀವ್ರವಾಗಿ ಹಾಕಲ್ಪಡುವದಿಲ್ಲಾದ್ದರಿಂದ ಮಧುಮೇಹ, ಅಂಗುಲಿವಾತ ಮುಂತಾದ ರೋಗಗಳು ಉತ್ಪನ್ನವಾಗುವ ಸಂಭವವಿರುತ್ತದೆ. ರಕ್ತದಲ್ಲಿ ಫೆರಮ್‌ಫಾಸ (ಲೋಹ)ವಿರುತ್ತದೆ. ಲೋಹವು ಕಡಿಮೆಯಾದರೆ ರಕ್ತವು ತಿಳಿಯಾಗುತ್ತದೆ. ಶರೀರದಲ್ಲಿ ಸಾಕಷ್ಟು ಪ್ರಾಣವಾಯುವಿನ ಪೂರೈಕೆಯಾಗುವದಿಲ್ಲ. ರಕ್ತಾಭಿಸರಣವು ವೇಗದಿಂದ ನಡೆಯುತ್ತದೆ. ರಕ್ತಾಭಿಸರಣದ ಗತಿಗೆ ಉಷ್ಣತೆಯ ಸ್ವರೂಪವು ಪ್ರಾಪ್ತವಾಗಿ ಜ್ವರದ ಭಾವನೆಯುಂಟಾಗುತ್ತದೆ. ಲೋಹವನ್ನು ಹೊಟ್ಟೆಯಲ್ಲಿ ಕೊಟ್ಟು ಕೊರತೆಯನ್ನು ತುಂಬಿಕೊಟ್ಟರೆ ಜ್ವರವು ಇಲ್ಲದಂತಾಗುತ್ತದೆ. ಮೇಲೆ ಹೇಳಿದ ಉದಾಹರಣಗಳ ಮೇಲಿಂದ ಬೇರೆ ಬೇರೆ ಕ್ಷಾರಗಳು ಬೇರೆ ಬೇರೆ ಸೇಂದ್ರಿಯ ಪದಾರ್ಥಗಳಸಂಗಡ ಸಂಬಂಧವನ್ನಿಟ್ಟು ಹೇಗೆ ಕಾರ್ಯವನ್ನು ಮಾಡುತ್ತವೆಂಬದು ಸಹಜವೇ ಲಕ್ಷ್ಯದಲ್ಲಿ ಬರುವದು. ಇತರ ಕ್ಷಾರಗಳ ಸಂಬಂಧದಿಂದ ಸಹ ಹೀಗೇ ಸಮಾಚಾರ ಹೇಳಬಹುದು. ಆದರೆ ಮುಂದೆ ಗುಣಧರ್ಮ ಪ್ರಕರಣದಲ್ಲಿ ಇದರ ಸಂಬಂಧದಿಂದ ಆಶಕ್ಯವಿದ್ದ ಉಲ್ಲೇಖವು ಆಯಾ ಕ್ಷಾರಗಳ ಸಂದರ್ಭದಲ್ಲಿ ಬಂದದ್ದರಿಂದ ಇಲ್ಲಿ ಪುನರುಕ್ತಿಮಾಡುವದು ಅವಶ್ಯವಿಲ್ಲ. ವಿಷಯವನ್ನು ತಿಳಿಸುವ ಮಟ್ಟಿಗೆ ಮೇಲಿನ ಉಲ್ಲೇಖವು ಸಾಕಾಗುವದು.

**೧೨ ಕ್ಷಾರಗಳ ಹೆಸರುಗಳು:**–ಇಲ್ಲಿಯವರೆಗೆ ಮಾನವೀ ಶರೀರದ ಘಟಕಗಳಾವವು, ಶರೀರದಲ್ಲಿಯ ಬೇರೆ ಬೇರೆ ಧಾತುಗಳು ಹೇಗೆ ಸಿದ್ಧವಾಗುತ್ತವೆ. ಶರೀರಕ್ಕೆ ವಿಕೃತಿಯು ಹೇಗೆ ಸಂಭವಿಸುತ್ತದೆ, ಅದರ ಸ್ವರೂಪವೇನು, ಅದರ ಕಾರಣವೇನು, ನಿರಿಂದ್ರಿಯ ಕ್ಷಾರಗಳೇ ಶರೀರದಲ್ಲಿಯ ಮಹತ್ವವುಳ್ಳ, ಕರ್ತೃತ್ವವುಳ್ಳ ಮತ್ತು ಸಂವರ್ಧಕ ಘಟಕಗಳು ಹೇಗೆ ಶರೀರದ ಸ್ವಾಸ್ಥ್ಯವನ್ನು ಕಾಯುವದಕ್ಕೋಸ್ಕರ ನಿರಿಂದ್ರಿಯ ಕ್ಷಾರಗಳು ಸೇಂದ್ರಿಯ ಪದಾರ್ಥಗಳನ್ನು ಹೇಗೆ ಉಪಯೋಗಿಸಿಕೊಳ್ಳುತ್ತವೆ, ಪಿಂಡಾಂತರ್ಗತ ಚಟುವಟಿಕೆಯಿಂದ ಹೊಸ ಪಿಂಡಗಳು ಹೇಗೆ ಉದ್ಭವಿಸುತ್ತವೆ ಮತ್ತು ಹಳೇ ಪಿಂಡಗಳು ಹೇಗೆ ನಾಶಹೊಂದುತ್ತವೆ, ಈ ಪಿಂಡಗಳಿಂದಲೇ ಬೇರೆ ಬೇರೆ ಧಾತುಗಳು ಹೇಗೆ ಸಿದ್ಧವಾಗುತ್ತವೆ, ಪಿಂಡಗಳ ಸ್ವಾಭಾವಿಕ ಪರಿಸ್ಥಿತಿಯಲ್ಲಿ ಬದಲಾಗೋಣವೆಂದರೆನೇ ರೋಗೋತ್ಪತ್ತಿ, ಮತ್ತು ನಿರಿಂದ್ರಿಯ ಕ್ಷಾರಗಳಲ್ಲಿ ಒಂದು ಅಥವಾ ಹೆಚ್ಚು ಕ್ಷಾರಗಳು ಕಡಿಮೆಯಾದ್ದರಿಂದ ಪಿಂಡಗಳ ಸ್ವಾಭಾವಿಕ ಸ್ಥಿತಿಯಲ್ಲಿ ಬದಲು ಆಗಿ ರೋಗೋತ್ಪತ್ತಿಯು ಹೇಗೆ ಆಗುತ್ತದೆ, ಮತ್ತು ಕಡಿಮೆಯಾದ ಕ್ಷಾರವನ್ನು ಪೂರೈಸುವದೇ ರೋಗನಿವೃತ್ತಿಯು ಹೇಗೆ–ಇವೆಲ್ಲವುಗಳ ಸಂಬಂಧದಿಂದ ಮೇಲೆ ಸಾಕಷ್ಟು ಸವಿಸ್ತರ ವಿವೇಚನ ಮಾಡಲಾಗಿದೆ. ಇದರಿಂದ ರೋಗವೆಂದರೇನು ಮತ್ತು ಅದು ಯಾವ ಸಾಧನದಿಂದ ನೆಟ್ಟಗಾಗುವದು ಎಂಬದು ತಿಳಿಯಲಾಯಿತು. ಆದರೂ ಇಷ್ಟರಿಂದ ಕಾರ್ಯವು ಸಂಪೂರ್ಣವಾಗಲಿಲ್ಲ. ಈ ಸಾಧನಗಳಾವವು ಮತ್ತು ಅವುಗಳನ್ನು ಹೇಗೆ ಉಪಯೋಗಿಸಬೇಕು ಎಂಬುದನ್ನು ತಿಳಿದುಕೊಳ್ಳುವದು ಅವಶ್ಯಕವದೆ. ಅದರಬಗ್ಗೆ ಈಗ ವಿಚಾರ ಮಾಡುವಾ. ರೋಗವನ್ನು ನೆಟ್ಟಗೆ ಮಾಡುವ ಸಾಧನಗಳೆಂದರೆ ಶರೀರದಲ್ಲಿರತಕ್ಕ ನಿರಿಂದ್ರಿಯ ಕ್ಷಾರಗಳೇ ಅಹುದು. ಜೀವನರಸಾಯನ ಶಾಸ್ತ್ರಜ್ಞರ ಮತದ ಪ್ರಕಾರ ಇವು ಹನ್ನೆರಡು ಕ್ಷಾರಗಳು. ಅವುಗಳ ಹೆಸರುಗಳನ್ನು ವರ್ಣಗಳ ಅನುಕ್ರಮದ ಮೇರೆಗೆ ಕೆಳಗೆ ಹೇಳಿದ್ದೇವೆ—

| ಪೂರ್ಣ ಹೆಸರು. | ಸಂಕ್ಷಿಪ್ತ ಹೆಸರು |
|---|---|
| ೧. ಕಲ್ಕೇರಿಯಾ ಫಾಸಫಾರಿಕಂ .. | .. ಕಲ್ಕೆ. ಫಾ. |
| ೨. ಕಲ್ಕೇರಿಯಾ ಫ್ಲೂಓರಿಕಂ .. | .. ಕಲ್ಕೆ. ಫ್ಲ್ಯೂ |

| | | |
|---|---|---|
| ೩. | ಕಲ್ಕೇರಿಯಾ ಸಲ್ಫೂರಿಕಂ .. .. | ಕಲ್ಕೆ. ಸ. |
| ೪. | ಕಾಲೀ ಫಾಸ್ಫಾರಿಕಂ .. .. | ಕಾ. ಫಾ |
| ೫. | ಕಾಲೀ ಮ್ಯಾರಿಯಾಟಿಕಂ .. .. | ಕಾ. ಮಾ. |
| ೬. | ಕಾಲೀ ಸಲ್ಫೂರಿಕಂ .. .. | ಕಾ. ಸ. |
| ೭. | ನೇಟ್ರಂ ಫಾಸ್ಫಾರಿಕಂ .. .. | ನೆ. ಫಾ. |
| ೮. | ನೇಟ್ರಂ ಮ್ಯಾರಿಯಾಟಿಕಂ .. .. | ನೆ. ಮಾ. |
| ೯. | ನೇಟ್ರಂ ಸಲ್ಫೂರಿಕಂ .. .. | ನೇ. ಸ. |
| ೧೦. | ಫೇರಂ ಫಾಸ್ಫಾರಿಕಂ .. . | ಫೆ. ಫಾ. |
| ೧೧. | ಮ್ಯಾಗ್ನೆಶಿಯಮ್ ಫಾಸ್ಫಾರಿಕಂ .. .. | ಮ್ಯಾ. ಫಾ. |
| ೧೨. | ಸಿಲಿಕಾ. .. .. | ಸಿ. |

ಪುಸ್ತಕದಲ್ಲಿ ಸಂಪೂರ್ಣ ಹೆಸರುಗಳನ್ನು ಬರೆಯದೆ ಸಂಕ್ಷಿಪ್ತ ಹೆಸರುಗಳೇ ಕೊಡಲ್ಪಟ್ಟಿವೆ. ಇವುಗಳ ಹೊರ್ತಾಗಿ ಬೇರೆ ಕ್ಷಾರಗಳು ಶರೀರದಲ್ಲಿ ದೊರೆಯುತ್ತವೆ. ಆದರೆ ಮೇಲೆ ಹೇಳಿದ ೧೨ ಕ್ಷಾರಗಳು ಮಹತ್ವವುಳ್ಳವು. ಮತ್ತು ಅವು ಶರೀರದಲ್ಲಿ ಯಾವಾಗಲೂ ದೊರೆಯುವಂಥವು. ಶರೀರವು ಸುಟ್ಟನಂತರ ಉಳಿದ ಬೂದಿಯಲ್ಲಿ ಸಹ ಈ ೧೨ ಕ್ಷಾರಗಳು ದೊರೆಯುವವು. ಮತ್ತು ಇವೇ ೧೨ ಕ್ಷಾರಗಳು ಮಹತ್ವವುಳ್ಳ ಘಟಕಗಳೆಂದು ತಿಳಿದು ಇವು ಕಡಿಮೆಯಾದರೆ ರೋಗವು ಉದ್ಭವಿಸುತ್ತದೆ ಮತ್ತು ರೋಗವು ಉದ್ಭವಿಸಿದ ಕೂಡಲೆ ಇವೇ ಕ್ಷಾರಗಳನ್ನು ಔಷಧರೂಪದಿಂದ ಸೂಕ್ಷ್ಮ ಪ್ರಮಾಣದಲ್ಲಿ ಉಪಯೋಗಿಸಿದರೆ ರೋಗವು ನೆಟ್ಟಗಾಗುತ್ತದೆ. ಈ ಕ್ಷಾರಗಳು ಭೂಮಿಯಲ್ಲಿ ದೊರೆಯುತ್ತವೆ. ಮತ್ತು ಪೇಟೆಯಲ್ಲಿ ಸಹ ದೊರೆಯುತ್ತವೆ. ಸೂಕ್ಷ್ಮ ಪ್ರಮಾಣ— ಮೂಲ ಸ್ವರೂಪದಲ್ಲಿ ದೊರೆಯತಕ್ಕ ಕ್ಷಾರಗಳನ್ನು ರೋಗವುಳ್ಳ ಮನುಷ್ಯನಿಗೆ ಕೊಟ್ಟು ಅವನನ್ನು ನೆಟ್ಟಗೆ ಮಾಡಲು ಶಕ್ಯವಿಲ್ಲ. ಆದ್ದರಿಂದ ಈ ಕ್ಷಾರಗಳನ್ನು ಸೂಕ್ಷ್ಮ ಪ್ರಮಾಣದಲ್ಲಿಯೇ ಕೊಡತಕ್ಕದ್ದು. ಈ ಕ್ಷಾರಗಳ ಸೂಕ್ಷ್ಮ ಅಣುಗಳನ್ನು ಔಷಧದಂತೆ ಕೊಟ್ಟರೆ ಕ್ಷಾರಗಳ ಸಮತೆಯ ರಜ್ಜುವು ಹರಿದದ್ದು ಪುನಃ ಕೂಡಿಕೊಂಡು ಕೊರತೆಯು ತುಂಬಲ್ಪಡುತ್ತದೆ. ರಾಸಾಯನಿಕ ಸ್ನೇಹಾ

ಕರ್ಷಣದ ಕಾರ್ಯವು ಈ ಸಂದರ್ಭದಲ್ಲಿ ಮಹತ್ವವುಳ್ಳದ್ದಿದೆ. ಸೇಂದ್ರಿಯ ಪದಾರ್ಥ ಮತ್ತು ನಿರಿಂದ್ರಿಯ ಪದಾರ್ಥ ಇವುಗಳಲ್ಲಿರುವ ನಿಸರ್ಗಸಿದ್ಧ ಆಕರ್ಷಣಶಕ್ತಿಗನುಸರಿಸಿ ಪ್ರತಿಯೊಂದು ಕ್ಷಾರವು ತನ್ನ ಮಾರ್ಗವನ್ನು ತಾನೇ ಹುಡುಕಿಕೊಂಡು ಕೊರತೆ ಇದ್ದಲ್ಲಿ ಹೋಗಿ ಕೂಡಿಕೊಳ್ಳುತ್ತದೆ. ಸೂಕ್ಷ್ಮಪ್ರಮಾಣದಲ್ಲಿ ಕೊಟ್ಟಂಥ ಕ್ಷಾರಗಳ ಅಣುಗಳನ್ನು ಬದಲುಗೊಂಡ ಪಿಂಡಗಳು ಸಹಜವಾಗಿ ಶೋಷಣಮಾಡಿಕೊಳ್ಳುತ್ತವೆ. ಬದಲುಗೊಂಡ ಪಿಂಡಗಳು ರಕ್ತದ್ವಾರದಿಂದ ಸ್ವಾಭಾವಿಕವಾಗಿ ದೊರೆಯತಕ್ಕ ಅನ್ನದಲ್ಲಿಯ ಕ್ಷಾರಗಳ ಅಣುಗಳನ್ನು ಸ್ವೀಕರಿಸಲಾರವು. ಆದರೆ ಸೂಕ್ಷ್ಮಪ್ರಮಾಣದಿಂದ ಹೊರಗಿನಿಂದ ಕೊಡಲ್ಪಟ್ಟ ಕ್ಷಾರಗಳನ್ನು ಅವು ಸ್ವೀಕರಿಸುತ್ತವೆ. ಪಿಂಡಗಳೊಳಗೆ ಸೇರಿ ಸಹಜವಾಗಿ ಪಚನಗೊಳ್ಳುವಂಥ ಮತ್ತು ಶೋಷಣವಾಗುವಂಥ ಪ್ರಮಾಣದಲ್ಲಿಯೇ ಕ್ಷಾರಗಳನ್ನು (ಔಷಧರೂಪದಿಂದ) ಕೊಟ್ಟರೆ ಸಾಧ್ಯವಿದ್ದ ಯಾವದೇ ರೋಗವು ತೀವ್ರವೇ ನೆಟ್ಟಗಾಗಬಹುದು. ಸೂಕ್ಷ್ಮಪ್ರಮಾಣದಲ್ಲಿ ಔಷಧವನ್ನು ಕೊಡುವದು ಬಹಳೇ ಮಹತ್ವದ ಸಂಗತಿಯು. ಅದರ ಮೇಲೆ ಚಿಕಿತ್ಸೆಯ ಯಶವು ಅವಲಂಬಿಸಿರುತ್ತದೆ. ರೋಗದಲ್ಲಿ ಕೊರತೆಗೊಂಡ ಕ್ಷಾರವನ್ನು ತಪ್ಪಾಗದಂತೆ ಹುಡುಕಿತೆಗೆಯುವದೆಷ್ಟು ಮಹತ್ವದ ಸಂಗತಿ ಇರುತ್ತದೋ ಅಷ್ಟೇ ಮಹತ್ವವುಳ್ಳದ್ದು ಇದಾದರೂ ಅಹುದು. ನಿಸರ್ಗ ಸ್ಥಿತಿಯಲ್ಲಿರುವವೋ ಅದೇ ಸೂಕ್ಷ್ಮ ಪ್ರಮಾಣದಲ್ಲಿಯೇ ಈ ಕ್ಷಾರಗಳನ್ನು ಸಿದ್ಧಮಾಡತಕ್ಕದ್ದು ಸ್ಪಷ್ಟವಾದ ಮಾತು. ಬಹಳೇ ಸೂಕ್ಷ್ಮವಿದ್ದ ರಕ್ತ ಕಣಗಳಿಂದ ಅವು ಶೋಷಿಸಲ್ಪಡುತ್ತವಾದ್ದರಿಂದ ಅವುಗಳಿಗಿಂತ ಹೆಚ್ಚು ಸೂಕ್ಷ್ಮವಾಗಿ ಇವು ಇರತಕ್ಕದ್ದೆಂಬುದು ಸಹಜವೇ ಸರಿ. ನಿಸರ್ಗದ ಕಾರ್ಯವು ಎಷ್ಟೊ ಸೂಕ್ಷ್ಮ ಮತ್ತು ಅನಂತ ಅಣುರೇಣುಗಳ ಸ್ವರೂಪದಿಂದಲೇ ' ನಡೆದದೆ. ಅದಕ್ಕೆ ಸ್ಪಷ್ಟ ಹಾಗೂ ಕಣ್ಣಿಗೆ ಕಾಣುವಷ್ಟು ಸ್ವರೂಪವು ಪ್ರಾಪ್ತವಾಗದ ವಿನಃ ನಮಗೆ ಕಂಡುಬರಲಾರವು. ಉಪ್ಪಿನ ಸಣ್ಣ ಹರಳು ತಕ್ಕೊಂಡು ನೋಡಿದರೆ ಅದಕ್ಕೆ ರುಚಿಯು ಇರುವದಿಲ್ಲೆನ್ನಬಹುದು. ಆದರೆ ಆ ಸೂಕ್ಷ್ಮ ಹರಳು ಸಹ ಅದಕ್ಕಿಂತ ಸಾವಿರಾಂಶದಿಂದ ಸೂಕ್ಷ್ಮವಿದ್ದ ಕಣಗಳಿಂದ ಸಿದ್ಧಿಸಲ್ಪಟ್ಟಿದೆ. ಈ ಸೂಕ್ಷ್ಮ ಕಣಗಳು ಮಾನವೀ ದೃಷ್ಟಿಗಂತೂ ಕಾಣು

ವದೇ ಇಲ್ಲ. ಹೆಚ್ಚೇನು ಹೇಳುವದು — ಸೂಕ್ಷ್ಮದರ್ಶಕ ಯಂತ್ರದ ಸಹಾಯದಿಂದ ಸಹ ಕಾಣಲಿಕ್ಕೆ ಕಠಿಣ. ರಾಸಾಯನಿಕ ಪೃಥಕ್ಕರಣದಿಂದ ಸಿದ್ಧವಾದದ್ದೇನೆಂದರೆ— ಎರಡೂವರೆ ಪೌಂಡು ಹಾಲಿನಲ್ಲಿ ಒಂದು ಗ್ರೇನಿನ $\frac{೧}{೬೦೦೦೦೦೦}$ ( ಒಂದು ಅರವತ್ತು ಲಕ್ಷಾಂಶ ) ಲೋಹವಿರುತ್ತದೆ. ಒಂದು ಸಾರೆ ಶಿಶುವಿಗೆ ನಾಲ್ಕು ತೊಲೆ ಹಾಲು ಕುಡಿಸಿದರೆ, ಒಂದು ಮಿಲಿಗ್ರಾಮ ಅಂದರೆ ( $\frac{೧}{೧೫೦೦೦೦}$ ) ಒಂದುದೀಡಲಕ್ಷಾಂಶ ಗ್ರೇನ ಲೋಹವು ಆ ಕೂಸಿನ ಹೊಟ್ಟೆಯಲ್ಲಿ ಹೋಗುತ್ತದೆ. ಅಂದರೆ ಚಿಕ್ಕಮಕ್ಕಳ ಪೋಷಣಕ್ಕೆ ಮತ್ತು ಸಂವರ್ಧನಕ್ಕೆ ಸಾಧಾರಣತಃ ಕೊಡಬೇಕಾದಷ್ಟು ಹಾಲಿನಲ್ಲಿ ಕೇವಲ ನಾಲ್ಕಾರು ಮಿಲಿಗ್ರಾಮದಷ್ಟೇ ಲೋಹವಿರುತ್ತದೆ. ಯಾವ ಪಿಂಡಗಳ ಪೋಷಣಕ್ಕೆ ಮತ್ತು ಸಂವರ್ಧನಕ್ಕೆ ಲೋಹದ ಅವಶ್ಯಕತೆ ಯುಂಟು ಆ ಪಿಂಡಗಳಿಗೆ ನಾಲ್ಕಾರು ಮಿಲಿಗ್ರಾಮ ಲೋಹವು ಸಾಕಾಗುವದು. ವಸ್ತುಸ್ಥಿತಿಯು ಹೀಗೆ ಇದ್ದದರಿಂದ ಯಾವದೊಂದು ಭಾಗದೊಳಗಿನ ಪಿಂಡಗಳಲ್ಲಿ ಲೋಹದ ಅಣುಗಳು ಕಡಿಮೆಯಾಗಿ ಪ್ರಕೃತಿ ಯಲ್ಲಿ ವ್ಯತ್ಯಾಸವಾಗಿರುವದೋ ಅಲ್ಲಿ ಲೋಹವನ್ನು ಎಷ್ಟು ಸೂಕ್ಷ್ಮ ಪ್ರಮಾಣದಿಂದ ಕೊಡತಕ್ಕದ್ದೆಂಬದರ ಕಲ್ಪನೆಯು ಸಹಜವಾಗಿ ಬರಬಹುದು. ಲೋಹಕ್ಕಿಂತ "ಫ್ಲೋರಿನ" ಕ್ಷಾರದ ಪ್ರಮಾಣವು ಶರೀರದಲ್ಲಿ ಬಹಳೇ ಕಡಿಮೆ ಇದೆ. ಹಾಲಿನಲ್ಲಿ ಇದರ ಪ್ರಮಾಣವು $\frac{೧}{೧೦}$ ಮಿಲಿಗ್ರಾಮದಷ್ಟು ಇದೆ ಎಂದು ಸಿದ್ಧವಾಗಿದೆ. ಇದರಮೇಲಿಂದ ಒಂದು ಸಾರೆಯ ತಿನಸಿಗೆ ಒಂದು ಮಿಲಿಗ್ರಾಮವೆಂದರೆ ಬಹಳೇ ದೊಡ್ಡ ತಿನಸು ಎಂದಂತಾಯಿತು. ಹಾಲಿನಲ್ಲಿ ಹನ್ನೆರಡೂ ಕ್ಷಾರಗಳು ಇವೆ. ಈ ಸಂಖ್ಯೆಯನ್ನು ವಿಭಾಗಿಸಿದರೆ ಒಂದು ಹಾಲಿನ ಹನಿಯಲ್ಲಿ ಒಂದೊಂದು ಕ್ಷಾರದ ಪ್ರಮಾಣವು ಎಷ್ಟು ಸೂಕ್ಷ್ಮವಿರುವದೆಂಬದು ಸಹಜವಾಗಿ ಲಕ್ಷ್ಯದಲ್ಲಿ ಬರುವದು. ಈ ವಿವೇ ಚನದ ಮೇಲಿಂದ ಔಷಧವನ್ನು ಸೂಕ್ಷ್ಮ ಪ್ರಮಾಣದಲ್ಲಿ ಏಕೆ ಕೊಡ ಬೇಕೆಂಬುದು ಸಹಜವಾಗಿ ತಿಳಿಯಬಹುದು. ಔಷಧವು ಎಷ್ಟು ಹೆಚ್ಚು ಸೂಕ್ಷ್ಮವಿರುವದೋ ಅದೇ ಮಾನದಿಂದ ಔಷಧವು ಧಾತುಗಳಲ್ಲಿ ಕೂಡಿ ಕೊಳ್ಳಲು ತೊಂದರೆ ಕಡಿಮೆ. ಎಷ್ಟೋ ಪ್ರಸಂಗದಲ್ಲಿ ಎಷ್ಟೋ ಅವಯವ ಗಳು ಇಷ್ಟು ಗಟ್ಟಿ ಮತ್ತು ದೃಢವಾಗಿರುತ್ತವಲ್ಲ ರಕ್ತದಲ್ಲಿ ಕರಗಿದ ಕ್ಷಾರ

ಗಳು ಧಾತುಗಳವರೆಗೆ ಹೋಗಿ ಮುಟ್ಟಲಾರವು. ಆದರೆ ಅದೇ ಕ್ಷಾರವನ್ನು ಔಷಧವೆಂದು ಸೂಕ್ಷ್ಮಪ್ರಮಾಣದಲ್ಲಿ ಕೊಟ್ಟರೆ ಕಲ್ಲಿನಂತೆ ಗಟ್ಟಿಯಾದ ಧಾತು ಗಳಲ್ಲಿಸಹ ಹೋಗಿ ಸೇರಲಿಕ್ಕೆ ಈ ಕ್ಷಾರಗಳಿಗೆ ಎನೂ ಅಡ್ಡಿಯಾಗುವದಿಲ್ಲ. ಆದರೆ ಕ್ಷಾರದ ಪ್ರತಿಯೊಂದು ಅಣುವು ಬೇರೆಬೇರೆಯಾಗುವಷ್ಟು ಸೂಕ್ಷ್ಮ ವಿರಬೇಕು. ರೋಗನಿವಾರಣೆಗೆ ಔಷಧದ ಪ್ರಮಾಣವು ದೊಡ್ಡ ಪ್ರಮಾಣ ಕ್ಕಿಂತ ಸೂಕ್ಷ್ಮಪ್ರಮಾಣವೇ ಯೋಗ್ಯವು. ಒಂದೇ ಔಷಧವನ್ನು ಮೇಲಿಂದಮೇಲೆ ಸೂಕ್ಷ್ಮಪ್ರಮಾಣದಿಂದ ಹೆಚ್ಚುಸಾರೆ ಕೊಟ್ಟರೆ ಇಷ್ಟ ಕಾರ್ಯವು ತೀವ್ರ ಸಾಧ್ಯವಾಗುತ್ತದೆ. ದೊಡ್ಡ ಪ್ರಮಾಣದಲ್ಲಿ ಔಷಧ ಕೊಟ್ಟರೆ ಇಷ್ಟಪರಿಣಾಮವಾಗುವದಿಲ್ಲ; ಅಪಾಯವೇ ಆಗುವದು. ಪಂಡು ರೋಗಕ್ಕೆ "ಲೋಹ" ವನ್ನು ದೊಡ್ಡ ಪ್ರಮಾಣದಲ್ಲಿ ಕೊಟ್ಟರೆ ಹೊಟ್ಟೆಯ ಮೇಲೆ ಅನಿಷ್ಟ ಪರಿಣಾಮವಾಗುತ್ತದೆ. ಬೇನೆಯಂತೂ ನೆಟ್ಟಗಾಗುವದೇ ಇಲ್ಲ.

**ಔಷಧಗಳನ್ನು ಸಿದ್ಧಮಾಡುವ ಪದ್ಧತಿ:—** ಈ ಕ್ಷಾರಔಷಧ ಗಳನ್ನು ಖಲಮಾಡಿ (ಅರೆದು) ಸೂಕ್ಷ್ಮ ಪ್ರಮಾಣದಲ್ಲಿ ಸಿದ್ಧಪಡಿಸಲು ಶಕ್ಯವಿದೆ. ಮೂಳಕ್ಷಾರದ ಒಂದು ಪಾಲು ಮತ್ತು ದುಗ್ಧಶರ್ಕರೆಯ ೯ ಪಾಲು, ಕೂಡಿಸಿ ಎರಡು ತಾಸಿನವರೆಗೆ ಖಲಮಾಡತಕ್ಕದ್ದು, ಹೀಗೆ ಸಿದ್ಧ ವಾದ ಔಷಧವು ೧×ಶಕ್ತಿಯುಳ್ಳದ್ದು, (ಪ್ರಭಾವವುಳ್ಳದ್ದು) ಎಂದು ತಿಳಿಯ ತಕ್ಕದ್ದು. ೧×ಶಕ್ತಿಯಔಷಧ ೧ ಪಾಲು ಮತ್ತುದುಗ್ಧಶರ್ಕರಾ ೯ ಪಾಲು ಹೀಗೆ ತೆಗೆದುಕೊಂಡು ಮೇಲಿನಂತೆ ಪುನಃ ೨ ತಾಸಿನವರೆಗೆ ಖಲಮಾಡಿ ಸಿದ್ಧಾದ ಔಷಧವು ೨× ಶಕ್ತಿ ಅಥವಾ ಪ್ರಭಾವವುಳ್ಳದ್ದು. ಇದೇಪ್ರಕಾರ ಈ ಶಕ್ತಿಯ ಔಷಧದ ೧ ಪಾಲು ಮತ್ತು ದುಗ್ಧಶರ್ಕರೆಯ ೯ ಪಾಲು ಹೀಗೆ ತೆಗೆದುಕೊಂಡು ಮೇಲಿನಂತೆ ಖಲಮಾಡಿದರೆ ಅದರ ಮುಂದಿನ ಶಕ್ತಿಯು ಅಂದರೆ ೩× ಶಕ್ತಿಯ ಔಷಧವು ಸಿದ್ಧವಾಗುವದು. ಇದೇ ಪ್ರಕಾರ ಬೇಕಾದ ಶಕ್ತಿಯುಳ್ಳ ಔಷಧವನ್ನು ಸಿದ್ಧಮಾಡಬಹುದು. × ಈ ಗುರ್ತು ದಶಾಂಶಪ್ರಮಾಣದ ದ್ಯೋತಕವಿರುತ್ತದೆ. ಈ ಪ್ರಕಾರ ಔಷಧವನ್ನು ಸಿದ್ಧ ಪಡಿಸುವ ಪದ್ಧತಿಗೆ ಪ್ರಭಾವನಪದ್ಧತಿ (ಪುಟಕೊಡುವ ಪದ್ಧತಿ=Potenti-

zation) ಎಂದೆನ್ನುತ್ತಾರೆ. ೧× ಚೂರ್ಣದ ಕಣಗಳನ್ನು ಧಾತುಗಳು ಶೋಷಣಮಾಡಬೇಕಾದರೆ ಸ್ವಲ್ಪ ಕಠಿಣವೇ ಸರಿ. ಸಾಧಾರಣತಃ ೬×ನೇ ಶಕ್ತಿಯ ಔಷಧಗಳನ್ನೇ ಕೊಡುವ ವಾಡಿಕೆಯುಂಟು. ೬× ಶಕ್ತಿಯ ಔಷಧದಲ್ಲಿ ಕ್ಷಾರದ ೧೦೦೦೦೦೦ರಷ್ಟು ಅಂಶವಿರುತ್ತದೆ. ಇದಕ್ಕೂ ಕಡಿಮೆಯ ಪ್ರಮಾಣದ ಔಷಧಗಳು (ಹೆಚ್ಚಿನಶಕ್ತಿಯ ಔಷಧಗಳು) ರೋಗನಿವೃತ್ತಿಯ ಕೆಲಸಕ್ಕೆ ಸಹಾಯಕರವಾಗುತ್ತವೆ. ಈ ಎಲ್ಲ ಔಷಧಗಳನ್ನು ದುಗ್ಧಶರ್ಕರೆ ಯಲ್ಲಿಯೇ ಖಲಸಮಾಡತಕ್ಕದ್ದಿದ್ದದರಿಂದ ಎಲ್ಲವೂ ಕಣ್ಣಿಗೆ ಸ್ಪಷ್ಟ ಬೆಳ್ಳಗೆ ಕಾಣಿಸುತ್ತವೆ ಮತ್ತು ಸವಿಯಾಗಿರುತ್ತವೆ. ಒಂದೊಂದು ಔಷಧವನ್ನು ಒಂದೇ ಸ್ವತಂತ್ರರೀತಿಯಿಂದ ಖಲಿಸತಕ್ಕದ್ದು. ಎರಡು ಮೂರು ಕೂಡಿಸಿ ಒಂದುಕಡೆಗೆ ಖಲಿಸಕೂಡದು. ದುಗ್ಧಶರ್ಕರೆಯಲ್ಲಿ ಖಲಿಸತಕ್ಕದ್ದಿದ್ದದರಿಂದ ಔಷಧದ ಗುಣಧರ್ಮದಲ್ಲಿ ಏನೂ ಬದಲು ಆಗುವದಿಲ್ಲ. ಇದು ದುಗ್ಧಶರ್ಕರೆ ಯಲ್ಲಿಯ ದೊಡ್ಡಗುಣವು. ನಿತ್ಯ ಉಪಯೋಗಿಸತಕ್ಕ ಶರ್ಕರೆಯಲ್ಲಿ ಸಹ ಈ ಔಷಧಗಳನ್ನು ಸಿದ್ಧಪಡಿಸಬಹುದು. ಆದರೆ ಈ ಸಕ್ಕರೆಗೆ ಇರುಬು ಹತ್ತುವ ಸಂಭವವಿದ್ದದರಿಂದ ಆ ಔಷಧಗಳು ತಡೆಯುವದಿಲ್ಲ. ಖಲಬತ್ತು ಮತ್ತು ಅದರಗುಂಡು ಯಾವದೇ ಧಾತುವಿನದು (ಬೆಳ್ಳಿ, ಬಂಗಾರ, ಕಬ್ಬಿಣ, ತಾಮ್ರ ಹಿತ್ತಾಳಿ) ಇರಕೂಡದು. ವೆಜವುಡ (ಒಂದುತರದ ಕಟ್ಟಿಗೆಯಿಂದ ಮಾಡಿದ್ದು) ಅಥವಾ ಚೀನೀ ಮಣ್ಣಿನ ಖಲಬತ್ತು ಉಪಯೋಗಿಸ ಬಹುದು.

**ಖಲನವಮಾಡಿದ್ದರಿಂದ ಕ್ಷಾರಗಳ ಅಸ್ತಿತ್ವ ಇಲ್ಲದಂತಾ ಗುವದಿಲ್ಲ:—** ಖಲಸವಮಾಡಿದ್ದರಿಂದ ಕ್ಷಾರದ ಅಸ್ತಿತ್ವವು ಇಲ್ಲದಂತಾ ಗುವದಿಲ್ಲ. ಅದರಲ್ಲಿಯ ಶಕ್ತಿಯು ಕಡಿಮೆಯಾಗುವದಿಲ್ಲ. ಅನಂತ ವಿಭಾಗ ಮಾಡಿರಿ, ಬೇಕಾದಷ್ಟು ಖಲನಮಾಡಿರಿ ಆದರೂ ಅದರ ಪದಾರ್ಥ ತ್ವವು ನಷ್ಟವಾಗುವದಿಲ್ಲ. ಅದರ ಜಡದೇಹವು ನಮ್ಮ ದೃಷ್ಟಿಗೆ ಕಾಣುವ ದಿಲ್ಲ, ಇಷ್ಟೇ. ಆದರೆ ಅದರ ಸೂಕ್ಷ್ಮದೇಹಕ್ಕೇ ಕಾರ್ಯಸಿದ್ಧಿಗೆ ಹೆಚ್ಚು ಪಾತ್ರತೆ ಇದ್ದು ಹೆಚ್ಚು ಸಾಮರ್ಥ್ಯವುಳ್ಳದ್ದು ಉಳಿಯುವದು. ಖಲನ ಮಾಡಿದ್ದರಿಂದ ಜಡದೇಹವು ಹೋಗಿ ಸೂಕ್ಷ್ಮದೇಹವು ಬರುತ್ತದೆ.

ಆದರಿಂದಲೇ ಶರೀರದಲ್ಲಿ ಬೇಕಾದಲ್ಲಿ ಹೋಗಲು ಶಕ್ತಿಯುಂಟಾಗುತ್ತದೆ. ಲೋಹವು ಯಾವಾಗಲೂ ಲೋಹವೇ ಉಳಿಯುವದು. "ಪೊಟಾಶಿಯಂ," ಪೊಟಾಶಿಯಂವೇ ಮತ್ತು "ಸಿಲಿಕಾ" ಇದು ಸಿಲಿಕಾನೇ ಉಳಿಯುವದು. ಖಲಸಮಾಡಿದ್ದರಿಂದ ಅದರ ದೃಶ್ಯಸ್ವರೂಪದಲ್ಲಿ ಬದಲು ಆಯಿತು, ಅದರ ಅಣುಗಳು ಬೇರೆಬೇರೆಯಾದವು, ಆದರೂ ಅದರ ಪದಾರ್ಥತ್ವವು ಇಲ್ಲದಂತಾಗುವದಿಲ್ಲ.

**ಔಷಧದ ಯೋಜನೆ ಹೇಗೆ ಮಾಡುವದು ಅಥವಾ ಔಷಧವನ್ನಾರಿಸುವದು ಹೇಗೆ:—** ಚಿಕಿತ್ಸಾಶಾಸ್ತ್ರದ ತತ್ವ, ರೋಗನಿವಾರಣೆಗಾಗಿ ಔಷಧವನ್ನು ಸೂಕ್ಷ್ಮಪ್ರಮಾಣದಲ್ಲಿ ಕೊಡುವ ಅವಶ್ಯಕತೆ, ಅವುಗಳನ್ನು ಸಿದ್ಧಮಾಡುವ ಕೃತಿ ಅಥವಾ ಪದ್ಧತಿ ಇವುಗಳನ್ನು ಹೇಳಿದ ನಂತರ ರೋಗನಿವಾರಣಕ್ಕಾಗಿ ಔಷಧವನ್ನಾರಿಸುವದು ಹೇಗೆ ಮತ್ತು ಅದನ್ನು ಕೊಡುವದು ಯಾವಾಗ ಮತ್ತು ಹೇಗೆ ಇದರ ವಿಚಾರ ಈಗ ಮಾಡತಕ್ಕದ್ದದೆ. ಜೀವನರಸಾಯನಶಾಸ್ತ್ರದ ಔಷಧವನ್ನಾರಿಸುವ ಸಮಯದಲ್ಲಿ ಯಾವ ರೋಗವಾಗಿದೆ ಇದನ್ನಷ್ಟೇ ವಿಚಾರಮಾಡಿ ಸಾಗಲಾರದು. ರೋಗವುಳ್ಳವನಿಗೆ ಆಗುವ ಭಾವನೆಗಳನ್ನು ಅಥವಾ ಲಕ್ಷಣಗಳನ್ನು ತಿಳಕೊಂಡು ಅದರ ಮೇಲಿಂದ ಶರೀರದಲ್ಲಿ ಯಾವ ಕ್ಷಾರಗಳು ಕಡಿಮೆಯಾಗಿರುವವು ಇದನ್ನು ಗೊತ್ತುಪಡಿಸಬೇಕಾಗುತ್ತದೆ. ಅನಂತರ ಅವೇ ಕ್ಷಾರಗಳ ಯೋಜನೆ ಮಾಡತಕ್ಕದ್ದೆಂಬದನ್ನು ಲಕ್ಷದಲ್ಲಿಡತಕ್ಕದ್ದು. ರೋಗವುಳ್ಳವನಿಗೆ ಯಾವ ರೋಗವಾಗಿದೆಂಬದನ್ನು ತಿಳಿದುಕೊಳ್ಳುವದುತೂ ಅವಶ್ಯವೇ ಸರಿ. ರೋಗವುಳ್ಳವನ ಶುಶ್ರೂಷೆಮಾಡುವ ದೃಷ್ಟಿಯಿಂದ ಇದರ ಮಹತ್ವವು ಬಹಳೇ ಇದೆ. ರೋಗವು ಯಾವದಿದೆ, ಅದು ಎಷ್ಟರ ಮಟ್ಟಿಗೆ ಬೆಳೆದಿದೆ, ಆದರ ಸಾಧ್ಯಾಸಾಧ್ಯ ವಿಚಾರವು ಹೇಗೆ, ಅದು ಮುಂದೆ ಯಾವ ರೂಪವನ್ನು ಹೊಂದುವದು, ಪ್ರಕೃತಿಯ ಮೇಲೆ ಅದರ ಪರಿಣಾಮವೇನಾಗುವದು, ಮುಂದೆ ಆ ರೋಗದ ಅನಿಷ್ಟ ಪರಿಣಾಮಗಳನ್ನು ಹೇಗೆ ತಪ್ಪಿಸಬಹುದು, ರೋಗವುಳ್ಳವನ ಪಥ್ಯ ಮುಂತಾದವುಗಳಲ್ಲಿ ಏನು ಬದಲು ಮಾಡತಕ್ಕದ್ದು— ಈ ಎಲ್ಲ ಸಂಗತಿಗಳ ವಿಚಾರಮಾಡುವದಕ್ಕೋಸ್ಕರ

ರೋಗನಿದಾನದ ಅವಶ್ಯಕತೆ ಅದೆ ಎಂದು ಹೇಳುವದು ಅನವಶ್ಯಕ. ಆದರೆ ಜೀವನರಸಾಯನ ಪದ್ಧತಿಯ ಮೇರೆಗೆ ಔಷಧವನ್ನಾರಿಸುವ ಕಾಲಕ್ಕೆ ರೋಗವು ಯಾವದು ಆಗಿದೆ ಎಂಬ ಮಾತಿನ ವಿಚಾರಣೆಯು ಅಷ್ಟು ಮಹತ್ವದ್ದಲ್ಲ. ಯಾಕೆಂದರೆ, ಒಂದೇ ರೋಗದಿಂದ ಪೀಡಿತರಾದ ಬೇರೆ ಬೇರೆ ರೋಗಿಗಳಲ್ಲಿ ಬೇರೆಬೇರೆ ಕ್ಷಾರಗಳು ಕಡಿಮೆಯಾಗಿರುವ ಸಂಭವವಿದೆ. ಇಂಥ ಸಮಯದಲ್ಲಿ ಒಂದೇತರದ ಚಿಕಿತ್ಸೆಮಾಡಿ ಸಾಗಲಾರದು. ರೋಗವು ಒಂದೇ ಇದ್ದರೂ ರೋಗಿಗಳ ಭಾವನೆಗಳು ಬೇರೆಬೇರೆ ಇರಬಹುದು. ಮತ್ತು ಭಿನ್ನ ಭಿನ್ನ ಭಾವನೆಗಳಿಗನುಸರಿಸಿ ಬೇರೆಬೇರೆ ರೋಗಿಗಳಿಗೆ ಬೇರೆ ಬೇರೆ ಔಷಧಗಳ ಯೋಜನೆಮಾಡುವ ಅವಶ್ಯಕತೆಯುಂಟಾಗುವದು. ಸಾರಾಂಶವೇನೆಂದರೆ— ಬೇರೆಬೇರೆ ರೋಗಿಗಳಲ್ಲಿಯ ಭಾವನೆಗಳನ್ನು ನೋಡಿಕೊಂಡು ಅದರ ಮೇಲಿಂದ ಕೊರತೆಯಾದಂತೆ ಕಾಣುವ ಕ್ಷಾರಗಳನ್ನು ಪೂರೈಸಿಕೊಡುವದು ಅಂದರೆ ಆ ಔಷಧದ ಯೋಜನೆ ಮಾಡತಕ್ಕದ್ದು— ಈ ಸಂಗತಿಯನ್ನು ಮುಖ್ಯತಃ ಲಕ್ಷ್ಯದಲ್ಲಿಡತಕ್ಕದ್ದು. *

ಮುಂದೆ ನಿದಾನಪ್ರಕರಣದಲ್ಲಿ ೧೨ ಕ್ಷಾರಗಳ ಲಕ್ಷಣಗಳು ಕೊಡಲ್ಪಟ್ಟಿವೆ. ಅದಕ್ಕನುಸರಿಸಿ ರೋಗಿಯನ್ನು ನೋಡಿದಕೂಡಲೆ ಅವನ ಮುಖಚರ್ಯೆ ಮುಂತಾದವುಗಳ ಮೇಲಿಂದ ರೋಗಿಯ ಶರೀರದಲ್ಲಿ ಕ್ಷಾರವಾವುದು ಕಡಿಮೆಯಾಗಿರಬೇಕೆಂಬದನ್ನು ಅಂದರೆ ಯಾವ ಕ್ಷಾರವು ಕೊಟ್ಟರೆ ರೋಗನಿವಾರಣೆಯಾಗುವದೆಂಬದನ್ನು ಲಕ್ಷ್ಯದಲ್ಲಿ ತರಬೇಕು. ಅದೇ ಪ್ರಕಾರ ರೋಗದ ಲಕ್ಷಣಗಳ ಮೇಲಿಂದ ಸಹ ರೋಗನಿದಾನಕ್ಕೆ

---

* ವಿಕೃತ ವಿಜ್ಞಾನ ( Pathology ) ದ ಪೂರ್ಣಜ್ಞಾನವಿದ್ದ ವೈದ್ಯನು ರೋಗವು ಯಾವ ಅವಸ್ಥೆಯಲ್ಲಿ ಇದೆ ಎಂಬುದನ್ನು ನೋಡಿ ಆ ಸ್ಥಿತಿಗೆ ಸರಿಯಾಗಿದ್ದ ಔಷಧವನ್ನು ವಿಕೃತ ವಿಜ್ಞಾನಶಾಸ್ತ್ರದ ಸಹಾಯದಿಂದ ಜೀವನ ರಸಾಯನ ಶಾಸ್ತ್ರದಲ್ಲಿಯ ಔಷಧವನ್ನು ಆರಿಸಿ ತೆಗೆಯಬಹುದು. ಆದರೂ ಒಂದೇ ಸ್ಥಿತಿಯಲ್ಲಿದ್ದ ಬೇರೆ ಬೇರೆ ರೋಗಿಗಳಲ್ಲಿ ಬೇರೆ ಬೇರೆ ಭಾವನೆಗಳು ಕಂಡುಬಂದರೆ ಒಂದೇ ಔಷಧವನ್ನು ಕೊಟ್ಟರೆ ಕಾರ್ಯವಾಗಲಾರದು. ಕೊನೆಗೆ ಭಾವನೆಗಳನ್ನೂ ನೋಡಿಯೇ ಔಷಧವನ್ನು ನಿಶ್ಚಯಿಸಬೇಕಾಗುವದು. ಇದರ ಮೇಲಿಂದ ವಿಕೃತವಿಜ್ಞಾನಶಾಸ್ತ್ರದ ಮಹತ್ವವು ಕಡಿಮೆಯೆಂದು ಊಹಿಸಕೂಡದು.

ಸಹಾಯವಾಗುತ್ತದೋ ಹೇಗೆ ಎಂಬದನ್ನು ವಿಚಾರಮಾಡಬೇಕು. ರೋಗಿಗೆ ಆಗತಕ್ಕ * ಭಾವನೆಗಳನ್ನು ಅವನ ಹೇಳಿಕೆಯ ಮೇರೆಗೆ ಅಥವಾ ಆಪ್ತೇಷ್ಟರ ಹೇಳಿಕೆಯ ಮೇರೆಗೆ ಟಿಪ್ಪಣಿ ಮಾಡಬೇಕು. ಅದಕ್ಕನುಸರಿಸಿ ಏನಾದರೂ ತಿಳಿದುಕೊಳ್ಳಲವಶ್ಯವಿದ್ದ ಸಂಗತಿಯನ್ನು ಸಹ ರೋಗಿಯ ಕಡೆಯಿಂದಾಗಲಿ ಅವನಾಪ್ತೇಷ್ಟರ ಕಡೆಯಿಂದಾಗಲಿ ತಿಳಿದುಕೊಳ್ಳಬೇಕು. (ಸೂಚಕ ಪ್ರಶ್ನೆಮಾಡದೆ) ಮತ್ತು ಅದನ್ನು ಸಹ ಟಿಪ್ಪಣಿ ಮಾಡಬೇಕು. ರೋಗಿಯು ಮತ್ತು ಅವನ ಆಪ್ತೇಷ್ಟರು ಹೇಳಿದ ಭಾವನೆಗಳನ್ನು ಬರೆದಿಟ್ಟ ನಂತರ ಸ್ವತಃ ನಾಡಿ ನೋಡತಕ್ಕದ್ದು. ಕಣ್ಣು ಪರೀಕ್ಷಿಸಬೇಕು. ಮತ್ತು ಶರೀರದ ಇತರ ದೃಷ್ಟಿಯಿಂದ ಸಹ ಪರೀಕ್ಷೆಮಾಡಬೇಕು. ಔಷಧ ಆರಿಸುವ ದೃಷ್ಟಿಯಿಂದ ಕಂಡುಬರುವ ಸಂಗತಿಗಳನ್ನು ಸಹ ಬರೆದಿಡಬೇಕು. ಈ ಸಂಗತಿಯನ್ನು, ಮುಂದೆ ಪ್ರಕೃತಿಯಲ್ಲಿ ಆಗುವ ಹೆಚ್ಚುಕಡಿಮೆಯನ್ನೂ ಬರೆದಿಡಬೇಕು. ಕೇವಲ ನೆನಪಿನ ಮೇಲೆ ಅವಲಂಬಿಸಿರಬಾರದು. ಮೊದಲಿನ ಲಕ್ಷಣಗಳಾವವು ಮುಂದೆ ಅವು ಹೇಗೆ ಬದಲಾಗುತ್ತ ಹೋದವು ಎಂಬದನ್ನು ತಿಳಕೊಳ್ಳುವ ದೃಷ್ಟಿಯಿಂದಂತೂ ಹಾಗೂ ರೋಗವು ಬಹಳ ದಿವಸದಿಂದ ಇದ್ದಲ್ಲಂತೂ ಲಕ್ಷಣಗಳನ್ನು ಬರೆದಿಡುವದು ಅತ್ಯವಶ್ಯಕವು. ಈ ಲಕ್ಷಣಗಳನ್ನು ಲಕ್ಷ್ಯದಲ್ಲಿ ತಂದು ಮುಂದೆ ಹೇಳಿದ ೧೨ ಕ್ಷಾರಗಳ ಗುಣಧರ್ಮಕ್ಕೆ ಅಂದರೆ ಭಾವನೆಗಳಿಗೆ ಅವು ಹೇಗೆ ಹೊಂದುತ್ತವೆ ಎಂಬದನ್ನು ನೋಡಿಕೊಂಡು ಯಾವ ಔಷಧವನ್ನು ಕೊಡತಕ್ಕದ್ದು ಎಂಬದನ್ನು ಆರಿಸಬೇಕು. ಒಮ್ಮೊಮ್ಮೆ ಒಂದೇ ಕ್ಷಾರಕ್ಕೆ ಹೊಂದುವಂಥ

---

* ಭಾವನೆಗಳ ಪ್ರಕಾರಗಳೆರಡು. ಸ್ವಸಂವೇದ್ಯ (Subjective) ಮತ್ತು ಪರಸಂವೇದ್ಯ (Objective) ಬಾಹ್ಯಸ್ವರೂಪದ ಮೇಲಿಂದ ತಿಳಿಯಲಿಕ್ಕೆ ಬರದಂಥ ಹಾಗೂ ಬೇರೊಬ್ಬರಿಗೆ ಅನುಭವವಾಗಲಶಕ್ಯವಿದ್ದಂಥ ಮತ್ತು ರೋಗಿಯು ಸ್ವತಃ ವರ್ಣನಮಾಡಿದ್ದರಿಂದಲೇ ತಿಳಿಯಬರುವಂಥ ಭಾವನೆಗಳು ಸ್ವಸಂವೇದ್ಯ ಭಾವನೆಗಳು. ವೇದನೆ, ಕಳೆ, ಮಳಮಳಿಸುವದು, ಕಣ್ಣಿಗೆ ಕತ್ತಲೆಬರುವದು ಮುಂತಾದ ಭಾವನೆಗಳು ಸ್ವಸಂವೇದ್ಯ ಭಾವನೆಗಳು. ಕೆಂಪಾಗುವದು, ಬಾವು, ಕೆಮ್ಮು, ಬದಲಾದ ಮುಖಲಕ್ಷಣವು, ಕಣ್ಣು, ಚಲನವಲನ, ಮೂತ್ರ, ಕಫ, ಮಾತು ಮುಂತಾದವುಗಳಲ್ಲಿ ಆದಲು ಬದಲು ಕಂಡಕೂಡಲೆ ಬೇರೊಬ್ಬರಿಗೆ ತಿಳಿಯಲು ಶಕ್ಯವಿದ್ದ ಭಾವನೆಗಳು ಪರಸಂವೇದ್ಯ ಭಾವನೆಗಳು.

ಭಾವನೆಗಳು ಕಡಿಮೆ ಇದ್ದದ್ದು ಕಂಡುಬರುತ್ತವೆ. ಆಗ್ಗೆ ಒಂದೇ ಕ್ಷಾರ ವನ್ನು ಔಷಧವೆಂದು ಕೊಡಬೇಕು. ಒಮ್ಮೊಮ್ಮೆ ಒಂದಕ್ಕಿಂತ ಹೆಚ್ಚು ಕ್ಷಾರಗಳಿಗೆ ಹೊಂದುವಂಥ ಭಾವನೆಗಳು ಕಡಿಮೆ ಇದ್ದದ್ದು ಕಂಡುಬರು ತ್ತವೆ. ಅಂಥ ಪ್ರಸಂಗದಲ್ಲಿ ಕಡಿಮೆ ಕಂಡುಬರುವ ಎಲ್ಲ ಕ್ಷಾರಗಳನ್ನು ಕೊಡತಕ್ಕದ್ದು. ಚಿಕಿತ್ಸೆಯ ಪ್ರಾರಂಭದಲ್ಲಿದ್ದ ಎಲ್ಲ ಭಾವನೆಗಳು ಕಡೆಯವರೆಗೆ ಹಾಗೇ ಇರುತ್ತವೆಂದು ಹೇಳಲಶಕ್ಯವು. ಔಷಧೋಪಚಾರ ದಿಂದಾಗಲಿ ಇತರ ಯಾವದೇ ಕಾರಣದಿಂದಾಗಲಿ ಭಾವನೆಗಳು ಹೆಚ್ಚು ಕಡಿಮೆಯಾಗಬಹುದು. ಆಗಾಗ್ಗೆ ಭಾವನೆಗಳಲ್ಲಿ ಹೆಚ್ಚು ಕಡಿಮೆ ಆಗುತ್ತ ಹೋದಂತೆ ಅಂದರೆ ಯಾವ ಕ್ಷಾರಗಳ ಕೊರತೆಯು ಪೂರೈಸಲ್ಪಟ್ಟಿದೆ ಮತ್ತು ಯಾವ ಕ್ಷಾರಗಳ ಕೊರತೆಯು ಇನ್ನೂ ಇರುವದು ಎಂಬದನ್ನು ಲಕ್ಷದಲ್ಲಿ ತಂದುಕೊಂಡು, ಔಷಧದಲ್ಲಿ ಹೆಚ್ಚು ಕಡಿಮೆ ಮಾಡತಕ್ಕದ್ದು. "೧೨ ಕ್ಷಾರಗಳ ಗುಣಧರ್ಮ" ಪ್ರಕರಣದಲ್ಲಿ ೧೨ ಕ್ಷಾರಗಳ ಗುಣಧರ್ಮ ಗಳು ಸಂಪೂರ್ಣವಾಗಿ ಹೇಳಲ್ಪಟ್ಟಿವೆ. "ಕಾರ್ಯಕ್ಷೇತ್ರ" ವೆಂಬ ಭಾಗದಲ್ಲಿ ಆಯಾ ಕ್ಷಾರಗಳ ಕಾರ್ಯದವ್ಯಾಪ್ತಿ, ಮಾನವೀಶರೀರದಲ್ಲಿ ಯಾವದು ಮತ್ತು ಯಾವ ಯಾವ ಸ್ವರೂಪದಲ್ಲಿರುವದು ಎಂಬದನ್ನು ವಿಸ್ತಾರದಿಂದ ಹೇಳಿದೆ. ಆನಂತರ "ಪ್ರಮುಖ ಲಕ್ಷಣ" ಗಳೆಂಬ ಭಾಗದಲ್ಲಿ ಬೇರೆಬೇರೆ ಒಳಭಾಗಗಳನ್ನು ಮಾಡಿ ಆಯಾ ಭಾಗಗಳಲ್ಲಿ ಆಯಾ ಕ್ಷಾರಗಳಿಂದಾಗುವ ಭಾವನೆಗಳನ್ನು ವಿಸ್ತಾರದಿಂದ ಹೇಳಿದೆ. ರೋಗಿಗಳ ಭಾವನೆಗಳನ್ನು ಟಿಪ್ಪಣಿಮಾಡುವ ಕಾಲದಲ್ಲಿ ಮೇಲೆ ಹೇಳಿದ ಭಾಗಗಳನ್ನು ಅವಶ್ಯವಾಗಿ ಲಕ್ಷದಲ್ಲಿಟ್ಟುಕೊಂಡು ಆಯಾ ಭಾಗಗಳಿಗೆ ಅನುಸರಿಸಿ ಟಿಪ್ಪಣಿಮಾಡಿ ಕೊಳ್ಳಬೇಕು. ಅದೇ ಪ್ರಕಾರ ಔಷಧದ ಕಾರ್ಯವು ಯಾವ ಕ್ಷೇತ್ರದಲ್ಲಿ ನಡೆದದೆ ಹಾಗೂ ರೋಗಿಯ ಭಾವನೆಗಳು ಯಾವ ಕ್ಷೇತ್ರದಲ್ಲಿಯ ವ್ಯತ್ಯಾಸದ ದ್ಯೋತಕಗಳಿವೆ ಎಂಬದನ್ನು ನೋಡಿ ಆಯಾ ವಿಶಿಷ್ಟ ಕ್ಷೇತ್ರ ವಿಕೃತಿಗೆ ಯಾವ ಕ್ಷಾರಗಳು ಉಪಯೋಗವಾಗುವವು ಎಂಬದನ್ನು ವಿಚಾರಿಸಿ ಅದಕ್ಕನುಸರಿಸಿ ಔಷಧಯೋಜನೆ ಮಾಡಬೇಕು. ಉದಾಹರ ಣಾರ್ಥ— "ಕಲ್ಕೇರಿಯಾಫಾಸ" ಈ ಔಷಧವನ್ನು ತಕ್ಕೊಳ್ಳಿರಿ. ಈ ಔಷಧದ ಕಾರ್ಯದ ವ್ಯಾಪ್ತಿಯು ಎಲ್ಲಿ ಇದೆ? ಹಲ್ಲು, ಅಸ್ಥಿ, ಸಂಯೋ

ಜಕಧಾತು, ರಕ್ತದಲ್ಲಿಯ ಪಿಂಡಗಳು, ಮುಂತಾದ ಕ್ಷೇತ್ರಗಳಲ್ಲಿ ಅದರ ವ್ಯಾಪ್ತಿಯುಂಟು. ಈ ಕ್ಷೇತ್ರದಲ್ಲಿ ವ್ಯತ್ಯಾಸವು ಕಂಡುಬಂದರೆ ಮುಖ್ಯವಾಗಿ 'ಕಲ್ಕೇರಿಯಾಫಾಸ'ದ ಯೋಜನೆಮಾಡಲೇಬೇಕು. ಆದರೆ ಹಲ್ಲಿನ ರೋಗವಿದ್ದು ಹಲ್ಲಿನ ಕ್ಷೇತ್ರದಲ್ಲಿಯೇ ವ್ಯತ್ಯಾಸವಾಗಿದ್ದರೆ ಇಲ್ಲಿಯೇ ಇತರ ಕ್ಷಾರಗಳ ಕೊರತೆಯಾದಂತೆ ಕಂಡುಬಂದರೆ ಇತರ ಲಕ್ಷಣದ ಮೇಲಿಂದ ಕಡಿಮೆಯಾದಂತೆ ಕಂಡುಬರುವ ಇತರ ಕ್ಷಾರಗಳನ್ನು ಸಹ ಕಲ್ಕೇರಿಯಾಫಾಸದ ಜೊತೆಗೆ ಕೊಡಬೇಕಾಗುವದು. ಪ್ರಾರಂಭದಲ್ಲಿ ಒಂದೇ ಕ್ಷಾರವು ಕಡಿಮೆಯಾಗಿ ಒಂದೇ ವಿಕೃತಿಯು ಉಂಟಾಗುತ್ತದೆ. ಅದೇ ಕಾಲಕ್ಕೆ ಚಿಕಿತ್ಸೆಮಾಡದೇ ಇದ್ದದರಿಂದಾಗಲಿ ದುರ್ಲಕ್ಷ್ಯದಿಂದಾಗಲಿ ವಿಕೃತಿಯು ಹೆಚ್ಚಾಗುತ್ತದೆ. ಅಂಥ ಪ್ರಸಂಗದಲ್ಲಿ ಎಲ್ಲ ಕ್ಷಾರಗಳನ್ನು ಕೊಡುವದಶಕ್ಯವೇ ಸರಿ. ಅದೇ ಪ್ರಕಾರ ಪ್ರಕೃತಿಯು ಸುಧಾರಿಸುತ್ತ ಹೋದಂತೆ ಅಂದರೆ ಕ್ಷಾರಗಳ ಪೂರೈಕೆಯು ಆಗುತ್ತಬಂದಂತೆ ಆ ಆ ಕ್ಷಾರಗಳನ್ನು ಕೊಡುವದು ಕಡಿಮೆಮಾಡಬೇಕು. ಸಾರಾಂಶವೇನಂದ್ಯರೆ ರೋಗಿಯ ಪ್ರಕೃತಿಯಲ್ಲಿ ಲಕ್ಷಣಗಳು ಹೆಚ್ಚುಕಡಿಮೆಯಾದಂತೆ ಔಷಧ ದಲ್ಲಿಯೂ ಹೆಚ್ಚುಕಡಿಮೆ ಮಾಡುವದು ಅವಶ್ಯಕ. ರೋಗಿಗಳಲ್ಲಿ ಕಂಡು ಬರುವ ಎಲ್ಲ ಭಾವನೆಗಳು ಮಹತ್ವವುಳ್ಳವೆಂದು ತಿಳಿಯಕೂಡದು. ಕೆಲವು ಭಾವನೆಗಳಿಂದ ಇಂಥ ಕ್ಷಾರವೇ ಕಡಿಮೆಯಾಗಿದೆ ಎಂದನ್ನ ಕೂಡದು. ಒಂದೇ ಭಾವನೆಯ ಮೇಲಿಂದ ಇತರ ಕ್ಷಾರಗಳು ಸಹ ಕಡಿಮೆಯಾಗಿರಲಿಕ್ಕೆ ಸಾಕು. ಇತರ ಕ್ಷಾರಗಳ ಕೊರತೆಯು ದ್ಯೋತಕ ವಿರಬಹುದು. ಇಂಥ ಸಮಯದಲ್ಲಿ ಕಡಿಮೆ ಮಹತ್ವವುಳ್ಳ ಮತ್ತು ಸಾಮಾನ್ಯ ಭಾವನೆಗಳ ಕಡೆಗೆ ಲಕ್ಷ್ಯಕೊಡದೆ ವಿಶೇಷ ಮಹತ್ವದ ಭಾವನೆ ಗಳು ರೋಗಿಯಲ್ಲಿ ಇಪ್ಪದ್ದರ ಕಡೆಗೆ ಲಕ್ಷ್ಯಕೊಡಬೇಕು. ಆ ಮಹತ್ವದ ಭಾವನೆಗನುಸರಿಸಿ ಔಷಧದ ಯೋಜನೆ ಗೊತ್ತುಪಡಿಸಬೇಕು. ಹೀಗೆ ಗೊತ್ತುಪಡಿಸುವದು ಶಕ್ಯವಿಲ್ಲದಿದ್ದರೆ ಕಡಿಮೆ ಇದ್ದಂತೆ ಕಂಡುಬರುವ ಕ್ಷಾರಗಳನ್ನೆಲ್ಲ ಅದಲುಬದಲು ಮಾಡಿಕೊಡಬೇಕು. ಒಂದಕ್ಕಿಂತ ಹೆಚ್ಚು ಔಷಧಗಳನ್ನು ಕೊಡುವದು ಈ ಚಿಕಿತ್ಸಾಪದ್ಧತಿಯಲ್ಲಿ ವಾಡಿಕೆಯಿದ್ದದ ರಿಂದ ಔಷಧ ಯೋಜನೆಮಾಡುವದು ಬಹಳ ಕಠಿಣ ಕೆಲಸವಲ್ಲವೆಂಬದು

ಸಹಜವೇ ಲಕ್ಷ್ಯದಲ್ಲಿ ಬರುವದು. ಔಷಧಯೋಜನೆ ಮಾಡಬೇಕಾದರೆ ಔಷಧಗಳ ಗುಣಧರ್ಮದ ಜ್ಞಾನವು ಸಂಪೂರ್ಣವಿರಬೇಕು. ಹೀಗಿಲ್ಲದಿದ್ದರೆ ಭಾವನೆಗಳ ಮೇಲಿಂದ ಔಷಧಯೋಜನೆ ಮಾಡುವದು ಕಠಿಣವಾಗುವದು. ಆದ್ದರಿಂದ ಔಷಧಗಳ ಗುಣಧರ್ಮದ ಜ್ಞಾನವನ್ನು ಚೆನ್ನಾಗಿ ಸಂಪಾದಿಸಬೇಕು. ಔಷಧಗಳ ಭಾವನೆಗಳ ಜ್ಞಾನಕ್ಕಿಂತ ಔಷಧಗಳ ಕಾರ್ಯದ ವ್ಯಾಪ್ತಿಯು ಜ್ಞಾನದ ಉಪಯೋಗವು ಹೆಚ್ಚು ಅವಶ್ಯವದೆ. ವಿಶಿಷ್ಟ ಮನುಷ್ಯನ ಸ್ವಭಾವ ಮತ್ತು ಅವನ ಪರಿಸ್ಥಿತಿಯು ಕಲ್ಪನೆ ಇದ್ದರೆ ಅವನ ಕಡೆಯಿಂದ ಯಾವದೊಂದು ಕಾರ್ಯವಾಗುವದೋ ಇಲ್ಲವೋ ಎಂಬದರ ಬಗ್ಗೆ ನಾವು ಅನುಮಾನ ಅಥವಾ ಅಂದಾಜು ಕಟ್ಟುತ್ತೇವೆ. ವಿಶಿಷ್ಟ ಕಾರ್ಯವು ಅವನ ಕಡೆಯಿಂದ ಆಗದೇ ಇದ್ದರೂ ಸಹ, ಅವನಿಗೆ ಅದು ಶಕ್ಯವದೆಯೋ ಇಲ್ಲವೋ ಎಂಬದರ ಬಗ್ಗೆ ಸಹ ಅನುಮಾನ ಮಾಡುತ್ತೇವೆ. ಎಷ್ಟೋ ಸಾರೆ ಈ ಅನುಮಾನಗಳು ಸರಿಯಾಗುತ್ತವೆ. ಅದೇ ಮೇರೆಗೆ ಔಷಧದ ಸಂಬಂಧದಿಂದ ಸಹ ತಿಳಕೊಳ್ಳಬೇಕು. ಔಷಧದ ಕಾರ್ಯದ ವ್ಯಾಪ್ತಿ ಅಥವಾ ಕಾರ್ಯಕ್ಷೇತ್ರ, ಅದರ ಮುಖ್ಯ ಸ್ವಭಾವ ಮತ್ತು ಬೇರೆಬೇರೆ ಸದರುಗಳಲ್ಲಿ ಹೇಳಿದ ಭಾವನೆಗಳು, ಆ ಔಷಧದಿಂದ ಆಗತಕ್ಕ ಕಾರ್ಯಗಳು ಇವೆಲ್ಲ ತಿಳಿದರೆ ಆ ಔಷಧದಿಂದ ಅದರ ಸ್ವಭಾವಕ್ಕನುಸರಿಸಿ ಆಗತಕ್ಕ ಇತರ ಕಾರ್ಯಗಳಾಗುವವು ಮತ್ತು ಇತರ ಭಾವನೆಗಳ ಮೇಲೆ ಅದು ನಾಟುವದೋ ಇಲ್ಲವೋ ಎಂಬ ಬಗ್ಗೆ ಸಹಜ ಅನುಮಾನ ಮಾಡಬಹುದು. ಮನುಷ್ಯನಂತೆಯೇ ಔಷಧದ್ದಾದರೂ ವಿಶಿಷ್ಟ ಸ್ವಭಾವವಿರುತ್ತದೆ. ಅದರ ಮೇಲಿಂದ ಅನುಮಾನ ಮಾಡತಕ್ಕದ್ದಿರುತ್ತದೆ. ಔಷಧವು ಕಾರ್ಯಮಾಡತಕ್ಕ ಕ್ಷೇತ್ರದಲ್ಲಿ (ಅಂದರೆ ಅವಯುವ ಅಥವಾ ಧಾತು) ವ್ಯತ್ಯಾಸವಾದರೆ ಕೆಲವು ಲಕ್ಷಣಗಳು ಕಂಡು ಬರುತ್ತವೆ. ಆದರೆ ಆ ಲಕ್ಷಣಗಳು ಔಷಧದ ಗುಣಧರ್ಮದಲ್ಲಿ ಕಂಡು ಬರುವದಿಲ್ಲ. ಇಂಥ ಪ್ರಸಂಗದಲ್ಲಿ ಆ ಔಷಧವು ಉಪಯೋಗವಾಗುವದಿಲ್ಲೆಂದು ಒಮ್ಮೆಲೆ ನಿಶ್ಚಯಿಸಬಾರದು. ಆ ಕ್ಷೇತ್ರದಲ್ಲಿ ಇತರ ಕ್ಷಾರಗಳಾವವು ಕಾರ್ಯಮಾಡುತ್ತವೆಂಬದನ್ನು ಮತ್ತು ಆ ಭಾವನೆಗಳಿಗೆ ಈ ಭಾವನೆಗಳು ಹೊಂದುತ್ತವೆಂಬದನ್ನು ಸಹ ನೋಡಬೇಕು. ಹೊಂದು

ತ್ತಿದ್ದರೆ ಆ ಕ್ಷಾರದ ಉಪಯೋಗ ಮಾಡಬೇಕು. ಯಾವ ಕ್ಷಾರದ ಲಕ್ಷಣಕ್ಕೂ ಹೊಂದದಿದ್ದರೆ ಔಷಧದ ಸ್ವಭಾವದ ಕಡೆಗೆ ಲಕ್ಷ್ಯಕೊಟ್ಟು ಕ್ಷಾರವು ಸಾಕಷ್ಟು ಕೊಟ್ಟಿಲ್ಲವೆಂದು ತಿಳಿದು ಅದೇ ಕ್ಷಾರವನ್ನು ಮತ್ತೆ ಕೊಡಬೇಕು. ಆದರೆ ಔಷಧದ ಗುಣಧರ್ಮಗಳು ಚನ್ನಾಗಿ ತಿಳಿಯದ ಹೊರತು ಹೀಗೆ ಮಾಡಲಾಗದು; ಇದನ್ನು ಮರೆಯಕೂಡದು.

ಲಕ್ಷಣಾನುಸಾರವಾಗಿ ಔಷಧಯೋಜನೆಯು ಯೋಗ್ಯವಾಗಿದ್ದರೂ ಸಹ ಎಷ್ಟೋಸಾರೆ ಗುಣವು ಕಂಡುಬರುವದಿಲ್ಲ. ಇಂಥ ಪ್ರಸಂಗದಲ್ಲಿ ಕೊಟ್ಟ ಔಷಧವು ಸರಿಯಲ್ಲವೆಂದು ಗಡಿಬಿಡಿಮಾಡಿ ಔಷಧವನ್ನು ಬದಲು ಮಾಡಬಾರದು. ಭಾವನೆಗಳ ಯೋಗ್ಯ ವಿಚಾರಮಾಡಿ ಕೊಟ್ಟ ಔಷಧವು ಸರಿಯಾದದ್ದೆಂದು ಮತ್ತೊಂದುಸಾರೆ ತಮ್ಮ ಮನಸ್ಸಿನ ನಂಬಿಕೆಯನ್ನು ದೃಢಮಾಡಿಕೊಂಡು ಅದೇ ಔಷಧವನ್ನು ಬೇರೆ * ಸಾಮರ್ಥ್ಯವುಳ್ಳದ್ದನ್ನು ಕೊಡಬೇಕು. ಔಷಧದ ಶಕ್ತಿ ಅಥವಾ ಸಾಮರ್ಥ್ಯವನ್ನು ಬದಲುಮಾಡಿದರೆ ಗುಣಮುಖವಾಗುವ ಸಂಭವವಿರುತ್ತದೆಂಬದು ಅನುಭವದಿಂದಲೇ ತಿಳಿಯುವ ಸಂಗತಿ. ಎಷ್ಟೋಸಲ "ಕಲ್ಕೇರಿಯಾಫಾಸ"ದಂಥ ಪ್ರಾಕೃತಿಕ ದೋಷವನ್ನು ಸಹ ಇಲ್ಲದಂತೆ ಮಾಡುವ ಔಷಧಗಳು ನಡುನಡುವೆ ಕೊಟ್ಟರೆ ಮುಖ್ಯ ಔಷಧದ ಕಾರ್ಯವು ಸುಲಭವಾಗುವ ಸಂಭವವಿರುತ್ತದೆ. ಆದ್ದರಿಂದ "ಕಲ್ಕೇರಿಯಾಫಾಸ" ಔಷಧವನ್ನು ನಡುನಡುವೆ ಕೊಡುತ್ತಿರಬೇಕು. ನಿಯೋಜಿತ ಔಷಧದಿಂದ ಅರ್ಧಮರ್ಧ ಗುಣಬಂದದೆ. ಮುಂದೆ ಗುಣವು ಸಾಕಷ್ಟು ಬರಲಿಲ್ಲವೆಂದು ಕಂಡುಬಂದರೆ ಔಷಧದ ಶಕ್ತಿಯನ್ನು ಬದಲಿಸಬೇಕು. ಇಲ್ಲವೆ ಕಲ್ಕೇರಿಯಾಫಾಸದಂಥ ಔಷಧವನ್ನು ನಡುನಡುವೆ ಕೊಡಬೇಕು. ಅಂದರೆ ಗುಣಮುಖವಾಗುವ ಸಂಭವವಿರುತ್ತದೆ. ಅಥವಾ ಔಷಧಕ್ಕೆ ಸಹಾಯಕ ಔಷಧವೆಂದು ಎರಡನೇ ಔಷಧ ಕೊಟ್ಟರೆ ಸಹ ಇಷ್ಟಕಾರ್ಯವಾಗುತ್ತದೆ. ಉದಾಹರಣಾರ್ಥ "ಕಲ್ಕೇರಿಯಾಫಾಸ"

* ಔಷಧದ ಸಾಮರ್ಥ್ಯ ಅಥವಾ ಶಕ್ತಿ ಇದರ ಬಗ್ಗೆ ಹೆಚ್ಚಿನ ಸಮಾಚಾರವನ್ನು ಸಾಮರ್ಥ್ಯ ಅಥವಾ ಶಕ್ತಿಯ ಯೋಜನೆ ಈ ಸದರಿನ ಕೆಳಗೆ ಕೊಟ್ಟಿರುತ್ತದೆ ಅದನ್ನು ನೋಡಬಹುದು.

ಮತ್ತು "ಮ್ಯಾಗ್ನೆಶಿಯಾಫಾಸ" ಇವೆರಡೂ ಒಂದಕ್ಕೊಂದು ಸಹಾಯಕರ ಔಷಧಗಳಿವೆ. ಅವುಗಳಲ್ಲಿ ಒಂದು ಔಷಧ ಕೊಟ್ಟನಂತರ ಅರ್ಧಮರ್ಧ ಗುಣಬಂದಿದ್ದರೆ ಎರಡನೇ ಔಷಧವನ್ನು ಪೂರಕ ಅಥವಾ ಸಹಾಯಕವೆಂದು ಕೊಟ್ಟರೆ ಅದರಿಂದ ಗುಣ ಬರುವ ಸಂಭವವಿರುತ್ತದೆ. ಇತರ ಎಷ್ಟೋ ಔಷಧಗಳ ಉಪಚಾರಮಾಡಿದಾಗ್ಯೂ ಗುಣವು ಬರದೇ ಇದ್ದರೆ ಹಾಗೂ ದುರ್ಲಕ್ಷ್ಯದಿಂದ ರೋಗವು ಬೆಳೆದಿದ್ದರೆ ಮತ್ತು ಕೊಡಲು ಗೊತ್ತುಪಡಿಸಿದ ಜೀವನರಸಾಯನ ಔಷಧದ ಕಾರ್ಯವು ಸುಲಭವಾಗುವದರ ಸಲುವಾಗಿಯೂ ಆರಂಭದಲ್ಲಿ "ಕಾಲೀಫಾಸ" ವೆಂಬ ಔಷಧವನ್ನು ಕೊಡುವ ಪದ್ಧತಿಯುಂಟು. ಕಾಲೀಫಾಸ ೩ × ಕೊಟ್ಟನಂತರ ಭಾವನೆಗಳಿಗೆ ಅನುಸರಿಸಿ ಎರಡನೆಯ ಔಷಧವನ್ನು ಕೊಡತಕ್ಕದ್ದು.

ಔಷಧದ ಯೋಜನೆ ಹೇಗೆ ಮಾಡಬೇಕೆಂಬದರ ಬಗ್ಗೆ ಇಲ್ಲಿಯವರೆಗೆ ತಿಳಿದಷ್ಟು ಮಟ್ಟಿಗೆ ತಿಳಿಸಲು ಯತ್ನಮಾಡಿದ್ದಾಯಿತು. ಇಷ್ಟರಿಂದಲೆ ವಿಷಯವು ತಿಳದೀತೆಂದು ತೋರುತ್ತದೆ. ವಿಷಯಾನುಕ್ರಮದಿಂದ "೧೨ ಕ್ಷಾರಗಳ ಗುಣಧರ್ಮ," "ಸಾಮಾನ್ಯರೋಗ," "ಜೀವನರಸಾಯನ ಚಿಕಿತ್ಸೆ" ಮತ್ತು "ಭಾವನಾಕೋಶ" ಈ ಪ್ರಕರಣಗಳ ಪ್ರಾರಂಭದಲ್ಲಿ ಕೊಟ್ಟ ಪ್ರಸ್ತಾವನೆಯಲ್ಲಿ ಹೆಚ್ಚಿಗೆ ವಿವರಿಸಿದ್ದೇವೆ. ಅದನ್ನು ಲಕ್ಷದಲ್ಲಿಟ್ಟು ಔಷಧದ ಯೋಜನೆ ಮಾಡಬೇಕು.

**ಔಷಧವನ್ನು ಕೊಡುವದು ಹೇಗೆ, ಎಷ್ಟುಸಾರೆ ಮತ್ತು ಯಾವಾಗ?**—ಜೀವನರಸಾಯನ ಔಷಧಗಳು ಚೂರ್ಣ ಅಥವಾ ವಟಿಕಾ (ಅಂದರೆ ಸಣ್ಣವಡೆಗಳು) ಸ್ವರೂಪದಲ್ಲಿ ಸಿದ್ಧಮಾಡುವದುಂಟು. ೬× ಶಕ್ತಿಯ ಕೆಲ ಔಷಧಗಳು ಮತ್ತು ೧೨× ಮೇಲಿನ ಶಕ್ತಿಯ ಔಷಧಗಳು ಪ್ರವಾಹೀ (ತೆಳ್ಳನ್ನ, ನೀರಿನಂಥ) ಸ್ವರೂಪದಲ್ಲಿ ಸಹ ಸಿದ್ಧಿಸಲ್ಪಡುತ್ತವೆ. ಆದರೂ ಪ್ರವಾಹೀರೂಪದ ಔಷಧಗಳನ್ನು ಸಹಸಾ ಉಪಯೋಗಿಸುವದಿಲ್ಲ. ಚೂರ್ಣ ಮತ್ತು ವಟಿಕಾರೂಪದಿಂದ ತೆಗೆದುಕೊಳ್ಳುವದು ಸುಲಭ ಮತ್ತು ಸುಖಕರ. ತೆಳ್ಳನ್ನ ಔಷಧಕ್ಕಿಂತಲೂ ಚೂರ್ಣ ಅಥವಾ ವಟಿಕಾರೂಪದ ಔಷಧಗಳ ಗುಣವು ಹೆಚ್ಚು ಸಮಾಧಾನಕಾರಕವಿರುತ್ತದೆಂದು ಕೆಲ

ಡಾಕ್ಟರರ ಅಭಿಪ್ರಾಯವು. ಗುಣಧರ್ಮ ಪ್ರಕರಣದ ಕೊನೆಗೆ ಪ್ರಮಾಣ ವೆಂಬ ಸದರಿನ ಕೆಳಗೆ ಔಷಧದ ಪ್ರಮಾಣವನ್ನು ಸ್ಥೂಲಮಾನದಿಂದ ಹೇಳಿದೆ. ಅದರ ಸ್ಪಷ್ಟೀಕರಣ ಇಲ್ಲಿ ಮಾಡುವದು ಅವಶ್ಯವಿದೆ. ಯೋಜಿಸ ಲ್ಪಟ್ಟ ಔಷಧವನ್ನು ೩, ೪ ಗ್ರೇನಿನಷ್ಟು (೩, ೪ ಗ್ರೇನ ಅಂದ್ರೆ ೧॥, ೨ ಗುಂಜಿ) ಚೂರ್ಣ ತೆಗೆದುಕೊಂಡು ನಾಲಗೆಯಮೇಲೆ ಇಡಬೇಕು. ಇಲ್ಲವೆ ಒಂದು ಚಮಚೆಯಲ್ಲಿ ತುಂಬಿಹಿಡಿಯುವಷ್ಟು ನೀರಿನಲ್ಲಿ ಹಾಕಬೇಕು. ಒಂದಕ್ಕಿಂತ ಹೆಚ್ಚು ಔಷಧಗಳನ್ನು ಕೊಡುವದಿದ್ದರೆ ಸರ್ತಿ ಬಿಟ್ಟು ಸರ್ತಿ ಚೂರ್ಣರೂಪದಿಂದಾಗಲಿ ಮೇಲೆ ಹೇಳಿದಂತೆ ನೀರಿನಲ್ಲಾಗಲಿ ಕೊಡಬೇಕು. ನೀರಿನಲ್ಲಿ ಔಷಧವನ್ನು ಕೊಡತಕ್ಕದ್ದಿದ್ದರೆ ಬೇರೆಬೇರೆ ಸ್ವಚ್ಛ ಭಾಂಡಿ (ಪೇಲೆ)ಗಳನ್ನು ತೆಗೆದುಕೊಂಡು ಅದರಲ್ಲಿ ಅರ್ಧದಷ್ಟು ನೀರು ಹಾಕಬೇಕು. ನಂತರ ಅದರಲ್ಲಿ ಸಾಕಷ್ಟು ಔಷಧವನ್ನು ಹಾಕಿ ಅವಶ್ಯವಿದ್ದಂತೆ ಒಂದೆರಡು ಚಮಚೆತುಂಬ ಕೊಡುತ್ತಿರಬೇಕು. ವಟಿಕಾರೂಪದಿಂದ ಔಷಧಕೊಡುವ ದಿದ್ದರೆ ವಟಿಕಾದಲ್ಲಿ ಔಷಧವು ಎಷ್ಟು ಹಿಡಿಯಲು ಶಕ್ಯವಿದ್ದಷ್ಟು ವಟಿಕೆ ಗಳನ್ನು ಕೊಡುವದು ನಿಶ್ಚಯಿಸಬೇಕು. ಒಂದು ಗ್ರೇನಿನ ವಟಿಕೆಗಳು ಇದ್ದರೆ ಪ್ರತಿಸಾರೆ ೩।೪ ಒಣವಟಿಕೆಗಳನ್ನು ಕೊಡಬೇಕು ಅಥವಾ ನೀರಿನಲ್ಲಿ ಹಾಕಿ ಕೊಡಬೇಕು. ಔಷಧಗಳನ್ನು ಕೂಡಿಸಿ ಅಥವಾ ಕಲಸಿ ಕೊಡತಕ್ಕದಿದ್ದರೆ ನೀರಲ್ಲಿಯೇ ಕೊಡತಕ್ಕದ್ದು ಇಷ್ಟ. ಕೊಡಲು ನಿಶ್ಚಿತವಾದ ಔಷಧವನ್ನು ಅರ್ಧಪೇಲೆ ನೀರಿನಲ್ಲಿ ಹಾಕಿ ಮುಚ್ಚಿ ಇಡಬೇಕು ಮತ್ತು ಹೇಳಿದಪ್ರಕಾರ ಸರ್ತಿಗೊಂದು ಚಮಚೆತುಂಬ ಕೊಡಬೇಕು. ತೆಳ್ಳನ್ನ (ನೀರಿನೋಪಾದಿ ಯಲ್ಲಿದ್ದ) ಔಷಧವನ್ನು ಕೊಡುವದಾದರೆ ನೀರಿನಲ್ಲಿ ಒಂದೆರಡುಹನಿ ಔಷಧಹಾಕಿ ದರಸರ್ತಿಗೆ ಒಂದೊಂದು ಚಮಚೆತುಂಬ ಅವಶ್ಯವಿದ್ದಂತೆ ಕೊಡಬೇಕು. ಗುಳಿಗೆ, ವಟಕಾ ಅಥವಾ ಚೂರ್ಣ ಇವುಗಳಮೇಲೆ ಒಂದೊಂದುಹನಿ ಔಷಧ ಹಾಕಿ ಅದನ್ನುಸಹ ಕೊಡಲಿಕ್ಕೆ ಅಡ್ಡಿಯಿಲ್ಲ. ಸಣ್ಣಮಕ್ಕಳಿಗೆ ದೊಡ್ಡವರಿಗೆ ಕೊಡತಕ್ಕ ಔಷಧದ ಪ್ರಮಾಣದಲ್ಲಿ ಸಾಧಾ ರಣತಃ ಅರ್ಧ ಪ್ರಮಾಣದಷ್ಟು ಕೊಡಲಿಕ್ಕೆ ಅಡ್ಡಿಯಿಲ್ಲ. ಸರತಿ ಒಂದಕ್ಕೆ ೧ ಅಥವಾ ಒಂದೂವರೆ ಗ್ರೇನ ಔಷಧ ನೀರಿನಲ್ಲಿ ಆಗಲಿ ಒಣದಾಗಲಿ ಚಿಕ್ಕ ಮಕ್ಕಳ ಬಾಯಿಯಲ್ಲಿ ಇಡಬೇಕು. ರೋಗವು ತೀವ್ರ ಬೆಳೆಯುವಂಥಾದ್ದು

ಇದ್ದರೆ ಸರ್ತೆಒಂದಕ್ಕೆ ಕೊಡತಕ್ಕ ಪ್ರಮಾಣದ ಔಷಧವನ್ನು ಎರಡೆರಡು ಅಥವಾ ಮೂರುಮೂರು ತಾಸಿನ ಅಂತರದಿಂದ ಕೊಡತಕ್ಕದ್ದು. ಗುಣವು ಕಂಡುಬಂದರೆ ಸರ್ತೆಗಳ ಮಧ್ಯದಕಾಲದ ಅಂತರವನ್ನು ಬೆಳಿಸಬೇಕು. ದಿವಸೊಂದಕ್ಕೆ ಸಾಧಾರಣತಃ ಮೂರು ಅಥವಾ ನಾಲ್ಕು ಸಾರೆ ಕೊಟ್ಟರೆ ಸಾಕು.

ಕಳೆ, ವೇದನೆ, ಅಥವಾ ಯಾವದೊಂದು ತ್ರಾಸದಾಯಕ ಭಾವನೆ ಇದ್ದರೆ ಅಥವಾ ರೋಗದ ತೀವ್ರತೆಯು ಬಹಳ ಇದ್ದರೆ ೧೦।೧೫ ಮಿನಿಟಿನ ಅಂತರದಿಂದ ಆಗಲಿ ಅದಕ್ಕೂ ತೀವ್ರದಿಂದಾಗಲಿ ಔಷಧ ಕೊಡಬೇಕಾಗುವದು. ಇಂಥ ಪ್ರಸಂಗದಲ್ಲಿ ಬಿಸಿನೀರಿನಲ್ಲಿ ಔಷಧವನ್ನು ಹಾಕಿ ಒಂದೊಂದು ಸರ್ತೆ ಒಂದೊಂದು ಚಮಚೆ ತುಂಬುವಷ್ಟು ರೋಗದ ತೀವ್ರತೆಯ ಮಾನದಿಂದ ಹೆಚ್ಚುಕಡಿಮೆ ಅಂತರದಿಂದ ಗುಣವು ಬರುವವರೆಗೆ ಕೊಡುತ್ತ ಹೋಗಬೇಕು. ಹಳೇ ಬೇನೆ ಇದ್ದರೆ ಒಂದು ಔಷಧವನ್ನು ದಿನಾಲು ೨ ರಿಂದ ೪ ಸಾರೆ ಕೊಡುವ ಕ್ರಮವಿಡಬೇಕು. ಪ್ರಾತಃಕಾಲಕ್ಕೆ ಒಂದು ಸರ್ತೆ ಮತ್ತು ರಾತ್ರಿಯಲ್ಲಿ ಮಲಗುವ ಕಾಲಕ್ಕೊಮ್ಮೆ ಹೀಗೆ ಎರಡುಸಾರೆ ಕೊಟ್ಟರೂ ಒಮ್ಮೊಮ್ಮೆ ಗುಣಬರುವ ಸಂಭವವುಂಟು. ಔಷಧ ಮತ್ತು ಊಟ ಇವುಗಳ ನಡುವಿನ ಅಂತರವು ಸಾಧಾರಣತಃ ೧/೨ ರಿಂದ ೧ ತಾಸಿನವರೆಗೆ ಇರಬೇಕು. ಕೊಡಲು ಯೋಜಿಸಿದ ಔಷಧದ ಪ್ರಮಾಣವು ಯಾವಾಗಲೂ ಕಡಿಮೆ ಇರಬೇಕು. ಯಾವಾಗಲೂ ಔಷಧದ ಪ್ರಮಾಣವು ಹೆಚ್ಚಿಗೆ ಇರಬಾರದು. ರೋಗವು ಪ್ರಬಲವದೆ ಎಂದು ಔಷಧದ ಪ್ರಮಾಣವು ಹೆಚ್ಚು ಇರಕೂಡದು. ರೋಗದ ಪ್ರಬಲತೆ ಅಥವಾ ತೀವ್ರತೆ ಮತ್ತು ಔಷಧದ ಪ್ರಮಾಣವು ಇವುಗಳದೇನೂ ಸಂಬಂಧವಿರುವದಿಲ್ಲ. ಇದನ್ನು ಮರೆಯಕೂಡದು. ಔಷಧವನ್ನು ಕಡಿಮೆ ಪ್ರಮಾಣದಲ್ಲಿ ಕೊಟ್ಟರೂ ಪುನಃ ಮತ್ತೊಂದು ಸಾರೆ ಅದನ್ನೇ ಕೊಟ್ಟರೆ ಕಾರ್ಯ ಸಿದ್ಧಿಯಾಗುತ್ತದೆ. ಆದರೆ ಅವಶ್ಯಕತೆಗಿಂತ ಹೆಚ್ಚಿನ ಪ್ರಮಾಣದಲ್ಲಿ ಔಷಧ ಕೊಟ್ಟರೆ ಗುಣವು ಏನೂ ಆಗದೆ ಅಪಾಯ ಮಾತ್ರ ಆಗುವ ಸಂಭವವದೆ. ಉದಾಹರಣಾರ್ಥ— ತರುಣ ಸ್ತ್ರೀಯರಿಗೆ ಪಂಡುರೋಗವಾಗುವ ಪ್ರಸಂಗದಲ್ಲಿ ಫೆರಮ್‌ಫಾಸ ಕೊಡುವ ಅವಶ್ಯಕತೆ

ಯುಂಟು. ಆದರೆ ಅದನ್ನೇ ಹೆಚ್ಚು ಪ್ರಮಾಣದಲ್ಲಿ ಕೊಟ್ಟರೆ ರೋಗವು ನೆಟ್ಟಗಾಗುವದಿಲ್ಲ. ಇಷ್ಟೇ ಅಲ್ಲ, ಜಠರದ ಮೇಲೆ ಅದರ ದುಷ್ಪರಿಣಾಮ ಸಹ ಆಗುತ್ತದೆ. ಸೂಕ್ಷ್ಮಪ್ರಮಾಣದಲ್ಲಿ ಕೊಟ್ಟರೆ ದುಷ್ಪರಿಣಾಮ ವಾಗುವ ಸಂಭವ ಕಡಿಮೆ.

ಒಂದೇ ಔಷಧವನ್ನು ನಿಶ್ಚಯಿಸಿ ಅದನ್ನೇ ಕೊಡಬೇಕು. ಆದರೆ ಅದು ಯಾವಾಗ್ಗಲೂ ಶಕ್ಯವಿರುವದಿಲ್ಲ. ಆದ್ದರಿಂದ ಒಂದಕ್ಕಿಂತ ಹೆಚ್ಚು ಔಷಧ ಕೊಡುವ ಅವಶ್ಯಕತೆ ಉಂಟಾಗುತ್ತದೆ. ಇಂಥ ಸಮಯದಲ್ಲಿ ಕೊಡತಕ್ಕ ಔಷಧಗಳನ್ನು ಒಂದೊಂದು ತಪ್ಪಿಸಿ ಸ್ವತಂತ್ರ ಒಂದೊಂದೇ ಕೊಡಬೇಕು. ಆದರೆ ೪।೫ ಔಷಧಗಳನ್ನು ಕೊಡುವ ಪ್ರಸಂಗದಲ್ಲಿ ಸರತಿ ತಪ್ಪಿಸಿಕೊಡುವದು ಸ್ವಲ್ಪ ಕಷ್ಟವಾಗುವದು. ಅಂಥ ಪ್ರಸಂಗದಲ್ಲಿ ಕೊಡಲು ನಿಶ್ಚಿತವಾದ ಎಲ್ಲ ಔಷಧಗಳನ್ನು ಮಿಶ್ರಣಮಾಡಿ ಕೊಡಲಿಕ್ಕೆ ಅಡ್ಡಿಯಿಲ್ಲ, ಎಲ್ಲ ಔಷಧಗಳ ಒಂದೇ ಮಿಶ್ರಣ ಮಾಡುವದಕ್ಕಿಂತ ಎರಡೆರಡು ಔಷಧಗಳ ಒಂದೊಂದು ಮಿಶ್ರಣಮಾಡಿ ಮಿಶ್ರಣಗಳನ್ನು ಸರತಿ ಸರತಿಗೆ ಕೊಡುವದು ಹೆಚ್ಚು ವಿಹಿತ. ಸರತಿ ಬಿಟ್ಟು ಸರತಿ ಕೊಡುವ ಔಷಧದಲ್ಲಿ ಇಂಥಾದ್ದು ಮೊದಲು ಇಂಥಾದ್ದು ನಂತರ ಹೀಗೇನೂ ಕ್ರಮ ವಿರುವದಿಲ್ಲ. ಮುಖ್ಯ ಔಷಧವನ್ನು ಮೊದಲು ಕೊಡತಕ್ಕದ್ದು ಮತ್ತು ಇತರ ಔಷಧಗಳನ್ನು ಮುಖ್ಯ ಔಷಧದಜತೆಗೆ ಕೊಡತಕ್ಕದ್ದು ಇಷ್ಟು ಲಕ್ಷ್ಯದಲ್ಲಿ ಇಟ್ಟರೆ ಸಾಕು. ಯಾವದರಸಂಗಡ ಯಾವದರ ಮಿಶ್ರಣಮಾಡ ಬೇಕು ಇದರ ಬಗ್ಗೆ ಏನೂ ನಿಯಮವಿರುವದಿಲ್ಲ. ಈ ಜೀವನರಸಾಯನ ಪದ್ಧತಿಯಲ್ಲಿ ಬೇಕಾದ ಬೇರೆಬೇರೆ ಔಷಧಗಳ ಮಿಶ್ರಣಮಾಡುವ ವಾಡಿಕೆ ಯುಂಟು. ಆದರೂ ನಿರ್ಬಂಧವಿಲ್ಲದೆ ಮಿಶ್ರಣಮಾಡುವದು ಗೌಣವೆಂದು ತಿಳಿಯಲ್ಪಟ್ಟದೆ. ಸಾಧಾರಣತಃ ಫಾಸ್ಫೇಟ್ಸ (ಕಲ್ಕೇ. ಫಾಸ; ಕಾಲೀಫಾ; ನೇಟ್ರಂಫಾ. ಫೆರಮ್‌ಫಾ; ಮ್ಯಾ. ಫಾಸ) ಮತ್ತು ಸಲ್ಫೇಟ್ಸ (ಕಲ್ಕೆಸ; ಕಾಲೀಸ; ನೇಟ್ರಂಸ.) ಇವುಗಳ ಮಿಶ್ರಣಮಾಡದಿರುವದೇ ಲೇಸು. ಫಾಸ್ಫೇಟ್ಸ ವರ್ಗದ ಐದೂ ಔಷಧಗಳ ಮಿಶ್ರಣಮಾಡಿ ಕೊಡಬಹುದು. ಆದೇ ಪ್ರಕಾರ ಸಲ್ಫೇಟಗಳ ಮಿಶ್ರಣಮಾಡಬಹುದು. ಕಲ್ಕೇರಿಯಾ

ಜಾತಿಯಲ್ಲಿಯ ಕಲ್ಕೆ-ಫಾಸ; ಕಲ್ಕೆ-ಫ್ಲೂ; ಕಲ್ಕೆ-ಸಲ್ಫ; ಕಾಲೀಜಾತಿಯಲ್ಲಿಯ ಕಾಲೀ-ಫಾ; ಕಾಲೀಮೂರ; ಕಾಲೀ-ಸಲ್ಫ; ಮತ್ತು ನೇಟ್ರಂಜಾತಿಯಲ್ಲಿಯ ನೇಟ್ರಂಫಾ; ನೇಟ್ರಂಮೂರ; ನೇಟ್ರಂಸಲ್ಫ; ಈ ಸಲ್ಫೇಟ ಮತ್ತು ಫಾಸಫೆಟ ಇವುಗಳ ನಿರ್ಬಂಧವಿಲ್ಲದೆ ಒಂದೇ ಜಾತಿಯವು ಇದ್ದರೆ ಒಂದಕ್ಕೊಂದು ಮಿಶ್ರಣಮಾಡಬಹುದು. ಆದಾಗ್ಯೂ ಆದಷ್ಟು ಮಟ್ಟಿಗೆ ಔಷಧಗಳ ಮಿಶ್ರಣಮಾಡದೆ ಒಂದೊಂದು ಔಷಧವನ್ನು ಸ್ವತಂತ್ರ ರೀತಿಯಿಂದ ಕೊಡುವದೇ ಹೆಚ್ಚು ಹಿತಕರವದೆ. ಇದನ್ನು ಮರೆಯಕೂಡದು.

೬ × ಶಕ್ತಿಯ ಔಷಧಗಳು ಸಾಧಾರಣತಃ ಕಡಿಮೆ ಶಕ್ತಿಯ ಔಷಧಗಳು; ೧೨ × ರಿಂದ ೩೦ × ವರೆಗೆ ಶಕ್ತಿಯುಳ್ಳವು ಮಧ್ಯಮಶಕ್ತಿಯುಳ್ಳವು. ಮತ್ತು ೨೦೦ × ಇಷ್ಟು ಶಕ್ತಿಯುಳ್ಳವು ಬಲವತ್ತರಶಕ್ತಿಯುಳ್ಳವು ಎಂದು ತಿಳಿಯಬೇಕು. ಈ ಶಕ್ತಿಯ ಔಷಧಗಳನ್ನು ಕೊಡುವ ವಿಷಯದಲ್ಲಿ ಕೆಳಗೆ ಹೇಳಿದ ಸ್ಥೂಲನಿಯಮಗಳನ್ನು ಲಕ್ಷ್ಯದಲ್ಲಿಡಬೇಕು. ಕಡಿಮೆಶಕ್ತಿಯ ಔಷಧಗಳನ್ನು ೨, ೩, ೪ ತಾಸಿನ ಅಂತರದಿಂದ ಒಂದು ಚಮಚೆಯ ಪ್ರಮಾಣದಷ್ಟು ಕೊಡಬೇಕು. ಮಧ್ಯಮಶಕ್ತಿಯ ಔಷಧಗಳನ್ನು ದರ ಮೂರು ಅಥವಾ ಆರುತಾಸಿಗೊಮ್ಮೆ ಕೊಡಬೇಕು. ಬಲವತ್ತರಶಕ್ತಿಯ ಔಷಧವನ್ನು ದಿನಾಲು ಒಂದು ಸಾರೆ ಕೊಟ್ಟರೂ ಸಾಕು. ಶೀಘ್ರಗಾಮೀರೋಗದ ಪ್ರಸಂಗದಲ್ಲಿ ೨೦೦ × ಶಕ್ತಿಯ ಔಷಧ ಸಹ ಮೇಲಿಂದ ಮೇಲೆ ಕೊಡುವ ಪ್ರಸಂಗ ಒದಗಬಹುದು. ಇಂಥ ಪ್ರಸಂಗದಲ್ಲಿ ವೈದ್ಯರು ತಮ್ಮ ಅನುಭವದ ಪ್ರಕಾರ ಹೆಚ್ಚುಕಡಿಮೆ ಮಾಡಲಿಕ್ಕೆ ಅಡ್ಡಿಯಿಲ್ಲ.

**ಔಷಧಗಳ ಶಕ್ತಿ:—** "ಔಷಧದ ಶಕ್ತಿ" ಎಂಬ ಶಬ್ದಗಳು ರಸಾಯನಚಿಕಿತ್ಸಾಶಾಸ್ತ್ರ ಮತ್ತು ಹೋಮಿಯೋಪಥಿ ವೈದ್ಯಶಾಸ್ತ್ರ ಇವುಗಳಲ್ಲಿ ಉಪಯೋಗಿಸುವ ವಾಡಿಕೆಯುಂಟು. ಆದರೆ ಔಷಧದ ಶಕ್ತಿ ಎಂದರೇನು ಎಂಬದರ ಬಗ್ಗೆ ಸಾಮಾನ್ಯ ಜನರಲ್ಲಿಯೂ ಹಲವು ತಜ್ಞ ಜನರಲ್ಲಿಯೂ ಸಹ ತಪ್ಪುತಿಳುವಳಿಕೆ ಇದ್ದಂತೆ ಕಾಣುತ್ತದೆ. ಬಲವತ್ತರ

ಶಕ್ತಿಯ ಔಷಧವು ಹೆಚ್ಚು ಉಗ್ರ ಮತ್ತು ಉಷ್ಣತೆಯುಳ್ಳದ್ದು ಮತ್ತು ಕಡಿಮೆಶಕ್ತಿಯ ಔಷಧವು ಸೌಮ್ಯ ಮತ್ತು ಕಡಿಮೆ ಉಷ್ಣತೆಯುಳ್ಳದ್ದೆಂದು ಸಾರ್ವತ್ರಿಕ ತಪ್ಪುತಿಳುವಳಿಕೆಯಿದ್ದಂತೆ ಕಂಡುಬರುತ್ತದೆ. ಆಯುರ್ವೇದದಲ್ಲಿ ಸೌಮ್ಯ ಮತ್ತು ಬಲವತ್ತರ ಹೀಗೆ ಭೇದವಿರುತ್ತದೆ. ಆಲೋಪಥಿಯಲ್ಲಿ ಸಹ ಹೀಗೆ ಭೇದವದೆ. ಆದರೆ ಹೋಮಿಯೋಪಥಿಯಲ್ಲಿಯೂ ೧೨ ಕ್ಷಾರಗಳ ವೈದ್ಯಕಶಾಸ್ತ್ರದಲ್ಲಿಯೂ ಇಂಥ ಭೇದವಿಲ್ಲ. ಶಕ್ತಿ ಅಥವಾ ಕ್ರಮ ಇದರ ಅರ್ಥ ಬಲವತ್ತರ ಅಥವಾ ಸೌಮ್ಯವೆಂದಲ್ಲ. ಹಿಂದೆ ಪುಟ ೩೪ ರಲ್ಲಿ ಔಷಧ ಸಿದ್ಧಪಡಿಸುವ ಕೃತಿ ಎಂಬ ಸದರಿನ ಕೆಳಗೆ ಔಷಧ ತಯಾರಮಾಡುವ ಕೃತಿಯು ವರ್ಣಿಸಲ್ಪಟ್ಟಿದೆ. ಆ ಕೃತಿಗೆ ಅನುಸರಿಸಿ ೧ ×; ೨ ×; ೩ × ಈ ಪ್ರಕಾರ ಬರೆದದ್ದರಿಂದ ಔಷಧ ಸಿದ್ಧಮಾಡತಕ್ಕ ಪದ್ಧತಿಯ ಸೂಚಕಚಿಹ್ನವೆಂದು ಹೇಳಬಹುದು. ಹೊರ್ತಾಗಿ ಔಷಧದ ಸೌಮ್ಯತನ ಅಥವಾ ಅದರ ಬಲವತ್ತರ ಗುಣದ ದ್ಯೋತಕವಲ್ಲ. ಔಷಧವು ಎಷ್ಟುಸಾರೆ ಮೇಲೆ ಹೇಳಿದ ಕೃತಿಗೆ ಅನುಸರಿಸಿ ಖಲಿಸಲ್ಪಟ್ಟಿದೆ ಎಂಬದರ ಸೂಚಕವದೆ.

ಈ ಪ್ರಕಾರ ಔಷಧದ ಖಲಸವಾದರೆ ಔಷಧದ ಜಡದೃಶ್ಯ ದೇಹವು ಸೂಕ್ಷ್ಮ ಆಗುತ್ತ ಆಗುತ್ತ ಕೊನೆಗೆ ಅದೃಶ್ಯ (ಅಗೋಚರ) ವಾಗುತ್ತದೆ. ಅದಕ್ಕನುಸರಿಸಿಯೇ ಅವುಗಳ ಗುಣಧರ್ಮಗಳು (ಸಿದ್ಧಮಾಡುವ) ಕೃತಿಯ ಬೆಳವಣಿಗೆಯ ಸಂಗಡನೇ ಬೆಳೆಯುತ್ತಹೋಗುತ್ತವೆ. ಔಷಧದ ಗುಣಧರ್ಮದ ವಿಕಾಸವೆಂದರೇನೇ ಔಷಧದ ಶಕ್ತಿಯವಿಕಾಸ ಅಥವಾ ಬೆಳವಣಿಗೆಯು. ಕಡಿಮೆಶಕ್ತಿಯ ಔಷಧ ಮತ್ತು ಬಲವತ್ತರಶಕ್ತಿಯ ಔಷಧ ಇವುಗಳಲ್ಲಿಯ ಮುಖ್ಯ ಮತ್ತು ಆವಶ್ಯಕ ಭೇದವು ಆ ಔಷಧದ ಹೆಚ್ಚು ಕಡಿಮೆ ಶಕ್ತಿಯಮೇಲೆ ಅವಲಂಬಿಸಿರುವದಿಲ್ಲ. ಆದರೆ ಅದರ ಕ್ರಮ ಅಥವಾ ಶಕ್ತಿಯು ಬೆಳೆಯುತ್ತಹೋಗುವದು ಅಂದರೆ ಅದರ ವಿಶೇಷಲಕ್ಷಣಗಳು ಕಂಡುಬರುವವು. ಆ ಭೇಧವು ಅದರ ವಿಶೇಷಲಕ್ಷಣಗಳು ಕಂಡುಬರುವದು ಇದರಮೇಲೆಯೇ ಅವಲಂಬಿಸಿರುತ್ತದೆ. ಕ್ರಮವು ಬೆಳೆಯುತ್ತಹೋದಂತೆ ಔಷಧದ ಲಕ್ಷಣಗಳು ಬೆಳೆಯುತ್ತಹೋಗುತ್ತವೆ ಮತ್ತು ಒಡೆದು ಕಾಣುತ್ತವೆ. ಔಷಧಗಳಲ್ಲಿಯ ವ್ಯಕ್ತಿಗತಗುಣಗಳ ವಿಕಾಸವೇ ಔಷಧದ ಶಕ್ತಿ

ವರ್ಧನ. ಅಥವಾ ಶಕ್ತಿಯ ಕ್ರಮದ ಬೆಳವಣಿಗೆಯು. ಇದೇ ಇನ್ನೊಂದು ರೀತಿಯಿಂದ ಹೇಳಬೇಕಾದರೆ ಕೆಳಗಿನಂತೆ ಹೇಳಬಹುದು. ಔಷಧದ ಶಕ್ತಿಯನ್ನು ಬೆಳೆಸೋಣವೆಂದರೆ ಅದರ ಕಾರ್ಯಕ್ಷೇತ್ರವನ್ನು ಹೆಚ್ಚು ಮಾಡೋಣ. ರೋಗಿಯಲ್ಲಿ ಹೆಚ್ಚು ಸೂಕ್ಷ್ಮ, ಹೆಚ್ಚು ಭೇದದರ್ಶಕ, ಹೆಚ್ಚು ಮಹತ್ವವುಳ್ಳ ಮತ್ತು ಸ್ಪಷ್ಟವಾಗಿ ಅಥವಾ ಒಡೆದು ಕಂಡುಬರುವಂತೆ ಭಾವನೆಗಳು ಇರುವವು. ಅವುಗಳಿಗೆ ಅನುಸರಿಸಿಯೇ ಹೆಚ್ಚಿನ ಕ್ರಮ, ಬಲ, ಸಾಮರ್ಥ್ಯವುಳ್ಳ ಔಷಧಗಳನ್ನು ಕೊಡುವದು ಅವಶ್ಯಕವೆಂದು ಸ್ಥೂಲ ಮಾನದಿಂದ ತಿಳಿಯತಕ್ಕದ್ದು. ಯಾವ ರೋಗಿಯಲ್ಲಿ ಹೆಚ್ಚು ಸೂಕ್ಷ್ಮ ವೈಶಿಷ್ಟ್ಯದರ್ಶಕ ಹಾಗೂ ಪ್ರಮುಖ ಭಾವನೆಗಳು ಕಂಡುಬರುವದಿಲ್ಲವೋ ಅಂಥವನಿಗೆ ಕಡಿಮೆಶಕ್ತಿಯ ಔಷಧವನ್ನು ಕೊಡತಕ್ಕದ್ದು. ಭಾವನೆಗಳು ಎಷ್ಟು ಸೂಕ್ಷ್ಮ, ಪ್ರಮುಖ, ಮತ್ತು ಮಹತ್ವವುಳ್ಳವು ಅದೇ ಮಾನದಿಂದ ಔಷಧದ ಶಕ್ತಿಯನ್ನೂ ಬೆಳೆಸುವ ಅವಶ್ಯಕತೆಯು. ಇಷ್ಟರ ಮೇಲಿಂದ ಔಷಧದ ಶಕ್ತಿಯೆಂದರೇನು ಎಂಬದು ತಿಳಿಯಲು ಕಠಿಣವಾಗಲಿಕ್ಕಿಲ್ಲ.

**ಔಷಧದ ಶಕ್ತಿ ಅಥವಾ ಕ್ರಮವನ್ನು ಹೇಗೆ ನಿಶ್ಚಯಿಸಬೇಕು:—** ಜೀವನರಸಾಯನಶಾಸ್ತ್ರದ ಆಧಾರದಿಂದ ಕೊಡತಕ್ಕ ಔಷಧವನ್ನು ನಿಶ್ಚಯಿಸಿದನಂತರ ಔಷಧದ ಶಕ್ತಿ ಅಥವಾ ಕ್ರಮವಾವುದಿರಬೇಕು ಎಂಬದನ್ನು ನಿಶ್ಚಯಿಸುವ ಬಗ್ಗೆ ಸಾಧನಗಳೇನಾದರೂ ಇವೆಯೋ ಇಲ್ಲವೋ ಎಂಬ ಪ್ರಶ್ನೆಗೆ ಉತ್ತರವು ಸಮಾಧಾನಕಾರಕ ಹೇಳುವಂತೆ ಇಲ್ಲ. ಬೇರೆ ಬೇರೆ ಡಾಕ್ಟರರ ಭಿನ್ನಭಿನ್ನಾನುಭವಕ್ಕನುಸರಿಸಿ ನಿಶ್ಚಯಿಸಲ್ಪಟ್ಟ ಮತಗಳು ಬಹಳೇ ಭಿನ್ನ ಭಿನ್ನ ಇರುವವು. ಅವರ ಮತಗಳ ಏಕವಾಕ್ಯತೆ ಮಾಡುವದು ಶಕ್ಯವಿಲ್ಲ. ಬೇರೆ ಬೇರೆ ರೋಗಗಳಿಗೆ ಉಪಯೋಗಿಸಲ್ಪಡುವ ಔಷಧದ ಒಂದೇ ಶಕ್ತಿಯ ಉಪಯೋಗದಿಂದ ಎಲ್ಲ ರೋಗಗಳು ನೆಟ್ಟಗಾಗುವದಿಲ್ಲ. ಒಂದೇ ಔಷಧವಿದ್ದರೂ ಬೇರೆ ಬೇರೆ ರೋಗಗಳಿಗೆ ಬೇರೆ ಬೇರೆ ಶಕ್ತಿಯ ಉಪಯೋಗ ಮಾಡಬೇಕಾಗುತ್ತದೆ. ಒಂದೇ ಶಕ್ತಿಯ ಉಪಯೋಗದಿಂದ ಗುಣವು ಬರುತ್ತದೆಂದು ಹೇಳಕೂಡದು. ಈ ಸಂದರ್ಭದಲ್ಲಿ ಸ್ಪಷ್ಟವಾದ ನಿಯಮವನ್ನು ಹೇಳಲಾಗದು. ಸಾಧಾರಣತಃ ಹೀಗೆ

ಅನ್ನಬಹುದು. ಏನೆಂದರೆ— ಯಾವದೇ ಸಾಧ್ಯರೋಗಕ್ಕೆ ಯಾವದೇ ಶಕ್ತಿಯ ಔಷಧವನ್ನು ಉಪಯೋಗ ಮಾಡಿ ರೋಗ ನೆಟ್ಟಗೆ ಮಾಡಬಹುದು. ಆದರೂ ಯೋಗ್ಯ ಕ್ರಮ ಅಥವಾ ಶಕ್ತಿಯು ಸಾಧಿಸಿದಲ್ಲಿ ಗುಣವು ತೀವ್ರವೇ ಬರುವದು. ಔಷಧದ ಯೋಗ್ಯ ಕ್ರಮ ಅಥವಾ ಶಕ್ತಿಯನ್ನು ನಿಶ್ಚಯಿಸುವ ಕಾಲದಲ್ಲಿ ಕೆಳಗೆ ಬರೆದ ಸಂಗತಿಗಳನ್ನು ಲಕ್ಷ್ಯದಲ್ಲಿಡಬೇಕು.

೧. ರೋಗಿಯ ಗ್ರಹಣಕ್ಷಮತೆ.
೨. ರೋಗದ ಸ್ಥಾನವು.
೩. ರೋಗದ ಸ್ವರೂಪ ಮತ್ತು ಅದರ ಉಗ್ರತೆ ಅಥವಾ ತೀವ್ರತೆ.
೪. ರೋಗದ ಅವಸ್ಥೆ ಮತ್ತು ಅದರ ಅವಧಿ.
೫. ರೋಗಿಗೆ ಮೊದಲು ಮಾಡಿದ ಉಪಚಾರ.

ಇದರಲ್ಲಿ ಎಲ್ಲಕ್ಕಿಂತ ಮೊದಲು ವಿಚಾರಿಸುವ ಸಂಗತಿಯೆಂದರೆ ರೋಗಿಯ ಗ್ರಹಣ ಕ್ಷಮತೆ. ಔಷಧದ ಶಕ್ತಿಯನ್ನು ನಿಶ್ಚಯಿಸುವ ಕಾಲದಲ್ಲಿ ಗ್ರಹಣ ಕ್ಷಮತೆ ( ಅಂದರೆ ಔಷಧದ ಕಾರ್ಯಕ್ಕೆ ಅನುಕೂಲತೆ )ಯು ಬಹಳೇ ಮಹತ್ವದ ಮತ್ತು ಮಾರ್ಗದರ್ಶಕ ಸಾಧನವೆಂದು ತಿಳಿಯಲ್ಪಡುತ್ತದೆ. ಶರೀರದ ಯಾವದೇ ಭಾಗದಲ್ಲಿ ಸಂವೇದನೆ ಅಥವಾ ಆಘಾತವಾದರೆ ಅದಕ್ಕೆ ಪ್ರತಿಕ್ರಿಯೆಮಾಡಲು ಪ್ರಾಣಿಮಾತ್ರದಲ್ಲಿ ಒಂದುತರದ ಸ್ವಾಭಾವಿಕವಾದ ಜೀವನಶಕ್ತಿ ಉಂಟೇವುಂಟು. ಕಣ್ಣಿಗಾಗಲಿ ಕಣ್ಣಿನಲ್ಲಿಯ ಗೊಂಬೆಗಾಗಲಿ ಕೈ ಅಥವಾ ಇತರ ಯಾವದೇ ವಸ್ತುವಿನ ಸಂಬಂಧ ಅಥವಾ ಸ್ಪರ್ಶವಾದರೆ ಕಣ್ಣು ತನ್ನಷ್ಟಕ್ಕೆ ತಾನೆ ಒಮ್ಮಿಂದೊಮ್ಮೆ ಮುಚ್ಚಿಕೊಳ್ಳುವದು. ಕಣ್ಣುಮುಚ್ಚುವದೆಂದರೆ ನೇತ್ರೇಂದ್ರಿಯದ ಪ್ರತಿಕ್ರಿಯೆ ಸ್ವರೂಪದ ಕಾರ್ಯವೇ ಸರಿ. ಇದಕ್ಕೇ ಗ್ರಹಣಕ್ಷಮತೆ ಎಂಬ ಹೆಸರು. ಇದೇ ತರಹದ ಪ್ರತಿಕ್ರಿಯಾರೂಪಶಕ್ತಿಯು ಶರೀರದ ಅಂತರಿಂದ್ರಿಯದಲ್ಲಿ ಸಹ ಸ್ವಾಭಾವಿಕವಾಗಿ ಇರುವದುಂಟು. ಕಣ್ಣಿಗೆ ಇತರ ವಸ್ತುವಿನ ಸ್ಪರ್ಶವಾದಾಗ್ಗೆ ಅದು ಮುಚ್ಚಿಕೊಳ್ಳದೆ ಹೋದರೆ ಅದರಲ್ಲಿ ಪ್ರತಿಕ್ರಿಯಾರೂಪ ಶಕ್ತಿಯು ಇಲ್ಲೆಂಬದು ಸಿದ್ಧವಾದ ಸಂಗತಿ. ಇಂಥ ಪ್ರಸಂಗದಲ್ಲಿ ಕಣ್ಣು ನಿರ್ಜೀವವಾಗಿದೆಯೆಂದು ತಿಳಿಯತಕ್ಕದ್ದು. ಇತರ ಇಂದ್ರಿಯಗಳ ಬಗ್ಗೆಯೂ

ಹೇಗೆಯೋ ಹೇಳಬಹುದು. ಯೋಗ್ಯ ಶಕ್ತಿಯುಳ್ಳ ಯೋಗ್ಯ ಔಷಧದ ಯೋಜನೆಯಾಗಿ ಸಹ ಪ್ರತಿಕ್ರಿಯಾಶಕ್ತಿಯು (ಗ್ರಹಣಕ್ಷಮತೆ) ಜಾಗೃತವಾಗದೆಹೋದರೆ ಔಷಧದ ಕ್ರಮವು ಅಥವಾ ಶಕ್ತಿಯು ಸರಿಯಾಗಿಲ್ಲವೆಂದು ತಿಳದು ಅದನ್ನು ಬದಲಿಸಬೇಕು. ಯೋಗ್ಯ ಔಷಧದ ಕ್ರಮವನ್ನು ಅಥವಾ ಶಕ್ತಿಯನ್ನು ಬದಲಿಸಿದಾಗ್ಯೂ ಪ್ರತಿಕ್ರಿಯೆ ಅಥವಾ ಗ್ರಹಣಕ್ಷಮತೆಯು ಜಾಗೃತವಾಗದೆ ಇದ್ದರೆ ರೋಗವು ಅಸಾಧ್ಯವೆಂದು ತಿಳಿಯತಕ್ಕದ್ದು.

ಇಂದ್ರಿಯಗಳ ಗ್ರಹಣಕ್ಷಮತೆ ಅಂದರೆ ಔಷಧದ ಕಾರ್ಯಕ್ಕೆ ವಶವಾಗುವಂಥ ಇಂದ್ರಿಯಗಳ ಅನುಕೂಲತೆ. ರೋಗಿಯ ರೋಗದ ಲಕ್ಷಣಗಳನ್ನೆಲ್ಲ ವಿಚಾರದಿಂದ ಟಿಪ್ಪಣಿಮಾಡಿಕೊಂಡು, ಆ ಲಕ್ಷಣಕ್ಕೆ ಸರಿಯಾಗುವಂಥ ಯೋಗ್ಯ ಔಷಧವನ್ನು ಆರಿಸಿ ಯೋಗ್ಯವೆಂದು ತೋಚಿದ ಶಕ್ತಿ (ಕ್ರಮ) ಯ ಔಷಧವನ್ನು ರೋಗಿಗೆ ಕೊಟ್ಟಾಗ್ಗೆ ರೋಗದ ಲಕ್ಷಣಗಳು ಹಿಮ್ಮೆಟ್ಟಿ ರೋಗಿಗೆ ಹಗುರು ಮತ್ತು ಸೌಖ್ಯವೆನಿಸಿದರೆ ಔಷಧದ ಶಕ್ತಿಯು (ಕ್ರಮವು) ಸರಿಯಾಗಿದೆಯೆಂದು ತಿಳಿಯಬೇಕು. ಆದರೆ ಔಷಧವು ಯೋಗ್ಯ ರೀತಿಯಿಂದ ಆರಿಸಲ್ಪಟ್ಟು ರೋಗದ ಲಕ್ಷಣಗಳಿಗೆ ಹೊಂದುವಂಥದೆಂದು ಮನಸ್ಸಿನ ವಿಶ್ವಾಸವೂ ಇದ್ದು ಕೊಟ್ಟ ಶಕ್ತಿಯ ಔಷಧದಿಂದ ರೋಗದ ಲಕ್ಷಣಗಳು ಹಿಮ್ಮೆಟ್ಟಲ್ಪಡುವದಿಲ್ಲ ಮತ್ತು ರೋಗಿಗೆ ಹಗುರು ಅನಿಸುವದಿಲ್ಲ; ಹಾಗೂ ಸ್ವಲ್ಪಕಾಲ ರೋಗಿಗೆ ನೆಟ್ಟಗೆ ಅನಿಸಬೇಕು, ಪುನಃ ರೋಗದ ಲಕ್ಷಣಗಳು ಬಲವತ್ತರವಾಗಬೇಕು, ಹೀಗಾದರೆ ಔಷಧದ ಕ್ರಮವು (ಶಕ್ತಿಯು) ಸರಿಯಾಗಿಲ್ಲವೆಂದು ತಿಳಿದು ಕ್ರಮ (ಶಕ್ತಿಯನ್ನು) ಬದಲಿಸಬೇಕು. ಔಷಧವನ್ನಾರಿಸುವದರಲ್ಲಿ ತಪ್ಪಾಗಿದೆಯೋ ಎಂಬದರ ಆಲೋಚನೆಯನ್ನು ಮೊದಲು ಮಾಡಬೇಕು. ಹಾಗೆ ತಪ್ಪಾಗಿದ್ದರೆ ಗ್ರಹಣಕ್ಷಮತೆಯ ಪ್ರಶ್ನೆಯೇ ಉದ್ಭವಿಸುವದಿಲ್ಲ. ಇಂಥ ಪ್ರಸಂಗದಲ್ಲಿ ಔಷಧದ ಕ್ರಮವನ್ನು ಬದಲಿಸಿ ಸಾಗುವಂತಿಲ್ಲ. ರೋಗದ ಲಕ್ಷಣಗಳಿಗೆ ಸಲ್ಲುವಂಥ ಎರಡನೇ ಔಷಧವನ್ನೇ ಆರಿಸುವ ವಿಚಾರ ಮಾಡಬೇಕಾಗುವದು. ಆದರೆ ಆರಿಸಲ್ಪಟ್ಟ ಔಷಧವು ತಪ್ಪಿಲ್ಲ; ಅದು

ಸರಿಯಾಗಿದೆಯೆಂಬ ವಿಶ್ವಾಸವು ಇದ್ದೂ ಗುಣಬರದಿದ್ದರೆ ಗ್ರಹಣಕ್ಷಮ ತೆಯು ಜಾಗೃತವಿಲ್ಲೆಂದು ತಿಳಿದು ಔಷಧದ ಕ್ರಮವನ್ನು (ಶಕ್ತಿಯನ್ನು) ಬದಲಿಸಬೇಕು. ಇಲ್ಲಿ ಒಂದು ಸಂಗತಿಯನ್ನು ಲಕ್ಷ್ಯದಲ್ಲಿಡತಕ್ಕ ಆವಶ್ಯಕತೆ ಯುಂಟು. ಅದೇನೆಂದರೆ— ಎಷ್ಟೋ ಸಲ ಔಷಧದಿಂದ ಗ್ರಹಣ ಕ್ಷಮತೆ ಅಥವಾ ಪ್ರತಿಕ್ರಿಯಾಶಕ್ತಿಯು ಬಹಳೇ ಜಾಗೃತವಾಗುತ್ತದೆ. ಮತ್ತು ಶರೀರದಲ್ಲಿ ಒಂದು ತರದ ದ್ವಂದ್ವವು ( ಜಗಳ, ಒಡಿದಾಟ ) ಪ್ರಾರಂಭವಾಗಿ ಸ್ವಲ್ಪಕಾಲ ಪರ್ಯಂತರ ರೋಗದ ಲಕ್ಷಣಗಳು ಬೆಳೆ ಯುತ್ತವೆ ಎಂದು (ಬಲವತ್ತರವಾಗಿವೆಂದು) ಕಂಡುಬರುತ್ತದೆ. ಇಂಥ ಸಮಯದಲ್ಲಿ ಒಮ್ಮೆಲೆ ಗಾಬರಿಯಾಗಿ ಔಷಧವನ್ನು ಬದಲಿಸಬಾರದು. ಔಷಧದ ವರ್ಣನದಲ್ಲಿ ನಮೂದಿಸಲ್ಪಟ್ಟ ಲಕ್ಷಣಗಳು ಬಲವತ್ತರವಾಗಿವೆ ಎಂದು ಕಂಡುಬಂದರೆ ಈ ರೋಗವೃದ್ಧಿಯ ಕಾರ್ಯವು ಸ್ವಾಭಾವಿಕ ಮತ್ತು ಹಿತಕಾರಕವೆಂದು ತಿಳಿಯಬೇಕು. ಸ್ವಲ್ಪ ಕಾಲದಲ್ಲಿ ರೋಗವೃದ್ಧಿಯು ಇಲ್ಲದಂತಾಗಿ ರೋಗವೂ ಇಲ್ಲದಂತಾಗುವದೆಂದು ಕಂಡುಬರುವದು.

ಬೇರೆಬೇರೆ ವ್ಯಕ್ತಿಗಳಲ್ಲಿ ಅವರವರ ವಯಸ್ಸು, ಸ್ವಭಾವ, ಪ್ರಕೃತಿ, ಚಟ (ಚಾಳಿ), ರೋಗದ ಸ್ವರೂಪ, ಮತ್ತು ಪರಿಸ್ಥಿತಿ ಇವೆಲ್ಲಕ್ಕನುಸರಿಸಿ ಗ್ರಹಣಕ್ಷಮತೆಯು ಬದಲಿಸುತ್ತದೆ. ಹುಡುಗರು ( ಚಿಕ್ಕಮಕ್ಕಳು ) ತರುಣರು, ಉತ್ಸಾಹಿ ಜನರು– ಇವರಲ್ಲಿ ಗ್ರಹಣಕ್ಷಮತೆಯು ಹೆಚ್ಚು ಇರುತ್ತದೆ. ಇಂಥವರಿಗೆ ಕೊಡುವ ಔಷಧದ ( ಕ್ರಮವು ) ಶಕ್ತಿಯು ಮಧ್ಯಮ ಅಥವಾ ಬಲವತ್ತರ ಶಕ್ತಿಯ ಔಷಧಗಳಿರಬೇಕು.

ದೊಡ್ಡಮನಸ್ಸಿನ ಹಾಗೂ ನಿಷ್ಕಪಟ ಹಾಗೂ ಮೃದುಸ್ವಭಾವ ದವರು ನಾಜೂಕ ಪ್ರಕೃತಿಯವರು ಅದೇ ಪ್ರಕಾರ ಬುದ್ಧಿವಂತರು, ಬುದ್ಧಿಯ ವ್ಯವಸಾಯಮಾಡುವವರು– ಇಂಥವರ ಗ್ರಹಣಕ್ಷಮತೆ ಹೆಚ್ಚು ಇರುವದರಿಂದ ಔಷಧದ ಶಕ್ತಿಯು (ಕ್ರಮವು) ಬಲವತ್ತರವಿದ್ದರೆ ಔಷಧದ ಉಪಯೋಗವು ಚನ್ನಾಗಿ ಆಗುತ್ತದೆ. ಮನಸ್ತಾಪದಿಂದಾಗಲಿ ಕಾಲ್ಪನಿಕ ಆಭಾಸದಿಂದಾಗಲಿ ಯಾವಾಗಲೂ ಕ್ಷುಬ್ಧವೃತ್ತಿಯುಳ್ಳವರೂ, ಕೂತು ಕೊಂಡು ಕೆಲಸ ಮಾಡುವವರೂ, ಹೆಚ್ಚು ನಿದ್ರೆ ಮಾಡುವವರೂ,

ಹೊಗಸರಂತೆ ಆಯುಷ್ಯಕ್ರಮವಿದ್ದವರೂ ಇಂಥವರ ಗ್ರಹಣಕ್ಷಮತೆಯು ಅಸ್ವಾಭಾವಿಕತನದಿಂದೇ ಆಗಲಿ ವೃದ್ಧಿಂಗತವಾಗಿರುತ್ತದೆ. ಇಂಥವರಿಗೆ ಹೆಚ್ಚಿನ ಶಕ್ತಿಯ (ಕ್ರಮ) ಔಷಧ ಕೊಡುವದು ವಿಹಿತ. ಆಲಸ್ಯವುಳ್ಳವರೂ, ಮಂದರೂ, ಶೀತಪ್ರಕೃತಿಯುಳ್ಳವರೂ, ಮಂದಗ್ರಾಹಕಶಕ್ತಿಯುಳ್ಳವರೂ, ಮಂದಗತಿಯಿಂದ ಕೆಲಸಮಾಡುವವರೂ, ಸದ್ದುಮುದ್ದು ಚಾಳಿಯಿದ್ದವರೂ, ಮತ್ಸರೂ, ಹುಂಬರೂ, ಮಡ್ಡರೂ, ಶರೀರದಿಂದ ಸಶಕ್ತರಿದ್ದವರೂ, ಸ್ಫೂರ್ತಿ ಮತ್ತು ಸಿಟ್ಟು ತೀವ್ರ ಬರದಂಥವರೂ— ಇಂಥವರಿಗೆ ಕಡಿಮೆ ಶಕ್ತಿಯ ಔಷಧಗಳನ್ನು ಹೆಚ್ಚು ಪ್ರಮಾಣದಿಂದ ಹೆಚ್ಚುಸಾರೆ ಕೊಡಬೇಕಾಗುತ್ತದೆ.

ರೋಗಿಯು ಅಸಾಧ್ಯ ಅಥವಾ ಕೊನೆಯ ಸ್ಥಿತಿಯಲ್ಲಿ ತೀರ ಕಡಿಮೆ ಶಕ್ತಿಯ ಔಷಧ ಕೊಟ್ಟಾಗ್ಯೂ ರೋಗಿಯ ಗ್ರಹಣಶಕ್ತಿ ಅಥವಾ ಪ್ರತಿಕ್ರಿಯಾಶಕ್ತಿಯು ಜಾಗೃತವಾಗುವದಿಲ್ಲ. ಇಂಥ ಸಮಯದಲ್ಲಿ ೧× ಶಕ್ತಿಯ ಔಷಧವಾಗಲಿ ಮೂಳ ಕ್ಷಾರವಾಗಲಿ ಕೊಡುವದು ವಿಹಿತ. ಪ್ರತಿಕ್ರಿಯಾಶಕ್ತಿಯು ಬೆಳೆಯುವ ವರೆಗೆ ಔಷಧದ ಪ್ರಮಾಣವನ್ನು ಬೆಳೆಯಿಸಬೇಕು. ಪ್ರತಿಕ್ರಿಯಾಶಕ್ತಿಯು ನಿರ್ಮಾಣವಾದನಂತರ ಮೂಳ ಕ್ಷಾರವನ್ನು ಕೊಡುವದು ಬಿಟ್ಟು ೩×, ೬×, ೧೨× ಮುಂತಾದ ಶಕ್ತಿಯ ಔಷಧಗಳನ್ನು ತಾರತಮ್ಯದಿಂದ ಕೊಡಬೇಕು.

ಬೈಲುಸ್ಥಳದಲ್ಲಿ ಬಹಳ ವೇಳೆ ಕೆಲಸ ಮಾಡತಕ್ಕ ಜನರೂ, (ಒಕ್ಕಲಿಗರೂ, ಕೂಲಿಕಾರರೂ ಮುಂತಾದವರೂ) ತಿನ್ನಲಿಕ್ಕೆ ಪೌಷ್ಟಿಕ ಅನ್ನ ಸಿಗದಂಥವರೂ ತಂಬಾಕು (ಹೊಗೆಸೊಪ್ಪು) ತಿನ್ನುವವರೂ, ಹೊಗೆಸೊಪ್ಪು ಸೇದುವವರೂ, ನಶ್ಯ, ಮದ್ಯಮಾಡುವವರೂ, ಕುಡಿಯುವವರೂ, ಔಷಧಗಳನ್ನು ಸಿದ್ಧಪಡಿಸುವವರೂ, ಸುಗಂಧಗಳನ್ನು ಉಪಯೋಗಿಸುವವರೂ— ಇಂಥ ಜನರ ಗ್ರಹಣಕ್ಷಮತೆಯು ಬಹುತರವಾಗಿ ಕಡಿಮೆಯಿರುತ್ತದೆ. ಇಂಥವರಿಗೆ ಕಡಿಮೆ ಶಕ್ತಿಯ ಔಷಧವು ಸರಿಯಾಗುತ್ತದೆ. ಕೈಲಾಗದವರೂ, ಕಿವುಡರೂ, ಮೂಕರೂ— ಇವರ ಗ್ರಹಣಕ್ಷಮತೆಯು ಸಾಧಾರಣವಾಗಿ ಕಡಿಮೆಯಿರುತ್ತದೆ. ಇಂಥವರಿಗೆ ಕಡಿಮೆ ಶಕ್ತಿಯ ಔಷಧ ಕೊಡಬೇಕು.

ಅಲೋಪಾಥಿ ಔಷಧ ತೆಗೆದುಕೊಳ್ಳುವ ರೂಢಿ ಇದ್ದವರಿಗೂ, ಔಷಧ ತೆಗೆದುಕೊಂಡು ಬೇಸರಗೊಂಡವರಿಗೂ ಯೋಗ್ಯವಾದ ಬಲವತ್ತರ ಶಕ್ತಿಯ ಔಷಧದ ಉಪಯೋಗದಿಂದ ಆಶ್ಚರ್ಯವಾಗುವಂಥ ಹಾಗೂ ಇಷ್ಟ ಪರಿಣಾಮಗಳು ಆಗುವದು ಕಂಡುಬಂದದೆ.

ಔಷಧದ ಶಕ್ತಿ ನಿಶ್ಚಯಿಸುವ ಸಂದರ್ಭದಲ್ಲಿ ರೋಗದ ಸ್ವಾಸ, ಅದರ ಸ್ವರೂಪ, ಮತ್ತು ಅದರ ತೀವ್ರತೆ ಇವುಗಳ ವಿಚಾರ ಮಾಡಬೇಕಾಗುವದು. ( ದುರ್ಗಿಬೇನೆ=Cholera ) ಮಹಾಮಾರಿಯಂಥ ದೋಷಿಕಬೇನೆ ಮತ್ತು ತೀವ್ರ ಪ್ರಾಣಹಾರಕ ಬೇನೆಗಳಲ್ಲಿ ಕಡಿಮೆ ಶಕ್ತಿಯ ಔಷಧ ಕೊಡಬೇಕಾಗುವದು.

ಸಾಧಾರಣತಃ ಹೇಳಬಹುದಲ್ಲ— ಮಂದಸ್ವರೂಪದ ಬೇನೆಗಳಲ್ಲಿ ಕಡಿಮೆ ಶಕ್ತಿಯ ಔಷಧಗಳನ್ನು ಉಪಯೋಗಿಸಬೇಕಾಗುವದು. ಮತ್ತು ಉಗ್ರಸ್ವರೂಪದ ಬೇನೆಗಳಲ್ಲಿ ಹೆಚ್ಚು ಶಕ್ತಿಯುಳ್ಳವು ಗುಣ ಕೊಡುವವು. ಅವು ಗುಣಕಾರಿಯಾಗುತ್ತವೆ. ಆದರೆ ಇದರಲ್ಲಿ ಸಹ ರೋಗಿಗಳ ಪ್ರಕೃತಿ ಮತ್ತು ಸ್ವಭಾವ ಇವುಗಳ ಮೇರೆಗೆ ಬದಲುಮಾಡುವ ಆವಶ್ಯಕತೆಯುಂಟಾಗುವದು. ರೋಗಿಯು ನಾಜೂಕನೂ ಉತ್ಸಾಹಿ ಪ್ರಕೃತಿಯವನಿದ್ದರೆ ಹೆಚ್ಚು ಶಕ್ತಿಯ ಔಷಧ ಮತ್ತು ಮಂದ ಹಾಗೂ ಹುಂಬ ಸ್ವಭಾದವನಿದ್ದರೆ ಕಡಿಮೆ ಶಕ್ತಿಯ ಔಷಧಗಳನ್ನು ಉಪಯೋಗಿಸಬೇಕು. ಬೇರೆ ಬೇರೆ ರೋಗದ ಅವಸ್ಥೆಗಳಲ್ಲಿ ಒಂದೇ ಶಕ್ತಿಯ ಉಪಯೋಗವಾದೀತೆಂದು ಹೇಳಕೂಡದು. ರೋಗದ ಒಂದು ಅವಸ್ಥೆಯಲ್ಲಿ ಒಂದು ಶಕ್ತಿಯ ಉಪಯೋಗವಾಗುವದು. ಎರಡನೇ ಅವಸ್ಥೆಯಲ್ಲಿ ಎರಡನೇ ಶಕ್ತಿಯಾಗಲೀ ಎರಡನೇ ಔಷಧವಾಗಲಿ ಕೊಡಬೇಕಾಗುವದು. ಆಯಾ ಕಾಲದ ರೋಗಿಯ ಗ್ರಹಣಕ್ಷಮತೆಯ ಮೇಲೆ ( ಪ್ರತಿಕ್ರಿಯಾ ಶಕ್ತಿಯ ಮೇಲೆ ) ಔಷಧದ ಪ್ರಮಾಣ ಮತ್ತು ಕ್ರಮ ಅವಲಂಬಿಸಿರುವವು. ರೋಗಿಯ ಗ್ರಹಣಕ್ಷಮತೆ ಹೆಚ್ಚುಕಡಿಮೆ ಆದಂತೆ ಔಷಧದ ಶಕ್ತಿಯನ್ನಾದರೂ ಬದಲಿಸಬೇಕು. ಕೆಲವು ಲಕ್ಷಣಗಳು ಯಾವದೊಂದು ( ಔಷಧದ ) ಶಕ್ತಿಯಿಂದ ಇಲ್ಲದಂತಾದರೆ ಬೇರೆ ಲಕ್ಷಣಗಳನ್ನು ( ಔಷಧದ ) ಹೆಚ್ಚು ಕಡಿಮೆ ಶಕ್ತಿಯಿಂದ ಇಲ್ಲಗೊಳಿಸ

ಬೇಕಾಗುವದು. ಪ್ರತಿಕ್ರಿಯಾಶಕ್ತಿಯು ಜಾಗೃತವಾಗುವ ವರೆಗೆ ಕಡಿಮೆ ಶಕ್ತಿಯ ಔಷಧವನ್ನು ಅಥವಾ ಮೂಳಕ್ಕಾರಗಳನ್ನು ಸಹ ಕೊಡಬೇಕಾಗುವದು. ಪ್ರತಿಕ್ರಿಯಾಶಕ್ತಿಯು ಉತ್ಪನ್ನವಾದನಂತರ ಔಷಧ ಕೊಡುವ ಅವಶ್ಯಕತೆ ಕಂಡುಬಂದಲ್ಲಿ ಪ್ರತಿಕ್ರಿಯೆಗೆ (ಅಥವಾ ಗ್ರಹಣಶಕ್ತಿಗೆ) ಅನುಸರಿಸಿ ಮಧ್ಯಮ ಅಥವಾ ಬಲವತ್ತರ ಶಕ್ತಿಯ ಉಪಯೋಗ ಮಾಡಬೇಕು. ಗ್ರಹಣ ಕ್ಷಮತೆ ಕಡಿಮೆ ಇದ್ದಂತೆ ಕಡಿಮೆ ಶಕ್ತಿಯ ಔಷಧ ಮತ್ತು ಗ್ರಹಣ ಕ್ಷಮತೆ ಹೆಚ್ಚಿಗಿದ್ದರೆ ಔಷಧದ ಶಕ್ತಿಯು ಹೆಚ್ಚು ಎಂದು ಸರ್ವಸಾಧಾರಣ ನಿಯಮವುಂಟು. ಔಷಧದ ಶಕ್ತಿಯನ್ನಾರಿಸುವ ( ಅಥವಾ ನಿಶ್ಚಯಿಸುವ ) ಕಾಲಕ್ಕೆ ಸ್ಥೂಲತಃ ಯಾವತತ್ವಕ್ಕನುಸರಿಸಿ ಶಕ್ತಿಯನ್ನು ನಿಶ್ಚಯಿಸಬೇಕೆಂಬದರ ಬಗ್ಗೆ ವಿಸ್ತೃತ ವಿವೇಚನ ಮಾಡಿದ್ದೇವೆ. ಜೀವನ ರಸಾಯನ ಶಾಸ್ತ್ರದ ಯಾವದೇ ಇಂಗ್ಲಿಷ ಅಥವಾ ಮಹಾರಾಷ್ಟ್ರ ಗ್ರಂಥದಲ್ಲಿ ಇಷ್ಟು ವಿವೇಚನವಿಲ್ಲ. ಈ ಚಿಕಿತ್ಸಾಪದ್ಧತಿಯ ಉತ್ಪಾದಕರು ಮತ್ತು ಪ್ರವರ್ತಕರು ಹೆಚ್ಚು ಶಕ್ತಿಯ (ಕ್ರಮದ) ಔಷಧಗಳನ್ನು ಉಪಯೋಗಿಸುವದಿಲ್ಲ. ಆದ್ದರಿಂದ ಈ ತರದ ಸೂಕ್ಷ್ಮ ಮತ್ತು ತಾತ್ವಿಕ ವಿಚಾರಮಾಡುವದು ಅವರಿಗೆ ಅವಶ್ಯವೆನಿಸಿರಲಿಕ್ಕಿಲ್ಲ. ಈ ತರದ ವಿವೇಚನವು ಜೀವನರಸಾಯನಶಾಸ್ತ್ರದಲ್ಲಿ ಇರದಿರಲಿಕ್ಕೆ ಇದೇ ಕಾರಣವಿರಬಹುದು. ಸಾಧಾರಣತಃ ಇನ್ನೂರು, ಐನೂರು, ಸಾವಿರ, ಹತ್ತುಸಾವಿರ ಲಕ್ಷ, ಹತ್ತುಲಕ್ಷ ಇಷ್ಟು ಹೆಚ್ಚಿನಶಕ್ತಿಯ ಔಷಧದ ಉಪಯೋಗದ ಅವಶ್ಯಕತೆಯಿದ್ದ ಪ್ರಸಂಗದಲ್ಲಿ ಔಷಧದ ಕ್ರಮ (ಶಕ್ತಿ) ಹೇಗೆ, ಯಾವುದು, ಯಾವ ಪ್ರಸಂಗದಲ್ಲಿ, ಯಾಕೆ ಉಪಯೋಗಿಸಬೇಕೆಂಬದರ ಸೂಕ್ಷ್ಮ ವಿವೇಚನ ಮಾಡುವ ಅವಶ್ಯಕತೆಯುಂಟಾಗುತ್ತದೆ. ೧೨ ಕ್ಷಾರ ಶಾಸ್ತ್ರಜ್ಞರು ಸಾಧಾರಣ ಕಡಿಮೆಶಕ್ತಿಯ (ಅಂದರೆ ೧× ೬× ವರೆಗೆ) ಮಧ್ಯಮ ಅಂದರೆ ೩೦× ಶಕ್ತಿಯುವರೆಗೆ ಹೆಚ್ಚು ಅಂದರೆ ೨೦೦ × ವರೆಗೆ ಶಕ್ತಿಯ ಔಷಧವನ್ನು ಉಪಯೋಗಿಸುವದುಂಟು. ಆದರೂ ಹೆಚ್ಚಿನ ಶಕ್ತಿಯ ಔಷಧಗಳನ್ನು ಉಪಯೋಗಿಸಬಾರದಂತಲ್ಲ. ಮೇಲೆ ವಿವೇಚನಮಾಡಿದ ತತ್ವಕ್ಕನುಸರಿಸಿ ಅವಶ್ಯವಿದ್ದ ಪ್ರಸಂಗದಲ್ಲಿ ಹೆಚ್ಚಿನಕ್ರಮದ (ಶಕ್ತಿಯ) ಔಷಧಗಳನ್ನು ಅವಶ್ಯವಾಗಿ ಉಪಯೋಗಿಸಬೇಕು. ರೋಗಿಯ ಲಕ್ಷಣಕ್ಕನುಸರಿಸಿ

ಔಷಧವು ಯೋಗ್ಯ ಆರಿಸಲ್ಪಟ್ಟರೆ ಆದರಿಂದ ಗುಣವು ಬರಲೇಬೇಕು. ಆದರೆ ಹೆಚ್ಚು ಶಕ್ತಿಯ ಔಷಧ ಕೊಡಬೇಕಾದರೆ ಮೇಲಿಂದಮೇಲೆ ಅಂಥವನ್ನು ಕೊಡದೆ ಅವಶ್ಯವಿದ್ದಹಾಗೆ ೪, ೮, ೧೫ ದಿವಸದ ಅವಧಿಯಲ್ಲಿ ಒಮ್ಮೆ ಕೊಡಬೇಕು, ಇದನ್ನು ಮರೆಯಕೂಡದು. ಕೊಟ್ಟ ಔಷಧದಿಂದ ಗುಣ ಬರುತ್ತದೆ, ಹಗುರವೆನಿಸುತ್ತದೆ ಹೀಗೆ ಕಂಡುಬಂದಲ್ಲಿ 'ಗುಣಬರುವ ವರೆಗೆ ಪುನಃ ಔಷಧ ಕೊಡುವದು ಅವಶ್ಯವಿಲ್ಲ. ಸರಿಯಾದ ಔಷಧ ಒಂದೇಸಾರೆ ಕೊಟ್ಟರೂ ಸಹ ರೋಗವು ಸಮೂಳ ಇಲ್ಲದಂತಾಗಬಹುದು. ಗುಣ ಬಂದಮೇಲೆ ಸಹ ಔಷಧಕೊಟ್ಟಲ್ಲಿ ಆದರ ಕಾರ್ಯದಲ್ಲಿ ವಿನಾಕಾರಣ ತೊಂದರೆಮಾಡಿದಂತಾಗಿ ಗುಣಬರಲಿಕ್ಕೆ ಅಡ್ಡಿಯಾಗುವದು.

ಔಷಧದ ಶಕ್ತಿಯನ್ನು ಮೇಲೆ ಹೇಳಿದ ಮೇರೆಗೆ ಗೊತ್ತುಪಡಿಸಿದ ನಂತರ ಜೀವನರಸಾಯನ ಶಾಸ್ತ್ರಜ್ಞರು ಔಷಧದ ಶಕ್ತಿಯ ಸಂಬಂಧದಿಂದ ಬೇರೆ ಬೇರೆ ಸಂದರ್ಭದಲ್ಲಿ ಮಾಡಿದ ಉಲ್ಲೇಖವನ್ನು ಸಾಮಾನ್ಯ ಜನರ ತಿಳುವಳಿಕೆಯ ಸಲುವಾಗಿ ಮಾಡುವದು ಅವಶ್ಯ ಕಂಡದ್ದರಿಂದ ಇಲ್ಲಿ ಸ್ವಲ್ಪದರಲ್ಲಿ ಉಲ್ಲೇಖ ಮಾಡುತ್ತೇವೆ. ಗುಣಧರ್ಮ ಪ್ರಕರಣದಲ್ಲಿ "ಔಷಧದ ಉಪಯೋಗ" ವೆಂಬ ಭಾಗದಲ್ಲಿ ಯಾವ ಶಕ್ತಿಯ ಔಷಧವನ್ನು ಉಪಯೋಗಿಸಬೇಕೆಂಬದನ್ನು ಸ್ಥೂಲಮಾನದಿಂದ ಹೇಳಿಯೇ ಅದೆ. ಹೊರ್ತಾಗಿ ಬೇರೆ ಸ್ಥಳಗಳಲ್ಲಿಯೂ ಉಲ್ಲೇಖವು ಕಂಡುಬರುವದು. ಉಲ್ಲೇಖವೆಂದರೆ ಸ್ಪಷ್ಟ ನಿಯಮಗಳಲ್ಲ. ಜೀವನರಸಾಯನ ಶಾಸ್ತ್ರಜ್ಞರ ಅವರವರ ಅನುಭವಗಳಿದ್ದು ಅವು ಮಾರ್ಗದರ್ಶಕಗಳೆಂದು ತಿಳಕೊಳ್ಳಬೇಕು. ಸಾಧಾರಣ ಹಳೆರೋಗದಲ್ಲಿ ೬×ಶಕ್ತಿಯ ಔಷಧವನ್ನು ಉಪಯೋಗಿಸಬೇಕು. ಅದರಿಂದ ಗುಣಬರದಿದ್ದರೆ ಹೆಚ್ಚು ಕಡಿಮೆ ಶಕ್ತಿಯನ್ನು ಯೋಜಿಸಬೇಕು. ವೇದನೆ, ಕಳೆ (ಒಮ್ಮೆಂದೊಮ್ಮೆ ಉದ್ಭವಿಸುವ ವೇದನಾತಿಶಯಕ್ಕೆ ಕಳೆ ಅನ್ನುವದುಂಟು). ಮುಂತಾದ ರೋಗದ ಪ್ರಸಂಗದಲ್ಲಿ ೩× ಶಕ್ತಿಯ ಔಷಧ ಬಿಸಿನೀರಿನಲ್ಲಿ ಕೊಡುವದು ಲೇಸು. ಈ ಚಿಕಿತ್ಸಾಪದ್ಧತಿಯ ಉತ್ಪಾದಕರಾದ ಶೂಜಲರ ಸಾಹೇಬರು ಮೊದಲು ೬×, ೧೨×ಶಕ್ತಿಯ ಔಷಧಗಳನ್ನು ಪ್ರಾರಂಭ ಮಾಡಿದರು. ಮೊಟ್ಟಮೊದಲು ೬×ನೇ ಶಕ್ತಿಯ ಔಷಧಗಳನ್ನೇ ಕೊಡು

ತ್ತಿದ್ದರು. ಆನಂತರ ಪೊಟ್ಯಾಶಿಯಮ್ ಸೋಡಿಯಮ್ ಈಕ್ಷಾರ ೩×ಶಕ್ತಿಯುಳ್ಳದ್ದು ಮತ್ತು ಇತರ ಕ್ಷಾರಗಳು ೪×, ೫×ಶಕ್ತಿಯುಳ್ಳವುಗಳನ್ನು ಉಪಯೋಗಿಸಿ ಅಷ್ಟೇ ಉಪಯೋಗವಾಗುತ್ತದೆಂದೂ ಹಾಗೂ ಫೆರಮ್ ಫಾ, ಸಿಲಿಕಾ, ಕಲ್ಕೆರಿಯಾಫ್ಲೂ ಎಂಬೌಷಧಗಳು ಸಾಧಾರಣತಃ ೧೨× ಶಕ್ತಿಯುಳ್ಳವು ಗುಣಕೊಡುವದಾಗಿಯೂ ಕಂಡುಬಂತು. ಮುಂದೆ ಅವರು ಸಾಧಾರಣತಃ ೬ × ಶಕ್ತಿಯ ಔಷಧಗಳನ್ನು ಉಪಯೋಗಿಸಹತ್ತಿದರು. ಬೇರೆ ಬೇರೆ ರೋಗಗಳಲ್ಲಿ ಯಾವ ಔಷಧದ ಯಾವ ಶಕ್ತಿಯು ಗುಣಮುಖವಾಗುವದೆಂಬದನ್ನು "ಗುಣಧರ್ಮ" ಪ್ರಕರಣದಲ್ಲಿ ಔಷಧದ ಶಕ್ತಿ ಎಂಬ ಸದರಿನ ಕೆಳಗೆ ಉಲ್ಲೇಖಮಾಡಿದ್ದರಿಂದಲೂ ಎರಡನೇ ಸ್ಥಳಗಳಲ್ಲಿಯೂ ಅದರ ಉಲ್ಲೇಖ ಬಂದಿದ್ದರಿಂದಲೂ ಈ ಸ್ಥಳದಲ್ಲಿ ಹೆಚ್ಚಿನ ಉಲ್ಲೇಖದ ಅವಶ್ಯಕತೆಯು ತೋರುವದಿಲ್ಲ. ಔಷಧದ ಶಕ್ತಿಯ ಉಲ್ಲೇಖವಿಲ್ಲದಿದ್ದರೆ ೬×ಶಕ್ತಿಯ ಔಷಧವನ್ನೇ ಉಪಯೋಗಿಸಬೇಕೆಂದು ತಿಳಿಯಬೇಕು. ಇದು ಕೇವಲ ಸ್ಥೂಲ ಮಾರ್ಗದರ್ಶಕ ಧೋರಣವೆಂದು ತಿಳಿದು ಈ ಮೊದಲು ಮಾಡಿದ ತಾತ್ವಿಕ ವಿವೇಚನವನ್ನು ಲಕ್ಷ್ಯದಲ್ಲಿಟ್ಟು ಸ್ವತಃದ ಕಲ್ಪನೆ ಮತ್ತು ಅನುಭವಕ್ಕನುಸರಿಸಿ ಅವಶ್ಯಕಂಡಂತೆ ಔಷಧದ ಶಕ್ತಿಯನ್ನು ಆರಿಸಿ ಔಷಧವನ್ನು ಕೊಡಬೇಕು.

ಈ ಔಷಧದಿಂದ ಅಪಾಯವಾಗುತ್ತದೆಯೋ ಜೀವನರಸಾಯನ ಔಷಧವನ್ನು ಹೆಚ್ಚು ಪ್ರಮಾಣದಲ್ಲಿ ಕೊಟ್ಟದ್ದರಿಂದಾಗಲಿ ತಪ್ಪಿಕೊಡಬಾರದಂಥದನ್ನು ಕೊಟ್ಟಲ್ಲಿಯೂ ಏನೂ ಅಪಾಯವಾಗುವದಿಲ್ಲ. ಹೀಗೆ ಸರ್ವಸಾಧಾರಣ ತಿಳುವಳಿಕೆ ಇದ್ದಂತೆ ಕಾಣುತ್ತದೆ. ಇದು ಒಂದರ್ಥದಿಂದ ನಿಜವೂ ಅದೆ. ಅ್ಯಲೋಪಥಿಯಲ್ಲಾಗಲಿ ಆಯುರ್ವೇದದಲ್ಲಾಗಲಿ ಪ್ರಮಾಣ ಬಿಟ್ಟು ಹೆಚ್ಚು ಔಷಧ ಕೊಟ್ಟಲ್ಲಿ ಯಾವ ರೀತಿಯಲ್ಲಿ ಅನರ್ಥ ಒದಗುವದು ಅಂಥ ಅನರ್ಥ ಅಥವಾ ಅಪಾಯ ಈ ಔಷಧದಿಂದಾಗುವದಿಲ್ಲವೆಂಬ ಮಾತು ನಿಜ. ಅ್ಯಲೋಪಥಿಯ ಔಷಧಗಳಲ್ಲಿ ಎಷ್ಟೋ ಅತಿ ಉಗ್ರ ಔಷಧಗಳು ಸ್ವಲ್ಪ ಪ್ರಮಾಣದಲ್ಲಿ ಸಹ ತಪ್ಪಿ ಹೊಟ್ಟೆಯಲ್ಲಿ ಹೋದರೆ ರೋಗಿಯು ಮೃತ್ಯುಪಂಥವನ್ನು ಹಿಡಿಯುವ ಸಂಭವವಿರುತ್ತದೆ. ಇಲ್ಲವೆ ಪ್ರಕೃತಿಗೆ

ದೀರ್ಘಕಾಲೀನ ತ್ರಾಸು ಅಥವಾ ಸ್ಥಿರ ಅಪಾಯವು ಆಗುವದು. ಇಂಥ ಅಪಾಯದ ಭೀತಿಯು ಈ ರಸಾಯನ ಔಷಧದಿಂದುಂಟಾಗಲಾರದು. ರೋಗವಿಲ್ಲದವನು ಈ ಔಷಧವನ್ನು ಹೆಚ್ಚು ಪ್ರಮಾಣದಲ್ಲಿ ಉಪಯೋಗಿಸಿದರೆ ಯಾವದೂ ದೃಶ್ಯಪರಿಣಾಮ ಉಂಟಾಗಲಿಕ್ಕಿಲ್ಲೆಂಬದು ನಿಜ. ಈ ದೃಷ್ಟಿಯಿಂದ ಈ ಔಷಧದಿಂದ ಅಪಾಯವಾಗಲಾರದು ಎಂದೆನ್ನಬಹುದು. ಆದರೂ ಯಾವದೇ ಔಷಧ ಕೆಲಸವಿಲ್ಲದೆ ಸುಮ್ಮನೆ ತೆಗೆದುಕೊಂಡರೆ ಅಥವಾ ಹೆಚ್ಚು ಪ್ರಮಾಣದಲ್ಲಿ ತೆಗೆದುಕೊಂಡರೆ ಏನಾದರೂ ತ್ರಾಸದಾಯಕ ಭಾವನೆಗಳು ಉಂಟಾಗುವವು ಮತ್ತು ಉಪಯೋಗಬೀಳುವಂಥ ಔಷಧಕ್ಕೆ ವ್ಯತ್ಯಾಸವುಂಟಾಗುವದು. ಉದಾಹರಣಾರ್ಥ "ಕಲ್ಕೆ-ಫಾಸ" ಈ ಔಷಧ ತಕ್ಕೊಳ್ಳಿರಿ. ಇದನ್ನು ಬಹಳ ದಿವಸ ಕಾರಣವಿಲ್ಲದೆ ತೆಗೆದುಕೊಂಡರೆ ಅಶ್ಮರಿ ಅಥವಾ ಮೂತ್ರಶೂಳವಾಗುವ ಭಯವಿದೆ. ಹಿಂದೆ ಹೇಳಿದಂತೆ ಪಂಡುರೋಗಕ್ಕೆ "ಫೆರಮ್ ಫಾಸ"ವನ್ನು ಹೆಚ್ಚು ಪ್ರಮಾಣದಲ್ಲಿ ಕೊಟ್ಟರೆ ಉದರದಲ್ಲಿ ವ್ಯತ್ಯಾಸವುಂಟಾಗಿ ಪಂಡುರೋಗವು ನೆಟ್ಟಗಾಗುವದಿಲ್ಲ. ಈ ಔಷಧಗಳು ವಿಷವಲ್ಲ. ಆದರೆ ಯಾವದೇ ಔಷಧ ಬಹಳ ದಿವಸ ತೆಗೆದುಕೊಳ್ಳುವ ಕ್ರಮವನ್ನು ಇಟ್ಟರೆ ಶರೀರದಲ್ಲಿ ಔಷಧದ ಭಾವನೆಗಳುಂಟಾಗಿ ತ್ರಾಸವಾಗುವದು ನಿರ್ವಿವಾದವೇ ಸರಿ. ಔಷಧದ ಶಕ್ತಿಯ ಬಗ್ಗೆ ಸಹ ಹೆಚ್ಚುಕಡಿಮೆ ಹೀಗೆಯೇ ಅನ್ನಬಹುದು. ಆದರೆ ಶರೀರದಲ್ಲಿ ಉದ್ಭವಿಸಿದ ಅಪಾಯಗಳು ಸ್ಥಿರವಾಗಿ ಉಳಿಯುತ್ತವೆ ಎಂದು ಮಾತ್ರ ಅನ್ನಲಾರೆವು. ಅಪಾಯವಾಗುವದಿಲ್ಲೆಂದು ತಿಳಿದು ಬೇಡಾದ ಔಷಧವನ್ನು ಕೊಡುವದು, ಮತ್ತು ಅವಶ್ಯವಿದ್ದ ಔಷಧವನ್ನು ಹೆಚ್ಚು ಪ್ರಮಾಣದಲ್ಲಿ ಕೊಡುವದು ಯಾವಾಗಲೂ ಅಯೋಗ್ಯವು. ಇದರಿಂದ ಚಿಕಿತ್ಸೆಯಲ್ಲಿ ಯುಶಬರಲಾರದೆಂಬದನ್ನು ಲಕ್ಷ್ಯದಲ್ಲಿಡಬೇಕು.

**ಹೊಸ ಶೋಧವು:—** ಚಿಕಿತ್ಸಾಶಾಸ್ತ್ರದ ಸಂಬಂಧದಿಂದ ಡಾಕ್ಟರ ಶೂಜಲರ ಮುಂತಾದವರ ಮತವೇನಿದೆ ಎಂಬದನ್ನು ಅವರ ಶಬ್ದದಲ್ಲಿಯೇ ಈ ವರೆಗೆ ಸವಿಸ್ತಾರವಾಗಿ ಹೇಳಲಾಗಿದೆ. ಡಾ. ಶೂಜಲರ ಸಾಹೇಬರ ನಂತರ ಎಷ್ಟೋ ಹೊಸ ಶೋಧಗಳಾಗಿವೆ. ಅವುಗಳಿಗನುಸರಿಸಿ ಚಿಕಿತ್ಸಾಶಾಸ್ತ್ರದ ಬಗ್ಗೆ ಡಾ. ವ್ಹಾನಡರ ಗೋಲ್ವಜ ಎಂಬವರು ಕೆಲವು ವಿಚಾರ

ಗಳನ್ನು ಮುಂದಿಟ್ಟಿದ್ದಾರೆ. ಈ ಶೋಧಗಳು ಅಂದರೆ ಪ್ರಗತಿಯ ಸ್ವರೂಪ. ಇವನ್ನು ಈ ಮುಂದೆ ಹೇಳುತ್ತೇವೆ.

ನಿರಿಂದ್ರಿಯ ಕ್ಷಾರಗಳೇ ಶರೀರದ ಸಂವರ್ಧಕ, ಕರ್ತೃತ್ವವುಳ್ಳ, ಮತ್ತು ಆಧಾರಭೂತ ಘಟಕಗಳು. ಪಿಂಡಗಳಲ್ಲಿಯ ಕ್ಷಾರಗಳ ಪ್ರಮಾಣದಲ್ಲಿ ಕೊರತೆಯಾದರೆ ಈ ಕ್ಷಾರಗಳ ಗತಿಯಲ್ಲಿ ವ್ಯತ್ಯಾಸ ಉತ್ಪನ್ನವಾಗುತ್ತದೆ. ಈ ವ್ಯತ್ಯಾಸಕ್ಕೆ ರೋಗವೆನ್ನುತ್ತಾರೆ. ಪಿಂಡವು ಕ್ಷಾರಗಳನ್ನು ಸೂಕ್ಷ್ಮ ಪ್ರಮಾಣದಲ್ಲಿ ಪೂರೈಸಿ ಅಣುಗಳ ಗತಿಯ ಸಮತೆಯನ್ನು ಸ್ಥಿರಪಡಿಸಿ ವ್ಯತ್ಯಾಸವನ್ನು ಇಲ್ಲದಂತೆ ಮಾಡಬಹುದು. ಅಂದರೆ ಪಿಂಡಗಳ ಘಟಕ ಕ್ಷಾರಗಳು ಕಡಿಮೆಯಾದರೆ ರೋಗವು ಉದ್ಭವಿಸುತ್ತದೆ ಮತ್ತು ಕ್ಷಾರಗಳನ್ನು ಪೂರೈಸಿದರೆ ರೋಗವು ಹೋಗುತ್ತದೆ. ಈ ತತ್ವವು ಡಾ. ಶೂಜಲರ ಸಾಹೇಬರಿಂದ ಪ್ರಸ್ಥಾಪಿತವಾಯಿತು. ಇದೇ ಈ ಚಿಕಿತ್ಸಾ ಶಾಸ್ತ್ರದ ಮೂಲ ತತ್ವವೂ, ಸಿದ್ಧಾಂತವೂ. ಇದು ಡಾ. ಗೋಲ್ವಜ ಸಾಹೇಬರಿಗೆ ಮಾನ್ಯವದೆ. ಇದರ ಬಗ್ಗೆ ಚಿಕಿತ್ಸಾ ಶಾಸ್ತ್ರದಲ್ಲಿ ಮತಭೇದವಿಲ್ಲ. ಆದರೆ (೧) ಶರೀರದಲ್ಲಿ ೧೨ ಡೇ ಕ್ಷಾರಗಳು ಅವೆ ಅಂತಲ್ಲ. ಅದಕ್ಕೂ ಹೆಚ್ಚು ಕ್ಷಾರಗಳು ಕಂಡುಬರುತ್ತವೆ. ಅವನ್ನು ಸಹ ರೋಗನಿವಾರಣದ ಕಾರ್ಯಕ್ಕೆ ಉಪಯೋಗಿಸಬಹುದು. (೨) ಸೂಕ್ಷ್ಮ ಪ್ರಮಾಣದಲ್ಲಿ ಕೊಟ್ಟ ಔಷಧದ (ಕ್ಷಾರಗಳ) ಕಾರ್ಯವು ಯಾವ ಪದ್ಧತಿಯ ಮೇಲೆ ಮತ್ತು ಹೇಗೆ ಆಗುತ್ತದೆ ಇದರ ಸ್ಪಷ್ಟೀಕರಣ ಈ ಎರಡೇ ಮುಖ್ಯ ವಿಚಾರಮಾಡತಕ್ಕ ಪ್ರಶ್ನಗಳ ಮೇಲೆ ಡಾ. ಗೋಲ್ವಜ ಸಾಹೇಬರು ಆಧುನಿಕ ಶಾಸ್ತ್ರೀಯ ಶೋಧದ ಆಧಾರದಿಂದ ಹೊಸ ವಿಚಾರಗಳನ್ನು ಪ್ರಕಟಿಸಿದ್ದಾರೆ. ಡಾ. ಶೂಜಲರರ ಕಾಲಕ್ಕೆ ಶರೀರದಲ್ಲಿ ೧೨ಡೇ ಕ್ಷಾರಗಳಿವೆಯೆಂದು ತಿಳಿಯುತ್ತಿದ್ದರು. ಆ ಕಾಲಕ್ಕೆ ಪ್ರಚಲಿತವಿರುವ ಶಾಸ್ತ್ರೀಯ ಕಲ್ಪನೆಗಳಿಗೆ ಅದು ಸರಿಯೇ ಇತ್ತು. ಆ ಕಾಲಕ್ಕೆ ಆರ್ಸೆನಿಕಂ, ಓಡಿಯಂ, ಬ್ರೋಮಿಯಂ, ಮ್ಯಾಂಗ್ಯಾನಂ, ಪ್ಲಂಬಂ, ಆ್ಯಲ್ಯೂಮಿನಿಯಂ, ಕೂಪ್ರಂ ಮುಂತಾದ ಮೂಲ ದ್ರವ್ಯಗಳು ಶರೀರದ ಘಟಕಗಳಿವೆಯೆಂದು ಶಾಸ್ತ್ರಜ್ಞರಿಗೆ ಗೊತ್ತಿರಲಿಲ್ಲ. ಶರೀರದಲ್ಲಿ ೧೨ಡೇ ಕ್ಷಾರಗಳಿವೆ ಎಂದು ಹೇಳುವ ಡಾ.

ಶೂಜಲರ ಮುಂತಾದವರಿಗೆ ದೋಷ ಕೊಡಕೂಡದು. ಆದರೆ ಅನಂತರ ಆದ ಶಾಸ್ತ್ರೀಯ ಶೋಧಗಳಲ್ಲಿ ಈ ೧೨ ಕ್ಷಾರಗಳಲ್ಲಿದ್ದ ಮೂಲ ದ್ರವ್ಯಗಳ ಹೊರ್ತಾಗಿ ಮೇಲೆ ಹೇಳಿದ ಮೂಲ ದ್ರವ್ಯಗಳೂ ಮತ್ತು ಕೆಲವು ಮೂಲ ದ್ರವ್ಯಗಳೂ ಮಾನವೀಶರೀರದ ಘಟಕಗಳಿವೆಯೆಂದು ತಿಳಿದು ಬಂದದೆ. ಸೃಷ್ಟಿಯಲ್ಲಿ ಅನೇಕ ಮೂಲ ದ್ರವ್ಯಗಳಿವೆ. * ಇವುಗಳಲ್ಲಿಯ ಎಷ್ಟೋ ಮೂಲ ದ್ರವ್ಯಗಳು ಮಾನವೀ ಶರೀರದಲ್ಲಿ ದೊರೆಯುತ್ತವೆ ಎಂದು ಸಿದ್ಧವಾಗಿದೆ. ಈ ಮೂಲದ್ರವ್ಯಗಳಿಂದಲೇ ಆಮ್ಲ (ಅಂದರೆ ಆ್ಯಸಿಡ) ಮತ್ತು ಕ್ಷಾರ ಸಿದ್ಧವಾಗುವದುಂಟು. ಇವುಗಳಲ್ಲಿಯ ಕೆಲ ವಿಶಿಷ್ಟ ಮೂಲದ್ರವ್ಯಗಳ ಸಂಯೋಗದಿಂದ (Combination) ಆಮ್ಲ ಪದಾರ್ಥಗಳು ಸಿದ್ಧವಾಗುತ್ತವೆ. ಆಮ್ಲ ಪದಾರ್ಥವೂ ಹಾಗೂ ಯಾವ ಮೂಲದ್ರವ್ಯದಿಂದ ಆಮ್ಲಪದಾರ್ಥಗಳು ಸಿದ್ಧವಾಗಿರುತ್ತವೆ ಆ ಮೂಲ ದ್ರವ್ಯಗಳ ಹೊರ್ತಾಗಿ ಇರುವ ಇತರ ಮೂಲದ್ರವ್ಯಗಳೂ ಇವುಗಳ ಸಂಯೋಗದಿಂದ ಸಿದ್ಧವಾಗುವ ಪದಾರ್ಥವೇ ಕ್ಷಾರವು. ಬೇರೆ ಬೇರೆ ಪರಿಸ್ಥಿತಿಗಳಿಗನುಸರಿಸಿ ಒಂದೇ ಮೂಲ ದ್ರವ್ಯದಿಂದ ಆಮ್ಲ ಪದಾರ್ಥಗಳ ಸಂಯೋಗದಿಂದ ಒಂದಕ್ಕಿಂತ ಹೆಚ್ಚು ಕ್ಷಾರಗಳು ಸಿದ್ಧವಾಗಬಹುದು. ಉದಾಹರಣಾರ್ಥ "ಕಲ್ಕೆರಿಯಾ" ಕ್ಷಾರವನ್ನು ತಕ್ಕೊಳ್ಳಿರಿ :— "ಕಲ್ಕೆರಿಯಾ" ಎಂಬ ಮೂಲದ್ರವ್ಯದಿಂದ ಒಂದೇ ಆಮ್ಲದ ಸಂಯೋಗ ದಿಂದ "ಕಲ್ಕೇರಿಯಾ ಫಾಸ್ಫೆಟ" ಎಂಬುದೊಂದೇ ಕ್ಷಾರ ಪದಾರ್ಥವು ಸಿದ್ಧವಾಗುತ್ತದೆಂತಲ್ಲ. "ಕಲ್ಕೇರಿಯಾ ಹಾಯಪೋ ಫಾಸ್ಫೇಟ" ವೆಂಬ ಕ್ಷಾರ ಸಹ ಸಿದ್ಧವಾಗುತ್ತದೆ. ಅದೇ ಪ್ರಕಾರ ಆರ್ಸೆನಿಕಲ್, ಆಯೋಡಮ್, ಮ್ಯಾಗ್ನ್ಯಾಸಮ್, ಫಾಸ್ಫರಸ, ಕಲ್ಕೇರಿಯಾ, ನೇಟ್ರಮ್, ಪ್ಲಂಬಂ, ಮತ್ತು ಇತರ ಮೂಲದ್ರವ್ಯಗಳು ಇರುತ್ತವೆ. ಇವುಗಳ ಪರಸ್ಪರ ಸಂಯೋಗದಿಂದ ಮತ್ತು ಕೆಲವು ಕ್ಷಾರ ಪದಾರ್ಥಗಳು ಸಹ ಸಿದ್ಧವಾಗುತ್ತವೆ. ಶರೀರದಲ್ಲಿಯ ಮೂಲದ್ರವ್ಯಗಳಿಗೆ ಕ್ಷಾರಗಳಿಗಿಂತಲೂ ಹೆಚ್ಚು

* ಯಾವ ದ್ರವ್ಯದ ಪೃಥಕ್ಕರಣಮಾಡಲಾಗಿ ತದ್ವ್ಯತಿರಿಕ್ತ ಇತರ ಮೂಲ ದ್ರವ್ಯವು ದೊರಕುವದಸಾಧ್ಯ ಅದಕ್ಕೆ ಮೂಲ ದ್ರವ್ಯವೆಂದನ್ನುವದುಂಟು. ತಾಮ್ರ, ಕಬ್ಬಿಣ, ಪ್ರಾಣವಾಯು ಉಚ್ಚ ಮುಂತಾದವು ಮೂಲ ದ್ರವ್ಯಗಳು.

ಮಹತ್ವ ಕೊಡತಕ್ಕದ್ದು. ಯಾಕಂದರೆ ಈ ಮೂಲ ದ್ರವ್ಯಗಳಿಂದಲೇ ಬೇರೆ ಬೇರೆ ಆಮ್ಲಪದಾರ್ಥಗಳೂ (Acids) ಮತ್ತು ಅವುಗಳ ಸಂಯೋಗದಿಂದಲೇ ಬೇರೆ ಕ್ಷಾರ ಪದಾರ್ಥಗಳೂ ಸಿದ್ಧವಾಗುತ್ತವೆ. ಹೀಗೆ ಇದ್ದದರಿಂದ ಶರೀರದಲ್ಲಿ ಡಾ. ಶೂಜಲರರು ಹೇಳಿದ ೧೨ ಡೇ ಕ್ಷಾರಗಳು (ಹೆಚ್ಚು ಅಲ್ಲ) ಸಿದ್ಧವಾಗುತ್ತವೆ ಎಂದು ತಿಳಿಯಕೂಡದು. ಈ ಕ್ಷಾರಗಳ ಸಂಖ್ಯೆಯು ೧೨ ಕ್ಕಿಂತ ಹೆಚ್ಚಿಗದೆ. ಮತ್ತು ಚಿಕಿತ್ಸಾಶಾಸ್ತ್ರದ ತತ್ವಕ್ಕನುಸರಿಸಿ ಈ ಹೆಚ್ಚಿನ ಕ್ಷಾರಗಳ ಉಪಯೋಗ ರೋಗನಿವಾರಣೆಯ ಕಾರ್ಯಕ್ಕಾಗಿಯೇ ಮಾಡತಕ್ಕದ್ದೆಂಬದು ಕ್ರಮಪ್ರಾಪ್ತವೇ ಸರಿ. ಹೀಗೆ ಡಾಕ್ಟರ ಗೊಲ್ವಜ ಇವರ ಯುಕ್ತಿವಾದವಿದ್ದು ಅದು ಸಹಜವೇ ಮನಸ್ಸಿಗೆ ತಟ್ಟುವಂತೆ ಇದೆ. ಈ ಕ್ಷಾರಗಳನ್ನು ಔಷಧಗಳೆಂದು ಉಪಯೋಗಿಸಿದರೆ ಕೇವಲ ೧೨ ಡೇ ಕ್ಷಾರಗಳ ಮೇಲೆ ಅವಲಂಬಿಸಿರುವ ಕಾರಣವಿಲ್ಲ. ರೋಗನಿವಾರಣೆಯ ಸಾಧನಗಳು (೧೨ ಕ್ಕಿಂತ) ಹೆಚ್ಚಾದ್ದರಿಂದ ರೋಗನಿವಾರಣೆಯ ಕೆಲಸಕ್ಕೆ ಸಹಾಯವಾದಂತೆ ಆಗುವದೆಂದು ಡಾಕ್ಟರ ಗೊಲ್ವಜ ಸಾಹೇಬರ ಮತವುಂಟು. ಹೀಗಿದ್ದಾಗ್ಯೂ ೧೨ ಕ್ಷಾರಗಳೇ ಹೆಚ್ಚು ಮಹತ್ವವುಳ್ಳವು. ರೋಗನಿವಾರಣೆಯ ಕೆಲಸಕ್ಕೆ ಅವುಗಳನ್ನೇ ಮೊದಲು ಉಪಯೋಗಿಸಬೇಕು. ಔಷಧಗಳ ಶಕ್ತಿಯನ್ನು ಬದಲಿಸಿಸಹ ೧೨ ಕ್ಷಾರಗಳ ಉಪಯೋಗವು ಆಗತಕ್ಕಷ್ಟು ಆಗದಿದ್ದರೆನೇ ಹೊಸಕ್ಷಾರಗಳನ್ನು ಉಪಯೋಗಿಸಬೇಕು. ಅಲ್ಲಿಯ ವರೆಗೆ ಅವುಗಳನ್ನು ಉಪಯೋಗಿಸಬಾರದೆಂದು ಸ್ವತಃ ಗೊಲ್ವಜ ಸಾಹೇಬರೇ ತಮ್ಮ ಅನುಭವದಮೇಲಿಂದ ಹೇಳುತ್ತಾರೆಂಬದನ್ನು ಮರೆಯಕೂಡದು. ಕ್ಷಾರಗಳ ಸಂಖ್ಯೆಯನ್ನು ಬೆಳೆಯಿಸುವ ಅವಶ್ಯಕತೆಯ ಕಾರಣವು ಸಹಜ ವಾಚಕರ ಲಕ್ಷ್ಯದಲ್ಲಿ ಬಂದಿರಲಿಕ್ಕೆ ಸಾಕು. *

* ೧೨ ಕ್ಕಿಂತ ಹೆಚ್ಚಿನ ಕ್ಷಾರಗಳಾವವೆಂಬದನ್ನು ಡಾ. ವ್ಹಾನಡರ ಗೋಲ್ವಜ ಸಾಹೇಬರು ತಮ್ಮ ಪಾಕೆಟ ಬುಕ್ಕ ಆಫ ಬಾಯೋಕೆಮಿಕ ಪ್ರಾಕ್ಟಿಸವೆಂಬ ಪುಸ್ತಕದಲ್ಲಿ ಹೇಳಿದ್ದಾರೆ. ಅದು ಬ್ಲ್ಯಾಕವುಡ್ಸ ಮಟೆರಿಯಾ ಮೆಡಿಕಾ ಮತ್ತು ಬೋರಿಕ್ಸ ಮಟೆರಿಯಾ ಮೆಡಿಕಾ ಎಂಬ ಗ್ರಂಥಗಳಲ್ಲಿ ಸಹ ದೊರೆಯುವದು. ಆದರೆ ನಾವು ನಮ್ಮೀ ಗ್ರಂಥದಲ್ಲಿ ಕೇವಲ ಹಳೇ ೧೨ ಕ್ಷಾರಗಳ ಬಗ್ಗೆ ಅಷ್ಟೇ ಬರೆದಿದ್ದೇವೆ. ಹೆಚ್ಚಿನ ಕ್ಷಾರಗಳ ಸಮಾಚಾರ ಬೇಕಾಗಿದ್ದಲ್ಲಿ ಮೇಲೆ ಹೇಳಿದ ಮೂರೂ ಗ್ರಂಥಗಳಲ್ಲಿ ನೋಡಬಹುದು.

ಕ್ಷಾರಗಳ ಕಾರ್ಯವು ಹೇಗೆ ಆಗುತ್ತದೆ, ಇದರ ಸ್ಪಷ್ಟೀಕರಣವು ಡಾಕ್ಟರ ಗೋಲ್ವಾಜ ಸಾಹೇಬರ ಹೊಸಶೋಧದಲ್ಲಿಯ ಎರಡನೇ ಮಹತ್ವದ ಸಂಗತಿಯು. ರುಗ್ಣ ಪಿಂಡಗಳಲ್ಲಿ ಕ್ಷಾರಗಳ ಕಣಗಳನ್ನು ಪ್ರತ್ಯಕ್ಷ ಸೇರಿಸಿ ಔಷಧದ ಕಾರ್ಯವು ಆಗುತ್ತದೆ ಹೀಗೆ ಅನ್ನ ಕೂಡದು. ಈ ಕಾರ್ಯವು ಹೇಗೆ ಮತ್ತು ಯಾವ ಪದ್ಧತಿಯಿಂದ ಆಗುತ್ತದೆ ಇದನ್ನು ಕೇವಲ ರಸಾಯನಶಾಸ್ತ್ರ ದೃಷ್ಟಿಯಿಂದ ನೋಡಿದಲ್ಲಿ ಸಾಗಲಾರದು. ಸೂಕ್ಷ್ಮದರ್ಶಕ ಯಂತ್ರದ ಸಹಾಯದಿಂದ ಸಹ ದೃಗ್ಗೋಚರವಾಗದಂಥ ಕಣಗಳನ್ನು ಖಲನ ಮಾಡಿ ಸಿದ್ಧ ಮಾಡಿದ ಔಷಧವನ್ನು ಕೊಟ್ಟು (ಅಂದರೆ ಔಷಧದ ಜಡದೇಹವನ್ನು ಇಲ್ಲದಂತೆಮಾಡಿ ಅದರ ಸೂಕ್ಷ್ಮದೇಹದ) ಅದರ ಕಾರ್ಯವು ಹೇಗೆ ಆಗುತ್ತದೆಂಬದನ್ನು ತಿಳಕೊಂಡಲ್ಲೇ ಇದು ತಿಳಿಯುವದು. ಕಿರಣವಿಸರ್ಜಕ (Radiant energy) ಶಕ್ತಿಯ ಸಂಬಂಧದಿಂದ ಇತ್ತೀಚಿಗೆ ಆದ ಶಾಸ್ತ್ರೀಯ ಶೋಧಗಳಿಗನುಸರಿಸಿಯೇ ಈ ಸಂದರ್ಭದಲ್ಲಿಯ ಜ್ಞಾನವು ಉಜ್ವಲಿತವಾಗುವದು. ಈ ಕಿರಣಶಾಸ್ತ್ರದ ಶೋಧಗಳಮೇಲಿಂದ ಸಿದ್ಧವಾಗಿದ್ದೇನಂದರೆ— ಪದಾರ್ಥವು (Matter) ಅಣುಗಳಿಂದ ಸಿದ್ಧವಾದುದು, ಅಣುವು ಪರಮಾಣುಗಳಿಂದ, ಪರಮಾಣುವು ಅತ್ಯಂತ ಸೂಕ್ಷ್ಮ ಮತ್ತು ಅವಿಭಜ್ಯವಿದ್ದಂಥ ವಿದ್ಯುದಣುಗಳಿಂದ ಸಿದ್ಧವಾದುದು. ಈ ವಿದ್ಯುದಣುಗಳು ಪದಾರ್ಥಗಳಲ್ಲಿ ಗ್ರಹಗಳಂತೆ ತಮ್ಮತಮ್ಮ ಸುತ್ತಲೆ ತಿರಗುತ್ತಿರುವವು. ವಿದ್ಯುದಣುಗಳು ಪದಾರ್ಥಗಳಲ್ಲಿಯ ಪರಮಾಣುಗಳ ಘಟಕಗಳಿದ್ದರೂ ಸಹ ಅವು ಪದಾರ್ಥರೂಪದಿಂದ ಗೋಚರವಾಗಲಾರವು. ಪ್ರಯೋಗದಿಂದ ಸಿದ್ಧವಾಗಿದ್ದೇನಂದರೆ, ಈ ವಿದ್ಯುದಣುಗಳು ಅಂದರೆ ಕೇವಲ ವಿದ್ಯುತ್ ಸ್ವರೂಪವೇ ಸರಿ. ಅದು ಕೇವಲ ವಿದ್ಯುತ್‌ಶಕ್ತಿಯೇ ಹೊರ್ತಾಗಿ ಬೇರೆ ಪದಾರ್ಥವಲ್ಲ. ಖಲನಮಾಡಿದ್ದರಿಂದ ಔಷಧದ ಜಡಸ್ವರೂಪವು ಹೋದನಂತರ ಅಂದರೆ ಪರಮಾಣುತ್ವವು ಕಾಣಿಸದಂತೆ ಆದನಂತರ ಅದರಲ್ಲಿ ವಿದ್ಯುತ್ ಅಂದರೆ ವಿದ್ಯುಲ್ಲತೆ ಅಥವಾ ವಿದ್ಯುತ್‌ಶಕ್ತಿ ಮಾತ್ರ ಉಳಿಯುತ್ತದೆ. ಈ ವಿದ್ಯುತ್‌ಶಕ್ತಿಯೇ ಔಷಧದಲ್ಲಿಯ ಕಾರ್ಯಮಾಡುವ ನಿಜಶಕ್ತಿಯನ್ನಬಹುದು. ಈ ವಿದ್ಯುತ್‌ಶಕ್ತಿಯೇ ರುಗ್ಣಪಿಂಡಗಳಲ್ಲಿ ಚೇತನೆಯನ್ನು ಉತ್ಪನ್ನ ಮಾಡುತ್ತದೆ ಮತ್ತು ಆದರಿಂದ ಅವುಗಳಿಗೆ ಸುತ್ತುಮುತ್ತಲು ಸೋಸಿಬರುವ

ರಕ್ತೋದಕದೊಳಗಿಂದ (Plasma) ಕೊರತೆಹೊಂದಿದ ಕ್ಷಾರಗಳ ಶೋಷಣ (ಎಳೆದುಕೊಳ್ಳುವ) ಶಕ್ತಿಯು ಬರುತ್ತದೆ. ಅಂದರೆನೇ ಕಡಿಮೆಯಾದ ಕ್ಷಾರಗಳು ಪೂರೈಸಲ್ಪಟ್ಟಂತಾಯಿತು. ಹೀಗೆ ಡಾ. ಗೊಲ್ವಜ ಸಾಹೇಬರ ವಿಚಾರ ಸರಣಿಯು. ಕಡಿಮೆಯಾದ ಕ್ಷಾರವು ಅನ್ನದೊಳಗಿಂದ ಶರೀರಕ್ಕೆ ಮುಟ್ಟಿದ ನಂತರ ರಕ್ತೋದಕದೊಳಗಿಂದ ರುಗ್ಣ ಪಿಂಡಗಳ ಸುತ್ತಮುತ್ತಲು ಸೋಸಿ ಬರುತ್ತಿದ್ದಾಗ್ಯೂ ಯಾಕೆ ಕ್ಷಾರಗಳ ಪೂರೈಕೆಯಾಗುವದಿಲ್ಲ–ಅನ್ಯಶಬ್ದದಲ್ಲಿ ಅನ್ನುವದಾದರೆ–ರೋಗವು ಯಾಕೆ ನೆಟ್ಟಗಾಗುವದಿಲ್ಲ; ಹಾಗೂ ಸೂಕ್ಷ್ಮ ಪ್ರಮಾಣದಿಂದ ಆ ಕ್ಷಾರಗಳನ್ನು (ಔಷಧರೂಪದಿಂದ) ಕೊಡಲಾಗಿ ಕ್ಷಾರದ ಪೂರೈಕೆಯು ಹೇಗೆ ಆಗುತ್ತದೆ—ಅಂದರೆ ರೋಗವು ಹೇಗೆ ನೆಟ್ಟಗಾಗುತ್ತದೆ. ಇದು ಮೇಲೆ ಮಾಡಿದ ಸ್ಥೂಲವಿವೇಚನದ ಮೇಲಿಂದ ಲಕ್ಷ್ಯದಲ್ಲಿ ಬರುವಂತಿದೆ. ತಮ್ಮ ಸುತ್ತಮುತ್ತಲು ಸೋಸಿಬರುತ್ತಿರುವ ರಕ್ತೋದಕದೊಳಗಿಂದ ತಮ್ಮಲ್ಲಿ ಕಡಿಮೆಬಿದ್ದಂಥ ಕ್ಷಾರಗಳು ಇದ್ದು ಸಹ ಅವುಗಳನ್ನು (ಕ್ಷಾರವನ್ನು) ಶೋಷಣಮಾಡಿಕೊಳ್ಳುವಂಥ ಸ್ಥಿತಿಯಲ್ಲಿ ರುಗ್ಣ ಪಿಂಡಗಳು ಇರುವದಿಲ್ಲ. ಈ ಸ್ಥಿತಿಯನ್ನು ನಿರ್ಮಾಣಮಾಡುವ ಕಾರ್ಯವು ವಿದ್ಯುದಣುಗಳದ್ವಾರಾ ಪಿಂಡಗಳಲ್ಲಿ ಚೇತನೆ ಉತ್ಪನ್ನಮಾಡಿ ಜರಗಿಸಲ್ಪಡುತ್ತದೆ. ಅನ್ನದೊಳಗಿಂದ ಕೊಡಲ್ಪಟ್ಟ ಕ್ಷಾರಗಳಲ್ಲಿಯ ವಿದ್ಯುದಣುಗಳು ಆ ಕ್ಷಾರಗಳಿಂದ ಬೇರೆಯಾಗಿರುವದಿಲ್ಲ. ಆ ಕಾರ್ಯವು ಪ್ರಭಾವನ (ಖಲನದಿಂದ=Potentization=ಶಕ್ತೀಕರಣ ಅಥವಾ ಬಲೋತ್ಪತ್ತೀಕರಣ ಅನ್ನಬಹುದು) ಪದ್ಧತಿಯಿಂದಲೇ ಮಾಡಲ್ಪಡುತ್ತದೆ. ಈ ವಿದ್ಯುದಣುಗಳು ಪ್ರಭಾವನ ಪದ್ಧತಿಯಿಂದ ಶಕ್ತೀಕೃತವಾದನಂತರ ಅವುಗಳ ನಿಜಕಾರ್ಯವು ಪಿಂಡಗಳಮೇಲೆ ಆಗಿ ಕಡಿಮೆಯಾದ ಕ್ಷಾರಗಳನ್ನು ಶೋಷಣಮಾಡಿಕೊಳ್ಳುವ ಶಕ್ತಿಯು ಪಿಂಡಗಳಲ್ಲಿ ಉಂಟಾಗುತ್ತದೆ. ಇದೇ ಈ ವಿವೇಚನದ ಮಥಿತಾರ್ಥವು.

**ಇತರ ಚಿಕಿತ್ಸಾಶಾಸ್ತ್ರಗಳಸಂಗಡ ತುಲನೆ:**— ಜೀವನರಸಾಯನ ಶಾಸ್ತ್ರವೆಂದರೆ ಹೋಮಿಯೋಪಥಿ ಅಲ್ಲ. ಈ ಎರಡೂ ಶಾಸ್ತ್ರಗಳಲ್ಲಿ ಹೆಚ್ಚು ಕಡಿಮೆ ಸಾಮ್ಯವುಂಟು. ಔಷಧದ ಸೂಕ್ಷ್ಮಪ್ರಮಾಣದ ಸಂಬಂಧದಲ್ಲಿ ಎರಡೂ ಶಾಸ್ತ್ರಗಳಲ್ಲಿ ಬಹಳೇ ಸಾಮ್ಯವಿದೆ. ಆದರೂ ಹೋಮಿಯೋಪಥಿ

ಯಲ್ಲಿ ಔಷಧದ ಸೂಕ್ಷ್ಮ ಪ್ರಮಾಣಕ್ಕೆ ಮಹತ್ವಕೊಟ್ಟಷ್ಟು ಜೀವನರಸಾಯನ ಶಾಸ್ತ್ರದಲ್ಲಿ ಕೊಟ್ಟಿಲ್ಲ. ಎರಡೂ ಪದ್ಧತಿಗಳಲ್ಲಿ ಭಾವನೆಗಳಿಗೆ ಪ್ರಾಧಾನ್ಯವಿದ್ದು ಎರಡೂ ಪದ್ಧತಿಗಳಿಗೆ ಭಾವನಾಪ್ರಾಧಾನ್ಯ ಚಿಕಿತ್ಸಾ ಶಾಸ್ತ್ರವೆಂದೆನ್ನಬಹುದು. ಆದರೂ ಔಷಧಕೊಡುವ ತತ್ವ ಮತ್ತು ಅದನ್ನು ಕೊಡುವ ಪ್ರಕಾರ (ಪದ್ಧತಿ) ಯಲ್ಲಿ ಬಹಳೇ ಭೇಧವುಂಟು. ಹೊಮಿಯೋಪಥಿಯಲ್ಲಿ "ಸಮಃ ಸಮಂಶಮಯತಿ" ಎಂಬುದೇ ಔಷಧಯೋಜನೆಯ ತತ್ವವು. ರೋಗವಿಲ್ಲದವನಿಗೆ ಔಷಧಪದಾರ್ಥವನ್ನು ಪೂರ್ಣ ಪ್ರಮಾಣದಲ್ಲಿ ಕೊಟ್ಟು ಅವನಲ್ಲಿ ಉತ್ಪನ್ನವಾಗತಕ್ಕ ಭಾವನೆಗಳನ್ನು ಸೂಕ್ಷ್ಮರೀತಿಯಿಂದ ನಿರೀಕ್ಷಿಸಿ ಅಂಥ ಭಾವನೆಗಳು ರೋಗಿಯಲ್ಲಿ ಕಂಡುಬಂದರೆ ಆ ಔಷಧೀಪದಾರ್ಥದಿಂದ ಹೊಮಿಯೋಪಥಿ ಪದ್ಧತಿಪ್ರಕಾರ ಔಷಧವನ್ನು ತಯಾರಿಸಿ ಅದನ್ನು ಆ ರೋಗಿಗೆ ಕೊಟ್ಟು ಅವನನ್ನು ನೆಟ್ಟಗೆ ಮಾಡುವದು—ಇದೇ ಹೋಮಿಯೋಪಥಿಯ ತತ್ವವು. ಮತ್ತು ಈ ತತ್ವಕ್ಕೆ "ಸಮಃ ಸಮಂಶಮಯತಿ" ಎಂದೆನ್ನುತ್ತಾರೆ. ಈ ತತ್ವಕ್ಕನುಸರಿಸಿ ಹೋಮಿಯೋಪಥಿಯಲ್ಲಿ ಔಷಧಯೋಜನೆಯು ಮಾಡಲ್ಪಡುತ್ತದೆ. ಮತ್ತು ಔಷಧವನ್ನು ಕೊಟ್ಟನಂತರ ಒಂದಾವರ್ತಿ ಹಗುರ ಅನಿಸಲಿಕ್ಕೆ ಹತ್ತಿದನಂತರ ಹಗುರ ಅನಿಸುವ ವರೆಗೆ ಪುನಃ ಔಷಧ ಕೊಡಕೂಡದು. ಜೀವನರಸಾಯನ ಶಾಸ್ತ್ರದಲ್ಲಿ ಕಡಿಮೆಯಾದ ಕ್ಷಾರಗಳನ್ನು ತಿಳಿದುಕೊಳ್ಳುವ ಮಟ್ಟಿಗೇ ಭಾವನೆಗಳ ಉಪಯೋಗವು. ಕಡಿಮೆಯಾದ ಭಾವನೆಗಳ ದ್ಯೋತಕವೆಂಬುವಷ್ಟರಮಟ್ಟಿಗೇ ಭಾವನೆಗಳ ಮಹತ್ವವು. "ಸಮಃ ಸಮಂಶಮಯತಿ" ಈ ತತ್ವಕ್ಕನುಸರಿಸಿ ಔಷಧಯೋಜನೆ ಜೀವನರಸಾಯನ ಶಾಸ್ತ್ರದಲ್ಲಿಲ್ಲ. ಜೀವನರಸಾಯನಶಾಸ್ತ್ರದಲ್ಲಿ ಕಡಿಮೆಬಿದ್ದ ಕ್ಷಾರಗಳನ್ನು ಪೂರೈಸಿಕೊಡುವದೇ ಆಧಾರಭೂತ ತತ್ವವು. ಔಷಧವನ್ನುಕೊಟ್ಟು ಅದರ ಪರಿಣಾಮವೇನಾಗುತ್ತದೆ ಎಂದು ದಾರೀನೋಡುತ್ತ ಕೂಡುವ ಪದ್ಧತಿಯು ಈ ಶಾಸ್ತ್ರದಲ್ಲಿಲ್ಲ. ರೋಗವು ನೆಟ್ಟಗಾಗುವ ವರೆಗೆ ಔಷಧ ಕೊಡುತ್ತ ಹೋಗುತ್ತಾರೆ. ಕಡಿಮೆ ಆಗುವ ಲಕ್ಷಣ ಕಂಡುಬಂದನಂತರ ಔಷಧವನ್ನು ಕೊಡುವ ಅವಧಿಗಳಲ್ಲಿಯ ಅಂತರವನ್ನು ಬೆಳಿಸುತ್ತಾರೆ. ಔಷಧ ಕೊಟ್ಟನಂತರ ರೋಗಿಗೆ ನೆಟ್ಟಗನಿಸುತ್ತದೆ ಅಂದರೆ ಔಷಧದ ಕಾರ್ಯವು ನಡೆದದೆ

ಆದ್ದರಿಂದ ಪುನಃ ಔಷಧ ಕೊಡುವ ಅವಶ್ಯಕತೆಯಿಲ್ಲವೆಂಬ ಹೋಮಿಯೊಪಥಿಯ ತತ್ವವು ಜೀವನರಸಾಯನ ಶಾಸ್ತ್ರಕ್ಕೆ ಬಹಳಷ್ಟು ಮಾನ್ಯವಿಲ್ಲ. ಹೋಮಿಯೊಪಥಿಯಲ್ಲಿ ಎಲ್ಲ ಭಾವನೆಗಳ ವಿಚಾರ ಮಾಡಿ "ಸಮಃ ಸಮಂಶಮಯತಿ" ಎಂಬ ತತ್ವಕ್ಕನುಸರಿಸಿ, ಔಷಧವನ್ನು ಗೊತ್ತುಪಡಿಸಿ ಸರತಿಗೆ ಒಂದೇ ಔಷಧ ಕೊಡುವದಿರುತ್ತದೆ. ಆದರಲ್ಲಿ ಬೇರೆಬೇರೆ ಔಷಧಗಳನ್ನು ಕೂಡಿಸಿ ಕೊಡುವದಿರುವದಿಲ್ಲ. ಕ್ವಚಿತ್ ಔಷಧ ಬದಲು ಮಾಡಿ ಕೊಡುತ್ತಾರೆ. ಆದರೂ ಅದಲುಬದಲು ಮಾಡಿ ಔಷಧ ಕೊಡುವ ಪದ್ಧತಿಯು ಗೌಣವೆಂದು ತಿಳಿಯಲ್ಪಡುತ್ತದೆ. ಜೀವನರಸಾಯನ ಶಾಸ್ತ್ರದಲ್ಲಿ ಭಾವನೆಗಳಮೇಲಿಂದ ಕಡಿಮೆಯಿದ್ದಂತೆ ಕಂಡುಬರುವ ಕ್ಷಾರಗಳನ್ನು (ಒಂದಾಗಲಿ ಹೆಚ್ಚಾಗಲಿ) ಪೂರೈಸುವದಕ್ಕೋಸ್ಕರ ಕ್ಷಾರಗಳನ್ನು ಬೇರೆ ಬೇರೆಯಾಗಲಿ ಮಿಶ್ರಣಮಾಡಿಯಾಗಲಿ ಕೊಡುವ ಪದ್ಧತಿಯುಂಟು. (೧) "ಸಮಃ ಸಮಂಶಮಯತಿ" (೨) ಸರತಿಗೆ ಒಂದೇ ಔಷಧಕೊಡುವದು (೩) ಔಷಧದ ಅತ್ಯಂತ ಸೂಕ್ಷ್ಮ ಪ್ರಮಾಣ, ಇವೇ ಹೋಮಿಯೋಪಥಿಯ ಮುಖ್ಯ ಮೂರು ಅಂಗಗಳಿವೆ. ಇದರಂತೆ (೧) ಶರೀರದಲ್ಲಿ ಒಂದಾಗಲಿ ಹೆಚ್ಚಾಗಲಿ ಕ್ಷಾರಗಳ ಕೊರತೆಯನ್ನು ಸೂಚಿಸುವಂಥ ಚಿನ್ಹಗಳೇ ಭಾವನೆಗಳು (೨) ಕಡಿಮೆಯಾದ ಕ್ಷಾರಗಳನ್ನು ಪೂರೈಸುವದೇ ರೋಗನಿವೃತ್ತಿಯು ಮತ್ತು (೩) ಔಷಧಗಳನ್ನು ಸೂಕ್ಷ್ಮಪ್ರಮಾಣದಲ್ಲಿ ಬೇರೆಬೇರೆಯಾಗಲಿ ಮಿಶ್ರಣಮಾಡಿಯಾಗಲಿ ಕೊಡುವದು, ಈ ಪ್ರಕಾರ ಈ ಮೂರು ಜೀವನರಸಾಯನದ ಪ್ರಧಾನ ಅಂಗಗಳು. ಆದ್ದರಿಂದ ಹೋಮಿಯೋಪಥಿ ಶಾಸ್ತ್ರಕ್ಕೆ "ಸಮಾನ ಚಿಕಿತ್ಸಾ ಶಾಸ್ತ್ರ" ವೆನ್ನಬಹುದು. ಮತ್ತು ಜೀವನರಸಾಯನಕ್ಕೆ "ಭರಣಚಿಕಿತ್ಸಾಶಾಸ್ತ್ರ" ವೆನ್ನಬಹುದು. ೧೨ ಕ್ಷಾರ ಔಷಧಗಳನ್ನು ಹೋಮಿಯೋಪಥಿಯಲ್ಲಿ ಸಹ ಉಪಯೋಗಿಸುತ್ತಾರೆ. ಆದರೆ ಅವುಗಳನ್ನು ಹೋಮಿಯೋಪಥಿಯ ತತ್ವಕ್ಕನುಸರಿಸಿಯೇ ಉಪಯೋಗಿಸುತ್ತಾರೆ. ಕಡಿಮೆಯಾದ ಕ್ಷಾರ ಪೂರಣತತ್ವಕ್ಕನುಸರಿಸಿ ಅಲ್ಲ. ಹಲವು ಭಾವನೆಗಳು ಅವೇ (ಸಮಾನ) ಇರಬಹುದು, ಮತ್ತು ಇರುತ್ತವೆ, ಇದು ಸಹ ನಿಜ. ಆದರೂ ಔಷಧಯೋಜನೆಯ ತತ್ವವು ಬೇರೆ ಇದ್ದದರಿಂದ ಭಾವನೆಗಳ ಸಾದೃಶ್ಯಕ್ಕೆ ಮಹತ್ವವಿಲ್ಲ.

ಹೋಮಿಯೋಪಥಿಯು ಜೀವನರಸಾಯನ ಚಿಕಿತ್ಸಾಪದ್ಧತಿಯಲ್ಲ. ಆದರೂ ಹೋಮಿಯೋಪಥಿಯ ಪದ್ಧತಿಯಿಂದ ರೋಗಿಗಳನ್ನು ನೆಟ್ಟಗೆ ಮಾಡಲು ಬರುತ್ತದೆಂಬದು ಸ್ವತಃ ಡಾ. ಶೂಜಲರ ಇವರಿಗೆ ಸಹ ಮಾನ್ಯವದೆ. ಆದರೂ ಜೀವನರಸಾಯನ ಪದ್ಧತಿಯಿಂದ (ಕ್ಷಾರ ಔಷಧಗಳು ಪಿಂಡಗಳ ಘಟಕಗಳೆಂದು) ಕ್ಷಾರಗಳನ್ನೇ ಔಷಧರೂಪದಿಂದ ಸೂಕ್ಷ್ಮ ಪ್ರಮಾಣದಲ್ಲಿ ಕೊಟ್ಟು ರೋಗವನ್ನು ಪ್ರತ್ಯಕ್ಷರೀತಿಯಿಂದ ನೆಟ್ಟಗೆ ಮಾಡುವದು ಶಕ್ಯವದೆ. ಮತ್ತು ಹೋಮಿಯೋಪಥಿಯಲ್ಲಿ ಪಿಂಡಗಳ ಘಟಕಗಳಲ್ಲದಂಥ ಪದಾರ್ಥಗಳನ್ನು ಸೂಕ್ಷ್ಮಪ್ರಮಾಣದಲ್ಲಿ ಔಷಧ ರೂಪದಿಂದ ಕೊಟ್ಟು ಅಪ್ರತ್ಯಕ್ಷರೀತಿಯಿಂಡ ನೆಟ್ಟಗೆ ಮಾಡಬಹುದು. ಇದು ಎರಡೂ ಪದ್ಧತಿಗಳ ನಡುವಿನ ಭೇದವು. ವ್ಹ್ಯಾನೇಡಿಯಂ ಎಂಬ ಶರೀರದ ಘಟಕವಿಲ್ಲದಂಥ ಕ್ಷಾರವನ್ನು ಔಷಧವೆಂದು ಉಪಯೋಗಿಸುತ್ತಾರೆ. ಆದ್ದರಿಂದ ರೋಗಗಳು ಅಪ್ರತ್ಯಕ್ಷ ರೀತಿಯಿಂದ ನೆಟ್ಟಗಾಗುತ್ತವೆ. ಒಂದರಲ್ಲಿ ಪ್ರತ್ಯಕ್ಷ ರೀತಿಯಿಂದ, ಎರಡನೇದರಲ್ಲಿ ಅಪ್ರತ್ಯಕ್ಷರೀತಿಯಿಂದ ಹೀಗೆ ಎರಡೂ ಪದ್ಧತಿಗಳಲ್ಲಿ ಭೇದವಿರುತ್ತದೆ. ವ್ಹ್ಯಾನೇಡಿಯಂದಂಥ ಶರೀರದ ಘಟಕವಿಲ್ಲದಂಥ ಕ್ಷಾರದಿಂದ ಅಪ್ರತ್ಯಕ್ಷರೀತಿಯಿಂದ ರೋಗವು ನೆಟ್ಟಗಾಗುತ್ತದೆ. ಅಪ್ರತ್ಯಕ್ಷರೀತಿಯಿಂದೇ ಆಗಲಿ ರೋಗವು ನೆಟ್ಟಗಾಗುವ ಕಾರಣವೇನೆಂದರೆ— ಅದರ ಯೋಗವಾಹಿತ್ವವೆಂಬ ಕೃತಿಯು. ಯೋಗವಾಹಿತ್ವಕ್ಕೆ ಇಂಗ್ಲಿಷದಲ್ಲಿ Catalytic action ಅನ್ನುತ್ತಾರೆ. ಅದೇನಂದರೆ— ಕೇವಲ ಸಾನ್ನಿಧ್ಯದಿಂದ ಸ್ವಂತದ ಮೇಲೆ ಪರಿಣಾಮ ಮಾಡಿಕೊಳ್ಳದೆ ಯಾವದಾದರೊಂದು ರಾಸಾಯನಿಕ ಕ್ರಿಯೆ ತೀವ್ರವಾಗಲಿಕ್ಕೆ ಸಹಾಯಮಾಡುವ ಪದಾರ್ಥಕ್ಕೆ ಯೋಗವಾಹಕವೆಂತಲೂ ಮತ್ತು ಆ ಕ್ರಿಯೆಗೆ ಯೋಗವಾಹಿತ್ವವೆಂತಲೂ ಅನ್ನುವದುಂಟು. (ಯೋಗವಾಹಿತ್ವದ ಕಾರ್ಯವು ಯೋಗವಾಹಕನ ಮೂಳ ಸ್ಥಿತಿ ಅಂದರೆ ಸ್ಥೂಲ ದೇಹದಲ್ಲಾಗದೆ ಸೂಕ್ಷ್ಮದೇಹದಲ್ಲೇ ಆಗುತ್ತದೆ ಎಂದು ಕೆಲವು ಶಾಸ್ತ್ರಜ್ಞರ ಮತವು). "ವ್ಹ್ಯಾನೇಡಿಯಂ" ಕ್ಷಾರವು ಶರೀರದ ಘಟಕವಲ್ಲ. ಆದರೂ ಅದನ್ನು ಸೂಕ್ಷ್ಮಪ್ರಮಾಣದಲ್ಲಿ ಕೊಟ್ಟರೆ ಅನ್ನದಲ್ಲಿಯ ಶರೀರದ ಘಟಕ ಕ್ಷಾರಗಳನ್ನು ರಕ್ತೋದಕದೊಳಗಿಂದ ಶೋಷಣಮಾಡಿಕೊಳ್ಳಲಿಕ್ಕೆ ಪಿಂಡ

ಗಳಿಗೆ ಸಹಾಯಮಾಡಿ ರೋಗನಿವಾರಣದ ಕೆಲಸವನ್ನೂ ಸಾಧಿಸಿಕೊಡು ತ್ತದೆ. ಶರೀರದ ಘಟಕವಿಲ್ಲದಂಥ ಹೋಮಿಯೋಪಥಿಯಲ್ಲಿಯ ಔಷಧ ಗಳು ಹೇಗೆ ಉಪಯೋಗಕ್ಕೆ ಬರುತ್ತವೆ ಎಂಬದರ ಬಗ್ಗೆ ಜೀವನರಸಾಯನ ಶಾಸ್ತ್ರಜ್ಞರು ಈ ರೀತಿಯಿಂದ ವಿವರಿಸುತ್ತಾರೆ. ಇದೇ ಮೇರೆಗೆ ಹೋಮಿಯೋಪಥಿ ಔಷಧಗಳೊಳಗೆ ೧೨ ಕ್ಷಾರಗಳಲ್ಲಿಯ ಯಾವವಾದರೂ ಘಟಕಗಳು ಇರುತ್ತವೆ. ಆ ಕ್ಷಾರಗಳ ಕಾರ್ಯವಾಗಿಯೇ ಜೀವನರಸಾ ಯನ ಚಿಕಿತ್ಸೆಗೆ ಅನುಸರಿಸಿ ಹೋಮಿಯೋಪಥಿ ಔಷಧಗಳ ಉಪಯೋಗ ವಾಗುತ್ತದೆಂದು ಡಾ. ಶೂಜಲರ ಸಾಹೇಬರನಂತರ ಆದ ಕೆಲ ಜೀವನ ರಸಾಯನ ಶಾಸ್ತ್ರಜ್ಞರು ಅನ್ನುತ್ತಾರೆ. ಕೆಲವರು ಹೋಮಿಯೋಪಥಿ ಔಷಧಗಳ ಪೃಥಕ್ಕರಣ ಮಾಡಿ ಅವುಗಳಲ್ಲಿ ಕ್ಷಾರಗಳ ಘಟಕಗಳು ಇರುತ್ತವೆಂದು ಸಿದ್ಧಪಡಿಸಿ ತೋರಿಸಿದ್ದಾರೆ. ಇತರ ಔಷಧಗಳ ಪೃಥಕ್ಕರಣ ಮಾಡಿದರೆ ಇದೇ ಪ್ರಕಾರ ಕ್ಷಾರಗಳ ಘಟಕಗಳು ದೊರೆಯುವ ವೆಂದೂ ಸೂಚಿಸಿದ್ದಾರೆ. ಆಲೋಪಥಿ ಔಷಧಗಳ ಸಂಬಂಧದಿಂದ ಸಹ ಇದೇ ತರದ ಅನುಮಾನ ತೆಗೆಯಲಿಕ್ಕೆ ಅಡ್ಡಿಯಿಲ್ಲ. ಘಟಕಗಳಿದ್ದ ಔಷಧಗಳೂ ಘಟಕಗಳಿಲ್ಲದ ಔಷಧಗಳೂ ಹೇಗೆ ಗುಣಕರವಾಗುತ್ತವೆಂಬ ಬಗ್ಗೆ ಜೀವನರಸಾಯನ ಶಾಸ್ತ್ರಜ್ಞರು ಮಾಡಿದ ವಿವೇಚನವು ಹೋಮಿಯೋಪಥಿ ಶಾಸ್ತ್ರಜ್ಞರಿಗೆ ಸಮ್ಮತವಾಗುವಂತಿಲ್ಲ. ಯೋಜನೆಯು ತತ್ವವೂ ಬೇರೆ ಅದೆ ಎಂಬದನ್ನು ಮರೆಯಕೂಡದು. ಒಂದೇ ಸಾಧ್ಯವು, ಸಾಧ್ಯವಾಗುವ ಮಾರ್ಗಗಳು ಎರಡು ಇರುವವು, ಹೆಚ್ಚೂ ಇರಬಹುದು. ಒಂದು ಮಾರ್ಗವು ಸಮೀಪದ್ದು ಎರಡನೇದು ದೂರಿನದು ಹೀಗೆ ಅನ್ನ ಬಹುದು. ಆದರೆ ಎರಡೂ ಒಂದೇ ಎಂದು ಮಾತ್ರ ಅನ್ನುವದು ಯಾರಿಗೂ ಮಾನ್ಯವಾಗದು.

ಎರಡೂ ಶಾಸ್ತ್ರಗಳಲ್ಲಿ ಮೂಳಕ್ಷಾರವನ್ನಾಗಲೀ ಮೂಳ ಅರ್ಕಗ ಳನ್ನಾಗಲೀ ಉಪಯೋಗಿಸುವದಿಲ್ಲ. ಹೋಮಿಯೋಪಥಿಯಲ್ಲಿ ದಶಾಂಶ ಮತ್ತು ಶತಾಂಶ ಪದ್ಧತಿಯಿಂದ ಸಿದ್ಧಪಡಿಸಿದ ಔಷಧಗಳನ್ನು ಉಪಯೋಗಿ ಸುತ್ತಾರೆ. ಜೀವನರಸಾಯನದಲ್ಲಿ ದಶಾಂಶಪದ್ಧತಿಯ ಔಷಧಗಳು

ಸಹಸಾ ಉಪಯೋಗಿಸಲ್ಪಡುತ್ತವೆ. ಚೂರ್ಣ ಮತ್ತು ವಟಿಕಾ (ಸಣ್ಣವಡೆ) ಸ್ವರೂಪದಲ್ಲಿ ಜೀವನರಸಾಯನ ಔಷಧಗಳು ಸೇವಿಸಲ್ಪಡುತ್ತವೆ. ಹೋಮಿಯೋಪಥಿಯಂತೆ ತೆಳ್ಳನ್ನ (ಪ್ರವಾಹಿ) ಮತ್ತು ಗುಳಿಗೆಗಳ ರೂಪದಲ್ಲಿ ಸೇವಿಸಲ್ಪಡುವದಿಲ್ಲ. ಪ್ರವಾಹಿ ಸ್ವರೂಪದಲ್ಲಿ ಸಿದ್ಧಪಡಿಸಲು ಸಾಧ್ಯವಾದ ಕಡಿಮೆ ಶಕ್ತಿಯ ಔಷಧಗಳು ಹೋಮಿಯೋಪಥಿಯಲ್ಲಿ ಚೂರ್ಣ ಮತ್ತು ವಟಿಕಾಸ್ವರೂಪದಲ್ಲಿ ಉಪಯೋಗಿಸಲ್ಪಡುತ್ತವೆ. ಆದರೆ ಹೆಚ್ಚು ಶಕ್ತಿಯ ಔಷಧಗಳು ಗುಳಿಗೆ ಮತ್ತು ಪ್ರವಾಹಿ ಸ್ವರೂಪದಲ್ಲಿಯೇ ದೊರೆಯುತ್ತವೆ.

ಮೇಲೆ ಹೇಳಿದ ಪ್ರಕಾರ ಹೊಮಿಯೋಪಥಿಗೂ ಈ (ಜೀವನ ರಸಾಯನ) ಶಾಸ್ತ್ರಕ್ಕೂ ಸ್ವಲ್ಪಾದರೂ ಸಾಮ್ಯವಿದೆ. ಆದರೆ ಅಲೋಪಥಿ, ಆಯುರ್ವೇದ ಮುಂತಾದ ಇತರ ಚಿಕಿತ್ಸಾಪದ್ಧತಿಗೂ ಇದಕ್ಕೂ ಏನೂ ಸಾಮ್ಯವಿಲ್ಲ. ಆಯುರ್ವೇದದಲ್ಲಿ ಔಷಧವನ್ನು ಮರ್ದಿಸಿ (ಅರೆದು) ಅದರ ಪ್ರಭಾವವನ್ನು (ಓಜಸ್ಸನ್ನು) ಬೆಳಿಸಿ ಅದನ್ನು ಸೂಕ್ಷ್ಮ ಪ್ರಮಾಣದಲ್ಲಿ ಕೊಡುವ ರೂಢಿಯುಂಟು. ಆದರೆ ಹೋಮಿಯೊ ಅಥವಾ ಜೀವನ ರಸಾಯನ ಪದ್ಧತಿಗಳಲ್ಲಿದ್ದ ದಶಾಂಶ, ಶತಾಂಶ ಪದ್ಧತಿ ಪ್ರಕಾರ ಔಷಧ ಗಳನ್ನು ಸಿದ್ಧಪಡಿಸುವ ಪ್ರಕಾರಕ್ಕೂ "ಪ್ರಭಾವನ" ಪದ್ಧತಿಗೂ ಸಾಮ್ಯ ವಿದೆಯೆಂದು ಅನ್ನಕೂಡದು. ಓಜಸ್ಸು ಅಥವಾ ಪ್ರಭಾವ ಬೆಳಿಸಿದ ಸೂಕ್ಷ್ಮ ಔಷಧಗಳನ್ನು ಆಯುರ್ವೇದದಲ್ಲಿ ಸಹ ಉಪಯೋಗಿಸುತ್ತಾರೆ. ಆದರೂ ಕೊಡತಕ್ಕ ಪ್ರಮಾಣಕ್ಕಿಂತಲೂ ಹೆಚ್ಚಿನ ಪ್ರಮಾಣದಲ್ಲಿ ಆಯುರ್ವೇದದ ಔಷಧಗಳನ್ನು ಕೊಟ್ಟರೆ ಆಗತಕ್ಕ ಅಪಾಯದಷ್ಟು ಹೊಮಿಯೋಪಥಿ ಅಥವಾ ಜೀವನರಸಾಯನ ಔಷಧ ಕೊಟ್ಟರೆ ಆಗುವದಿಲ್ಲೆಂಬ ಭೇದವನ್ನು ಮಾತ್ರ ಮರೆಯಕೂಡದು.

**ಚಿಕಿತ್ಸೆಗಳ ಪ್ರಕಾರ:**—ಆಯುರ್ವೇದದಲ್ಲಿ ಬೇರೆ ಬೇರೆ ಚಿಕಿತ್ಸೆಯ ಪ್ರಕಾರಗಳು ಹೇಳಲ್ಪಟ್ಟಿವೆ. ಅವು ಯಾವವೆಂದರೆ:— ಹೇತುವಿಪರೀತ, ವ್ಯಾಧಿವಿಪರೀತ, ಹೇತುವ್ಯಾಧಿವಿಪರೀತ, ಮತ್ತು ತದರ್ಥಕಾರಿ ಅಥವಾ ವಿಪರೀತಾರ್ಥಕಾರಿ. ರೋಗದ ಕಾರಣವು ಶೈತ್ಯ ಅಥವಾ ಚಳಿ ಇದ್ದರೆ

ಆದಕ್ಕೆ ಉಷ್ಣೋಪಚಾರ ಮಾಡುವದು ಅಂದರೆ ಅದು ಹೇತುವಿಪರೀತ ಚಿಕಿತ್ಸೆಯ ಉದಾಹರಣವು. ಮಲಾವರೋಧವಾದಲ್ಲಿ ರೇಚಕ ಕೊಡುವದು ವ್ಯಾಧಿವಿಪರೀತ ಚಿಕಿತ್ಸೆಯು. ವಾತಶೋಥವೆಂದರೆ ಬಾವು ಬಂದಿದ್ದರೆ ವಾತಹರ, ಶೋಥಹರ ಅಂದರೆ ಬಾವು ತೆಗೆದುಹಾಕುವ "ದಶಮೂಲ" ಕಾಢೆಯನ್ನು ಕೊಡುವದು ವ್ಯಾಧಿವಿಪರೀತ ಚಿಕಿತ್ಸೆಯು. ರೇಚವಾಗುತ್ತಿದ್ದರೆ ರೇಚವಾಗುವ ಔಷಧವನ್ನು ಕೊಟ್ಟು ನೆಟ್ಟಗೆ ಮಾಡುವ ಉಪಚಾರಕ್ಕೆ ತದರ್ಥಕಾರಿ ಅಥವಾ ವಿಪರೀತಾರ್ಥಕಾರಿ ಚಿಕಿತ್ಸೆ ಅನ್ನುತ್ತಾರೆ. ಪಿತ್ತಪ್ರಧಾನವುಳ್ಳಂಥ ಶೋಥವೆಂದರೆ ಹಣ್ಣಾಗುವ ಬಾವಿನ ಮೇಲೆ ಪಿತ್ತಕರ ಹಾಗೂ ಉಷ್ಣವಾಗುವ ಕಾವು ಕೊಡುವದು ಮತ್ತು ಬಿಸಿ ಆಹಾರ ತಿನ್ನಲಿಕ್ಕೆ ಕೊಡುವದು ಹಾಗೂ ವಾಂತಿ ಆಗುತ್ತಿರಲು ವಾಂತಿ (ಕರಗೇಳಫಲ) ಕೊಡುವದು ಹಾಗೂ ಅತಿಸಾರದಮೇಲೆ ವಿರೇಚನವಾಗುವ ಹಾಲು ಕುಡಿಯಲಿಕ್ಕೆ ಕೊಡುವದು ಇವೆಲ್ಲ ತದರ್ಥಕಾರಿ ಚಿಕಿತ್ಸೆಯ ಉದಾಹರಣಗಳು.

ಮೇಲೆ ಚಿಕಿತ್ಸೆಯ ಪ್ರಕಾರಗಳು ನಾಲ್ಕು ಎಂದು ಹೇಳಿದಾಗ್ಯೂ ವಿಪರೀತ ಮತ್ತು ತದರ್ಥಕಾರಿ ಅಥವಾ ವಿಪರೀತಾರ್ಥಕಾರಿ ಹೀಗೆ ಎರಡೇ ಪ್ರಕಾರಗಳು ಅನ್ನಬಹುದು. ಇವುಗಳಿಗೆ ಪ್ರತಿಚಿಕಿತ್ಸಾ ಮತ್ತು ಅನುಚಿಕಿತ್ಸಾ ಎಂದೂ ಅನ್ನುತ್ತಾರೆ. ಮೊದಲಿನ ಮೂರು ಪ್ರಕಾರಗಳಿಗೆ ವಿಪರೀತ ಚಿಕಿತ್ಸಾ ಎಂತಲೂ ಅನ್ನಬಹುದು. ಹೊಮಿಯೋಪಥಿಯ ಉತ್ಪಾದಕರಾದ ಡಾಕ್ಟರ ಹಾನಿಮನ್‌ರು ಈ ಎರಡೂ ಪ್ರಕಾರದ ಉಲ್ಲೇಖ ಮಾಡಿದ್ದಾರೆ. ಅವರು ಆ್ಯಲೊಪಥಿ ಶಾಸ್ತ್ರಕ್ಕೇ ವಿಪರೀತ ಚಿಕಿತ್ಸೆಯ ಉದಾಹರಣವೆನ್ನುತ್ತಾರೆ. ಮತ್ತು ಅದು ಕೆಲವು ಅಂಶದಲ್ಲಿ ನಿಜವೂ ಅದೆ. ಹೊಮಿಯೋಪಥಿ ಶಾಸ್ತ್ರವು ತದರ್ಥಕಾರಿ ಚಿಕಿತ್ಸೆಯ ತತ್ವದ ಮೇಲೆ ರಚಿಸಲ್ಪಟ್ಟಿದೆ. ಜೀವನರಸಾಯನ ಶಾಸ್ತ್ರವು ಈ ಎರಡೂ ಶಾಸ್ತ್ರಗಳಿಗೆ ಅನುಸರಿಸಿಲ್ಲವೆಂದು ಕಾಣುತ್ತದೆ. ಕಡಿಮೆ ಆದದ್ದನ್ನು ತುಂಬಿಕೊಡು ಇದೇ ಈ ಶಾಸ್ತ್ರದ ಸೂತ್ರವಾಕ್ಯವು. ವಿಪರೀತ, ತದರ್ಥಕಾರಿ ಅಥವಾ ವಿಪರೀತಾರ್ಥಕಾರಿ ಈ ತರದ ಚಿಕಿತ್ಸೆಯು ಈ ಶಾಸ್ತ್ರದಲ್ಲಿ ಎಲ್ಲಿಯೂ

ಸ್ಪಷ್ಟವಾಗಿ ಕಂಡುಬರುವದಿಲ್ಲ. ಈ ಎರಡು ಪ್ರಕಾರಗಳಲ್ಲಿ ಯಾವದೂ ರಲ್ಲಾದರೂ ಈ ಚಿಕಿತ್ಸೆಯ ಸಮಾವೇಶವಾಗುತ್ತಿರಬೇಕೆಂದು ಅನ್ನುತ್ತಿದ್ದರೆ ಅದು ತದರ್ಥಕಾರಿ ಚಿಕಿತ್ಸೆಯ ಪ್ರಕಾರವಿರಬಹುದೆಂದು ಅನ್ನಬಹುದು.

**ಉಪಸಂಹಾರ**:— ಜೀವನರಸಾಯನ ಪದ್ಧತಿಯು ನಿಸರ್ಗಸಿದ್ಧ ಶಾಸ್ತ್ರವು. ಅದು ಪ್ರಯೋಗಶಾಸ್ತ್ರವಲ್ಲ. ಇದರಲ್ಲಿ ಆಶ್ಚರ್ಯ ಅಥವಾ ಗೂಢವೆಂದೆನಿಸುವಂಥಾದ್ದೇನೂ ಇಲ್ಲ. ಇತರ ಸೃಷ್ಟಿನಿಯಮಗಳ ಬಗ್ಗೆ ಹೇಗೆ ಆಶ್ಚರ್ಯ ಅಥವಾ ಗೂಢವೆನಿಸುವದಿಲ್ಲವೋ ಹಾಗೆಯೇ ಇದರಲ್ಲಾದರೂ ಆಶ್ಚರ್ಯಕಾರಕವು ಏನೂ ಇಲ್ಲ. ಶರೀರದ ವ್ಯಾಪಾರಗಳು ಹೇಗೆ ನಡೆಯುತ್ತವೆ ಆ ವ್ಯಾಪಾರಗಳಿಂದ ರೋಗನಿವಾರಣದ ಕಾರ್ಯಕ್ಕೇನಾದರೂ ಅನುಕೂಲತೆಯಾಗುತ್ತದೋ ಎಂಬದರ ವಿಚಾರಮಾಡಿಯೇ ಮತ್ತು ನಿಸರ್ಗನಿಯಮಗಳನ್ನು ಬಿಡದೇನೇ ಇದೊಂದು ಚಿಕಿತ್ಸೆಯ ಹೊಸಮಾರ್ಗವೆನ್ನಬಹುದು. ಈ ಮಾರ್ಗದ ಸಮರ್ಥನೆಗಾಗಿ ಜೀವನರಸಾಯನ ಶಾಸ್ತ್ರಜ್ಞರು ಮಾಡಿದ ವಿವೇಚನ ಮತ್ತು ಕೋಟಿಕ್ರಮವನ್ನು ಅವರ ಶಬ್ದದಲ್ಲಿಯೇ ಆದಷ್ಟುಮಟ್ಟಿಗೆ ಈ ವರೆಗೆ ಕೊಟ್ಟಿದೆ. ಈ ವಿವೇಚನವು ಕೆಲವರಿಗೆ ಮಾನ್ಯವಾಗಬಹುದು, ಕೆಲವರಿಗೆ ಮಾನ್ಯವಾಗಲಿಕ್ಕಿಲ್ಲ. ಇದು ಸ್ವಾಭಾವಿಕವೇ ಸರಿ. ಈ ಶಾಸ್ತ್ರದ ಬಗ್ಗೆ ಎಷ್ಟೋ ಜನರು ಭಿನ್ನಭಿನ್ನ ಆಕ್ಷೇಪಗಳನ್ನು ತಂದಿದ್ದಾರೆ. ಅವುಗಳ ಉಲ್ಲೇಖ ಮತ್ತು ವಿಚಾರಮಾಡಿ ಗ್ರಂಥಬೆಳಿಸುವದು ನಮ್ಮ ಇಚ್ಛೆಯಿಲ್ಲ. ಮತ್ತು ಅದರ ಅವಶ್ಯಕತೆಯೂ ಇಲ್ಲ. ವಾಚಕರೇ ಅದರಲ್ಲಿ ಗ್ರಾಹ್ಯವಿದ್ದಷ್ಟು ಗ್ರಹಣಮಾಡಬೇಕು. ತ್ಯಾಜ್ಯವಿದ್ದಷ್ಟು ತ್ಯಜಿಸಬೇಕು. ಅದರ ಬಗ್ಗೆ ವಾದವಿವಾದ ಅನವಶ್ಯಕ. ಆಕ್ಷೇಪಕರು ತಮ್ಮ ಆಕ್ಷೇಪಗಳನ್ನು ತಮ್ಮ ಅನುಭವದ ಒರೆಗಲ್ಲಿಗೆ ಹಚ್ಚಿನೋಡಿ ತಮ್ಮ ಆಕ್ಷೇಪಗಳನ್ನು ದೃಢಮಾಡಬೇಕು. ಒರೆಗೆ ಹಚ್ಚಲಾಗಿ ಸರಿಯಾಗದಿದ್ದರೆ ಮಾತ್ರ ಈ ಶಾಸ್ತ್ರದಲ್ಲಿ ಏನೂ ಅರ್ಥವಿಲ್ಲೆಂದೆನ್ನಬಹುದೋ ಇದರ ವಿಚಾರ ಮಾಡಬೇಕು. ಗ್ರಾಹ್ಯವಿದ್ದದ್ದು ಗ್ರಹಣಮಾಡಬೇಕು. ಬೇಡಾದಷ್ಟು ಬಿಡಬೇಕು. ಉಪಯೋಗವಾಗುವಂಥದನ್ನು ಸ್ವೀಕರಿಸಿರಿ, ಉಪಯೋಗ ವಿಲ್ಲೆಂಬನಿಸುವದನ್ನು ಉಪಯೋಗಿಸಬೇಡಿರಿ. ಅವರೋಧವಾದ ಕಾಲಕ್ಕೆ

ಅಥವಾ ಇತರ ರೋಗಗಳಾದ ಕಾಲಕ್ಕೆ ಜಠರದಲ್ಲಿಯ ಹೊಲಸು ತೆಗೆದು ಹಾಕುವದಕ್ಕೋಸ್ಕರ ರೇಚಕವನ್ನು ಕೊಡುವದವಶ್ಯವೆಂದು ವೈದ್ಯರೂ ಡಾಕ್ಟರರೂ ಇತರ ಸಾಧಾರಣ ಜನರೂ ಸಹ ಉಪದೇಶಿಸುತ್ತಾರೆ. ಆದರೆ ಇದು ಈ ಶಾಸ್ತ್ರಕ್ಕೆ ಮಾನ್ಯವಿಲ್ಲ. ಇಷ್ಟೇ ಅಲ್ಲ, ಈ ರಸಾಯನಪದ್ಧತಿಯಲ್ಲಿ ಇಂಥ ಔಷಧಗಳೇ ಇಲ್ಲ. ರೇಚಕ ಔಷಧಗಳು ಈ ಶಾಸ್ತ್ರಪದ್ಧತಿಯಲ್ಲಿಲ್ಲ ವೆಂದು ಈ ಶಾಸ್ತ್ರವೇ ನಿರರ್ಥಕವೆಂದು ಅನ್ನುವದು ವಿಹಿತವಾಗಲಿಕ್ಕಿಲ್ಲ. ಆದೇ ರೋಗವನ್ನು ಈ ಪದ್ಧತಿಯಲ್ಲಿ ಹೇಗೆ ನಿವಾರಣೆ ಮಾಡುತ್ತಾರೆ ಎಂಬದನ್ನು ನೋಡಿಕೊಂಡು ನಿವಾರಣೆ ಆಗುತ್ತದೋ ಇಲ್ಲವೋ ಇದರ ವಿಚಾರಮಾಡಿ ಅನುಭವತೆಗೆದುಕೊಂಡು ಆನಂತರ ಶಾಸ್ತ್ರದ ಉಪಯುಕ್ತತೆ ಯನ್ನು ನಿಶ್ಚಯಿಸಬೇಕು. ಆದೇಮೇರೆಗೆ ಈ ಶಾಸ್ತ್ರದಲ್ಲಿ ಔಷಧ ತೀರ ಸ್ವಲ್ಪ ಪ್ರಮಾಣದಲ್ಲಿ ಕೊಡುತ್ತಾರೆ ಮತ್ತು ಎಲ್ಲ ಔಷಧಗಳು ಒಂದೇ ಸವನೆ ಇರುತ್ತವೆ. ಎಲ್ಲವುಗಳ ರುಚಿಯಾದರೂ ಒಂದೇ. ಇದರಿಂದ ಹೇಗೆ ಗುಣಬರುವದು ಇಂಥ ಕೋಟಿಕ್ರಮಗಳು ಸೃಷ್ಟಿನಿಯಮದ ಅಗಾಧ ಅಜ್ಞಾನದ ದ್ಯೋತಕಗಳೇ ಸರಿ. ಈ ಚಿಕಿತ್ಸೆಯ ತತ್ವದ ವಿವೇಚನ ಶಾಸ್ತ್ರಜ್ಞರು ಮಾಡಿದ್ದು ಈ ಔಷಧಗಳು ಹೇಗೆ ಕಾರ್ಯಮಾಡಿ ರೋಗ ನಿವಾರಣೆ ಮಾಡುತ್ತವೆ ಎಂಬದರಬಗ್ಗೆ ಶಾಸ್ತ್ರಜ್ಞರು ಮಾಡಿದ ವಿವೇಚನವು ಮಾನ್ಯವಾಗಲಿ ಮಾನ್ಯವಾಗದೇ ಇರಲಿ ಪ್ರತ್ಯಕ್ಷ ಅನುಭವ ತೆಗೆದುಕೊಳ್ಳದ ವಿನಃ ಶಾಸ್ತ್ರವು ತ್ಯಾಜ್ಯವೆಂದು ನಿಶ್ಚೈಸಬೇಡಿರಿ. ಈ ಶಾಸ್ತ್ರದಲ್ಲಿ ಹೇಳಿದ ಪ್ರಕಾರ ಔಷಧಕೊಟ್ಟು ಪ್ರತ್ಯಕ್ಷ ಅನುಭವ ದೊರಕಿಸರಿ. ಯಶ ಬರದಿದ್ದರೆ ಇದನ್ನೇ ಅವಲಂಬಿಸಿರಿ ಎಂದು ಯಾರೂ ನಿಮಗೆ ಹೇಳಲಿಕ್ಕಿಲ್ಲ. ಆದರೆ ಅನುಭವವು ನೆಟ್ಟಗೆ ಬಂದರೂ ಸಹ ಶಾಸ್ತ್ರದ ಉಪಪತ್ತಿ ಮತ್ತು ಚಿಕಿತ್ಸೆಯ ಸಂಬಂಧದಿಂದಮಾಡಿದ ವಿವೇಚನವು ಮಾನ್ಯವಾಗುವದಿಲ್ಲ, ಇಷ್ಟರಿಂದಲೇ ಮೂಗು ಮುರಿಯುವದು ಸರಿಯಲ್ಲ. ಔಷಧಗಳಿಂದ ಗುಣಬರುತ್ತಿದ್ದು ಶಾಸ್ತ್ರದ ಉಪಪತ್ತಿ ಮತ್ತು ತತ್ವದ ವಿವೇಚನವು ನಿಮಗೆ ಮಾನ್ಯವಾಗ ದಿದ್ದರೆ ಇತರ ರೀತಿಯಿಂದ ತಿಳಕೊಳ್ಳುವ ಮತ್ತು ತಿಳಿಸಿಹೇಳುವ ಯತ್ನನಡಿ ಸಿರಿ. ಮಾನವೀಶರೀರವನ್ನು ನಿರೋಗಿ ಮತ್ತು ನಿರಾಮಯಸ್ಥಿತಿಯಲ್ಲಿಡು ವದೇ ವೈದ್ಯಶಾಸ್ತ್ರದ ಉಚ್ಚತಮ ಹೇತುವಿದೆ. ಈ ಹೇತುವಿಗನುಸರಿಸಿಯೇ

ಯಾವ ವೈದ್ಯಶಾಸ್ತ್ರದ್ದಾದರೂ ಅಭ್ಯಾಸ ಮತ್ತು ವಿಚಾರ ನಿರ್ವಿಕಾರ ಮನಸ್ಸಿನಿಂದ ಮಾಡತಕ್ಕದ್ದು. ಅನುಭವದ ಒರೆಗಲ್ಲಿಗೆ ಇಳಿಯದಂಥ ನಿರಾಧಾರ ಆಕ್ಷೇಪಗಳನ್ನು ತಂದು ಈ ಶಾಸ್ತ್ರದಬಗ್ಗೆ ಔದಾಸೀನ್ಯ ಮತ್ತು ದುರ್ಲಕ್ಷ ಮಾಡುವದು ಸರಿಯಾಗಲಿಕ್ಕಿಲ್ಲ.

---

# ೧೨ ಕ್ಷಾರಗಳ ಗುಣಧರ್ಮಗಳು



# MATERIA MEDICA
## OF THE
# TWELVE TISSUE REMEDIES

೧. ರೋಗ ೨. ಔಷಧಗಳು ೩. ರುಗ್ಣಸ್ಥಿತಿಯಲ್ಲಿ ಔಷಧದ ಉಪಯೋಗ ಹೇಗೆ ಮಾಡಬೇಕು. ಈ ಮೂರು ವಿಷಯಗಳ ಸಮ್ಯಕ್ ಜ್ಞಾನವೇ ವೈದ್ಯಶಾಸ್ತ್ರವು, ಹೀಗೆ ವೈದ್ಯಶಾಸ್ತ್ರದ ವ್ಯಾಖ್ಯೆ ಮಾಡಿದ್ದು ಕೆಲವು ಸ್ಥಳಗಳಲ್ಲಿ ಕಂಡುಬರುತ್ತದೆ. ರೋಗದ ಉತ್ಪತ್ತಿ, ಅದರ ಕಾರಣಗಳು, ಪೂರ್ವರೂಪ, ಸಂಪ್ರಾಪ್ತಿ, (ನಿಕಟಸಂಬಂಧ); ಲಕ್ಷಣಗಳು, ಅದರ ವೃದ್ಧಿ ಲಯಗಳು ಹೇಗೆ ಆಗುತ್ತವೆ ( ಉಪಶಯ, ಅನುಪಶಯ ), ನಿದಾನ, ಸಾಧ್ಯಾಸಾಧ್ಯ ವಿಚಾರ ಮುಂತಾದವುಗಳ ಸಂಪೂರ್ಣ ವಿವೇಚನವೇ ರೋಗವಿಜ್ಞಾನವು. ಔಷಧೀ ಪದಾರ್ಥವು ಖನಿಜವೋ ಉದ್ಭಿಜವೋ ಪ್ರಾಣಿಜವೋ, ಅದರ ಗುಣಧರ್ಮ, ಶರೀರದಲ್ಲಿ ಅದರ ಕಾರ್ಯವು ಯಾವ ವಿಶಿಷ್ಟಭಾಗದಲ್ಲಿ ಮತ್ತು ಹೇಗೆ ಆಗುತ್ತದೆ ( ಅಂದರೆ ಕಾರ್ಯಕ್ಷೇತ್ರವು ಯಾವುದು ) ಈ ಎಲ್ಲ ಸಂಗತಿಗಳ ಸಂಪೂರ್ಣ ಪರಿಚಯವು ಔಷಧದ ಸಮ್ಯಕ್‌ಜ್ಞಾನಕ್ಕೆ ಅವಶ್ಯಕವಿದೆ. ರೋಗದ ಮೇಲೆ ಔಷಧದ ಉಪಯೋಗ ಹೇಗೆ ಮಾಡಬೇಕು, ಅದರ ಪ್ರಮಾಣವೇನಿರಬೇಕು, ಅದನ್ನು ಕೊಡುವದು ಹೇಗೆ, ಅದರ ಅನುಪಾನವಾವುದು, ಔಷಧ ಕೊಡುವದು ಎಷ್ಟು ಸಾರೆ ಮತ್ತು ಎಷ್ಟು ವೇಳೆಯ ಅಂತರದಿಂದ, ಒಂದು ಔಷಧದ ಕಾರ್ಯವು ಅದೇ ರೋಗದಲ್ಲಿ ಕೊಡತಕ್ಕ ಎರಡನೇ ಔಷಧಕ್ಕೆ ಹೇಗೆ ಸಹಾಯಕರ ಅಥವಾ ಪೋಷಕವಾಗುವದು, ಹೇಗೆ ವಿಪರೀತವಾಗಲಿಕ್ಕಿಲ್ಲ ಅಂದರೆ * ಯೋಗವಾಹಿ ಹೇಗೆ ಆಗುವದು, ಈ ಸಂಗತಿಗಳ ವಿಚಾರವು.

---

* "ಯೋಗವಾಹಿ"– ಇದರ ಸ್ಪಷ್ಟೀಕರಣ ಹಿಂದೆ ಮಾಡಿದೆ.

ಮೂರನೇ ವಿಷಯದಲ್ಲಿ ಬರುವುದು. ಇದರಲ್ಲಿ ಮೊದಲನೇ ಮತ್ತು ಮೂರನೇ ವಿಷಯಗಳ ಬಗ್ಗೆ ವಿವೇಚನವು ಈ ಪುಸ್ತಕದಲ್ಲಿ ಬೇರೆಕಡೆಗೆ (ವಿಷಯಪ್ರವೇಶ, ಸಾಮಾನ್ಯರೋಗ, ಅವುಗಳ ಚಿಕಿತ್ಸೆ ಮುಂತಾದ ಪ್ರಕರಣಗಳಲ್ಲಿ) ಬಂದೇ ಇದೆ. ಈ ಪ್ರಕರಣದಲ್ಲಿ ಎರಡನೇ ವಿಷಯದ ಅಂದರೆ ಔಷಧಗಳ ಗುಣಧರ್ಮಗಳ ಸಂಬಂಧದ ವಿವೇಚನ ಮಾಡತಕ್ಕದ್ದಿದೆ.

ಔಷಧಗಳ ಕಾರ್ಯಕ್ಷೇತ್ರ, ಅವುಗಳ ಗುಣಧರ್ಮ ಇವುಗಳ ಬಗ್ಗೆ ಪೂರ್ಣ ಪರಿಚಯವಿಲ್ಲದಹೊರತು ಇಂಥ ರೋಗಕ್ಕೆ ಇಂಥ ಔಷಧವು ಇಂಥ ಲಕ್ಷಣಗಳಿದ್ದಲ್ಲಿ ಇಂಥ ಔಷಧ ಕೊಡತಕ್ಕದ್ದು ಇಷ್ಟೇ ಹೇಳಿ ಸಾಗಲಾರದು. ಆದ್ದರಿಂದ ಈ ಪ್ರಕರಣದಲ್ಲಿ ಪ್ರತಿಯೊಂದು ಔಷಧದ ಕಾರ್ಯಕ್ಷೇತ್ರ ಮತ್ತು ಅದರ ಗುಣಧರ್ಮ ವಿಸ್ತಾರದಿಂದ ಮತ್ತು ಸಾಮಾನ್ಯ ಜನರಿಗೆ ಸುಲಭ ರೀತಿಯಿಂದ ತಿಳಿಯುವಂತೆ ಬರೆದಿದ್ದೇವೆ. ಆರಂಭದಲ್ಲಿ ಸ್ಥೂಲಮಾನದಿಂದ ಔಷಧದ ಕಾರ್ಯಕ್ಷೇತ್ರದ ವ್ಯಾಪ್ತಿಯನ್ನು ಹೇಳಿ ಯಾವ ಬೇನೆಗಳ ಮೇಲೆ ಸಾಧಾರಣವಾಗಿ ಅದರ ಉಪಯೋಗವಾಗುವದು ಎಂಬದನ್ನು ಹೇಳುತ್ತೇವೆ. ಅನಂತರ ಪ್ರಮುಖ ಲಕ್ಷಣಗಳೆಂಬ ಸದರದ ಕೆಳಗೆ ಬೇರೆಬೇರೆಯಾಗಿ ಔಷಧಗಳ ಲಕ್ಷಣಗಳನ್ನು ಸವಿಸ್ತರ ಹೇಳುತ್ತೇವೆ. ಶರೀರದಲ್ಲಿ ಮೆದುಳು, ಮಸ್ತಕ, ನೇತ್ರ, ಕಿವಿ, ಮೂಗು, ಮುಖಚರ್ಯೆ, ಮುಖ, ನಾಲಗೆ, ಹಲ್ಲು, ಗಂಟಲು, ಜಠರ, ಉದರ, ಮಲ, ಮೂತ್ರೇಂದ್ರಿಯ, ಪುರುಷರ ಜನನೇಂದ್ರಿಯ, ಸ್ತ್ರೀಯರ ಜನನೇಂದ್ರಿಯ, ಶ್ವಸನೇಂದ್ರಿಯ, ರುಧಿರಾಭಿಸರಣ, ಕುತ್ತಿಗೆ, ಬೆನ್ನು, ಕೈ, ಕಾಲು, ತ್ವಚೆ, ಇತರ ಅವಯವಗಳು, ಮುಂತಾದ ೨೫ ಭಾಗಗಳನ್ನು ಕಲ್ಪಿಸಿ, ಆಯಾ ಭಾಗಗಳಲ್ಲಿ ಯಾವ ಯಾವ ಭಾವನೆಗಳು ಉತ್ಪನ್ನವಾದರೆ ಆ ಔಷಧದ ಉಪಯೋಗವಾಗುವದೆಂಬದನ್ನು ಹೇಳಿದೆ. ಇದರ ಹೊರತಾಗಿ ನಿದ್ರೆ, ಜ್ವರವೃದ್ಧಿ, ಕ್ಷಯ, ಉಪಯೋಗ, ಇತರ ಔಷಧಗಳ ಸಂಬಂಧ ಈ ಪ್ರಕಾರ ಉಪಸದರುಗಳನ್ನು ಮಾಡಿ ಅವುಗಳ ಕೆಳಗೆ ಔಷಧಗಳ ಬಗ್ಗೆ ಸಾಕಷ್ಟು ಹೆಚ್ಚಿನ ವಿಚಾರ ಮಾಡಿದ್ದೇವೆ. "ಕಲ್ಕೇರಿಯಾ ಫಾಸ"ವೆಂಬ ಸದರಿನ ಕೆಳಗಿನ "ಮಸ್ತಕ"ವೆಂಬ ಉಪಸದರಿನ ಕೆಳಗೆ "ತಲೆಯಲ್ಲಿ ಸೀತವಾಗಿ ತಲೆ ನೋಯುತ್ತದೆ. ತಲೆಯ ಹಿಂಭಾಗದ ಮೇಲೆ ಇರಿಷಿ

ನಡೆದಂತಾಗಿ ಸೀತವೆನಿಸುತ್ತದೆ." ಈ ಪ್ರಕಾರ ಲಕ್ಷಣಗಳು ಹೇಳಿವೆ. ಶರೀರದಲ್ಲಿ ಈ ಕ್ಷಾರವು ಕಡಿಮೆಯಾದಲ್ಲಿ ಈ ಭಾಗದಲ್ಲಿ ಈ ಲಕ್ಷಣಗಳು ಆಗುತ್ತವೆಂದು ತಿಳಿಯತಕ್ಕದ್ದು. ಮತ್ತು ರೋಗಿಗೆ ಈ ಲಕ್ಷಣಗಳು ಇದ್ದಲ್ಲಿ ಅವು ಕಡಿಮೆಯಾಗುವದಕ್ಕೋಸ್ಕರ ಅಂದರೆ ಕಡಿಮೆಯಾದ ಕ್ಷಾರವನ್ನು ಪೂರೈಸಿಕೊಡುವದಕ್ಕಾಗಿ "ಕಲ್ಕೇರಿಯಾ ಫಾಸ"ವೆಂಬ ಔಷಧ ಕೊಡತಕ್ಕದ್ದು ಎಂದು ಈ ಉಪಭಾಗದಲ್ಲಿ ಕೊಟ್ಟ ಲಕ್ಷಣಗಳ ಅರ್ಥವು. ಉಪಸದರಿನ ಎದುರಿಗೆ ಕೊಟ್ಟ ಲಕ್ಷಣಗಳು ಕಂಡುಬಂದರೆ ಯಾವ ಔಷಧದ ಉಪಸದರಿನ ಕೆಳಗೆ ಲಕ್ಷಣಗಳು ಕೊಟ್ಟಿರುತ್ತವೆ ಆ ಲಕ್ಷಣಗಳ ಮೇಲೆ ಆ ಔಷಧವನ್ನು ಕೊಡತಕ್ಕದ್ದು. ಒಂದೇ ಉಪಸದರಿನ ಕೆಳಗಿನ ಭಾವನೆಗಳನ್ನು ಲಕ್ಷದಲ್ಲಿ ತಂದು ಔಷಧ ಕೊಡುವದು ಸರ್ವಕಾಲ ಸರಿಯಾಗಲಿಕ್ಕಿಲ್ಲ. ಶರೀರದ ಇತರ ಭಾಗಗಳಲ್ಲಿ ಈ ಔಷಧದ ಭಾವನೆಗಳು ಇದ್ದರೆ ಅಥವಾ ಇತರ ಭಾಗಗಳಲ್ಲಿ ಈ ಔಷಧದ ಭಾವನೆಗಳಿಗೆ ವಿರುದ್ಧ ಭಾವನೆಗಳು ಇರದಿದ್ದರೆ ಈ ಔಷಧ ಕೊಡತಕ್ಕದ್ದಿರುತ್ತದೆ. ಹಿಂದೆ ವಿಷಯಪ್ರವೇಶವೆಂಬ ಪ್ರಕರಣದಲ್ಲಿ ಔಷಧವನ್ನು ಹೇಗೆ ಆರಿಸಬೇಕೆಂಬ ಸದರಿನ ಕೆಳಗೆ ಅವಶ್ಯವಿದ್ದ ವಿವರಣೆ ಮಾಡಿದ್ದರಿಂದ ಇಲ್ಲಿ ಹೆಚ್ಚಿನ ವಿಸ್ತಾರ ಮಾಡುವ ಆವಶ್ಯಕತೆಯಿಲ್ಲ.

"ಉಪಯೋಗ"ವೆಂಬ ಸದರಿನ ಕೆಳಗೆ ಯಾವಶಕ್ತಿಯ ಔಷಧಗಳನ್ನು ಉಪಯೋಗಿಸಬೇಕು ಎಂಬದನ್ನು ಸ್ಥೂಲರೀತಿಯಿಂದ ಹೇಳಿದ್ದು ಇತರ ಔಷಧಗಳ ಪರಸ್ಪರ ಸಂಬಂಧವೇನಿದೆ, ಔಷಧಗಳ ಪ್ರಮಾಣವೇನಿರಬೇಕು ಎಂಬದರ ಬಗ್ಗೆ ವಿವೇಚನೆಯನ್ನು ಇದೇ ಪ್ರಕರಣದಲ್ಲಿ ಮಾಡಿದ್ದೇವೆ.

ಹಲಕೆಲವು ಭಾವನೆಗಳು ಬೇರೆಬೇರೆ ಸದರಿನ ಕೆಳಗೆ ವರ್ಣಿಸಲ್ಪಟ್ಟಿವೆ. ಉದಾಹರಣಾರ್ಥ, "ಕಾಲೀಮೂರ" ಈ ಔಷಧ ನೋಡಿರಿ. "ಕಾಲೀಮೂರ" ಇದರಬಗ್ಗೆ ಹೇಳುವಾಗ್ಗೆ ನಾಲಗೆಯಮೇಲೆ ಬಿಳೀ ಬಣ್ಣದ ಅಗ್ರ ಎಂಬ ಭಾವನೆಯನ್ನು "ನಾಲಗೆ" ಈ ಉಪಸದರಿನ ಕೆಳಗೆ ಅಷ್ಟೇಬಾರದೆ ಕಾಲೀಮೂರ ಇದರ ಬಹುಶಃ ಇತರ ಯಾವತ್ತೂ ಉಪಸದರುಗಳ ಕೆಳಗೆ ಸಹ ಬಂದಿದೆ. ಇತರ ಸದರುಗಳ ಕೆಳಗೆ ಈ ಭಾವನೆಯನ್ನು ಕೊಟ್ಟು ಈ ಮತ್ತು ಇತರ ಭಾವನೆಗಳು ಇದ್ದಲ್ಲಿ, "ಕಾಲೀಮೂರ" ಇದರ ಉಪ

ಯೋಗವಾಗುವದೆಂದು ತಿಳಿಯತಕ್ಕದ್ದು. ಹಾಗೆಯೇ ತಲೆನೋವು ಇದ್ದು ನಾಲಗೆಯಮೇಲೆ ಅಸ್ವಚ್ಛ, ನಸುಗೆಂಪು ಮತ್ತು ಹಸರು ಅಗ್ರವಿದ್ದರೆನೇ ನೇಟ್ರಂಸಲ್ಫದ ಉಪಯೋಗವಾಗುವದು. ಅಂತೇನೆ ನೆಟ್ರಂಸಲ್ಫ ಈ ಔಷಧದಕೆಳಗೆ ಮಸ್ತಕವೆಂಬ ಉಪಸದರಿನ ಕೆಳಗೆ ನಾಲಗೆಯ ಸಂಬಂಧದಿಂದ ಮೇಲೆಹೇಳಿದ ಭಾವನೆಗಳ ಪುನರುಚ್ಚಾರ ಮಾಡುವ ಅವಶ್ಯಕತೆಯುಂಟಾಯಿತು. ಬಹಳೇಸು ಹೇಳುವದು, ಪುನರುಚ್ಚಾರಮಾಡಿದ್ದು ಅಹೇತುಕವಿರದೆ ಸಹೇತುಕವೇ ಆದೆ ಎಂದು ತಿಳಿಯಬೇಕು. ಮತ್ತು ಅರ್ಥವನ್ನು ಮೇಲೆಹೇಳಿದ ಉದಾಹರಣದ ಮೇರೆಗೆ ತಿಳಕೊಳ್ಳಬೇಕು.

ಹಲಕೆಲವು ಭಾವನೆಗಳ ಮುಂದೆ ಕಂಸಿನಲ್ಲಿ ಇತರ ಔಷಧಗಳ ಉಲ್ಲೇಖ ಮಾಡಿದೆ. ಆದರ ಅರ್ಥವು ಹೀಗೆ ಇರುವದು. ಅದೇನಂದರೆ:— ಆ ಭಾವನೆಯು ಆಯಾ ಔಷಧಗಳಲ್ಲಿ ದೊರೆಯುವದೆಂದು ತಿಳಿಯತಕ್ಕದ್ದು. ಆದ್ದರಿಂದ ಈ ಭಾವನೆಯು ಇತರ ಯಾವ ಔಷಧಗಳ ಕೆಳಗೆ ದೊರೆಯುವದು ಅದನ್ನು ಲಕ್ಷ್ಯದಲ್ಲಿ ತಂದು ಇತರ ಔಷಧಗಳ ಭಾವನೆಗಳ ವಿಚಾರಮಾಡಿ ಔಷಧವನ್ನಾರಿಸುವದು ಸುಲಭವಾಗುತ್ತದೆ.

ಔಷಧದ ಗುಣಧರ್ಮಗಳನ್ನು ಚನ್ನಾಗಿ ಲಕ್ಷ್ಯದಲ್ಲಿಡಬೇಕು. ಈ ಶಾಸ್ತ್ರದ ಅಭ್ಯಾಸವನ್ನು ಶಾಸ್ತ್ರೀಯ ಪದ್ಧತಿಯಿಂದ ಮಾಡುವವರಿಗಂತೂ ಗುಣಧರ್ಮದ ಕಡೆಗೆ ದುರ್ಲಕ್ಷ್ಯ ಮಾಡಿದರೆ ಸಾಗದು. ಮುಂದೆ "ಸಾಮಾನ್ಯರೋಗ ಮತ್ತು ಅವುಗಳ ಚಿಕಿತ್ಸೆ" ಈ ಪ್ರಕರಣದಲ್ಲಿ ಹೇಳಲ್ಪಟ್ಟ ರೋಗ ಮತ್ತು ಅವುಗಳ ಮೇಲಿನ ಔಷಧಗಳು, ಇವನ್ನಷ್ಟೆ ಓದಿ ಮುಗಿಸಬಾರದು. ಅಲ್ಲಿ ಹೇಳಿದ ಚಿಕಿತ್ಸೆ ತಿಳಿಯಬೇಕಾದರೂ ಗುಣಧರ್ಮಗಳ ಜ್ಞಾನವಿರುವದು ಅತ್ಯವಶ್ಯಕ. ಆದ್ದರಿಂದ ತಮ್ಮ ಸ್ವಂತ ದೃಷ್ಟಿಯಿಂದ ರೋಗದ ವಿಚಾರಮಾಡಿ ಪುಸ್ತಕದಲ್ಲಿ ಬರೆಯಲಿಕ್ಕೆ ಬರದಂಥಾದ್ದನ್ನು ತಮ್ಮ ಅನುಭವದಿಂದ ಮತ್ತು ಔಷಧಗಳ ಪೂರ್ಣ ಪರಿಚಯದ ಮೇಲಿಂದ ತಿಳಕೊಳ್ಳಲು ಶಕ್ಯವದೆ. ಪ್ರತಿಯೊಬ್ಬರ ಅನುಭವವು ಬೇರೆ. ಅದನ್ನು ದೊರೆಕಿಸಲಿಕ್ಕೆ ಸಹ ಸಂಪೂರ್ಣ ಹಾಗೂ ಪದ್ಧತಿಯ ಪ್ರಕಾರ ದೊರಕಿಸಿದ ಜ್ಞಾನದ ಅವಶ್ಯಕತೆಯುಂಟು.

---

# ಕಲ್ಕೆರಿಯಾ ಫಾಸ್ಫಾರಿಕಂ

## Calcaria Phosphoricum

**ಇತರ ಹೆಸರುಗಳು**:— ಫಾಸ್ಫೇಟ ಆಫ ಲಾಯಿಮ, ಕ್ಯಾಲಸಿಯಂ-ಫಾಸ್ಫೇಟ–ಇವು ಸಹ ಇದರ ಹೆಸರುಗಳು—

**ಕಾರ್ಯಕ್ಷೇತ್ರ**:— ಶರೀರದ ರಚನೆಗೆ ಮತ್ತು ಪೋಷಣಕ್ಕೆ ಇದು ಅತ್ಯವಶ್ಯಕವು. "ಕಲ್ಕೆರಿಯಾಫಾಸ" ಇದು ( ಈ ಕ್ಷಾರವು ) ಹಲ್ಲು, ಎಲುಬು, ಸಂಯೋಜಕ ಧಾತು ( ಲೋಳೆ ) ಹಾಗೂ ರಕ್ತದಲ್ಲಿಯ ಪಿಂಡ ಮುಂತಾದ ಅವಯವಗಳ ಘಟಕಪದಾರ್ಥವು ಇದ್ದು ಅಸ್ಥಿಗಳಲ್ಲಿ ನೂರಕ್ಕೆ ೫೭ ರಷ್ಟು ಪ್ರಮಾಣದಲ್ಲಿರುತ್ತದೆ. ಅಲ್ಬ್ಯೂಮಿನ ಎಂಬ ಸೇಂದ್ರಿಯ ಪದಾರ್ಥದ ಕಡೆಗೆ ಇದರ ಎಳತವಿದ್ದು ಅದರ ಸಂಗಡ ಸಂಬಂಧವನ್ನಿಟ್ಟೇ ಇದು ತನ್ನ ಕಾರ್ಯವನ್ನು ಜರುಗಿಸುವದು. ಈ ಕ್ಷಾರದ ( ಲವಣದ ) ಹೊರ್ತು ಅಲ್ಬ್ಯೂಮಿನ ಪದಾರ್ಥವು ನಿರುಪಯೋಗಿಯೇ (ನಿಷ್ಕ್ರಿಯವೇ) ಸರಿ. ಸ್ರಾವದೊಳಗಿಂದ ಅಲ್ಬ್ಯೂಮಿನ (ಕಲ್ಕಮಯ ಪದಾರ್ಥ) ಹೋಗ ಹತ್ತಿದರೆ ಈ ಕ್ಷಾರವು ಶರೀರದಲ್ಲಿ ಕಡಿಮೆಯಾಗಿದೆ, ಅದು ಶರೀರದಲ್ಲಿ ಸಾಕಷ್ಟು ಉಪಯೋಗಿಸಲ್ಪಡುವದಿಲ್ಲಾದ್ದರಿಂದ ಅದು ಹೊರಗೆ ಹೋಗುತ್ತದೆಂದು ತಿಳಿಯತಕ್ಕದ್ದು. ಎಲುಬುಗಳನ್ನು ಸಿದ್ಧಪಡಿಸುವ ಕಾರ್ಯದಲ್ಲಿ ಅಲ್ಬ್ಯೂಮಿನ್ನದ ಉಪಯೋಗವು ಸಿಮೆಂಟದಂತೆ ಇರುವದು. ಈ ಲವಣದಿಂದ ಎಲುಬುಗಳು ಗಟ್ಟಿಯಾಗುತ್ತವೆ, ಹಲ್ಲುಗಳು ಹುಟ್ಟುತ್ತವೆ, ರಕ್ತವು ಗಟ್ಟಿಯಾಗುವದಿಲ್ಲ. ರಕ್ತಜಲ ( Plasma ) ಪಾಚಕರಸ, ಜೊಲ್ಲು, ಹಾಲು ಮುಂತಾದ ಬಹಳ ಮಹತ್ವದ ರಸದ್ರವ್ಯಗಳಲ್ಲಿ ಈ ಕ್ಷಾರವು ದೊರೆಯುವದು. ಪಂಡುರೋಗ, ಸ್ತ್ರೀಯರಿಗೆ ಆಗುವ ಪೀತ ಪಂಡುರೋಗ ಮುಂತಾದ ರೋಗಗಳ ಮೇಲೆ ಇದು ಮಹತ್ವದ ಔಷಧವು. ಈ ರೋಗಗಳಲ್ಲಿ ದಿನಾಲು ಒಂದು ಸಾರೆ ೧೦ ಗ್ರೇನಿನಂತೆ ೩ ಸಾರೆ ಇದನ್ನು ಕೊಡತಕ್ಕದ್ದು. "ಕಲ್ಕೆರಿಯಾಫಾಸ"ವು ಅಸ್ಥಿಗಳ ಒಳಮೈಯನ್ನು ಸಿದ್ಧಪಡಿಸಲಿಕ್ಕೆ ಅವಶ್ಯವಿದೆ. ಮತ್ತು ಕಲ್ಕೆ ಫ್ಲೊ. ಇದು ಹಲ್ಲಿನ ಹೊರಮಗ್ಗಲ ಸಿದ್ಧಿಗೆ ಆವಶ್ಯಕ. ಮೃದು, ಬೆಳೆಯುವಂಥ ಮತ್ತು

ತರುಣ ಧಾತುಗಳಿಗೆ ಈ ಕ್ಷಾರದ ಸಹಾಯವು ಬಹಳವಾಗುತ್ತದೆ. ಹೊಸ ಪಿಂಡಗಳನ್ನು ಬೆಳೆಸುವ ಶಕ್ತಿಯು ಈ ಕ್ಷಾರದಲ್ಲಿದ್ದ ಕಾರಣ ಚಿಕ್ಕಮಕ್ಕಳ ರೋಗಗಳಲ್ಲಿಯೂ ಶಕ್ತಿಯನ್ನು ಕ್ಷೀಣಪಡಿಸುವ ರೋಗಗಳಲ್ಲಿಯೂ ಆರೋಗ್ಯ ಸ್ಥಾಪನಾವಸ್ಥೆಯಲ್ಲಿಯೂ (Comalesence) ಈ ಔಷಧವು ಬಹಳೇ ಉಪಯೋಗವಾಗುತ್ತದೆ.

ಯಾವದೇ ಕಾರಣದಿಂದಾಗಲಿ ಶರೀರದಲ್ಲಿ ಈ ಕ್ಷಾರದ ಪರಮಾಣುಗಳು ಕಡಿಮೆಯಾದರೆ ಮಹತ್ವವುಳ್ಳ ಮುತ್ತು ಪ್ರಮುಖ ಇಂದ್ರಿಯಗಳ ಕಾರ್ಯದಲ್ಲಿ ವ್ಯತ್ಯಾಸವು ಉಂಟಾಗುತ್ತದೆ. ಅಸ್ಥಿಪಿಂಡಗಳು ನಾಶವಾಗುವಷ್ಟು ತೀವ್ರವಾಗಿಯೇ ಹೊಸ ಪಿಂಡಗಳು ಹುಟ್ಟದೆಹೋಗುವ ಕ್ರಮವು ಬಹಳ ದಿವಸಗಳ ವರೆಗೆ ನಡೆದರೆ ರಕ್ತದಲ್ಲಿಯ ರಕ್ತ (ಕೆಂಪು) ಕಣಗಳು ಕಡಿಮೆಯಾಗಿ ಪಂಡುರೋಗವಾಗುತ್ತದೆ. ಅಸ್ಥಿಗಳ ಗರ್ಭದಲ್ಲಿಯೇ ರಕ್ತದಲ್ಲಿಯ ರಕ್ತಕಣಗಳು (ಕೆಂಪು ಕಣಗಳು) ಸಿದ್ಧವಾಗುತ್ತವೆ. ಈ ಅಸ್ಥಿಗಳಲ್ಲಿಯೇ ವ್ಯತ್ಯಾಸ ಉಂಟಾದರೆ ರಕ್ತದಲ್ಲಿ ಸಾಕಷ್ಟು ರಕ್ತ (ಕೆಂಪು) ಕಣಗಳು ಸಿದ್ಧವಾಗಲಿಕ್ಕಿಲ್ಲ ಮತ್ತು ಅದರ ಸ್ವಾಭಾವಿಕ ಪರ್ಯವಸಾನವು ರಕ್ತಕ್ಷೀಣತೆಯಲ್ಲಿ ಆಗಿ ಪಂಡುರೋಗವು ಉತ್ಪನ್ನವಾಗುವದು.

ಈ ಕ್ಷಾರವು ಕಡಿಮೆಯಾದಲ್ಲಿ ಶರೀರದಲ್ಲಿ ಅಲ್ಬ್ಯೂಮಿನದ ಉಪಯೋಗವಾಗುವದಿಲ್ಲ. ಅಲ್ಬ್ಯೂಮಿನ ಇದು ಪಿಂಡಗಳಿಗೆ ತ್ರಾಸಕೊಡುವಂಥ ಪದಾರ್ಥವಾಗುತ್ತದೆ. ಸಹಜವಾಗಿ ಅದನ್ನು ಹೊರಗೆ ಹಾಕುವ ಪ್ರವೃತ್ತಿಯು ಉತ್ಪನ್ನವಾಗುತ್ತದೆ. ಮೂತ್ರದ್ವಾರದಿಂದ ಹೊರಗೆ ಹೋಗಹತ್ತಿದರೆ ಅದಕ್ಕೆ "ಬ್ರಾಯಿಟ್ಸ ಡಿಸೀಜ" ಎಂಬ ಬೇನೆಯು ಅನ್ನುತ್ತಾರೆ. ಮೂಗಿನಿಂದ ಕೀವು ಬೀಳಲಿಕ್ಕೆಹತ್ತಿದರೆ ನೆಗಡಿ ಆಗಿದೆ ಎಂದು ಅನ್ನುವರು. ಅದೇ ಪ್ರಕಾರ ಎದೆಯೊಳಗಿಂದ (ಫುಪ್ಫುಸದೊಳಗಿಂದ) ಕೀವು ಹೋಗಲಿಕ್ಕೆಹತ್ತಿದರೆ ದೀರ್ಘಕಾಲದ ಕೆಮ್ಮು ಮುಂತಾದ ವಿಕೃತಿಗೆ ಆರಂಭವಾಗುತ್ತದೆ. ತ್ವಚೆಯೊಳಗಿಂದ ಅಲ್ಬ್ಯೂಮಿನ ಹೊರಬೀಳದಿದ್ದರೆ ಮಡಿಬೊಕ್ಕೆ, ಸಣ್ಣಬೊಕ್ಕೆ ಕೆರಕಲಗಳು, ಇಸಬು ಮುಂತಾದ ತ್ವಗ್ರೋಗ

ಗಳು ಉದ್ಭವಿಸುತ್ತವೆ. ಪಾಚಕರಸ (Gastric Juice) ದಲ್ಲಿಯೂ ಈ ಕ್ಷಾರವುಂಟು. ಮತ್ತು ಇದು ಯೋಗ್ಯ ಪ್ರಮಾಣದಲ್ಲಿ ಇಲ್ಲದಿರುವದೇ ಅಪಚನಕ್ಕೆ ಮುಖ್ಯ ಕಾರಣವು. ಗಂಡಮಾಲೆಯ ಪ್ರಕೃತಿಯಾದರೂ ಈ ಕ್ಷಾರದ ಕೊರತೆಯ ಲಕ್ಷಣವು.

ಸಣ್ಣಮಕ್ಕಳಿಗೆ ಹಲ್ಲುಒಡೆಯಲು ಸಹಾಯವಾಗಬೇಕಾದರೆ ಇದು ಒಂದು ರಾಮಬಾಣ ಔಷಧವು. ಹಲ್ಲಿನ ರಚನೆಯಲ್ಲಿ ಈ ಕ್ಷಾರವು ಬಹು ದೊಡ್ಡ ಪ್ರಮಾಣದಲ್ಲಿ ಉಪಯೋಗಿಸಲ್ಪಡುತ್ತದೆ. ಹಲ್ಲಿನ ಹೊರಭಾಗದ ರಚನೆಗೆ ಕಲ್ಕೆ. ಫ್ಲೂದ ಅವಶ್ಯಕತೆ ಇದೆ. ಹಲ್ಲಿನ ರಚನೆಗೆ ಈ ಕ್ಷಾರವು ಅವಶ್ಯವಿದೆ. ಪೌಷ್ಟಿಕ ಅನ್ನವು ಸಾಕಷ್ಟು ತಿನ್ನಲಿಕ್ಕೆ ಸಿಗದೇ ಇದ್ದದರಿಂದ ನಿಸ್ತೇಜ, ಕ್ಷೀಣ, ಬಡಕಾದ, ಸವೆದ ರೋಗಿಗಳಿಗೆ ಈ ಕ್ಷಾರವನ್ನು ಕೊಟ್ಟರೆ ಅವಶ್ಯಮೇವ ಗುಣಬರುತ್ತದೆ. ಆರೋಗ್ಯ ಸ್ಥಾಪನಾವಸ್ಥೆಯಲ್ಲಿ (ಕ್ಷೇಮವಾಗುವ ಕಾಲದಲ್ಲಿ = Convalescence) ಇದು ಬಹಳೇ ಪೌಷ್ಟಿಕ ಔಷಧವೆಂದು ಹೇಳಿಯೇ ಅದೆ. ಮುಡದೋಷ, ಅಸ್ಥಿಗಳ ಮಾರ್ದವ (Ricketts), ಮಸ್ತಿಷ್ಕಾಸ್ಥಿರೋಗ, ಅಸ್ಥಿಭಂಗ, ಅಸ್ಥಿವಕ್ರತೆ, (ಬಂಗಡ ಗಾಲು, ಡೂಗಹಾಯೋಣ), ಅಸ್ಥಿವ್ರಣ, ಅಸ್ಥಿವಿದ್ರಧಿ ಮುಂತಾದ ಅಸ್ಥಿ ರೋಗಗಳ ಮೇಲೆ ಇದರ ಉಪಯೋಗವು ಬಹಳೇ ಆಗುವದು.

ಈ ಕ್ಷಾರದ ಕೊರತೆಯಿಂದ ಸಂಧಿವಾತದ ಉಪದ್ರವ ಸಹ ಆಗುತ್ತದೆ. ಶರೀರದಲ್ಲಿ ಆಮ್ಲತೆಯು ಹೆಚ್ಚಾಗಿದ್ದು ಕಡಿಮೆಮಾಡಬೇಕಾದರೆ ನೇಟ್ರಂ ಫಾ. ದ ಉಪಯೋಗ ಮಾಡಬೇಕು. ಕಲ್ಕೆರಿಯಾ ಫಾ. ಶರೀರದಲ್ಲಿ ಯೋಗ್ಯ ಪ್ರಮಾಣದಲ್ಲಿ ಇಲ್ಲದಿದ್ದರೆ ಪಿಂಡಗಳಲ್ಲಿಯು ನೇಟ್ರಂ ಫಾಸ. ಕ್ಷಾರವು ಹೆಚ್ಚು ಪ್ರಮಾಣದಲ್ಲಿ ಎಳೆಯಲ್ಪಡುತ್ತದೆ. ಆದರಿಂದ ಅಲ್ಕಲಾಯಿನ ಕ್ಷಾರವು ಕಡಿಮೆಯಾಗಿ ಆಮ್ಲತೆಯು ಬೆಳೆಯುತ್ತದೆ. ಅದರಿಂದ ಸಂಧಿವಾತವಾಗುತ್ತದೆ. ಆಗ್ಗೆ ಈ ಕ್ಷಾರವನ್ನು ಉಪಯೋಗಿಸಬೇಕು.

ಈ ಇತರ ಕ್ಷಾರಗಳಿಗಿಂತಲೂ ಕಲ್ಕೆ. ಫಾ. ಮತ್ತು ಮ್ಯಾಗ್ನೆ. ಫಾಸ ಇವುಗಳಿಗೆ ಬಂಧುತ್ವವುಂಟು. ಆದಕಾರಣ ಮ್ಯಾಗ್ನೆ. ಫಾ. ಕ್ಕೆ ಕಲ್ಕೆ. ಫಾ. ಇದು ಸಹಾಯಕರವೆಂದು ಉಪಯೋಗಿಸಬಹುದು. ಎಲ್ಲಿ

ಲಕ್ಷಣಗಳು ಮ್ಯಾಗ್ನೆ. ಫಾ. ಇದರಂತೆಯೇ ಇದ್ದು ಅದರಿಂದ ಗುಣವು ಬರದೇ ಇದ್ದರೆ ಕಲ್ಕೆ. ಫಾ. ಇದನ್ನು ಕೊಡಬೇಕು. ಮೇಲಿಂದ ಮೇಲೆ ಪ್ರಸೂತಿಗಳಾದ್ದರಿಂದ ಬರುವ ಅಶಕ್ತತನ, ಮುಟ್ಟು ಮತ್ತು ರಕ್ತೋ‍್ರೇದ್ರೇಕ (ಧುಪಣಿ) ಹೆಚ್ಚಾಗೋಣ, ಬಹಳ ದಿವಸದ ಕೆಮ್ಮು, ಅತಿಸಾರ (ಕ್ಷಯ ಮುಂತಾದ ರೋಗಗಳಲ್ಲಿ ಆಗುವಂಥಾದ್ದು) ರಾತ್ರಿ ಕಾಲಕ್ಕೆ ಬಹಳ ಬೆವರು ಬರೋಣ, ಸ್ವಪ್ನಾವಸ್ಥೆ, ಮುಪ್ಪಿನಲ್ಲಿ ಮೈಯೆಲ್ಲ ತುರಿಸುವದು, ಕಫಕ್ಷಯದಲ್ಲಿಯ ಕ್ಷೀಣತೆ ( ಸೊರಗೋಣ ) ದಿನದಿನಕ್ಕೆ ಬೆಳೆಯುವ ಅಶಕ್ತತೆ, ರಕ್ತಸ್ರಾವ ಮುಂತಾದ ರೋಗಗಳಲ್ಲಿ ಈ ಔಷಧ ವನ್ನು ಕಡಿಮೆ ಶಕ್ತಿಯುಳ್ಳದ್ದನ್ನು ಕೊಟ್ಟರೆ ಬಹಳೇ ಉಪಯೋಗವಾಗುವದು.

---

## ಪ್ರಮುಖ ಲಕ್ಷಣಗಳು

**ಮೆದುಳು:—** ಸಿಡುಕ, ದುರ್ಬಲ ಮನಸ್ಸಿನ, ಅಳುಬುರುಕ ಹುಡುಗರು, ದುರ್ಬಲ ಸ್ಮರಣಶಕ್ತಿ; ಏಕಾಗ್ರಚಿತ್ತವಾಗದೇ ಇರೋಣ, ಬಹಳ ವೇಳೆ ಮಾನಸಿಕ ಶ್ರಮಕ್ಕೆ ಅಪಾತ್ರತೆ; ತಲೆಯಲ್ಲಿ ಒಂದೇಸವನೆ ಬೇರೆ ಬೇರೆ ವಿಚಾರ ಬರೋಣ, ಮುಷ್ಟಿಮೈಥುನದಿಂದಾಗಲಿ, ಅತಿಶಯ ಸ್ತ್ರೀಸಂಭೋಗದ ಚಟವಿದ್ದದರಿಂದಾಗಲಿ ರೋಗಿಗಳಲ್ಲಿ ಬರತಕ್ಕ ಮನೋದುರ್ಬಲತೆ (ಕಾ. ಫಾ.) ಮನಸ್ಸಿನಂತೆ ಆಗದೆ ಇದ್ದದರಿಂದಾಗಲಿ ಇತರ ದುಃಖದಿಂದಾಗಲಿ ತ್ರಾಸಿನಿಂದಾಗಲಿ ಉತ್ಪನ್ನವಾಗುವ ರೋಗಗಳು, ಏಕಾಂತಪ್ರಿಯತೆ, ನಿರುತ್ಸಾಹ.

**ಮಸ್ತಕ:—** ತಲೆಯಲ್ಲಿ ಸೀತವು ಬೆಳದು ತಲೆ ನೋಯೋಣ; ವಯಸ್ಸಿನಲ್ಲಿ ಬಂದಂಥ ಹುಡಿಗೆಯರ ತಲೆನೋವು; ಮತ್ತು ಅದು ಮಾನಸಿಕ ಶ್ರಮದಿಂದಲೂ, ತಂಪು ಹವೆಯಿಂದಲೂ, ಹವೆ ಬದಲಾದ್ದರಿಂದಲೂ ಹೆಚ್ಚಾಗೋಣ; ಮೈ ಗಟ್ಟಿಯಾಗಿ ಬಿಗಿದಂತೆ ಅನಿಸೋಣ; ತಲೆಯ ಪೃಷ್ಠಭಾಗದ ಮೇಲೆ ಇರುವು ನಡೆದಂತೆ ಮತ್ತು ತಣ್ಣಗೆ ಅನಿಸೋಣ; ಜಲಯುಕ್ತ

ಮಸ್ತಿಷ್ಕ, ನೆತ್ತಿಯು ತುಂಬದಿರೋಣ, ಹುಡುಗರಿಗೆ ಅಶಕ್ತತೆಯ ಮೂಲಕ ಕುತ್ತಿಗೆ ಅಲ್ಲಾಡಿಸಲಿಕ್ಕೆ ಬರದೇ ಇರೋಣ; ತಲೆಯಮೇಲೆ ಅಲ್ಲಲ್ಲಿ ಕೂದಲುಗಳು ಹಾರಿಹೋಗೋಣ; ಕೂದಲುಗಳು ಉದುರಿಬೀಳೋಣ.

**ನೇತ್ರ:—** ಕಣ್ಣುಗುಡ್ಡಿಗಳು ಸೋಯುತ್ತವೆ. ಗುಡ್ಡಿಯಮೇಲಿನ ವ್ರಣ; ಬೆಳಕಿನಕಡೆಗೆ ನೋಡಲಿಕ್ಕಾಗುವದಿಲ್ಲ. ಫೆರಂ. ಫಾ. ಕಣ್ಣೊಳಗಿಂದ ನೀರು ಸುರಿಯುತ್ತದೆ. ಕಂಣೊಳಗಿಂದ ಸ್ವಚ್ಛ ತತ್ತಿಯೊಳಗಿನಂಥ ಬಿಳೇ ಸ್ರಾವವು ಹೋಗುತ್ತದೆ. ದೃಷ್ಟಿಯು ಡೊಂಕ; ( ಮ್ಯಾ. ಫಾ. ); ಕಣ್ಣಿಗೆ ಮಸಮುಸಕು ಕಾಣಿಸುತ್ತದೆ; ಇಲ್ಲವೆ ಕಾಣುವದೇ ಇಲ್ಲ. ಗಂಡಮಾಲೆ ಯಾಗುವಂಥ ಅಶಕ್ತ ಪ್ರಕೃತಿಯ ಹುಡುಗರ ಕಣ್ಣುಬೇನೆ. ನೇತ್ರ ಸೋವಿ ನಲ್ಲಿ ಮ್ಯಾ. ಫಾ. ದಿಂದ ಗುಣ ಬರದೇ ಇದ್ದರೆ ಕ. ಫಾ. ಕೊಡಬೇಕು.

**ಕಿವಿ:—** ಕುತ್ತಿಗೆಯೊಳಗಿನ ಗಂಟುಗಳು ಬಾಯುವದು ಅದರಿಂದ ಕಿವಿಯಲ್ಲಾಗುವ ವೇದನೆ. ಕಿವಿಯ ಸುತ್ತಮುತ್ತಲಿನ ಎಲುಬಿನಲ್ಲಿ (ಅಸ್ಥಿಗಳಲ್ಲಿಯು) ವೇದನೆ. ಕಿವಿಯಲ್ಲಿ ತಿಂಡೆ ಮತ್ತು ಉರಿಯೋಣ, ಕಿವಿಯಲ್ಲಿ ಸಪ್ಪಳಾಗೋಣ, ಕಿವಿಯಿಂದ ಬಿಳೇ ಕೀವಿನಂಥ ಮತ್ತು ಉರಿಯುವಂಥ ಸ್ರಾವವು ಬರುವದು. ಬಹು ದಿವಸದಿಂದ ಕಿವಿ ಒಡೆಯೋಣ, ದಿನದಿನಕ್ಕೆ ಅಶಕ್ತನಾಗುತ್ತಿರುವ ರೋಗಿಯ ಕಿವಿಯೊಳಗಿಂದ ತೆಳ್ಳನ್ನ ಮತ್ತು ದುರ್ಗಂಧ ಯುಕ್ತ ಸ್ರಾವವು ಹರಿಯುತ್ತಿದ್ದಲ್ಲಿ ಕಲ್ಕೆ ಫಾ. ದ ಉಪಯೋಗವು ಅವಶ್ಯವಾಗಿ ಆಗುತ್ತದೆ. ಕಿವಿಯಲ್ಲಿಯ ವ್ರಣ ಮತ್ತು ಅದರಿಂದ ಬಂದ ಬಧಿರತೆ, ಗಂಡಮಾಲೆಯ ಪ್ರಕೃತಿಯುಳ್ಳ ರೋಗಿಗಳಿಗೆ ಆಗುವ ಕಿವಿಯ ಸಂಬಂಧದ ರೋಗಗಳು, ಇವುಗಳ ಮೇಲೆ ಇದನ್ನು ಉಪಯೋಗಿಸಬಹುದು.

**ಮೂಗು:—**ಮೂಗು ಬಾತದ್ದು ಮತ್ತು ಮೂಗಿನ ತುದಿಯು ಕೆಂಪು ಆಗೋಣ, ತೊಗಲು ಸುಲಿಯೋಣ ( ಸಿಲಿಕಾ ) ಮೂಗಿನ ತುದಿಯು ಬರ್ಫಿನಂತೆ ತಣ್ಣಗಿರೋಣ, ನೆಗಡಿ ಆದಾಗ ಮೂಗಿನಿಂದ ತತ್ತಿಯಲ್ಲಿಯ ಹಳದಿ, ಜಿಗಟು ಸ್ರಾವಿನಂತೆ ಸ್ರಾವಹೋಗುತ್ತದೆ. ಗಟ್ಟಿ, ಜಿಗಟು, ಸ್ರಾವವು ಮೂಗಿನ ಹಿಂದಿನ ದ್ವಾರದಿಂದ ಗಂಟಲದಲ್ಲಿ ಇಳಿಯುತ್ತದೆ. ಅದರಿಂದ ಮೇಲಿಂದಮೇಲೆ ಖೇಕರಿಸಬೇಕಾಗುತ್ತದೆ ಹಾಗೂ ಉಗುಳಬೇಕಾಗುತ್ತದೆ.

ಮೂಗಿನಲ್ಲಿಯ ಸ್ರಾವವು ತಣ್ಣನ್ನ ಸ್ಥಳದಲ್ಲಿ ಹೆಚ್ಚಾಗುತ್ತದೆ. ಊಷ್ಣ ಸ್ಥಳದಲ್ಲಿ ಹಾಗೂ ಬೈಲಹವೆಯಲ್ಲಿ ಕಡಿಮೆಯಾಗುತ್ತದೆ. ಸೀನುಗಳು (ಫೆ. ಫಾ.) ಪಂಡುರೋಗಿಗಳಿಗೂ ಗಂಡಮಾಲೆಯ ಪ್ರಕೃತಿಯ ರೋಗಿಗಳಿಗೂ ಮೇಲಿಂದಮೇಲೆ ಚಳಿಯಾಗುವ ಪ್ರವೃತ್ತಿ. ಮೂಗಿನಲ್ಲಿ ದೇಟಿನಾಕಾರದಲ್ಲಿ ಬೆಳೆಯುವ ದೊಡ್ಡ ಗಂಟು (Polypus); ಪಿನಸಿ; (ಕಲ್ಕೆ. ಫ್ಲೂ.) ಮಧ್ಯಾಹ್ನದಲ್ಲಿ ಮೂಗು ಒಡೆಯೋಣ; ಚಳಿಯಾದಾಗ್ಗೆ ಎರಡನೇ ಔಷಧ ಕೊಡುವ ಪೂರ್ವದಲ್ಲಿ ಈ ಔಷಧ ಕೊಟ್ಟರೆ ಇತರ ಔಷಧ ಕೊಡಲು ಬಹಳೇ ಸಹಾಯವಾಗುತ್ತದೆ.

**ಮುಖಚರ್ಯೆ:**— ನಿಸ್ತೇಜ, ಸಪ್ಪಗೆ, ಹಳದಿ, ಪಂಡುರೋಗಿಯಂತೆ ಮೋರೆಯಮೇಲಿಂದ ಕಾಣುವದು. ಅಸ್ವಚ್ಛ, ಹೊಲಸು ಕಾಣಿಸುವ ಮುಖಚರ್ಯೆ; ತರುಣ ಸ್ತ್ರೀಯರ ಮೋರೆಮೇಲಿನ ಮೊಡೆಬೊಕ್ಕೆಗಳು, ಮುಖಚರ್ಯೆಯ ಮೇಲಿನ ಅಸ್ಥಿಯಲ್ಲಿಯ ವೇದನೆ ರಾತ್ರಿಕಾಲದಲ್ಲಿ ಹೆಚ್ಚಾಗೋಣ; ತಣ್ಣನ್ನ ಬೆವರು ಬರೋಣ. ಕಿವಿಯ ಹತ್ತರದ ಮತ್ತು ಗದ್ದದ ಹತ್ತರದ ಗ್ರಂಥಿಯ ಬಾವು, ಕಿವಿಸೂಲಿ, ಮೋರೆಮೇಲಿನ ವ್ರಣ, ಕಲೆ, ಹಲ್ಲುಬರುವ ಕಾಲಕ್ಕೆ ಆಗುವ ವೇದನೆಯ ಮೂಲಕ ಬಾಡಿದ ಮುಖಚರ್ಯೆ.

**ಮೋರೆ:**— ಮುಂಜಾನೆ ಬಾಯಿಗೆ ರುಚಿಹತ್ತದೆ ಇರೋಣ (ನೇಟ್ರಂ. ಫಾ.) ಬಾಯಿ ಕಹಿಯಾಗೋಣ, ಕಿರನಾಲಗೆಯು ಬಾತಿದ್ದರಿಂದ ಬಾಯಿ ತೆರೆಯಲಿಕ್ಕೆ ಕಷ್ಟವೆನಿಸೋಣ; ಮೇಲಿನ ತುಟಿಯು ಬಾತಿದ್ದು ನೋಯುತ್ತಿರುವದು.

**ಹಲ್ಲುಗಳು:**— ಹಲ್ಲುಗಳು ತಡಮಾಡಿ ಹಾಗೂ ಸಾವಕಾಶ ಬರಹತ್ತಿದರೆ (ಕಲ್ಕೆ. ಫ್ಲೂ.) ಹಲ್ಲುಬರುವ ಕಾಲದ ಎಲ್ಲ ರೋಗಗಳ ಮೇಲೆ. ಹಲ್ಲುಬರುವ ಸಮಯದ ಪಟ್ಟಿಗಳು. (ಮ್ಯಾ. ಫಾ.) ಹಲ್ಲುಗಳು ತೀವ್ರ ಹುಳಿಯುತ್ತವಾದರೆ ಒಸಡಿಯು ಬಾಯುತ್ತದೆ ಮತ್ತು ಒಸಡೆಯಲ್ಲಿ ನೋವು ಆಗುತ್ತದೆ (ಫೆರಮ್. ಫಾ.). ದಾತಶೂಲಿ ವಿಶೇಷತಃ ರಾತ್ರಿಯಲ್ಲಿ

ಹೆಚ್ಚಾಗೋಣ (ಸಿಲಿಕಾ), ಹಲ್ಲುಬೇನೆ ಇದ್ದಾಗ್ಗೆ ಒಸಡೆ ಬೆಳ್ಳಗಾಗಿದ್ದರೆ ಈ ಔಷಧದ ಉಪಯೋಗವು ಬಹಳಾಗುತ್ತದೆ.

**ನಾಲಗೆ:**— ನಾಲಗೆ ಬಾತಿದ್ದು. ( ಕಾಲಿ. ಮೂ. ) ನಾಲಗೆಯು ಬಧಿರವಾಗಿದ್ದರೆ ಮತ್ತು ಬಿರುಸಾಗಿದ್ದರೆ, ನಾಲಗೆಯ ತುದಿಯಲ್ಲಿ ಬೊಕ್ಕೆ ಮತ್ತು ನಾಲಗೆಯ ಮೇಲೆ ಬಿಳೀ ಬೂರಸು ಬರುವದಾದರೆ ಮುಂಜಾನೆ ಬಾಯಿ ಕಹಿಯಾಗುವದು ಮತ್ತು ತಲೆ ಸೋಯುವದು.

**ಗಂಟಲು:**— ಗಂಟಲ ಬೇನೆಯ ಮೇಲೆ ಮುಖ್ಯ ಔಷಧ (ನೇಟ್ರಂ. ಮೂರ.) ಕಿರನಾಲಗೆ ಬಹಳ ದಿವಸ ಉದ್ದಾಗಿರುವದು. ಗಂಟಲದಲ್ಲಿಯ ಗಂಟುಗಳು ನೋಯುತ್ತವೆ. ನುಂಗುವ ಕಾಲಕ್ಕೆ ನೋವು, ಮಾತಾಡುವ ಕಾಲಕ್ಕೆ ಯಾವಾಗಲೂ ಖೇಕರಿಸುವ ಪ್ರವೃತ್ತಿ. ಪುರಾಣಿಕರೂ ವ್ಯಾಖ್ಯಾತರೂ ಮುಂತಾದವರ ಗಂಟಲಬೇನೆ ( ಫೆರಮ್‌ಫಾಸ ) ಜತೆಗೆ ಕೊಡಬೇಕು. ದನಿಯು ಯಾವಾಗಲೂ ಕೂತಂತೆಯೇ ಇರುವದು. ಗಂಟಲದಲ್ಲಿ ಉರುಪು, ಹಳೆಯ ನೆಗಡಿಯಲ್ಲಿ ಒಳಗಿನ ನಾಸಿಕಾದ್ವಾರದಿಂದ ಗಂಟಲದಲ್ಲಿ ಒಂದೇಸವನೆ ಸ್ರಾವವು ಹೋಗುತ್ತಿದ್ದು ಅದರಿಂದ ಖೇಕರಿಸ ಬೇಕಾಗುವದು.

**ಜಠರ:**—ಗಂಟಲದಲ್ಲಿ ಉರಿಯೋಣ ಮತ್ತು ತೇಗು. ಹಸಿವೆ ಬಹಳ. ಉಂಡಕೂಡಲೆ ಹೊಟ್ಟೆ ಕಡಿಯೋಣ; ಮತ್ತು ಒತ್ತಿದರೆ ಹೆಚ್ಚಾಗೋಣ. ಸ್ವಲ್ಪ ಅನ್ನತಿಂದಾಗ್ಯೂ ವೇದನೆಯಾಗುವದು. (ಫೆರಂ. ಫಾ.) ತಣ್ಣನ್ನ ಪೇಯ ಮತ್ತು ಅನ್ನದಿಂದ ವೇದನೆ ಹೆಚ್ಚಾಗೋಣ. ಊಷ್ಣಪೇಯದಿಂದ ನೆಟ್ಟಗೆ ಅನಿಸೋಣ (ಮ್ಯಾ. ಫಾ.) ತೇಗುಬಂದರೆ ಸ್ವಲ್ಪ ಹಗುರ ಅನಿಸುತ್ತದೆ. ಉಪವಾಸ ಮಾಡಿದರೆ ಬೆನ್ನಿನಕಡೆಗೆ ಬಲು ಒಳಗಿನ ವೇದನೆಗಳು ಆದಂತೆ ಭಾಸವಾಗುತ್ತಿರೋಣ. ಸಣ್ಣ ಮಕ್ಕಳಿಗೆ ಒಂದೇಸಮನೆ ಮೊಲೆ ಕುಡಿಯುತ್ತಿರಬೇಕೆಂದು ಅನಿಸೋಣ. ಕುಡಿದನಂತರ ಕಾರೋಣ, ಹುಳಿ ಗಟ್ಟಿ ಮೊಸರಿನಂತೆ ಕಾರಿಕೆ (ನೇಟ್ರಂಫಾಸ.) ಬರ್ಫತಿಂದರಾಗಲಿ ಅತಿಶಯ ತಣ್ಣೀರು ಕುಡಿದರೆ ಆಗಲಿ ಕಾರಿಕೆ, ಅಪಚನದಿಂದ ತಲೆನೋವು, ಹೊಟ್ಟೆಯು ತೀರ ತೆಳ್ಳಗಾಗೋಣ ಮೆತ್ತಗೆ ಮತ್ತು ಉಬ್ಬಿದಂತೆ ಕಾಣುತ್ತದೆ. ಹೊಟ್ಟೆ

ಯಲ್ಲಿ ಗಂಟು ಹತ್ತುತ್ತವೆ. ತಿಂದ ಅನ್ನ ಹೊಟ್ಟೆಗೆ ಹತ್ತದೇ ಇದ್ದುದರಿಂದ ಉದ್ಭವಿಸುವ ಎಲ್ಲ ಬೇನೆಗಳ ಮೇಲೆ.

**ಉದರವೂ ಮಲವೂ:—** ಹಲ್ಲು ಬರುವಾಗ ಹೊಟ್ಟೆ ಜಾಡಿಸೋಣ, ಜಿಗಟು, ಹಸರು, ಪಚನವಾಗದೇ ಹೊಟ್ಟೆಜಾಡಿಸೋಣ ಶೌಚದ ಕಾಲಕ್ಕೆ ಹೊಟ್ಟೆಯಲ್ಲಿ ನೋಯುತ್ತದೆ ಮತ್ತು ವಾಯುವೂ ಹಿಡಿಯುತ್ತದೆ. ಔಷಧ ಬಿಸಿನೀರಿನಲ್ಲಿಹಾಕಿ *ಬಸ್ತಿ (Enema) ಕೊಟ್ಟರೆ ಉಪಯೋಗವಾಗುತ್ತದೆ. ಸಣ್ಣಮಕ್ಕಳ ದುರ್ಗಂಬೇನೆ; ಪಚನವಾಗದಂಥ ಪದಾರ್ಥ ತಿನ್ನುವ ಅಪೇಕ್ಷೆ ಬಹಳ. ರೇಚ, ಸಶಬ್ದ, ಬಿಸಿ, ಮತ್ತು ದುರ್ಗಂಧಯುಕ್ತ. (ಕಾ. ಫಾ.) ಕ್ಷಯರೋಗಿಗಳಿಗೆ ಆಗುವ ಅತಿಸಾರ. ಬೇಸಿಗೆಯಲ್ಲಿ ಹೊಟ್ಟೆಜಾಡಿಸೋಣ, ಹಣ್ಣುಹಂಪಲ ತಿಂದಲ್ಲಿ ಜುಲಾಬು ಆಗುತ್ತಿದ್ದರೆ; ಹೊಕ್ಕಳ ಹತ್ತರ ವೇದನೆ. ಮೈಮೇಲೆ ಕುಡಿಯುವ ಕಾಲಕ್ಕೆ ಕೂಸು ಒದರುತ್ತದೆ. ಮುಖಚರ್ಯೆ ಸಪ್ಪಗೆ ಮತ್ತು ಸಿಡುಕತನ ಇದ್ದರೆ, ಮಂದದೋಷ, ಹುಡುಗರು ಅನ್ನವನ್ನು ಆನಂದದಿಂದ ತಿನ್ನುತ್ತಿದ್ದರೂ ದಿನದಿನಕ್ಕೆ ಸೊರಗುತ್ತವೆ. ಅಶಕ್ತ ಹುಡುಗರಲ್ಲಿ ಜಂತು ಆಗುವ ಪ್ರವೃತ್ತಿ ಇಲ್ಲದಂತೆ ಮಾಡುವಶಕ್ತಿ ಈ ಔಷಧದಲ್ಲಿದೆ. (ನೇಟ್ರಂ. ಫಾ.) ಮೇಲಿಂದ ಮೇಲೆ ಶೌಚಕ್ಕೆ ಹೋಗಬೇಕೆಂದನಿಸುತ್ತದೆ. ಹೋದರೆ ಆಗುವದಿಲ್ಲ. (ಕಾ. ಫಾ. ಮತ್ತು ಪ್ಯಾ. ಫಾ.) ಸಾಲೆಗೆ ಹೋಗುವ ಹುಡಿಗೆಯರಿಗೆ ಆಗುವ ಅತಿಸಾರ, ತಲೆಸೂಲಿ. ಮುದಕರ ಹಾಗೂ ಹುಡುಗರ ಬದ್ಧಕೋಷ್ಠತೆ. ಶೌಚಕ್ಕೆ ಗಟ್ಟಿಯಾಗುವದು. ಮೂಲವ್ಯಾಧಿ (ಕಲ್ಕೆ. ಫ್ಲೋ. ಮತ್ತು ಫೆ. ಫಾ.) ಗುದದ್ವಾರದಲ್ಲಿ ತುರಿಸುತ್ತದೆ. ರೋಗಿಗಳಿಗೆ ಗುದದ್ವಾರದಿಂದ ತತ್ತಿಯಲ್ಲಿಯ ಜಿಗಟಿನಂತೆ ಸ್ರಾವವು ಸೋರುತ್ತದೆ. ಗುದದ್ವಾರದಲ್ಲಿ ತೊಗಲಿನಲ್ಲಿ ಬಿರುಕು (ಕಲ್ಕೆ. ಫ್ಲೋ.) ಭಗಂದರ. ಮಲದ ಸಂಗಡ ದುರ್ಗಂಧಯುಕ್ತ ಕೀವು ಹೋಗುವದು. ಶೌಚದನಂತರ ಗುದದ್ವಾರದಲ್ಲಿ ವೇದನೆಯಾಗಿ ಇಡೀ ದಿವಸ ವೇದನೆ ಇರುವದು. ರಾತ್ರಿ

---

* ಬಸ್ತಿ ಎಂದರೆ ಗುದದ್ವಾರದಿಂದ ನೀರು ಸೇರಿಸುವದು. ಅದರಿಂದ ಹೊಟ್ಟೆ ಜಾಡಿಸುತ್ತದೆ. ಇದಕ್ಕೆ ಇಂಗ್ಲೀಷ ಭಾಷೆಯಲ್ಲಿ ಎನಿಮಾ (Enema) ಅನ್ನುವರು.

ಯಲ್ಲಿ ಹವೆಯಲ್ಲಿ ಬದಲು ಆದರೆ, ಎಲ್ಲ ಭಾವನೆಗಳು ಹೆಚ್ಚಾಗುವವು. ಪಿತ್ತಾಶ್ಮರಿ ಆಗಗೊಡದಿರುವ ಶಕ್ತಿ ಈ ಔಷಧದಲ್ಲಿದೆ. ಕ್ಷೀಣರಕ್ತರಾದ ರೋಗಿಗಳ ಅಂತರ್ಗಳ.

**ಮೂತ್ರೇಂದ್ರಿಯಗಳು:—** ಮೇಲಿಂದಮೇಲೆ ಕಾಲುಮಡಿಯಲಿಕ್ಕೆ ಹೋಗಬೇಕೆಂದು ಅನಿಸುವದು ಮತ್ತು ಆಗ್ಗೆ ಮೂತ್ರಾಶಯ ದ್ವಾರ ದಲ್ಲಿಯೂ ಮೂತ್ರಮಾರ್ಗದಲ್ಲಿಯೂ ಕಡಿದಂತೆ ತೀವ್ರ ವೇದನೆಯಾಗು ವದು. ಹುಡುಗರಿಗೂ ವೃದ್ಧರಿಗೂ ತಿಳಿಯದೆ ಮೂತ್ರವಾಗುವದು. ಫುಪ್ಫುಸ (ಶ್ವಾಸಕೋಶ) ವಿಕಾರವಿದ್ದು ಮಧುಮೇಹವಿದ್ದರೆ ಮೂತ್ರವು ಬಹಳಾಗುತ್ತದೆ. ಆದರಿಂದ ಅಶಕ್ತತೆ ಅನಿಸುತ್ತದೆ. ಮೂತ್ರದೊಳಗಿಂದ ಅಲ್ಬ್ಯುಮೆನ ಎಂಬ ಪದಾರ್ಥವು ಹೋಗುತ್ತಿದ್ದರೆ ಅವಶ್ಯ ಕೊಡತಕ್ಕದ್ದು. (ಮೂತ್ರಪಿಂಡದಾಹ ಮುಂತಾದ ರೋಗಗಳಲ್ಲಿ) ಕಾಲೀಫಾ. ಸಂಗಡ ಕೊಡಬೇಕು. * ಅಶ್ಮರೀ ಆಗೋಣ, ಫಾಸ್ಫೇಟದ ತರಗಳು ಕೂಡಿ ಇರೋಣ, ಮೂತ್ರದೊಳಗಿಂದ ಫಾಸ್ಫೇಟಗಳು ಹೋಗುತ್ತಿದ್ದರೆ ಈ ಔಷಧದ ಉಪಯೋಗವಾಗುತ್ತದೆ.

ವೃಷಣಜಲಶೋಥ, ಮಧುಮೇಹ, ಫಾಸ್ಫೇಟ ಹೋಗೋಣ ಮುಂತಾದ ರೋಗಗಳಲ್ಲಿ ಇತರ ಔಷಧಗಳ ಜತೆಗೆ ಇದನ್ನು ಕೊಡಬೇಕು.

**ಪುರುಷರ ಜನನೇಂದ್ರಿಯ:—** ವೃಷಣಕಾವು (ವೃಷಣದಾಹ) ಮುಷ್ಟಿಮೈಥುನದ ಚಟ. ಸಂಭೋಗೇಚ್ಛೆ ಬಹಳ. ಇಂದ್ರಿಯವು ಬಿರುಸು ಆಗುವದು ಆದರೆ ವೇದನೆಯುಕ್ತ, ಹಳೇ ಮೇಹವಿದ್ದದರಿಂದ ಮೂತ್ರ ಮಾರ್ಗದಲ್ಲಿ ವೇದನೆ ಮತ್ತು ತಿಂಡಿ.

**ಸ್ತ್ರಿಯರ ಜನನೇಂದ್ರಿಯ—** ಗರ್ಭಾಶಯ ಭ್ರಂಶದಿಂದಾಗಲಿ, ಗರ್ಭಾಶಯವು ವಕ್ರವಾದ್ದರಿಂದಾಗಲಿ, ಅಶಕ್ತತೆ ಅನಿಸೋಣ. ಕಲ್ಕೆ. ಫ್ಲೊ. ದಂತೆ ಆಕುಂಚನಶಕ್ತಿಯು ಇದರಲ್ಲಿಲ್ಲ. ಆದರೂ ಪಚನಶಕ್ತಿಯನ್ನು ಬೆಳೆಯಿಸಿ ಗರ್ಭಾಶಯದ ಅಶಕ್ತತೆಯನ್ನು ಇಲ್ಲದಂತೆ ಮಾಡುತ್ತದೆ. ಮುಟ್ಟಾಗುವ ಪೂರ್ವದಲ್ಲಿ ಸಂಭೋಗೇಚ್ಛೆಯು ಹೆಚ್ಚು. ಎಷ್ಟೋ ಸಾರೆ

---

* ಮೂತಖಡಾ- ಎಂದು ಮಹಾಠಾಷ್ಟ್ರದಲ್ಲಿ ಅನ್ನುತ್ತಾರೆ.

ಭೋಗೇಚ್ಛೆಯು ಅನಾವರವಾಗುತ್ತದೆ. ಪ್ರಬಲ ಕಾಮೇಚ್ಛೆ (ನಿಂಫೋಮ್ಯಾನಿಯಾ) ಮೇಹಸ್ರಾವಕ್ಕೆ ಇತರ ಔಷಧದ ಸಂಗಡ ಕೊಡಬೇಕು. ಪ್ರಕೃತಿಗೆ ಪೌಷ್ಟಿಕವೆಂದು ಇದರ ಉಪಯೋಗವಾಗುತ್ತದೆ. ತತ್ತಿಯಲ್ಲಿಯ ಹಳದಿ ರಸದಂತೆ ಮೇಹಸ್ರಾವವು ಜಿಗಟು ಇರುತ್ತದೆ. ಮುಂಜಾವಿನಲ್ಲಿ ಹೆಚ್ಚು ಇದ್ದು ತಿರುಗಾಡುವ ಇಚ್ಛೆಯಾಗುವದಿಲ್ಲ. ಪ್ರದರದ ಸ್ರಾವವು ಉರಿಯುವಂಥಾದ್ದೂ ತೀವ್ರವೂ ಇರುತ್ತದೆ. ಈ ಸ್ರಾವವು ಮುಟ್ಟಾದ ನಂತರ ಹೆಚ್ಚಾಗುತ್ತದೆ ಹಾಗೂ ಸ್ರಾವವಿರುವಾಗ ಸಂಭೋಗೇಚ್ಛೆಯೂ ಇರುತ್ತದೆ. ನಷ್ಟಾರ್ತವ ಅಥವಾ ನ್ಯೂನಾರ್ತವ. ಪಂಡುರೋಗವುಳ್ಳ ಅಶಕ್ತ ಹುಡುಗೆಯರಿಗೆ ಮುಟ್ಟು ಬೇಗನೆ ಆಗೋಣ. ಮುಟ್ಟು ಕೆಂಪು ಇದ್ದು ಎರಡೆರಡು ವಾರಕ್ಕೊಮ್ಮೆ ಆಗುತ್ತದೆ. ಆಗ್ಗೆ ಬೆನ್ನಿನಲ್ಲಿ ಸಹ ನೋವು ಇರುತ್ತದೆ. ಪ್ರಸೂತಿವೇದನೆಗಳಂತೆ ವೇದನೆಗಳು ಆಗುತ್ತವೆ. (ಮ್ಯಾಗ್ನೆ. ಫಾ.) ಮುಟ್ಟಿನ ಸಮಯಕ್ಕೆ ಮುಖಚರ್ಯೆಯು ಕೆಂಪಾಗುವದು. ಕೈಕಾಲುಗಳು ತಣ್ಣಗಾಗುತ್ತವೆ. (ಫೆರಂ. ಫಾ.) ಗರ್ಭಾವಸ್ಥೆಯ ಕಾಲಕ್ಕೆ ಸರ್ವಾಂಗವು ನೋಯುತ್ತದೆ. ಸ್ತನಗಳು ಗಟ್ಟಿಹತ್ತುತ್ತವೆ. ಹಾಲು ಕೆಡುತ್ತವೆ. ತೆಳ್ಳಗೆ, ನೀಲವರ್ಣದ್ದೂ ಉಪ್ಪಿನಂತೆ ಹತ್ತುವವು (ನೇಟ್ರಂ ಮೂ.) ಕೂಸು ಮೊಲೆ ಕುಡಿಯುವದೇ ಇಲ್ಲ. ಅದು ಹುಳಿಯೂ ಮೊಸರಿನ ಪಡೆಯಂತೆಯೂ ಮೇಲಿಂದಮೇಲೆ ಕಾರುತ್ತದೆ. ಗರ್ಭಾವಸ್ಥೆಯಲ್ಲಿ ಶಕ್ತಿದಾಯಕವೆಂದು ಕೊಡಬೇಕು. ೨ × ಶಕ್ತಿಯುಳ್ಳದ್ದು ಒಂದು ಭಾಗ, ಒಂಭತ್ತು ಭಾಗ ವ್ಯಾಸಲೀನ ಇಷ್ಟು ತೆಗೆದುಕೊಂಡು ಖಲಸಮಾಡಿ ಮಲಾಮು ಸಿದ್ಧಪಡಿಸಿ ಲೇಪನ ಮಾಡಬೇಕು.

**ಶ್ವಸನೇಂದ್ರಿಯ:—** ಧ್ವನಿಯು ಕೂತದ್ದು. ಹಗಲೂ ಇರುಳೂ ಧ್ವನಿಯು ಸಡಿಲಾಗುವದಿಲ್ಲ. ಮೇಲಿಂದಮೇಲೆ ದೀರ್ಘಶ್ವಾಸ ಬಿಡುವ ಪ್ರವೃತ್ತಿ. ಕೆಮ್ಮು. ತತ್ತಿಯಲ್ಲಿಯ ಹಳದಿಯಂತೆ ಗಟ್ಟಿ ಕಫ ಬೀಳುತ್ತದೆ. ಮುಂಜಾವಿನಲ್ಲಿ ಹೆಚ್ಚು ಇದ್ದು ಗಂಟಲು ಒಣಗಿದ್ದು ಇದ್ದು ನೋಯುತ್ತದೆ. ಎದೆಯಲ್ಲಿ, ವಿಶೇಷತಃ ಉರೋಸ್ಥಿತಿಯಲ್ಲಿಯೂ ಹೆಗಲಿನ ಎಲುಬಿನ ಪತ್ತರವೂ ನೋಯುತ್ತದೆ. ಎದೆಯು ಆಕುಂಚಿತವಾದದ್ದೂ ಮುಂದೆ

ಬಂದದ್ದೂ; ಶ್ವಾಸೋಛ್ವಾಸಕ್ಕೆ ತೊಂದರೆಯಾಗೋಣ; ಧ್ವನಿ ನೆಟ್ಟಗೆ ಹೊರಡುವದಕ್ಕೋಸ್ಕರ ಮೇಲಿಂದಮೇಲೆ ಖೇಕರಿಸಬೇಕಾಗುವದು. ಕ್ಷಯರೋಗಿಗಳ ಬಹಳ ದಿವಸದ ಕೆಮ್ಮು. ಕೈಕಾಲು ತಣ್ಣಗಾಗುತ್ತಿದ್ದರೆ ವಿಶೇಷ ಉಪಯೋಗವಾಗುವದು. ಅಶಕ್ತ ರೋಗಿಗಳಲ್ಲಿ ಕ್ಷಯದ ಭಾವನೆ ಕಂಡುಬಂದಲ್ಲಿ ಇದರಿಂದ ಬಹಳ ಉಪಯೋಗವಾಗುವದು. ಬಹಳ ದಿವಸದ ಕೋಡಗಕೆಮ್ಮು ಶ್ವಾಸಕಟ್ಟಿದಂತೆ ಮಾಡಿಬಿಡುವ (ಉಸುರುಗಟ್ಟುವ) ಕೆಮ್ಮು, ಮಲಗಿದಲ್ಲಿ ನೆಟ್ಟಗೆ ಅನಿಸುತ್ತದೆ ಎದ್ದು ಕೂತಲ್ಲಿ ಹೆಚ್ಚಾಗುತ್ತದೆ. ಮುಖಚರ್ಯೆಯು ಕಪ್ಪು ನೀಲವರ್ಣದ್ದು, ಗಂಡಮಾಲೆ ಮತ್ತು ಸಂಧಿವಾತದ ಪ್ರಕೃತಿಯುಳ್ಳವರಿಗೆ ಮೇಲಿಂದಮೇಲೆ ನೆಗಡಿಯಾಗುತ್ತಿದ್ದರೆ ಇದರ ಉಪಯೋಗವು ನೆಟ್ಟಗಾಗುವದು. ತಲೆಗೆ ರಾತ್ರಿಯಲ್ಲಿ ಬೆವರು ಬಿಡುವದು (ಸಿ. ಮತ್ತು ಸೆಟ್ರಂಪುರ) ಭಗಂದರವಿದ್ದ ರೋಗಿಗಳಿಗೆ ಎದೆಯ ರೋಗಗಳಿದ್ದರೆ ಇದನ್ನು ಅವಶ್ಯ ಕೊಡಬೇಕು.

**ರುಧಿರಾಭಿಸರಣ:**—ಹೃದಯದ ಯಾವತ್ತು ಬೇನೆಗಳಲ್ಲಿ ನಡು ನಡುವೆ (ಜಟ್ಟು ಬಿಟ್ಟು) ಇದನ್ನು ಕೊಡಬೇಕು. ರುಧಿರಾಭಿಸರಣದ ಕ್ರಿಯೆಯು ಮಂದವಿದ್ದು ಅದರಿಂದ ಕೈಕಾಲುಗಳು ತಣ್ಣಗಾಗುತ್ತಿದ್ದರೆ ಎದೆಯಲ್ಲಿ ಧಡಧಡಿಸುತ್ತಿದ್ದರೆ ಹಾಗೂ ಎದೆಯಲ್ಲಿ ಅಸ್ವಸ್ಥ ಅನಿಸುತ್ತಿದ್ದರೆ ಕಾಲು ಪಿಂಡರಿಗಳಲ್ಲಿ ನಡುಗು ಇರುವದು. ಶ್ವಾಸ ಒಳಗೆ ಎಳೆದುಕೊಳ್ಳು ವಾಗ್ಗೆ ಹೃದಯದ ಸುತ್ತಮುತ್ತಲು ತೀವ್ರ ವೇದನೆ ಆಗೋಣ. ರಕ್ತದಲ್ಲಿ ಪ್ರಮಾಣಮೀರಿ ಶ್ವೇತಕಣಗಳ ಸಂಖ್ಯೆ ಬೆಳೆಯೋಣದರಿಂದಾಗುವ ಪಂಡು ರೋಗವು (ಲ್ಯೂಕಿಮಿಯಾ).

**ಕುತ್ತಿಗೆ ಮತ್ತು ಬೆನ್ನು:**— ಸಣ್ಣ ಮಕ್ಕಳು ಕುತ್ತಿಗೆಯು ಸಣ್ಣಾಗಿದ್ದು ಅದನ್ನು ಸ್ಥಿರವಾಗಿ ಹಿಡಿಯಲಾರವು. ಸ್ವಲ್ಪ ಚಳಿಯಾದರೆ ಕುತ್ತಿಗೆಯು ಬಿಗಿಯಾಗುತ್ತದೆ ಮತ್ತು ನೋಯುತ್ತದೆ. ಪೃಷ್ಠವಂಶ ವಿಕೃತಿ. ತರುಣ ಸ್ತ್ರೀಯರ ಡುಬ್ಬ ಡೊಂಕಾಗುವದು.

**ಕೈಕಾಲುಗಳು:**— ಕಲ್ಕೆರಿಯಾ ಫಾ. ಇದು ಅಸ್ಥಿಯ ಪ್ರಮುಖ ಘಟಕವಿದ್ದದರಿಂದಲೂ ಟೊಂಕ ಕೈಕಾಲುಗಳು ಮುಂತಾದವುಗಳಲ್ಲಿ

ಎಲಬುಗಳು ಒಹಳಿದ್ದದರಿಂದಲೂ ಅಸ್ಥಿರೋಗಗಳಲ್ಲಿ ಇದರ ಉಪಯೋಗವು ಹೆಚ್ಚಿಗಾಗಬೇಕೆಂಬದು ಸಹಜವೇ ಸರಿ. ಎಲ್ಲ ಅವಯುವಗಳಲ್ಲಿ ಬಧಿರತೆಯೂ ತಣ್ಣಗನಿಸುವದೂ ಇರುವದು. ತಣ್ಣೀರು ಮೈಮೇಲೆ ಸುರುವಿದಂತೆ ಅನಿಸುವದು. ಹೆಗಲುಗಳಲ್ಲಿಯೂ, ಬಾಹುಗಳಲ್ಲಿಯೂ ನೋಯುವದು. ಕೈ ಮೇಲೆ ಎತ್ತಲಿಕ್ಕೆ ಬರುವದಿಲ್ಲ, ಎತ್ತಲಿಕ್ಕೆ ಕಠಿಣವಾಗುತ್ತದೆ. ಮೊಳಕೈಯಲ್ಲಿ, ಮುಂಗೈಯಲ್ಲಿ, ಬೊಟ್ಟುಗಳಲ್ಲಿ, ವಿಶೇಷತಃ ಹೆಬ್ಬಟ್ಟಿನಲ್ಲಿ ವೇದನೆ. ಲಂಬಾಸ್ಥಿಗಳಲ್ಲಿ (ತೊಡೆ, ಬಾಹುಗಳೊಳಗಿನ ಅಸ್ಥಿಗಳು) ನೋವು ರಾತ್ರಿಯಲ್ಲಿ ತಂಪು ಹವೆಯಲ್ಲಿ ವೇದನೆಗಳು ಹೆಚ್ಚಾಗೋಣ. ಸಂದುಗಳಲ್ಲಿಯೂ, ಬೆನ್ನಿನಲ್ಲಿಯೂ, ಹೆಗಲಿನಲ್ಲಿಯೂ ಬಹಳ ನೋವು. ಮತ್ತು ರಾತ್ರಿಯಲ್ಲಿಯೂ ವಿಶ್ರಾಂತಿಯಿಂದ ಬೆಳೆಯುತ್ತದೆ. ಟೊಂಕನೋವು (ಫೆರಂ. ಫಾ.) ಹವೆಯಲ್ಲಿ ಬದಲಾದರೆ ನೋವು ಹೆಚ್ಚಾಗುತ್ತದೆ. ಬೇಸಿಗೆಯಲ್ಲಿ ಕಡಿಮೆಯಾಗಿ ಶರದೃತುವಿನಲ್ಲಿ ಹೆಚ್ಚಾಗುತ್ತದೆ. ಬಹಳ ದಿವಸದ ಮಂಡೆಬೇನೆ. ಸಣ್ಣಮಕ್ಕಳು ನಡೆಯಲ್ಕು ತಡವಾಗುತ್ತದೆ. ಅವುಗಳ ಅಸ್ಥಿಗಳು ಮೃದು ಇದ್ದು ಹುರಕ ಬುರಕ ಇರುತ್ತವೆ. ಆದ್ದರಿಂದಲೇ ರಿಕೆಟ್ಸ Rickets ಅಥವಾ ಅಸ್ಥಿಪೂರ್ಣವತೆಯಲ್ಲಿ ಇದರ ಉಪಯೋಗ ಬಹಳೇ ಆಗುತ್ತದೆ. ಬಂಗಡಿಗಾಲು ಮತ್ತು ಅಸ್ಥಿಭಂಗ. ಈ ಔಷಧದಿಂದ ಮುರಿದ ಮತ್ತು ಭಂಗಹೊಂದಿದ ಅಸ್ಥಿಗಳನ್ನು ಕೂಡಿಸುವದಕ್ಕೆ ಬಹಳೇ ಸಹಾಯುವಾಗುತ್ತದೆ. ಅಸ್ಥಿಗಳ ಆವರಣದಲ್ಲಿಯು ಉಪದಂಶದಿಂದಾಗುವ ದಾಹ. ಅಸ್ಥಿಗಳಲ್ಲಿಯೂ ಸಂದುಗಳಲ್ಲಿಯೂ ಒಳತನಕ ಹೋದ ವ್ರಣವಾಗಲಿ ಕುರುವಾಗಲಿ ಅಸ್ಥಿಗತರೋಗಗಳಲ್ಲಿಯೂ ಬಲವತ್ತರ ವೇದನೆ. ರಾತ್ರಿಯಲ್ಲಿ ವೇದನೆ ಹೆಚ್ಚಾಗೋಣ. (ಸಿ.)

**ನಿದ್ರೆ, ವೇದನೆ ಮುಂತಾದ್ದು:**— ತರುಣ ಸ್ತ್ರೀಯರಿಗೆ, ಸಣ್ಣ ಮಕ್ಕಳಿಗೆ (ಹಲ್ಲುಬರುವ ಕಾಲಕ್ಕೆ) ಆಗುವ ನೆಟಿಬೇನೆ. ಶೂಲ, ಕಂಪ ಮುಂತಾದವು ರಾತ್ರಿಯಲ್ಲಿ ಹೆಚ್ಚಾಗುವವು. ಮ್ಯಾಗ್ನೆಫಾಸದಿಂದ ಗುಣ ಬರದಿದ್ದರೆ ಈ ಔಷಧದಿಂದ ಉಪಯೋಗವಾಗುವದು. ತೀವ್ರ ವೇದನೆಯಾಗುವ ಸ್ಥಳದಲ್ಲಿ ಬರುವ ಬಧಿರತೆ. ಬರ್ಫಿನಂತೆ ತಣ್ಣಗೆ ಅನಿಸುವದೂ,

ಇರುವೆ ನಡೆದಂತಾಗುವದೂ, ಸರ್ವಾಂಗದಲ್ಲಿ ವಿದ್ಯುತ್ ಪ್ರಹಾರವಾದಂತೆ ವೇದನೆಯ ಭಾವನೆ. ಅಪಸ್ಮಾರ, ಅರ್ಧಾಂಗವಾಯು, ವೃದ್ಧರಿಗೆ ಜಾಡ್ಯ ಬಂದು ಉದಾಸೀನ ಸ್ವಪ್ನಬೀಳೋಣ. ಮುಂಜಾನೆ ಬೇಗನೆ ಏಳೋಣ ವಾಗುವದಿಲ್ಲ. ನಿದ್ರೆಯಲ್ಲಿ ಹುಡುಗರು ಒದರುತ್ತಾರೆ. ಜಂತಿನಿಂದ ನಿದ್ರೆಯು ಅಸ್ಪಷ್ಟ. (ನೇ. ಫಾ.)

**ಜ್ವರ:**— ಜ್ವರಬರುವ ಪೂರ್ವದಲ್ಲಿ ಚಳಿಯಾಗೋಣ ಮತ್ತು ಮೈಮೇಲೆ ಮುಳ್ಳುಬರೋಣ (ಫೆರಂ. ಫಾ.) ಬೆವರು ಬಹಳ. ಕ್ಷಯರೋಗ ದಲ್ಲಿ ರಾತ್ರಿಯಲ್ಲಿ ಬೆವರು ಬಹಳ ಬರುವದು. ಮುಖಚರ್ಯೆಯಲ್ಲಿ ಮತ್ತು ಎದೆಯಲ್ಲಿ ತಣ್ಣನ್ನ ಜಿಗಟು ಬೆವರು. ಗಂಡಮಾಲೆಯ ಪ್ರಕೃತಿಯ ಹುಡುಗರಿಗೆ ಬರುವ ಶೀತಜ್ವರ. ಕೈಕಾಲುಗಳು ತಣ್ಣಗಾಗಿ ಸರ್ವಾಂಗ ದಲ್ಲಿ ಶೀತವೆನಿಸುವದು. ಜ್ವರದನಂತರ ಬರುವ ಅಶಕ್ತತೆ ಇವುಗಳ ಮೇಲೆ.

**ತ್ವಚೆ:**— ಬೊಕ್ಕೆಗಳು ತತ್ಕಾಲ ಎದ್ದಿರಲಿ ಅಥವಾ ಎದ್ದು ಬಹಳ ದಿವಸಗಳಾಗಿರಲಿ. ತಿಂಡಿ ಇರುವದು. ಸರ್ವಾಂಗದಲ್ಲಿ ತಿಂಡಿ, ತುರಿಸಿದ ನಂತರ ಬೊಕ್ಕೆಗಳು ಏಳುವದಿಲ್ಲ. ಮೋರೆಯಮೇಲಿನ ಮಡಿಬೊಕ್ಕೆಗಳು. ಇಸಬು, ಹಳದಿ, ಬೆಳ್ಳನ್ನ ಹಕ್ಕಳಿಕೂಡುತ್ತವೆ. ಸ್ನಾನಮಾಡಿದನಂತರ ತ್ವಚೆ ಕೆಂಪಾಗುತ್ತದೆ ಮತ್ತು ತಿಂಡೆ ಬಿಡುತ್ತದೆ. ವಾರ್ಧಕ್ಯದಲ್ಲಿ ಬಿಡುವ ತಿಂಡೆ, ಗರ್ಭಾಶಯ ಮಾರ್ಗದಲ್ಲಿ ತಿಂಡೆ, ವಿಶೇಷತಃ ಮೇಹದ ಸ್ರಾವ ಹೋಗುವಾಗ ಆಗುವ ತಿಂಡೆ. (ನೇಟ್ರಂ. ಮೂ.) ತ್ವಚೆಯಮೇಲಿನ ಸೀಳು. ೧೮ ಶಕ್ತಿಯ ಒಂದು ಭಾಗ ಮತ್ತು ನೀರಿನ ಒಂಭತ್ತು ಭಾಗ ಕೂಡಿಸಿ ಸಿದ್ಧಮಾಡಿದ ಔಷಧದ ಧಾಪನಜಲದಲ್ಲಿ (ತೊಳೆಯುವ ನೀರಿನಲ್ಲಿ) ತೋಯಿಸಿದ ಬಟ್ಟೆಯನ್ನು (ಪಟಿ) ಸೀಳಿನ ಮೇಲೆ ಇಡಬೇಕು. ಹುಣ್ಣಿ ನೊಳಗಿಂದ ತತ್ತಿಯೊಳಗಿನ ಜಿಗಟು ಅಂಟಿನಂತೆ ದಟ್ಟನ್ನ ಸ್ರಾವ ಬರು ವದು. ತ್ವಚೆಯಮೇಲೆ ಹುಣ್ಣು ಆಗುವದು. ಕಕ್ಷಾವಾತ (ಕೊಂಕಳದಲ್ಲಿ ವಾತವಾಗೋಣ).

**ಇತರ ಅವಯವಗಳು:**— ಪೀತ ಪಂಡುರೋಗದಲ್ಲಿ ಇದನ್ನು ಕೊಟ್ಟರೆ ಹೊಸ ಪಿಂಡಗಳನ್ನು ಸಿದ್ಧಪಡಿಸಿ ರಕ್ತವನ್ನು ಬೆಳೆಯಿಸುತ್ತದೆ.

ಮೆತ್ತನ್ನ ಲಿಬಲಿಬಿ ಶರೀರ ಪ್ರಕೃತಿಯುಳ್ಳ ರೋಗಿಗಳಿಗೂ ಅದೇ ಪ್ರಕಾರ ತೆಳ್ಳನ್ನ ಅಶಕ್ತಹುಡುಗರ ರೋಗದಲ್ಲಿಯೂ ಇದರ ಉಪಯೋಗ ಬಹಳೇ ಆಗುತ್ತದೆ. ಪಚನಶಕ್ತಿ ಇಲ್ಲದಿದ್ದಾಗ್ಗೆ ರೋಗಿಯು ನವೆಯುತ್ತಿರುವಾಗ ಹುಡುಗರ ಬೆಳಗೆಯು ನಿಂತಿರುವಾಗ ಹಾಗೂ ಮೂಗು, ಗುದದ್ವಾರ ಗರ್ಭಾಶಯ ಇವುಗಳಲ್ಲಿ ಗ್ರಂಥಿಯಾದಾಗ ಇದನ್ನು ಉಪಯೋಗಿಸಬೇಕು. ಎಲ್ಲ ಅಸ್ಥಿರೋಗಗಳಲ್ಲಿ ಪ್ರಕೃತಿಯ ಅಶಕ್ತತೆಯನ್ನು ಹೋಗಲಾಡಿಸುವದ ಕ್ಕೋಸ್ಕರ ನಡುನಡುವೆ ಇದನ್ನು ಕೊಡಬೇಕು.

**ವೃದ್ಧಿ, ಕ್ಷಯ**:— ಚಳಿ ಮತ್ತು ಶೀತಹವೆ, ಹವೆ ಬದಲಿಸೋಣ, ಅಲ್ಲಾಡೋಣ, ತಂಪು ಸ್ಥಳದಲ್ಲಿ ಮಲಗೋಣ ಮುಂತಾದ ಕಾರಣಗಳಿಂದ ಭಾವನೆಗಳು ಹೆಚ್ಚಾಗುತ್ತವೆ. ಊಷ್ಣಹವೆ, ಊಷ್ಣಸ್ಥಳದಲ್ಲಿ ಮಲಗೋಣ ವಿಶ್ರಾಂತಿ ತೆಗೆದುಕೊಂಡಲ್ಲಿ ಹಗುರು ಆಗೋಣ.

**ಉಪಯೋಗ**:— ೨×, ೩×, ೨೦೦× ಶಕ್ತಿಯ ಔಷಧವನ್ನು ಉಪ ಯೋಗಿಸಬೇಕು. ೬× ಶಕ್ತಿಯುದರಿಂದ ಸಹ ರೋಗಿಗಳು ಸಮಾಧಾನ ಹೊಂದುತ್ತಾರೆ, ಇಲ್ಲವೆಂತಲ್ಲ. ನೆತ್ತಿಯು ತುಂಬದೇ ಇರೋಣ, ಪ್ರಬಲ ಕಾಮೇಚ್ಛೆ ಮುಂತಾದ ವ್ಯಾಧಿಗಳಿಗೆ ೩೦× ವನ್ನು ಉಪಯೋಗಿಸುವದು ವಿಹಿತ. ಕೋಡಗಕೆಮ್ಮು, ದಂತೋದ್ಭವದ ವಟಟೆ (ವಟ್ಟೆ, ಸೆಟಿಬೇನೆ), ಕಳೆ, ತಲೆನೋವು, ವ್ರಣ ಮುಂತಾದ ರೋಗಗಳಲ್ಲಿ ೧೨× ಉಪಯೋಗಿಸಿದರೆ ನೆಟ್ಟಗಾಗುವದು. ಮುಷ್ಟಿಮೈಥುನದಿಚ್ಛೆ; ಹುಡುಗರಬೆಳಿಗೆ ನಿಂತಿರೋಣ, ಶೂಲಿ, ತಲೆನೋವು, ಪ್ರಬಲ ಕಾಮೇಚ್ಛೆ ಮುಂತಾದ ಬೇನೆಗಳಲ್ಲಿ ಮೇಲೆ ಹೇಳಿದ ಶಕ್ತಿಯ ಹೊರ್ತಾಗಿ ೨೦೦× ಶಕ್ತಿಯುಳ್ಳದ್ದು ಸಹ ಕೊಡಲು ಅಡ್ಡಿ ಇಲ್ಲ. ೫× ಶಕ್ತಿಯ ಔಷಧದಿಂದ ತಂಬಾಕದ (ಹೊಗೆಸೊಪ್ಪು) ಚಟವು ಹೋದ ಉದಾಹರಣಗಳಿವೆ. ಹೆಚ್ಚು ಪ್ರಮಾಣದಲ್ಲಿ ಔಷಧ ಕೊಟ್ಟರೆ ಏನೂ ಉಪಯೋಗವಾಗುವದಿಲ್ಲ. ಹೊರ್ತಾಗಿ ಅನಿಷ್ಟವೇ ಆಗುವದು. ವಿನಾಕಾರಣ ಔಷಧ ಬಹಳದಿವಸ ಕೊಡುವದರಿಂದ ಅಶ್ಮರೀ ಮತ್ತು ಮೂತ್ರಶೂಲೆಯಾಗುವ ಸಂಭವವಿದೆ. ವೃದ್ಧರೋಗಿಗಳಿಗೆ ಸಾಧಾರಣತಃ ಕಡಿಮೆ ಶಕ್ತಿಯ ಔಷಧ ಕೊಡಬಾರದು.

**ಇತರ ಔಷಧಗಳ ಸಂಬಂಧ:—** ಪಂಡುರೋಗಿ, ತರುಣ ಸ್ತ್ರೀಯರ ತಲೆನೋವಿನಮೇಲೆ ಮ್ಯಾಗ್ನೆ. ಫಾ. ನಂತರ ಉಪಯೋಗವಾಗುತ್ತದೆ. ಹಲ್ಲಿನಲ್ಲಿಯ ಹುಳದಮೇಲೆ ಮ್ಯಾ. ಫಾ. ಮತ್ತು ಸಿ. ಈ ಔಷಧಗಳಿಗೆ ಸಹಾಯಕರವಾಗುತ್ತದೆ. ಅಪಸ್ಮಾರದಲ್ಲಿ ಫೆ. ಫಾ, ಕಾ. ಮೂ, ಕಾ. ಫಾ. ಸಿ. ಇವುಗಳಿಗೆ, ಮಧುಮೇಹದಲ್ಲಿ ಕಾ. ಫಾ. ಮತ್ತು ನೇಟ್ರಂ. ಫಾ ಇವುಗಳಿಗೆ, ಜಂತಿನ ವಿಕಾರದಲ್ಲಿ ನೇ. ಫಾ. ಈ ಔಷಧಗಳಿಗೆ ಸಹಾಯಕರವಾಗುತ್ತದೆ. ಶೀಘ್ರ ಸಂಧಿವಾತದಲ್ಲಿ ನೇ. ಮೂ. ಮತ್ತು ಕಾ. ಫಾ. ಕೊಟ್ಟನಂತರ ಬೇನೆಯು ಉಳಿದಿದ್ದರೆ ಇದರಿಂದ ನೆಟ್ಟಗಾಗುತ್ತದೆ. ಲ್ಯೂಪಸ ಎಂಬ ತ್ವಗ್ರೋಗದಲ್ಲಿ ಕಾ. ಮೂ. ಕ್ಕೆ ಸಹಾಯಕರವಾಗುತ್ತದೆ. ಅವರೋಧ; ಮಲಗಿದನಂತರ ಎದೆಯಲ್ಲಿ ನೋವು ಉಂಟಾಗೋಣ ಮುಂತಾದ ಲಕ್ಷಣಗಳಿದ್ದು ಪಂಡುರೋಗವಿದ್ದರೆ ನೇಟ್ರಂ ಮೂರದ ಸಂಗಡ ಇದರ ಉಪಯೋಗ ಮಾಡಬೇಕು. ಈ ಸಂದರ್ಭದಲ್ಲಿ ನೇಟ್ರಂ. ಮೂ. ದಲ್ಲಿ ಮತ್ತು ಇದರಲ್ಲಿ ಬಹಳೇ ಸಾಮ್ಯವಿದೆ. ಕ್ಷಯದಲ್ಲಿ ಸಿ. ದ ನಂತರ ಇದರ ಉಪಯೋಗವಾಗುತ್ತದೆ.

**ಪ್ರಮಾಣ:—** ೪ ಅಥವಾ ೫ ವಟಿಕಾ (ಸಣ್ಣ ಪಡೆಗಳು) ಅಥವಾ ೩।೪ ಗುಂಜಿ ಚೂರ್ಣ ದಿನಾಲು ೫ ಸಾರೆ ೨।೩ ತಾಸಿನ ಅಂತರದಿಂದ ಕೊಡಬೇಕು.

---

# ಕಲ್ಕೆರಿಯಾ ಫ್ಲೂಒರಿಕಂ

## Calcaria Fluoricum

**ಎರಡನೇ ಹೆಸರುಗಳು:—** ಕ್ಯಾಲಸಿಯಂ ಫ್ಲೂಒರಾಯಿಡ ಹಾಗೂ ಫ್ಲೂಒರಾಯಿಡ ಆಫಲಾಯಿಮ ಎಂಬ ಹೆಸರುಗಳೂ ಇದಕ್ಕೆ ಇವೆ.

**ಕಾರ್ಯಕ್ಷೇತ್ರ:—** ಕಲ್ಕೆರಿಯಾ ಫ್ಲೂಒರಿಕಂ ಈ ಕ್ಷಾರವು ಮಾನವೀಶರೀರದಲ್ಲಿ ಅಸ್ಥಿಗಳ ಪೃಷ್ಠಭಾಗದಮೇಲೆ ಹಲ್ಲುಗಳ ಮೇಲ್ಭಾಗದಲ್ಲಿ, ಸ್ನಾಯುಗಳ ಸ್ಥಿತಿಸ್ಥಾಪಕ ತಂತುಗಳಲ್ಲಿ ಹಾಗೂ ಸಂಯೋಜಕ

ಧಾತುವಿನಲ್ಲಿ (Connective tissues) ಇರುತ್ತದೆ. ತ್ವಚೆ ಇರಲಿ, ಸಂಯೋಜಕ ಧಾತುವಿರಲಿ, ರಕ್ತವಾಹಿನಿಗಳ ಗೋಡೆಗಳಿರಲಿ, ಸ್ಥಿತಿಸ್ಥಾಪಕ ತಂತುಗಳ ಭಾಗವಿದ್ದಲ್ಲಿ ಈ ಕ್ಷಾರವಿರುವದೇ ಸರಿ. ಈ ಕ್ಷಾರದ ಪ್ರಮಾಣದಲ್ಲಿ ಅಣುಮಾತ್ರ ಕೊರತೆಯಾದರೂ ಈ ತಂತುಗಳಲ್ಲಿ ಶಿಥಿಲತೆ ಯುಂಟಾಗುವದು. ಸಿರಗಳು ತೊಡಕುವದು, ನಾಗಮೋಡಿ ಆಕಾರದ ಸಿರಗಳೊಳಗಿಂದಾಗಲಿ, ರಕ್ತವಾಹಿನಿಗಳ ವಿಸ್ತಾರದೊಳಗಿಂದಾಗಲಿ, ರಕ್ತ ಮೂಲವ್ಯಾಧಿಯಿಂದಾಗಲಿ, ಗರ್ಭಾಶಯದಿಂದಾಗಲಿ ಇತರ ಅವಯವ ದಿಂದಾಗಲಿ ರಕ್ತಸ್ರಾವವಾಗೋಣ, ಗರ್ಭಾಶಯಸ್ಖಲನ, ಗರ್ಭಾಶಯ ವಕ್ರೀಭವನ, ಗುದಭ್ರಂಶ ಮುಂತಾದವುಗಳು ತಂತುಶಿಥಿಲತೆಯ ಲಕ್ಷಣ ಗಳು. ಸಾಂಪತ್ತಿಕ ಆಪತ್ತಿಯ ಪೊಳ್ಳು ಹೆದರಿಕೆಯು, ಮೆದುಳಿನ ಸ್ಥಿತಿಸ್ಥಾಪಕ ಭಾಗದಲ್ಲಿಯ ಕಲ್ಕೆ. ಫ್ಲೂ. ಎಂಬ ಕ್ಷಾರದ ಕೊರತೆಯ ಲಕ್ಷಣವು.

ಮೇಲೆ ಹೇಳಿದ ಇಂದ್ರಿಯಗಳಲ್ಲಿ ಸಿಥಿಲತೆಯುಂಟಾದರೆ ಶರೀರದಲ್ಲಿ ಉತ್ಪನ್ನವಾಗುವ ಸ್ರಾವಗಳು ಶೋಷಿತವಾಗುವದಿಲ್ಲ. ಅದರ ಪರಿಣಾ ಮವು ಶರೀರದ ಮೇಲೆ ಆಗಿ ಅಲ್ಲಲ್ಲಿ ಗಟ್ಟಿಯಾದ ಗಂಟುಗಳು ಮತ್ತು ಹದಗಡಲಿಗಳೂ ಉಂಟಾಗುತ್ತವೆ. ಅಸ್ಥಿಗಳ ಪೃಷ್ಠಭಾಗದ ಮೇಲೆ ಬೊಕ್ಕೆಗಳೇಳುತ್ತವೆ. ಗಂಟುಗಳು, ಅರ್ಬುದಗಳು, ಬಾವುಗಳು, ಗಟ್ಟಿ ಯಾಗೋಣ, ಕೈ, ಗುದದ್ವಾರ ಮುಂತಾದ ಭಾಗಗಳಲ್ಲಿ ಕೊರಕಲ ಬೀಳೋಣ, ಒಸಡೆಗಳು ಗಟ್ಟಿಯಾಗೋಣ, ಉಬ್ಬೋಣ ಮುಂತಾದ ಲಕ್ಷಣಗಳು ಉದ್ಭವಿಸುತ್ತವೆ. ಇಂಥ ಸ್ಥಿತಿಯಲ್ಲಿ ಕಲ್ಕೆ. ಫ್ಲೂ. (ಕ್ಷಾರ) ಕೊಟ್ಟಲ್ಲಿ ಈ ಲವಚಿಕ ತಂತುಗಳು ಪುನಃ ಮೊದಲಿನಂತೆ ಆಗಿ ಅವುಗಳಲ್ಲಿ ಆಕುಂಚನ ಶಕ್ತಿಯು ತಿರುಗಿ ಹುಟ್ಟುತ್ತದೆ ಮತ್ತು ಅವು ತಮ್ಮ ಕಾರ್ಯವನ್ನು ಮೊದಲಿನಂತೆ ಮಾಡಲಾರಂಭಿಸುತ್ತವೆ. ಮತ್ತು ಅಲ್ಲಲ್ಲಿ ಹುಟ್ಟಿದ ಗಂಟು ಹದಗಡ್ಲಿ ಮುಂತಾದವುಗಳು ಇಲ್ಲದಂತಾಗಿ ರಕ್ತವಾಹಿನಿ ಗಳೊಳಗಿಂದ ಸ್ರಾವದ ಶೋಷಣವು ಮಾಡಲ್ಪಡುತ್ತದೆ. ಪ್ರತ್ಯಕ್ಷ ರೀತಿ ಯಿಂದಾಗಲಿ ಅಪ್ರತ್ಯಕ್ಷರೀತಿಯಿಂದಾಗಲಿ ಲವಚಿಕ ತಂತುಗಳಲ್ಲಿ ಬರುವ

ಶೈಥಿಲ್ಯ, ಅಸ್ಥಿ ಪೃಷ್ಠಭಾಗದಲ್ಲಾಗುವ ರೋಗ ಅಥವಾ ವಿಕೃತಿ, ಹಲ್ಲಿನ ಹೊರಭಾಗ, ರಕ್ತವಾಹಿನಿಗಳ ಗೋಡೆಗಳು, ಹಾಗೂ ತ್ವಚೆಗಳ ಪಿಂಡಗಳು ಇವುಗಳಿಗೆ ಸಂಬಂಧಿಸಿದ ರೋಗಗಳಲ್ಲಿ ಈ ಕ್ಷಾರದ ಉಪಯೋಗವು ಸಾಧಾರಣವಾಗಿ ಆಗುವದೆಂದು ಕಂಡುಬರುವುದು.

---

## ಪ್ರಮುಖ ಲಕ್ಷಣಗಳು

**ಮೊದಲು:**— ಅತಿಶಯ ಉದಾಸೀನ; ಸಾಂಪತ್ತಿಕ ಆಪತ್ತು ಬರುವದೆಂದು ನಿಷ್ಕಾರಣ ಹೆದರಿಕೆ. ಬುದ್ಧಿಯ ಅನಿಶ್ಚಿತತೆ.

**ಮಸ್ತಕ:**— ಹುಟ್ಟಿ ಸ್ವಲ್ಪ ದಿವಸದಲ್ಲಿಯೇ ಹುಡುಗರ ತಲೆಯ ಮೇಲೆ ಆಗುವ ಕುರು, ರಕ್ತಗುಲ್ಮ, ಮಸ್ತಕಾಸ್ಥಿಯಮೇಲೆ ಬಿರುಸು ಹುರಬರಕ ಮತ್ತು ಸೊಟ್ಟಡೊಂಕ ಬೀಗು, ವ್ರಣ ಬರುವವು. ಮೂರನೇ ಪ್ರಹರದಲ್ಲಿ ಮಳಮಳಿಸೋಣ ಮತ್ತು ತಲೆ ತಿರುಗಿದಂತಾಗಿ ತಲೆನೋವು ಮತ್ತು ಸಾಯಂಕಾಲದಲ್ಲಿ ನೆಟ್ಟಗೆ ಆಸಿಸುತ್ತದೆ.

**ನೇತ್ರ:**— ಮೋತೀಬಿಂದು; ಕಣ್ಣೆದುರಿಗೆ ಹೊಳೆಯುವದು; ಕಿಡಿ ಹಾರಿದಂತೆ ಕಾಣಿಸೋಣ; ಎಷ್ಟೋಸಾರೆ ಕೆಲಸ ಮಾಡಿದನಂತರ ಅಸ್ಪಷ್ಟ ಕಾಣಿಸೋಣ. ಕಣ್ಣುಚಿಟ್ಲೆ, ಕಣ್ಣುಬರೋಣ, ಕಣ್ಣುಗುಡ್ಡಿಯ ಮೇಲೆ ತಿಳಿಬೊಕ್ಕೆ ವ್ರಣ ಮುಂತಾದವು.

**ಕಿವಿ:**— ಕರ್ಣಾಸ್ಥಿರೋಗದ ಮೇಲೆ.

**ಮೂಗು:**—ನೆಗಡಿ, ಸೀನು ಬಂದಂತೆ ಆಗುತ್ತದೆ. ಆದರೆ ಬರುವದಿಲ್ಲ. ಮೂಗುತಟ್ಟಿಸುವದು; ತಲೆಯು ದಿಮ್ಮುಹಿಡಿಯುವದು. ಮೂಗು ಒಣಗುವದು. ಪಿನಸಿಯಲ್ಲಿ ದಟ್ಟ, ಹಸರು, ದುರ್ಗಂಧಯುಕ್ತ ಗಂಟುಳ್ಳ ಸ್ರಾವ ಹೋಗುತ್ತಿದ್ದಲ್ಲಿ (ಕಾ. ಫಾ.; ಸಿ.) ನೆಗಡಿಯಲ್ಲಿ ಹಳದಿ ಸ್ರಾವ ಹೋಗೋಣ; ನಾಸಿಕಾಸ್ಥಿರೋಗದಲ್ಲಿ ಕೊಳೆತ ಎಲುಬಿನ ದುರ್ಗಂಧವು ಮೂಗಿನಲ್ಲಿ ಬರುತ್ತಿದ್ದರೆ ಇದರಿಂದ ನೆಟ್ಟಗಾಗುತ್ತದೆ.

**ಮುಖಚರ್ಯೆ:—** ಗದ್ದವು ಬಿರುಸಾಗಿ ಬಾಯುತ್ತದೆ ಮತ್ತು ನೋಯುತ್ತದೆ. ತುಟಿಗಳು ಬಿರಿಯುತ್ತವೆ. ಗದ್ದದ ಮತ್ತು ಗಲ್ಲದ ಅಸ್ಥಿಗಳು ಕೊಳೆತು ಅದರೊಳಗಿಂದ ಕರೆ, ದುರ್ಗಂಧಯುಕ್ತ ರಕ್ತಮಿಶ್ರಿತ ಸ್ರಾವವು ಬರುತ್ತದೆ.

**ಮುಖ:—** ಬಾಯಿ ಒಣಗುತ್ತದೆ, ಆನುವಂಶಿಕ ಉಪದಂಶ ಜನ್ಯ ವ್ರಣ, ಬಾಯಿಯ ತುದಿಗಳಲ್ಲಿ ಬಿರುಕು ಬಿಡುವುದು.

**ಹಲ್ಲು:—** ಹಲ್ಲುಗಳು ಅಲ್ಲಾಡುತ್ತಿದ್ದರೆ, ಅಲ್ಲಾಡುವದರಿಂದ ಅನ್ನದ ಸ್ಪರ್ಶವಾದಕೂಡಲೆ ನೋಯುತ್ತವೆ. ಸಣ್ಣ ಹುಡುಗರಿಗೆ ಹಲ್ಲು ತಡಮಾಡಿ ಬರುತ್ತವೆ. ಹಲ್ಲು ಹುಳಿಯುವವು (ಕಲ್ಕೆ. ಫಾ.) ಹಲ್ಲು ಬೇಗನೆ ಮುರಿಯುವಂಥವು.

**ನಾಲಗೆ:—** ಬಿರಿಯುವದು. ಮೊದಲು ದಾಹವುಂಟಾಗಿ ಬಳಿಕ ಬಿರುಸು ಆಗಿದ್ದರೆ (ಸಿ.)

**ಗಂಟಲ:—** ಕಿರಿನಾಲಗೆ ಬಿದ್ದಿದ್ದರೆ, ಮತ್ತು ಆದರಿಂದ ಶಸಿಕೆಹತ್ತಿ ಕೆಮ್ಮುಬರುತ್ತಿದ್ದರೆ (ನೇಟ್ರಂ ಫಾ.) ಗಂಟಲ ಒಣಗಿದ್ದು ಮತ್ತು ಅದರಲ್ಲಿ ಉರುಪು ಇದ್ದು ಬಿಸಿನೀರು ಕುಡಿದಲ್ಲಿ ಹಗುರ ಅನಿಸುವದು; ಕಿರಿನಾಲಗೆ ಇಳಿದದ್ದು ಮತ್ತು ಬಿರುಸು ಇರುವದು. ಗಟ್ಟಿಯಾಗಿ ನಕ್ಕರೆ ಮತ್ತು ಓದಿದರೆ ದನಿ ಕೂಡುವದು.

**ಜಠರ:—** ಅಪಕ್ವ ಅನ್ನದ ವಾಂತಿ. ಫೇರಂ. ಫಾ. ದಿಂದ ಗುಣವು ಬರದೇ ಇದ್ದರೆ, ಇದನ್ನು ಕೊಡಬೇಕು. ಬಿಕ್ಕು ವಿಶೇಷತಃ ಹಗಲಿನಲ್ಲಿ ಹೊಟ್ಟೆಯಲ್ಲಿ ವಾತ, ಯಕೃತ ಭಾಗದಲ್ಲಿ ಕಡಿದಂತೆ ವೇದನೆ, ಅಲ್ಲಾಡಿದ್ದರಿಂದ ನೆಟ್ಟಗೆ ಅನಿಸುವದು.

**ಉದರ ಮತ್ತು ಮಲ:—** ಅವರೋಧ, ಮಲವಿಸರ್ಜನ ಶಕ್ತಿಯ ಅಭಾವ. ಗುದದ್ವಾರದಲ್ಲಿ ಕೊರಕಲಬಿದ್ದು ಅಲ್ಲಿ ನೋಯುತ್ತಿದ್ದರೆ, ರಕ್ತವುಳ್ಳ ಅಥವಾ ರಕ್ತಹೀನ ಮೂಲವ್ಯಾಧಿ. ಟೊಂಕನೋಯುತ್ತಿದ್ದರೆ, ಮೂಲವ್ಯಾಧಿಯಲ್ಲಿ ವಿಶೇಷ ಉಪಯೋಗವಾಗುವದು. ಗುದದ್ವಾರದಲ್ಲಿ ತಿಂಡಿ. ಗುದಭ್ರಂಶ (ಮೈಹೊರಬೀಳುವದು).

**ಮೂತ್ರೇಂದ್ರಿಯಗಳು:—** ಮೂತ್ರವು ಹೆಚ್ಚಿಗೆ ಆಗುತ್ತಿದ್ದರೆ, ಮೇಲಿಂದಮೇಲೆ ಮೂತ್ರಕ್ಕೆ ಕೂಡುವ ಇಚ್ಛೆ.

**ಪುರುಷರ ಜನನೇಂದ್ರಿಯ:—** ವೃಷಣ ಗಟ್ಟಿ ಮತ್ತು ಬಿರುಸು ಹತ್ತುತ್ತದೆ. ವೃಷಣಶೋಥ. (ಬಾವು) ವೃಷಣ ಸಣ್ಣದು, ಇಂದ್ರಿಯದೊಳಗಿಂದ ಧಾತುವೂ * ಸಣ್ಣ ಹುಡುಗರ ಇಂದ್ರಿಯದಿಂದ ಅಕ್ಕಿಕಚ್ಚಿನಂಥ ಬೆಳ್ಳನ್ನ ಸ್ರಾವವೂ ಹನಿಹನಿಯಂತೆ ಹೋಗುತ್ತಿದ್ದರೆ, ಉಪದಂಶಜನ್ಯ ಸಣ್ಣ ಸಣ್ಣ ಗಟ್ಟಿಯಾದ ಬಿಲ್ಲೆಗಳು.

**ಸ್ತ್ರೀಯರ ಜನನೇಂದ್ರಿಯ:—** ಗರ್ಭಾಶಯಭ್ರಂಶ, ಗರ್ಭಾಶಯ ವಕ್ರೀಭವನ; ಗರ್ಭಾಶಯದಲ್ಲಿಯೂ ತೊಡೆಯಲ್ಲಿಯೂ ಬಿಗಿದಂತೆ ವೇದನೆ; ಗರ್ಭಾಶಯದೊಳಗಿಂದ ಏನಾದರೂ ಹೊರಬೀಳುತ್ತದೆ ಎಂಬ ಭಾವನೆ. ಮುಟ್ಟು ಬಹಳಾಗುತ್ತಿದ್ದರೆ, ಗುಲ್ಮ, ಉಪದಂಶಜನ್ಯ ಗಟ್ಟಿಯಾದ ಬಿಲ್ಲೆಗಳು. ಪ್ರಸೂತಿಯನಂತರ ಬರುವ ಶೂಲೆಗಳು ಬಲವತ್ತರವಿಲ್ಲದಿದ್ದರೆ, ಸ್ತನದಲ್ಲಿ ಬಿರುಸು ಗಂಟುಗಳು; ಗರ್ಭಿಣಿಸ್ಥಿತಿಯಲ್ಲಿ ಹೆಂಗಸರಿಗೆ ಸುಖಪ್ರಸೂತಿಯು ಆಗಲಿಕ್ಕೆ ಸಹಾಯವಾಗುತ್ತದೆ (ಕಾಲಿ. ಫಾ.)

**ಶ್ವಸನೇಂದ್ರಿಯ:—** ಕಿರಿನಾಲಗೆ ಇಳಿದದ್ದರಿಂದ ಬರುವ ಕೆಮ್ಮು, ಕೆಮ್ಮು ಬಂದನಂತರ ಗಂಟಲದಲ್ಲಿ ತುರಿಸುತ್ತದೆ. ಹಳದೀ ಬಣ್ಣದ, ಸಣ್ಣಸಣ್ಣ ಮತ್ತು ಜಿಗಟು ಗಂಟುಗಳು ಬೀಳುತ್ತಿದ್ದರೆ ಹಾಗೂ ದಮ್ಮಿನಲ್ಲಿ (ಗೂರು) ಸಹ ಉಪಯೋಗವಾಗುತ್ತದೆ. (ಕಾಲಿ. ಫಾ.)

**ರುಧಿರಾಭಿಸರಣ:—** ನಾಗಮೋಡಿ ಆಕಾರದ ಸಿರಗಳು. ರಕ್ತವಾಹಿನಿಗಳ ವಿಸ್ತಾರ (ಕಲ್ಕೆ. ಫಾ.) ಹೃದಯದ ವಿಸ್ತಾರ (ಕಾ. ಮೂ.) ಹೃದಯದ ಕ್ರಿಯೆಯು ಅನಿಯಮಿತವಿದ್ದಲ್ಲಿ.

**ಕುತ್ತಿಗೆ ಮತ್ತು ಬೆನ್ನು:—** ಬೆನ್ನಿನ ಕೆಳಭಾಗದಲ್ಲಿ ಎಳೆದಂತೆ ವೇದನೆಗಳು— ಅವರೋಧ, ಬಹಳ ದಿವಸದ ಟೊಂಕಸೂಲಿ, ಮೊದಲು

---

* ಸಣ್ಣ ಹುಡುಗರ ಜನನೇಂದ್ರಿಯದೊಳಗಿಂದ ಸ್ರಾವವು ಹೋಗುತ್ತದೆ. ಅದು ಅಕ್ಕಿಕಚ್ಚಿನಂತೆ ಬಿಳಿದು ಇರುತ್ತದೆ.

ಅಲ್ಲಾಡಲಾರಂಭ ಮಾಡಿದಕೂಡಲೆ ವೇದನೆ ಹೆಚ್ಚಾಗುವದು ಮತ್ತು ನಡೆಯಲು ಹತ್ತಿದನಂತರ ಕಡಿಮೆಯಾಗುವದು. ಕುತ್ತಿಗೆಯ ಗಂಟುಗಳು ಗಟ್ಟಿಯಾಗಿರುವವು. ಗಲಗಂಡ.

**ಕೈಕಾಲು:—** ಬೊಟ್ಟುಗಳಲ್ಲಿಯೂ, ಸಂದುಗಳಲ್ಲಿಯೂ ಸೂಲಿ, ವೇದನೆಯೂ ಗಟ್ಟಿಯಾದ ದಡ್ಡುಗಳು. ಕಾಲಿನಲ್ಲಿಯ ನಾಗಮೋಡಿಯ ಆಕಾರದ ಸಿರಗಳು. ಮೊಳಕಾಲದಲ್ಲಿ ಬಾವು, ನೋವು ಮುಂತಾದವು. ಬೆಟ್ಟುಗಳಿಗೆ ಬರುವ ವಿವರ್ಣತೆ. ಸಂದುಗಳಲ್ಲಿ ಕರಕರ ಎಂಬ ಸಪ್ಪಳವು.

**ನಿದ್ರೆ, ವೇದನೆ ಮುಂತಾದ್ದು:—** ಮುಂಜಾನೆ ದಣಿವಾದಂತೆ ಭಾವನೆ. ಮುಂದಿನ ಗಂಡಾಂತರದ್ಯೋತಕ ಸ್ವಪ್ನಯುಕ್ತ ನಿದ್ರೆ.

**ಜ್ವರ:—** ನೀರಡಿಕೆಯಿದ್ದು ಸಂತತಜ್ವರ. ೭ ದಿವಸ ಅಥವಾ ಹೆಚ್ಚು ದಿವಸ ಇರುತ್ತದೆ. ನಾಲಗೆ ನಸುಕೆಂಪಾಗಿಯೂ ಒಣಗಿದ್ದೂ ಇರುತ್ತದೆ.

**ತ್ವಚೆ:—** ಚಳಿಯಿಂದ ಕೈ ನಾಲಗೆ ಬಿರಿಯುತ್ತವೆ. (ಫೆ. ಫಾ.), ತ್ವಚೆ ಕಠಿಣ ಮತ್ತು ಗಟ್ಟಿಹತ್ತುತ್ತಿದ್ದರೆ, ವಿಸರ್ಪ (ಒಂದು ತರದ ತ್ವಚೆ ರೋಗ ತಿಂಡೆಯಾಗುತ್ತದೆ ಮತ್ತು ರೋಗವು ಹಬ್ಬುತ್ತದೆ). ಉಗುರು ಸುತ್ತು, ಬಹಳ ದಿವಸದ್ದು ಮತ್ತು ತೀವ್ರ ನೆಟ್ಟಗಾಗದ ವ್ರಣ. ಅದರೊಳಗಿಂದ ಹಳದೀ ಕೀವು ಹರಿಯುತ್ತದೆ. ಅಸ್ಥಿಯ ಮೇಲೆ ಬಿರುಸು ಹುಣ್ಣು ಆಗೋಣ, ಅಸ್ಥಿ ಕೊಳೆಯೋಣ; ಹೃದಯವಿಕಾರದಿಂದ ಆಗುವ ಜಲಶೋಥ (ನೀರುಳ್ಳ ಬಾವು).

**ವೃದ್ಧಿ, ಕ್ಷಯ:—** ಉಷ್ಣೋಪಚಾರದಿಂದಲೂ ತಿಕ್ಕುವದರಿಂದಲೂ ಸಮಾಧಾನವೆನಿಸುವದು, ಆದರೆ ಆಕುಂಚನಕ್ರಿಯೆಯ ಅವಶ್ಯಕತೆ ಇದ್ದ ಕಾಲಕ್ಕೆ ಸೀತೋಪಚಾರ ಸಹ ಗುಣಕರವಾಗುತ್ತದೆ. ತಂಪುಹವೆಯಲ್ಲಿಯೂ ಸುಮ್ಮನೆ ಕೂತಲ್ಲಿಯೂ ಭಾವನೆಗಳ ವೃದ್ಧಿಯಾಗುತ್ತದೆ.

**ಉಪಯೋಗ:—** ಬಹಳವಾಗಿ ಅಸ್ಥಿಗತ ವಿಕಾರಗಳಲ್ಲಿ ಹೆಚ್ಚಿನ ಶಕ್ತಿಯ ಉಪಯೋಗವಾಗುತ್ತದೆ. ಬಿರಿಯೋಣ, ಅಸ್ಥಿಗಳ ಮೇಲಿನ ಹುಣ್ಣು, ಮೂಲವ್ಯಾಧಿ, ನಾಗಮೋಡಿ ಆಕಾರದ ಸಿರಗಳು; ಉಗುರಸುತ್ತು

ಮುಂತಾದ ರೋಗಗಳಲ್ಲಿ ಇದರ ಹೊರಲೇಪ ಕೊಡಬಹುದು. ಅರ್ಧ ಬಟ್ಟಲದಷ್ಟು ನೀರೊಳಗೆ ೨೦ ಗ್ರೇನ ಪುಡಿ ಹಾಕಿ ಅದರಲ್ಲಿ ಅರಿವೆ ತೋಯಿಸಿ ರೋಗಸ್ಥಾನದ ಮೇಲೆ ಇಡಬೇಕು. ಮಲಾಮು ಮಾಡಿ ಸಹ ಹಚ್ಚಬಹುದು. ಉಪದಂಶಜನ್ಯ ಅಸ್ಥಿರೋಗದಲ್ಲಿಯೂ ನಾಗಮೋಡಿ ಆಕಾರದ ಸಿರಗಳು ಇದರಲ್ಲಿಯೂ ೨೦೦× ಶಕ್ತಿಯು ಔಷಧ ಉಪಯೋಗಿಸಬೇಕು. ಸಾಧಾರಣತಃ ૩× ಶಕ್ತಿ ಅಥವಾ ೬× ಶಕ್ತಿಯು ಔಷಧ ಉಪಯೋಗಿಸಬೇಕು. ಆದರಿಂದ ಗುಣಮುಖವಾಗದಿದ್ದರೆ ೧೨× ಅಥವಾ ૩೦× ಶಕ್ತಿಯು ಉಪಯೋಗ ಮಾಡಬಹುದು. ಹೊರಗಿನ ಉಪಯೋಗಕ್ಕೆ ೨× ಅಥವಾ ૩× ಶಕ್ತಿಯುದೇ ತೆಗೆದುಕೊಳ್ಳಬೇಕು.

**ಇತರ ಔಷಧಗಳ ಸಂಬಂಧ:—** ಸಿಲಿಸಿಯಾದ ನಂತರ ಕೀವವುಳ್ಳ ವ್ಯಾಧಿಗಳಲ್ಲಿ ಉಪಯೋಗವಾಗುತ್ತದೆ. ಮೊಳಕಾಲ ಬೇನೆಯಲ್ಲಿ ಫೆ. ಫಾ. ನಂತರ ಉಪಯೋಗವಾಗುವದು. ಹಳೇ ಮತ್ತು ತಣ್ಣಗಿನ ವ್ರಣದಮೇಲೆ ನೇಟ್ರಂ. ಮೂ. ದ ನಂತರ ಮತ್ತು ಪಂಡುರೋಗದಲ್ಲಿ ಕ. ಫಾ. ನಂತರ ತಕ್ಕೊಳ್ಳಬೇಕು.

**ಪ್ರಮಾಣ:—** ೪।೫ ವಟಿಕಾ (ಸಣ್ಣ ವಡೆಗಳು) ಅಥವಾ ૩।೪ ಗುಂಜಿ ಚೂರ್ಣ ದಿವಸದಲ್ಲಿ ೪।೫ ಸಾರೆ ೨।૩ ತಾಸಿನ ಅಂತರದಿಂದ ಕೊಡಬೇಕು.

---

# ಕಲ್ಕೆರಿಯಾ ಸಲ್ಫೂರಿಕಂ

## Calcaria Sulphuricum

**ಇತರ ಹೆಸರುಗಳು:—** ಪ್ಲಾಸ್ಟರ ಆಫ ಪ್ಯಾರಿಸ, ಕ್ಯಾಲಸಿಯಂ ಸಲ್ಫೇಟ, ಜಿಪ್ಸಂ ಸಾಲ್ಟ ಎಂಬ ಹೆಸರುಗಳು.

**ಕಾರ್ಯಕ್ಷೇತ್ರ:—** ಈ ಕ್ಷಾರದಿಂದ ಶರೀರದಲ್ಲಿ ಕೀವು ಆಗುವದು ಪ್ರತಿಬಂಧಿಸಲ್ಪಡುತ್ತದೆ. ಈ ಕ್ಷಾರವು ಕಡಿಮೆಯಾದದ್ದರಿಂದ ಗಾಯುಗಳೊಳಗಿಂದ ಕೀವು ಹರಿಯುತ್ತಿರುವದು. ಹುಣ್ಣು ಒಡೆಯುವ ಪೂರ್ವದಲ್ಲಿ ಒಳಗೆ ಸಂಚಿತವಾದ ಕೀವು ಹಾಗೂ ಹುಣ್ಣು ಒಡೆದಸಂತರ, ಎಲ್ಲ ಕೀವು

ಸೋರಿಹೋದನಂತರ ಸಹ, ಎಷ್ಟೋಸಾರೆ ಕೊಳೆಯುವ ಕ್ರಿಯೆಯು ನಡೆದದ್ದರಿಂದಲೂ ಸ್ವಲ್ಪ ಸ್ವಲ್ಪ ಕೀವು ಸೋರುತ್ತಿರುತ್ತದೆ. ಇಂಥ ಸಮಯದಲ್ಲಿ ಈ ಔಷಧದ ಉಪಯೋಗವಾಗುತ್ತದೆ. ಜೀರ್ಣ ವ್ರಣವೂ, ಆಂತ್ರ ವಿದ್ರಧಿಯೂ, (ಕರಳಿನ ಮೇಲಿನ ವ್ರಣ) ಕಣ್ಣುಗುಡ್ಡಿಯ ಮೇಲಿನ ಹುಣ್ಣು, ಗರ್ಭಾಶಯದಿಂದ ಸೋರುವ ಕೀವಯುಕ್ತ ಸ್ರಾವವೂ ಇದರಿಂದ ನೆಟ್ಟಗಾಗುವವು. ಸಿಲಿಸಿಯಾ ಕ್ಷಾರವು ಗಾಯಗಳಲ್ಲಿ ಕೀವುಗಟ್ಟುವ ಕಾರ್ಯವನ್ನು ಸುಕರಮಾಡುತ್ತದೆ. ಕೀವಾಗುವದು ತೀವ್ರವಾಗಿ ಆಗುವದು. ಮತ್ತು ಕಲ್ಕೆ. ಸಲ್ಫ. ಇದು ಕೀವು ಆಗುವದನ್ನು ಯೋಗ್ಯ ಕಾಲದಲ್ಲಿ ನಿಲ್ಲಿಸುತ್ತದೆ. ಆದರೆ ಶರೀರದಲ್ಲಿ ಈ ಕ್ಷಾರವು ಕಡಿಮೆ ಆದ್ದರಿಂದ ಕೀವು ಸೋರುವ ಕ್ರಿಯೆಯು ಹಾಗೇ ನಡೆದಿರುತ್ತದೆ. ಈ ಕ್ಷಾರವು ಕಡಿಮೆಯಾದ್ದರಿಂದ ಅಸ್ತಿರಧಾತು (Epithetical Tissue) ಪಿಂಡಗಳ ಸಂಖ್ಯೆಯು ಕಡಿಮೆಯಾಗುತ್ತದೆ. ಮತ್ತು ಅವುಗಳಲ್ಲಿ ಒಡಕಹುಟ್ಟಿ ಬೇರೆಬೇರೆಯಾಗುತ್ತವೆ ಮತ್ತು ಕೊಳೆಯಹತ್ತುತ್ತವೆ. ಕೊಳೆತ ಕಶ್ಮಲವು ರಕ್ತದಲ್ಲಿಯ ಜಲದ್ರವ್ಯದಿಂದ ಹೊರಗೆ ಒಯ್ಯಲ್ಪಡುತ್ತದೆ ಮತ್ತು ಶರೀರದೊಳಗಿಂದ ಕೊಳಚೆಯನ್ನು ಹೊರಗೆಹಾಕಲು ಯತ್ನಿಸುತ್ತದೆ. ಕಲ್ಕೆ. ಸ. ಕ್ಷಾರವು ಶರೀರದಲ್ಲಿದ್ದರೆ ಕೊಳೆಯುವ ಕಾರ್ಯವು ನಿಲ್ಲುತ್ತದೆ. ಚಳಿ, ಫುಪ್ಫುಸ ರೋಗ, ಕುರುವು, ವ್ರಣ, ಸರೋಲಿ, ಮುಂತಾದ ರೋಗಗಳ ಕೊನೆಯ ಅವಸ್ಥೆಯಲ್ಲಿ ಇದರ ಉಪಯೋಗ ಬಹಳವಾಗುತ್ತದೆ. ಕೀವು ಗಟ್ಟಿಯೂ ಹಳದೀಬಣ್ಣದ್ದೂ ಇದ್ದು ರಕ್ತಮಿಶ್ರಿತ ಇರುವದು ಈ ಔಷಧದ ಪ್ರಮುಖ ಲಕ್ಷಣವಿದೆ. ಇಂಥ ಸ್ರಾವವಿದ್ದಲ್ಲಿ ಈ ಔಷಧ ಕೊಟ್ಟರೆ ಗುಣವು ತಪ್ಪದೇ ಬರುವದು.

---

## ಪ್ರಮುಖ ಲಕ್ಷಣಗಳು

**ಮಿದುಳು:**—ಮೇಲಿಂದಮೇಲೆ ಬದಲಾಗುವ ಮನಃಸ್ಥಿತಿ; ಚಂಚಲ ವೃತ್ತಿ; ಒಮ್ಮೆಲೆ ಸ್ಮರಣಶಕ್ತಿಯು ಇಲ್ಲದಂತೆ ಆಗುವದು. ಭ್ರಾಂತಿಷ್ಟತನ, ಅಸ್ವಸ್ಥ ಮತ್ತು ತ್ರಾಸಿಕ, ಅಸಂತುಷ್ಟ ಮತ್ತು ಬೆದರುವ ಸ್ವಭಾವವು. ಬಯಲು ಹವೆಯಲ್ಲಿ ಅಸ್ವಸ್ಥಚಿತ್ತಕ್ಕೆ ನೆಟ್ಟಗೆ ಅನಿಸುವದು.

**ಮಸ್ತಕ:—** ಸಣ್ಣ ಹುಡುಗರ ತಲೆಯ ಮೇಲಿನ ಕೇಶವಿಹೀನತೆ (ಕೂದಲುಹೋಗುವದು). ಆದರೊಳಗಿಂದ ಹಳದೀಬಣ್ಣದ ಕೀವು ಹೋಗುತ್ತಿದ್ದರೆ ಅಥವಾ ಹಕಳಿಗಟ್ಟುತ್ತಿದ್ದರೆ, ರಕ್ತಮಿಶ್ರಿತಸ್ರಾವವು ಇರುತ್ತಿದ್ದರೆ ತಲೆಬುರುಡಿಯೊಳಗಿಂದ ಕೀವು ಹೋಗುವದು. ಮಸ್ತಿಷ್ಕಾಘಾತದಿಂದ ತಲೆ ನೋಯುವದು. ಮುಟ್ಟಿನ ತಿಂಗಳ ಸರತಿಯಲ್ಲಿ ತಲೆನೋವು ಅಥವಾ ಶೀತಮೂಲಕ ತಲೆನೋವು ಆದರೆ ಬಯಲು ಹವೆಯಲ್ಲಿ ನೆಟ್ಟಗೆ ಅನಿಸುತ್ತದೆ. ಹಣೆಯ ಕಡೆಗೆ ಹೆಚ್ಚು ನೋವು. ತಲೆ ತಿರುಗುವ ಭಾವನೆ. ತಲೆ ಲಗುಬಗೆಯಿಂದ ಅಲ್ಲಾಡಿಸಿದರೆ ಮಳಮಳಿಸಿ ಬವಳಿ ಒರುವದು. ತಲೆಯಲ್ಲಿ ಹೊಟ್ಟು ಹೊರಡುವದು. ಹಿಕ್ಕಿಕೊಳ್ಳುವ ಕಾಲಕ್ಕೆ ಕೂದಲು ಉದುರಿ ಹೋಗುತ್ತವೆ. ಸಣ್ಣಹುಡುಗರ ತಲೆಯ ಬುರುಡೆಗಳು ಮೃದು (ಮೆತ್ತಗೆ) ಇದ್ದು ಸಣ್ಣವಾಗುತ್ತಿದ್ದರೆ.

**ನೇತ್ರ:—** ದಾಹದ ಕೊನೆಯ ಅವಸ್ಥೆಯಲ್ಲಿ. ಕಣ್ಣಿನೊಳಗಿಂದ ದಟ್ಟ, ಹಳದೀ ಕೀವಿನ ಸ್ರಾವವು ( ಪಿಚ್ಚು ) ಹೋಗುತ್ತದೆ; ಕಣ್ಣುಗುಡ್ಡಿಯ ಮೇಲಿನ ಹುಣ್ಣುಗಳು (ಒಳತನಕ ಹೋದದ್ದು) ಕಣ್ಣುಮೇಲಿನ ಒಳ ಮುಟ್ಟಿದ ವ್ರಣಗಳು. (ಸಿ ) ಕಣ್ಣಿನ ಒಳಭಾಗದಲ್ಲಿ ಕೀವು ಹರಿಯುತ್ತಿದ್ದರೆ, ಕೀವು ನಿಲ್ಲಿಸಲಿಕ್ಕೆ ಇದನ್ನು ಕೊಡಬೇಕು. ನೇತ್ರದರ್ಪಣ (ಕಣ್ಣೊಳಗಿನ ಕನ್ನಡಿಗೂ ಹಾಗು ಕಣ್ಣುಗೊಂಬೆಗೂ) ಕನೀನಿಕೆ ಆಗುವ ದಾಹದ ಕಡೆಯ ಅವಸ್ಥೆಯಲ್ಲಿ. ನೇತ್ರಾಭಿಷ್ಯಂದ, ಕಣ್ಣಿನಿಂದ ನೀರುಸೋರುವದು. ಕಣ್ಣು ಬರೋಣ. ದಟ್ಟ ಹಳದೀಸ್ರಾವ, ಕಣ್ಣಿಗೆ ವಸ್ತುಗಳ ಅರ್ಧಭಾಗವಷ್ಟೇ ಕಾಣಿಸುತ್ತದೆ. ಕಣ್ಣುಗಳು ಒಂದೇಸವನೆ ಅಲ್ಲಾಡುತ್ತಿರುತ್ತವೆ. ಕಣ್ಣೊಳಗೆ ಒತ್ತಿದಂತೆ ನೋವು. ಸಾಯಂಕಾಲದಲ್ಲಿ ಹೆಚ್ಚಾಗುತ್ತದೆ.

**ಕಿವಿ:—**ಕಿವಿಯೊಳಗಿಂದ ದಟ್ಟ ಹಳದೀ ರಕ್ತಮಿಶ್ರಿತಸ್ರಾವ ಹೋಗುವದು. (ಸಿ.) ಇದರಿಂದ ಬಧಿರತೆಯುಂಟಾಗುತ್ತದೆ. ಕಿವಿಯ ಹಿಂದಿನ ಭಾಗದಲ್ಲಿ ಬಾವು. ಕೈಹತ್ತಗೊಡುವದಿಲ್ಲ. ಕೀವಾಗುವದರಕಡೆಗೆ ಪ್ರವೃತ್ತಿ. ಕಿವಿಯ ಸುತ್ತಮುತ್ತಲು ಬೊಕ್ಕೆಗಳು. ಒಳಗಿವಿಯಲ್ಲಿ ಸಪ್ಪಳ.

**ಮೂಗು:—** ತಲೆಯಲ್ಲಿ ಶೀತ, ಕೊನೆಯ ಅವಸ್ಥೆ. ಮೂಗಿನಿಂದ ಕೀವಿನಂಥ ಹಳದೀ, ದಪ್ಪ, ಸ್ರಾವ ಹೋಗುತ್ತದೆ. ಎಷ್ಟೋಸಾರೆ ರಕ್ತ

ಸಹಿತವೂ ಇರುತ್ತದೆ. ಮೂಗಿನ ಮುಂದಿನ ದ್ವಾರದಿಂದಾಗಲಿ ಹಿಂದಿನ ದ್ವಾರದಿಂದಾಗಲಿ ಕೀವಯುಕ್ತಸ್ರಾವವು ಹೋಗುತ್ತಿದ್ದರೆ (ಕ್ಯಾ. ಸ. ಮತ್ತು ಸಿ.) ಹಗಲು ಬಲಮೂಗಿನ ಹೊಳ್ಳಿಯೊಳಗಿಂದ, ರಾತ್ರಿಯಲ್ಲಿ ಎಡಗಡೆಯ ಹೊಳ್ಳಿಯೊಳಗಿಂದ ಸುಂಬಳವು ಹೋಗುತ್ತದೆ. ಎರಡನೆಯ ಹೊಳ್ಳೆಯು ಸುಂಬಳಿಲ್ಲದೆ ಒಣಗಿದಂತೆ ಇರುತ್ತದೆ. ಮೂಗಿನ ತುದಿಯು ಕೆಂಪಗೆ ಇದ್ದು ನೋಯುತ್ತದೆ ಮತ್ತು ಉರಿಯುತ್ತದೆ. ಎಡಮೂಗಿನ ಹೊಳ್ಳೆಯಿಂದ ಹಳದಿ ದಟ್ಟಸ್ರಾವವಿದ್ದು ಎಡಗಣ್ಣಿನಿಂದ ನೀರುಹೋಗುತ್ತಿದ್ದರೆ ನಿಶ್ಚಯವಾಗಿ ಉಪಯೋಗವಾಗುವದು. ಮೂಗು ಒಣಗಿದ್ದು, ಹಕ್ಕಳಿಗಟ್ಟುತ್ತಿದ್ದರೆ, ತಿಂಡಿಬಿಡುತ್ತಿದ್ದರೆ, ತಟ್ಟಿಸಿದಂತೆಯೂ ಒಳಗೆ ಏನಾದರೂ ಸಿಕ್ಕಂತೆಯೂ ಭಾಪನೆ.

**ಮುಖಚರ್ಯೆ:—** ಬಾಡಿದ, ಉದಾಸೀನ, ಚರ್ಯೆ. ತರುಣ ವಯಸ್ಸಿನಲ್ಲಿ ಮೋರೆಯಲ್ಲಿ ಹುಟ್ಟುವ ಮೊಡವೆ (ಮೊಡೆಬಕ್ಕೆ) ಮೊಡವೆಯೊಳಗಿಂದ ಹೋಗುವ ದಟ್ಟಸ್ರಾವವು. ಗದ್ದದ ಕೆಳಗೆ ಬೊಕ್ಕೆಗಳಿರುತ್ತವೆ. ಅವುಗಳನ್ನು ಒತ್ತಿದರೆ ಕೀವೂ, ರಕ್ತವೂ ಹೋಗುತ್ತವೆ. ಮೋರೆಯ ಮೇಲೆ ಬಾವು ಮತ್ತು ಗಟ್ಟಿ ಗಂಟುಗಳು. ಕೀವು ಆಗುವದನ್ನು ನಿಲ್ಲಿಸಲಿಕ್ಕೆ ಕೊಡಬೇಕು. (ಕಾ. ಮೂ.) ಮೋರೆಯ ಮೇಲೆ ಕೀವು ಇದ್ದ ಬೊಕ್ಕೆಗಳು. (ಸಿ.)

**ಮೋರೆ:—** ಕೀವಿನ ಸ್ರಾವವುಳ್ಳ ಯಾವದೇ ಮುಖರೋಗದ ಮೇಲೆ. ತುಟಿಯ ಒಳಪುಗ್ಗಲಲ್ಲಿ ಕ್ಷತ. ಬಾಯಿಯು ಒಣಗಿದ್ದೂ ಬಿಸಿಯೂ. ಒಸಡಿಯ ಮೇಲೆ ಹುಣ್ಣುಗಳು.

**ನಾಲಗೆ:—** ನಾಲಗೆಯಲ್ಲಿ ದಾಹವಾಗುತ್ತಿದ್ದು ಕೀವು ಆಗುವಾಗ್ಗೆ (ಸಿ.) ನಾಲಗೆಯ ಕೆಳಗಿನ ಭಾಗದಲ್ಲಿ ಹಳದೀ ಅಗ್ರ. ನಾಲಗೆಯು ದೊಡ್ಡದಾಗಿ ಚೊಳಚೊಳ ಆದದ್ದು ಇದ್ದರೆ ಹುಳಿ ಅಥವಾ ಕಾರ ರುಚಿ ಇದ್ದರೆ.

**ಹಲ್ಲು:—** ಒಸದಿ ಉಬ್ಬಿದ್ದೂ ನೋಯುತ್ತಲೂ ಇದ್ದು ದಂತಶೂಲಿ ಇದ್ದರೆ, ಹಲ್ಲಿನ ಬೇರುಗಳು ಹುಳುಕು ಇದ್ದರೆ, ಮುಖಚರ್ಯೆಯು ಬಾತಿದ್ದು

ಇದ್ದರೆ, ಹಲ್ಲು ತಿಕ್ಕಿಕೊಳ್ಳುವ ಕಾಲಕ್ಕೆ ಒಸಡಿಗಳೊಳಗಿಂದ ರಕ್ತವು ಬರುತ್ತಿದ್ದರೆ, ಒಸಡೆಯ ಮೇಲಿನ ಹುಣ್ಣು, ಕೀವು ನಿಲ್ಲಿಸುವದಕ್ಕೋಸ್ಕರ.

**ಗಂಟಲು:**— ದಾಹದ ಕೊನೆಯ ಅವಸ್ಥೆಯಲ್ಲಿಯು ಗಂಟಲಿನ ಎಲ್ಲ ಬೇನೆಗಳಲ್ಲಿ ಗಂಟಲದಲ್ಲಿಯ ಯಾವದೇ ರೋಗದಲ್ಲಿ ಕೀವೂ ಅದರ ಸ್ರಾವವೂ ಹೋಗುತ್ತಿದ್ದರೆ, ಗಂಟಲು ನೋಯುತ್ತಿದ್ದರೆ, ಕಿರಿನಾಲಗೆಯ ದಾಹ; ಕೀವು ಆಗುವಾಗ್ಗೆ ಅಥವಾ ಕೀವು ಆದನಂತರ ಅದನ್ನು ನಿಲ್ಲಿಸುವದಕ್ಕೋಸ್ಕರ, ಗಂಟಲದಲ್ಲಿ ವ್ರಣ. ಗಂಟಲದೊಳಗಿಂದ ಹಳದಿ, ದಟ್ಟ ಸ್ರಾವವು ಹೋಗುತ್ತಿದ್ದರೆ, ಘಟಸರ್ಪ ಬೇನೆಯಲ್ಲಿ ( Dipthina ) ಉಸುರುಗಟ್ಟಿದಂತೆ ಭಾವನೆ ಇದ್ದಲ್ಲಿ.

**ಜಠರ:**— ಚಹ, ಹಣ್ಣುಹಂಪಲ, ಮುಂತಾದ ಉತ್ತೇಜಕ ಪದಾರ್ಥಗಳನ್ನು ಸೇವಿಸುವ ಇಚ್ಛೆ. ಹಸರು, ಹುಳಿ ಪಲ್ಲೆಕಾಯಿಗಳನ್ನು ತಿನ್ನುವ ಪ್ರಬಲ ಅಪೇಕ್ಷೆ, ನೀರಡಿಕೆ, ಹಸಿವೆ ಬಹಳ, ಮಳಮಳಿಸುವದು ಮತ್ತು ಭ್ರಮಣ. ಜಠರದಲ್ಲಿ ಉರಿಯುವ ವೇದನೆ.

**ಉದರ ಮತ್ತು ಮಲ:**— ಕೀವು ಮತ್ತು ರಕ್ತಮಿಶ್ರಿತ ರೇಚ; ಕೀವಿನಂತೆ ಜಿಗಟಾಗಲಿ ರಕ್ತಮಿಶ್ರಿತವಾಗಲಿ ಇದ್ದ ಆಮ. ಸನ್ನಿಪಾತ ಜ್ವರದಲ್ಲಿ ಆಗುವ ಆಂತ್ರವ್ರಣ. ಯಕೃತ ಪ್ರದೇಶದಲ್ಲಿ ನೋವು; ಆಮಾಂಶ ಬಿದ್ದು ಹಳದೀ, ದಟ್ಟ, ಜಿಗಟು ರೇಚವಾಗುತ್ತಿದ್ದರೆ, ಸಕ್ಕರೆ ತಿಂದನಂತರ ಅಥವಾ ಹವೆ ಬದಲಿಸಿದ್ದರಿಂದ ಸಣ್ಣಮಕ್ಕಳಿಗೆ ಆಗುವ ಅತಿಸಾರ. ರೇಚವು ವೇದನೆ ರಹಿತವಿದ್ದು ತಿಳಿಯದೆ ಆಗುತ್ತಿದ್ದರೆ ಹಾಗೂ ಊಟವಾದ ನಂತರ ಹೆಚ್ಚಾಗುತ್ತಿದ್ದರೆ, ಭಗಂದರದಲ್ಲಿ ಗುದದ್ವಾರದ ಸುತ್ತಮುತ್ತಲು ಆಗುವ ವೇದನಾರಹಿತ ಹುಣ್ಣುಗಳು, ಗುದದ್ವಾರದಲ್ಲಿ ತಿಂಡಿ; ಗುದಭ್ರಂಶ ( ಮೈಯು ಹೊರಬೀಳುವದು ); ಕ್ಷಯದ ಉತ್ತರಾವಸ್ಥೆಯಲ್ಲಿ ಆಗುವ ಅವರೋಧ.

**ಮೂತ್ರೇಂದ್ರಿಯಗಳು:**— ಮೂತ್ರಾಶಯದಲ್ಲಿ ಬಹುಕಾಲದ ವರೆಗೆ ಇರುವ ದಾಹ. ರಕ್ತಮಿಶ್ರಿತ ಸ್ರಾವ ಹೋಗುತ್ತಿದ್ದರೆ (ಫೆರಂ. ಫಾ).

ಬಹಳ ದಿವಸದ ಮೂತ್ರಪಿಂಡದಾಹ. ಕೀವು ಹೋಗುತ್ತಿದ್ದರೆ, ಜೀರ್ಣ ಜ್ವರದಲ್ಲಿ ಕೆಂಪು ವರ್ಣದ ಮೂತ್ರ.

**ಪುರುಷರ ಜನನೇಂದ್ರಿಯ:—** ಉಪದಂಶಜನ್ಯ ಉಡಂಚು; ಪ್ರಮೇಹವೆಂಬ ಪುರುಷೇಂದ್ರಿಯದ ವಿಕಾರದಲ್ಲಿ ರಕ್ತವೂ, ಕೀವೂ ಕೂಡಿದ ಸ್ರಾವವು ಹೋಗುತ್ತಿದ್ದರೆ, (ಸಿ.) "ಅಷ್ಠಿಲಾ" ಎಂಬ ಗ್ರಂಥಿಯಲ್ಲಿ (Prostrate gland) ಕುರುವು. ಶುಕ್ರಮೇಹ. (ಅಕ್ಕಿಯ ಕಚ್ಚಿನಂತೆ ಬಿಳೀ ಸ್ರಾವ.)

**ಸ್ತ್ರೀಯರ ಜನನೇಂದ್ರಿಯ:—** ಮುಟ್ಟು ತಡವಾಗಿ ಆಗುವದು ಮತ್ತು ಹೆಚ್ಚು ದಿವಸ ತಡೆಯುವದು. ಮುಪ್ಪಾದ ಕಾಲಕ್ಕೆ ತಲೆನೋವು. ಸ್ನಾಯುಗಳು ಹಾರುತ್ತವೆ ಮತ್ತು ಅಶಕ್ತತೆ ಅನಿಸುತ್ತದೆ. ದಟ್ಟ, ಹಳದಿ, ರಕ್ತಮಿಶ್ರಿತ ಸ್ರಾವ (ಸಿ.) ಮುಟ್ಟು ಆದನಂತರ ಗರ್ಭಾಶಯಮಾರ್ಗದಲ್ಲಿ ತಿಂಡಿ. ಸ್ತನವಿದ್ರಧಿ (ಮೊಲೆ ಹುಣ್ಣು) ಯಲ್ಲಿ ಕೀವು ನಿಲ್ಲಿಸುವದಕ್ಕೋ ಸ್ಕರ. (ಸಿ.)

**ಶ್ವಸನೇಂದ್ರಿಯಗಳು:—** ಹಳೇ ಕೆಮ್ಮು, ಕೀವು, ರಕ್ತಮಿಶ್ರಿತ ದಟ್ಟ ಕಫ. ಕ್ಷಯದ ಕಡೆಯ ಅವಸ್ಥೆಯಲ್ಲಿ ಜೀರ್ಣಜ್ವರಯುಕ್ತ ದಮ್ಮು; ಕ್ಷಯದ ಮೊದಲನೆಯ ಅವಸ್ಥೆಯಲ್ಲಿಯ ದಟ್ಟ ಕಫ. ಪಾತ್ರೆಯಲ್ಲಿ ಹಾಕಿದರೆ ತಳದಲ್ಲಿ ಹಬ್ಬುತ್ತದೆ (ಸಿ.) ನ್ಯುಮೋನಿಯಾ, ಶ್ವಾಸನಲಿಕಾದಾಹ; ಈ ರೋಗಗಳಲ್ಲಿ ರೋಗದ ಕಡೆಯ ಅವಸ್ಥೆಯಲ್ಲಿ ಸಾಧಾರಣತಃ ಕಾಲೀ ಮೂರದ ನಂತರ ಉಪಯೋಗವಾಗುತ್ತದೆ. ಎದೆಯಲ್ಲಿ ನೋಯುತ್ತದೆ ಮತ್ತು ಉಸುರುಗಟ್ಟಿದಂತೆ ಆಗುತ್ತದೆ. ಎದೆಯಲ್ಲಿ ಉರುಪು, ಅಶಕ್ತತೆ ಅನಿಸೋಣ. ಫುಪ್ಫುಸದಲ್ಲಿಯೂ ಫುಪ್ಫುಸಾವರಣದ ಪೊಳ್ಳಿನಲ್ಲಿಯೂ ಕೀವು ಆಗುತ್ತಿದ್ದರೆ ಶೀತದಲ್ಲಿ ದಟ್ಟ, ಗಟ್ಟಿ, ಬಿಳೀದು, ಹಳದೀ, ಕೀವಿನಂಥ ಸ್ರಾವವು ಇದ್ದರೆ, ಸಣ್ಣಮಕ್ಕಳಿಗೆ ಬಹಳೇ ಕೆಮ್ಮು ಇದ್ದು ಹಸರು ರೇಚ ವಿದ್ದರೆ ಮತ್ತು ಮೈಮೇಲೆ ಬೊಕ್ಕೆಗಳು ಏಳುತ್ತಿದ್ದರೆ.

**ರುಧಿರಾಭಿಸರಣ:—** ರಾತ್ರಿಯಲ್ಲಿ ಎದೆಯಲ್ಲಿ ಧಡಧಡಿಸುವದು.

**ಹಿಂಗುತ್ತಿಗೆ ಮತ್ತು ಬೆನ್ನು:—** ಕುತ್ತಿಗೆಯ ಹಿಂದಿನ ಭಾಗದಲ್ಲಿಯೂ ಬೆನ್ನೆಲುಬಿನಲ್ಲಿಯೂ ನೋಯುವದು.

**ಕೈಕಾಲುಗಳು:—** ಬೊಟ್ಟುಗಳು ಸೆಟೆದಿದ್ದರೆ, ಬಾತಿದ್ದರೆ; ವೇದನೆ ಇದ್ದರೆ, ವಿಶೇಷತಃ ಬಲಗಡೆಯವು. ಹಗಲು ಹೆಚ್ಚು. ಉಗುರುಸುತ್ತ; ಬೆನ್ನಿನ ಮೇಲೆ ಅರಸುಹುಣ್ಣು. (ಕಾ. ಮೂ. ಮತ್ತು ಸಿ.) ಸಂದುಗಳಲ್ಲಿ ಕೀವು (ಸಿ.) ಕೀವು ಆಗಿರುವ ಎಲ್ಲ ಗಾಯಗಳ ಮೇಲೆ ಉಪಯೋಗವಾಗುತ್ತದೆ. ದುರ್ಗಂಧಯುಕ್ತ ಕೀವು ಇದ್ದರೆ (ಕಾ. ಫಾ.)ಜಘನಾಸ್ಥಿ ಸಂದುಗಳ ರೋಗ (ಸಿ.) ಈ ಬೇನೆಯ ಪ್ರಥಮಾವಸ್ಥೆಯಲ್ಲಿ (ಫೇರಂ. ಫಾ.) ಗುಣಕೊಡುತ್ತದೆ. ಫೇರಂ. ಫಾ. ದ ಸಂಗಡ ಈ ಔಷಧ ಮತ್ತು ವಿಶ್ರಾಂತಿ ಕೊಟ್ಟಲ್ಲಿ ಜಘನಾಸ್ಥಿ ರೋಗವು ನೆಟ್ಟಗಾಗುತ್ತದೆ. ಅಸ್ಥಿಗಳು ಕೊಳೆಯುವದು (ಸಿ. ಮತ್ತು ಕಲ್ಕೆ. ಫಾ.) ಕ್ಷಯರೋಗದಲ್ಲಿ ಕಾಲುಗಳು ಉರಿಯುತ್ತವೆ. ತಿಂಡಿಯೂ ಬಿಡುತ್ತದೆ.

**ನಿದ್ರೆ ಮುಂತಾದವು:—** ಸ್ನಾಯುಗಳು ಹಾರೋಣ, ಒಮ್ಮೆಲೆ ಆಗುವ ತೀವ್ರ ವೇದನೆಯ ಶಿಡತ. ವೃದ್ಧರಿಗೆ ಆಗುವ ಶೂಲಿ. ಹಗಲು ನಿದ್ರೆ ಮಾಡುವ ಇಚ್ಛೆ. ರಾತ್ರಿಯಲ್ಲಿ ನಿದ್ರೆ ಹತ್ತುವದಿಲ್ಲ. ವಿಚಾರಗಳ ಗೊಂದಲ ಏಳುವದರಿಂದ ಆಗುವ ನಿದ್ರಾಭಂಗ (ನಾಶ). ಜೀರ್ಣ ಜ್ವರದಲ್ಲಿ ಆಲಸ್ಯ ಮತ್ತು ಯಾವಾಗಲೂ ನಿದ್ರೆಯ ಪ್ರವೃತ್ತಿ.

**ಜ್ವರ:—** ದೀರ್ಘಕಾಲದ ಚಳಿ ಅಥವಾ ಶೀತಜ್ವರ. ಚಳಿಯಾಗಿ ಜ್ವರ ಬರುತ್ತದೆ. ಕಾಲಿನೊಳಗಿಂದ ಚಳಿಯು ಹುಟ್ಟುತ್ತದೆ. ಸನ್ನಿಪಾತ ಜ್ವರದಲ್ಲಿ ಕೀವು ಮತ್ತು ಸಾಯಂಕಾಲದಲ್ಲಿ ರಕ್ತಮಿಶ್ರಿತ ಅತಿಸಾರ ಅಥವಾ ಆಮು. ಕ್ಷಯರೋಗ ಮತ್ತು ಇತರ ಜೀರ್ಣಜ್ವರದಲ್ಲಿ ಕಾಲು ಉರಿಯುತ್ತವೆ.

**ತ್ವಚೆ:—** ಹಳದೀ ಹಕಳಿಗಟ್ಟುವ ಯಾವದೇ ತ್ವಚೆಯರೋಗದ ಮೇಲೆ (ಕಾ. ಮೂ.) ಕುರುವಿನಲ್ಲಿಯ ಕೀವು ಕಡಿಮೆ ಮಾಡುವದಕ್ಕೋಸ್ಕರ ದುರ್ಗಂಧ ಕೀವು ಹರಿಯುತ್ತಿದ್ದರೆ ಮತ್ತು ತೀವ್ರ ಮಾಯದೇಯಿದ್ದ ಹುಣ್ಣಿನಮೇಲೆ (ಖೊಂಬಾ, ದಗ್ಧವ್ರಣ ಮುಂತಾದವು). ತಲೆಯಮೇಲೆ,

ಗದ್ದದಕೆಳಗೆ ಮತ್ತು ಇತರ ಸ್ಥಳದಲ್ಲಿ ಬೊಕ್ಕೆಗಳು ಮತ್ತು ಅವುಗಳೊಳಗಿಂದ ಕೀವು ಹಾಗೂ ರಕ್ತಮಿಶ್ರ ಸ್ರಾವವೂ ಹೋಗುತ್ತಿದ್ದರೆ. ಮೈಲಿಯಲ್ಲಿ ಮೈಲಿಬೊಕ್ಕೆಗಳೊಳಗಿಂದ ಕೀವು ಹೋಗಹತ್ತಿದ ನಂತರ ಇದರ ಉಪಯೋಗವಾಗುತ್ತದೆ. ಹುಣ್ಣಿನಮೇಲೆ ಧಾವನ ಜಲ ಅಥವಾ ಮಲಾಮು ಮಾಡಿ ಹಚ್ಚಬೇಕು.

**ಇತರ ಅವಯವಗಳು:—** ಗಾಯವು ತೀವ್ರವಾಗಿ ತುಂಬಿ ಬರದೇ ಬಹಳ ದಿವಸ ಸೋರುತ್ತಿದ್ದರೆ ಇದರ ಉಪಯೋಗ ಮಾಡಬೇಕು. ಕೀವು ಕಡಿಮೆ ಮಾಡಲಿಕ್ಕೂ ನಿಲ್ಲಿಸಲಿಕ್ಕೂ ಇದನ್ನು ಉಪಯೋಗಿಸಬೇಕು. ಶಿಲಿಶಿಯಾದನಂತರ ಕೊಟ್ಟರೆ ಗಾಯವು ತುಂಬಿಬರುತ್ತದೆ. ಸಂಯೋಜಕ ಧಾತು (Connective Tissue) ವಿನ ಯಾವತ್ತೂ ರೋಗಗಳಮೇಲೆ, ಶರೀರದಲ್ಲಿಯ ಯಾವದೇ ಭಾಗದೊಳಗಿಂದ ಹಳದಿ, ದಟ್ಟ ಮತ್ತು ರಕ್ತಮಿಶ್ರಿತ ಸ್ರಾವವು ಹೋಗುತ್ತಿದ್ದರೆ, ದಾಹದ ಕೊನೆಯ ಅವಸ್ಥೆಯಲ್ಲಿ ದಟ್ಟ ರಕ್ತಮಿಶ್ರಿತ ಸ್ರಾವವು ಹೋಗುತ್ತಿದ್ದರೆ. ಉಪದಂಶ, ಉಡುಜು, ಪ್ರದರ, ಶ್ವೇತ ರಕ್ತಸ್ರಾವ, ಚಳಿ, ನೆಗಡಿ, ಇವುಗಳಲ್ಲ ದಟ್ಟ, ಹಳದಿ ಕೀವಯುಕ್ತ ಸ್ರಾವ ಹೋಗುತ್ತಿದ್ದರೆ ಇದರ ಉಪಯೋಗವಾಗುವದು. ಗ್ರಂಥಿಗಳೊಳಗಿಂದ ಕೀವು ಹೋಗೋಣ, ಕೊಳೆಯೋಣ ಇವುಗಳಮೇಲೆ ಸಹ ಇದರ ಉಪಯೋಗವಾಗುತ್ತದೆ. ಹೊರಗೆ ಸಹ ಲೇಪ ಮಾಡಬಹುದು.

**ವೃದ್ಧಿ, ಕ್ಷಯ:—** ನೀರಿನಲ್ಲಿಯೂ ತೇವು ಇದ್ದ ಸ್ಥಳದಲ್ಲಿಯೂ ಕೆಲಸ ಮಾಡಿದ್ದರಿಂದ ಭಾವನೆಗಳ ವೃದ್ಧಿಯಾಗೋಣ. ಬೆಚ್ಚಗೂ ಬಯಲು ಹವೆಯೂ ಔಷಧದ ಕಾರ್ಯಕ್ಕೆ ಸಹಾಯವಾಗುತ್ತದೆ.

**ಉಪಯೋಗ:—** ಉಗುರುಸುತ್ತು, ವ್ರಣ, ಕುರುವು ಮುಂತಾದ ರೋಗಗಳಲ್ಲಿ ಈ ಔಷಧ (ಧಾವನ) ಹೊರಗಿಂದ ಹಚ್ಚಿದರೆ ಉಪಯೋಗವಾಗುತ್ತದೆ. ಸಾಧಾರಣತಃ ಹೊಟ್ಟೆಯಲ್ಲಿ ಕೊಡುವ ಔಷಧವು ೬×, ೧೨× ಶಕ್ತಿಯುಳ್ಳದ್ದು ಕೊಡುವದುಂಟು. ಕಣ್ಣಿನಲ್ಲಿ ಕೀವು (ಪಿಚ್ಚು) ಹುಟ್ಟುವ ವಿಕಾರಗಳಲ್ಲಿ ಕಡಿಮೆ ಶಕ್ತಿಯುಳ್ಳವು ಹೆಚ್ಚು ಗುಣಕೊಡುತ್ತವೆ. ವೃದ್ಧರ ವಾತಶೂಲಿಯ ಮೇಲೆ ೧೨× ಉಪಯೋಗವಾಗುತ್ತದೆ. ಉತ್ತೇ

ಜಕ ಪದಾರ್ಥ ತಿನ್ನಬೇಕೆಂಬ ಅನಿವಾರ ಇಚ್ಛೆಯನ್ನು ಇಲ್ಲಗೊಳಿಸಬೇಕಾದರೆ ೩೦× ಅಥವಾ ೨೦೦× ಶಕ್ತಿಯುಳ್ಳದ್ದು ಉಪಯೋಗಿಸಬೇಕು. ದಾಹದ ತೃತೀಯಾವಸ್ಥೆಯಲ್ಲಿ ಕೀವು ತೀರ ಇಲ್ಲಿಗೊಳಿಸಬೇಕಾದರೆ ೨೦೦× ಶಕ್ತಿಯುಳ್ಳದ್ದೇ ವಿಹಿತ.

**ಇತರ ಔಷಧಗಳ ಸಂಬಂಧ:—** ಕಾಲೀಮೂರದ ಕಾರ್ಯವು ನಿಂತಿತೆಂದರೆ ಇದರ ಉಪಯೋಗವಾಗಹತ್ತುತ್ತದೆ. ತ್ವಗ್ರೋಗ, ಆಮಾಂಶ, ಮೋರೆಯಮೇಲಿನ ಬಾವು ಮುಂತಾದವುಗಳಲ್ಲಿ ಈ ಔಷಧವೂ ಕಾಲಿಮೂರವೂ ಬಹಳೇ ಸಾಮ್ಯವುಳ್ಳವು. ಬಿರುಸು ಮತ್ತು ಕೀವಾಗುವ ಗ್ರಂಥಿ (ಹುಣ್ಣು) ಗುಡ್ಡಿಯಮೇಲಿನ ವ್ರಣ, ಉಪಜಿವ್ಹಿಕಾದಾಹ (ಕಿರಿನಾಲಗೆ) ಸ್ತನವಿದ್ರಧಿ (ಮೊಲೆಹುಣ್ಣು) ಮುಂತಾದ ರೋಗಗಳಲ್ಲಿ ಸಿಲಿಕಾದನಂತರ ಇದರ ಉಪಯೋಗವಾಗುತ್ತದೆ. ವೃದ್ಧರ ವಾತಶೂಲಿಯಲ್ಲಿ ಇದರ ವೇದನೆಗಳು ಮ್ಯಾ. ಫಾ. ದಲ್ಲಿದ್ದಂತೆ ತೀವ್ರ, ಶೀಘ್ರ ಮತ್ತು ಪ್ರಾಣಹಾರಕ ಇರುವದಿಲ್ಲ. ಅದೇ ಪ್ರಕಾರ ಕಾ. ಫಾ. ದಂತೆ ಬಧಿರತೆ ಹುಟ್ಟಿಸುವಂತೆಯೂ ಇರುವದಿಲ್ಲ. ಬಧಿರತೆ ಉತ್ಪನ್ನಮಾಡದಂಥವೂ, ತೀವ್ರ ಇಲ್ಲದಂಥವೂ ಸಹಸವಾಡಲು ಶಕ್ಯವಿದ್ದಂಥವೂ ವೇದನೆಗಳು ಇದ್ದರೆ ಇದರ ಉಪಯೋಗವಾಗುತ್ತದೆ. ದಾಹದ ೩ನೇ ಅವಸ್ಥೆಯಲ್ಲಿ (ಶೋಷಣಾವಸ್ಥೆ) ಸ್ರಾವವು ದಟ್ಟ ಮತ್ತು ರಕ್ತಮಿಶ್ರಿತ ಇದ್ದಲ್ಲಿ ಕಾಲೀಮೂರದನಂತರ ಇದನ್ನು ಕೊಡಬೇಕು. ಆದರೆ ಹಳದೀ ಮತ್ತು ಶ್ಲೇಷ್ಮಲವಿದ್ದಲ್ಲಿ ಕಾಲೀಸಲ್ಫದ ಉಪಯೋಗವಾಗುವದು. ಕೀವಿನಂತೆ ರಕ್ತಸ್ರಾವವಿದ್ದರೆ ಸಿಲಿಕಾದ ಉಪಯೋಗವಾಗುವದು. ಕಾಲಿಮೂರ ಕೊಟ್ಟನಂತರ ಅರ್ಧಮರ್ಧ ಗುಣವದೆ ಮತ್ತು ಮುಂದೆ ಗುಣತೋರುವದಿಲ್ಲ, ಇಂಥ ಸಮಯದಲ್ಲಿ ಇದರ ಉಪಯೋಗವಾಗುತ್ತದೆ.

**ಪ್ರಮಾಣ:—** ೪ ರಿಂದ ೬ ವಟಿಕೆಗಳು ಅಥವಾ ೩ ರಿಂದ ೪ ಗುಂಜಿಪುಡಿ ೩।೩ ತಾಸಿನ ನಂತರ ದಿವಸದಲ್ಲಿ ೪ ಸಾರೆ.

---

# ಕಾಲೀ ಫಾಸ್ಫಾರಿಕಂ

## Kali Phosphoricum

**ಇತರ ಹೆಸರುಗಳು:—** ಪೊಟ್ಯಾಶಿಯಂ ಫಾಸ್ಫೇಟ. ಫಾಸ್ಫೇಟ್ ಆಫ ಪೊಟ್ಯಾಶಿಯಂ ಇವು ಇದರ ಇತರ ಹೆಸರುಗಳು.

**ಕಾರ್ಯಕ್ಷೇತ್ರ:— ಕಾಲೀಫಾಸ** ಇದು ಮಿದುಳಿನ ಪಿಂಡ, ಸ್ನಾಯು, ಮಜ್ಜಾತಂತು, ರಕ್ತೋದಕ, ರಕ್ತ ಹಾಗೂ ಪಿಂಡಗಳಲ್ಲಿಯ ಇತರ ದ್ರವಪದಾರ್ಥ, ಇವುಗಳ ಘಟಕ ಪದಾರ್ಥವಿದೆ. ಧಾತುವನ್ನು ಸಿದ್ಧಪಡಿಸಲು ಉಪಯೋಗಿಸಲ್ಪಡುವ ಎಲ್ಲ ಪದಾರ್ಥಗಳಲ್ಲಿಯೂ ಎಲ್ಲ ಪೋಷಕ ದ್ರವಪದಾರ್ಥಗಳಲ್ಲಿಯೂ ಈ ಕ್ಷಾರವು ದೊರೆಯುತ್ತದೆ. ಈ ಕ್ಷಾರದ ಹೊರತು ಯಾವದೇ ಧಾತುವು ಸಿದ್ಧವಾಗುವದಿಲ್ಲವೆಂದು ಅನ್ನಬಹುದು. **ಕಾಲೀಫಾಸ.** ಔಷಧವು ಕೋಥಪ್ರತಿಬಂಧಕ ( ಆ್ಯಂಟಿಸೆಪ್ಟಿಕ = Anti Septic= ಕ್ರಿಮಿ ಆಗಗೊಡದಂಥಾದ್ದು = ಕೊಳೆಯಗೊಡದಂಥಾದ್ದು ) ವಿದ್ದು ಧಾತುವಿನಲ್ಲಿಯ ಕೊಳೆಯುವ ಕ್ರಿಯೆಯನ್ನು ಪ್ರತಿಬಂಧಿಸುತ್ತದೆ. ದಣುವಿಕೆಯ ಭಾವನೆ, ನಿರುತ್ಸಾಹ, ಉದಾಸೀನತೆ, ಮಾನಸಿಕ ಶೈಥಿಲ್ಯ, ಶ್ವಾಸ, ಮೂತ್ರ, ಶೌಚ, ಸ್ರಾವ ಮುಂತಾದವುಗಳು ನಾರುವದು, ಕೊಳೆಯುವದು, ವ್ರಣ ಮುಂತಾದವುಗಳನ್ನು ನೆಟ್ಟಗೆ ಮಾಡೋಣ, ಅದೇ ಪ್ರಕಾರ ವೃದ್ಧರ ಶರೀರದ ಸವಕಳಿಯನ್ನು ಕಳೆದು ಪೂರ್ವಸ್ಥಿತಿಯನ್ನುಂಟುಮಾಡುವದು. ಈ ಎಲ್ಲ ಕೆಲಸಗಳನ್ನು ಈ ಕ್ಷಾರವು ಮಾಡುತ್ತದೆ.

ಮೆದುಳು, ಪೃಷ್ಠವಂಶರಜ್ಜು, ನಾಡೀಕೇಂದ್ರ, ಸ್ನಾಯು, ರಕ್ತಕಣ ಮುಂತಾದ ಸ್ಥಾನಗಳಲ್ಲಿ ಉದ್ಭವಿಸುವ ರೋಗಗಳಲ್ಲಿ ಈ ಔಷಧದ ಉಪಯೋಗವಾಗುತ್ತದೆ. ಈ ಕ್ಷಾರದ ಕೊರತೆಯಾದಲ್ಲಿ ಮುಂದೆ ಹೇಳಿದ ವ್ಯತ್ಯಾಸಗಳುಂಟಾಗುತ್ತವೆ. ಅವು ಯಾವವೆಂದರೆ ೧. ವಿಚಾರಶಕ್ತಿಗೆ ಚಾಲನಕೊಡುವ ಪಿಂಡಗಳಲ್ಲಿ ವ್ಯತ್ಯಾಸ, ನೈರಾಶ್ಯ, ಅಸ್ವಸ್ಥತೆ, ಹೆದರಿಕೆ, ಸಂಗತಿಯ ಬೇಸರಿಕೆ, ಏಕಾಂತಪ್ರಿಯತೆ, ಆನಂದವೃತ್ತಿಯ ಅಭಾವ,

ಸಂಶಯವೃತ್ತಿ, ಸ್ಮರಣಶಕ್ತಿಯ ಹ್ರಾಸ, ಮುಂತಾದ ಮಿದುಳಿನ ವ್ಯಾಪಾರಗಳಲ್ಲಿ ಕಂಡುಬರುತ್ತವೆ. ೨. ಮೊದಲು ನಾಡಿಯು ಅಶಕ್ತವಿದ್ದು ಮುಂದೆ ಗತಿಯು ಮಂದವಾಗುತ್ತದೆ. ೩. ಪಕ್ಷಘಾತ (ಅರ್ಧಾಂಗ), ವೇದನೆ, ಬಧಿರತೆ ಮುಂತಾದವು. ೪. ಸ್ನಾಯುಗಳಲ್ಲಿಯೂ ನಾಡಿಗಳಲ್ಲಿಯೂ ಅಶಕ್ತತೆ, ಅರ್ಧಾಂಗವಾಯು, ಚಲನವಲನ ನಿಂತು ಹೋಗುವದು ಮುಂತಾದ ಲಕ್ಷಣಗಳು ಕಂಡು ಬರುತ್ತವೆ. ಮಿದುಳು ಮತ್ತು ಮಜ್ಜಾತಂತುಗಳ ಮೇಲೆ ಇದರ ಕ್ರಿಯೆಯು ಆಗಿ ನಿರುತ್ಸಾಹವೂ ತದನುಷಂಗದಿಂದಾಗುವ ಇತರ ಭಾವನೆಗಳೂ ಇವುಗಳ ಮೇಲೆ (Nurusthima = ನಿರುತ್ಸಾಹ) ಈ ಔಷಧದ ಉಪಯೋಗವು ಬಹಳಾಗುತ್ತದೆ. ಇದರ ಹೊರ್ತಾಗಿ ಕೆಳಗೆ ಬರೆದ ಬೇನೆಗಳನ್ನು ದೂರಮಾಡುವ ಶಕ್ತಿಯು ಇದರಲ್ಲಿದೆ— ಶರೀರದ ಯಾವದೇ ಭಾಗದಿಂದಾಗುವ ದುರ್ಗಂಧಸ್ರಾವ (ರೇಚ, ಹೊಟ್ಟೆ ಜಾಡಿಸುವದು, ಬೆವರು, ಸ್ರಾವ, ಮುಂತಾದವು) ಆಗುವದು; ಶೀಘ್ರ ಪರಿಣಾಮವಾಗುವ ರೋಗದ ನಂತರ ಆಗುವ ಸ್ನಾಯುಗಳಲ್ಲಿಯ ಅಶಕ್ತತೆ, ಶಕ್ತಿ ಕ್ಷೀಣಮಾಡುವ ಬೇನೆಗಳು, ತೀವ್ರವಾಗಿ ಇಂದ್ರಿಯಗಳು ಕೊಳೆಯುವಂಥ ರಕ್ತಸ್ರಾವ; ಬಾಯಿ ಬರುವದು, ಕೊಳೆಯುವದು, ಬಹಳ ದಿವಸದ, ತ್ರಾಸದಾಯಕ ಬಲ್ಲೆ (ಒಂದು ತರದ ಸಣ್ಣ ಹುಣ್ಣು) ಸನ್ನಿಪಾತ ಜ್ವರದಲ್ಲಿಯ ಭ್ರಮ, ವಾತ ಮುಂತಾದ ಭಾವನೆ; ಮಿದುಳು ಮಂದವಾಗುವದು; ಮಿದುಳಿನ ದಣುವಿಕೆ, ಮುಂತಾದ ಎಲ್ಲ ತರಹದ ಶ್ರಮ ಮಾಡಿದ್ದರಿಂದ ಆಗುವ ಮಿದುಳಿನ ಬೇನೆಗಳು.

---

## ಪ್ರಮುಖ ಲಕ್ಷಣಗಳು

**ಮಿದುಳು:—** ಚಿಂತಾಯುಕ್ತ; ವಿಶೇಷ ಕಾರಣವಿಲ್ಲದೆ ಉಂಟಾಗುವ ಮಾನಸಿಕ ಹೆದರಿಕೆ; ಮುಂದೆ ಏನಾದರೂ ಅನಿಷ್ಟವಾಗುವದೆಂಬ ವಿಚಾರದ ಪ್ರವೃತ್ತಿ; ಉದ್ಯೋಗದ ಸಂಬಂಧದಿಂದಾಗಲೀ ಬೇರೆ ಕಾರ್ಯದ ಸಲುವಾಗಿಯಾಗಲೀ ನಿರಾಸೆ; ಸಂಗತಿಯ ಬಗ್ಗೆ ಬೇಸರಿಕೆ; ಕೆಲಸ ಬಹಳ

ಮಾಡಿದ್ದರಿಂದ ಮಿದುಳಿನ ದಣುವಿಕೆ; ನಿರುತ್ಸಾಹ; ಉದಾಸೀನವೃತ್ತಿ; ಜನರ ಸಂಗಡ ಕೂಡಲು ಬೇಸರ; ಮಾತು ಸಹ ಆಡಲು ನಿರುತ್ಸಾಹ; ತ್ರಾಸವೆನಿಸುವದು; ಆತುರತೆ; ಅಂಜುಬುರುಕತನ; ಸ್ಮರಣಶಕ್ತಿಯ ಹ್ರಾಸ; ಬರೆಯುವ ಕಾಲದಲ್ಲಿ ಅಕ್ಷರಗಳನ್ನು ಬಿಟ್ಟುಬಿಡೋಣ; ಬೇಡಾದದ್ದು ಬರೆಯೋಣ; ತಲೆಯಲ್ಲಿ ವಿಚಾರಗಳ ಹಾಗು ಕಲ್ಪನೆಗಳ ಗೊಂದಲ; ಸ್ವಲ್ಪ ಸಪ್ಪಳವಾದರೂ ಮನಸ್ತಾಪ; ನಿರ್ವೀರ್ಯತೆ; ಉತ್ಸಾಹಭಂಗ; ಸಣ್ಣ ಕೆಲಸವಿದ್ದಾಗ್ಯೂ ಹೇಗಾಗುವ್ರದೆಂಬ ಬಗ್ಗೆ ಮನಸಿನಲ್ಲಿ ಭೀತಿಯುಂಟಾ ಗುವದು; ಕೆಲಸಮಾಡಲು ನಿರುತ್ಸಾಹ; ಮನಸ್ಸಿನ ಅನಿಶ್ಚಿತತೆ, ಅಂಜಿಕೆಯು ಹಾಗೂ ಮನಸ್ತಾಪದ ದುಷ್ಪರಿಣಾಮ. ಕಾಲ್ಪನಿಕ ಆಭಾಸವಾಗೋಣ; ಹುಚ್ಚುಹಿಡಿಯೋಣ; ಜಾಗೃತಾವಸ್ಥೆಯಲ್ಲಿ ಸಹ ಅಸಂಬದ್ಧ ಬಡಬಡಿ ಸೋಣ; (ನೇಟ್ರಂ ಮೂರ) ಒಮ್ಮೆಲೆ ಆಗತಕ್ಕ ಪ್ರಬಲ ಮನೋವಿಕಾರ ದಿಂದ ಅಳೋಣ (Hysteria) ನಗೋಣ, ದುಃಖಬಡೋಣ; ಸಂಶಯದ ವೃತ್ತಿ, ಭ್ರಮ; ಕಾಲ್ಪನಿಕ ವಸ್ತುವನ್ನು ಹಿಡಿದುಕೊಳ್ಳುವ ಪ್ರವೃತ್ತಿ; ಮತಿಭ್ರಂಶ, ಅದರಿಂದಾಗುವ ನೀತಿಭ್ರಷ್ಟತೆ; ಅತಿ ನಿರಾಸೆಯೂ ಉದಾಸೀನ ತೆಯೂ; ಮೇಲಿಂದ ಮೇಲೆ ಬಿಕ್ಕಿ ಬಿಕ್ಕಿ ಅಳುವ ಪ್ರವೃತ್ತಿ, ನಾಚಿಕೊಳ್ಳುವ ಪ್ರವೃತ್ತಿ, ಸಣ್ಣಮಕ್ಕಳು ಸಿಡುಕ ಸ್ವಭಾವವುಳ್ಳವೂ, ತ್ರಾಸಿಕ ಸ್ವಭಾವವುಳ್ಳವೂ ಸಿಟ್ಟಿನವೂ, ಅಂಜುಬುರುಕಗಳೂ ಇದ್ದು ನಿದ್ರೆಯಲ್ಲಿ ಚೀರುತ್ತವೆ. ನಿದ್ರೆಭಂಗ, ನಿದ್ರೆಯಲ್ಲಿ ಬಡಬಡಿಸುವದು. ನಿದ್ರೆಯು ಅಸ್ವಸ್ಥ, ದುಃಸ್ವಪ್ನಬೀಳುತ್ತವೆ. ನಿದ್ರೆಯಲ್ಲಿಯೆ (ಎಚ್ಚರಿಲ್ಲದ ಸ್ಥಿತಿಯಲ್ಲಿ) ತಿರುಗಾಡುವದು. ರಾತ್ರಿಯಾದ ಕೂಡಲೆ ಅಂಜಿಕೆ ಬರೋಣವು. ಮಾನ ಸಿಕ ಶ್ರಮವಾಗಲಿ ಒಮ್ಮಿಂದೊಮ್ಮೆ ಉದ್ಭವಿಸುವ ಪ್ರಬಲ ಮನೋವೃತ್ತಿ ಯಿಂದಾಗಲಿ ಆಗತಕ್ಕ ಯಾವತ್ತೂ ಬೇನೆಗಳು ಇದ್ದಲ್ಲಿ ಈ ಔಷಧವನ್ನು ಕೊಡಬೇಕು. ತ್ರಾಸಿಕತನ, ಅಸ್ವಸ್ಥತೆ, ಅಂಜುಬುರಕತನ, ನಿರುತ್ಸಾಹ, ಔದಾಸೀನ್ಯ, ಆಲಸ್ಯ, ಏನೂ ಮಾಡಬಾರದೆಂಬ ಭಾವನೆ, ಸ್ಮರಣ ಶಕ್ತಿಯು ಕುಂದೋಣ, ಇವೇ ಮೊದಲಾದ ಲಕ್ಷಣಗಳು ಪ್ರಮುಖವಾಗಿ ಇದ್ದಲ್ಲಿ ಈ ಔಷಧ ಕೊಟ್ಟು ಆಗಲೇ ವಿಶ್ರಾಂತಿ ಕೊಟ್ಟರೆ ಈ ಕೃತಿಗಳೆಲ್ಲ ನಿವಾರಣವಾಗುವವು.

**ಮಸ್ತಕ:—** ಏಳುವಾಗ, ಮಲಗಿದ್ದರಿಂದ, ಬಿದ್ದುಕೊಂಡಿದ್ದದರಿಂದ, ಎದ್ದುನಿಂತಿರುವಾಗ ಒತ್ತಟ್ಟಿಗೆ ಡೊಂಕಕಣ್ಣಿನಿಂದ ನೋಡಿದಲ್ಲಿ ಕಣ್ಣು ಕತ್ತಲೆಬರುತ್ತದೆ, ತಲೆ ನೋಯುತ್ತದೆ. ಗಾಳಿಯಿಲ್ಲದ ಸ್ಥಳದಲ್ಲಿ ಈ ಲಕ್ಷಣಗಳು ಹೆಚ್ಚಾಗುತ್ತವೆ. ಕಣ್ಣುಗಳು ಜಡ ಇದ್ದು ದಣಿದಂತೆ ಅನಿಸುವದು; ವಿದ್ಯಾರ್ಥಿಗಳೂ, ಮಾನಸಿಕ ಶ್ರಮದಿಂದ ದಣಿದ ಜನರೂ ಇಂಥವರ ಮಸ್ತಕಶೂಲಿ. ಸಾವಕಾಶ ನಡೆದಲ್ಲಿ ನೆಟ್ಟಗೆ ಅನಿಸುವದು. ಸುತ್ತಮುತ್ತಲು ಗೊಂದಲ, ಗಲಭೆ ಮೂಲತಃ ತಡೆಯುವದಿಲ್ಲ. ಆದರಿಂದ ತ್ರಾಸವಾಗುತ್ತದೆ. ತಲೆ ನೋಯುವಾಗ ಕಿವಿಯಲ್ಲಿ ಸಪ್ಪಳಾಗುತ್ತದೆ. ಆನಂದದಾಯಕ ವ್ಯವಸಾಯದ ಮೂಲಕ ತಲೆನೋವು ನಿಲ್ಲುತ್ತದೆ. ಒಬ್ಬರೇ ಇದ್ದಲ್ಲಿ ಹೆಚ್ಚಾಗುತ್ತದೆ. ಮಿದುಳಿನಲ್ಲಿ ರಕ್ತದ ಅಭಾವ; ಮಸ್ತಿಷ್ಕಾಘಾತದಿಂದ ಕಣ್ಣಗೊಂಬೆಗಳು ಹಬ್ಬಿದ್ದವು; ತಲೆಯ ಹಿಂಭಾಗದಲ್ಲಿಯೂ ಕಣ್ಣಿನಮೇಲೆಯೂ ಜಡಪದಾರ್ಥವಿಟ್ಟಂತೆ ಭಾವನೆಯಾಗಿ ಶೂಲಿಗಳು ಬರುತ್ತವೆ. ತಿನ್ನುವದರಿಂದ ಉಪಶಮನವಾಗುತ್ತದೆ. ತಲೆನೋವಿನಿಂದ ದಣಿದಂತೆ ಅನಿಸಿ, ಯಾವ ವಿಚಾರವೂ ತೋಚುವದಿಲ್ಲ. ಮುಟ್ಟಾಗುವ ಕಾಲಕ್ಕೆ ಆಗುವ ಮಸ್ತಕಶೂಲಿಯ ಮೇಲೆ ಇದರ ಉಪಯೋಗವಾಗುತ್ತದೆ. ಮಲಗಿದ ನಂತರ ತಲೆಯಲ್ಲಿ ಸಪ್ಪಳವಾಗುತ್ತದೆ. ತಲೆಯ ಹಿಂಭಾಗವು ತುರಿಸುತ್ತದೆ.

**ನೇತ್ರ:—** ಕಣ್ಣುಗೊಂಬೆಗಳು ಹಿಗ್ಗಿದ್ದು ಕಣ್ಣು ಅರಳಿದಂತೆ ಆಗುವ ಬೇನೆಯಲ್ಲಿ ಇದರ ಉಪಯೋಗವಾಗುತ್ತದೆ. ಸ್ನಾಯು ಶೈಥಿಲ್ಯದಿಂದ ರೆಪ್ಪೆಗಳು ಮುಚ್ಚಿದಂತೆ ಆಗುವವು ಮತ್ತು ದೃಷ್ಟಿಯು ಡೊಂಕ. ದೃಷ್ಟಿಮಾಂದ್ಯ. ಅಸ್ಪಷ್ಟ ದೃಷ್ಟಿ. ಕಣ್ಣುಗಳಲ್ಲಿ ಹರಳು ಚುಚ್ಚಿದಂತೆ ಭಾವನೆ, ಕಣ್ಣು ಹಾರುತ್ತವೆ. ಕಣ್ಣುಗಳ ಮುಂದೆ ಕರಿ ಚಿಕ್ಕಿಗಳು ಕಾಣುತ್ತವೆ.

**ಕಿವಿ:—** ಬಧಿರತೆ. ತಲೆಯಲ್ಲಿಯೂ ಕಿವಿಯಲ್ಲಿಯೂ ಸಪ್ಪಳವಾಗಿ ಗೊಂದಲ ಆದಂತೆ ಆಗುತ್ತದೆ. ಕಿವಿಯಲ್ಲಿ ತಿಂಡಿಯೂ ಗುಣಗುಣ ಸಪ್ಪಳವೂ (ಮ್ಯಾ. ಫಾ.) ಕಿವಿಯೊಳಗಿಂದ ದುರ್ಗಂಧ ಕೀವಿನಂಥ ಸ್ರಾವ.

ಕಿವಿಯೊಳಗಿನ ಪಟಲದಲ್ಲಿಯೂ ಮಧ್ಯಕರ್ಣದಲ್ಲಿಯೂ ವ್ರಣವಿದ್ದು ಅದ ರೊಳಗಿಂದ ದುರ್ಗಂಧ; ಹೊಲಸು ರಕ್ತವೂ ಕೀವೂ ಸೋರುತ್ತಿದ್ದರೆ.

**ಮೂಗು:—** ಅಶಕ್ತ. ನಾಜೂಕ ಪ್ರಕೃತಿಯ ಜನರ ಮೂಗಿನಿಂದ ರಕ್ತಸೋರುವ ಪ್ರವೃತ್ತಿ. ರಕ್ತವು ತೆಳ್ಳಗೆ ಮತ್ತು ಕರೇದೂ ಗಟ್ಟಿ ಆದದ್ದೂ (ಫೆ. ಫಾ.) ಇರುತ್ತದೆ. ಪಿನಸಿಯಲ್ಲಿ ದುರ್ಗಂಧ ಹಳದಿ ಹಕ್ಕಳಿ ಗಟ್ಟುತ್ತವೆ. ವ್ರಣಗಳೂ ಇದ್ದಾಗ್ಗೆ. (ಸಿ.) ನೆಗಡಿಯಲ್ಲಿ ದುರ್ಗಂಧ ಸುಂಬಳ ಹೋಗುತ್ತಿದ್ದರೆ. ಸ್ವಲ್ಪ ಚಳಿಯಾದರೂ ಸೀನು ಬರುತ್ತವೆ. ಮೂಗಿನ ಹಿಂಭಾಗದಿಂದ ಸುಂಬಳ ಗೊಣ್ಣೆಗಳು ಬರುತ್ತವೆ.

**ಮುಖಚರ್ಯೆ:—** ಕುಂದಿದಂಥಾದ್ದು. ಒಳಸೇರಿದ್ದು; ಕಣ್ಣು ಒಳನಟ್ಟಿದ್ದು; ಮೋರೆ ಇಳಿದದ್ದು; ಒಮ್ಮೊಮ್ಮೆ ಚರ್ಯೆ ಮತ್ತು ಹಣೆ ಕೆಂಪೂ ಬಿಸಿಯೂ ಇರುವವು. ಒಮ್ಮೊಮ್ಮೆ ಬೇನೆಯವರಂತೆ ಕಳೆಗುಂದಿದ್ದು. ಚರ್ಯೆಯಲ್ಲಿ ವಾತಶೂಲಿ ವಿಶೇಷತಃ ಬಲಭಾಗಕ್ಕೆ; ಶೀತೋಪಚಾರದಿಂದ ನೆಟ್ಟಗೆ ಅನಿಸುತ್ತದೆ. ಗದ್ದದ ಅಸ್ಥಿಯಲ್ಲಿ ವೇದನೆಯಿದ್ದು ತಿನ್ನುವಾಗ, ಮಾತಾಡುವಾಗ, ಒತ್ತಿದರೆ ನೆಟ್ಟಗೆ ಅನಿಸುತ್ತದೆ. ಚಳಿಯಲ್ಲಿ ಕೆಲಸ ಮಾಡಿದಲ್ಲಿ ಚರ್ಯೆಯು ಡೊಂಕಾಗುತ್ತದೆ. (ಪಕ್ಷಘಾತ) ಇದಕ್ಕೇ "ಅರ್ದಿತ" ಅನ್ನುತ್ತಾರೆ. ಗದ್ದಕ್ಕೆ ತಿಂಡಿಬಿಡುತ್ತದೆ. ಗದ್ದದ ಮೇಲೆ ಬೊಕ್ಕೆಗಳೂ ಏಳುತ್ತವೆ.

**ಮುಖ:—** ಬಾಯಿಬಂದದ್ದು; ಬಾಯಿಗೆ ದುರ್ಗಂಧವು; ಬಾಯಿ ಯಲ್ಲಿ ನೀರು ಬಿಡುತ್ತದೆ; ಬೂದೀಬಣ್ಣದ ವ್ರಣವಿದ್ದು ಕೊಳೆಯುವದೂ ಇರುತ್ತದೆ. ದಟ್ಟನ್ನ ಹಾಗೂ ಉಪ್ಪು ಜೊಲ್ಲು ಸೋರುತ್ತದೆ. ತುಟಿಯ ಮೇಲೆ ಬೊಕ್ಕೆಗಳು ಬಂದು ನೋಯುತ್ತವೆ.

**ನಾಲಗೆ:—** ಮುಂಜಾವಿನಲ್ಲಿ ಬಹಳೇ ಒಣಗಿದಂತಿರುತ್ತದೆ. ಬಿಳಿಯ ದಾಗಲಿ ಜಿಗಟು ಇದ್ದು ಸಾಸಿವೆಯ ಬಣ್ಣದ್ದಾಗಲಿ ಅಗ್ರವಿದ್ದಲ್ಲಿ ನಾಲಗೆಯ ದಾಹ; ನಾಲಗೆ ಒಣಗಿತಂದಿದ್ದು ಅಶಕ್ತತನವೂ ಇರುತ್ತದೆ. (ನೇಟ್ರಂ. ಮೂರ).

**ಹಲ್ಲು:—** ನಾಜೂಕ ಪ್ರಕೃತಿಯವರಲ್ಲಿ ಮೇಲಿಂದಮೇಲೆ ಉದ್ಭವಿಸುವ ದಂತಶೂಲಿ; ( ವ್ಯಾ. ಫಾ. ); ಮಾನಸಿಕ ಶ್ರಮ, ದಣುವಿಕೆ, ನಿದ್ರಾನಾಶ ಇವುಗಳ ಮೂಲಕ ಕಷ್ಟವಾಗುತ್ತದೆ ಮತ್ತು ಮೆಲ್ಲಗೆ ನಡೆದರೆ ನೆಟ್ಟಗೆ ಅನಿಸುತ್ತದೆ. ಒಸಡೆಯಿಂದ ರಕ್ತಸ್ರಾವವಾಗುವ ಪ್ರಕೃತಿ, ಒಸಡಿಗಳಲ್ಲಿ ಕೆಂಪುಗೆರೆ ಕಾಣುತ್ತಿದ್ದಲ್ಲಿ ಈ ಔಷಧದಿಂದ ಗುಣವು ಅವಶ್ಯವಾಗಿ ಬರುವದು. ಹುಳತ ಹಲ್ಲುಗಳಲ್ಲಿಯೂ ಹೊಸದಾಗಿ ಕೂಡಿಸಲ್ಪಟ್ಟ ಹಲ್ಲಿನ ಸ್ಥಳದಲ್ಲಿಯೂ ಪ್ರಬಲವೇದನೆ; ದಂತಶೂಲಿ ನಿಂತು ತಲೆ ನೋಯುತ್ತದೆ, ಇಲ್ಲವೆ ತಲೆನೋವು ನಿಂತು ಹಲ್ಲುಶೂಲಿಯೂ ಆಗುತ್ತದೆ. ಹೀಗೆ ಒಂದರ ಹಿಂದೆ ಮತ್ತೊಂದು ನೋವು ಇದರಂತೆ ಕ್ರಮ ನಡೆದಲ್ಲಿ ಈ ಔಷಧದಿಂದ ಉಪಯೋಗವಾಗುತ್ತದೆ. ಚಳಿಯಿಂದಲ್ಲದೆ ಮಾನಸಿಕ ವ್ಯಥೆಯಿಂದ ಹಲ್ಲು ಕಡಕಡಿಸುತ್ತದೆ. ಹಲ್ಲು ಕರಕರಿಸುತ್ತಿದ್ದರೆ.

**ಗಂಟಲು:—** ಕಿರಿನಾಲಗೆ ಬೆಳೆದಿದ್ದು ( ಇಳಿದಿದ್ದು ) ಅದರಿಂದ ಬಹಳೇ ನೋವು ಆಗುತ್ತದೆ; ಅದರ ಮೇಲೆ ಬಿಳೇ ಕಲೆಗಳೂ ಬಿದ್ದಿರುತ್ತವೆ. ಗಂಟಲು ಬಹಳೇ ಒಣಗಿದ್ದು ಉಗುಳು ನುಂಗುವ ಪ್ರವೃತ್ತಿ, ಧ್ವನಿ ಗೊಗ್ಗರವಾದದ್ದೂ ಕೂತದ್ದೂ ಇರುವದು. ಗಂಟಲದೊಳಗಿಂದ ಉಪ್ಪುಪ್ಪು ಕಫ ಬೀಳುವದು. ಗಂಟಲು ನೋವು ಇದ್ದದ್ದೂ ದುರ್ಗಂಧಯುಕ್ತ ಕಫವುಳ್ಳದ್ದೂ; ಶಬ್ದನಲಿಕೆಯ ಪಕ್ಷಘಾತವು. ಮಾತು ಮಂದವೂ ಮತ್ತು ಅಸ್ಪಷ್ಟವೂ ಇರುವದು ಭಾವೀ ಪಕ್ಷಘಾತದ ಚಿಹ್ನವು. ಗಂಟಲಿನ ಯಾವದೇ ರೋಗದಲ್ಲಿ ದಣುವಿಕೆಯೂ, ಕುಗ್ಗುವಿಕೆಯೂ (ಸೊರಗೋಣ) ಬಹಳ ಇದ್ದರೆ ಈ ಔಷಧದ ಉಪಯೋಗವಾಗುವದು.

**ಜಠರ:—** ಜಠರ ದಾಹವಾಗಿ ಬಹಳ ದಿವಸದ ಮೇಲೆ ರೋಗಿಯು ಔಷಧೋಪಚಾರಕ್ಕಾಗಿ ಬಂದರೆ ಅವನಿಗೆ ಅಶಕ್ತತೆಯೂ, ದಣುವಿಕೆಯೂ, ಕುಗ್ಗುವಿಕೆಯೂ ಮುಂತಾದ ಭಾವನೆಗಳು ಇದ್ದಲ್ಲಿ ಈ ಔಷಧದ ಉಪಯೋಗವಾಗುತ್ತದೆ. ಜಠರ ವ್ರಣ, ಉಂಡುತಿಂದನಂತರ ಸಹ, ವಿಶೇಷತಃ ಜ್ವರದಿಂದೆದ್ದನಂತರ, ಪುನಃ ಹಸಿವೆಯಾಗೋಣ, ಮಾನಸಿಕ ತಾಪದಿಂದ ( ದುಃಖ, ಅಂಜಿಕೆ, ಶ್ರಮಾತಿಶಯ, ಚಿಂತೆ, ಮುಂತಾದ );

ಅಪಚನ, ಹಾಗೂ ಹೊಟ್ಟೆಯಲ್ಲಿ ಸೋವು; ನೀರಡಿಕೆ ಬಹಳ; ಮಳಮಳಿ ಸುವದು ಇದ್ದು, ಹುಳಿ ಕಹಿ, ಅನ್ನವೂ ಕೆಲವುಕಾಲ ರಕ್ತವೂ ಕಾರಿಕೆಯಲ್ಲಿ ಹೋಗುತ್ತಿದ್ದರೆ, ಹೊಟ್ಟೆಯಲ್ಲಿ ಕಸಪಿಸಿಯಾಗುತ್ತದೆ ಆದರೆ ಉಂಡನಂತರ ನೆಟ್ಟಗನಿಸುತ್ತದೆ; ಕಹಿ, ಹುಳಿ ತೇಗುಗಳು ಬರೋಣ; ವಿಶೇಷತಃ ಎಡಗಡೆ ಮಗ್ಗಲಾಗಿ ಮಲಗಿದಲ್ಲಿ ( ಹೃದಯದ ಮೇಲೆ ) ಭಾರವಿದ್ದಲ್ಲಿ ತೇಗು ಬರೋಣ; ಮಸ್ತಿಷ್ಕ ರೋಗದಲ್ಲಿ ಹಸರು ಬಣ್ಣದ, ಅಥವಾ ನೀರಲ ಬಣ್ಣದ ಕಾರಿಕೆ ಬರೋಣ ಇಂಥ ಸ್ಥಿತಿಯಲ್ಲಿ ಈ ಔಷಧದ ಉಪಯೋಗ ವಾಗುತ್ತದೆ.

**ಉದರವೂ ಮಲವೂ:—** ಉದರವು ಉಬ್ಬಿದ್ದು, ನಾಲಗೆ ಒಣಗಿದ್ದು, ಆಂತ್ರಜ್ವರವಿದ್ದಾಗ್ಗೆ (ಆಂತ್ರ=ಕರಳು) ದಣುವಿಕೆ ಬಹಳಿದ್ದು ಇತರ ಔಷಧಗಳ ಭಾವನೆಗಳು ಇಲ್ಲದಿದ್ದರೆ. ವಾಯುವು ಉದರದಲ್ಲಿ ತುಂಬಿದ್ದರಿಂದ ಹೊಟ್ಟೆಯು ಉಬ್ಬಿದ್ದು. ಹೊಕ್ಕಳದ ಕೆಳಭಾಗದಲ್ಲಿ ಮೇಲಿಂದಮೇಲೆ ಹೊಟ್ಟೆ ಮುರಿಯುತ್ತಿದ್ದು ಶೌಚಕ್ಕೆ ಹೋಗಬೇಕೆಂಬ ಭಾವನೆಯಾದರೆ; ಹೋದರೆ ಶೌಚಕ್ಕೆ ಆಗದಿರೋಣ; ಹೊಟ್ಟೆಗೆ ತೊಡೆ ಹಚ್ಚಿಕೊಂಡು ಕೂತಲ್ಲಿ ಸಮಾಧಾನವಾಗುವದು. ಶಕ್ತಿಪಾತ, ಮುಖ ಚರ್ಮ ನಿಃಸತ್ವ; ನಾಡಿಯು ಮಂದವಿದ್ದು ಹೊಟ್ಟೆ ಜಾಡಿಸುತ್ತಿದ್ದಲ್ಲಿ, ಭೀತಿಯಿಂದಾಗಲಿ ಇತರ ಕಾರಣದಿಂದಾಗಲಿ, ವೇದನೆ ಇಲ್ಲದೆ ದಣುವು ತರುವಂಥ ನೀರಿನಂತೆ ತೆಳ್ಳನ್ನ ರೇಚ ಆಗುತ್ತಿದ್ದರೆ; ಕೊಳಕ, ಅಕ್ಕಿಯ ಕಚ್ಚಿನಂಥ ರೇಚ; ಹೊಲಸು ಅಥವಾ ಕೇವಲ ರಕ್ತದ ರೇಚವಿದ್ದರೆ; ಮಹಾಮಾರಿಯ ಭಾವನೆ; ದುರ್ಗಂದವಾಯು ಸರಿಯುತ್ತಿದಲ್ಲಿ; ತಿಸ್ನು ವಾಗಲೇ ದುರ್ಗಂಧಯುಕ್ತ, ವೇದನಾರಹಿತ ರೇಚಗಳಾಗುತ್ತಿದ್ದರೆ. ಗುದದ್ವಾರದಲ್ಲಿ ಉರುವು ಆಗುತ್ತಿದ್ದು ಅಲ್ಲಾಡಿದರಿಂದ ಅಲ್ಲಿ ಸೋವು ಆಗೋಣ; ಗುದಭ್ರಂಶ (ವ್ಯೆಹೊರಬಿಳೋಣವು) ಫೆರಂ. ಫಾ. ಕಲ್ಕೆ. ಫ್ಲೊ. ಆಮಾಂಶ; ಕೇವಲ ರಕ್ತಮಯ ಶೌಚಕ್ಕೆ ಆಗೋಣ; ಹೊಟ್ಟೆ ಉಬ್ಬಿದ್ದು, ದುರ್ಗಂಧವಿದ್ದು ನಾಲಗೆ ಒಣಗಿದ್ದು ಇದ್ದರೆ ಹಾಗೂ ಕ್ಷಯದ ಲಕ್ಷಣ ಗಳು ಕಾಣುತ್ತಿದ್ದರೆ ಈ ಔಷಧವು ನಿಃಸಂಶಯವಾಗಿ ಗುಣಕೊಡುತ್ತದೆ.

ಅವರೋಧದಲ್ಲಿ ಕರಿಯ ಅಥವಾ ಸ್ವಲ್ಪ ಕೆಂಪು ಮಲ ಹೋಗುತ್ತಿದ್ದು ಒಮ್ಮೊಮ್ಮೆ ಹಸರು, ಹಳದಿ, ಲೋಳೆ ಹೋಗುತ್ತಿದ್ದರೆ, ರಕ್ತಮೂಲ ವ್ಯಾಧಿಯಲ್ಲಿ ತಿಂಡಿ ಬಿಡುತ್ತಿದ್ದರೆ ಹಾಗೂ ವೇದನೆಯೂ ಇರುತ್ತಿದ್ದರೆ. ಹೊಟ್ಟೆಜಾಡಿಸುವದು, ಆಮಾಂಶ ಮೂಲವ್ಯಾಧಿ ಇವುಗಳಲ್ಲಿ, ಮಾನಸಿಕ ದಣುವಿಕೆ ಹೆಚ್ಚು ಇದ್ದು ಎರಡನೇ ಔಷಧದ ಜೊತೆಗೆ ಇದನ್ನು ಕೊಡ ಬೇಕು. ಬಿಸಿನೀರಿನಲ್ಲಿ ಹಾಕಿ ಈ ಔಷಧದ ಬಸ್ತೀಕೊಡಬೇಕು.(ಗುದದ್ವಾರ ದಿಂದ ಪಿಚಕಾರಿಯಿಂದ ಹೊಟ್ಟೆಯಲ್ಲಿ ನೀರು ಸೇರಿಸಬೇಕು.)

**ಮೂತ್ರೇಂದ್ರಿಯ:—** ಮೇಲಿಂದಮೇಲೆ ಮೂತ್ರಕ್ಕೆ ಹೋಗಬೇಕೆಂದು ಅನಿಸುವದು; ಮೂತ್ರವಾಗುವ ಕಾಲಕ್ಕೆ ಉರುಪು, ಮಾನಸಿಕ ದುರ್ಬಲತೆಯಿಂದ ಮೂತ್ರವನ್ನು ಕಟ್ಟಿಹಿಡಿಯಲು ಶಕ್ಯವಿಲ್ಲ, ಸ್ನಾಯು ಶೈಥಿಲ್ಯದಿಂದ ತನ್ನಷ್ಟಕ್ಕೆ ತಾನೇ ಮೂತ್ರವಾಗುತ್ತದೆ. ಸಣ್ಣಮಕ್ಕಳಿಗೆ ಹಾಸಿಗೆಯಲ್ಲಿ ಮೂತ್ರವಾಗುತ್ತಿದ್ದರೆ ಈ ಔಷಧವನ್ನು ಅವಶ್ಯ ಕೊಡ ಬೇಕು. ಆದರೆ ಜಂತಿನ ಮೂಲಕ ಮಕ್ಕಳಿಗೆ ಹಾಸಿಗೆಯಲ್ಲಿ ಮೂತ್ರ ವಾಗುತ್ತಿದ್ದರೆ ನೇಟ್ರಂ ಫಾಸವು ಗುಣಕೊಡುತ್ತದೆ. ಮೂತ್ರಮಾರ್ಗ ದಿಂದ ರಕ್ತಸ್ರಾವವಾಗುತ್ತಿದ್ದು ದಣುವಿಕೆ, ಅಶಕ್ತತೆ, ಬಹಳ ಹಸಿವೆ, ಹಾಗೂ ನಿದ್ರಾನಾಶವಾಗುತ್ತಿದ್ದರೆ, ಮಧುಮೇಹದಲ್ಲಿ ಸಹ ಇತರ ಔಷಧಗಳ ಜೊತೆಗೆ ನಡುನಡುವೆ ಕೊಡಬೇಕು. ನಾಳಗುದದಲ್ಲಿ (Brights disease) ಸಹ ಈ ಔಷಧವು ಗುಣಕೊಡುತ್ತದೆ. ಕಲ್ಕೆರಿಯಾ ಫಾಸ ಮತ್ತು ಇದು ಆದಲು ಬದಲು ಮಾಡಿ ಕೊಡಬೇಕು. ಪ್ರಮೇಹದಲ್ಲಿ ರಕ್ತಸ್ರಾವವಾಗುತ್ತಿದ್ದು ಮೂತ್ರವು ಕೇಶರಿಯ ಬಣ್ಣದ್ದಿದ್ದರೆ (ಕೆಂಪು ಹಳದಿ); ಮೂತ್ರಮಾರ್ಗದಲ್ಲಿ ಉರುಪೂ ಕಡಿದಂತೆ ವೇದನೆಯೂ ಇದ್ದರೆ.

**ಪುರುಷರ ಜನನೇಂದ್ರಿಯ:—** ಸಂಭೋಗದ ಇಚ್ಛೆ ಬಹಳ; ಮುಂಜಾವಿನಲ್ಲಿ ಇಂದ್ರಿಯವು ಸೆಟೆದದ್ದು ಇರುತ್ತದೆ; ರಾತ್ರಿಯಲ್ಲಿ ನಿದ್ರೆ ಯಲ್ಲಿ ರೇತಃಸ್ಖಲನ; ಈ ಕಾಲಕ್ಕೆ ಶಿಸ್ನದಲ್ಲಿ ನೋವು ಇದ್ದು ಸೆಟೆದಿರು ವದಿಲ್ಲ; ಅತಿಶಯ ಸ್ತ್ರೀಸಂಗದಿಂದ ಉಂಟಾದ ಮಾನಸಿಕ ದುರ್ಬಲತೆ; ಸಂಭೋಗದ ನಂತರ ಪ್ರಾಪ್ತವಾದ ಅತಿ ದುರ್ಬಲತೆ; ಸಂಭೋಗದ ನಂತರ

ಅತಿಶಯ ದಣುವಿಕೆ ಮತ್ತು ದೃಷ್ಟಿಮಾಂದ್ಯ; ಸಂಭೋಗೇಚ್ಛೆಯ ಅಭಾವ ಸ್ವಾಭಾವಿಕವಿರಲಿ ಅಥವಾ ಹುಟ್ಟಾ ಇರಲಿ ಈ ಔಷಧದ ಉಪಯೋಗ ವಾಗುತ್ತದೆ. ಇಂದ್ರಿಯದ ಮೇಲಿನ ವ್ರಣವು-ಕೊಳೆಯುತ್ತ ಮತ್ತು ಹಬ್ಬುತ್ತ ಹೋಗುತ್ತಿದ್ದರೆ, ಪ್ರಮೇಹದಲ್ಲಿ ರಕ್ತಸ್ರಾವವಿದ್ದರೆ.

**ಸ್ತ್ರೀಯರ ಜನನೇಂದ್ರಿಯ**:— ಅನಿಯಮಿತ (ಕಾಲಕ್ಕೆ ಆಗದೇ ಇದ್ದ) ಮುಟ್ಟು; ನಿಸ್ತೇಜ, ತ್ರಾಸಿಕ, ಸಿಡುಕ ಸ್ತ್ರೀಯರಲ್ಲಿ ಕೆಲ ಕಾಲ ಮುಟ್ಟು ಸರತಿಯ ಕಾಲದಕಿಂತ ಮೊದಲೇ ಆಗಿ ಪ್ರಮಾಣದ ಕಿಂತಲೂ ಹೆಚ್ಚಾಗುವದೂ ಕೆಲಕಾಲ ತಡವಾಗಿ ಕಡಿಮೆ ಆಗುವದು, ಬಹಳ ಕೆಂಪು ಆಗುವದು ಅಥವಾ ಕರ್ರಗೆ ಆಗುವದು, ಕೆಂಪು, ತೆಳ್ಳನದು, ಗಟ್ಟಿ ಯಾಗದಂಥಾದ್ದು, ಹಾಗೂ ದುರ್ಗಂಧಯುಕ್ತವೂ ಇರುವದು. ಸರತಿಯ ಕಾಲಕ್ಕೆ ಹೊಟ್ಟೆ ಶೂಲಿ (ಮ್ಯಾ. ಫಾ.), ನಷ್ಟಾರ್ತವ (ಮುಟ್ಟು ಆಗದೇ ಇರೋದು.); ವಿಶೇಷತಃ ನಿರುತ್ಸಾಹಮಾಡುವಂಥ, ದಣುವಿಕೆ ತರುವಂಥ ಸರ್ವಸಾಧಾರಣ ಅಶಕ್ತತೆ ತರುವಂಥ ರೋಗಗಳಲ್ಲಿ ಮುಟ್ಟಿನ ಸರತಿಯ ಕಾಲಕ್ಕೆ ಎದೆಗುಂಡೆ ಬರುತ್ತದೆ ಮತ್ತು ಉನ್ಮಾದ ವಾಯುವಿನ ಭಾವನೆ (Hysteria) ಆಗುತ್ತದೆ. ಮುಟ್ಟಾಗುವ ಸರತಿಯ ಕಾಲಕ್ಕೆ ತಲೆಯು ಮಂದವಾಗಿ ನೋಯುತ್ತದೆ ಮತ್ತು ರೋಗಿಯು ದಣಿದಂತೆ ಹಾಗೂ ಮಂದ ಇರುತ್ತಾಳೆ. ಗರ್ಭಾಶಯದ ಸುತ್ತಲು ಚುಚ್ಚುವಂತೆ ವೇದನೆ, ಎಡಗಡೆ ಹೆಚ್ಚು ವೇದನೆ, ಟೊಂಕದಲ್ಲಿ ಬಹಳೇ ನೋಯುತ್ತದೆ. ಪ್ರದರ (ಗರ್ಭಾಶಯದಿಂದ ಹೋಗುವ ಬಿಳೇ ಸ್ರಾವಕ್ಕೆ ಕನ್ನಡಿಸಲ್ಲಿ ಬಿಳೇ ಸೆರಗು ಹೋಗುವದು ಎಂದು ಅನ್ನುವದುಂಟು. ಮಹಾರಾಷ್ಟ್ರದಲ್ಲಿ ಧುಪಣಿ (Lucorrhem) ಅನ್ನುವದುಂಟು) ಕೆಲಕಾಲ ಕಿತ್ತಳೆ ಹಣ್ಣಿನ ಬಣ್ಣಿದ್ದಾಗಲಿ, ಹಳದಿ ಬಣ್ಣದ್ದಾಗಲಿ, ಉರಿಯುವಂಥ ಹಾಗೂ ಬೊಕ್ಕೆ ಉತ್ಪನ್ನ ಮಾಡುವಂಥ ಸ್ರಾವ; ಗರ್ಭಪಾತದ ಹೆದರಿಕೆ, ವಿಶೇಷತಃ ಸಿಡುಕ ಸ್ತ್ರೀಯರಲ್ಲಿ (ಕಲ್ಕೆ. ಫಾ.); ದುಗ್ಧಜ್ವರ; ಪ್ರಸೂತಿಯಲ್ಲಿ ಬಡಬಡಿಸುವದು; ಭ್ರಮ, ಪ್ರಸೂತಿಯ ಕಾಲಕ್ಕೆ ಬರುವ ಶೂಲಿಗಳು ಸಾಕಷ್ಟು ಮತ್ತು ಸಾಕಷ್ಟು ತೀವ್ರವಿಲ್ಲದಿರೋಣ; ಹಾಗೂ ಪ್ರಸೂತಿಗೆ

ಬಹಳ ವೇಳೆ ಹತ್ತೊಂಭತ್ತು (ಕಾಲಿ. ಫಾ.) ಎಂಬ ಔಷಧ ೧೦।೧೦ ಮಿನಿಟಿ ಗೊಮ್ಮೆ ಕೊಟ್ಟಲ್ಲಿ ಶೂಲಿಗಳು ಸಾಕಷ್ಟು ಹಾಗೂ ತೀವ್ರತರವಾಗಿ ಪ್ರಸೂತಿಯು ತೀವ್ರವಾಗುತ್ತದೆ; ಖೊಟ್ಟಿ ಪ್ರಸೂತಿವೇದನೆ; ಪ್ರಸೂತಿ ಯಾಗುವ ಪೂರ್ವದಲ್ಲಿ ೧।೨।೩ ಅದಕ್ಕೂ ಹೆಚ್ಚು ಸಹ ತಿಂಗಳ ವರೆಗೆ ಈ ಔಷಧವನ್ನು ಕೊಡುತ್ತಹೋದರೆ ಸುಖಪ್ರಸೂತಿಯಾಗುವದು. ಅಕಾಲಕ್ಕೆ ಆಗುವ ಗರ್ಭಪಾತವನ್ನು ನಿಲ್ಲಿಸಲು ಈ ಔಷಧದಲ್ಲಿ ಶಕ್ತಿಯುಂಟು. ಗರ್ಭ ಪಾತದ ಪ್ರಕೃತಿ ಇದ್ದ ಸ್ತ್ರೀಯರಿಗೆ ಗರ್ಭಧಾರಣವಾದ ಕಾಲದಿಂದಲೆ ಈ ಔಷಧವನ್ನು ಕೊಡುವದು ಹಿತ. ಸ್ತನವಿದ್ರಧಿ (ಸ್ತನಕ್ಕೆ ಆಗುವ ಹುಣ್ಣು) ಯಲ್ಲಿ ಹೊಲಸು, ದುರ್ಗಂಧ ಕೀವು ಸುರಿಯುತ್ತಿದ್ದರೆ ಈ ಔಷಧವು ಬಹಳೇ ಗುಣಕರವು. ಇದರ ಲೇಪ ಸಹ ಮಾಡಬಹುದು.

**ಶ್ವಸನೇಂದ್ರಿಯ:—** ಧ್ವನಿಯ ಮೇಲೆ ಒತ್ತಾಯವಾದಲ್ಲಿ; ಅದು ಗೊಗ್ಗರ ಆದಲ್ಲಿ (ಧ್ವನಿ ಒಡೆದಂತಾದಲ್ಲಿ); ಹಾಗೂ ನಿರುತ್ಸಾಹ ಮತ್ತು ದಣಿದಂತೆ ಆದಲ್ಲಿ; ಧ್ವನಿನಲಿಕೆಯ ಪಕ್ಷಘಾತವಾಗಿ ಧ್ವನಿಯು ಕೂತಲ್ಲಿ; ಗಂಟಲದಲ್ಲಿ ತಿಂಡಿ ಉದ್ಭವಿಸಿ ಬರುವಿಕೆಯು; ದಪ್ಪ, ಹಳದಿ, ಉಪ್ಪುಪ್ಪು ಹಾಗೂ ಹೊಲಸು ಕಫ; ಎದೆಯಲ್ಲಿ ನೋವು; ಕೋಡಗಕೆಮ್ಮಿನಲ್ಲಿ ದಣು ವಿಕೆ ಆದಲ್ಲಿ; ಸ್ವಲ್ಪ ಅನ್ನ ತಿಂದರೆ ದಮ್ಮು ಏಳುತ್ತದೆ. ಧೈರ್ಯವಿಲ್ಲದ ಹಾಗೂ ನಿರುತ್ಸಾಹಿ ರೋಗಿಗಳಿಗೆ ಆಗುವ ದಮ್ಮಿಗೆ ೩× ಶಕ್ತಿಯ ಔಷಧ ವನ್ನು ಮೇಲಿಂದಮೇಲೆ ಮತ್ತು ಹೆಚ್ಚು ಪ್ರಮಾಣದಿಂದ ಕೊಡಬೇಕು. ದಮ್ಮಿನಿಂದ ಶ್ವಾಸಕ್ರಿಯೆಗೆ ಅಡ್ಡಿಯಾಗುತ್ತದೆ, ದಣುವಿಕೆ ಬಹಳಾಗು ತ್ತದೆ, ಸ್ವಲ್ಪ ಶ್ರಮಮಾಡಿದರೂ ಅಲ್ಲಾಡಿದರೂ ಹೆಚ್ಚಾಗುತ್ತದೆ. ದಮ್ಮಿ ನಲ್ಲಿ ನಾಲಿಗೆಯು ಹಳದೀ ಬಣ್ಣದ್ದಾಗುತ್ತದೆ ಮತ್ತು ದಪ್ಪನ್ನ, ಹಳದಿ ಉಪ್ಪುಪ್ಪು ಕಫ ಬೀಳುತ್ತದೆ. ಪಾವಟಿಗೆ ಏರುವಾಗ, ಕೆಲಸ ಮಾಡುವಾಗ ಶ್ವಾಸೋಚ್ಛ್ವಾಸ ಮಾಡಲು ಶ್ರಮವಾಗುತ್ತದೆ. ನಿದ್ರೆಯಲ್ಲಿ ರೋಗಿಯು ಗಟ್ಟಿಯಾಗಿ ಶ್ವಾಸ ಎಳಕೊಳ್ಳುತ್ತಾನೆ ಮತ್ತು ಕನಿಕರಿಸುತ್ತಾನೆ.

**ರುಧಿರಾಭಿಸರಣ:—** ಹೃದಯದ ಅಶಕ್ತತೆಯಿಂದ ಮಸ್ತಕಭ್ರಮಣ ವಾಗುತ್ತದೆ; ಬಿದ್ದಂತೆ ಭಾವನೆ, ಹೆದರಿಕೆಯಿಂದಲೂ ದಣುವಿಕೆಯಿಂದಲೂ

ಮೂರ್ಛೆ ಬರುತ್ತದೆ; ನಾಡಿಯು ಅನಿಯಮಿತವಿದ್ದು ತಪ್ಪಿ ತಪ್ಪಿ ಬೀಳು ತ್ತದೆ; ನಾಡಿಯು ಅತಿಶಯ ಮಂದವಿದ್ದು ಕೆಲವೇಳೆ ಕೈಗೆ ಹತ್ತುವದಿಲ್ಲ ಸಹ, ನಾಡಿಯ ಬಡತಗಳು ವಾಡಿಕೆಗಿಂತ ಕಡಿಮೆ ಇರುತ್ತವೆ. ಧೀರ ವಿಲ್ಲದ, ಸಚಿಂತ, ನಿರಾಶ, ಅಸ್ವಸ್ಥ, ನಿದ್ರೆಹತ್ತದ ರೋಗಿಗಳಲ್ಲಿ ಎದೆಯಲ್ಲಿ ಧಡಧಡಿಸುವ ಭಾವನೆ; ಪಾವಟಿಗೆ ಏರುವಾಗ್ಯೆ ಆಗಲಿ, ಸ್ವಲ್ಪ ಮಾನಸಿಕ ತಾಪವಾಗಲಿ, ಸ್ವಲ್ಪ ದುಃಖವಾಗಲಿ ಚಿಂತೆಯಾಗಲಿ ಎದೆಯಲ್ಲಿ ಧಡಧಡಿ ಸುತ್ತದೆ. ಹೃದಯದ ಯಾವದೇ ವಿಕಾರಕ್ಕೆ ಇದು ಪ್ರಮುಖ ಔಷಧವು. ಹೃದಯಕ್ಕೆ ಪೌಷ್ಟಿಕವೆಂದು ಸಹ ಇದನ್ನು ತಕ್ಕೊಳ್ಳಬಹುದು. ಪಂಡು ರೋಗ, ಬಲವಿಲ್ಲದ ರಕ್ತ, ಮಂದರುಧಿರಾಭಿಸರಣ ಮುಂತಾದ ವಿಕೃತಿಗಳಿಗೆ ಸಹ ಇದನ್ನು ಉಪಯೋಗಿಸಬಹುದು.

**ಕುತ್ತಿಗೆ ಮತ್ತು ಬೆನ್ನು:—** ಹೆಗಲಿನ ಎಲುಬಿನಲ್ಲಿಯೂ ಬೆನ್ನಿ ನಲ್ಲಿಯೂ ನೋವು; ನಡೆದರೆ ಸಮಾಧಾನವೆನಿಸುವದು; ಎದ್ದುಕೂತಲ್ಲಿಯೂ ಶ್ರಮವಾದಲ್ಲಿಯೂ ವೇದನೆ.

**ಕೈಕಾಲು:—** ಬಟ್ಟುಗಳ ತುದಿಗಳು ಬಧಿರವಾಗಿ ಇರುವವು, ಇಷ್ಟೇ ಅಲ್ಲ, ಕೇವಲ ನಿದ್ರಿತವಾದಂತೆಯೇ ಇರುವವು. ಅಂಗಾಲಿಗೆ, ಅಂಗೈಗೆ ತಿಂಡಿ ಬಿಡುತ್ತದೆ. ಕಾಲಿಗೆ ಉರುಪು ಬಿಡುತ್ತದೆ. ರಾತ್ರಿ ಯಲ್ಲಿ ಕಾಲಿಗೆ ತಿಂಡಿ ಬಿಟ್ಟು ಅಶಕ್ತತೆ ಅನಿಸುತ್ತದೆ; ಸಂಧಿವಾತಜನ್ಯ ವೇದನೆ; ಶ್ರಮ ಹೆಚ್ಚಾಗಿ ಮಾಡಿದರೆ ವೇದನೆ ಹೆಚ್ಚಾಗುತ್ತದೆ, ನಿಧಾನ ವಾಗಿ ನಡೆದಲ್ಲಿ ವೇದನೆ ಮಂದವಾಗುತ್ತದೆ; ಸುಮ್ಮನೆ ಕೂತರೂ ವೇದನೆ; ಸಾವಕಾಶ ನಡೆದಲ್ಲಿಯೇ ಕಡಿಮೆಯಾಗುತ್ತದೆ, ಅಥವಾ ನಿಲ್ಲುತ್ತದೆ; ನೋಯುವ ಸ್ಥಳದಲ್ಲಿ ಗಟ್ಟಿಯಾದಂತೆಯೂ ಜಜ್ಜಿದಂತೆಯೂ ಭಾವನೆ ಯಾಗುತ್ತದೆ. ವಿಶೇಷತಃ ಮುಂಜಾವಿನಲ್ಲಿ ನೋಯುವ ಸ್ಥಳದಲ್ಲಿ ಬಧಿರತೆ ಉತ್ಪನ್ನವಾಡುವ ವೇದನೆ (ಕಲ್ಕೆ. ಫಾ.) ಜಲವಾತ(ಕೈ, ಕಾಲು, ಹೆಬ್ಬಟ್ಟು ಮುಂತಾದವುಗಳಲ್ಲಿ ): ಹೊರ ಲೇಪಮಾಡಿದಲ್ಲಿ ಮತ್ತು ಹೊಟ್ಟೆಯಲ್ಲಿ ಗೆದುಕೊಂಡಲ್ಲಿ ಆ ಸ್ಥಳದಲ್ಲಿಯ ತಿಂಡಿ ಮತ್ತು ಉರುಪು ನಿಲ್ಲುತ್ತದೆ. ವಿಶೇಷ ಶ್ರಮದಿಂದಲೂ ದಣುವಿಕೆಯಿಂದಲೂ ಮೊದಲು ಏಳುವ ಕಾಲಕ್ಕೆ

ವೇದನೆ ಹೆಚ್ಚಾಗಿರುವದು. ಮುಂದೆ ಮೆಲ್ಲಗೆ ನಡೆದಲ್ಲಿ ಕಡಿಮೆಯಾಗುವದು. ಇದು ಕಲ್ಕೆ. ಫಾ. ದ ವೇದನೆಯ ಮುಖ್ಯ ಲಕ್ಷಣವು.

**ನಿದ್ರೆ ಮುಂತಾದ್ದು:—** ಶರೀರದಲ್ಲಿ ಯಾವದೇ ಭಾಗದಲ್ಲಿಯ ಪಕ್ಷ ಘಾತದ ಮೇಲಿನ ಮುಖ್ಯ ಔಷಧವು. ಒಂದು ಕೈ, ಒಂದು ಕಾಲು, ಒಂದು ಪಾರ್ಶ್ವ, ಅರ್ದಿತ ( ಮೋರೆಯ ಒಂದು ಭಾಗದ ವಧಾಂಗ, ಧ್ವನಿ ನಲಿಕೆ ಮತ್ತು ಇತರ ಭಾಗದಲ್ಲಿ ಆಗುವ ವಧಾಂಗ; ಒಮ್ಮೆಲೆ ಆಗಲಿ ಸಾವಕಾಶವಾಗಲಿ ವ್ಯಾಪಿಸುವ ವಧಾಂಗ, ಬಾಲಪಕ್ಷಘಾತ. ( Infantile Paralysis ) ಮುಂತಾದ ವಿಕೃತಿಗಳ ಮೇಲೆ ಇದು ಉತ್ತಮ ಔಷಧವು. ಬಾಲಪಕ್ಷಘಾತದಲ್ಲಿ ಶ್ವಾಸೋಚ್ಛ್ವಾಸಕ್ಕೆ ಶೌಚಕ್ಕೆ, ದುರ್ಗಂಧ ಬರುತ್ತಿದ್ದರೆ, ನಾಲಿಗೆ ಕೆಟ್ಟಿದ್ದರೆ ಈ ಔಷಧವು ನಿಃಸಂದೇಹ ಗುಣಕೊಡುವದು. ಶಕ್ತಿ ಕ್ಷೀಣತೆ; ನವೆಯೋಣ, ಸ್ಪರ್ಶಜ್ಞಾನ ನಷ್ಟವಾಗಿರೋಣ, ನಡೆಯು ವಾಗ ನಡುಗೋಣ, ಜೋಲಿ ಹೋಗೋಣ ಮುಂತಾದ ಬೇನೆಗಳಮೇಲೆ ಇದರ ಉಪಯೋಗವಾಗುತ್ತದೆ. ವಾತಶೂಲಿ ಶರೀರದ ಯಾವದೇ ಭಾಗದಲ್ಲಿರಲಿ,– ವಾತಶೂಲಿಯಲ್ಲಿ ಅಶಕ್ತತೆ ಇದ್ದು ನಿರುತ್ಸಾಹವೂ ಇರುವದಾದರೆ; ಬೆಳಕಿನಲ್ಲಿ, ಸ್ವಲ್ಪ ಕಿಟಿಕಿಟಿಯಾದಲ್ಲಿಯೂ, ಒಬ್ಬರೇ ಕೂತಿದ್ದರೂ ಸ್ವಸ್ಥ ಬಿದ್ದುಕೊಂಡಿದ್ದರೂ ವೇದನೆ ಹೆಚ್ಚಾಗುವದು; ಆಲ್ಹಾದದಾಯಕ ಆಟದಿಂದಲೂ ಮಂದನಡೆಯುವದರಿಂದಲೂ ಸಮಾಧಾನವಾಗೋಣ ಮುಂತಾದ ಭಾವನೆಗಳು ಇದ್ದಲ್ಲಿ ಈ ಔಷಧ ಬಹು ಗುಣಕಾರಿಯಾಗುವದು. ಗೃಧ್ರಸಿ (ಸೊಂಟನೋವು= Sciatica = ಕಾಲಿನ ಹರಿವಾತ ) ಯಲ್ಲಿ ಟೊಂಕದಿಂದ ತೊಡೆಯತನಕ ಮೊಳಕಾಲವರೆಗೆ ಎಳೆದಂತೆ ವೇದನೆಯೂ, ಸೆಟೆಯುವದೂ, ಜಾಡ್ಯವೂ, ತೀರ ಸೋತಂತೆ ಅನಿಸೋಣವೂ ಈ ಲಕ್ಷಣಗಳಿದ್ದರೆ ಈ ಔಷಧವನ್ನು ಕೊಡಬೇಕು. ಕಾರಣವಿಲ್ಲದೆ ರೋಗಿಯು ಧೈರ್ಯ ಬಿಡೋಣ, ಚಂಚಲನಾಗೋಣ, ಅಳಹತ್ತೋಣ, ಬಾಯಿಯಿಂದ ಬುರುಗು ಬಂದು ಅರುವು ತಪ್ಪಿ ಬೀಳೋಣ, ಅಪಸ್ಮಾರ; ಅಪಸ್ಮಾರದ ಸಿಡತಬಂದು ಹೋದನಂತರ, ಚರ್ಯೆಗಲಿತವಾಗಿ ಎದೆಯಲ್ಲಿ ಧಡಿಧಡಿಸುವದು ಮತ್ತು ಮೈತಂಣಗಾಗುವದು; ಈ ಭಾವನೆಗಳಿದ್ದರೆ ಕಾಲೀಮೂರದ ಸಂಗಡ

ಕೊಡಬೇಕು. ಭೀತಿಯಿಂದ ಸಹ ಬಾಯಲ್ಲಿ ಬುರುಗು ಬಂದು ಅರುವು ತಪ್ಪುತ್ತಿದ್ದರೆ ಗಂಟಲಿನಲ್ಲಿ ಗಂಟು ವಾಯು ಬರೋಣವು, ಸರ್ವಾಂಗಕ್ಕೆ ಕಂಪ ಹುಟ್ಟೋಣ ( ನಡುಗು ) ಈ ಭಾವನೆಗಳೂ ಇರುತ್ತವೆ. ಅತಿ ಸ್ತ್ರೀ ಸಂಭೋಗದಿಂದ ಪೃಷ್ಠವಂಶ ಭಾಗದಲ್ಲಿ ಉರುಪು ಬಿಟ್ಟು ರೋಗಿಯು ನಿರುತ್ಸಾಹಿ ಮತ್ತು ನಿರಾಶನಾಗುತ್ತಾನೆ. ಅದೇ ವೇರೆಗೆ ಬೆನ್ನಿನಲ್ಲಿಯೂ ತಲೆಯ ಹಿಂಭಾಗದಲ್ಲಿಯೂ ನೋವು ಇರುತ್ತದೆ. ಮಾನಸಿಕ ಶ್ರಮದಿಂದಲೂ ಚಿಂತೆಯಿಂದಲೂ ನಿದ್ರಾ ನಾಶವಾದಲ್ಲಿ; ನಿದ್ದೆಯಲ್ಲಿಯೇ ಸಣ್ಣ ಹುಡುಗರೂ ದೊಡ್ಡವರೂ ಸಹ ನಡೆಯುಹತ್ತುತ್ತಾರೆ. ಬೆಂಕೆಹತ್ತಿದಂತೆಯೂ, ಕಳ್ಳರು ಬಂದಂತೆಯೂ, ದೆವ್ವನದೂ, ತಾವು ಎಲ್ಲಿಯಾದರೂ ಬಿದ್ದಂತೆಯೂ ಭೀತಿಜನ್ಯ ಸ್ವಪ್ನಗಳು ಬೀಳುತ್ತವೆ. ಹುಡುಗರು ನಿದ್ದೆಯಿಂದ ಅಳುತ್ತ ಏಳುತ್ತವೆ. ನಿದ್ದೆಯಲ್ಲಿ ಕಾಮವಿಷಯಕ ಸ್ವಪ್ನಗಳು ಬೀಳುತ್ತವೆ. ಪ್ರಾತಃಕಾಲದಲ್ಲಿ ಉತ್ಸಾಹದಿಂದ ಏಳುವ ಇಚ್ಛೆಯೇ ಆಗುವದಿಲ್ಲ. ನಿದ್ದೆಯಲ್ಲಿ ಸ್ನಾಯುಗಳು ಹಾರುತ್ತಿರುತ್ತವೆ. ಆಕಳಿಸೋಣ, ಮೈ ಮುರಿಯೋಣ, ದಣಿದಂತೆ ಅನಿಸೋಣ, ಹೊಟ್ಟೆಯಲ್ಲಿ ಕಲಕಲ ಆಗೋಣ, ಮುಂತಾದ ಲಕ್ಷಣಗಳಿದ್ದರೆ ಈ ಔಷಧದಿಂದ ಗುಣಬರುತ್ತದೆ.

**ಜ್ವರ**:— ಚಳಿಜ್ವರದಲ್ಲಿಯೂ ಇತರ ಯಾವದೇ ಜ್ವರದಲ್ಲಿಯೂ ದಣಿವಿಕೆ ತರುವಂಥಾದ್ದೂ ದುರ್ಗಂಧಯುಕ್ತವೂ ಇದ್ದ ಬೆವರು ಬರುವದು; ನಾಡಿಯು ಮಂದವಿರುವದು; ಶೌಚಕ್ಕೂ ಶ್ವಾಸೋಚ್ಛ್ವಾಸಕ್ಕೂ ದುರ್ಗಂಧ ಬರುವದು, ಭ್ರಮ, ವಾತವಾಗುವದು; ಈ ದೋಷಿಕ ಭಾವನೆಗಳು ಇದ್ದಲ್ಲಿ ಈ ಔಷಧದ ಉಪಯೋಗವಾಗುತ್ತದೆ. ನಾಲಿಗೆ ಒಣಗಿದ್ದು, ನಿದ್ದೆಬಾರದೇ ಇರೋದು, ಮಾಂದ್ಯ, ಬಹಳ ಬಡಬಡಿಸೋಣ; ತುಟಿಯಲ್ಲಿ ಪುಟ ಪುಟ ಮಾತಾಡೋಣ, ಜ್ವರ ಬಹಳಿರೋಣ ಮುಂತಾದ ಲಕ್ಷಣಗಳಿದ್ದರೆ ಈ ಔಷಧವನ್ನು ಉಪಯೋಗಿಸಬೇಕು.

**ತ್ವಚೆ**:— ಚಂಚಲ, ಅಧೀರ ಮನಸ್ಸಿನ ರೋಗಿಗಳಿಗೆ ಇಸಬು, ಉಗುರಸುತ್ತು, ಕುರುವು, ಸರೋಲಿ ಆಗುತ್ತವೆ. ಇವುಗಳಿಂದ ಹೊಲಸು ನಾತವಿದ್ದ ಸ್ರಾವ ಹೋಗುತ್ತಿದ್ದಲ್ಲಿ ಈ ಔಷಧದಿಂದ ಗುಣವಾಗುವದು.

ಶರೀರದ ಮೇಲೆ ದೊಡ್ಡ ದೊಡ್ಡ ಹುಣ್ಣುಗಳು ಆಗಿ ಅವುಗಳೊಳಗಿಂದ ರಕ್ತವೂ ನೀರೂ ಸೋರುತ್ತಿದ್ದರೆ, ತ್ವಚೆ ಒಣಗಿದ್ದು ಮುಖಚರ್ಯೆ ಎಳೆದಂತೆ ಇರುವದು. ಮೈಲಿಯ ಬೊಕ್ಕೆಗಳೊಳಗಿಂದ ದುರ್ಗಂಧ ಕೀವು ಹರಿಯುತ್ತಿದ್ದರೆ, ಅಂಗೈ, ಅಂಗಾಲುಗಳಿಗೆ ತಿಂಡಿ ಬಿಡೋಣ; ತ್ವಚೆಗೆ ಇತರ ಸ್ಥಳದಲ್ಲಿ ಸಹ ತಿಂಡಿ ಬಿಡುತ್ತದೆ ಹಾಗೂ ಇರುವು ನಡೆದಂತೆ ಭಾವನೆ; ಮೆಲ್ಲಗೆ ತಿಕ್ಕಿದಲ್ಲಿ ಸಮಾಧಾನವಾಗುತ್ತದೆ; ಗಟ್ಟಿಯಾಗಿ ತಿಕ್ಕಿದಲ್ಲಿ ತ್ವಚೆ ನೋಯುತ್ತದೆ ಹಾಗೂ ಉರಿಯುತ್ತದೆ (ಕಲ್ಕೆ. ಫಾ.) ಜಲವಾತದಲ್ಲಿ (ವಿಶೇಷತಃ ಹೆಬ್ಬೆಟ್ಟು, ಕೈ, ಕಿವಿ) ತುರಿಸುವದು, ಉರುಪು ಕಡಿಮೆ ಕಡಿಮೆಯಾಗಬೇಕಾದರೆ ಇದನ್ನು ಕಾಲಿಮೂರದ ಸಂಗಡ ಕೊಡಬೇಕು. ತ್ವಚೆಯಿಂದ ಉರುಪು ಆಗುವಂಥ ರಸಿಕೆ ಸೋರುತ್ತಿದ್ದರೆ ಇದರ ಉಪಯೋಗವಾಗುತ್ತದೆ.

**ಇತರ ಅವಯವಗಳು:—** ರಕ್ತಕ್ಷೀಣತೆ, ಪಂಡುರೋಗ; ಸವೆಯೋಣ; ದಣಿಸುವಂಥ, ಸೊರಗಿಸುವಂಥ ರೋಗಗಳಲ್ಲಿ; ಶೌಚಕ್ಕೂ ಶ್ವಾಸೋಚ್ಛ್ವಾಸಕ್ಕೂ ದುರ್ಗಂಧ ನಾತ ಬರುವಂಥ ಮುಂತಾದ ವಿಕೃತಿಗಳ ಮೇಲೆ ಇದನ್ನು ಉಪಯೋಗಿಸಬೇಕು. ಶರೀರದ ಯಾವದೇ ಭಾಗದಿಂದ ಕರೇ, ತಿಳುವ, ಗಟ್ಟಿಯಾಗದಂಥ, ಕೊಳಕ ರಕ್ತ ಹೋಗುತ್ತಿದ್ದರೆ. ಸರ್ವಸಾಧಾರಣ ಅಶಕ್ತತೆಯೂ ದಣಿಕೆಯೂ; ಅತಿಶಯ ಸಂಭೋಗದಿಂದಲೂ ಸಂಭೋಗೇಚ್ಛೆಯನ್ನು ತಡೆದದ್ದರಿಂದಲೂ ಆಗುವ ಬೇನೆಗಳು; ರಕ್ತಮಿಶ್ರಿತ, ಹೊಲಸು, ದುರ್ಗಂಧ, ಉರಿಯುವ ಸ್ರಾವ ಮತ್ತು ಕೀವು ಇದ್ದಲ್ಲಿ, ಕೊಳೆಯುವ ಕ್ರಿಯೆ ನಿಲ್ಲಿಸುವ ಪ್ರಮುಖ ಔಷಧವಿದು. ದುರ್ಗಂಧಯುಕ್ತ ಸ್ರಾವ ಹೋಗುತ್ತಿದ್ದರೆ ದುಷ್ಟಗ್ರಂಥಿಯ ಮೇಲೆ (ಗಂಟಿನ ಮೇಲೆ) (Cancer) ವೇದನೆ ಕಡಿಮೆ ಮಾಡಲಿಕ್ಕೆ ಉಪಯೋಗಿಸತಕ್ಕದ್ದು. ಬಾಯಿಬರೋಣ; ಮುಖಪಾಕ, ಬಾಯಿ ಸುಲಿಯೋಣ, ಕಮರತೇಗು ಮತ್ತು ರೇಚ ಇವುಗಳ ಮೇಲೆ.

**ವೃದ್ಧಿ, ಕ್ಷಯ:—** ವಿಶ್ರಾಂತಿ, ಪೌಷ್ಟಿಕ ಅನ್ನ ತಿನ್ನುವದು, ಉಷ್ಣತೆ; ಆಲ್ಹಾದದಾಯಕ ಮನಃಸಂತೋಷದ ಸಾಧನಗಳು (ದಣುವಾರಿಸುವ) ಇವುಗಳಿಂದ ಸಾಧಾರಣತಃ ಸಮಾಧಾನವಾಗುತ್ತದೆ. ಕ್ಷೋಭ

ದಾಯಕ ಸಂಗತಿಗಳು; ಮಾನಸಿಕ, ಶಾರೀರಿಕ ಶ್ರಮ; ಚಿಂತೆ ಮುಂತಾದವುಗಳಿಂದ ಹೆಚ್ಚಾಗುವದು. ಈ ಔಷಧದ ಕೆಲವು ಭಾವನೆಗಳು, ವಿಶೇಷತಃ ವೇದನೆ; ಸ್ವಲ್ಪ ಕಿಟಿಕಿಟಿಯಿಂದ, ಏಳುವಾಗ್ಗೆ ಒಂದೇಸವನೆ ಶ್ರಮ ಮಾಡಿದಲ್ಲಿ ಅಥವಾ ವಿಶ್ರಾಂತಿಯಿಂದ ಸಹ ಏಕಾಂತದಲ್ಲಿ ಸಹ ಹೆಚ್ಚಾಗುತ್ತದೆ. ಚಳಿಯಿಂದ ಸಹ ವೇದನೆ ಬೆಳೆಯುತ್ತದೆ. ಮೆಲ್ಲಗೆ ನಡೆಯೋಣ, ತಿನ್ನೋಣ, ಚಿತ್ತಾಲ್ಹಾದಕ ಹಾಗೂ ಸಮಾಧಾನಕಾರಕ ಸಾಧನೆಗಳಿಂದಲೂ, ಜನರ ಸಹವಾಸದಲ್ಲಿ ಕೂಡೋಣ, ಇವುಗಳಿಂದ ವೇದನೆ ಕಡಿಮೆಯಾಗೋಣ. ಪ್ರಾತಃಕಾಲ ೨ ರಿಂದ ೫ರ ವರೆಗೆ ವೇದನೆ ಹಾಗೂ ತೃಷೆಯು ತಿಂಡಿ ಹೆಚ್ಚಾಗುತ್ತದೆ.

**ಉಪಯೋಗ:**— ಸಾಧಾರಣತಃ ಕಡಿಮೆ ಶಕ್ತಿಯು ಔಷಧಗಳು ಹೆಚ್ಚು ಗುಣಕಾರಿಗಳು. ೬×; ೧೨× ಮತ್ತೂ ಹೆಚ್ಚಿನ ಶಕ್ತಿಯು ಔಷಧಗಳು ಎಷ್ಟೋ ಕಾಲಕ್ಕೆ ಹೆಚ್ಚು ಗುಣಕೊಡುತ್ತವೆ. ದಮ್ಮಿನಲ್ಲಿ ೨× ಇಲ್ಲವೆ ೩× ಶಕ್ತಿಯು ಔಷಧ ಉಪಯೋಗಿಸಬೇಕು. ಪ್ರಸೂತಿಕಾಲದ ಶೂಲಿಗಳು ಕಡಿಮೆಯಾಗಿದ್ದರೆ ೨× ಶಕ್ತಿಯು ಔಷಧ, ಮೇಲಿಂದಮೇಲೆ, ಕೊಟ್ಟರೆ ಕಾರ್ಯಸಿದ್ಧಿಯು ಬೇಗನೆ ಆಗುತ್ತದೆ. ಜಠರವ್ರಣ, ಜಠರವಿಸ್ತಾರ ಕೊಳಕರೇಚ, ವಾಂತಿಸ್ರಾವ, ಅಪಸ್ಮಾರ ಇವುಗಳಮೇಲೆ ೧೨× ಶಕ್ತಿಯನ್ನು ಕೊಡಬೇಕು. ಜ್ವರವನ್ನೂ ಹೆಚ್ಚಾದ ನಾಡಿಯನ್ನೂ ಕಡಿಮೆ ಮಾಡಲಿಕ್ಕೆ ಇತರ ಶಕ್ತಿಯಿಂದ ಗುಣಬಾರದಿದ್ದರೆ ೨ × ಶಕ್ತಿಯನ್ನು ಉಪಯೋಗಿಸಬೇಕು. ಎದೆಯು ಧಡಧಡಿಸುವದು, ಸ್ನಾಯುಗಳ ಸವಕಳಿ; ಸಂಭೋಗಾತಿರೇಕ; ಸಂಭೋಗದ ಅಭಾವ ಇವುಗಳ ಮೇಲೆ ೨೦೦× ಶಕ್ತಿಯು ಔಷಧವು ಚನ್ನಾಗಿ ಉಪಯೋಗವಾಗುವದು. ಆಲೋಪಥಿ ಔಷಧ ತೆಗೆದುಕೊಂಡನಂತರ ಜೀವನ ರಸಾಯನ ಔಷಧ ತೆಗೆದುಕೊಳ್ಳಲಿಕ್ಕೆ ರೋಗಿಯು ಬಂದಾಗ್ಗೆ ಪ್ರಥಮದಲ್ಲಿ ಕಾಲಿ. ಫಾ. ೩೦× ಕೊಡಬೇಕು ಮುಂದೆ ಭಾವನಾನುಸಾರ ಇತರ ಔಷಧ ಕೊಡಬೇಕು.

**ಇತರ ಔಷದಗಳ ಸಂಬಂಧ:**—ಮೂತ್ರಾಶಯದ ಬೇನೆಯಮೇಲೆ ಕಾಲಿ. ಫಾ. ನಂತರ ಮ್ಯಾ. ಫಾ. ಇದನ್ನು ಪೂರಕ ಔಷಧವೆಂದು ಉಪ

ಯೋಗವಾಗುವದು. ಮ್ಯಾ. ಫಾ. ಇದು ನಿಂತು ನಿಂತು ಪುನಃ ತಟ್ಟನೆ ಉದ್ಭವಿಸುವ ರೋಗಗಳಮೇಲೆ ಗುಣಕಾರಕವಿರುತ್ತದೆ. ಕಾಲಿ. ಫಾ. ಇದು ಮಂದಗತಿಯಿಂದ ವ್ಯಾಪಿಸುವ ಸ್ನಾಯುಶೈಥಿಲ್ಯದಮೇಲೆ ( ಪಕ್ಷಘಾತ ದ ಮೇಲೆ ಗುಣಕೊಡುವದು. ಕೆಂಪು, ಕಗ್ಗಸ, ತೆಳ್ಳಸ, ಗಟ್ಟಿಯಾಗದ ರಕ್ತಸ್ರಾವದಮೇಲೆ ಕಾಲಿ. ಫಾ. ದ ನಂತರ ನೇಟ್ರಂ ಮೂರ ಕೊಡಬೇಕು. ಪ್ರಸೂತಿ ಜ್ವರದಲ್ಲಿ ಕಾಲೀಮೂರಕ್ಕೆ ಇದರ ಸಹಾಯುವಾಗುತ್ತದೆ.

**ಪ್ರಮಾಣ:**— ೪ ರಿಂದ ೬ ವಟಿಕಾ ( ಸಂಣ ವಡೆಗಳು ) ಅಥವಾ ೩ ರಿಂದ ೪ ಗುಂಜಿ ಚೂರ್ಣ ೨–೩ ತಾಸಿಗೊಂದು ಸರತಿಯಂತೆ ೪–೬ ಸರತಿ ಕೊಡುವದು. ಅವಶ್ಯ ಕಂಡಲ್ಲಿ ಇದಕ್ಕೂ ತೀವ್ರವಾಗಿ ಕೊಡಲು ಅಡ್ಡಿಯಿಲ್ಲ.

---

# ಕಾಲೀ ಮ್ಯುರಿಯಾಟಿಕಂ

## Kali Muriaticum

**ಇತರ ಹೆಸರು:**—ಪೊಟ್ಯಾಶಿಯಂ ಕ್ಲೋರಾಯಿಡ ಕ್ಲೋರಾಯಿಡ ಆಫ್ ಪೊಟ್ಯಾಶ, ಕಾಲಿಕೊರಿಡಂ ಎಂಬ ಇತರ ಹೆಸರುಗಳು. ಪೊಟ್ಯಾಶಿಯಂ ಕ್ಲೊರೇಟ ಅಥವಾ ಕ್ಲೊರೇಟ ಆಫ ಪೋಟ್ಯಾಶದ್ದೂ ಮೇಲೆ ಹೇಳಿದ ಪೊಟಾಶಿಯಂ ಕ್ಲೊರಾಯಿಡ ಇದರದೂ ಏನೂ ಸಂಬಂಧವಿಲ್ಲ. ಎರಡೂ ಕ್ಷಾರಗಳು ತೀರ ಸ್ವತಂತ್ರವಿರುವವು.

**ಕಾರ್ಯಕ್ಷೇತ್ರ:**—ಕಾಲೀಮೂರ ಎಂಬ ಕ್ಷಾರದ್ದೂ ಶರೀರದಲ್ಲಿಯ ಫಿಬ್ರಿನ್ ಎಂಬ ಪದಾರ್ಥದ್ದೂ ಬಹಳ ಸಂಬಂಧವದೆ. ಆಲ್ಬ್ಯುಮಿನ್ ಪದಾರ್ಥದ ಸಂಯೋಗದಿಂದ ಫಿಬ್ರಿನ್ ಎಂಬ ಪದಾರ್ಥವು ಸಿದ್ಧವಾಗುತ್ತದೆ ಆದರೆ ಕಾಲೀಮೂರ ಎಂಬ ಕ್ಷಾರವು ಶರೀರದಲ್ಲಿ ಯೋಗ್ಯ ಪ್ರಮಾಣದಲ್ಲಿ ಇಲ್ಲದಿದ್ದರೆ ಈ ಸಂಯೋಗವೇ ಸಂಭವಿಸುವದಿಲ್ಲ, ಈ ಕ್ಷಾರದ ಅಭಾವ

ವಿದ್ದಲ್ಲಿ ಎಲುಬಿನಲ್ಲಿ ಹೊಸ ಪಿಂಡದ ಉತ್ಪತ್ತಿಯೇ ಆಗುವದಿಲ್ಲ. ಸ್ನಾಯು, ರಕ್ತಕಣ, ನಾಡಿ, ಎಲುಬು, ಪಿಂಡಗಳಲ್ಲಿಯ ದ್ರವಪದಾರ್ಥ ಮುಂತಾದ ಸ್ಥಳಗಳಲ್ಲಿ ಈ ಕ್ಷಾರವು ಇರುತ್ತದೆ. ಸಿರಗಳ ರಕ್ತದಲ್ಲಿ (ಅಶುದ್ಧ ರಕ್ತದಲ್ಲಿ) ಧಮನಿಗಳಲ್ಲಿಯ ರಕ್ತಕ್ಕಿಂತ ಫಿಬ್ರಿನ್ ಎಂಬ ಪದಾರ್ಥವು ಹೆಚ್ಚು ಪ್ರಮಾಣದಲ್ಲಿ ಇರುತ್ತದೆ. ರಸದ್ರವ್ಯದಲ್ಲಿ ( Lymph ) ಯಂತೂ ಧಮನಿಗಳಲ್ಲಿಯ ಪ್ರಮಾಣಕ್ಕಿಂತ ಕಡಿಮೆ ಪ್ರಮಾಣದಲ್ಲಿರುವದು. ಈ ಕ್ಷಾರವು ಕಡಿಮೆಯಾದ್ದರಿಂದ ಶರೀರದಲ್ಲಿ ಫಿಬ್ರಿನ್ನದ ಉಪಯೋಗವೇನೂ ಆಗುವದಿಲ್ಲ. ಅದು ಶರೀರದಲ್ಲಿ ಅತ್ತ ಇತ್ತ ನಿಷ್ಕ್ರಿಯ ಮತ್ತು ನಿರುದ್ಯೋಗ ಸ್ಥಿತಿಯಲ್ಲಿ ತಿರುಗಾಡುತ್ತಿರುವದು. ಮತ್ತು ತಾಪದಾಯಕ ಪದಾರ್ಥವೆಂದು ಶರೀರದಿಂದ ಪಿಂಡಗಳಿಂದ ಸ್ರಾವರೂಪದಿಂದ ಹೊರಗೆ ದಬ್ಬಿ ಹಾಕಲು ಪ್ರಯತ್ನಮಾಡಲ್ಪಡುತ್ತದೆ. ಆದ್ದರಿಂದ ಸ್ಥಾನಪರತ್ವದಿಂದ ಬೇರೆ ಬೇರೆ ಭಾವನೆಗಳು ಕಂಡುಬರುತ್ತವೆ. ಬಾವು, ಸಂಧಿಶೋಥ, ( ಸಂದುಬಾವು ) ನಾಲಿಗೆ ಶ್ಲೇಷ್ಮಲತ್ವಚೆ ಹಾಗೂ ಕಿರಿನಾಲಿಗೆ ಇವುಗಳ ಮೇಲೆ ಮಣ್ಣಿನಂಥ ಅಥವಾ ಬಿಳೀಬಣ್ಣದಕಿಟ್ಟ ಕೂಡುತ್ತದೆ. (ಅಗ್ರಲೇಪ) ಶ್ಲೇಷ್ಮಲತ್ವಚೆಯೊಳಗಿಂದ ಬಿಳೀ ಜಿಗಟು ಸ್ರಾವ ಬರುವದು ಕಫ ಬಿಳೋಣ, ಉರುಟು ಹಿಟ್ಟಿನಂಥ ಹೊಟ್ಟು ಹಾರೋಣ. ಯಕೃತ ಮಂದವಾಗೋಣ ಮುಂತಾದ ಲಕ್ಷಣಗಳು ಉದ್ಭವಿಸುತ್ತವೆ. ಕಾಲೀಮೂರ ಕ್ಷಾರವು ಕಡಿಮೆಯಾದಲ್ಲಿ ಬಾಹ್ಯತ್ವಚೆ ಪಿಂಡದೊಳಗಿಂದ ಒಂದುತರದ ಕ್ಷೋಭಕ್ಕೆ ಪ್ರಾರಂಭವಾಗುತ್ತದೆ. ಮತ್ತು ಬಿಳೀ ಬಣ್ಣದ ಅಥವಾ ಮಣ್ಣಿನ ಬಣ್ಣದ ಸ್ವರೂಪದಿಂದ ಫಿಬ್ರಿನ್ನವು ಹೊರಬೀಳುತ್ತದೆ. ಅದು ಒಣಗಿದರೆ ಸಣ್ಣ ಸಣ್ಣ ಬೊಕ್ಕಿಗಳಾಗಿ ಅವುಗಳೊಳಗಿಂದ ಹಿಟ್ಟಿನಂಥ ಹೊಟ್ಟು ಬರುತ್ತದೆ. ಇಲ್ಲವೆ ಹಕಳಿಗಟ್ಟುತ್ತವೆ. ಅಂತಸ್ತ್ವಚೆಯಲ್ಲಿ ಈ ಕ್ರಿಯೆಯು ಜೋರಿನಿಂದ ನಡೆದಲ್ಲಿ ಹೊರಗೆ ಮೈಮೇಲೆ ಸುಟ್ಟ ಹುಣ್ಣಿನಂಥ ದೊಡ್ಡ ಹುಣ್ಣುಗಳು ಆಗುತ್ತವೆ. ಮೈಲಿಯಲ್ಲಿ ಇದೇ ರೀತಿಯಾಗುತ್ತದೆ.

ದಾಹಜನ್ಯ ರೋಗಗಳ ದ್ವಿತೀಯಾವಸ್ಥೆಯಲ್ಲಿ ಅಂದರೆ ಸ್ರಾವವು ಹರಿಯಲಾರಂಭವಾದ ನಂತರ ಈ ಔಷಧದಿಂದ ಚನ್ನಾಗಿ ಗುಣವಾಗುವದು.

ದ್ವಿತೀಯಾವಸ್ಥೆಯಲ್ಲಿಯೇ ಸ್ರಾವವು ಹೋಗುತ್ತಿರುತ್ತದೆ. ಮತ್ತು ಆ ಸ್ರಾವದಲ್ಲಿಯೇ ಫಿಬ್ರಿನ್ ಎಂಬ ಪದಾರ್ಥವು ಇರುವದು. ಘಟಸರ್ಪ, ಆಮಾಂಶ, ನ್ಯುಮೋನಿಯಾ, ರಸವಾಹಿನಿಗಳ ವಿಸ್ತಾರ, ಕೆಟ್ಟ ರಸಿಕೆಯಿಂದ ಮೈಲಿ ಚುಚ್ಚಿದ ನಂತರ ಏಳುವ ಬೊಕ್ಕೆಗಳು, ಬೆಳೆಯುವ ಗ್ರಂಥಿ (ಗಂಟು,) ಮತ್ತು ಬಾವು ಮುಂತಾದ ಬೇನೆಗಳಲ್ಲಿ ಈ ಔಷಧ ಚನ್ನಾಗಿ ಗುಣ ಕೊಡುವದು. ಶ್ಲೇಷ್ಮಲತ್ವಚೆಯೊಳಗಿಂದ ಗಟ್ಟಿ, ಬಿಳೀ ಬಣ್ಣದ ಹಾಗೂ ಜಿಗಟು ಸ್ರಾವವು ಹೋಗುವದೂ, (ಕಫ, ಆವು, ಸುಂಬಳ ಮುಂತಾದ ಸ್ರಾವವು) ಹಿಟ್ಟಿನಂಥ ಹೊಟ್ಟು ತ್ವಚೆಯೊಳಗಿಂದ ಹೋಗುವದೂ, ಯಕೃತ ಮಾಂದ್ಯವೂ, ನಾಲಿಗೆ ಬೆಳ್ಳಗಾಗುವದೂ, ಇವೇ ಮುಂತಾದವು ಪ್ರಮುಖ ಲಕ್ಷಣಗಳು. ದಗ್ಧವ್ರಣ (ಸುಟ್ಟದ್ದರಿಂದ ಆಗುವ ವ್ರಣ) ವು ಕಾಲೀ ಮೂರಿಸಿಂದ ನೆಟ್ಟಗಾಗುವದು.

---

## ಪ್ರಮುಖ ಲಕ್ಷಣಗಳು

**ಮಿದುಳು:—** ಉಪವಾಸದಿಂದ ಸಾವು ಬರುವದೆಂದು ರೋಗಿಗೆ ಆಗುವ ಭಾವನೆ; ಕೆಲಹೊತ್ತು ಆನಂದದ ವೃತ್ತಿಯು ಕೆಲ ಕಾಲ ಖಿನ್ನವೃತ್ತಿ; ಸೂರ್ಯೋದಯದ ಕಾಲಕ್ಕೆ ಚಿಂತಾಜನಕ ಸ್ವಪ್ನ ಬೀಳೋಣ.

**ಮಸ್ತಕ:—** ನಾಲಿಗೆಯ ಮೇಲೆ ದಟ್ಟ ಕಿಟ್ಟವಿದ್ದು ತಲೆನೋವು ಇರೋಣ; ತಲೆನೋವು ಇದ್ದಾಗ್ಯೆ ವಾಂತಿಗಳಾಗೋಣ; ದಟ್ಟ ಮತ್ತು ಶ್ವೇತ ಬಣ್ಣದ ಕಫ ಬೀಳೋಣ, ಯಕೃತಮಾಂದ್ಯವಾದ್ದರಿಂದ ಅಂದರೆ ಪಿತ್ತದ ನ್ಯೂನತೆಯಿಂದ ಕ್ಷುಧಾನಾಶವಾಗೋಣ ಮತ್ತು ಅದರಿಂದ ತಲೆಯು ನೋವು ಮಂದವಾಗಿರೋಣ; ಅವರೋಧವಿರೋಣ. ಮಸ್ತಿಷ್ಕದಾಹ ದಲ್ಲಿ ಸಹಾಯಕರ ಔಷಧವೆಂದು ಉಪಯೋಗವಾಗುವದು. ತಲೆಯಲ್ಲಿ ಹೊಟ್ಟು ಆಗೋಣ.

**ನೇತ್ರ:-** ಕಣ್ಣಿನ ಯಾವದೇ ರೋಗದಲ್ಲಿ ಕಣ್ಣಿನಿಂದ ದಟ್ಟ ಬಿಳೀ ಸ್ರಾವ ಹೋಗುತ್ತಿದ್ದಲ್ಲಿ. ಹಳದಿ ಹಾಗೂ ಹಸರು ಸ್ರಾವವಿದ್ದರೆ ಕಾಲೀ

ಮೂರದ ಜೊತೆಗೆ ಕಾಲೀಸಲ್ಫ ಔಷಧವನ್ನು ಕೊಡಬೇಕು. ಕಣ್ಣುರೆಪ್ಪೆಯ ಮೇಲೆ ಸ್ರಾವದ ಕಲೆಗಳಿದ್ದರೆ ಅಥವಾ ಹಳದೀ ಹಕ್ಕಳಿಗಟ್ಟೋಣ (ಕಾಲೀ ಸಲ್ಫ) ಕಣ್ಣುನೋಯೋಣ; ಹುಣ್ಣಿನಲ್ಲಿ ಕಣ್ಣಿನ ಸುತ್ತಮುತ್ತಲು ಚಪ್ಪಟ ಆಕಾರದ ವ್ರಣವಾಗೋಣ. ಅದು ಒಳತನಕ ಹೋಗದೆ ಇದ್ದದ್ದು; ಗುಡ್ಡಿಯ ಮೇಲೆ ಹುಣ್ಣು; ಅರಿಗಳಾಗಿದ್ದರೆ, ಕಣ್ಣಲ್ಲಿ ಚುಚ್ಚಿದಂತಾಗುವದು; ನೇತ್ರದಾಹದ ದ್ವಿತೀಯಾವಸ್ಥೆಯಲ್ಲಿ ಬಿಳಿ, ಗಟ್ಟಿಯಾದ ಪಿಚ್ಚು ಸೋರುತ್ತಿದ್ದರೆ, ಮೋತಿಬಿಂದುವಿನಲ್ಲಿ ಕಲ್ಕೆ ಫ್ಲೊ. ದ ನಂತರ ಇದು ಗುಣಕರವಾಗುವದು. ನೇತ್ರದರ್ಪಣದಾಹ; ಕಣ್ಣಿನ ಯಾವದೇ ರೋಗದಲ್ಲಿ ಪಿಚ್ಚು ಬರಲಿಕ್ಕೆ ಹತ್ತಿದ ನಂತರ, ಕಣ್ಣಿನ ಒಳಭಾಗದಲ್ಲಿ ಕೀವೂ ಪಿಚ್ಚೂ ತುಂಬಿ ನಿಂತಿದ್ದರೆ, ತೀವ್ರವಾಗಿ ನೆಟ್ಟಗಾಗದ ವ್ರಣ; ವ್ರಣವು ಕೆಂಪಗಾಗಿದ್ದು ಅದರೊಳಗಿಂದ ಹೊಲಸೂ ಬಿಳೀದೂ ಹಳದೀ ಪಿಚ್ಚು ಬರುತ್ತಿದ್ದರೆ.

**ಕಿವಿ:—** ಕಿವಿಯ ಹತ್ತರವಿದ್ದ ಗ್ರಂಥಿಯು ಬಾವು ಹಾಗೂ ಅದರಿಂದಾಗುವ ಕಿವಿಶೂಲಿ; ನಾಲಿಗೆ ಬಿಳೀ ಮತ್ತು ಬೂದಿಬಣ್ಣದ್ದು ಇದ್ದರೆ ವಿಶೇಷ ಉಪಯೋಗವಾಗುವದು. ಕಿರಿನಾಲಿಗೆ ಮತ್ತು ಕರ್ಣನಲಿಕೆಗಳಲ್ಲಿ ಕಿವಿನೋವಿನ ವೇದನೆಗಳು ( ಫೆರಂ. ಫಾ ); ಅಂತಃಕರ್ಣ, ಮಧ್ಯಕರ್ಣ, ಬಹಿಷ್ಕರ್ಣ ಕರ್ಣನಲಿಕೆ ಇವುಗಳ ಬಾವಿನಿಂದಲೂ ಗಂಟಲ ಬೇನೆಯಿಂದಲೂ ಬಂದ ಬಧಿರತೆ; ನುಂಗುವಕಾಲಕ್ಕೆ, ಮೂಗಿನಿಂದ ಶ್ವಾಸ ತೆಗೆದುಕೊಳ್ಳುವ ಕಾಲಕ್ಕೆ ಕಿವಿಯಲ್ಲಿ ಮುರಿದಂತೆ ಸಪ್ಪಳವಾಗೋಣ; ಗಂಟಲಬೇನೆಯಿಂದ ಕಿವಿಗಳ ಸುತ್ತಮುತ್ತಲಿನ ಗ್ರಂಥಿಗಳು ಬಾತಿರುವಾಗ್ಗೆ; ಕಿವಿಯಮೇಲೆ ಗುದ್ದಿದಂತೆ, ಕಿವಿಯಲ್ಲಿ ಕಡಕಡಮುರಿದಂತೆ; ಸೀಳಿದಂತೆ ಸಪ್ಪಳವಾದಾಗ್ಯೆ; ಕಿವಿಯ ತಾತ್ಕಾಲಿಕ ಅಥವಾ ಬಹಳ ದಿವಸದ ಸೀತವು (ಫೆರಂ. ಫಾ.)

**ಮೂಗು —** ಒಣಸೀತವು; ಮೂಗು ದಟ್ಟಿಸಿದಂತೆ; ತಲೆಮಂದ; ನಾಲಿಗೆಯಮೇಲೆ ದಟ್ಟ, ಬಿಳೀಬಣ್ಣದ ಕಿಟ್ಟ ಇದ್ದು ಬಿಳೀ ದಟ್ಟ ಸುಂಬಳ ಹೋಗುತ್ತಿದ್ದರೆ. ಮಧ್ಯಾಹ್ನದಲ್ಲಿಯೂ ರಾತ್ರಿಯಲ್ಲಿಯೂ ಮೂಗು ಬಿಚ್ಚೋಣ (ಒಡೆಯೋಣ); ಉಪದಂಶಜನ್ಯ ಪಿನಸಿ ಇದ್ದರೆ.

**ಮುಖಚರ್ಯೆ:**— ಮುಖದಮೇಲೆ ಬಾವು ಮತ್ತು ವೇದನೆ; ಫೆರಂಫಾಸದ ಸಂಗಡ ಅದಲುಬದಲು ಮಾಡಿ ಕೊಡಬೇಕು. ಮುಖದ ಎಡಭಾಗವು ಕೆಂಪು ಆಗುತ್ತದೆ; ಮೋರೆಯಮೇಲೆ ಕಲೆಗಳು ಬೀಳುತ್ತವೆ. ಅರ್ದಿತ ( ಮೋರೆಯ ಪಕ್ಷಘಾತ=ಮೋರೆಯು ಡೊಂಕಾಗೋಣ ) ಚಳಿಯಿಂದ ತುಟಿ ಒಡೆದದ್ದು; ನಾವಲಿಗರ ಕತ್ತಿ ಹತ್ತಿದ್ದರಿಂದಾಗುವ ಕಜ್ಜಿ (ಹುಣು) ಗಂಡಮಾಲೆ;

**ಮೋರೆ:**— ಮುಖಪಾಕ (ಬಾಯಿ ಸುಲಿದದ್ದು) ಬಾಯಿಬಂದದ್ದು; ಸಣ ಹುಡುಗರ ಮೋರೆಯಮೇಲಿನ ಶ್ವೇತ ವ್ರಣ, ಮೊಲೆ ಕುಡಿಯುವ ಮಕ್ಕಳಿಗೆ ಅಥವಾ ಅಂಥ ಮಕ್ಕಳ ತಾಯಂದಿರ ಬಾಯಿಯಲ್ಲಿ ಆಗುವ ಶ್ವೇತ ವ್ರಣ; ಜೊಲ್ಲು ಬಹಳ ಹೋಗುವದು (ನೇಟ್ರಂ. ಮೂ) ಗದ್ದದಲ್ಲಿಯ ಮತ್ತು ಕುತ್ತಿಗೆಯಲ್ಲಿಯ ಗ್ರಂಥಿಗಳು ಬಾತದ್ದು;

**ನಾಲಿಗೆ:**— ನಾಲಿಗೆ ಬಾತದ್ದು; ದಾಹಯುಕ್ತ; ನಾಲಿಗೆಯ ಮೇಲೆ ಬಿಳೇ ಅಗ್ರ, ಅಥವಾ ಬೂದಿಬಂಣದ ಅಗ್ರ; ನಾಲಿಗೆಯು ಒಣಗಿದ್ದು ಮತ್ತು ಜಿಗಟು;

**ಹಲ್ಲು:**— ಒಸಡಿಗಳೂ ಮುಖವೂ ಬಾತದ್ದಿದ್ದರೆ ಇದು ಹೆಚ್ಚು ಗುಣಕರ; ಕೀವು ಆಗುವ ಪೂರ್ವದಲ್ಲಿ ಒಸಡಿಯ ಮೇಲೆ ಆಗುವ ಹುಂಣಿಗೆ ಫೆರಂ. ಫಾ. ಮತ್ತು ಈ ಔಷಧವನ್ನು ಒಂದರನಂತರ ಮತ್ತೊಂದು ಹೀಗೆ ಕೊಡಬೇಕು. ಕೀವು ಆದನಂತರ (ಸಿ.)

**ಗಂಟಲು:**— ಘಟಸರ್ಪದ ( Dphtheria ) ರೋಗವುಳ್ಳ ಎಷ್ಟೋ ರೋಗಿಗಳಿಗೆ ಫೆರಂ. ಫಾ. ದ ಸಂಗಡ ಈ ಔಷಧ ಕೊಟ್ಟಲ್ಲಿ ಕಾರ್ಯವಾಗುವದು. ಈ ಔಷಧ ನೀರಿನಲ್ಲಿ ಹಾಕಿ ಅದೇ ಔಷಧದ ನೀರಿನಿಂದ ಬಾಯಿ ಮುಕ್ಕಳಿಸಬೇಕು. ೨×, ૩× ಶಕ್ತಿಯ ಔಷಧದ ೧೦–೧೫ ಗ್ರೇನ (೭–೮ ಗುಂಜಿ) ತೆಗೆದುಕೊಂಡು ಒಂದು ಬಟ್ಟಲತುಂಬ ಸ್ವಚ್ಛ ನೀರಿನಲ್ಲಿ ಹಾಕಿ ಇದೇ ನೀರಿನಿಂದ ಯಾವದೇ ಗಂಟಲ ನೋವಿಗೆ ಮೇಲಿಂದಮೇಲೆ ಮುಕ್ಕುಳಿಸಿದಲ್ಲಿ ಗುಣವಾಗುವದು. ಗಂಡಮಾಲೆಯ ರೋಗದಲ್ಲಿ ಫೆರಂ ಫಾಸಿನ ಸಂಗಡ ಇದನ್ನು ಕೊಡಬೇಕು. ಆದರೆ ಜೊಲ್ಲು ಬಹಳ ಹೋಗು

ತ್ತಿದ್ದರೆ ಹಾಗೂ ಅಂಡಾಶಯವು ಬಾತಿದ್ದರೆ ನೇಟ್ರಂಮೂರದ ಜೊತೆಗೆ ಕೊಡತಕ್ಕದ್ದು. ಅಧೋಜಿವ್ಹಾ ಗ್ರಂಥಿಯು ಬಾವು; ಗಂಟಲು ಬಾತದ್ದು; ಗಂಟಲದಲ್ಲಿ ವ್ರಣ; ನಾಲಿಗೆ ಬಿಳೇ ಅಥವಾ ಬೂದಿ ವರ್ಣದ್ದು, ಕಿರಿ ನಾಲಿಗೆಯು ವಿಸ್ತಾರವೂ ದಾಹವೂ, ಬಾವೂ, ಮುಂತಾದ ಲಕ್ಷಣಗಳಮೇಲೆ ಹಿತಕರ. ಉಪಜಿವ್ಹೆಯುಮೇಲೆ ಮತ್ತು ಗಂಟಲದಲ್ಲಿ ಬಿಳೇ ಇಲ್ಲವೆ ಬೂದಿ ಬಣ್ಣದ ಕಲೆಗಳು ಕಂಡಲ್ಲಿ; ಉಪದಂಶಜನ್ಯ ಗಂಟಲ ಬೇನೆಯಲ್ಲಿ; ನುಂಗುವ ಕಾಲಕ್ಕೆ ಗಂಟಲು ನೋಯುವದು. ಗಂಟಲದೊಳಗಿಂದ ಸಣ್ಣ ಸಣ್ಣ ಕಫದ ಗಂಟುಗಳು ಬಿಳೋಣ. ಧ್ವನಿಯು ಕೂತದ್ದು.

**ಜಠರ:—** ಯಕೃತಮಾಂದ್ಯದಿಂದಾಗುವ ಕ್ಷುಧಾಮಾಂದ್ಯ; ಪಿತ್ತ ಪ್ರಕೋಪ; ನಾಲಿಗೆ ಬಿಳೇಬಣ್ಣದ ಅಥವಾ ಬೂದಿ ಬಣ್ಣದ್ದು; ಅಗ್ನಿಮಾಂದ್ಯ ಮತ್ತು ಅಜೀರ್ಣದಲ್ಲಿ ನಾಲಿಗೆ ಬಿಳೇ ಅಥವಾ ಬೂದಿ ವರ್ಣದ್ದಿದ್ದು ಬಲ ಭುಜದ ಕೆಳಗೆ ಜಡವೆನಿಸಿ ವೇದನೆ ಆಗುತ್ತಿದ್ದಲ್ಲಿ; ಕಣ್ಣು ಹಿಗ್ಗಿದಂತಾಗಿ ಮುಂದೆ ಎದ್ದುಬಂದಂತೆ ಕಾಣಿಸುವದು; ನೆಣಯುಕ್ತ ಪದಾರ್ಥಗಳನ್ನು ತಿಂದದ್ದರಿಂದ ಹೊಟ್ಟೆಯಲ್ಲಿ ಸಣ್ಣಾಗಿ ನೋವು. ಹೋಳಿಗೆ ಮುಂತಾದ ಅನ್ನವು ಹೊಟ್ಟೆಗೆ ತಡೆಯುವದಿಲ್ಲ. ಅದರಿಂದ ಹೊಟ್ಟೆಯಲ್ಲಿ ಕಾವು ಆಗುತ್ತದೆ ನೋಯುತ್ತದೆ, ಬಾಯಿಗೆ ನೀರು ಬಿಡುತ್ತದೆ. ಅಪಚನದಲ್ಲಿ ವಾಂತಿಯೂ ಆಗುತ್ತದೆ. ಬಿಳೇಬಣ್ಣದ ಜಿಗಟು ಕಾರಿಕೆಯೂ ಬರುತ್ತದೆ. ಜಠರದಾಹ— ವಿಶೇಷತಃ ಉಷ್ಣಪೇಯ ಸೇವನದಿಂದಾಗಿದ್ದರೆ— ಇದರಿಂದ ಹಿತವಾಗುತ್ತದೆ (ಫೆರಂ. ಫಾ). ಯಕೃತ ಮಾಂದ್ಯದಿಂದ ಅಪಾನವಾಯು ಸರಿಯುತ್ತದೆ. ಹಾಗೂ ಕಾಮಣಿಯೂ ಇರುತ್ತದೆ? ಅವರೋಧವು ಅತಿಶಯ. ಹೊಟ್ಟೆ ಶೂಲಿಯಲ್ಲಿ ದಪ್ಪ ಹಾಗೂ ಬಿಳೇಬಣ್ಣದ ಕಫದ್ದಾಗಲಿ ಕರ್ರಸ ದಪ್ಪ ರಕ್ತದ್ದಾಗಲಿ ಕಾರಿಕೆಯು ಆಗುತ್ತದೆ. ಅದೇಕಾಲಕ್ಕೆ ಅವರೋಧದ ಭಾವನೆಯೂ ಬಹಳಮಾಡಿ ಇರುತ್ತದೆ.

**ಉದರ ಮತ್ತು ಮಲ:—** ಚಳಿಯ ಮೂಲಕ ಸೀತವಾಗಿ ಅದರಿಂದಾಗುವ ಕಾಮಿಣಿ. ಇಂಥ ಕಾಲದಲ್ಲಿ ಮಲವು ಬಿಳೇಬಣ್ಣದ್ದು ಇರುತ್ತದೆ. ಯಕೃತವು ತನ್ನ ಕಾರ್ಯವನ್ನು ಮಾಡಲು ಅಸಮರ್ಥ,

ಯಕೃತದಲ್ಲಿ ಅಥವಾ ಬಲಭುಜದ ಕೆಳಗೆ ನೋಯುತ್ತದೆ; ಯಕೃತದಲ್ಲಿಯು ರಕ್ತಸಂಚಯು (Conjestion) ಬಹಳ ದಿವಸದ್ದು; ಆದರಿಂದ ಯಕೃತ ವೃದ್ಧಿ! ಹಳದೀ ಬಿಳೀಬಣ್ಣದ ಮಲ; ನಾಲಿಗೆಯು ಮೇಲೆ ಬಿಳೀ ಹೊಲಸು ಕಿಟ್ಟ; ಅವರೋಧವಿದ್ದು ಕಣ್ಣುಗಳು ಮುಂದೆಬಂದಂತೆ ಕಾಣುತ್ತವೆ. ಸನ್ನಿಪಾತ ಜ್ವರದಲ್ಲಿ ನಾಲಿಗೆಯು ಬೆಳ್ಳಗೆ ಇರುತ್ತದೆ, ಮತ್ತು ಬಿಳೀಬಣ್ಣದ ತೆಳ್ಳನ್ನ, ಬುರುಗಿನಂಥ ಮಲವು ಹೋಗುತ್ತದೆ. ಉದರ ಭಾಗವು ಬಾತದ್ದು ಇದ್ದು ಸ್ಪರ್ಶ ಸಹಸವಾಗದು. ಮಲದೊಳಗಿಂದ ಕರ್‍ರನ್ನ ಗಟ್ಟಿಯಾದ ರಕ್ತವು ಹೋಗುತ್ತದೆ. ಬಿಳೀ ದಾರದಂಥ ಬಡಕ ಜಂತು; ಅದರಿಂದ ಗುಹದ್ವಾರದಲ್ಲಿ ತಿಂಡಿ ಬಿಡುತ್ತದೆ. (ನೆಟ್ರಂ. ಫಾಸ.) ಉದರ ಭಾಗವು ವಾತದಿಂದ ಬಾತಿದ್ದು ವಾಯುವು ಸರಿಯುತ್ತದೆ. ಉದರಾವರಣದಾಹ; ಆಂತ್ರವಿದ್ರಧಿ ( ಕರಳಿನ ಮೇಲಿನ ಕುರುವು ) ಮುಂತಾದ ರೋಗಗಳ ದ್ವಿತೀಯಾವಸ್ಥೆಯಲ್ಲಿ ಈ ಔಷಧವನ್ನು ಕೊಡತಕ್ಕದ್ದು. ಹೋಳಿಗೆ ಹಾಗೂ ನೆಣಯುಕ್ತ ಪದಾರ್ಥಗಳು ಹೊಟ್ಟೆಗೆ ಬಾಧಕವಾಗುತ್ತವೆ; ಅದರಿಂದ ಅವರೋಧವೂ ಶೌಚಕ್ಕೂ ಬೆಳ್ಳಗೆ ಆಗುತ್ತದೆ. ಆಗಾಗ್ಗ ಶೌಚಕ್ಕೆ ಆಗುತ್ತದೆ. ಬೆಳ್ಳಗೆ, ಹಳದಿ, ಜಿಗಟು ಶೌಚಕ್ಕೆ ಆಗುತ್ತದೆ. ಆಮಾಂಶ, ಜಿಗಟು, ರಕ್ತಯುಕ್ತ ಮಲ. ಹೊಟ್ಟೆ ಕಡಿದು ಮೇಲಿಂದಮೇಲೆ ಶೌಚಕ್ಕೆ ಹೋಗಬೇಕಂತ ಅನಿಸುತ್ತದೆ. ತಿಣಕುವ ಕಾಲಕ್ಕೆ ಗುದದ್ವಾರದಲ್ಲಿ ಬಹಳ ನೋವು. ಫೇರಂಫಾಸದ ಸಂಗಡ ಕೊಟ್ಟಲ್ಲಿ ಬಹುತರ ಗುಣ ಬರುತ್ತದೆ. ಹೊಟ್ಟೆ ಮುರಿಯುವದು ಬಹಳವಿದ್ದರೆ ಮ್ಯಾ. ಫಾ. ಕೊಡ ಬೇಕಾಗುವದು. ರಕ್ತ ಮೂಲವ್ಯಾಧಿಯಲ್ಲಿ ಕರ್‍ರನ್ನ ಗಟ್ಟಿಗಟ್ಟಿಯಾಗುವಂಥ ರಕ್ತ ಬೀಳುತ್ತಿದ್ದಲ್ಲಿ ಇತರ ಔಷಧದ ಜೊತೆಗೆ ಒಂದರನಂತರ ಮತ್ತೊಂದು ಹೀಗೆ ಕೊಡಬೇಕು.

**ಮೂತ್ರೇಂದ್ರಿಯ:—** ಬಹಳ ದಿವಸದ ಬೇನೆ ಇದ್ದಲ್ಲಿ ಮೂತ್ರಾಶಯುದ ದ್ವಿತೀಯಾವಸ್ಥೆಯಲ್ಲಿ ಇದೇ ಪ್ರಮುಖ ಔಷಧವು. ಬಾವು ಇದ್ದು ದಪ್ಪ, ಬಿಳೀ, ಜಿಗಟು ಸ್ರಾವವು ಹೋಗುತ್ತಿದ್ದಲ್ಲಿ ಮೂತ್ರಾಶಯು ಪಿಂಡದ ದಾಹಜನ್ಯ ವಿಕಾರಕ್ಕೆ ಇದನ್ನು ಕೊಡತಕ್ಕದ್ದು. ಮೂತ್ರವು ಕರೇಬಣ್ಣದ್ದು

ಯಕೃತವಾಂದ್ಯ ಮೂಲಕ ಯೂರಿಕ್ ಅಸಿಡದ ಗಸಿಯು ಕೆಳಗೆ ಕೂಡು ತ್ತದೆ. ( ನೇಟ್ರಂ ಸ. )

**ಪುರುಷರ ಜನನೇಂದ್ರಿಯ:—** ಪ್ರಮೇಹಕ್ಕೂ, ಪ್ರಮೇಹ ಮುಚ್ಚಿಟ್ಟುಕೊಂಡು ಉಪಚಾರಮಾಡದ್ದರಿಂದ ಆಗುವ ಅಂಡಾಶಯ ದಾಹಕ್ಕೂ, ಉಡುಚಿನಲ್ಲಿಯು ಮೆತ್ತನ್ನ ಬಾವಿಗೂ ಮೃದು ಚೆಟ್ಟಿ ( ತೊಗಲು ಕಡಿದಂತೆ ಕಾಣಿಸುವ ಸಣ ಹುಣ್ಣು ) ಗಳಿಗೂ ಕಲ್ಕೆ. ಫಾ. ಇದು ಪ್ರಮುಖ ಔಷಧವು. ೩× ಶಕ್ತಿಯ ಔಷಧವನ್ನು ಕೊಡಬೇಕು. ಬಹಳ ದಿವಸದ ಉಪದಂಶವೂ ಪ್ರಮೇಹವೂ, ಪ್ರಮೇಹದಲ್ಲಿ ಇಸಬು ಇದ್ದಲ್ಲಿಯೂ, ನಾಲಿಗೆಯು ಬೆಳ್ಳಗೆ ಮತ್ತು ಬೂದಿಬಣ್ಣದ್ದು ಇದ್ದಾಗ್ಗೆ ಈ ಔಷಧವು ಬಹಳೇ ಹಿತಕರ. ಮುಲಾಮು ಮಾಡಿಯೂ ಧಾವನಸಿದ್ಧ ಮಾಡಿಯೂ ಹೊರಗಿನಿಂದ ಹಚ್ಚಬಹುದು.

**ಸ್ತ್ರೀಯರ ಜನನೇಂದ್ರಿಯ:—** ನಷ್ಟಾರ್ತವ ( ಮುಟ್ಟು ಆಗದೇ ಇರೋಣ ); ಮುಟ್ಟು ತಡವಾಗಿ ಆಗೋಣ; ಪ್ರತಿಬಂಧವಾಗೋಣ; ಎಷ್ಟೋ ಸಾರೆ ತಡವಾಗಿ ಆಗುತ್ತದೆ ಮತ್ತು ಬಹಳಾಗುತ್ತದೆ; ಡಾಂಬರಿಸಂತೆ ಕಪ್ಪಗೆ, ಜಿಗಟು, ಗಟ್ಟಿಯಾಗಿ ಆಗುವದು; ತೀವ್ರವಾಗಿ ಮುಟ್ಟು ಆಗು ವದು; ( ಕಾಲಿ. ಫಾ. ) ಪ್ರದರವು ಸ್ವಚ್ಛ ಹಾಲಿನಂತೆ ಬೆಳ್ಳಗೆ, ದಟ್ಟನದು; ಉರಿಯುದಂಥ ಸ್ರಾವವಿದ್ದರೆ ಈ ಔಷಧವು ಹಿತಾವಹವು; ಗರ್ಭಾಶಯ ದ್ವಾರದಲ್ಲಾಗಲಿ ಗರ್ಭಾಶಯುದ ಕುತ್ತಿಗೆಯಲ್ಲಾಗಲಿ ಆಗುವ ವ್ರಣದಿಂದಾ ಗುವ ಸ್ರಾವವು ದಟ್ಟ, ಬೆಳ್ಳಗೆ ಹಾಗೂ ಉರಿಯುದಂತಾದ್ದು ಇದ್ದರೆ, ಗರ್ಭಾಶಯುದ ಬಾವು ಕಡಿಮೆಯಾಗಬೇಕಾದರೆ ಈ ಔಷಧ ಕೊಟ್ಟಲ್ಲಿ ಗುಣ ವಾಗುತ್ತದೆ. ಗರ್ಭಾಶಯುವು ಗಟ್ಟಿ ಹತ್ತುತ್ತಿದ್ದರೆ (ಕಲ್ಕೆರಿಯಾ ಫ್ಲೊ.). ಗರ್ಭಿಣಿ ಹೆಂಗಸರಿಗೆ ಆಗುವ ವಾಂತಿ, ನಾಲಿಗೆಯು ಬಿಳೇದಿದ್ದು ಕಾರಿಕೆಯೊಳಗಿಂದ ಬಿಳೇ ಕಫವು ಬೀಳುತ್ತಿದ್ದರೆ, ಸ್ತನವಿದ್ರಧಿ(ಸ್ತನದ ಮೇಲೆ ಆಗುವ ಹುಣ್ಣು) ಕೀವು ಆಗುವ ಪೂರ್ವದಲ್ಲಿ ಬಾವು ಇಲ್ಲದಂತೆ ಮಾಡ ಬೇಕಾದರೆ, ಪ್ರಸೂತಿ ಜ್ವರದ ಮೇಲಿನ ಪ್ರಮುಖ ಔಷಧವು. ಫೇರಂಫಾ ಸದ ಜತೆಗೆ ಕೊಡತಕ್ಕದ್ದು. ಕೀವು ಇದ್ದು ಜ್ವರ; ಭ್ರಮ; ವಾತ, ಬಡ ಬಡಿಸುವದು; ಹುಚ್ಚು ಮುಂತಾದ್ದು ( ಕಾಲೀ. ಫಾ. )

**ಶ್ವಸನೇಂದ್ರಿಯಗಳು:–** ಶ್ವಸನೇಂದ್ರಿಯಗಳ ದಾಹಯುಕ್ತರೋಗದ ದ್ವಿತೀಯಾವಸ್ಥೆಯಲ್ಲಿ; ದಪ್ಪ, ಜಿಗಟು, ಹಾಲಿನಂತೆ ಬಿಳೀ ಕಫ ಬೀಳುವದು ಇವೇ ಪ್ರಮುಖ ಲಕ್ಷಣಗಳು. ಈ ಲಕ್ಷಣಗಳಿದ್ದು ಕೆಮ್ಮು ಬಲವತ್ತರವಿದ್ದರೆ ಕ್ಷಯದಲ್ಲಿ ಈ ಔಷಧವು ಹಿತಕರವು. ಕೆಮ್ಮು ಬಲವತ್ತರವಿದ್ದು ಹೊಟ್ಟೆಯೊಳಗಿಂದ ಬರುವದೂ ತ್ರಾಸದಾಯಕವೂ ಇದ್ದಲ್ಲಿ, ಕೆಮ್ಮಿನಲ್ಲಿ ಬಿಳೀ ಕಫ ಬಿದ್ದಲ್ಲಿ, ನಾಲಿಗೆಯು ಬೆಳ್ಳಗೆ ಇದ್ದು ಕಣ್ಣುಗಳು ಮುಂದೆ ಬಂದಂತೆ ಇದ್ದರೆ, ಕೋಡಗಕೆಮ್ಮಿನಂತೆ ಶ್ವಾಸ ಎಳಕೊಳ್ಳುವ ಸ್ವಲ್ಪ ಕೆಮ್ಮು ಇದ್ದರೆ ( ಫೆರಂ. ಫಾ. ); ನ್ಯುಮೋನಿಯಾ, ( ಶ್ವಸನಕ ಜ್ವರ ) ಪ್ಲ್ಯುರಿಸಿ ( ಫುಪ್ಫುಸಾವರಣ ದಾಹ) ಇವುಗಳಲ್ಲಿ ಸ್ರಾವವು ಪ್ರಾರಂಭವಾದ ನಂತರ, ಅಂದರೆ ದ್ವಿತೀಯಾವಸ್ಥೆಯಲ್ಲಿ ದಟ್ಟ, ಬಿಳೀ, ಜಿಗಟು, ಕಫವು ಬೀಳು ತ್ತಿದ್ದರೆ ಇದರ ಉಪಯೋಗವಾಗುತ್ತದೆ. ಅಪಚನದಿಂದಾಗುವ ದಮ್ಮು, ನಾಲಿಗೆ ಬಿಳೀದಿದ್ದು ಕಫವೂ ಬಿಳೀದಿದ್ದು ನೈಲಾಗಿ ಹೊರಗೆ ಬಿದ್ದು ಹೋಗ ಬೇಕಾದರೆ ಬಹಳೇ ಕಷ್ಟ. ಕೆಮ್ಮಿನ ಕಾಲಕ್ಕೆ ಹುಡುಗರಿಗೆ ಉಸುರು ಕಟ್ಟಿದಂತಾಗುತ್ತದೆ. ಮತ್ತು ಗಂಟಲು ತುಂಬಿ ಬರುತ್ತದೆ ಮತ್ತು ಧ್ವನಿಯು ಕೂಡುತ್ತದೆ. ಚಳಿಯ ಮೂಲಕ ಘರಘರಿಸುವ ಧ್ವನಿ. ಕೋಡಗಕೆಮ್ಮಿನಲ್ಲಿ ಗಂಟಲದಲ್ಲಿ ಘರಘರಿಸುತ್ತದೆ ( ಘರಘರವೆಂಬ ಸಪ್ಪ ಳಾಗುತ್ತದೆ) ಒಡೆದಂತೆ ಧ್ವನಿಯು ಕೇಳಬರುತ್ತದೆ. ಮತ್ತು ಕಫವು ಸಡಿಲಾಗಬೇಕಾದರೆ ಬಹಳೇ ಕಷ್ಟವಾಗುತ್ತದೆ.

**ರುಧಿರಾಭಿಸರಣ:—** ಹೃದಯ ವೃದ್ಧಿಯ ಮೂಲಕ ಹೃದಯದ ಕಡೆಗೆ ರಕ್ತಸ್ರಾವವು ಜೋರಿನಿಂದ ಆಗುತ್ತದೆ. ಅದರಿಂದ ಹೃದಯದಲ್ಲಿ ಧಡಧಡಿಸುತ್ತದೆ. ಹೃದಯಾವರಣ ದಾಹದ ದ್ವಿತೀಯಾವಸ್ಥೆಯಲ್ಲಿ (ಫೇರಂ ಫಾ.) ರಕ್ತವಾಹಿನಿಗಳಲ್ಲಿ ಹರಿಯುವಾಗಲೇ ರಕ್ತವು ಗಟ್ಟಿಯಾಗಿ ಅದರ ಗಂಟಾಗುತ್ತದೆ. (ಎ. ಬಾ. ಲಿಝುವ್. ) ಮತ್ತು ಅದರಿಂದ ರಕ್ತಪ್ರವಾಹವು ನಿಲ್ಲುತ್ತದೆ ( ಫೆ. ಫಾ. )

**ಕುತ್ತಿಗೆ ಮತ್ತು ಬೆನ್ನು:—** ಕುತ್ತಿಗೆಯಲ್ಲಿಯ ಗ್ರಂಥಿಗಳು (ಗಂಟು ಗಳು ) ಬಾತದ್ದು.

**ಕೈಕಾಲುಗಳು:—** ಸಂಧಿವಾತ ಜ್ವರ; ಸಂದುಗಳಲ್ಲಿ ಬಾವು ಮತ್ತು ವೇದನೆ; ನಡೆದಾಡಿದ್ದರಿಂದಲೂ ಅಲ್ಲಾಡಿದ್ದರಿಂದಲೂ ವೇದನೆ ಹೆಚ್ಚಾಗಿ ನಾಲಿಗೆಯು ಬಿಳೇದಿದ್ದರೆ( ಫೇರಂ. ಫಾ. ); ದೀರ್ಘಕಾಲದ ಸಂಧಿವಾತದಲ್ಲಿ ಬಾವು ಇದ್ದು ಅಲ್ಲಾಡಿದ್ದರಿಂದ ಹೆಚ್ಚಾಗುವ ವೇದನೆಗಳಿರುತ್ತವೆ ಆಗ್ಗೆ. ಸಂದುಗಳಲ್ಲಿಯ ವೇದನೆ ರಾತ್ರಿಯಲ್ಲಿಯೂ ಹೊದಿಕೆಯ ಕಾವಿನಿಂದಲೂ ಹೆಚ್ಚಾಗುತ್ತಿದ್ದರೆ. ಟೊಂಕದಿಂದ ಕಾಲಿನವರೆಗೆ ಬಹಳೇ ವೇದನೆಯುಳ್ಳ ಕಳೆ ಬರುತ್ತಿದ್ದರೆ, ಕಳೆಬಂದನಂತರ ಹಾಸಿಗೆಯಲ್ಲಿ ಎದ್ದು ಕೂಡಲೇಬೇಕು; ಬರೆಯುವ ಕಾಲಕ್ಕೆ ಬಟ್ಟುಗಳಿಗೆ ಒರಟೆ ಬರುತ್ತದೆ. ಕೈಕಾಲಿನಲ್ಲಿಯ ಬಾವು ಬಹುದಿವಸದ್ದು; ಇದರಲ್ಲಿ ವೇದನೆ ಇರುವದಿಲ್ಲ, ಆದರೆ ತಿಂಡಿ ಮಾತ್ರ ಬಹಳ ಇರುತ್ತದೆ. ಶರೀರದಲ್ಲಿ ಬಾವು ಯಾವದೇ ಭಾಗದಲ್ಲಿ ಇರಲಿ ಕಾಲೀಮೂರದಿಂದ ಅದು ನೆಟ್ಟಗಾಗುವದು. ಆದರೆ ಬಾವು ಇದ್ದ ಸ್ಥಳವು ಗಟ್ಟಿಯಾಗಿದ್ದರೆ ಕಲ್ಕೆ ಫ್ಲೂ. ಇದರ ಜತೆಗೆ ಕೊಡಬೇಕು. ಜಘನಾಸ್ಥಿ ಸಂದಿನಲ್ಲಿ ಬಾವೂ ಕೀವೂ ಆಗುವ ಪೂರ್ವದಲ್ಲಿ ಇದರ ಉಪಯೋಗವಾಗುತ್ತದೆ. ವ್ರಣಗಳಿಂದ ದಟ್ಟ, ಬಿಳೇ ಸ್ರಾವ ಹೋಗುತ್ತಿದ್ದರೆ ( ಕಲ್ಕೆ. ಫ್ಲೂ ) ಅಂಗಾಲಿನ ಮೇಲೆ ದಡ್ಡು, ಹೊಟ್ಟೆಯಲ್ಲಿ ಮತ್ತು ಹೊರಗೆ ಫೇರಂಫಾಸದನಂತರ ಕೊಡಬೇಕು. ಕಾಲು, ಅಥವಾ ಇತರ ಸ್ಥಳಗಳಲ್ಲಿ ಜಲವಾತ ತಿಂಡಿ ಇದ್ದಲ್ಲಿ ಇದನ್ನು ಲೇಪವಾಗಿ ಉಪಯೋಗಿಸಬೇಕು. ( ಕಾ. ಫಾ. ) ಮುಂಗೈ ಹಾಗೂ ಮೊಳಕೈ ಹಿಂದಿನಭಾಗದಲ್ಲಿ ಕರಕರ ಎಂದು ಸಪ್ಪಳವಾದರೆ ಬಾವು ಇದ್ದರೆ ಫೇರಂಫಾಸದನಂತರ ಉಪಯೋಗವಾಗುತ್ತದೆ.

**ನಿದ್ರೆ ಮುಂತಾದ್ದು:—** ಸ್ವಲ್ಪ ಸಪ್ಪಳವಾದಲ್ಲಿ ಸಹ, ಹೆದರಿ, ಗಡಬಡಿಸಿ ಎಚ್ಚರಾಗುತ್ತಿದ್ದಲ್ಲಿ ಅಸ್ವಸ್ಥ ನಿದ್ದೆ ಇದ್ದಲ್ಲಿ; ಅಪಸ್ಮಾರ, ಬಾಯಿಯಲ್ಲಿ ಬುರುಗು ಬಂದು ಎಚ್ಚರತಪ್ಪಿ ಬೀಳುವದು. ಈ ಬೇನೆಗೆ ಮುದ್ದು; ವಿಶೇಷತಃ ಇಸಬು ಮುಂತಾದ ತ್ವಚೆಯ ರೋಗಗಳು ಒಳಗಿಂದೊಳಗೆ ಅಡಗಿ ನಿಂತಂತೆ ಆದನಂತರ ಈ ರೋಗವಾದಲ್ಲಿ ಅದರ ಮೇಲೆ ಗುಣವು ನಿಃಸಂದೇಹವಾಗುವದು. ಇದರಲ್ಲಿ ನಾಲಿಗೆಯು ಬಿಳೇದು

ಇರುವದು ಮತ್ತು ಕಂಣುಗಳು ಮುಂದೆ ಬಂದಂತೆ ಕಾಣುತ್ತವೆ. ಬಹಳ ದಿವಸ ಬಿಟ್ಟುಬಿಡದೆ ಔಷಧವನ್ನು ಸೇವಿಸಬೇಕು.

**ಜ್ವರ**:— ದಾಹಜನ್ಯ ಜ್ವರದ ದ್ವಿತೀಯಾವಸ್ಥೆಯಲ್ಲಿ; ಆಂತ್ರಜ್ವರ; ಸಂನಿಪಾತ ಜ್ವರ; ಪಚನಶಕ್ತಿಯು ಕೆಟ್ಟದ್ದರಿಂದ ಬರುವ ಜ್ವರದಲ್ಲಿ ಇತರ ಔಷಧದ ಜೊತೆಗೆ ಕೊಡತಕ್ಕದ್ದು. ಹೀಗೆ ಕೊಟ್ಟಲ್ಲಿ ಹಿತವಾಗುವದು. ಪ್ರಸೂತಿ ಜ್ವರದಲ್ಲಿ ಆರಂಭಾವಸ್ಥೆಯಲ್ಲಿ ಕೊಡತಕ್ಕದ್ದಿದ್ದು ಫೇರಂಫಾಸದ ಜತೆಗೆ ಕೊಡತಕ್ಕದ್ದು; (ಕಾಲೀ ಫಾ); ಚಳಿಜ್ವರದಲ್ಲಿ ಕಾಸಿಕೊಂಡಲ್ಲಿಯೂ ಹೊದಿಕೆ ಹೊತ್ತುಕೊಂಡಲ್ಲಿಯೂ ಸಮಾಧಾನವೆನಿಸುತ್ತದೆ. ಮೈತೆರದಿದ್ದು ಸ್ವಲ್ಪ ಚಳಿಯಾದಲ್ಲಿ ಮೈಮೇಲೆ ಮುಳ್ಳುಬರುತ್ತದೆ. ಯಾವದೇತರದ ಜ್ವರವಿರಲಿ, ಅದರಲ್ಲಿ ನಾಲಿಗೆ ಬಿಳಿ ಕೆಂಪು ಛಾಯೆಯ ವರ್ಣದ್ದಿದ್ದು ಒಣಗಿರುತ್ತದೆ.

**ತ್ವಚೆ**: – ತ್ವಚೆಯು ಯಾವದೇ ರೋಗದಲ್ಲಿ ಹುಣ್ಣು ಬೊಕ್ಕೆಯೊಳಗಿಂದ ಬಿಳೇ ಸ್ರಾವವಾಗಲಿ ಹಿಟ್ಟಿನಂಥ ಹೊಟ್ಟಾಗಲಿ ಹೋಗುತ್ತಿದ್ದಲ್ಲಿ, ಮೈಲಿ ಚುಚ್ಚುವ ರಸಿಕೆ ದೋಷಯುಕ್ತವಿದ್ದದರಿಂದ ಉದ್ಭವಿಸುವ ತ್ವಚೆ ರೋಗ, ಗರ್ಭಾಶಯದ ದೋಷದಿಂದ ವಿಕೃತಿಯಿಂದಾಗುವ ಇಸಬು. ಇಸಬಿನಿಂದ ಬರುವ ಹಿಟ್ಟಿನಂಥ ಹೊಟ್ಟು ಹಕ್ಕಳಿಗಟ್ಟುತ್ತಿದ್ದ ಬಿಳೇ ಸ್ರಾವವು ಹೋಗುತ್ತಿದ್ದು ನಾಲಿಗೆಯು ಬಿಳಿಯದಿದ್ದಲ್ಲಿಯೂ ಕಾಲೀಮೂರದಿಂದ ತೀವ್ರವಾಗಿ ನೆಟ್ಟಗಾಗದಿದ್ದ ಪಕ್ಷದಲ್ಲಿ ಜೊತೆಗೆ ಕಲ್ಕೆರಿಯಾ ಫಾಸ ಕೊಡತಕ್ಕದ್ದು. ಮೋರೆಯ ಮೇಲಿನ ಬೊಕ್ಕೆಗಳಿಂದಲೂ ಪುಡಿ ಬೊಕ್ಕೆಗಳಿಂದಲೂ ಹುಂಣುಗಳಿಂದಲೂ ದಟ್ಟ, ಬಿಳೇ ಸ್ರಾವವು ಹೋಗುತ್ತಿದ್ದಲ್ಲಿ; ಸಂಣ ಹುಡುಗರ ತಲೆಯಮೇಲಿನ, ಮೋರೆಯ ಮೇಲಿನ ಹುಂಣುಗಳಿಂದ ಹೊಟ್ಟಿನಂಥ ಪದಾರ್ಥವು ಹೋಗುತ್ತಿದ್ದಲ್ಲಿ. ಕುರುವು, ಹುಂಣು, ಉಗುರುಸುತ್ತು, ನರೋಲಿ ಮುಂತಾದ ರೋಗಗಳಲ್ಲಿ ಕೀವು ಆಗುವ ಪೂರ್ವದಲ್ಲಿ ದ್ವಿತೀಯಾವಸ್ಥೆಯಲ್ಲಿ ಈ ಔಷಧವು ಕ್ಷೇಮಕರವು. ದಗ್ಧವ್ರಣದಲ್ಲಿ ( ಸುಟ್ಟು ಹುಂಣು ಆಗುತ್ತದೆ ಅದು ) ೩× ಶಕ್ತಿಯ ಔಷಧವನ್ನು ನೀರಿನಲ್ಲಿ ಹಾಕಿ ವ್ರಣದಮೇಲೆ ಆ ನೀರಿನ ಪಟ್ಟಿಯನ್ನು ಇಟ್ಟರೆ ವೇದನೆ

ತಾತ್ಕಾಲ ಕಡಿಮೆಯಾಗುತ್ತದೆ. ಅಂಗಾಲ ಮೇಲಿನ ದಡ್ಡು, ಆನೆ ಅಂಗೈ ಅಂಗಾಲು ಉರಿಯೋಣ, ಮುಟ್ಟು ಅಥವಾ ಪಚನದ ಸಂಬಂಧದ ಚಿಕೀರಿಯಿಂದಾಗುವ ಹುಣ್ಣು ಮುಂತಾದವುಗಳ ಮೇಲೆ ಈ ಔಷಧದ ಉಪಯೋಗವಾಗುತ್ತದೆ. ಕಕ್ಷಾವಾತ ( ಮುತ್ತಿನ ಕಾಳಿನಂಥ ಸಣ್ಣ ಬೊಕ್ಕೆಗಳು ಏಳುತ್ತವೆ. ಅದರಿಂದ ತಿಂಡಿಬಿಟ್ಟು ನೋವು ಆಗುತ್ತದೆ ) (ನೇಟ್ರಂ ಮೂರ) ಲ್ಯೂಪಸವೆಂಬ ಮೂಗಿನ ಬೇನೆ ( ಈ ಬೇನೆಯಿಂದ ಮೋರೆಯಲ್ಲಿಯ ಮಾಂಸವೆಲ್ಲ ಕಡೆದು ಹೋಗುತ್ತದೆ, ಇಲ್ಲದಂತಾಗುತ್ತದೆ ); ಮೈಲಿ; ಗೊಬ್ಬರ, ಇವುಗಳ ಮೇಲಿನ ಮುಖ್ಯ ಔಷಧವು. ಮೈಲಿಯಲ್ಲಿ ಹುಟ್ಟುವಂಥ ಹಾಗೂ ಧ್ವನಿಯನ್ನೆಲ್ಲ ಕೂಡಿಸಿ ಬಿಡುವಂಥ ಗ್ರಂಥಿಶೋಥದಲ್ಲಿ ನಾಲಿಗೆಯು ಬೆಳ್ಳಗಿದ್ದರೆ ಈ ಔಷಧದಿಂದ ಗುಣ ಬರುತ್ತದೆ. ಗೊಬ್ಬರ ಬಂದು ಹೋದನಂತರ ಆಗುವ ಅತಿಸಾರ; ಸರೋಲಿ; ಕಡಿಮೆ ಶಕ್ತಿಯ ಔಷಧವನ್ನು ಹೊಟ್ಟೆಯಲ್ಲಿ ಕೊಡಬೇಕು. ಹಾಗೂ ಹೊರಗಿನಿಂದ ಸಹ ಹಚ್ಚಬೇಕು.

**ಇತರ ಅವಯುವ:—** ಪಂಡುರೋಗ; ವಿಶೇಷತಃ, ತ್ವಗ್ರೋಗಯುಕ್ತ ಪಂಡುರೋಗವಿದ್ದರೆ ಇದನ್ನು ಇತರ ಔಷಧದ ಸಂಗಡ ನಡುನಡುವೆ ಕೊಡುತ್ತಿರಬೇಕು. ಡಾಂಬರಿನಂತೆ ಕರೇದೂ ಗಟ್ಟಿಯಾಗುವಂಥಾದ್ದೂ ಜಿಗಟು ರಕ್ತ ಹೋಗುತ್ತಿದ್ದಲ್ಲಿ; ಪೆಟ್ಟು, ಜಜ್ಜುವಿಕೆ, ಕೆಮ್ಮು ಮುಂತಾದವುಗಳಲ್ಲಿ ಬಾವು ಬಂದಲ್ಲಿ ಫೆರಂ ಫಾ. ದ ಸಂಗಡ ಕೊಡಬೇಕು.. ಹೃದಯ, ಯಕೃತ ಹಾಗೂ ಮೂತ್ರಪಿಂಡದ ವಿಕೃತಿಮೂಲಕ ಉತ್ಪನ್ನವಾಗತಕ್ಕ ಜಲಶೋಥವಿದ್ದಲ್ಲಿ ( ನೀರು ತುಂಬಿದ ಬಾವಿನಲ್ಲಿ ಅಥವಾ ಹುಣ್ಣಿನಲ್ಲಿ ); ಬಿಳೀ ದಟ್ಟ, ಜಿಗಟು ಸ್ರಾವವು ಯಾವದೇ ಭಾಗದಿಂದ ಹೋಗುತ್ತಿದ್ದಲ್ಲಿ, ಗ್ರಂಥಿಶೋಥವಿದ್ದಲ್ಲಿ ಮುಖ್ಯ ಔಷಧವು. ಗಂಡಮಾಲೆಯ ಪ್ರಕೃತಿಯಲ್ಲಿ ಗ್ರಂಥಿ ವಿಸ್ತಾರವಿದ್ದಲ್ಲಿ, ಸಳಕು ತುಂಬಿದ್ದಲ್ಲಿ ಫೆರಂ. ಫಾ. ದ ನಂತರ ಕೊಡಬೇಕು.

**ವೃದ್ಧಿಕ್ಷಯ:—** ತೈಲಮಯ, ಕಣಕದ ಹೋಳಿಗೆ ಮುಂತಾದ ಪದಾರ್ಥ ತಿಂದದ್ದರಿಂದ ಜಠರದ ಹಾಗೂ ಕರಳಿನ ಬೇನೆಗಳು ಹೆಚ್ಚಾಗುತ್ತವೆ. ಸಂದುಗಳಲ್ಲಿಯ ಹಾಗೂ ಇತರತ್ರದಲ್ಲಿಯ ವೇದನೆ ಅಲ್ಲಾಡುವದ.

ರಿಂದ ಬೆಳೆಯುತ್ತದೆ. ಮಂದ ಪ್ರಕೃತಿಯ ರೋಗಿಗಳಲ್ಲಿ ಮಂದಗತಿಯಿಂದ ಉದ್ಭವಿಸುವ ಭಾವನೆಗಳಿಗೆ ಇದು ಸಾವಕಾಶವಾಗಿಯೂ ನಿಶ್ಚಿತವಾಗಿಯೂ ಹಿತಮಾಡುವ ಔಷಧವು. ಉಪದಂಶ, ಪ್ರಮೇಹ ಅಥವಾ ಇತರ ಪ್ರಕೃತಿಗಳಿಗೆ ಸಹ ಈ ಔಷಧವು ಗುಣಕೊಡುತ್ತದೆ.

**ಉಪಯೋಗ:**— ೬× ಅಥವಾ ೧೨× ಔಷಧವನ್ನು ಕೊಡಬೇಕು. ಘಟಸರ್ಪದಲ್ಲಾಗಲಿ (Diphtheria) ಇತರ ಗಂಟಲ ರೋಗಗಳ ಮೇಲೆಯಾಗಲಿ ೩× ಶಕ್ತಿಯ ಔಷಧ ಒಂದು ಬಟ್ಟಲ ತುಂಬ ನೀರಿನಲ್ಲಿ ೧೦-೧೫ ಗ್ರೇನ ಔಷಧವನ್ನು ಹಾಕಿ ಬಾಯಿಯನ್ನು ಮುಕ್ಕಳಿಸಬೇಕು. ಈ ಧಾವನ ಜಲವನ್ನು ಸುಟ್ಟು ನೋವಾದ ಸ್ಥಳದಲ್ಲಿಯೂ ಹುಣ್ಣು ಆದ ಸ್ಥಳದಲ್ಲಿಯೂ ಉಪಯೋಗಿಸಬಹುದು. ಅರಿವೆಯನ್ನು ಈ ನೀರಿನಲ್ಲಿ ಎದ್ದಿ ಇಂಥ ಸ್ಥಳದಲ್ಲಿಡಬೇಕು.

**ಇತರ ಔಷಧಗಳ ಸಂಬಂಧ:**— ಉಪದಂಶದಲ್ಲಿ ಕಾಲೀ ಸಲ್ಫ ಮತ್ತು ಸಿ. ಇವುಗಳ ಸಂಗಡ ಕೊಟ್ಟಲ್ಲಿ ಹಿತಕರ. ಲ್ಯೂಪಸಮಂಬ ಮೂಗಿನ ತ್ವಚೆರೋಗದಲ್ಲಿ ಕಲ್ಕೆ. ಫಾ. ಸಂಗಡ ಕೊಡಬೇಕು. ಇದನ್ನು ನಡುನಡುವೆ ಕೊಟ್ಟಲ್ಲಿ ಇತರ ಔಷಧಗಳ ಕ್ರಿಯೆಗೆ ಒಳ್ಳೇ ಸಹಾಯವಾಗುತ್ತದೆ. ಕಾಲೀ ಮೂರ ನಂತರ ಕಲ್ಕೆ. ಸ. ಔಷಧವು ಪೂರಕ ಔಷಧವೆಂದು ಕಾರ್ಯಮಾಡುತ್ತದೆ. ಅಂದರೆ ಕಾಲೀಮೂರ ನಂತರದ ತಾಪಗಳು ದೂರಾಗುತ್ತವೆ. ದಾಹಜನ್ಯ ರೋಗದಲ್ಲಿ ಸ್ರಾವವಿದ್ದ ಕಾಲಕ್ಕೆ ಫೇರಂ ಫಾಸ ನಂತರ ವಿಶೇಷ ಗುಣಕಾರಕವು. ತ್ವಗ್ರೋಗದಲ್ಲಿ ಹಿಟ್ಟಿನಂತೆ ಹೊಟ್ಟು ಹೋಗುತ್ತಿದ್ದರೆ ಹಾಗೂ ನಾಲಿಗೆ ಬಿಳೀದು ಇದ್ದರೆ ಹಾಗೂ ದಟ್ಟ ಬಿಳೀ ಸ್ರಾವವು ಹೋಗತಿದ್ದಲ್ಲಿ ನೇಟ್ರಂಮೂರದಕಿಂತ ಹೆಚ್ಚು ಉಪಯೋಗವಾಗುತ್ತದೆ.

**ಪ್ರಮಾಣ:**— ೪ ರಿಂದ ೫ ವಟಿಕೆಗಳನ್ನು ಅಥವಾ ೩ ರಿಂದ ೪ ಗುಂಜಿ ಚೂರ್ಣವನ್ನು ದಿನಾಲು ೪-೫ ಸಾರೆ ೨-೩ ತಾಸಿನ ಅಂತರದಿಂದ ಕೊಡಬೇಕು. ೩× ಶಕ್ತಿಯ ಧಾವನಜಲದ ಪಟ್ಟಿಯನ್ನು ಬಾವಿನ ಮೇಲೆ ಕಟ್ಟಬೇಕು. ಆ ನೀರಿನಿಂದ ಬಾಯಿ ಮುಕ್ಕಳಿಸಬೇಕು.

---

# ಕಾಲೀ ಸಲ್ಫ್ಯೂರಿಕಂ

## Kali Sulphuricum

**ಇತರ ಹೆಸರುಗಳು:—** ಪೊಟ್ಯಾಶಿಯಂ ಸಲ್ಫೇಟ, ಸಲ್ಫೆಟ ಆಫ್ ಪೊಟ್ಯಾಶಿಯಂ ಇವು ಇದರ ಇತರ ಹೆಸರುಗಳು.

**ಕಾರ್ಯಕ್ಷೇತ್ರ:—** ಶರೀರದಲ್ಲಿ ಪ್ರಾಣವಾಯುವನ್ನೂ ಸೇಂದ್ರಿಯ ಪದಾರ್ಥಗಳನ್ನೂ ಎಲ್ಲ ಶರೀರದಲ್ಲಿ ಮುಟ್ಟಿಸುವ ಕಾರ್ಯವನ್ನು ಈ ಕ್ಷಾರವು ಮಾಡುತ್ತಿದ್ದು ತ್ವಚೆ ಹಾಗೂ ಅಸ್ತರ ಧಾತು (Epithalic tissues) ಇವುಗಳಿಗೆ ಈ ಕ್ಷಾರದಿಂದಲೇ ಸಾಮರ್ಥ್ಯವು ಬರುತ್ತದೆ. ಶರೀರದಲ್ಲಿ ಈ ಕ್ಷಾರದ ನ್ಯೂನತೆ ಆದಕೂಡಲೆ ನಾಲಿಗೆಯು ಹಳದಿ ಹಾಗೂ ಜಿಗಟಾಗುತ್ತದೆ. ಹಾಗೂ ಶ್ಲೇಷ್ಮಲ ತ್ವಚೆಯೊಳಗಿಂದ (ವಿಶೇಷತಃ ದಾಹಜನ್ಯ ರೋಗಗಳಲ್ಲಿಯ ತೃತೀಯಾವಸ್ಥೆಯಲ್ಲಿ) ಹಳದಿ, ಜಿಗಟು ಅಥವಾ ಹಸರುಸೇರಿಸಂಥ ತೆಳ್ಳನ್ನ ಸ್ರಾವವು ಹರಿಯುತ್ತದೆ ಮತ್ತು ತ್ವಚೆಯೊಳಗಿಂದ ಹೊಟ್ಟು ಸಹ ಬರಹತ್ತುತ್ತದೆ. ಲೋಹ ಮತ್ತು ಸಲ್ಫೇಟವೆಂಬ ಪದಾರ್ಥಗಳು ಪ್ರಾಣವಾಯುವನ್ನು ಎಳೆದು ಒಯ್ಯುವ ಕಾರ್ಯವನ್ನು ಮಾಡುತ್ತಿರುತ್ತವೆ. ಫೇರಂಫಾಸ ಅಂದರೆ ರಕ್ತದಲ್ಲಿರುವ ಲೋಹಪದಾರ್ಥವು ಫುಪ್ಫುಸದಲ್ಲಿಯ ಪ್ರಾಣವಾಯುವನ್ನು ಶೋಷಣ ಮಾಡಿಕೊಳ್ಳುತ್ತದೆ ಮತ್ತು ಕಾಲೀಸಲ್ಫದ ಸಹಾಯದಿಂದ ಶರೀರದಲ್ಲಿಯ ಪ್ರತಿಯೊಂದು ಪಿಂಡದಲ್ಲಿ ರಕ್ತವನ್ನು ಮುಟ್ಟಿಸುವ ಕೆಲಸವು ಮಾಡಲ್ಪಡುತ್ತದೆ. ಕಾಲೀಸಲ್ಫದ ಕೊರತೆಯಾದರೆ ಸ್ಥಾನಪರತ್ವದಿಂದ ಕೆಳಗೆ ಹೇಳಿದಂತೆ ಭಾವನೆಗಳು ಕಂಡುಬರುತ್ತವೆ. ಮೈಮೇಲೆ ಮುಳ್ಳು ಬರೋಣ, ಜಡತ್ವದ ಭಾವನೆ, ದಣುವಿಕೆ ಅನಿಸೋಣ, ಬವಳಿ, ಹೃದಯದಲ್ಲಿ ಧಡಿಧಡಿಸೋಣ, ಮಾನಸಿಕ ಅಸ್ವಾಸ್ಥ್ಯ, ಉದ್ವಿಗ್ನತೆ, ಹೆದರಿಕೆ, ನಿರುತ್ಸಾಹ, ಹಲ್ಲು, ತಲೆ, ಕೈಕಾಲು ಮುಂತಾದ ಸ್ಥಳಗಳಲ್ಲಿ ನಿಂತು ನಿಂತು ಪುನಃ ಪುನಃ ಸ್ಥಾನ ಬದಲುಮಾಡಿ ಬರುವಂಥ ವೇದನೆ ಮುಂತಾದ ಭಾವನೆಗಳು ಕಂಡುಬರುತ್ತವೆ. ಶ್ವಾಸವು ಒಳಸಿಕ್ಕಂತೆ (ಉಸುರುಗಟ್ಟಿದಂತೆ) ಅನಿಸೋಣವೂ ತಣ್ಣನ್ನ ಗಾಳಿಯ ಅಪೇಕ್ಷೆಯಾಗೋಣವೂ ಈ ಕ್ಷಾರದ ಕೊರತೆಯ ಲಕ್ಷಣಗಳೇ ಸರಿ.

ಸಾಯಂಕಾಲದಲ್ಲಿಯೂ, ಬೆಚ್ಚನ್ನ ಸ್ಥಳದಲ್ಲಿಯೂ, ಕಾಸಿಕೊಂಡಲ್ಲಿಯೂ, ವೇದನೆ ಹೆಚ್ಚಾಗುತ್ತದೆ ಮತ್ತು ಸ್ವಚ್ಛ, ಬಯಲುಹವೆಯಲ್ಲಿ ಹಾಗೂ ಪ್ರಾಣ ವಾಯು ಯಥೇಚ್ಛ ಇದ್ದಂಥ ಸ್ಥಳಗಳಲ್ಲಿ ಹಗುರು ಅನಿಸುತ್ತದೆ. ತ್ವಚೆಗೆ ಪ್ರಾಣವಾಯು ಸಾಕಷ್ಟು ದೊರೆಯದ್ದರಿಂದ ತ್ವಚೆಯೊಳಗಿಂದ ಹೊಟ್ಟು ಹೊರಡೋಣವೂ ಕಾಲೀಸಲ್ಫ ಕ್ಷಾರದ ಕೊರತೆಯ ಲಕ್ಷಣವೇ ಸರಿ. ಹೊಟ್ಟು ಬಹಳ ಹೊರಡುವ ಯಾವದೇ ತ್ವಗ್ರೋಗ ನಿವಾರಣೆಗೆ ಈ ಔಷಧದ ಉಪಯೋಗವಾಗುತ್ತದೆ. ಶ್ಲೇಷ್ಮಲ ತ್ವಚೆಯೊಳಗಿಂದ ಹಳದೀ, ಜಿಗಟು, ಸ್ರಾವ ಹೋಗುವದು ಇದರ ಪ್ರಮುಖ ಲಕ್ಷಣವು. ಪ್ರಮೇಹ, ಕಿವಿಸೋರುವದು, ಪ್ರದರ, ಚಳಿ, ಕೆಮ್ಮು, ಕ್ಷಯ ಮುಂತಾದ ರೋಗ ಗಳಲ್ಲಿ ಹಳದೀ ಸ್ರಾವವಿದ್ದಲ್ಲಿ ಹಾಗೂ ಕಫ ಬೀಳುತ್ತಿದ್ದಲ್ಲಿ ಈ ಔಷಧದ ಉಪಯೋಗವಾಗುತ್ತದೆ. ಎಲ್ಲ ಭಾವನೆಗಳು ಸಾಯಂಕಾಲದಲ್ಲಿ ಹೆಚ್ಚಾಗಿ ರಾತ್ರಿಯಲ್ಲಿ ಜ್ವರ ಹೆಚ್ಚಾಗುವದೂ, ತಣ್ಣನ್ನ ಬಯಲು ಹವೆಯಲ್ಲಿ ನೆಟ್ಟ ಗನಿಸುವದು, ಮುಂತಾದ ಲಕ್ಷಣಗಳಿದ್ದಲ್ಲಿ ಕಾಲೀಸಲ್ಫವು ನಿಃಸಂಶಯ ಗುಣ ಕರವು. ಮೈಲಿ, ಗೊಬ್ಬರ ಮುಂತಾದ ಸ್ಫೋಟಕ ಜ್ವರಗಳಲ್ಲಿ (ಸ್ಫೋಟಕ ಜ್ವರ = ಬೊಕ್ಕೆ, ಹುಣ್ಣು ಆಗುವಂಥ ಜ್ವರಕ್ಕೆ ಸ್ಫೋಟಕ ಜ್ವರವೆನ್ನುವ ದುಂಟು) ಒಮ್ಮೆಂದೊಮ್ಮೆ ಬೊಕ್ಕೆ ಹುಣ್ಣು ಮುಂತಾದವು ಅಡಗಿದ್ದರೆ ಈ ಔಷಧವನ್ನು ಕೊಟ್ಟಲ್ಲಿ ಬೊಕ್ಕೆ ಮುಂತಾದವು ಪುನಃ ಏಳುತ್ತವೆ ಮತ್ತು ಒಮ್ಮೆಂದೊಮ್ಮೆ ಅಡಗಿದ್ದರಿಂದ ಆಗುವ ದುಷ್ಪರಿಣಾಮಗಳು ನಿಂತು ಹೋಗುತ್ತವೆ. ಫೇರಂಫಾಸದಿಂದ ಗುಣಮುಖವಾಗದಿದ್ದಲ್ಲಿ, ಅದರ ಜೊತೆಗೆ ಕಾಲೀಸ. ವನ್ನು ಕೊಡಬೇಕು.

---

# ಪ್ರಮುಖ ಲಕ್ಷಣಗಳು

**ಮೆದುಳು:—** ಬಿದ್ದೇನೆಂಬ ಹೆದರಿಕೆ. ರೋಗಿಯು ಬಹಳೇ ತ್ರಾಸಿಕನು ಹಾಗೂ ಹೆದರಿಕೆಯುಳ್ಳವನು. ಮಾನಸಿಕ ಶ್ರಮದಿಂದ ತ್ರಾಸ

ವಾಗುವದು. ವಿಶೇಷತಃ ಸಾಯಂಕಾಲದಲ್ಲಿ ರೋಗಿಯು ಅಸ್ವಸ್ಥ ಹಾಗೂ ಸಚಿಂತ; ರೋಗಿಯು ಯಾವಾಗಲು ಗಡಿಬಿಡಿಯಲ್ಲಿ ಇದ್ದಂತೆ ಕಾಣುವನು.

**ಮಸ್ತಕ:**— ತಲೆಯಲ್ಲಿ ಹೊಟ್ಟುಹಾರುವದು; ಕಾಲೀಸ. ವನ್ನು ಹೊಟ್ಟೆಯಲ್ಲಿ ಕೊಡತಕ್ಕದ್ದು; ಮತ್ತು ಸೇ. ಮೂರದ ಧಾವನಜಲದಿಂದ ತೊಳೆಯಬೇಕು. ತಲೆಯ ಕೂದಲು ಉದುರಿಬೀಳುತ್ತವೆ. ತಲೆಯಲ್ಲಿ ಖಿಸ್ವಾಟ (ಬೋಳುತಲೆ); ತಲೆಯಲ್ಲಿ ಹುಣ್ಣುಗಳಾಗುತ್ತವೆ; ಹಕಳಿಗಟ್ಟು ತ್ತವೆ. ಅದರೊಳಗಿಂದ ಜಿಗಟು, ಹಳದಿ, ತೆಳ್ಳನ್ನ ಸ್ರಾವವೂ ಹೋಗುತ್ತದೆ; ಬವಳಿಬರುತ್ತದೆ; ವಿಶೇಷತಃ ಏಳುತ್ತ ಕೂಡುತ್ತ ತಲೆ ನೋಯುತ್ತದೆ. ಬೆಚ್ಚನ್ನ ಕೋಣೆಯಲ್ಲಿಯೂ ಸಾಯಂಕಾಲದಲ್ಲಿಯೂ ಹೆಚ್ಚಾಗುತ್ತದೆ. ಮತ್ತು ತಣ್ಣನ್ನ ಬಯಲುಹವೆಯಲ್ಲಿ ನೆಟ್ಟಗೆನಿಸುತ್ತದೆ. ಸಂಧಿಪಿತ್ತಜನ್ಯ ತಲೆಶೂಲಿ ಇರುತ್ತದೆ; ಮತ್ತು ಅದು ಯಾವಾಗಲೂ ಸಾಯಂಕಾಲದಲ್ಲಿ ಮತ್ತು ಊಷ್ಣ ಹವೆಯಲ್ಲಿ ಹೆಚ್ಚಾಗುತ್ತದೆ. ತಲೆ ಮಗ್ಗಲಿಗೂ ಹಿಂದಿನ ಭಾಗದಲ್ಲಿಯೂ ಅಲ್ಲಾಡಿಸಿದಲ್ಲಿ ನೋವು ಹೆಚ್ಚಾಗುತ್ತದೆ.

**ನೇತ್ರ:**— ಮೋತಿಬಿಂದು; (ಕಣ್ಣುಪರೆ) ಕಣ್ಣಿನ ರೆಪ್ಪೆಯ ಮೇಲೆ ಹಳದಿ ಹಕ್ಕಳಿಗಟ್ಟುತ್ತವೆ. ಹಳದಿ ಅಥವಾ ಹಸರು ಕೀವಯುಕ್ತ ಸ್ರಾವವು ಹೋಗುತ್ತಿದ್ದರೆ; ನೇತ್ರಾಭಿಷ್ಯಂದ; ಕಣ್ಣುಬರುತ್ತವೆ; ಕಣ್ಣುಗೊಂಬೆಯ ಮೇಲಿನ ಹುಣ್ಣು.

**ಕಿವಿ**— ಬಧಿರತೆ; (ಕೇಳಿಸದೆ ಇರೋಣ) ಕರ್ಣಶೂಲಿ; ಹಳದೀ ಸ್ರಾವ ಹೋಗುತ್ತಿದ್ದು ಸಾಯಂಕಾಲದಲ್ಲಿ ಹೆಚ್ಚಾಗುತ್ತದೆ; ಕಿವಿ ಒಡೆ ದಿದ್ದು ಅದರಿಂದ ತೆಳ್ಳನ್ನ ಹಳದಿ ಅಥವಾ ಹಸರು ಸ್ರಾವ ಹೋಗುತ್ತಿದ್ದಲ್ಲಿ ಈ ಔಷಧವು ಬಹಳೇ ಗುಣಕರ. (ದಟ್ಟನ್ನ ಕೀವಿನಂಥ ಸ್ರಾವವು ಇದ್ದಲ್ಲಿ ಕಲ್ಕೆ. ಸ.) ಕಿವಿಯೊಳಗೆ ತೀವ್ರ, ಕಡೆದಂತೆ, ಚುಚ್ಚುವಂತೆ, ಎಳೆದಂತೆ ವೇದನೆ ಇದ್ದು ಸಾಯಂಕಾಲದಲ್ಲಿಯೂ ಬೆಚ್ಚನ್ನ ಕೋಣೆಯಲ್ಲಿಯೂ ಹೆಚ್ಚಾಗುತ್ತದೆ. ಕಿವಿಯನ್ನು ಇದರ ಧಾವನಜಲದಿಂದ ತೊಳೆದಲ್ಲಿ ಗುಣವಾಗುವದು.

**ಮೂಗು:**— ಚಳಿ; ಹಳದಿ, ಜಿಗಟು, ನೀರಿನಂತೆ ತೆಳ್ಳಗೆ ಸುಂಬಳ; ಸಾಯಂಕಾಲದಲ್ಲಿ ಬೆಚ್ಚನ್ನ ಕೋಣೆಯಲ್ಲಿ ಭಾವನೆಗಳು ಹೆಚ್ಚಾಗುವವು. ಹಳದಿ, ಹಸರು ಸುಂಬಳ ಹೋಗುತ್ತಿದ್ದರೆ ಇದನ್ನು ಉಪಯೋಗಿಸಬೇಕು. ಚಳಿಯಾದಾಗ ಫೇರಂ. ಫಾ. ದಿಂದ ಬೆವರುಬಿಟ್ಟು ಗುಣ ಬರದಿದ್ದರೆ ಇದನ್ನು ಅವಶ್ಯ ಕೊಡಬೇಕು. ಮೇಲಿಂದಮೇಲೆ ಫೇರಂ. ಫಾ. ಮತ್ತು ಇದು ಒಂದಾವರ್ತಿಬಿಟ್ಟು ಮತ್ತೊಂದಾವರ್ತಿಯಂತೆ ಕೊಟ್ಟಲ್ಲಿ ಚಳಿಯ ವಿಕಾರಗಳು ನೆಟ್ಟಗಾಗುತ್ತವೆ. ಬಹಳ ದಿವಸದ ಚಳಿ; ಮೂಗು ದಟ್ಟಿಸುವದು. ಮೂಗಿಗೆ ವಾಸನೆಯು ಬರುವದಿಲ್ಲ; ಪಿನಸಿಯಾಗಿ ಮೂಗಿಗೆ ತಿಂಡಿಬಿಡುತ್ತದೆ; ಮೂಗಿನೊಳಗೆ ಹಸರು ( ಸಿ. ) ಅಥವಾ ಹಳದಿ, ಜಿಗಟು ಸುಂಬಳ ತುಂಬಿದ್ದರೆ.

**ಮುಖಚರ್ಯೆ:**— ಮುಖಚರ್ಯೆಯಲ್ಲಿ ವೇದನೆ; ಬೆಚ್ಚನ್ನ ಕೋಣೆಯಲ್ಲಿಯೂ ಸಾಯಂಕಾಲದಲ್ಲಿಯೂ ಹೆಚ್ಚಾಗುವದು; ಬಯಲು ಹವೆಯಲ್ಲಿ ಕಡಿಮೆ ಅನಿಸುತ್ತದೆ; ಚರ್ಯೆಯಲ್ಲಿಯೂ ಮೂಗಿನಲ್ಲಿಯೂ ಗ್ರಂಥಿಗಳಾಗುತ್ತವೆ. (ಎಪಿಥೆಲಿಯೋಮಾ)

**ಮುಖ:**— ತುಟಿಗಳ ಮೇಲೆ ದುಷ್ಟಗ್ರಂಥಿ. (ಗಂಟು) ಅದರೊಳಗಿಂದ ಹಳದಿ ಸ್ರಾವವು ಹೋಗುತ್ತಿದ್ದರೆ, ಕೆಳಗಿನ ತುಟಿಯು ಒಣಗಿದ್ದು ತುಟಿಯು ಸುಲಿಯುತ್ತಿದ್ದರೆ,

**ನಾಲಗೆ:**— ಹಳದಿ, ಜಿಗಟು ಇದ್ದು ಆದಾಗ್ಗೆ ತುದಿಯು ಬೆಳ್ಳಗೆ ಇದ್ದರೆ. ನಾಲಗೆಗೆ ರುಚಿಯು ತಿಳಿಯದಿದ್ದರೆ.

**ಹಲ್ಲು:**— ಹಲ್ಲುನೋವು; ಸಂಜೆಗೆ ಬೆಚ್ಚನ್ನ ಕೋಣೆಯಲ್ಲಿ ಹೆಚ್ಚು; ಬಯಲು, ತಣ್ಣನ್ನ ಹವೆಯಲ್ಲಿ ನೆಟ್ಟಗೆ ಅನಿಸುತ್ತದೆ; ಒಸಡಿಗಳು ನೋಯುವವು.

**ಗಂಟಲ:**— ಗಂಟಲ ಒಣಗಿದ್ದು ಬಿಗಿದಂತೆ ಅನಿಸುತ್ತದೆ. ಕಿರಿನಾಲಗೆ ಬಾತದ್ದು; ಅದರಿಂದ ಯಾವದಾದರೊಂದು ಪದಾರ್ಥ ನುಂಗುವಾಗ ಗಂಟಲು ನೋಯುವದು.

**ಜಠರ:**— ಜಠರದಲ್ಲಿ ಚಳಿ; ಹಳದಿ, ಜಿಗಟು ನಾಲಿಗೆ; ಅಗ್ನಿಮಾಂದ್ಯ; ಹೊಟ್ಟೆಯಲ್ಲಿ ಏನಾದರೂ ಜಡ ಒಜ್ಜೆ ಇಟ್ಟಂತೆ ಅನಿಸುತ್ತದೆ.

ಅದರಿಂದ ಅಪಚನವಾಗುವದು; ಸೇಟ್ರಂಮೂರ ಹಾಗೂ ಕಾಲೀಮೂರ ದಂತೆ ಸಹ ಇದರ ಉಪಯೋಗವಾಗುವದು; ಜಠರಶೂಲದಲ್ಲಿ ಮ್ಯಾ. ಫಾ. ದಿಂದ ಗುಣವಾಗದೆ ಇದ್ದು ನಾಲಗೆಯ ಮೇಲೆ ಜಿಗಟು, ಹಳದಿ ಹೊಲಸು ಇದ್ದಲ್ಲಿ ಇದರ ಉಪಯೋಗವಾಗುತ್ತದೆ. ಉಷ್ಣಪೇಯ ತೆಗೆದುಕೊಳ್ಳಬಾರದೆಂದು ಅನಿಸುತ್ತದೆ. ಅಪಚನದಿಂದ ಸಾಯಂಕಾಲಕ್ಕೆ ಜ್ವರ ಬರುತ್ತದೆ; ನೀರಡಿಕೆ ಇರುವದೇ ಇಲ್ಲ. ಬೆವರು ಬರುವದರ ಸಲುವಾಗಿ ಫೇರಂ ಫಾಸದ ಜತೆಗೆ ಇದನ್ನು ಕೊಡಬೇಕು; ಕಾಮಣಿ; ಹೊಟ್ಟೆಯಲ್ಲಿ ಉರುಪು; ನೀರಡಿಕೆ; ಮಳಮಳಿಸೋಣ, ವಾಂತಿಯೂ ಇರುತ್ತದೆ.

**ಉದರ ಹಾಗೂ ಮಲ:—** ಹಳದಿ, ಜಿಗಟು, ನೀರಿನಂತೆ ರೇಚ ವಾಗುತ್ತಿದ್ದಲ್ಲಿ ಹಾಗೂ ನಾಲಗೆಯಾದರೂ ಹಳದಿ ಇದ್ದಲ್ಲಿ ಇದನ್ನು ಕೊಡಬೇಕು. ನಾಲಗೆ ಹಳದೀ ಇದ್ದು ಯಾವದೇ ಉದರರೋಗದ ಮೇಲೆ ಇದರ ಉಪಯೋಗವಾಗುತ್ತದೆ. ಒಮ್ಮೆಂದೊಮ್ಮೆ ಅತಿ ಸೀತ ಹವೆ ಬಿದ್ದು ಹೊಟ್ಟೆಯಲ್ಲಿ ಸೋವು ಇದ್ದಲ್ಲಿ; ಉದರವು ತಣ್ಣಗೆ ಹತ್ತುತ್ತದೆ; ಅಪಾನವಾಯುವಿಗೆ ಗಂಧಕದಂಥ ದುರ್ಗಂಧವಿರುತ್ತದೆ; ಬಹಳ ದಿವಸದ ಬದ್ಧಕೋಷ್ಠತೆ; ಶೌಚದ ಕಾಲಕ್ಕೆ ಗುದದ್ವಾರದಲ್ಲಿ ನೋಯುತ್ತದೆ. ಮೂಲವ್ಯಾಧಿಯಲ್ಲಿ ಕಲ್ಕೆ. ಫ್ಲೋ. ದ ಸಂಗಡ ಕೊಡ ಬೇಕು; ನಾಲಗೆಯು ಹಳದಿ ಹಾಗೂ ಜಿಗಟು ಇದ್ದರೆ ಇದು ಗುಣ ಕೊಡುವದು. ಸನ್ನಿಪಾತ ಜ್ವರದಲ್ಲಿ ಹಾಗೂ ಆಂತ್ರ ಜ್ವರದಲ್ಲಿ ಸಾಯಂಕಾಲದಲ್ಲಿ ಜ್ವರ ಹೆಚ್ಚಾಗಿ ಪ್ರಾತಃಕಾಲದಲ್ಲಿ ಇಳಿಯುತ್ತದೆ; ಉದರಾವರಣದಾಹದ ಮೇಲೆ ಇದು ಪ್ರಮುಖ ಔಷಧವು. ಉದರವು ಉಬ್ಬಿ ಗಟ್ಟಿಯಾದದ್ದು, ತಣ್ಣಗೆ ಹತ್ತುತ್ತದೆ. ಗುದದ್ವಾರಕ್ಕೆ ಬಹಳ ತಿಂಡಿ ಬಿಡುತ್ತದೆ, ಚುಚ್ಚಿದಂತೆ ಆಗುತ್ತದೆ ಮತ್ತು ಉರಿಯುತ್ತದೆ. ಕರ್ರನ್ನ, ತೆಳ್ಳನ್ನ, ದುರ್ಗಂಧ ರೇಚವಾಗುತ್ತಿದ್ದಲ್ಲಿಯೂ ಮಹಾಮಾರಿ (ದುರ್ಗೀಣಬೇನೆ) ಯಲ್ಲಿಯೂ ಇದರ ಉಪಯೋಗವಾಗುವದು.

**ಮೂತ್ರೇಂದ್ರಿಯ:—** ಮೂತ್ರಾಶಯ ದಾಹ; ದಾಹದ ಮೂರ ನೆಯ ಅವಸ್ಥೆಯಲ್ಲಿ ಜಿಗಟು, ಹಳದಿ ಸ್ರಾವ ಹೋಗುತ್ತಿದ್ದಲ್ಲಿ; ರಾತ್ರಿಯಲ್ಲಿ

ಮೇಲಿಂದ ಮೇಲೆ ಮೂತ್ರಬಾಧೆಯಾಗುತ್ತಿದ್ದರೆ ಹಾಗೂ ಮೂತ್ರದ ಕಾಲಕ್ಕೆ ನೋಯುತ್ತಿದ್ದರೆ; ಮೂತ್ರದಲ್ಲಿ ಅಲ್ಬ್ಯುಮೇನ ಹೋಗುತ್ತಿದ್ದರೆ.

**ಪುರುಷರ ಜನನೇಂದ್ರಿಯ,—** ಪ್ರಮೇಹವು ಹಳೆಯದು, ಅಥವಾ ಸ್ವಲ್ಪ ದಿವಸದ್ದು; ಜಿಗಟು, ಹಳದಿ, ಅಥವಾ ಹಸರು ಸ್ರಾವ ಹೋಗುತ್ತಿದ್ದರೆ ಇದು ನಿಃಸಂಶಯ ಗುಣಕೊಡುವದು; ಉಪದಂಶ ಅಥವಾ ಪ್ರಮೇಹ ಇವುಗಳ ತರಲೆ ಸಾಯಂಕಾಲದಲ್ಲಿ ಬಹಳವಾಗುತ್ತದೆ.

**ಸ್ತ್ರೀಯರ ಜನನೇಂದ್ರಿಯ:—** ಪ್ರದರದಲ್ಲಿ ಹಳದಿ, ಹಸರು, ಜಿಗಟು, ನೀರಿನಂತೆ ತೆಳ್ಳಗೆ ಸ್ರಾವವಿದ್ದಲ್ಲಿ; ಮುಟ್ಟಾಗುವ ಕಾಲಕ್ಕೆ ಸರಿಯಾಗಿ ಆಗದೆ ತಡವಾಗಿ ಆಗುತ್ತಿದ್ದಲ್ಲಿ ಮತ್ತು ತೀರ ಸ್ವಲ್ಪ ಆಗುತ್ತಿದ್ದು ಹೊಟ್ಟೆಯ ಮೇಲೆ ಜಡ ಒಜ್ಜೆ ಇಟ್ಟಂತೆ ಅನಿಸುತ್ತದೆ. ತಲೆ ನೋಯುವದು ಮತ್ತು ನಾಲಿಗೆಯ ಮೇಲೆ ಹೊಲಸು ಇರುವದು.

**ಶ್ವಸನೇಂದ್ರಿಯ:—** ದಮ್ಮು; ದಮ್ಮಿನಲ್ಲಿ ಹಳದೀ ಕಫ ಬೀಳುತ್ತಿದ್ದು ಉಷ್ಣ ಹವೆಯಲ್ಲಿ ಮತ್ತು ಉಷ್ಣ ಋತುವಿನಲ್ಲಿ ಹೆಚ್ಚುತ್ತಿದ್ದಲ್ಲಿ; ಕೆಮ್ಮಿನಲ್ಲಿಯೂ, ಕ್ಷಯದಲ್ಲಿಯೂ, ಶ್ವಾಸನಲಿಕಾದಾಹ ಮುಂತಾದವುಗಳಲ್ಲಿಯೂ ಹಳದೀ ಅಥವಾ ಹಸರು, ಜಿಗಟು, ನೀರಿನಂತೆ ತೆಳ್ಳಗೆ ಕಫ ಬೀಳುತ್ತಿದ್ದಲ್ಲಿ, ಮತ್ತು ಕೆಮ್ಮು ಸಾಯಂಕಾಲದಲ್ಲಿಯೂ ಉಷ್ಣ ಹವೆಯಲ್ಲಿಯೂ ಹೆಚ್ಚಾಗುತ್ತಿದ್ದಲ್ಲಿ ಇದನ್ನು ಅವಶ್ಯವಾಗಿ ಕೊಡತಕ್ಕದ್ದು. ನ್ಯೂಮೋನಿಯಾದಲ್ಲಿಯೂ, ಹಳದೀ ಹಾಗೂ ಸಹಜವಾಗಿ ಹೊರಬೀಳುವಂಥ ಕಫವಾಗಲಿ ನೀರಿನಂಥ ತೆಳ್ಳನ್ನ ಕಫ ಬೀಳುತ್ತಿದ್ದರೆ ಈ ಔಷಧದ ಉಪಯೋಗವಾಗುವದು. ಕಫ ಹೊಟ್ಟೆಯಲ್ಲಿ ಇಳಿದುಹೋಗುತ್ತದೆ, ಗಂಟಲದಲ್ಲಿ ಘರಘರ ಸಪ್ಪಳವಾಗುತ್ತದೆ; ಗಂಟಲದಲ್ಲಿ ದಣಿದಂತೆ ಭಾವನೆ; ಮಾತಾಡಿದರೆ ರೋಗಿಯು ದಣಿಯುತ್ತಾನೆ; ಕೋಡಗಕೆಮ್ಮಿನಲ್ಲಿ ಹಳದೀ, ಜಿಗಟು ಸ್ರಾವ ಹೋಗುತ್ತಿದ್ದಲ್ಲಿ ಪ್ಯಾ. ಫಾ. ದ ಜತೆಗೆ ಇದನ್ನು ಕೊಡಬೇಕು. ಬೆಚ್ಚನ್ನ ಕೋಣೆಯಲ್ಲಿ ಶ್ವಾಸಕಟ್ಟಿದಂತಾಗುತ್ತದೆ. ಸೀತವಾಯುವಿನಲ್ಲಿ ಕೂಡಬೇಕೆಂಬ ಭಾವನೆ.

**ರುಧಿರಾಭಿಸರಣ:—** ನಾಡಿಯು ತೀವ್ರ ಮತ್ತು ಟಣಟಣ ಹಾರುವಂಥದು; ಚರ್ಯೆ ಸಪ್ಪಗೆ; ಸಾಯಂಕಾಲದಲ್ಲಿ ಜ್ವರ ಹೆಚ್ಚುತ್ತದೆ. ದೂಷಿತಜ್ವರದಲ್ಲಿ ನಾಡಿಯು ಮಂದ ಮತ್ತು ಅತಿಶಯ ಸಾವಕಾಶವಾಗಿ ನಡೆಯುತ್ತದೆ. ಒಮ್ಮೊಮ್ಮೆ ಕೈಗೆ ಸಹ ನಾಡಿಯು ಹತ್ತುವದಿಲ್ಲ; ತ್ವಚೆ ಬಿಸಿಬಿಸಿ ಹತ್ತುತ್ತದೆ.

**ಕುತ್ತಿಗೆ, ಬೆನ್ನು:—** ಹಿಂಗುತ್ತಿಗೆಯಲ್ಲಿಯೂ ಬೆನ್ನಿನಲ್ಲಿಯೂ ಸಂಧಿವಾತಜನ್ಯವಾಗಲಿ ವಾತಶೂಲಜನ್ಯವಾಗಲಿ ವೇದನೆ; ಸಾಯಂಕಾಲದಲ್ಲಿಯೂ ಬೆಚ್ಚನ್ನ ಕೋಣೆಯಲ್ಲಿಯೂ ಹೆಚ್ಚಾಗುತ್ತದೆ ಮತ್ತು ತಣ್ಣನ್ನ ಹವೆಯಲ್ಲಿ ಅವಶ್ಯ ನೆಟ್ಟಗಾಗುತ್ತದೆ. ಈ ವೇದನೆ ವಿಶಿಷ್ಟ ಹಾಗೂ ಗೊತ್ತಾದ ಮುದ್ದತಿಗೆ (ಅವಧಿಗೆ) ಬರುವಂಥದಿದ್ದರೆ ಈ ಔಷಧವು ಬಹಳೇ ಉಪಯುಕ್ತವಾದದ್ದು.

**ಕೈಕಾಲು:—** ಸಂದುಗಳಲ್ಲಾಗಲಿ ಇತರತ್ರ ಎಲ್ಲಿಯೋ ಆಗಲಿ ಸಂಧಿವಾತಜನ್ಯ ವೇದನೆ; ಮತ್ತು ವೇದನೆ ಇಲ್ಲಿಂದಲ್ಲೆ, ಅಲ್ಲಿಂದಿಲ್ಲೆ, ಹೀಗೆ ಮೇಲಿಂದ ಮೇಲೆ ವೇದನೆಯು ಸ್ಥಾನ ಬದಲಾಗುತ್ತಿದ್ದರೆ ಹಾಗೂ ಸಾಯಂಕಾಲದಲ್ಲಿಯೂ ಬೆಚ್ಚನ್ನ ಸ್ಥಳದಲ್ಲಿಯೂ ಹೆಚ್ಚಾಗುತ್ತಿದ್ದು ಬಯಲು ಹವೆಯಲ್ಲಿ ಹಗುರೆನಿಸುತ್ತಿದ್ದಲ್ಲಿ ಈ ಔಷಧವು ಬಹಳೇ ಗುಣಕಾರಿಯಾಗುವದು. ಕೈಕಾಲುಗಳಲ್ಲಿ ವಟ್ಟೆ (ವರಟೆ) ಬರುವದು; ಮೊಳಕೈಯಿಂದ ಮುಂಗೈ ವರೆಗೆ ಹಕ್ಕಳಿಯಾಗುವಂಥ ಬೊಕ್ಕೆಗಳು ಆಗೋಣ. ಬಿಸಿನೀರಿನಿಂದ ಹೆಚ್ಚಾಗುವದು.

**ನಿದ್ರೆ ಮುಂತಾದ್ದು:—** ವಾತಶೂಲಿಜನ್ಯ ಮತ್ತು ಮೇಲಿಂದ ಮೇಲೆ ಬದಲಾಗುವ ವೇದನೆ; ಅಸ್ವಸ್ಥ ನಿದ್ರೆ; ನೇಲಿಂದಮೇಲೆ ಎಚ್ಚರಾಗುವದು;

**ಜ್ವರ:—** ಸಾಯಂಕಾಲದಿಂದ ಮಧ್ಯರಾತ್ರಿಯು ವರೆಗೆ ಬೆಳೆಯುವ ಮತ್ತು ಅನಂತರ ಕಡಿಮೆಯಾಗುವ ಯಾವದೇ ಜ್ವರದಲ್ಲಿ ಈ ಔಷಧವು ಉಪಯೋಗವಾಗುವದು. ಬೆವರು ಬರುವದಕ್ಕೋಸ್ಕರ ಇದನ್ನು ಮೇಲಿಂದಮೇಲೆ ಫೆರಂಫಾಸದ ಸಂಗಡ ಕೊಡಬೇಕು; ನಾಲಿಗೆ ಹಳದಿ

ಮತ್ತು ಜಿಗಟು ಇದ್ದಲ್ಲಿ, ಚಳಿ ಜ್ವರದಲ್ಲಿ ಸಹ ಇದನ್ನು ಕೊಡ ಬಹುದು. ಮೈಲಿ, ಗೊಬ್ಬರ ಮುಂತಾದವುಗಳ ಸಂಬಂಧದಿಂದ ಬರುವ ಜ್ವರದಲ್ಲಿಯೂ ಮೈಲಿ ಮತ್ತು ಗೊಬ್ಬರ ಇವು ಅಡಗಿದಲ್ಲಿಯೂ ಆ ಬೊಕ್ಕೆ ಗಳೊಳಗಿಂದ ಹೊಟ್ಟು ಹೊರಡಲಿಕ್ಕೆ ಹತ್ತಿ ತಂಣನ್ನ ಬೆವರು ಬರಹತ್ತಿದರೆ ಈ ಔಷಧದ ಉಪಯೋಗವಾಗುವದು.

**ತ್ವಚೆ:—** ತೆಳ್ಳನ್ನ, ಹಳದಿ, ಸ್ರಾವವಿದ್ದಲ್ಲಿ ಅಥವಾ ಸುತ್ತುಮುತ್ತಲಿನ ಭಾಗವು ಒಣಗಿದ್ದು ಅದರಿಂದ ಹೊಟ್ಟುಹೋಗುವಂಥ ಯಾವದೇ ತ್ವಗ್ರೋಗದಲ್ಲಿ ಈ ಔಷಧ ಕೊಡುವದು ಏಹಿತ. ತ್ವಚೆ ಒಣಗಿದ್ದು, ಬಿಸಿ, ಹುರಬರಕ, ಹಕಳಿಗಟ್ಟುತ್ತಿದ್ದರೆ ಅದರ ಕೆಳಗಿನ ಭಾಗವು ಜಿಗಟಾಗಿರು ತ್ತದೆ. ಸ್ಫೋಟಕ ಜ್ವರದಲ್ಲಿ ಆಗುವ ಹುಂಣುಗಳಲ್ಲಿ ಹೊಟ್ಟು ಹುಟ್ಟಿಸಿ ಹೊಸ ತ್ವಚೆ ತಯಾರಮಾಡುವ ಕಾರ್ಯವು ಈ ಔಷಧದಿಂದಾಗುತ್ತದೆ.. ತುರುಸು ಹುಂಣುಗಳು, ಪಿತ್ತದ ಗಾದರಿಗಳು ( ಪಿತ್ತಗಾದರಿಗಳು ) ಇಸಬು; ಹುರುಕಿನ ಬೊಕ್ಕೆಗಳು ಮುಂತಾದವುಗಳಲ್ಲಿ ಹಳದೀ ಬೊಕ್ಕೆ ಗಳಿದ್ದು ತ್ವಚೆ ಶುಷ್ಕ, ಹುರಬರಕ ಇದ್ದು ಅವುಗಳೊಳಗಿಂದ ಆಮುಯುಕ್ತ ಜಿಗಟು, ಹಳದಿ ರಸಿಕೆ ಇದ್ದರೆ ಅವಶ್ಯವಾಗಿ ಇದನ್ನು ಕೊಡತಕ್ಕದ್ದು. ಉಗುರಿನ ಬೇನೆ; ಉಗುರು ಚನ್ನಾಗಿ ಬೆಳೆಯದಿದ್ದರೆ ಇದರ ಉಪಯೋಗ ವಾಗುವದು. ತ್ವಚೆಯೊಳಗಿಂದ ಬೆವರೇ ಬರುವದಿಲ್ಲ; ( ಮುಸುಕು ಹಾಕಿ ಬಿಸಿ ನೀರಿನೊಳಗಿಂದ ಔಷಧ ಕೊಟ್ಟರೆ ತತ್ಕಾಲ ಬೆವರು ಬಿಡುತ್ತದೆ. ). ದುಷ್ಟ ಗ್ರಂಥಿ ( Epithalial cancer ) ಹಳದಿ, ತೆಳ್ಳನ್ನ ಸ್ರಾವವು ಹೋಗುತ್ತಿದ್ದರೆ.

**ಇತರ ಅವಯುವಗಳು:—** ಯಾವದೇ ತರದ ದಾಹದಲ್ಲಿ ತೆಳ್ಳನ್ನ, ಹಳದಿ, ಹಸರು ಇಲ್ಲವೆ ಕೀವಯುಕ್ತ ಸ್ರಾವವು ಹೋಗುತ್ತಿದ್ದರೆ ಈ ಔಷಧವು ಅವಶ್ಯ ಗುಣ ಕೊಡುವದು. ದುಷ್ಟ ಗ್ರಂಥಿ; ಶ್ಲೇಷ್ಮಲ ತ್ವಚೆ ಯೊಳಗಿಂದ ಹಳದಿ, ಜಿಗಟು ಹಾಗೂ ತಂತುಯುಕ್ತ ಸ್ರಾವಹೋಗುತ್ತಿದ್ದಲ್ಲಿ

**ವೃದ್ಧಿಕ್ಷಯ:—** ಸಾಯಂಕಾಲದಲ್ಲಿ ಬೆಚ್ಚನ್ನ ಕೋಣೆಯಲ್ಲಿ ಎಲ್ಲ ಭಾವನೆಗಳ ವೃದ್ಧಿಯಾಗುತ್ತದೆ. ತಂಣನ್ನ ಹಾಗೂ ಬಯಲು ಹವೆಯಲ್ಲಿ

ಹಗುರಾಗುತ್ತದೆ. ಸಾಯಂಕಾಲದಿಂದ ಮಧ್ಯರಾತ್ರಿಯ ವರೆಗೆ ಜ್ವರವು ಹೆಚ್ಚಾಗಿ ನಂತರ ಕಡಿಮೆಯಾಗುತ್ತದೆ,

**ಉಪಯೋಗ:**—೧೨× ಅಥವಾ ೬× ಶಕ್ತಿಯ ಔಷಧವನ್ನು ಉಪಯೋಗಿಸಬೇಕು. ಜ್ವರದಲ್ಲಿ ಮೇಲಿಂದಮೇಲೆ ಬಿಸಿ ನೀರಿನೊಳಗಿಂದ ಕೊಡಬೇಕು. ತ್ವಗ್ರೋಗದಲ್ಲಿ ಹೊರಗಿನಿಂದ ೨× ಶಕ್ತಿಯ ಔಷಧ (ಮುಲಮು, ಧಾವನ, ಮುಂತಾದ ಕೆಲಸಕ್ಕೆ) ಮತ್ತು ಹೊಟ್ಟೆಯಲ್ಲಿ ೧೨× ಶಕ್ತಿಯ ಔಷಧವನ್ನು ಉಪಯೋಗಿಸಬೇಕು. ಮೈಸೆಟೆಸುವ ರೋಗಗಳಲ್ಲಿ ೬× ಶಕ್ತಿಯ ಔಷಧ ಕೊಡುವದೇ ವಿಹಿತ. ಬಹುದಿವಸದ ಸಂಧಿವಾತ ಪ್ರಮೇಹ, ಉಪದಂಶ ಮುಂತಾದವುಗಳಲ್ಲಿ ಇತರ ಶಕ್ತಿಯ ಔಷದದಿಂದ ಉಪಯೋಗವಾಗದೇ ಇದ್ದಲ್ಲಿ ೨೦೦×ಶಕ್ತಿಯನ್ನು ಕೊಡಬೇಕು. ಕೂದಲು ಉದುರಿ ಬೀಳುತ್ತಿದ್ದರೆ ಹಾಗೂ ಹೊಟ್ಟು ಹೊರಡುವ ತ್ವಗ್ರೋಗಗಳಲ್ಲಿ ೨× ಶಕ್ತಿಯ ಔಷಧವನ್ನು ಶುದ್ಧ ಕೊಬ್ಬರೆ ಎಂಣೆಯಲ್ಲಿ ಕಲಿಸಿ ಹಚ್ಚಬೇಕು, ಕಜ್ಜಿ ಮುಂತಾದ ರೋಗಗಳಿಗೆ ಮುಲಮುಮಾಡಿ ಹಚ್ಚಬೇಕು.

**ಇತರ ಔಷಧಗಳ ಸಂಬಂಧ**:—ಕಾಲೀಮೂರದಿಂದ ಬಂದ ಗುಣವನ್ನು ಪೂರ್ಣಮಾಡಬೇಕಾದ ಸಾಮರ್ಥ್ಯವು ಕಾಲೀಸಲ್ಫದಲ್ಲಿದೆ. ಅಂದರೆ ಕಾಲೀಮೂರನಂತರ ಕಾಲೀಸಲ್ಫ ಇದು ಪೂರಕವೆಂದು ಉಪಯೋಗಿಯಾಗುತ್ತದೆ. ಕರ್ಣ ಬಧಿರತೆ, ಜಠರ ವೇದನೆ; ಸ್ರಾವವು ಬಹಳ ಹೋಗೋಣ. ಇವುಗಳಲ್ಲಿ ನೇಟ್ರಂಮೂರದ ಭಾವನೆಗಳನ್ನು ಅವಶ್ಯ ಲಕ್ಷ್ಯದಲ್ಲಿ ತರಬೇಕು. ನೇಟ್ರಂಮೂರದ ಸ್ರಾವವು ಕಾಲೀ ಸಲ್ಫದಕಿಂತ ತೆಳ್ಳಗೆ ಇರುತ್ತದೆ. ಕೂದಲು ಉದುರುತ್ತಿದ್ದರೆ ಆ ಸ್ಥಳದಲ್ಲಿ ಕಾಲೀಸಲ್ಫದ ಎಂಣೆಯನ್ನು ಹಚ್ಚುವ ಪೂರ್ವದಲ್ಲಿ ನೇಟ್ರಂಮೂರ ೨× ದ ನೀರಿನಿಂದ ತೊಳೆದು ತಿಕ್ಕಬೇಕು.

**ಪ್ರಮಾಣ:**— ಸರತಿಗೆ ೪–೫ ವಟಿಕೆಗಳನ್ನು ಅಥವಾ ೩–೪ ಗುಂಜಿ ಪುಡಿ ೩–೪ ತಾಸಿನ ಅಂತರದಿಂದ ದಿನಾಲು ೩–೪ ಸಾರೆ ಕೊಡಬೇಕು.

---

# ನೇಟ್ರಂ ಫಾಸ್ಫಾರಿಕಂ

## Natrum Phosphoricum

**ಇತರ ಹೆಸರುಗಳು:** – ಸೋಡಿಯಂ ಫಾಸ್ಫೆಟ, ಫಾಸ್ಫೇಟ ಆಫ ಸೋಡಾ, ನೇಟ್ರಂಫಾಸ್ಫರಸ, ಇವು ಇದರ ಇತರ ಹೆಸರುಗಳು.

**ಕಾರ್ಯಕ್ಷೇತ್ರ:**— ರಕ್ತದ ಕಣ, ಸ್ನಾಯು, ಜ್ಞಾನತಂತು, ಮಿದುಳು, ಹಾಗೂ ಪಿಂಡಗಳಲ್ಲಿಯ ರಸದ್ರವ್ಯಗಳು ಇವುಗಳಲ್ಲಿ ಈ ಕ್ಷಾರವು ದೊರೆಯುವದು. ಈ ಕ್ಷಾರವು ಶರೀರದಲ್ಲಿದ್ದದರಿಂದಲೇ ಲ್ಯಾಕ್ಟಿಕ್ ಅಸಿಡದ ಪೃಥಕ್ಕರಣವಾಗಿ ಕ್ಯಾರ್ಬಾನಿಕ ಅಸಿಡ ಮತ್ತು ನೀರು ಸಿದ್ಧವಾಗುತ್ತವೆ. ಶರೀರದಲ್ಲಿ ಸಿದ್ಧವಾದ ಈ ಕ್ಯಾರಬಾನಿಕ ಅಸಿಡವು ಫುಪ್ಫುಸದ ಕಡೆಗೆ ಒಯ್ಯಲ್ಪಡುತ್ತದೆ ಮತ್ತು ಅಲ್ಲಿ (ಫುಪ್ಫುಸದಲ್ಲಿ) ಪ್ರಾಣವಾಯುವಿನ ಮತ್ತು ಅದರ ಸಂಬಂಧವಾಗಿ ಪ್ರಾಣವಾಯು ಒಳಗೆ ಸೇರುತ್ತದೆ ಮತ್ತು ಕಾರ್ಬಾನಿಕ ಅಸಿಡ ಇದು ಹೊರಗೆ ದಬ್ಬಲ್ಪಡುತ್ತದೆ. ಲ್ಯಾಕ್ಟಿಕ ಆಸಿಡ ಬಹಳ ಹೆಚ್ಚು ಪ್ರಮಾಣದಲ್ಲಿ ಬೆಳದದ್ದರಿಂದ ಸಂಭವಿಸುವ ವಿಕೃತಿಗಳ ಮೇಲೆ ಇದರ (ನೇಟ್ರಂ ಫಾಸ್ಫಾರಿಕಂ) ಉಪಯೋಗವಾಗುತ್ತದೆ. ಇದರ ಅಸ್ತಿತ್ವದ ಮೂಲಕವೆ (ಇದು ಇದ್ದದ್ದರಿಂದಲೇ) ಪಿತ್ತವು ಗಟ್ಟಿಯಾಗುವದಿಲ್ಲ. ಆದ್ದರಿಂದ ಕಾಮಣಿ, ಯಕೃತಶೂಲ, ಪಿತ್ತದಿಂದಾಗುವ ಮಸ್ತಕಶೂಲ, ಮುಂತಾದ ವಿಕಾರಗಳು ಆಗಲಾರವು. ಶರೀರದಲ್ಲಿ ಎಲ್ಲೆಲ್ಲಿ ಆಮ್ಲತೆಯ ಪ್ರಮಾಣವು ಬೆಳೆಯುವದೋ ಅಲ್ಲಲ್ಲಿ ಇದರ ಉಪಯೋಗವಾಗುವದು. ಮತ್ತು ಅದರಿಂದ ಕಾಮಣಿ, ಯಕೃತಶೂಲ, ಪಿತ್ತಜನ್ಯ ಶೂಲಿ, ಇವಲ್ಲದೆ ಅಂಗುಲಿವಾತ (ಸಂದುವಾತ, = Joint) ಶೀಘ್ರವಾಗಲಿ ದೀರ್ಘಕಾಲದ್ದಾಗಲಿ ಸಂಧಿವಾತ ಮತ್ತು ಇತರ ಆಮ್ಲತೆಯಿಂದಾಗುವ ರೋಗಗಳಾಗಲಿ ಇವುಗಳನ್ನು ತೆಗೆದು ಹಾಕಲು ಈ ಔಷಧದಲ್ಲಿ ಶಕ್ತಿಯುಂಟು. ಮಾನವೀ ಶರೀರದಲ್ಲಿ ಯಕೃತವೆಂಬುದೊಂದು ಮಹತ್ವದ್ದೂ ದೊಡ್ಡದೂ ರಸಾಯನ ಶಾಲೆಯೇ ಸರಿ ಎಂದೆನ್ನಲಿಕ್ಕೆ ಅಡ್ಡಿ ಇಲ್ಲ. ರಕ್ತದ ಶುದ್ಧೀಕರಣ ಮಾಡುವದು, ಸಕ್ಕರೆ ತಯಾರ ಮಾಡುವದು ಯೂರಿಕ ಅಸಿಡ ಮತ್ತು ಇತರ ನಿಃಸತ್ವ ಪದಾರ್ಥದಿಂದ "ಯೂರಿಯಾ"

ಎಂಬ ಕ್ಷಾರವನ್ನು ತಯಾರ ಮಾಡಿ ಮೂತ್ರಪಿಂಡದ್ವಾರಾ ಹೊರಗೆ ದಬ್ಬ ಲ್ಪಡುವಂಥ ಸ್ಥಿತಿಯಲ್ಲಿ ತಂದುಬಿಡೋಣ, ಪಿತ್ತವನ್ನು ತಯಾರ ಮಾಡಿ ಕರಳುಗಳಿಗೆ ಸಹಾಯಮಾಡೋಣ ಮುಂತಾದ ಅತಿ ಮಹತ್ವದ ರಾಸಾಯನಿಕ ಕಾರ್ಯಗಳು ಇದೇ ಇಂದ್ರಿಯದಲ್ಲಿ ಆಗುತ್ತವೆ. ಯಕೃತದಲ್ಲಿ ಸಿದ್ಧವಾದ ಸಕ್ಕರೆ (ಶರ್ಕರಾ) ರಕ್ತದ ದ್ವಾರಾ ಸ್ನಾಯುಗಳಲ್ಲಿ ಸಂಗ್ರಹಿಸಲ್ಪಡುತ್ತದೆ ಮತ್ತು ಈ ಸಂಗ್ರಹಿಸಲ್ಪಟ್ಟ ಶರ್ಕರೆಯಿಂದಲೇ ಸ್ನಾಯುಗಳ ಗತಿದಾಯಕ ಕಾರ್ಯವು ಜೋರಿನಿಂದ ನಡೆಯುತ್ತದೆಂದು ತಿಳಿಯುತ್ತಾರೆ. ಆದರೆ ಯಕೃತದಲ್ಲಿ ನಡೆಯತಕ್ಕ ಈ ಎಲ್ಲ ಕಾರ್ಯಗಳು ರಕ್ತದಲ್ಲಿ ನೇಟ್ರಂಫಾಸವು ಯೋಗ್ಯಪ್ರಮಾಣದಲ್ಲಿ ಇದ್ದರೇ ನಡೆಯುತ್ತವೆ. ಇದರ ಪ್ರಮಾಣದಲ್ಲಿ ವ್ಯತ್ಯಾಸವಾದಲ್ಲಿ, ರಾಸಾಯನಿಕ ಕ್ರಿಯೆಗಳು (ಬದಲುಗಳು) ಆಗುವದಿಲ್ಲ. ಲ್ಯಾಕ್ಟಿಕ ಅಸಿಡದ ಪೃಥಕ್ಕರಣವಾಗಿ ಅದರಿಂದ "ಕ್ಯಾರ್ಬಾನಿಕ ಅಸಿಡ" ಸಿದ್ಧವಾಗುವದಿಲ್ಲ. ಆದ್ದರಿಂದ ಶರೀರದಲ್ಲಿ ಆಮ್ಲತೆಯು ಹೆಚ್ಚಾಗಿ, ಸಂಧಿವಾತ, ಅಗ್ನಿಮಾಂದ್ಯ, ಕರಳಿನ ರೋಗ ಮುಂತಾದ ವಿಕಾರಗಳು ಹುಟ್ಟುತ್ತವೆ. "ಯುರಿಕ ಅಸಿಡ" ಶರೀರದ ಹೊರಗೆ ಹೋಗದೇ ಇದ್ದಲ್ಲಿ, ಅದರಿಂದ ಯುರೆಟ್ಸವೆಂಬ ಕ್ಷಾರವು ಸಿದ್ಧವಾಗುತ್ತದೆ ಮತ್ತು ಅಲ್ಲಲ್ಲಿ ಸಂದುಗಳಲ್ಲಿ ನಿಂತುಕೊಂಡಿರುತ್ತದೆ. ಅದರಿಂದ (Gonts) ಅಂಗುಲಿವಾತ, ಸಂಧಿವಾತ ಮುಂತಾದ ದೋಷಗಳು ಕಂಡುಬರುತ್ತವೆ. ನೆಣ, ಆಮ್ಲದ ಮೇಲೆ (ಫ್ಯಾಟೀ ಅಸಿಡ್ಸ) ಇವುಗಳ ಪರಿಣಾಮವಾಗಿ ಅಗ್ನಿಮಾಂದ್ಯವು ಆಗುತ್ತದೆ. ನೆಣಯುಕ್ತ (ಎಣ್ಣೆಯು ಹಾಗೂ ತುಪ್ಪದಲ್ಲಿಯ) ಪದಾರ್ಥಗಳನ್ನು ತಿಂದದ್ದರಿಂದ ಉತ್ಪನ್ನವಾಗುವ ಬಹಳ ದಿವಸದ ಅಥವಾ ಸ್ವಲ್ಪ ದಿವಸದ ಬೇನೆಗಳ ಮೇಲೆ ಇದು ಮುಖ್ಯ ಔಷಧವು. ರಕ್ತದಲ್ಲಿ ಶರ್ಕರೆಯ ಪ್ರಮಾಣವು ಹೆಚ್ಚಾಗಿದ್ದಲ್ಲಿ ಅದನ್ನು ಇಲ್ಲದಂತೆ ಮಾಡುವ ಶಕ್ತಿಯು ಈ ಔಷಧದಲ್ಲಿದೆ. ಹಾಲು, ಸಕ್ಕರೆ, ಬೆಲ್ಲ, ಮಿಠಾಯಿ ಮುಂತಾದ ಸವಿಪದಾರ್ಥ ಬಹಳ ತಿಂದದ್ದರಿಂದ ಸಣ್ಣ ಹುಡುಗರಲ್ಲಿ ಆಗುವ ಬೇನೆಗಳಲ್ಲಿ ಈ ಔಷಧದಿಂದ ಬಹಳ ಉಪಯೋಗವಾಗುವದುಂಟು. ಪಾಚಕರಸದಲ್ಲಿ ನೇಟ್ರಂಫಾಸದ ಪ್ರಮಾಣವು ಕಡಿಮೆಯಾಗುತ್ತದೆ. ಅದರಿಂದ ಆಮ್ಲತೆಯು ಹೆಚ್ಚಾಗಿ ಹುಳಿ

ಮೊಸರಿನ ಒಡೆಗಳಂಥ ಕಾರಿಕೆ ಬರುತ್ತದೆ. ಹುಳಿ ತೇಗು ಬರುತ್ತದೆ. ಹೊಟ್ಟೆಶೂಲಿ, ಕೈಕಾಲಿಗೆ ಪರಟೆ ಬರೋಣ, ಮೂತ್ರದೊಳಗಿಂದ ಯುರೆಟ್ಸ್ ಅಂದರೆ ಮೂತ್ರಾಮ್ಲ ಹೆಚ್ಚು ಪ್ರಮಾಣದಲ್ಲಿ ಹೋಗೋಣ, ಹಳದಿ, ಹಸರು ರೇಚವಾಗೋಣ, ಜಂತುಗಳಾಗೋಣ, ಮುಂತಾದ ವಿಕಾರಗಳು ಉದ್ಭವಿಸುತ್ತವೆ. ಈ ತರದ ಬೇನೆಯುಳ್ಳ ಹುಡುಗರು ಅಶಕ್ತರಾಗಿ ದಿನ ದಿನಕ್ಕೆ ಸವೆಯುತ್ತ ಹೋಗುತ್ತಾರೆ. ಆಮ್ಲತೆಯು ಹೆಚ್ಚು ಪ್ರಮಾಣ ದಲ್ಲಿ ಬೆಳೆದದ್ದರಿಂದ ಅಸ್ಥಿಗಳ ಬೆಳೆಗೆಗೆ ಅವಶ್ಯವಿರುವ ಕಲ್ಕೆ. ಫಾಸ (ಸುಂಣ) ವೆಂಬ ಕ್ಷಾರವು ಇಲ್ಲದಂತಾಗುತ್ತದೆ ಮತ್ತು ಅಸ್ಥಿಗಳ ಅಭಿವೃದ್ಧಿಯಾಗು ವದಿಲ್ಲ. ನೇಟ್ರಂಫಾಸವನ್ನು ಕೊಟ್ಟಲ್ಲಿ ಆಮ್ಲತೆಯು ಕಡಿಮೆಯಾಗುತ್ತದೆ. ಮತ್ತು ಅಸ್ಥಿಗಳಲ್ಲಿ ಕಲ್ಕೆರಿಯಾ ಫಾಸ ಕ್ಷಾರದ ಥರಗಳು ಕೂಡಿಕೊಂಡು ಅಸ್ಥಿಗಳ ಅಭಿವೃದ್ಧಿಗೆ ಸಹಾಯವಾಗುತ್ತದೆ. ಹುಳಿ ತೇಗು, ಹುಳಿ ಕಾರಿಕೆ, ಹಸರು ರೇಚ, ನಾಲಿಗೆಯ ಕೆಳಭಾಗದಲ್ಲಿ ಬಂಗಾರದಂಥ ಹಳದಿ, ತೆಳ್ಳನ್ನ ಅಥವಾ ದಟ್ಟ ಕೆನೆಯಂಥ ಕಿಟ್ಟವಾಗೋಣ ಹಾಗೂ ನಾಲಿಗೆಯು ತೊಯ್ದು ದಂತಿರೋಣ— ಇವೆಲ್ಲ ಇದರ ಪ್ರಮುಖ ಲಕ್ಷಣಗಳು. ಕಿರಿನಾಲಿಗೆ, ಗಂಟಲಂಗಳ ಇವುಗಳ ಮೇಲೆ ಸಹ ಹಳದೀ ಕಿಟ್ಟವು ಇರುತ್ತದೆ. ಆಮ್ಲತೆ ಬೆಳದದ್ದರಿಂದಾಗುವ ಯಾವದೇ ಬೇನೆಯ ಮೇಲೆ ಇದರ ಉಪಯೋಗ ವಾಗುವದು ಎಂದು ಮೇಲೆ ಹೇಳಿಯೇ ಅದೆ. ಆಮ್ಲ ಪಿತ್ತಯುಕ್ತ ಜ್ವರ, ಸೆಟೆಬೇನೆ ಮುಂತಾದ ಬೇನೆಗಳಿಗೆ ಇದು ಸಾಗುತ್ತದೆ. ಆಮ್ಲಪಿತ್ತ ದಂತಾಗುವ ಹೊಟ್ಟೆಕಡತದ ಮೇಲೆ ಫೇರಂಫಾಸ ಮತ್ತು ನೇಟ್ರಂಫಾಸ ಬಹಳ ದಿವಸ ಒಂದರನಂತರ ಮತ್ತೊಂದರಂತೆ ಬಿಟ್ಟು ಬಿಟ್ಟು ಕೊಟ್ಟಲ್ಲಿ ಆಮ್ಲಪಿತ್ತದ ರೋಗವು ಇಲ್ಲದಂತಾಗುತ್ತದೆ. ಅಸ್ಥಿ, ಗ್ರಂಥಿ, ಫುಪ್ಫುಸ, ಉದರೇಂದ್ರಿಯ ಮುಂತಾದವುಗಳ ಬೇನೆಗಳಲ್ಲಿ ಸಹ ಈ ಔಷಧ ಕೊಡ ಬಹುದು. ಗಂಡಮಾಲೆ, ಕ್ಷಯಪ್ರಕೃತಿಮೂಲಕ ಕುತ್ತಿಗೆ, ಬಗಲು ಮುಂತಾದ ಸ್ಥಳಗಳಲ್ಲಿ ಮೇಲಿಂದಮೇಲೆ ಉದ್ಭವಿಸುವ ಗ್ರಂಥಿ ರೋಮಗ ಳಲ್ಲಿಯೂ ಕ್ಷಯ ಹಾಗೂ ಕ್ಷಯದಲ್ಲಿಯ ಕೆಮ್ಮಿಗೂ ಇದು ಪ್ರಮುಖ ಔಷಧವು. ಶುಕ್ರಮೇಹ, ಸ್ವಪ್ನಾವಸ್ಥೆ ಮುಂತಾದವುಗಳಲ್ಲಿ ಸಹ ಇದನ್ನು ಕೊಡಬಹುದು. ಈ ಔಷಧದ ನೀರು ಮಾಡಿ ಅದನ್ನು ಸ್ವಲ್ಪ ಪ್ರಮಾಣ

ದಲ್ಲಿ ತ್ವಚೆಯಲ್ಲಿ ಚುಚ್ಚಿ ಹಾಕಿದಲ್ಲಿ ಅಫು ತೆಗೆದುಕೊಂಡದ್ದರಿಂದಾಗುವ ದುಷ್ಪರಿಣಾಮವಿಲ್ಲದಂತಾಗುವದು. ಇಷ್ಟೇ ಅಲ್ಲ. ಅಫು ಸೇವನಮಾಡುವ ಇಚ್ಛೆಯೂ ಇಲ್ಲದಂತಾಗುತ್ತದೆ.

---

## ಪ್ರಮುಖ ಲಕ್ಷಣಗಳು

**ಮಿದುಳು:—** ಏನಾದರೂ ಅನಿಷ್ಟವು ಆಗುವದೆಂಬ ಹೆದರಿಕೆಯು; ಹಾಗೂ ಅದರಿಂದಾಗುವ ಅಸ್ವಸ್ಥತೆ; ಮಂದತೆ; ಮಹತ್ವಾಕಾಂಕ್ಷೆ ವಿರಹಿತತೆ; ಜೋಪಾಪಿತನ; ತ್ರಾಸಿಕ ಪ್ರಕೃತಿಯು; ಕೇವಲ ಸಣ್ಣಕಾರಣದಿಂದ ಸಿಟ್ಟುಬರೋಣ; ಮರವು; ಹತ್ತಲಿನ ಕೋಣೆಯಲ್ಲಿ ಯಾರಾದರೂ ನಡೆಯುತ್ತಾರೆಂಬ ಭಾವನೆ; ರಾತ್ರಿಯಲ್ಲಿ ನಡೆಯುವಾಗ ಬಾಕು, ಮೇಜುಗಳು ಮನುಷ್ಯರೇ ಇದ್ದಾರೆಂಬ ಭಾವನೆ, ಮಾನಸಿಕ ದಣುವಿಕೆ ಬಹಳಾಗಿರುವದು.

**ಮಸ್ತಕ:—** ಹಣೆ ಮತ್ತು ನೆತ್ತಿಯ ಮೇಲೆ ನೋವು ಬಹಳ ಇರುತ್ತದೆ. ಮತ್ತು ಮುಂಜಾನೆ ಎದ್ದನಂತರ ಹೆಚ್ಚಾಗುತ್ತದೆ. ಆ ಕಾಲಕ್ಕೆ ನಾಲಗೆಯ ಕೆಳಭಾಗದಲ್ಲಿ ದಟ್ಟ ಲೇಪವಿದ್ದು ನಾಲಗೆಯು ತೊಯಿದಂತೆ ( ಒದ್ದೆಯಾಗಿ ) ಇರುತ್ತದೆ. ಹುಳಿ ಕಾರಿಕೆಯಾಗಿ ತಲೆ ನೋಯುತ್ತದೆ. (ಫೆ. ಫಾ.) ಅನ್ನಪಚನದ ತಾಪದ ಮೂಲಕ ಕಣ್ಣಿಗೆ ಕತ್ತಲೆಯುಂಟಾಗಿ ಬವಳಿಬರುತ್ತದೆ. (ಫೆರಂ. ಫಾ.) ಹೊಟ್ಟೆಕಡಿಯುತ್ತದೆ ಮತ್ತು ಬುರುಗುಯುಕ್ತ ಹುಳಿ ಕಾರಿಕೆಯಾಗುತ್ತದೆ.

**ನೇತ್ರ:—** ನೇತ್ರದಾಹ; ಕಣ್ಣೊಳಗಿಂದ ಬಂಗಾರದಂಥ ಹಳದಿ ದಟ್ಟ ಸ್ರಾವವು ಹೋಗುತ್ತದೆ; ಮುಂಜಾನೆ ಕಣ್ಣುಗಳು ಮೆತ್ತುತ್ತವೆ. ಅವುಗಳೊಳಗಿಂದ ದಟ್ಟ ಸ್ರಾವವು ಹೋಗುತ್ತದೆ (ಪಿಚ್ಚು) ನೇತ್ರರೋಗದಲ್ಲಿ ಹಳದಿ, ದಟ್ಟ ಸ್ರಾವವಿದ್ದಲ್ಲಿ ನೆಟ್ರಂ ಫಾಸ ವನ್ನು ಉಪಯೋಗಿಸಬಹುದು. ಜಂತುಗಳಾದ್ದರಿಂದ ದೃಷ್ಟಿಯು ಡೊಂಕಾಗುವದು (ಮ್ಯಾ.ಫಾ.) ಜಂತುಗಳನ್ನು ನಾಶಮಾಡಿ ದೃಷ್ಟಿಯನ್ನು ಸುಧಾರಿಸುತ್ತದೆ. ಕಣ್ಣೊಳಗಿಂದ ನೀರುಹೋಗುವಾಗ ಉರಿಯುತ್ತದೆ. ಕಣ್ಣಿನೆದುರಿಗೆ ಹೊಳೆಯುತ್ತದೆ.

ಕಣ್ಣಿನ ಕೆಳರೆಪ್ಪೆಯೊಳಗೆ ಸಣ್ಣ ಸಣ್ಣ ಬೊಕ್ಕೆಗಳು ಇದ್ದರೆ ಇದರ ಉಪಯೋಗ ಬಹಳಾಗುತ್ತದೆ. ಕಣ್ಣಲ್ಲಿ ವೇದನೆ. ದೃಷ್ಟಿಮಾಂದ್ಯ. ಮುಸಮುಸಕು ಕಾಣಿಸೋಣ; ಕಣ್ಣಮುಂದೆ ಪರಿಬಂದಂತೆ ಕಾಣಿಸುತ್ತದೆ.

**ಕಿವಿ:—** ಒಂದು ಕಿವಿಯು ಕೆಂಪು ಇದ್ದು ಬೆಚ್ಚಗೂ ಇರುತ್ತದೆ. ಮೇಲಿಂದಮೇಲೆ ತಿಂಡಿಬಿಡುತ್ತದೆ. ಪೈತ್ತಿಕ ಅಪಚನದ ಭಾವನೆಗಳಿದ್ದಲ್ಲಿ ಹೆಚ್ಚು ಉಪಯೋಗವಾಗುವದು; ಕಿವಿಯ ಇತರ ಹೊರಭಾಗದಲ್ಲಿ ನೋಯುವದೂ, ಉರಿಯುವದೂ, ತುರಿಸುವದೂ; ಕಿವಿಯೊಳಗಿಂದ ಕೆನೆಯಂಥ ಹಳದಿ ಸ್ರಾವವು ಹರಿಯುವದೂ; ಹಕಳೆಗಟ್ಟುವದೂ; ಕಿವಿಯಲ್ಲಿ ಘುಣಘುಣ ಎಂಬ ಸಪ್ಪಳವೂ ಇದ್ದಲ್ಲಿ.

**ಮೂಗು:—** ಮೂಗು ತುರಿಸುವದು; ಬಹಳ ಜಂತುಗಳಾಗಿದ್ದರೆ ಅಥವಾ ಜಠರದಲ್ಲಿ ಆಮ್ಲತೆಯು ಬೆಳೆದಿದ್ದರೆ ಈ ಭಾವನೆಯು ಕಂಡುಬರುತ್ತದೆ; ಚಳಿ; ನೆಗಡಿ; ದಟ್ಟ ಕೆನೆಯಂಥ ಅರಿಷಿಣಬಣ್ಣದ ಸುಂಬಳಬರೋಣ; ಮೂಗಿಗೆ ತಿಂಡಿಬಿಡೋಣ; ಮೂಗಿಗೆ ದುರ್ಗಂಧ ಇರೋಣ.

**ಮುಖಚರ್ಯೆ:—** ಕೆಂಪು ಇದ್ದು ಕರೇಕಲೆಗಳು ಬಿದ್ದಿರುತ್ತವೆ; ಕಲೆಗಳು ಎಷ್ಟು ತೀವ್ರ ಉದ್ಭವಿಸುತ್ತಿರುವವೋ ಅಷ್ಟೇ ತೀವ್ರ ನಾಶ ಹೊಂದುತ್ತವೆ. ಚರ್ಯೆ ಕೆಂಪು ಇರುತ್ತದೆ, ಆದರೆ ಜ್ವರವಿರುವದಿಲ್ಲ. ಮೂಗು ಮತ್ತು ಸುತ್ತಮುತ್ತಲಿನ ಭಾಗವು ಬಿಳೇದಿರೋಣವು ಹೊಟ್ಟೆಯಲ್ಲಿರುವ ಜಂತಿನ ಅಥವಾ ಹೊಟ್ಟೆಯಲ್ಲಿದ್ದ ಆಮ್ಲತೆಯ ಲಕ್ಷಣವು. ನಾಲಿಗೆಯು ಹಳದೀಯಿದ್ದಲ್ಲಿ ಈ ಔಷಧವು ವಿಶೇಷ ಉಪಯೋಗವಾಗುವದು. ಚರ್ಯೆಯಲ್ಲಿ ಚುಚ್ಚಿದಂತೆ ವೇದನೆ. ಬಲಗಡೆಯ ಗದ್ದದ ಕೆಳಭಾಗದಲ್ಲಿ ನೋಯುವದು.

**ಮೋರೆ:—** ತಾಲುವಿನ ಹಿಂದಿನ ಭಾಗದಲ್ಲಿ ಕೆನೆಯಂಥ ಹಳದಿ ಕಿಟ್ಟವಿರೋಣ; ಉಪಜಿಹ್ವಿಕೆಯಲ್ಲಿಯೂ ಗಂಟಲದಲ್ಲಿಯೂ ದಟ್ಟ ಬಂಗಾರದಂಥ ಹಳದಿ ಸ್ರಾವವು ತುಂಬಿಕೊಂಡಿರುವದು; (ಘಟಸರ್ಪ) ನಾಲಿಗೆಗೆ ಹುಳಿ ರುಚಿ ಇದ್ದು ಬಾಯಿಬಂದಿದ್ದರೆ ಇದು ಬಹಳೇ ಹಿತಕರವು. (ಕಾಲೀಮೂರ್-ಕಾಲೀ ಫಾಸ.)

**ನಾಲಿಗೆ:—** ಈ ಔಷಧದ ಮುಖ್ಯ ಲಕ್ಷಣವೆಂದರೆ ನಾಲಿಗೆಯು ಹಸಿ ಇದ್ದು ಅದರ ಕೆಳಗಿನ ಭಾಗದಲ್ಲಿ ದಟ್ಟ ಕೆನೆಯಂಥ ಹಳದೀ ಕಿಟ್ಟವಿರುತ್ತದೆ. ರೋಗವು ಯಾವದೇ ಇರಲಿ, ಮೇಲೆ ಹೇಳಿದಂತೆ ಲಕ್ಷಣ ವಿದ್ದಲ್ಲಿ ನೇಟ್ರಂ ಫಾಸವು ಅವಶ್ಯ ಗುಣಕೊಡುವದು. ನಾಲಿಗೆಯು ತುದಿಗೆ ಕೂದಲು ತೊಡಕಿದಂತೆ ಭಾವನೆ. ನಾಲಿಗೆಯ ಮೇಲೆ ಹುಣ್ಣುಗಳೂ ಏಳುತ್ತವೆ.

**ಹಲ್ಲು:—** ನಿದ್ರೆಯಲ್ಲಿ ಸಣ್ಣ ಹುಡುಗರು ಹಲ್ಲುಗಳನ್ನು ಕರಕರ ತಿನ್ನುತ್ತಾರೆ. ಅಪಚನಕ್ಕಾಗಲಿ ಜಂತಿಗಾಗಲಿ ಈ ಭಾವನೆ ಆಗುವದುಂಟು. ಹಲ್ಲು ಒಡೆಯುವ ಕಾಲದಲ್ಲಾಗುವ ಅಪಚನಕ್ಕೆ ಇದರ ಉಪಯೋಗ ವಾಗುವದು.

**ಗಂಟಲು:—** ಉಪಜಿವ್ಹಿಕೆಯಲ್ಲಿಯೂ, ಗಂಟಲದಲ್ಲಿಯೂ ದಾಹ ಬಾವು ಮುಂತಾದವು ಇದ್ದು ಅವುಗಳ ಮೇಲೆ ಹಳದಿ ಗಟ್ಟಿ ಕೆನೆಯಂಥ ಹಸಿ ಕಿಟ್ಟ (ಲೇಪ) ವಿದ್ದಲ್ಲಿ ಇದರ ಉಪಯೋಗವಾಗುವದು. ಘಟಸರ್ಪ; ಗಂಟಲದಲ್ಲಿ ಏನಾದರೂ ಗುಂಡು ಸಿಕ್ಕಿರುವಂತೆ ಭಾವನೆ ಇದ್ದು ನೀರು ಕುಡಿಯುವ ಕಾಲಕ್ಕೆ ತಾಪವಾಗುತ್ತದೆ. ಗಂಟಲು ನೋಯುವದು, ಶೀತ ವಾಗಿರುವದು, ಹಳದೀ ಕಫ ಬೀಳುವದು. ರಾತ್ರಿಯಲ್ಲಿ ಹೆಚ್ಚಾಗುವದು.

**ಜಠರ:—** ಲ್ಯಾಕ್ಟಿಕ ಆಸಿಡ ಹೆಚ್ಚಾದ್ದರಿಂದ ಆಗುವ ಆಮ್ಲತೆ; ಗಂಟಲದಲ್ಲಿ ಹುಳಿ ಸುಡುವದು. ಗಂಟಲದಲ್ಲಿ ಹುಳಿಸುಡುವ ಭಾವನೆ ಇರುವ ಯಾವದೇ ರೋಗದಲ್ಲಿಯೂ ನಾಲಿಗೆಯು ಹಸಿಯಾಗಿದ್ದು ಅದರ ಮೇಲೆ ದಟ್ಟ, ಹಳದಿ ಕೆನೆಯಂಥ ಕಿಟ್ಟವಿರುವ ಯಾವದೇ ಜಠರ ವಿಕೃತಿ ಯಲ್ಲಿಯೂ ಇದನ್ನು ಕೊಡಬಹುದು. ಹುಳಿಸುಡುವ ಭಾವನೆ ಇದ್ದ ಅಗ್ನಿಮಾಂದ್ಯದಲ್ಲಿ ( ಪಚನ ಶಕ್ತಿಯನ್ನು ಬೆಳೆಸುವ ಬಗ್ಗೆ ಜತೆಗೆ ಫೇರಂ ಫಾಸ ಕೊಡಬೇಕು.) ಜಠರದಲ್ಲಿ ವ್ರಣ, ಕೊರಕಲ ಅಥವಾ ಬಿರುಕು ಬಿಡೋಣ; ಊಟವಾದನಂತರ ಜಠರದ ವಿಶಿಷ್ಟಭಾಗದಲ್ಲಿ ನೊಯ್ಯೋಣ; ಹುಳಿ ಅಥವಾ ಕಾಫಿಯ ಬೀಜದಂತೆ ಕರ್‍ರಗೆ ವಾಂತಿಯಾಗೋಣ, ಉಂಡದ್ದು ಗಂಟಲವರೆಗೆ ಬಂದಂತೆ ಅನಿಸೋಣ; ಹಸಿವೆಯ ಅಭಾವ, ಅಂದರೆ ಹಸಿವೆ ಇಲ್ಲದಿರೋಣ ಮುಂತಾದ ಭಾವನೆಗಳಿದ್ದಲ್ಲಿ ಕಲ್ಕೆ. ಫಾ; ಫೆರಂ ಫಾ.

ಇವುಗಳನ್ನು ನೇಟ್ರಂಫಾಸದ ಜತೆಗೆ ಬಹಳ ದಿವಸ ಕೊಟ್ಟಲ್ಲಿ ಹಿತವಾಗು ವದು. ಅಪಚನ, ಬೇನೆಯಲ್ಲಿ ವಾಯು ತುಂಬಿಕೊಂಡಿರೋಣ, ತಲೆ ನೋಯೋಣ, ಕಣ್ಣಿಗೆ ಕತ್ತಲೆ ಬರೋಣ ಈ ಭಾವನೆಗಳಿದ್ದು ಆಮ್ಲಪಿತ್ತದ ಇತರ ಭಾವನೆಗಳೂ ಇದ್ದರೆ ಈ ಔಷಧದ ಉಪಯೋಗ ವಾಗುತ್ತದೆ. ಗಂಟಲದಲ್ಲಿ ಹುಳಿಸುಡೋಣವಿದ್ದು ಬಾಯಿಗೆ ನೀರು ಬಿಡೋಣ, ತೇಗುಬರೋಣ; ಮಳಮಳಿಸೋಣ; ಹುಳಿ ವಾಂತಿ ಯಾಗೋಣ ಮತ್ತು ವಾಂತಿಯಲ್ಲಿ ಅನ್ನ ಬೀಳದೆ ಮೊಸರಿನಂಥ ಗಟ್ಟಿ ಪಡೆಗಳು ಬೀಳುತ್ತವೆ, ಇಂಥ ಪ್ರಸಂಗದಲ್ಲಿ ಕೊಡಬೇಕು. ಆಮ್ಲ ಪಿತ್ತದಲ್ಲಿ ಹೊಟ್ಟೆನೋವಿಗೆ ಇದು ಪ್ರಮುಖ ಔಷಧವು. ಊಟವಾದ ಬಳಿಕ ಎರಡು ತಾಸಿನ ನಂತರ ಹೊಟ್ಟೆಶೂಲಿ ಆಗೋಣ; ಫೇರಂ. ಫಾ. ಮತ್ತು ಈ ಔಷಧ ಒಂದರ ನಂತರ ಇನ್ನೊಂದು ಹೀಗೆ ಕೊಟ್ಟಲ್ಲಿ ಬೇನೆಯು ಇಲ್ಲದಂತಾಗುತ್ತದೆ. ಸಣ್ಣ ಹುಡುಗರಿಗೆ ಪಿತ್ತ ಅಥವಾ ಜಂತುಗಳಿದ್ದಾಗ ಹೊಟ್ಟೆ ನೋಯುವಾಗ; ಹಸರು ಹುಳಿನಾತವಿರುವ ರೇಚಗಳಾಗುವಾಗ ಮತ್ತು ಹುಳಿ ನಾತವಿದ್ದ ವಾಂತಿಯಾಗುವಾಗ, ಹೊಟ್ಟೆಯಲ್ಲಿ ಕಲಕಲಿಸು ವಾಗ, ಹಾಗೂ ಹೊಟ್ಟೆಯ ಮೇಲೆ ಭಾರವನ್ನು ಇಟ್ಟಂತೆ ಭಾವನೆ ಇದ್ದಾಗ, ಎಂಣೆ, ತುಪ್ಪ ಮುಂತಾದ ಪದಾರ್ಥಗಳು ಹೊಟ್ಟೆಗೆ ತಡೆಯುವ ದಿಲ್ಲ, ಇಂಥ ಸಮಯದಲ್ಲಿ ಇದನ್ನು ಕೊಡಬೇಕು.

**ಉದರ ಮತ್ತು ಮಲ:—** ಸಣ್ಣ ಮಕ್ಕಳಿಗೆ ಯಾವಾಗಲೂ ಅವರೋಧವಿದ್ದು ನಡುನಡುವೆ ಹಸರು ವರ್ಣದ ಹುಳಿನಾತದ ರೇಚ ವಾಗುತ್ತವೆ. ಯಕೃತವು ಬಿರುಸಾಗಿ ಬೆಳೆದದ್ದೂ ಇರುತ್ತದೆ. ಪ್ರೌಢ ಮನುಷ್ಯನಿಗೆ ಪೈತ್ತಿಕ ಅತಿಸಾರವಿದ್ದರೆ ರೇಚವು ಹಸರು ಬಣ್ಣದ್ದಿದ್ದು ಹುಳಿ ನಾತವಿರುತ್ತದೆ. ಅದರಲ್ಲಿಯೇ ಜಿಗಟು ಲೋಳೆಯಿರುವದು. ಒಮ್ಮೊಮ್ಮೆ ಲೋಳೆಯುಳ್ಳ ಗಂಟು ಗಂಟು ಸಹ ಬೀಳುತ್ತವೆ. ಶೌಚದ ಕಾಲಕ್ಕೆ ತಿಣಕುವದು. ಮಲವು ಸ್ವಲ್ಪ ಹೋಗುತ್ತದೆ ಆದರೆ ಮೇಲಿಂದ ಮೇಲೆ ಹೋಗಬೇಕಾಗುತ್ತದೆ. ( ಕಾಲೀ. ಮೂರ ) ವಾತಯುಕ್ತ ಹೊಟ್ಟೆಶೂಲಿ ಒಮ್ಮೊಂದೊಮ್ಮೆ ಶೌಚಕ್ಕೆ ಬಹಳ ಒತ್ತಾಯವಾಗುತ್ತದೆ. ಪುರುಸೊತ್ತಿಗೆ ಸಹ ಉಳಿಯುವದಿಲ್ಲ. ಕೆಳಹೊಟ್ಟೆಯಲ್ಲೆಲ್ಲ ಬಲಗಡೆ ಭಾಗಕ್ಕೆ ನೋವು

ಇರುತ್ತದೆ. ಎಲ್ಲ ತರದ ಜಂತುಗಳಿಗೆ ಇದು ಪ್ರಮುಖ ಔಷಧವು. ಮೂಗು ತುರಿಸೋಣ, ಗುದದ್ವಾರದಲ್ಲಿ ತಿಂಡಿ ಇರೋಣ, ಪಿತ್ತ ಬೆಳೆಯೋಣ, ನಿದ್ದೆ ಅಸ್ವಸ್ಥವಿರೋಣ, ಡೊಂಕ ನೋಡೋಣ, ಮುಂತಾದ ಭಾವನೆಗಳಿದ್ದಲ್ಲಿ ಜಂತಿನ ಮೇಲೆ ಇದು ಒಳ್ಳೆ ಔಷಧವು. ಈ ಔಷಧದ ( ಬಸ್ತಿ=ಎನಿಮಾ= ರೇಚ ಮಾಡುವದಕ್ಕೋಸ್ಕರ ಗುದದ್ವಾರದಿಂದ ನೀರು ಸೇರಿಸೋಣಕ್ಕೆ ಬಸ್ತಿ ಅನ್ನುತ್ತಾರೆ ) ಬಸ್ತಿ ಕೊಟ್ಟಲ್ಲಿ ಬಹಳ ಉಪಯೋಗವಾಗುತ್ತದೆ. ಪಿತ್ತವು ಕಡಿಮೆಯಾದಲ್ಲಿ ಹಸರಾಗಲಿ ಬೆಳ್ಳಗಾಗಲಿ ರೇಚವಾಗುತ್ತವೆ. ಕಾಮಣಿ ಸಹ ಇರುತ್ತದೆ. ಆಂತ್ರವ್ರಣದಲ್ಲಿ ಸಹ ಇದರ ವಿಶಿಷ್ಟ ಭಾವನೆ ಗಳಿದ್ದಲ್ಲಿ ಉಪಯೋಗವಾಗುತ್ತದೆ. ಬಹಳ ದಿವಸದ ಅವರೋಧವಿದ್ದಲ್ಲಿ ಸಹ ಕೊಡಬಹುದು.

**ಮೂತ್ರೇಂದ್ರಿಯ**:— ಮೇಲಿಂದ ಮೇಲೆ ಮೂತ್ರಕ್ಕೆ ಹೋಗುವ ಅಪೇಕ್ಷೆ; ಮೂತ್ರವನ್ನು ಬಹಳ ವೇಳೆ ತಡೆದು ಹಿಡಿಯೋಣವು ಅಶಕ್ಯ ವಾಗೋಣ; ಇಚ್ಛೆಯಾದ ಕೂಡಲೆ ಹೋಗಲೇಬೇಕೆಂದು ಅನಿಸೋಣ; ಸಣ್ಣ ಮಕ್ಕಳಲ್ಲಿ ಇದು ಹೆಚ್ಚಾಗಿರುತ್ತದೆ. ಪ್ರೌಢ ಜನರಿಗೆ ಮೇಲಿಂದ ಮೇಲೆ ಮೂತ್ರ ಬಾಧೆಯಾಗೋಣ; ಮೂತ್ರ ಮಾಡುವಾಗ ತಿಣಕೋಣ; ನಡುವೆ ಮೂತ್ರವು ನಿಂತು ಪುನಃ ಆಗೋಣ; ಯಕೃತ ದೋಷದಿಂದ ಕೆಲಕಾಲ ಆಗುವ ಮಧುಮೇಹ; ಸಂಧಿವಾತದಲ್ಲಿ ಕೆಂಪಗಾಗಲೀ, ಕರ್‍ರ ಗಾಗಲೀ ಮೂತ್ರವಾಗುತ್ತಿದ್ದರೆ ಇದರ ಉಪಯೋಗವಾಗುತ್ತದೆ. (ಫೇರಂ. ಫಾ).

**ಪುರುಷರ ಜನನೇಂದ್ರಿಯ**:— ಕಾಮುಕ ಸ್ವಪ್ನ ಬೀಳದಲೇ ಸ್ವಪ್ನಾವಸ್ಥೆಯಾಗೋಣ; ಸ್ವಪ್ನಾವಸ್ಥೆಯನಂತರ ಅಶಕ್ತತೆಯೆನಿಸೋಣ ಹಾಗೂ ಕಂಪವೂ ಇರೋಣ; ಧಾತುವು ನೀರಿನಂತೆ ತೆಳ್ಳಗಾಗೋಣ; ಸಂಭೋಗೇಚ್ಛೆ ಕೆಲ ವೇಳೆ ಪ್ರಬಲವಿರುತ್ತದೆ ಆದರೆ ಕೆಲ ವೇಳೆ ಇರುವದೇ ಇಲ್ಲ. ವೃಷಣವು ಎಳೆದಂತೆ ಇರುವದು.

**ಸ್ತ್ರೀಯರ ಜನನೇಂದ್ರಿಯ**:— ಮುಟ್ಟು ತೀವ್ರವಾಗುತ್ತದೆ ಹಾಗೂ ಅದು ಇರತಕ್ಕಷ್ಟು ಕೆಂಪು ಇರುವದಿಲ್ಲ. ಮುಟ್ಟು ಇರುವಕಾಲಕ್ಕೆ

ಮಧ್ಯಾಹ್ನದಲ್ಲಿ ಹುಬ್ಬುಗಳು ಹಾಗೂ ತಲೆ ನೋಯುತ್ತವೆ. ಮುಟ್ಟು ಆಗುವದು ಮುಗಿದನಂತರ ನೋವು ಹೆಚ್ಚಾಗುತ್ತದೆ. ಮೊಳಕಾಲಿನಲ್ಲಿ ಎಳೆದಂತೆ, ಎಳಕೊಂಡು ಹಿಡದಂತೆ ಅನಿಸುತ್ತದೆ. ಗರ್ಭಾಶಯ ಸ್ಖಲನ; ಸಂಧಿವಾತ ಜನ್ಯ ವೇದನೆ ಇದ್ದು ಗರ್ಭಾಶಯ ಭ್ರಂಶವಾಗುವದು. ಬಂಜೆ ಸ್ತ್ರೀಯರಲ್ಲಿ ಗರ್ಭಾಶಯ ಮಾರ್ಗದಿಂದ ಹುಳಿನಾತವಿದ್ದಂಥ ಸ್ರಾವವು ಹೋಗುತ್ತದೆ. ಈ ಹುಳಿಯಿದ್ದ ಸ್ರಾವವೇ ಗರ್ಭಧಾರಣಕ್ಕೆ ಅಡ್ಡಿ ಮಾಡುವದು. ಪ್ರದರದಲ್ಲಿ ದಟ್ಟ, ಜೇನತುಪ್ಪದಂಥ ಗಟ್ಟಿಯಾಗಲಿ ಇಲ್ಲವೆ ತೆಳ್ಳಗೆ ಹುಳಿ ನಾತವುಳ್ಳ, ಹಳದಿ ಬಂಣದ, ಉರಿಯುವಂಥದಾಗಲಿ ಸ್ರಾವವು ಹೋಗುತ್ತಿದ್ದರೆ ಈ ಔಷಧವು ಹಿತಕರ. ಮುಟ್ಟು ಸಹ ಹುಳಿ, ದುರ್ಗಂಧಯುಕ್ತ ಮತ್ತು ಉರಿಯುವಂಥದು ಇರುವದು. ಮುಟ್ಟು ಅನಿಯಮಿತ; ಮುಟ್ಟಿನಕಾಲಕ್ಕೆ ಅಸ್ವಸ್ಥತೆ ಮತ್ತು ನಿದ್ರನಾಶ; ಗರ್ಭಿಣಿ ಇದ್ದಕಾಲಕ್ಕೆ ಹುಳಿ ವಾಂತಿಯಾಗುತ್ತದೆ. ಮಳಮಳಿಸಿ ಗಂಟಲದಲ್ಲಿ ಹುಳಿಸುಡೋಣ ಇರುವದು.

**ಶ್ವಸನೇಂದ್ರಿಯ:**— ಚಳಿಯಿಂದಾಗುವ ಶ್ವಸನೇಂದ್ರಿಯದ ರೋಗ ಗಳಲ್ಲಿ ಪೈತ್ತಿಕಭಾವನೆಗಳಿದ್ದರೆ ಈ ಔಷಧವನ್ನು ಇತರ ಯೋಗ್ಯ ಔಷಧ ಗಳನ್ನು ಕೊಡುತ್ತಿರುವಾಗ ನಡುನಡುವೆ ಕೊಡುತ್ತಿರಬೇಕು. ತರುಣ ವಯಸ್ಸಿನಲ್ಲಿ ಉದ್ಭವಿಸುವ ಹಾಗೂ ತೀವ್ರ ಬೆಳೆಯುವ ಮತ್ತು ವಿಶೇಷತಃ ಮುಟ್ಟಾಗುವ ಕಾಲಕ್ಕೆ ಆನುವಂಶಿಕ ಪೀಡೆಯಾಗುವಂಥ ಹುಡುಗೆಯರಿಗೆ ಆಗುವ ಕ್ಷಯರೋಗದಲ್ಲಿ ಕೊಡಬೇಕು. ಎದೆಯಲ್ಲಿ ನೋವು ಇದ್ದಾಗ– ಎದೆ ಒತ್ತಿದರೆ ಹಾಗೂ ದೀರ್ಘಶ್ವಾಸ ತಕ್ಕೊಂಡರೆ ಕಷ್ಟವಾಗುತ್ತದೆ ಆಗ್ಯೆ. ತುಟಿಗಳು ಉರಿಯುವಂಥ ಕಫ ಬೀಳುತ್ತಿದ್ದಲ್ಲಿ ಇದನ್ನು ಕೊಡಬೇಕು.

**ರುಧಿರಾಭಿಸರಣ:**— ಹೃದಯದ ಸುತ್ತುಮುತ್ತಲು ಕಂಪವಿರೋಣ ಉಂಡನಂತರ ಹೆಚ್ಚಾಗೋಣ; ಹೃದಯದ ಸುತ್ತುಮುತ್ತಲು ವೇದನೆ ಇರೋಣ; ಹೃದಯದಲ್ಲಿ ವೇದನೆ ಸುರುವಾದನಂತರ ಸಂದುಗಳಲ್ಲಿಯು ಹಾಗೂ ಬೊಟ್ಟುಗಳಲ್ಲಿಯು ವೇದನೆ ಕಡಿಮೆಯಾಗುತ್ತವೆ ಆಗ್ಗೆ; ಹೃದಯ ದಲ್ಲಿ ಧಡಧಡಿಸುವದು; ಹೃದಯದ ಕ್ರಿಯೆಯು ಅನಿಯಮಿತವಿದ್ದಾಗ್ಗೆ.

ಇದನ್ನು ಕೊಡಬೇಕು. ಕಷ್ಟವಿಲ್ಲದೆ ಪಚನವಾಗುವಂಥ ಹಗುರ ಅನ್ನ ಕೊಡಬೇಕು. ಶೌಚಕ್ಕೆ ಸೆಟ್ಟಗೆ ಆಗುವದರ ಕಡೆಗೆ ಲಕ್ಷ್ಯವಿಡಬೇಕು.

**ಕುತ್ತಿಗೆ ಮತ್ತು ಬೆನ್ನು:—** ಹಿಂಗುತ್ತಿಗೆಯ ಗ್ರಂಥಿಗಳು ಬಾತಿರುವವು. ಹಿಂಗುತ್ತಿಗೆಯು ಬಿಗಿಯೋಣ; ಕುತ್ತಿಗೆಯಲ್ಲಿ ಬಾವು ಬರೋಣ; ಬೆನ್ನಿನಲ್ಲಿ ಅಶಕ್ತತೆಯ ಭಾಸನೆ ಇರೋಣ. ಇಂಥ ಕಾಲಕ್ಕೆ ಈ ಔಷಧ ಕೊಡಬೇಕು.

• **ಕೈಕಾಲು:—** ಕೈಕಾಲುಗಳು ತಂಣಗಾಗೋಣ; ಅವುಗಳಲ್ಲಿ ಅಸ್ಥಿರತೆ ನಡೆಯುವಾಗ ಕಾಲುಗಳಲ್ಲಿ ಸ್ನಾಯು ವೈಕಲ್ಯವು, ಎಲ್ಲತರದ ಸಂಧಿವಾತ ಹೊಸದಿರಲಿ ಬಹಳ ದಿವಸದ್ದಿರಲಿ; ಅಂಗುಲಿವಾತ ಇವುಗಳ ಮೇಲೆ ಇತರ ಔಷಧಗಳ ಜೊತೆಗೆಯಾಗಲಿ ನಡುನಡುವೆ ಬಿಟ್ಟು ಬಿಟ್ಟಾಗಲಿ ಈ ಔಷಧವನ್ನು ಕೊಡಬೇಕು. ಸಂಧಿವಾತಜನ್ಯವೇದನೆ; ಸಂಧಿವಾತಜ್ವರ. ಹುಳಿ ಬೆವರು ಬಿಡೋಣ; ಸಂದುಗಳಲ್ಲಿ ಕರಕರ ಸಪ್ಪಳವಾಗುತ್ತದೆ ಮತ್ತು ಅವು ನೋಯುತ್ತವೆ. ಮೊಳಕಾಲು, ಮುಂಗೈ, ಹರಡಿಗಳು, ಅಂಗಾಲು ಮುಂತಾದವುಗಳಲ್ಲಿ ವೇದನೆ; ಮೊಳಕಾಲಿನಲ್ಲಿ ಬಾವು ಇದ್ದು ಅದರಲ್ಲಿ ನೀರು ತುಂಬುತ್ತದೆ. ಮತ್ತು ಕರಕರ ಸಪ್ಪಳಾಗುತ್ತದೆ; ಬರೆಯುವ ಕಾಲಕ್ಕೆ ಕೈಯಲ್ಲಿ ನೋವು ಮತ್ತು ಕಂಪವೂ ಬರುತ್ತದೆ. ಸಂದುಗಳಲ್ಲಿ ಅಥವಾ ಬೊಟ್ಟುಗಳಲ್ಲಿಯ ವೇದನೆ ನಿಂತು ಒಮ್ಮಿಂದೊಮ್ಮೆ ಹೃದಯ ಭಾಗದಲ್ಲಿ ವೇದನೆ ಪ್ರಾರಂಭವಾಗುತ್ತದೆ. ಅಂಗುಲಿವಾತ ( ಗಾವುಟ; ಸೇಟ್ರುಂಸಲ್ಫ )

**ನಿದ್ರೆ ಮುಂತಾದ್ದು;—** ಜಂತಿನಿಂದ ಕರಳುಗಳಲ್ಲಿ ಅಸ್ವಸ್ಥತೆಯುಂಟಾಗಿ ಅದರಲ್ಲಿಯೇ ದೃಷ್ಟಿಯು ಡೊಂಕಾಗುವದು; ಮುಖ ಭಾಗದಲ್ಲಿಯ ಸ್ನಾಯುಗಳು ಹಾರಲಿಕ್ಕೆ ಹತ್ತೋಣ; ಹಲ್ಲು ಕರಕರ ಸಪ್ಪಳ ಮಾಡೋಣ ಮುಂತಾದ ಭಾವನೆಗಳು ಇರುತ್ತವೆ. ಮಾನಸಿಕ ಶ್ರಮದಿಂದಾಗಲಿ ಅತಿಶಯ ಸಂಭೋಗದಿಂದಾಗಲಿ ಜಠರದಲ್ಲಿ ಕಲಕಲಸೋಣ, ಕುತ್ತಿಗೆ ಬಿಗಿಯುತ್ತದೆ, ಹೃದಯದ ಸುತ್ತಮುತ್ತಲು ಕಂಪವಿರುತ್ತದೆ. ಮತ್ತು ಎದೆ ಧಡಧಡಿಸುತ್ತದೆ; ದಣುವಿಕೆ ಮತ್ತು ಅಶಕ್ತತೆಯು ಬಹಳ ಇರುತ್ತದೆ. ಜಂತಿ

ಸಿಂಪ ನಿದ್ರೆ ಅಸ್ವಸ್ಥವಿದ್ದು ರೋಗಿಯು ಮಂದಸಿರುತ್ತಾನೆ ಹಾಗೂ ಗುದ ದ್ವಾರದಲ್ಲಿ ತಿಂಡಿ ಇರುತ್ತದೆ. ಆದರಿಂದ ನಿದ್ರೆಯು ಕೆಡುತ್ತದೆ. ನಿದ್ದೆಯಲ್ಲಿ ಹಲ್ಲು ಕಟಕರಿಸೋಣ, ಗಾಬರಿಯಾಗಿ ಏಳೋಣ, ಒದರೋಣ, ಕಾಮುಕ ಸ್ವಪ್ನಗಳು ಬೀಳೋಣ ಮುಂತಾದ ಲಕ್ಷಣಗಳಿರುತ್ತವೆ.

**ಜ್ವರ:—** ಶೀತಜ್ವರ, ಜ್ವರದಲ್ಲಿ ಗಟ್ಟಿ ಹಾಗೂ ಹುಳಿ ಕಾರಿಕೆಯು, ಪೈತ್ತಿಕ ಭಾವನೆಗಳಿದ್ದು ಜ್ವರವಿದ್ದಲ್ಲಿ ಈ ಔಷಧದ ಉಪಯೋಗವಾಗುತ್ತದೆ. ಬೆವರಿಗೆ ಹುಳಿನಾತ ಬಹಳಿದ್ದಲ್ಲಿ ಈ ಔಷಧವು ವಿಶೇಷ ಗುಣ ಕೊಡುವದು. ಯಾವಾಗಲೂ ಕಾಲುಗಳು ಬರ್ಫಸಂತೆ ತಂಣಗಿದ್ದು ರಾತ್ರಿಯಲ್ಲಿ ಉರಿಯುತ್ತವೆ. ನಡುನಡುವೆ ಮೋರೆಯು ಕೆಂಪಾಗುತ್ತದೆ. ಮತ್ತು ಮಧ್ಯಾಹ್ನದಲ್ಲಿ ತಲೆ ನೋಯುತ್ತದೆ.

**ತ್ವಚೆ:** ತ್ವಚೆಯಲ್ಲಿ ನೋವು; ಸ್ವಲ್ಪ ತುರಿಸಿದ ಕೂಡಲೆ ಸುಲಿದಂತೆ ಆಗುತ್ತದೆ. ಉರಿಯುವ ಪೈಣು. ತುರಿಸಿದ ನಂತರ ಹುಣ್ಣಿನೊಳಗಿಂದ ದಟ್ಟ, ಹಳದಿ, ಅಥವಾ ಜೇನುತುಪ್ಪದಂಥ ರಸಿಕೆ. ಉರಿಯುವಂಥಾದ್ದು ಹೋಗುತ್ತದೆ. ತ್ವಚೆ ಹಳದಿಯಾಗೋಣ(ಕಾಮಣಿ). ಪಿತ್ತದ ಗಾದರಿಗಳು. ಬಂಗಾರದಂತೆ ಹಳದಿ ಹಕಳೆಗಟ್ಟುತ್ತವೆ. ಸರ್ವಾಂಗ ತಿಂಡಿ, ಹರಡಿಗಳ ಸಂದುಗಳಲ್ಲಿ ತಿಂಡಿ ಹೆಚ್ಚಾಗಿರುತ್ತದೆ, ಇಸಬಿನಂಥ ಹುಣ್ಣು ಆಗುತ್ತವೆ.

**ಇತರ ಅವಯವ:—** ಯಾವದೇ ಶ್ಲೇಷ್ಮಲ ತ್ವಚೆಯೊಳಗಿಂದಾಗಲಿ ಹುಣ್ಣಿನಿಂದಾಗಲಿ ವ್ರಣದಿಂದಾಗಲಿ ಗಟ್ಟಿ, ಜೇನುತುಪ್ಪದಂಥ ಜಿಗಟು, ಹಳದಿ ಸ್ರಾವವಿದ್ದಲ್ಲಿ, ಗ್ರಂಥಿಯು ಬಾವು. ಗ್ರಂಥಿಗಳು ಬಾತಿರುತ್ತವೆ. ಬಿರುಸಾಗಿರುವದಿಲ್ಲ. ಶ್ವೇತ ಪಂಡುರೋಗ, ಸಣ್ಣ ಮಕ್ಕಳಿಗೆ ಆಗುವ ಮುಟ್ಟುದೋಷ; ಕಾಮಣಿ ಮುಂತಾದ ಬೇನೆಗಳ ಮೇಲೆ ೧ × ಶಕ್ತಿಯು ಔಷಧ ಕೊಡಬೇಕು. ಅಸ್ಥಿರೋಗದಲ್ಲಿ ಕಲ್ಕೆ. ಫಾ. ಕ್ರಿಯೆ ಸುಲಭವಾಗುವದಕ್ಕೋಸ್ಕರ ಇದನ್ನು ಕೊಡಬೇಕು. ಗಂಡಮಾಲೆಯ ಪ್ರಕೃತಿಯುಳ್ಳ ರೋಗಿಗಳಿಗೆ ಆಮ್ಲಪಿತ್ತದಿಂದಾಗುವ ಸಂಧಿವಾತದ ಮೇಲೆ ಇದನ್ನು ಕೊಡಬೇಕು.

**ವೃದ್ಧಿ ಕ್ಷಯ:—** ವೃದ್ಧಿ ಮತ್ತು ಕ್ಷಯದಲ್ಲಿಯ ವಿಶಿಷ್ಟ ಲಕ್ಷಣಗಳನ್ನು ಹೇಳಲಾಗದು. ಆದಾಗ್ಯೂ ಬಿರುಗಾಳಿಯಿರುವಂಥ ಹವೆಯಲ್ಲಿ

ಈ ಔಷಧದ ವೇದನೆಗಳು ಹೆಚ್ಚಾಗುವವು. ಮುಟ್ಟಿನ ಸಮಯದಲ್ಲಿಯೂ ಮಧ್ಯಾನ್ಹದಲ್ಲಿಯೂ ಸಾಯಂಕಾಲದಲ್ಲಿಯೂ ಭಾವನೆಗಳ ಜೋರು ಹೆಚ್ಚಾಗುತ್ತದೆ. ಬಯಲು ಹವೆಯಲ್ಲಿ ಹೋಗಲು ಬೇಸರಿಕೆ.

**ಉಪಯೋಗವು:—** ೬× ಶಕ್ತಿಯ ಔಷಧವನ್ನು ಉಪಯೋಗಿಸಬೇಕು. ರಕ್ತದಲ್ಲಿ ಅದರ ಪ್ರಮಾಣವು ಎಷ್ಟಿರುತ್ತದೆ ಎಂಬದನ್ನು ಲಕ್ಷ್ಯದಲ್ಲಿ ತಂದು ೪× ಶಕ್ತಿಯ ಔಷಧವನ್ನು ಉಪಯೋಗಿಸಬೇಕು. ಎಂದು ಕೆಲ ಡಾಕ್ಟರರ ಅಭಿಪ್ರಾಯವು. ೩೦× ಶಕ್ತಿಯ ಔಷಧವನ್ನು ಮೇಲಿಂದ ಮೇಲೆ ಸೇವಿಸಿದರೆ ವಿಶೇಷ ಗುಣವಾಗುವದು. ನಮ್ಮ ಮತದಂತೆ ೬ × ಶಕ್ತಿಯ ಔಷಧವನ್ನು ಕೊಡಬೇಕು. ಅದರಿಂದ ಗುಣ ಬಾರದೆ ಇದ್ದರೆ ೪× ಶಕ್ತಿಯನ್ನು ಇಲ್ಲವೆ ೧೨×, ೩೦×, ಅಥವಾ ಹೆಚ್ಚು ಶಕ್ತಿಯನ್ನು ಕೊಡಬೇಕು. ಈಗಲೆ ಹುಟ್ಟಿದ ಕೂಸುಗಳ ಕಣ್ಣಿನ ರೋಗದಲ್ಲಿ ೧೨× ಶಕ್ತಿಯ ಔಷಧದಿಂದ ಗುಣ ಬರುವದು. ಗಂಡಮಾಲೆಯ ಪ್ರಕೃತಿಯ ರೋಗಿಗಳ ಕಣ್ಣು ಬಾವಿನಲ್ಲಿ ೨೦೦× ಶಕ್ತಿಯ ಔಷಧವನ್ನು ಉಪಯೋಗಿಸಬೇಕಾಗುವದು.

**ಇತರ ಔಷಧಗಳ ಸಂಬಂಧ:—** ಕೆನೆಯಂಥ ಹಳದಿ, ಗಟ್ಟಿ, ಕೀವು ಸಹಿತ ಸ್ರಾವವಿದ್ದಲ್ಲಿ ಸಿ, ಕಲ್ಕೆ. ಸ; ಇವುಗಳ ಸಂಬಂಧವನ್ನು ಲಕ್ಷ್ಯದಲ್ಲಿಡಬೇಕು; ಜಂತು ಇದ್ದದರಿಂದ ತಿಳಿಯದೆ ಮೂತ್ರವಾಗುವ ಭಾವನೆಯು ನೇಟ್ರಂಮೂರದಲ್ಲಿ ಸಹ ಕಾಣುತ್ತದೆ. ಮೂತ್ರದಲ್ಲಿ ಅಕ್ಕಿಯ ಕಚ್ಚಿನಂತೆ ಬೆಳ್ಳಗೆ ನೀರು ಹೋಗೋಣ, ಸ್ವಪ್ನಾವಸ್ಥೆ, ಸಂಭೋಗೇಚ್ಛೆಯು ಪ್ರಬಲವಾಗೋಣ ಮುಂತಾದ ಬೇನೆಯಲ್ಲಿ ಕಾಲೀಫಾಸದ ಜತೆಗೆ ಕೊಡಬೇಕು.

**ಪ್ರಮಾಣ:—** ೪।೫ ವಟಿಕೆಗಳನ್ನು ಅಥವಾ ೩।೪ ಗುಂಜಿ ಚೂರ್ಣವನ್ನು ೨।೩ ತಾಸಿಗೊಮ್ಮೆ ದಿವಸದಲ್ಲಿ ೩।೪ ಸಾರೆ ಕೊಡಬೇಕು.

---

# ನೇಟ್ರಂ ಮ್ಯುರಿಯಾಟಿಕಂ

## Natrum muriaticum

**ಇತರ ಹೆಸರುಗಳು:—** ಸೋಡಿಯಂ ಕ್ಲೋರಾಯಿಡ; ಕಾಮನ ಸಾಲ್ಟ (ದಿನಾಲು ನಾವು ತಿನ್ನುವ ಉಪ್ಪು;) ಟೇಬಲ ಸಾಲ್ಟ (ಉಪ್ಪು) ಇವು ಇದರ ಇತರ ಹೆಸರುಗಳು.

**ಕಾರ್ಯಕ್ಷೇತ್ರ:—** ಕಲ್ಕೆರಿಯಾ ಫಾಸ (ಸುಣ್ಣ) ದ ಹೊರ್ತಾಗಿ ಇತರ ಯಾವದೇ ಕ್ಷಾರಕ್ಕಿಂತ ನೇಟ್ರಂ. ಮೂರದ ಅಂದರೆ ಉಪ್ಪಿನ. ಪ್ರಮಾಣವು ಮಾನವೀ (ಮನುಷ್ಯ) ದೇಹದಲ್ಲಿ ಹೆಚ್ಚಾಗಿದೆ. ಇದರ ಕಾರಣವು ಸಹಜವಾಗಿ ತಿಳಿಯುಬರುವುದು. ಶರೀರದಲ್ಲಿ ನೀರಿನ ಪ್ರಮಾಣವು ನೂರು ಅಂಶಕ್ಕೆ ೭೦ ಅಂಶದಷ್ಟು ಇರುವದು. ಆದರೆ ಇದು, ಈ ನೀರಿನ ಪ್ರಮಾಣವು, ನೇಟ್ರಂಮೂರವಿಲ್ಲದಿದ್ದರೆ ನಿರುಪಯೋಗವೂ ನಿಷ್ಕ್ರಿಯವೂ ಆಗುವದು. ಆದ್ದರಿಂದ ನೇಟ್ರಂಮೂರದ ಪ್ರಮಾಣವು ಇತರ ಕ್ಷಾರಗಳಿಗಿಂತ ಹೆಚ್ಚು ಇರಲೇಬೇಕು. ಮಾನವೀಶರೀರ ದಲ್ಲಿಯ ಯಾವತ್ತೂ (ಸರ್ವತ್ರ ಇರುವ) ನೇಟ್ರಂಮೂರವನ್ನು ಒಟ್ಟು ಗೂಡಿಸಿದರೆ ಅದು ೧೧ ಔಂಸದಷ್ಟು ಆಗುವದು. ಶರೀರದಲ್ಲಿಯ ಮಲ ಹೊರದಬ್ಬಲು ಅವಶ್ಯಕವಿರುವ ನೇಟ್ರಂಮೂರದ ಪ್ರಮಾಣಕ್ಕಿಂತ ಹೆಚ್ಚು ಪ್ರಮಾಣದಲ್ಲಿ ಈ ಕ್ಷಾರವು ಇದ್ದಲ್ಲಿ ಅದು ಮೂತ್ರಪಿಂಡದ್ವಾರದಿಂದ ಹೊರಗೆ ದಬ್ಬಲ್ಪಡುತ್ತದೆ, ಈ ಕ್ಷಾರವು ಶರೀರದಲ್ಲಿಯ ಯಾವತ್ತೂ ದ್ರವವಾಗಲಿ ಘನವಾಗಲಿ ಪದಾರ್ಥಗಳ ಘಟಕವಿರುವದು. ಮಹತ್ವದ ರಾಸಾಯನಿಕ ಘಟಕವೆಂದು ಅದು ರಕ್ತೋದಕದಲ್ಲಿ ಸಹ ಇರುವದು. ಘನಪದಾರ್ಥದಲ್ಲಿ ಆರ್ದ್ರತೆಯ ಪ್ರಮಾಣವನ್ನು ನಿಯಮಿತ (ಸರಿ) ಮಾಡೋಣ; ಶರೀರದಲ್ಲಿಯ ದ್ರವಪದಾರ್ಥಗಳಲ್ಲಿ ನೀರನ್ನು ಯೋಗ್ಯ ಪ್ರಮಾಣದಲ್ಲಿ ಹಂಚಿಕೊಡೋಣ ಅಂದರೆ ಶರೀರದಲ್ಲಿಯ ಯಾವತ್ತೂ ಭಾಗಗಳಲ್ಲಿ ನೀರನ್ನು ಯೋಗ್ಯ ಪ್ರಮಾಣದಲ್ಲಿ ಒಯ್ದು ಮುಟ್ಟಿಸೋಣ, ಇದು ಈ ಕ್ಷಾರದ ಮುಖ್ಯ ಕಾರ್ಯವು. ತಕ್ಕ ಕೆಲಸಕ್ಕೆ ಅಂದರೆ ಶರೀರದ ವ್ಯಾಪಾರಕ್ಕೆ ಪೋಷಕ ಮತ್ತು ಸಂವರ್ಧಕವಾಗುವಂತೆ ನೀರಿನ ಉಪ-

ಯೋಗಮಾಡಿಕೊಳ್ಳುವ ಶಕ್ತಿಯು ಈ ಕ್ಷಾರದಲ್ಲಿ ಇದೆ. ಶರೀರ ವ್ಯಾಪಾರದ ಸಂವರ್ಧನಮಾಡೋಣ, ಅದರ ಕಾರ್ಯವನ್ನು ವ್ಯವಸ್ಥಿತ ವಾಗಿ ಸಾಗಿಸೋಣ ಮತ್ತು ಶರೀರದಲ್ಲಿ ಕೂಡಿದ್ದ ಮಲವನ್ನು ಹೊರಗೆಹಾಕೋಣ ಈ ಕೆಲಸಗಳು ನೇಟ್ರಂಮೂರದಿಂದ ಆಗುತ್ತವೆ. ನೇಟ್ರಂಮೂರದ ಪ್ರಮಾಣದಲ್ಲಿ ಕೊರತೆಯಾದರೆ ಶರೀರದಲ್ಲಿಯ ರಸ ದ್ರವ್ಯದಲ್ಲಿ ವ್ಯತ್ಯಾಸವುಂಟಾಗುತ್ತ ಹೋಗುತ್ತದೆ. ಯಾಕೆಂದರೆ ಯಾವುದರ ಸಹಾಯದಿಂದ ಆರ್ದ್ರ ಪದಾರ್ಥಗಳು ಶರೀರದಲ್ಲಿ ಕಾರ್ಯಕ್ಷಮ ಅಥವಾ ಕಾರ್ಯಮಾಡುವಂಥವು ಆಗುತ್ತವೆ, ಆ ಪದಾರ್ಥಗಳು ಅವಶ್ಯವಿದ್ದ ಪ್ರಮಾಣಕ್ಕಿಂತ ಕಡಿಮೆಯಾದಲ್ಲಿ ಆರ್ದ್ರ ಪದಾರ್ಥದಲ್ಲಿ ವ್ಯತ್ಯಾಸವುಂಟಾ ಗುವದು ಸ್ವಾಭಾವಿಕವೇ ಸರಿ.

ಕೆಲ ಭಾಗದಲ್ಲಿಯ ಶ್ಲೇಷ್ಮಲ ತ್ವಚೆಯು ಒಣಗಿದಂತಿದ್ದು ಇತರ ಭಾಗ ದಲ್ಲಿಯ ಶ್ಲೇಷ್ಮಲ ತ್ವಚೆಯೊಳಗಿಂದ ನೀರಿನಂಥ ತೆಳ್ಳನ್ನ ಸ್ರಾವವು ಬಹಳ ಹೋಗುವದು ಕಂಡುಬರುತ್ತದೆ. ಶರೀರದಲ್ಲಿ ನೀರಿನ ಪ್ರಮಾಣದಲ್ಲಿ ಹೆಚ್ಚು ಕಡಿಮೆಯಾಗುವದೇ ಇದರ ಮುಖ್ಯ ಕಾರಣವು. ಈ ಪ್ರಮಾಣವನ್ನು ಸರಿಯಾಗಿ ಇಡುವದೇ ನೇಟ್ರಂಮೂರದ ಮುಖ್ಯ ಕಾರ್ಯವು. ಜಠರದಲ್ಲಿ ಚಳಿಯಾದಲ್ಲಿ, (ಅಂದರೆ ಆರ್ದ್ರತೆಯ ಪ್ರಮಾಣವು ಬೆಳೆದಲ್ಲಿ) ನೀರಿನಂತೆ ತೆಳ್ಳಗೆ ವಾಂತಿಯಾಗಹತ್ತುತ್ತದೆ. ಆದರೆ ಅದೇ ಕಾಲದಲ್ಲಿ ನಲಿಕೆಗಳಲ್ಲಿಯ ಶ್ಲೇಷ್ಮಲ ಸ್ರಾವದ ಪ್ರಮಾಣವು ಕಡಿಮೆಯಾದಲ್ಲಿ ಅವರೋಧ ಅಂದರೆ ಮಲಬದ್ಧತೆಯು ಉತ್ಪನ್ನವಾಗುತ್ತದೆ.

ನೀರನ್ನು ಹೀರಿಕೊಳ್ಳುವ ಶಕ್ತಿಯು ಈ ಕ್ಷಾರದಲ್ಲಿದೆ. ಪ್ರತಿಯೊಂದು ಪಿಂಡದಲ್ಲಿ "ನೇಟ್ರಂಮೂರ" ಕ್ಷಾರವು ಇರುತ್ತದೆ. ಈ ಕ್ಷಾರವು ಪಿಂಡಗಳಲ್ಲಿಯ ನೀರನ್ನು ತನ್ನ ಕಡೆಗೆ ಆಕರ್ಷಣಮಾಡಿಕೊಳ್ಳುತ್ತದೆ. ಮತ್ತು ಅದರಿಂದ ಪಿಂಡವನ್ನು ದೊಡ್ಡದಾಗಿ ಮಾಡಲು ಹಾಗೂ ಅದರ ದೃಢೀಕರಣ ಮಾಡಲು ಈ ರೀತಿಯಿಂದ ಪಿಂಡಸಂವರ್ಧನದ ಕಾರ್ಯ ವನ್ನು ಸಾಧಿಸಲು ಈ ಕ್ಷಾರದ ಉಪಯೋಗವಾಗುವದು. ಪಿಂಡಗಳಲ್ಲಿ ನೀರು ಯೋಗ್ಯಪ್ರಮಾಣದಲ್ಲಿ ಇಲ್ಲದೆ ಹೋದರೆ ನೀರು ಅಲ್ಲಿಯೇ ನಿಲ್ಲುತ್ತದೆ. ಹೀಗಾದಲ್ಲಿ ಜಲಶೋಥ ಮುಂತಾದ ರೋಗಗಳು ಉದ್ಭವಿಸುತ್ತವೆ.

ಜ್ಯಾಡ್ಯ, ಮ್ಲಾನತೆ, ಕಣ್ಣುಮುಚ್ಚಿಕೊಂಡಿರುವ ಪ್ರವೃತ್ತಿ, ಚರ್ಯೆಯು ಬಾತಂತೆ ಇದ್ದು ನೀರಿನಿಂದ ತುಂಬಿದಂತೆ ಕಾಣಿಸೋಣ, ಬೆನ್ನುಹುರಿಯಿಂದ ಕಾಲುಗಳ ವರೆಗೆ ನಿಂತು ನಿಂತು ಚಳಿಯು ಸೇರೋಣ, ಕಣ್ಣು ಸೋರೋಣ, ಜೊಲ್ಲು ಸೋರೋಣ, ಶ್ಲೇಷ್ಮಲ ತ್ವಚೆಯೊಳಗಿಂದ ನೀರಿನಂಥ ಸ್ರಾವವು ಹೋಗೋಣ ಮುಂತಾದ ಲಕ್ಷಣಗಳು "ನೇಟ್ರಂಮೂರ" ಕ್ಷಾರದ ಕೊರತೆಯ ಲಕ್ಷಣಗಳೇ ಸರಿ. ಉಪ್ಪು ಬಹಳ ತಿನ್ನುವ ಇಚ್ಛೆಯಾಗುತ್ತದೆ. ಆದರೆ ಅನ್ನದೊಳಗಿಂದ ಬಹಳ ಉಪ್ಪು ತಿಂದಾಗ್ಯೂ ಪಿಂಡಗಳು ಅದನ್ನು ಸ್ವೀಕರಿಸದೆ ಇದ್ದದರಿಂದ ಅದರ ಉಪಯೋಗವಾಗುವದಿಲ್ಲ ಮತ್ತು ರೋಗದ ಪರಿಸ್ಥಿತಿಯು ಇದ್ದಂತೆ ಉಳಿಯುತ್ತದೆ. ಪಿಂಡಗಳಲ್ಲಿಯ ದ್ರವಪದಾರ್ಥಗಳಲ್ಲಿ ಉಪ್ಪಿನ ಪ್ರಮಾಣವು ಹೆಚ್ಚಾದಲ್ಲಿ ನಾಲಿಗೆಯು ಉಪ್ಪುಪ್ಪ ಆಗುತ್ತದೆ ಮತ್ತು ಶ್ಲೇಷ್ಮಲ ತ್ವಚೆಯೊಳಗಿಂದಾಗಲಿ ಹುಣ್ಣುಗಳೊಳಗಿಂದಾಗಲಿ ಹೋಗುವ ಸ್ರಾವದಿಂದ ಉರುಪು ಹುಟ್ಟುತ್ತದೆ.

ಅಶ್ರುಗ್ರಂಥಿ ಅಥವಾ ಲಾಲಾಗ್ರಂಥಿ ಇವುಗಳಲ್ಲಿ ನೇಟ್ರಂಮೂರದ ಪ್ರಮಾಣದಲ್ಲಿ ವ್ಯತ್ಯಾಸವಾದಲ್ಲಿ ಕಣ್ಣಿನಿಂದ ನೀರುಸೋರೋಣ, ಜೊಲ್ಲು ಸೋರೋಣ ಮುಂತಾದ ಭಾವನೆಗಳು ಕಂಡುಬರುತ್ತವೆ. ಹಲ್ಲುಶೂಲಿಯಲ್ಲಿ ಜೊಲ್ಲು ಬಹಳ ಹೋಗುತ್ತಿದ್ದರೆ ನೇಟ್ರಂಮೂರದ ಪ್ರಮಾಣವೇ ಕಡಿಮೆಯಾಗಿದೆಯೆಂದು ತಿಳಿದು ಅದನ್ನೇ ಕೊಡಬೇಕು. ಕರಳುಗಳಲ್ಲಿ ನೇಟ್ರಂಮೂರದ ಪ್ರಮಾಣವು ಕಡಿಮೆಯಾದಲ್ಲಿ ನೀರಿನಂತೆ ತೆಳ್ಳಗೆ ರೇಚಗಳಾಗುತ್ತವೆ. ಅದೇ ಪ್ರಕಾರ ಕರಳುಗಳಲ್ಲಿಯ ಶ್ಲೇಷ್ಮಲ ಪಿಂಡಗಳ ಮೇಲೆ ಇದರ ಪರಿಣಾಮವಾದಲ್ಲಿ ಸ್ವಚ್ಛ ಬಿಳೇ ಅಂಟಿನಂಥ ಜಿಗಟು ಬೀಳುತ್ತದೆ. ಉಪ್ಪಿನ ಪ್ರಮಾಣವು ಕಡಿಮೆಯಾದಲ್ಲಿ ಕೆಳಗೆ ಬರೆದ ಪರಿಣಾಮಗಳು ಕಂಡುಬರುತ್ತವೆ.

೧ ನೆಗಡಿಯಾಗಿ ಮೂಗು ಸೋರುತ್ತದೆ. ಮೂಗಿನಿಂದಲೂ ಕಣ್ಣಿನಿಂದಲೂ ನೀರು ಸೋರುತ್ತದೆ. ಗಂಟಲು ಒಂದೇಸವನೆ ಸೋಯುತ್ತದೆ. ಹಾಗೂ ಧ್ವನಿ ನಲಿಕೆಯ ಮೇಲೆಯೂ ಪರಿಣಾಮವಾಗುತ್ತದೆ.

೨ ಚರ್ಯೆ ಸಪ್ಪಗೆ; ತ್ವಚೆಯು ಶುಷ್ಕವಿದ್ದು ಸ್ವಲ್ಪ ಶ್ರಮವಾದಲ್ಲಿ ಬೆವರು ಬಿಡುತ್ತದೆ.

೩ ಅವರೋಧ; ಬಹಳ ದಿವಸದ ಅತಿಸಾರ.

೪ ವಾಡಿಕೆಗಿಂತ ಹೆಚ್ಚು ಹಸಿವೆ. ಒಂದೇಸವನೆ ನೀರಡಿಕೆ.

೫ ರಕ್ತಾಧಿಕ್ಯವೂ ಸ್ಥೂಲತೆಯೂ.

೬ ರಕ್ತವು ತೆಳ್ಳಗಾಗುತ್ತದೆ. ರಕ್ತಾಭಿಸರಣವು ಮಂದವಿರುತ್ತದೆ. ಶರೀರದ ಉಷ್ಣತೆಯು ಕಡಿಮೆ ಇರುತ್ತದೆ. ವಿಶೇಷತಃ ಬೆನ್ನಿನ ಕೆಳಭಾಗಕ್ಕೆ ಮುಳ್ಳುಮುರಿದಂತಾಗಿ ಚಳಿಯಾಗುತ್ತದೆ.

೭ ಪೊಟ್ಟು ಹೊರಡೋಣ, ಹಕ್ಕಳಿಗಟ್ಟೋಣ, ಕುರುವು ಆಗೋಣ, ತಿಂಡಿ ಬಿಡೋಣ, ಮುಂತಾದ ತ್ವಚೆಯ ರೋಗಗಳಾಗುತ್ತವೆ. ಗುಳ್ಳಿಗಳೇಳುತ್ತವೆ, ಅವುಗಳೊಳಗಿಂದ ಸ್ವಚ್ಛ ನೀರು (ರಸಿಕೆ) ಹೋಗುತ್ತದೆ.

ಉಪ್ಪು ಹೆಚ್ಚು ತಿಂದಲ್ಲಿ ಪೋಷಣಕ್ರಿಯೆಯಲ್ಲಿ ಮಹತ್ವದ ಬದಲು ಉಂಟಾಗುತ್ತದೆ ಮತ್ತು ಆದರಿಂದ ಜಲಶೋಥ, ಉದರ, ಶ್ವೇತ ಪಂಡುರೋಗ, ಅಂಗುಲಿವಾತ (Gout) ಮುಂತಾದ ರೋಗಗಳು ಉದ್ಭವಿಸುತ್ತವೆ.

ಗಂಡಮಾಲೆಯ ಪ್ರಕೃತಿಯ ರೋಗಿಗಳಿಗೆ ಆಗುವಂಥ ಗ್ರಂಥಿ, ಕರಳು, ತ್ವಚೆ, ಇವುಗಳ ರೋಗಗಳಲ್ಲಿ ಇದರ ಉಪಯೋಗವಾಗುತ್ತದೆ. ಪಚನೇಂದ್ರಿಯಗತ ಶ್ಲೇಷ್ಮಲ ತ್ವಚೆ (ಮುಖ, ಜಠರ, ಕರಳು ಮುಂತಾದವು) ಯಕೃತ, ಪ್ಲೀಹ, ರಕ್ತ ಮುಂತಾದವುಗಳಲ್ಲಾಗುವ ರೋಗಗಳಲ್ಲಿ ಸಹ ಇದರ ಉಪಯೋಗವಾಗುತ್ತದೆ. ಚಳಿಜ್ವರದಲ್ಲಿ ತೆಗೆದುಕೊಂಡ "ಕೊಯನಲ್"ದ ದುಷ್ಪರಿಣಾಮದಿಂದಾಗುವ ಅಶಕ್ತತೆಯಲ್ಲಿ ಇದರ ಉಪಯೋಗವು ಚನ್ನಾಗಿ ಆಗುತ್ತದೆ. ರೋಗಿಯು ಸಾಕಷ್ಟು ತಿಂದರೂ ಸಹ ನವೆಯುತ್ತಿದ್ದರೆ "ನೇಟ್ರಂಮೂರ" ವನ್ನು ಅವಶ್ಯವಾಗಿ ಉಪಯೋಗಿಸಬೇಕು. ಮುಟ್ಟುದೋಷ, ಸವೆಯೋಣ, ತಿಂದ ಅನ್ನವು ಮೈಗೆ ಹತ್ತದೇ ಇರೋಣ, ಶ್ವೇತ ಪಂಡುರೋಗ, ಪೀತಪಂಡುರೋಗ,ಮುಂತಾದ ವಿಕೃತಿಗಳ

ಮೇಲೆ ಇದರ ಉಪಯೋಗವಾಗುವದು. ಬಾಯಿಯಿಂದ ಜೊಲ್ಲು ಸೋರೋಣ, ಕಣ್ಣಿನಿಂದ ನೀರು ಸೋರೋಣ, ನೀರಿನಂತೆ ತೆಳ್ಳಗೆ ವಾಂತಿ ಯಾಗೋಣ ಮುಂತಾದ ಭಾವನೆಗಳು ಇದ್ದು ಶರೀರದಲ್ಲಿ ಯಾವದೇ ಭಾಗದಲ್ಲಿ ವೇದನೆಯಿದ್ದರೆ ಈ ಔಷಧ ಕೊಡಬಹುದು. ಶ್ಲೇಷ್ಮಲ ತ್ವಚೆಯ ಚಳಿಯಲ್ಲಿ ಪಾರದರ್ಶಕ ನೀರಿನಂಥ ಬುರುಗುವುಳ್ಳ ಸ್ರಾವವು ಇದ್ದರೆ ಅವಶ್ಯವಾಗಿ ಉಪಯೋಗವಾಗುವದು. ಸಣ್ಣ ಹುಡುಗರ ಜಲಯುಕ್ತ (ನೀರಿದ್ದ) ಮಿದುಳುರೋಗದಲ್ಲಿ ಸಹ ಇದರ ಉಪಯೋಗ ವಾಗುವದು. ನಾಲಿಗೆಯು ಸ್ವಚ್ಛ ಹೊಳೆಯುವಂತೆ ಇರುತ್ತದೆ. ನಾಲಿಗೆಯು ನಿರ್ಮಲವಾಗಿದ್ದು ಅದರ ಅಂಚುಗಳಲ್ಲಿ ನೊರೆಯಂತಿರುವ ಉಗುಳಿನ ಸಣ್ಣ ಸಣ್ಣ ಗುಳ್ಳೆಗಳಿದ್ದರೆ, ಒಮ್ಮೊಮ್ಮೆ ನಾಲಿಗೆಯು ಬೆಳ್ಳಗೆ, ಉಬ್ಬಿದಂತೆ ಇದ್ದು ಅದರ ಮೇಲೆ ದಪ್ಪನ್ನ ಲೇಪವಿದ್ದರೆ; ನಾಲಿಗೆಗೆ ಉಪ್ಪುಪ್ಪು ಹತ್ತೋಣ; ಯಾವಾಗಲು ಇರುವದಕ್ಕಿಂತ ಹೆಚ್ಚು ಸ್ವಚ್ಛ, ಪಾರದರ್ಶಕ ನೀರಿನಂತೆ ತೆಳ್ಳಗೆ ಸ್ರಾವವಿದ್ದರೆ (ಅಲ್‌ಬ್ಯುಮೆನದ ಪ್ರಮಾಣ ಕಡಿಮೆ ಇದ್ದಂಥ) ಅದೇ ಪ್ರಕಾರ ಶರೀರದಲ್ಲಿ ಇರತಕ್ಕದರಕಿಂತ ಹೆಚ್ಚು ಒಣಗಿ ದಂತಿರುವದು. ಇವು ಇದರ ಪ್ರಮುಖ ಲಕ್ಷಣಗಳು.

ಈ ಕ್ಷಾರದ ನೀರು ತ್ವಚೆಯಲ್ಲಿ ಯೋಗ್ಯ ಪ್ರಮಾಣದಲ್ಲಿ ಚುಚ್ಚಿ ಹಾಕಿದಲ್ಲಿ ಕೆಳಗೆ ಹೇಳಿದಂತೆ ಮಹತ್ವದ ರೋಗಗಳು ನೆಟ್ಟಗಾಗುತ್ತವೆಂದು ಕೆಲ ಡಾಕ್ಟರರ ಮತವಿದೆ.

೧ ಒಮ್ಮಿಂದೊಮ್ಮೆ ಆಗುವ ಹೃದಯಶಕ್ತಿಪಾತ (೫ ರಿಂದ ೮ ಡ್ರಾಮ ಚುಚ್ಚಿ ಹಾಕಬೇಕು).

೨ ಬಹಳ ರೇಚ ಮತ್ತು ವಾಂತಿ ಇವುಗಳಿಂದ ಬರುವ ಅಶಕ್ತತೆ (೮ರಿಂದ ೨೦ ಔಂಸ ಚುಚ್ಚಿ ದೇಹದಲ್ಲಿ ಸೇರಿಸಬೇಕು).

೩ ಫುಪ್ಫುಸ, ಜಠರ, ಕರಳುಗಳು ಇವುಗಳಲ್ಲಾಗುವ ರಕ್ತಸ್ರಾವ.

೪ ಬಹಳ ದಿವಸದ ರೋಗದಿಂದಾಗಲಿ ಅಶಕ್ತತೆಯಿಂದಾಗಲಿ ಆಗುವ ಹೃದಯಶಕ್ತಿಪಾತ. ದಿವಸೊಂದಕ್ಕೆ ೧ ರಿಂದ ೧॥. ಡ್ರಾಮುದಂತೆ ಬಹಳ ದಿನಗಳ ವರೆಗೆ ಚುಚ್ಚಿ ಹಾಕಬೇಕು.

# ಪ್ರಮುಖ ಲಕ್ಷಣಗಳು

**ಮಿದುಳು:**— ಭವಿಷ್ಯಕಾಲದ ಸಂಬಂಧದಿಂದ ನಿರಾಸೆ; ಖಿನ್ನಚಿತ್ತ; ಸಮಾಧಾನದ ಮಾತು ಹೇಳಿದರೂ ಸಮಾಧಾನವಾಗದೆ ರೋಗಿಗೆ ಹೆಚ್ಚು ಅಸಮಾಧಾನವಾಗೋಣ, ಆದರಿಂದ ಹೃದಯದಲ್ಲಿ ದಡದಡಿಸುವದು ಸಹ ಇರುತ್ತದೆ. ಉದಾಸೀನತೆ; ಯಾವಾಗಲೂ ಉತ್ಸಾಹಭಂಗ; ಖಿನ್ನಸ್ಥಿತಿ ಯುಂಟಾಗುವದೆಂಬ ವಿಚಾರಗಳು ಯಾವಾಗಲೂ ಮನಸ್ಸಿನಲ್ಲಿ ಬರೋಣ; ಸಲ್ಪ ಕಾರಣದಿಂದ ರೋಗಿಯು ಅಳುತ್ತಾನೆ; ಹಿಂದೆ ಆಗಿ ಹೋದ ದುಃಖದ ಸಂಗತಿಗಳನ್ನು ನೆನೆದು ಉತ್ಸಾಹಭಂಗ ಮಾಡಿಕೊಂಬೋಣ; ತರುಣ ವಯಸ್ಸಿನಲ್ಲಿ ನಿರಾಸೆ; ಮಿದುಳಿನಲ್ಲಿ ದಣುವಿಕೆ; ಸ್ಮರಣಶಕ್ತಿಯು ಕಡಿಮೆ ಯಾಗೋಣ; ಯಾವದೇ ಮಾನಸಿಕ ಶ್ರಮದಿಂದ ದಣುವಿಕೆ ಆಗೋಣ; ಭ್ರಮ; ತುಟಿಯಲ್ಲಿ ತಿಳಿಯದಂತೆ ಮಾತಾಡುವದು (ಪುಟಪುಟಿಸುವದು) ಕೆಲಕಾಲ ಬಹಳ ಬಡಬಡಿಸುತ್ತ ಭ್ರಮಿಷ್ಟ ಸ್ಥಿತಿಯಲ್ಲಿಯೇ ತಿರುಗಾಡೋಣ ನಾಲಿಗೆಯಮೇಲೆ ಬುರುಗು ಇದ್ದು ಅಥವಾ ನಾಲಿಗೆಯು ಒಣಗಿದ್ದು ಇದ್ದರೆ ಈ ಔಷಧವು ಗುಣಕರವು. ನವಜ್ವರ, ಸನ್ನಿಪಾತ ಜ್ವರ ಮುಂತಾದ ರೋಗಗಳಲ್ಲಿ ರೋಗಿಯು ಕಣ್ಣುಮುಚ್ಚಿಕೊಂಡು ಸುಂದಾಗಿ ಮಲಗೋಣ.

**ಮಸ್ತಕ:**—(ಆತಪ) ಮೂರ್ಛೆಯಲ್ಲಿ ಪ್ರಮುಖ ಔಷಧವು. ಸೋಟ್ರಂ ಮೂರದ ಪ್ರಮಾಣವು ಮಿದುಳಿನಲ್ಲಿ ಕಡಿಮೆಯಾದ್ದರಿಂದ ಮಿದುಳಿನಲ್ಲಿ ಶುಷ್ಕತೆ ಬಹಳಾದ್ದರಿಂದ ಈ ರೋಗವು ಉದ್ಭವಿಸುತ್ತದೆ. ತಲೆಸೂಲಿ; ಅರತಲೆಸೂಲಿ; ರಕ್ತಸಂಚಯದಮೂಲಕ ತಲೆ ನೋಯುತ್ತದೆ, ಮತ್ತು ಅದು ಮುಂಜಾನೆ ಹೆಚ್ಚು ಇರುತ್ತದೆ; ನಿದ್ರೆ ಮಾಡಿದಲ್ಲಿ ಕಡಿಮೆಯಾಗುತ್ತದೆ; ಇದು ವಿಶೇಷತಃ ಸ್ತ್ರೀಯರಲ್ಲಿ ಮುಟ್ಟಾಗುವ ಸುಮಾರಕ್ಕೆ ಆಗುವದು. ತಲೆ ಜಡವಾಗಿರುತ್ತದೆ; ಕಣ್ಣಿನಿಂದ ನೀರು ಸೋರೋಣ ಮುಂತಾದ ಭಾವನೆಗಳು ಇದ್ದು ನಿದ್ರೆ ಮುಗಿದನಂತರ ಸಹ ಸಮಾಧಾನ ವಾಗದೆ ಇದ್ದರೆ, ಜಾಡ್ಯವು ಇದ್ದಂತೆಯೇ ಇದ್ದರೆ, ಈ ಔಷಧವು ಗುಣ ಕರವು. ತಲೆಯಲ್ಲಿ ಸುತ್ತಿಗೆಯಿಂದ ಹೊಡೆದಂತೆ ತೀವ್ರ ವೇದನೆ; ಮುಂಜಾನೆ ವೇದನೆ ಹೆಚ್ಚಾಗಿರೋಣ; ಅವರೋಧವಿರೋಣ; ನಾಲಿಗೆಯ ಮೇಲೆ

ಬುರುಗು ಇದ್ದು ಮನಸ್ಸು ಚಿಂತೆಯುಕ್ತವಿದ್ದಲ್ಲಿ; "ನೇಟ್ರಂಮೂರ" ಗುಣಕರವು. ಸ್ವಚ್ಛ, ಬುರುಗು ಇದ್ದು ನೀರಿನಂತೆ ತೆಳ್ಳಗೆ ಕಫದ ವಾಂತಿಯಾಗುತ್ತಿದ್ದಲ್ಲಿ, ತಲೆನೋವು ಇದ್ದಲ್ಲಿ ಕಲ್ಕೆ. ಫಾಸ ಕೊಡಬೇಕು. ಅರತಲೆಶೂಲಿ ಪ್ರಬಲವಿದ್ದರೆ ೩೦× ಶಕ್ತಿಯ ಔಷಧವನ್ನು ಸೇವಿಸಬೇಕು. ಸಾಲೆಗೆ ಹೋಗುವಂಥ ಹುಡುಗಿಯರಿಗೆ ಮುಟ್ಟು ಆಗುವ ಕಾಲಕ್ಕೆ ಆಗುವ ತಲೆಶೂಲಿ; ತಲೆಯ ಮೇಲ್ಭಾಗದಲ್ಲಿ ಉರುವು ಇದ್ದರೆ; ಶೀರ್ಷ ಪೃಷ್ಠಭಾಗದ ಮೇಲೆ ತಿಂಡಿ ಇದ್ದು ಹುಣ್ಣುಗಳಾಗಿ ಅವುಗಳಿಂದ ಜಿಗಟು ಸ್ರಾವವು ಹೋಗುತ್ತಿದ್ದರೆ; ಬಿಳೀ ಹಕಳಿಗಟ್ಟುತ್ತವೆ. (ಕಾಲೀಸಲ್ಫ, ಕಾಲೀಮೂರ) ಕೂದಲುಗಳು ಉದುರಿಬೀಳುತ್ತವೆ.

**ನೇತ್ರ:**— ದೃಷ್ಟಿಮಾಂದ್ಯ: ಕಣ್ಣುಗುಡ್ಡೆಯಮೇಲೆ ಚುಕ್ಕೆ, ಬಿಳೀ ಕಲೆಯೂ ಹುಣ್ಣೂ, ಓದುವಾಗ ಅಕ್ಷರಗಳು ಒತ್ತಟ್ಟಿಗೆ ಇದ್ದಂತೆ ಕಾಣಿಸುತ್ತವೆ. ಬೆಳಕಿನ ಕಡೆಗೆ ನೋಡಲು ಶಕ್ಯವಿಲ್ಲ; ವಿಶೇಷತಃ ಕ್ಷಯ ಬೇನೆಯ ರೋಗಿಗಳಲ್ಲಿ (ಗಂಡಮಾಲೆಯ ಪ್ರಕೃತಿಯುಳ್ಳವರಲ್ಲಿ) ಈ ಭಾವನೆಗಳು ಇರುತ್ತವೆ. ಕಣ್ಣಿನಿಂದ ನೀರುಸೋರುತ್ತಿದ್ದು ನೇತ್ರಶೂಲಿ ಇದ್ದಲ್ಲಿ (ಮ್ಯಾ. ಫಾ.) ಆಗಲೇ ಆದ ಚಳಿಯ ಮೂಲಕ ಕಣ್ಣಿನಿಂದ ನೀರು ಸೋರುತ್ತದೆ, ತಲೆನೋವೂ ಇರುತ್ತದೆ. ಕಣ್ಣಿನಿಂದ ನೀರು ಸೋರುವ ಯಾವದೇ ನೇತ್ರವಿಕಾರದ ಮೇಲೆ; ಕಣ್ಣೊಳಗೆ ಹುಣ್ಣಾಗಿದ್ದರೆ (ಫೆರಂಫಾ ಮತ್ತು ಕಾಲೀಮೂರ) ಕಣ್ಣೊಳಗೆ ಹುಣ್ಣು ಇದ್ದು ನೀರು ಸೋರುವದು ಒಂದು ವೇಳೆ ಸೋರುವದೂ ಇಲ್ಲ. ಕಣ್ಣು ರೆಪ್ಪೆಗಳು ಜಡ ಮತ್ತು ಕೆಂಪು ಇದ್ದು ಅಲ್ಲಿ ಉರಿಯುತ್ತದೆ. ಕಣ್ಣಿನಿಂದ ಉರುವುಳ್ಳ ಸ್ರಾವವು ಹೋಗುತ್ತದೆ. ಸ್ರಾವ ಹೋಗುವ ಸ್ಥಳದಲ್ಲಿ ಹುಣ್ಣೂ ಇರುತ್ತವೆ. ಅರತಲೆಶೂಲಿಯಂತೆ ಸೂರ್ಯೋದಯಕ್ಕೆ ನೋಯಲು ಆರಂಭವಾಗುತ್ತದೆ ಮತ್ತು ಸೂರ್ಯಾಸ್ತದನಂತರ ನೋವು ನಿಲ್ಲುತ್ತದೆ. ಸ್ನಾಯುಗತ ದೃಷ್ಟಿಕ್ಷೀಣತೆಯಮೇಲೆ (Muscular Asthenopia) ಇದು ಮುಖ್ಯ ಔಷಧವು (ಮ್ಯಾ. ಫಾಸ) ರೆಪ್ಪೆಗಳು ಅತಿ ಒಣಗಿದಂತೆ ಭಾವನೆ ಇದ್ದು ತಿಂಡಿ ಹಿಡುತ್ತದೆ. ಹಾಗೂ ಉರಿವೂ ಇರುತ್ತದೆ. ಕಣ್ಣು ಬಂದಿರುತ್ತವೆ. ಅವುಗಳಿಂದ ನೀರು ಸೋರುತ್ತದೆ. ಕಣ್ಣಿನಮೇಲೆ ದಪ್ಪ ಕೆನೆಯಂಥ ಪಟಲ (ಪರದೆ) ಬಂದಿರುತ್ತದೆ.

**ಕಿವಿ:—** ಕರ್ಣ ಸಲಿಕೆಯು ಬಾತಪ್ಪರಿಂದ ಬಧಿರತೆಯು ( ಕಾಲೀ ಮೂರ; ಕಾಲೀಸಲ್ಫ ); ಕಿವಿಯಲ್ಲಿ ಸಪ್ಪಳಾಗುತ್ತದೆ; ಕಿವಿಯಿಂದ ಕೀವ ವುಳ್ಳ ಸ್ರಾವವು ಇದ್ದು ಆದೇಕಾಲಕ್ಕೆ ಬಾಯಿಂಯಿಂದ ಜೊಲ್ಲು ಸೋರುತ್ತಿದ್ದರೆ ಈ ಔಷಧವು ಗುಣಕರವು. ಕಿವಿಯಲ್ಲಿ ತಿಂದಿ ಬಿಡುತ್ತದೆ; ಉರುವೂ ಇರುತ್ತದೆ. ತಿನ್ನುವ ಕಾಲಕ್ಕೆ ಕರಕರ ಅಂತ ಸಪ್ಪಳಾಗುತ್ತದೆ.

**ಮೂಗು:—** ಚಳಿಯಾಗಿ ಮೂಗಿನಿಂದ ಸ್ವಚ್ಛ ನೀರಿನಂಥ ಪಾರದರ್ಶಕ ಸ್ರಾವವು ಹೋಗುತ್ತದೆ. ಸೀನು ಬರುತ್ತವೆ; ನಾಸಿಕೆಯು ಪಶ್ಚಿಮದ್ವಾರದಿಂದ ತೆಳ್ಳನ್ನ ಉಪ್ಪುಪ್ಪಾದ ಸ್ರಾವವು ಗಂಟಲದಲ್ಲಿಳಿಯುವದು. (ಕಲ್ಕೆ. ಫಾ). ಕ್ಷೀಣರಕ್ತ ರೋಗಿಗಳಲ್ಲಿ ಬಹುದಿವಸದ ಜಳಿ. ಸುಂಬಳ ಉಪ್ಪುಪ್ಪು ಇರುತ್ತದೆ. ಇನ್‌ಫ್ಲುಎಂಝಾ ಬೇನೆಯಲ್ಲಿ ಸೀನುಗಳು ಬರುತ್ತಿದ್ದು ಮೂಗಿನೊಳಗಿಂದಲೂ, ಕಣ್ಣಿನೊಳಗಿಂದಲೂ, ತೆಳ್ಳಗೆ ಸ್ರಾವವು ಹೋಗುತ್ತದೆ. ಮೂಗಿಗೆ ವಾಸನೆ ತಿಳಿಯುವದಿಲ್ಲ. ಮೂಗಿನಲ್ಲಿ ಹಕಳಿಗಟ್ಟುತ್ತವೆ. ಪಂಡುರೋಗದಲ್ಲಿ ಮೂಗು ಬಿಚ್ಚುತ್ತದೆ. ಕೆಮ್ಮುವ ಕಾಲಕ್ಕೂ ಸೀನುವ ಕಾಲಕ್ಕೂ ಮೂಗಿನಿಂದ ರಕ್ತವು ಹೋಗುತ್ತದೆ. (ಫೆರಂ. ಫಾ.) ಮೂಗು ಒಣಗಿದ್ದು ಒಳಗೆ ಹಕಳಿಗಟ್ಟುತ್ತದೆ. ಚಳಿಯು ಬಾಧೆಯು ಮುಂಜಾನೆ ಹೆಚ್ಚಾಗಿರುತ್ತದೆ. ಮೂಗು ಕೆಂಪಾಗಿರುತ್ತದೆ. ಅದರ ಮೇಲೆ ಬೊಕ್ಕೆಗಳು ಏಳುತ್ತವೆ. ಒಪ್ಪಾರೆ ಮೂಗು ತಟ್ಟೆಸುತ್ತದೆ. ಸೀತದಲ್ಲಿ ಬಹಳ ಸೀನುಗಳು ಬರುತ್ತಿದ್ದು ಮೂಗಿನಿಂದ ಸ್ರಾವವು ಇದ್ದರೆ ೩೦x ಶಕ್ತಿಯ ಔಷಧ ಕೊಡುವದು ಲೇಸು.

**ಮುಖಚರ್ಯೆ:—** ಕಳೆಗುಂದಿದ್ದು, ಹಳದಿ ಚರ್ಯೆ; ಕ್ವಿನೀನದ (Quinine) ದುಷ್ಪರಿಣಾಮದಿಂದ ಚರ್ಯೆಯಲ್ಲಿ ಕಾಲಕಾಲಕ್ಕೆ ವೇದನೆ; ಕಣ್ಣೊಳಗಿಂದ ನೀರಿನ ಧಾರೆ; ತಿನ್ನುವಾಗ ಮುಖದ ಮೇಲೆ ಬೆವರು ಬಿಡುತ್ತದೆ; ಮೀಸೆಯು ಕೂಡಲು ಉದುರಿ ಬೀಳುತ್ತವೆ. ಆ ಸ್ಥಳದಲ್ಲಿ ತಿಂಡಿಬಡುತ್ತದೆ. ರಸಿಕೆಯುಳ್ಳ ಬೊಕ್ಕೆಗಳೂ ಏಳುತ್ತವೆ.

**ಮುಖ:—** ಯಾವದೇ ರೋಗವಿದ್ದಾಗ್ಯೂ ರೋಗವಿಲ್ಲದಿದ್ದಾಗ್ಯೂ ಜೊಲ್ಲು ಬಹಳ ಸುರಿಯುತ್ತಿದ್ದರೆ ಬಾಯಿಯಲ್ಲೆಲ್ಲ ಮುತ್ತಿನ ಕಾಳಿನಂತೆ

ಬಿಳೇ ಬೊಕ್ಕೆಗಳು ಏಳುತ್ತವೆ. ಬಾಯಿಯು ಬಂದಿದ್ದು ಜೊಲ್ಲು ಬಹಳ ಸೋರುತ್ತದೆ. (ಕಾ. ಮೂ.); ತುಟಿಗಳಲ್ಲಿ ಒಡಕುಗಳು, ಅಲ್ಲಿ ವೇದನೆ ಹಾಗೂ ಉರುವು; ಜಿವ್ಹಾಗ್ರಂಥಿ ಹಾಗೂ ಲಾಲಾಗ್ರಂಥಿ ಇವುಗಳಲ್ಲಿ ಬಾವು. ಮೇಲಿಂದ ಮೇಲೆ ಉಗುಳಬೇಕೆಂಬ ಇಚ್ಛೆ. ಉಗುಳು ಬುರುಗು ಸಹಿತ.

**ನಾಲಿಗೆ:—** ನಾಲಿಗೆಯು ಮೇಲೆ ಸ್ವಚ್ಛ, ಜಿಗಟು, ಹಾಗೂ ತೆಳ್ಳಗೆ ತರ ( ಥರ–Layer ) ನಾಲಿಗೆಯ ಅಂಚುಗಳಲ್ಲಿ ಸಣ್ಣ ಸಣ್ಣ ನೊರೆಯ ಗುಳ್ಳಿಗಳಿರುತ್ತವೆ. ನಾಲಿಗೆಯ ತುದಿಗೆ ಸಣ್ಣ ಬೊಕ್ಕೆಗಳಿರುತ್ತವೆ. ನಾಲಿಗಗೆ ರುಚಿ ಇರುವದಿಲ್ಲ; ನಾಲಿಗೆ ಹಾಗೂ ಬಾಯಿಯು ಒಣಗಿದ್ದು ನಾಲಿಗೆಯ ಮೇಲೆ ಕೂದಲು ಹತ್ತಿದಂತೆ ಅನಿಸುತ್ತದೆ. ಸಣ್ಣಮಕ್ಕಳು ತಡವಾಗಿ ಮಾತನಾಡಹತ್ತಿದರೆ ಈ ಔಷಧ ಕೊಡಬೇಕು.

**ಹಲ್ಲು:—** ದಂತಶೂಲಿ. ( ಹಲ್ಲು ಬೇನೆ ); ಕಣ್ಣೊಳಗಿಂದ ನೀರು ಸುರಿಯುವದೂ ಜೊಲ್ಲುಸೋರುವದೂ ಇದ್ದರೆ ಈ ಔಷಧವು ಗುಣಕರವು. ಒಸಡಿಯೊಳಗಿಂದ ರಕ್ತ ಹೋಗೋಣ; ವ್ರಣಗಳು ಸಹ ಇರೋಣ; ಹಲ್ಲು ಸಡಿಲು; ಒಸಡಿಯ ಮೇಲೆ ಹುಣ್ಣು ಇರೋಣ, ಚಿಕ್ಕಮಕ್ಕಳಿಗೆ ಹಲ್ಲು ಬರುವಾಗ ಜೊಲ್ಲು ಸೋರುತ್ತಿದ್ದರೆ ಇದರ ಉಪಯೋಗ ವಾಗುವದು.

**ಗಂಟಲು:—** ಕಿರನಾಲಿಗೆ ಇಳವಿದ್ದು ಜೊಲ್ಲು ಬಹಳ ಸೋರುತ್ತದೆ (ಕಲ್ಕೆ. ಫ್ಲೂ.) ಗಲಗಂಡ (Goitre =ಶ್ವಾಸನಲಿಕೆಯ ರೋಗದಲ್ಲಿ) ಜೊಲ್ಲು ಸೋರುತ್ತಿದ್ದರೆ ( ಕಲ್ಕೆ. ಫಾ ) ಗಂಟಲು ನೋಯುವದು, ಗಂಟಲಿನಲ್ಲಿ ಒಣಗಿದಹಾಗೆ ಇರೋಣ ಅಥವಾ ಬಹಳ ಜೊಲ್ಲು ಸೋರೋಣ, ಕಣ್ಣು ಗಳು ಮುಚ್ಚಿಕೊಂಡಿರುವವು. ತೆಳ್ಳಗೆ ನೀರಿನಂತೆ ರೇಚವಾಗೋಣ, ಅದೇ ತರದ ವಾಂತಿಯಾಗೋಣ, ಚರ್ಯೆ ನಿಃಸತ್ವ, ಬಾವು ಇದ್ದಂತೆ ಬಾಯಿಗೆ ದುರ್ಗಂಧವಿರೋಣ ಮುಂತಾದ ಭಾವನೆಗಳಿದ್ದರೆ, ಘಟಸರ್ಪದ ( ಡಿಪ್ಥೀರಿಯಾ ( Diptheria ) ಒಂದುತರದ ಗಂಟಲ ಬಾವಿನ ಬೇನೆಯು) ಮೇಲೆ ಸಹ ಇದರ ಉಪಯೋಗವಾಗುವದು. ಗಂಡಮಾಲೆ ( ಕಾ. ಮೂ.)

ಗಂಟಲಿನಲ್ಲಿ ಒತ್ತಿದಂತೆ ಹಾಗೂ ಏನಾದರೂ ಸಿಕ್ಕಂತೆ ಅನಿಸುತ್ತದೆ. ಉಪ ಜಿಹ್ವಿಕೆ, ಕಿರಿನಾಲಿಗೆಯಲ್ಲಿ ಬಾವು, ಕುತ್ತಿಗೆಯಲ್ಲಿಯ ಅಥವಾ ಹಿಂಗುತ್ತಿಗೆಯಲ್ಲಿಯ ಗ್ರಂಥಿಗಳಿಗೆ ಬಾವು ಬರೋಣ. ಹಿಂಗುತ್ತಿಗೆಯು ಸೊರಗೋಣ.

**ಜಠರ:—** ಬಾಯಿಯಿಂದ ಜೊಲ್ಲು ಬಹಳ ಸೋರುತ್ತಿದ್ದು ನೀರಿನಂತೆ ತೆಳ್ಳಗೆ ವಾಂತಿಯಾಗುತ್ತಿದ್ದಲ್ಲಿ ಯಾವದೇ ಜಠರರೋಗದ ಮೇಲೆ ಇದನ್ನು ಕೊಡಬಹುದು. ನಾಲಗೆಯ ಮೇಲೆ ಸ್ವಚ್ಛ, ಪಾರದರ್ಶಕ, ಬುರುಗುಳ್ಳ ಲೇಪವು ಇದ್ದಲ್ಲಿ, ಅಪಚನದಲ್ಲಿ ನೀರಿನಂಥ ವಾಂತಿಯಾಗುತ್ತಿದ್ದು ಅದು ಉಪ್ಪಿನಂತೆ ಇರುವದು; ಹೊಟ್ಟೆಯಲ್ಲಿ ನೋವು ಇದ್ದಲ್ಲಿ; ಬಾಯಿ ನಾರುತ್ತಿದ್ದಲ್ಲಿ; ಬಾಯಿಗೆ ನೀರುಬಿಡೋಣ. ಹೊಟ್ಟೆಯು ತುಂಬಿದಂತೆ ಇದ್ದು ಜಡವಾಗೋಣ; ಉಪ್ಪನ್ನು, ಉಪ್ಪುಹಾಕಿದ ಪದಾರ್ಥಗಳನ್ನು ಅಥವಾ ಕಹಿ ಪದಾರ್ಥಗಳನ್ನು ತಿನ್ನುವ ಇಚ್ಛೆ ಬಹಳ ಇರೋಣ; ನೀರಡಿಕೆ ಬಹಳ; ನೀರು ಬಹಳ ಕುಡಿಯುವ ಇಚ್ಛೆ. ಹಸಿವೆಯು ಬಹಳ ಇರೋಣ: ತಿಂಡನಂತರ ಎದೆಗೆ ಬಂದು ಹಾಯುತ್ತದೆ; ಹುಳಿ ಹುಳಿ ಹತ್ತೋಣ, ಬಹಳ ದಿವಸ ಅಗ್ನಿಮಾಂದ್ಯವಿರೋಣ; ತಿಂಡನಂತರ ಹೊಟ್ಟೆ ಶೂಲಿ; ಪಾರದರ್ಶಕ, ತೆಳ್ಳಗೆ, ಹಾಗೂ ಬುರುಗು ಇದ್ದ ವಾಂತಿಯಾಗೋಣ, ಕಾಮಣಿ ಇರೋಣ ಬಾಷ್ಪ ಹಾಗೂ ಕಣ್ಣುಗಳು ಮುಚ್ಚು ಹಾಕೋಣ; ಜೊಲ್ಲು ಇರೋಣ ಮುಂತಾದ ಭಾವನೆಗಳು ಇದ್ದಲ್ಲಿ ಈ ಔಷಧವನ್ನು ಅವಶ್ಯ ಕೊಡತಕ್ಕದ್ದು.

**ಉದರ ಹಾಗೂ ಮಲ:—** ನೀರಿನಂಥ ರೇಚ; ರೇಚವು ಕಡಿಮೆಯಾದನಂತರ ಅವರೋಧ ಮತ್ತು ಅವರೋಧದನಂತರ ರೇಚ; ಕರಳುಗಳ ಶುಷ್ಕತೆಯ ಮೂಲಕ ಅವರೋಧವಿದ್ದು ಶರೀರದ ಇತರ ಭಾಗದಿಂದ ತೆಳ್ಳಗೆ ಸ್ರಾವ ( ವಾಂತಿ; ಜೊಲ್ಲು; ಮೂಗು ಸೋರೋಣ ) ವಿದ್ದಲ್ಲಿ ಇದು ಹಿತಕರವು. ತಲೆ ಮಂದವೂ ಜಡವೂ ಇದ್ದು ನೋಯುತ್ತಿರುವದು; ಕಣ್ಣಿನಿಂದ ನೀರು ಸೋರುತ್ತಿದ್ದರೆ; ಅಥವಾ ಬುರುಗುಸಹಿತ ವಾಂತಿಯಾಗೋಣ ಮುಂತಾದ ಭಾವನೆಗಳು ಇದ್ದಲ್ಲಿ ಅವರೋಧದಲ್ಲಿ ಇದರ ಉಪಯೋಗವಾಗುತ್ತದೆ. ಮಲವು ಗಟ್ಟಿ ಒಣ ಹಾಗೂ ಗಂಟುಳ್ಳದ್ದಾಗುತ್ತದೆ.

ಆದರಿಂದ ಗುದದ್ವಾರದಲ್ಲಿ ಬಿರುಕುಗಳಾಗುತ್ತವೆ: ಉರುಪು ಏಡುತ್ತದೆ. ಅದರಿಂದ ರಕ್ತವು ಹೋಗುತ್ತದೆ ಮತ್ತು ಶೌಚದನಂತರ ಉರಿಯುತ್ತದೆ. ಹೊಟ್ಟೆ ಜಾಡಿಸುತ್ತಿದ್ದು ರೇಚದಲ್ಲಿ ಬುರುಗು ಸಹ ಇರುತ್ತದೆ, ಹಾಗೂ ಬೆಳ್ಳಗೆ ಜಿಗಟು ಇರುತ್ತದೆ. ಶೌಚದನಂತರ ಉರಿಯುತ್ತದೆ. ರೇಚಗಳು ತಿಳಿಯದಲೆ ಆಗುತ್ತವೆ, ಮತ್ತು ಆದನಂತರ ಉರುಪು ಏಡುತ್ತದೆ. ರಕ್ತ ಮೂಲವ್ಯಾಧಿಯಲ್ಲಿ ಅಪರೋಧವಿದ್ದಲ್ಲಿ, ಉರುಪು ಇದ್ದ ಮೊಳಕೆಗಳು ಇರೋಣ. ಯಕೃತ್ ಮತ್ತು ಪ್ಲೀಹೆ ಇವುಗಳಲ್ಲಿ ವೇದನೆ (ಸೇಟ್ರಂಮೂರ) ಉಪ್ಪು ಹಾಕಿದ ಬಿಸಿ ನೀರಿನ ಬಸ್ತಿ ( Enema ) ಮೇಲಿಂದಮೇಲೆ ಕೊಟ್ಟಲ್ಲಿ ಬಹಳ ಗುಣವಾಗುತ್ತದೆ. ಕರಳುಗಳೊಳಗಿಂದ ಆಗುವ ತೆಳ್ಳನ್ನ ಸ್ರಾವವನ್ನು ನಿಲ್ಲಿಸುವ ಶಕ್ತಿಯು ಈ ಔಷಧದಲ್ಲಿದೆ. ಇಷ್ಟೇ ಅಲ್ಲ. ಉದರಭಾಗದಲ್ಲಿಯ ಸ್ನಾಯುಗಳಿಗೆ ಉತ್ತೇಜನ ಕೊಟ್ಟು ಅವುಗಳ ಶಕ್ತಿಯನ್ನು ಬೆಳೆಸುವ ಸಾಮರ್ಥ್ಯವು ಈ ಔಷಧದಲ್ಲಿದೆ.

**ಮೂತ್ರೇಂದ್ರಿಯ:**—ಮೂತ್ರವು ಬಹಳಾಗುತ್ತದೆ. ಬಾಯಿಯಿಂದ ನೀರು ಹೋಗುತ್ತಿದ್ದು ರೋಗಿಯು ಕ್ಷೀಣನಾಗಹತ್ತಿದ್ದರೆ ಈ ಔಷಧದ ಉಪಯೋಗವು ವಿಶೇಷವಾಗುವದು; ನೀರಡಿಕೆ ಬಹಳ; ಮೂತ್ರಾಶಯದಲ್ಲಿ ಶೀತ, ಆದರಿಂದ ಮೂತ್ರವು ನೀರಿನಂತೆ ತೆಳ್ಳಗೆ ಇದ್ದು ಸ್ಪಷ್ಟ ಪಾರದರ್ಶಕ ವಿರುತ್ತದೆ. ಮೂತ್ರದನಂತರ ವೇದನೆಯೂ ಉರುಪೂ ಇರುತ್ತವೆ. ಎರಡನೆ ಯವರ ಎದುರಿಗೆ ಮೂತ್ರವಾಗುವದೇ ಇಲ್ಲ. ಮೂತ್ರಕ್ಕೆ ಕೂತನಂತರ ಬಹಳ ವೇಳೆಯನಂತರ ಮೂತ್ರವಾಗಲಾರಂಭಿಸುತ್ತದೆ. ನಡೆಯುವಾಗ, ಕೆಮ್ಮುವಾಗ, ತಿಳಿಯದಲೇ ಮೂತ್ರವಾಗುತ್ತದೆ. ಮೂತ್ರದ್ವಾರದಿಂದ ರಕ್ತವೂ ಹೋಗುತ್ತದೆ.

**ಪುರುಷರ ಜನನೇಂದ್ರಿಯ:**— ಬಹಳ ದಿವಸದ ಮೇಹ; ಸ್ಪಷ್ಟ ನೀರಿನಂಥ ಪಾರದರ್ಶಕ ಜಿಗಟು ಕೀವು ಹೋಗುತ್ತದೆ ಮತ್ತು ಆಗ್ಗ ಉರಿಯುತ್ತದೆ ಮತ್ತು ಅಲ್ಲಿ ತಿಂಡಿ ಬಹಳ ಏಡುತ್ತದೆ. ಬಹಳ ದಿವಸದ ಉಪದಂಶ; ಅಂಡಾಶಯದಲ್ಲಿ ನೋವು; ವೃಷಣಗಳು ಬಾತಿರುತ್ತವೆ ಮತ್ತು ಅಲ್ಲಿ ವೇದನೆ ಇರುತ್ತದೆ; ಜನನೇಂದ್ರಿಯದ ಸುತ್ತುಮುತ್ತಲಿನ ಕೂದಲು

ಉದುರಿಬೀಳುತ್ತವೆ. ರೇತಸ್ಖಲನವಾಗುತ್ತದೆ; ಅದರಿಂದ ದಣುವಿಕೆಯಾಗುತ್ತದೆ. ಆದರೂ ಸಂಭೋಗೇಚ್ಛೆಯು ಬಹಳ ಇರುತ್ತದೆ. ಮೂತ್ರ ಮಾಡಿದ ಸ್ಥಳದಲ್ಲಿ ಅಕ್ಕೀಕಚ್ಚಿನಂಥ ಬಿಳೀ ಕಲೆ ಬೀಳುತ್ತವೆ. ಅಂಡಾಶಯದಲ್ಲಿ ಜಲವೃದ್ಧಿಯಾಗುತ್ತದೆ.

**ಸ್ತ್ರೀಯರ ಜನನೇಂದ್ರಿಯ:**—ಪ್ರಮೇಹ, ಉಪದಂಶಗಳಲ್ಲಿ ತೆಳ್ಳಗೆ, ಸ್ವಚ್ಛ ಪಾರದರ್ಶಕ, ಜಿಗಟು ಸ್ರಾವವು ಹೋಗುತ್ತಿದ್ದರೆ ಈ ಔಷಧವು ಗುಣಕರವು. ಮುಟ್ಟು ನೀರಿನಂತೆ ತೆಳ್ಳಗೆ; ಮುಟ್ಟು ಆಗುವಕಾಲಕ್ಕೆ ಸರಿಯಾಗಿ ಆಗದೆ ಬಹಳ ದಿವಸಕ್ಕೆ ಆಗುವದು; ಆ ಕಾಲಕ್ಕೆ ರೋಗಿಗೆ ತಲೆಶೂಲಿ ಇದ್ದು ಅವಳು ಖಿನ್ನಳಾಗಿರುತ್ತಾಳೆ. ಅಳುವ ಪ್ರವೃತ್ತಿಯೂ ಇರುತ್ತದೆ. ಮುಟ್ಟಿನ ಸಂಗಡ ಪ್ರದರವೂ ಇರುತ್ತದೆ. ತರುಣ ಸ್ತ್ರೀಯರಲ್ಲಿ ವಿಶೇಷತಃ ಅಶಕ್ತ ಹಾಗೂ ಪಂಡುರೋಗಿಗಳಲ್ಲಿ ಮುಟ್ಟು ತಡವಾಗಿ ಆಗೋಣ. ಸ್ತ್ರೀಯರ ರಕ್ತಸ್ರಾವದಲ್ಲಿ ಉರುವುಳ್ಳ, ತೆಳ್ಳನ್ನ, ಜಿಗಟು, ಬಿಳೀ ಸ್ರಾವವಿರುತ್ತದೆ. ಗರ್ಭಾಶಯದ ಮಾರ್ಗದಲ್ಲಿ ಒಣಗಿದಂತೆ ಇದ್ದು ಉರುವು ಬಹಳ ಇರುತ್ತದೆ: ಸಂಭೋಗದನಂತರ ಆ ಸ್ಥಳದಲ್ಲಿ ನೋವು ಬಹಳ ಇರುತ್ತದೆ. ಜನನೇಂದ್ರಿಯದ ಸುತ್ತುಮುತ್ತಲಿನ ರೋಮಗಳು ಉದುರಿ ಹೋಗುತ್ತವೆ. ಬಿಸಿನೀರಿನಲ್ಲಿ ೧॥ ಔಂಸ ನೇಟ್ರಂಮೂರನ್ನು ಹಾಕಿ ಅದನ್ನು ಮೂತ್ರಾಶಯ ಮಾರ್ಗದಲ್ಲಿ ಜೀಕಳಿ (ಪಿಚಕಾರಿ)ಯಿಂದ ಚಿಮ್ಮಿದಲ್ಲಿ ಗುಣಕರವು. ಗರ್ಭಾವಸ್ಥೆಯಲ್ಲಿ ಆಗುವ ವಾಂತಿ ತೆಳ್ಳಗಿನದೂ ಬುರುಗು ಇದ್ದದ್ದೂ ಇದ್ದು ಕಫವೂ ಕಾರಿಹೋಗುತ್ತದೆ; ಪ್ರಸೂತಿಯನಂತರ ಕೂದಲುಗಳು ಉದುರಿಬೀಳುತ್ತವೆ. ಹಾಗೂ ಸ್ತನಗಳು ಸಣ್ಣವಾಗುತ್ತವೆ. ಗರ್ಭಾಶಯದ ಬೇನೆಯು ಮೂಲಕ ರೋಗಿಗೆ ತಲೆದಿಂಬಿನಮೇಲೆ ತಲೆ ಇಟ್ಟುಕೊಂಡು ಹೊಟ್ಟೆ ಮೇಲೆ ಮಾಡಿಕೊಂಡು ಮಲಗಿಕೊಂಡಿದ್ದರೆ ಸಮಾಧಾನವಾಗುತ್ತದೆ.

**ಶ್ವಸನೇಂದ್ರಿಯ:**— ದಮ್ಮಿನಲ್ಲಿ ತೆಳ್ಳಗೆ, ಬುರುಗುಳ್ಳ ಕಫವು ಬೀಳುತ್ತದೆ. ಶ್ವಾಸನಲಿಕೆಯದಾಹ; ಮೇಲಿಂದಮೇಲೆ ತೆಳ್ಳಗೆ ಬುರುಗು ಇದ್ದ ಕಫ ಉಗುಳಬೇಕಾಗುತ್ತದೆ; ಕೆಮ್ಮುವಾಗ ಕಫ ಬಿಡಬೇಕಾದರೆ ತೊಂದರೆಯಾಗುತ್ತದೆ. ಒಣಕೆಮ್ಮು ಇದ್ದು ನಿಂತು ನಿಂತು ಹಗಲಿರುಳು

ಸರ್ವಕಾಲ ಬರುತ್ತಲೇ ಇರುತ್ತದೆ. ಎದೆಯಲ್ಲಿ ತುಂಬಿ ತುಂಬಿ ಬರುವಂಥ ಕೆಮ್ಮು. ಕೆಮ್ಮುವಾಗ ತಲೆ ನೋಯುತ್ತದೆ. ತಿಳಿಯದಲೇ ಮೂತ್ರ ವಾಗುತ್ತದೆ. ಹೊಟ್ಟೆಯಲ್ಲಿಯೂ ಅಂಡಾಶಯದಲ್ಲಿಯೂ ನೋವು ಇರುತ್ತದೆ. ಎದೆಯಲ್ಲಿ ಧಡಧಡಿಸುತ್ತದೆ, ಕಣ್ಣೊಳಗಿಂದ ನೀರು ಹೋಗುತ್ತದೆ. ಶರದೃತುವಿನಲ್ಲಿ ಬರುವಿಕೆಯು; ಬುರುಗಿನಂಥ ಉಪ್ಪು ಕಫ ಬೀಳುತ್ತದೆ. ಕೋಡಗಕೆಮ್ಮಿನಲ್ಲಿ ಬುರುಗಿನಂಥ ಸ್ವಚ್ಛ ಕಫ ಬೀಳುತ್ತದೆ. ನ್ಯೂಮೋನಿಯದಲ್ಲಿ (ಶ್ವಸನಕ ಜ್ವರ) ಮೇಲಿನ ಪ್ರಕಾರದ ಕಫವಿದ್ದರೆ ಹಾಗೂ ಕಫವು ಬಿಡುತ್ತಿದ್ದು ಗಂಟಲದಲ್ಲಿ ಘರಘರಿಸುತ್ತಿದ್ದರೆ ಈ ಔಷಧದ ಉಪಯೋಗವಾಗುವದು. ಕೆಂಪು ಕೆಂಪು ಧ್ವನಿಯು ಕೂತುಹೋಗುತ್ತದೆ. ಕೆಮ್ಮುವಾಗ ಎದೆಯಲ್ಲಿ ನೋಯುತ್ತದೆ. (ಪೇರಂಫಾಸ) ಫುಪ್ಪುಸಾವರಣದಾಹದ ದ್ವಿತೀಯಾವಸ್ಥೆಯಲ್ಲಿ.

**ರುಧಿರಾಭಿಸರಣ:—** ರುಧಿರಾಭಿಸರಣವು ಮಂದವಾಗಿರುವದು; ಕ್ಷೀಣಶಕ್ತಿ ರೋಗಿಗಳಲ್ಲಿ ಹೃದಯದಲ್ಲಿ ಧಡಧಡಿಸುವದು, ಎದೆಯಲ್ಲಿ ಬಿಗಿದಂತೆ ಭಾವನೆ, ಹೃದಯವೃದ್ಧಿ, ಯಾವಾಗಲೂ ಮಲಗಿಕೊಂಡಿರುವದರ ಕಡೆಗೆ ಪ್ರವೃತ್ತಿ, ಮಂದ ರಕ್ತಾಭಿಸರಣವೂ ಅದರಿಂದ ಕೈಕಾಲುಗಳು ತಣ್ಣಗೆ ಇದ್ದು ಬಧಿರತೆಯೂ ಇರುವದು (ಕಲ್ಕೆ. ಫಾ.) ನಾಡಿಯು ತೀವ್ರವಿದ್ದು ತಪ್ಪಿ ತಪ್ಪಿ ಹಾರುತ್ತವೆ. ಎಡಗಡೆಯ ಮಗ್ಗಲಾಗಿ ಮಲಗಿದಲ್ಲಿ ಹೆಚ್ಚಾಗುತ್ತದೆ. ಹೃದಯಭಾಗದಲ್ಲಿ ವೇದನೆ ಇದ್ದು ಅದು ಅಲ್ಲಾಡಿದ್ದರಿಂದಲೂ ದೀರ್ಘ ಶ್ವಾಸದಿಂದಲೂ ಹೆಚ್ಚಾಗುತ್ತದೆ. ರಕ್ತವು ನೀರಿನಂತೆ ತೆಳ್ಳಗಿದ್ದು ಗಟ್ಟಿಯಾಗುವದಿಲ್ಲ.

**ಬೆನ್ನು ಮತ್ತು ಕುತ್ತಿಗೆ:—** ಮಕ್ಕಳ ಕುತ್ತಿಗೆ ಸಣ್ಣದಾಗಿರುತ್ತದೆ, ಬೆನ್ನು ನೋಯುತ್ತದೆ. ಗಟ್ಟಿ ಸ್ಥಳದಲ್ಲಿ ಮಲಗಿದರೆ ನೆಟ್ಟಗೆನಿಸುತ್ತದೆ. ಬೆನ್ನಿನಲ್ಲಿ ಚಳಿಯೆನಿಸುತ್ತದೆ.

**ಕೈಕಾಲುಗಳು:—** ಕೈಯಮೇಲೆಯೂ ಬಟ್ಟಿನಮೇಲೆಯೂ ಹುಣ್ಣುಗಳು, ಅದರೊಳಗಿಂದ ನೀರಿನಂತೆ ತೆಳ್ಳಗೆ ಸ್ರಾವವು ಹರಿಯೋಣ, ಕಾಲುಗಳು ತಮ್ಮಷ್ಟಕ್ಕೆ ತಾವೇ ಅಲ್ಲಾಡೋಣ, ಕಾಲುಗಳು ಗದಗದ ನಡುಗು

ತ್ತವೆ. ಸುಮ್ಮನೆ ಕೂಡಲು ಆಗುವದಿಲ್ಲ, ನಿದ್ರೆಯಲ್ಲಿ ಸ್ನಾಯುಗಳು ಹಾರು ತ್ತವೆ (ವ್ಯಾ. ಫಾ.) ನೇಟ್ರುಂಪೂರದ ಸಂಬಂಧದಿಂದ ನಾಲಿಗೆಯ ವಿಷಯ ದಲ್ಲಿ ಹೇಳಿದ ಭಾವನೆಗಳು ಇದ್ದು ಸ್ರಾವವು ಇದ್ದಲ್ಲಿ ಸಂಧಿವಾತ, ಅಂಗುಲಿ ವಾತ ಇವುಗಳಲ್ಲಿ ಸಹ ಇದರ ಉಪಯೋಗವಾಗುತ್ತದೆ. ಸಂದುಗಳಲ್ಲಿ, ಬೊಟ್ಟುಗಳಲ್ಲಿ ವಿಶೇಷತಃ ಅಲ್ಲಾಡಿದ್ದರಿಂದ ಕರಕರವೆಂಬ ಸಪ್ಪಳವಾಗು ತ್ತದೆ. ಸಂದುಗಳು ಜಿರುಸು ಇದ್ದು ಅವುಗಳಲ್ಲಿ ಬಾವು ಇದ್ದಲ್ಲಿ; ಟೊಂಕದಲ್ಲಿ ನೋವು; ಗೃಧ್ರಸಿ (ಕಟಿಪಶ್ಚಾದ್ಭಾಗದಿಂದ ಕೆಳಗೆ ಅಂಗಾಲಿನ ವರೆಗೆ ಯಾವತ್ತು ಹಿಂಭಾಗದ ನಾಡಿಗಳಲ್ಲಿ ಉರುವು;. ವೇದನೆ ಇರೋಣ. (ಗೃಧ್ರಸಿ=Eng. Sciation ); ಪುಂಡೆಬೇನೆ; ಮೊಳಕಾಲಿಗೆ ಬಾವೂ; ಜೊಕ್ಕೆಗಳೂ; ಸಂದುಗಳ ಸುತ್ತಮುತ್ತಲು ಪಿತ್ತದ ಗಾದರಿಗಳು;

**ನಿದ್ದೆ ಮಂಪರು:**— ನಾಡಿಗತ ವೇದನೆ ( ವ್ಯಾ. ಫಾ. ) ಮೇಲಿಂದಮೇಲೆ ನಿಯಮಿತಕಾಲಕ್ಕೆ ಉದ್ಭವಿಸುತ್ತವೆ. ಇಂಥ ಸಮಯ ದಲ್ಲಿ ಬಾಯಿಯಿಂದ ಜೊಲ್ಲೂ, ಕಣ್ಣಿನಿಂದ ನೀರೂ, ಸೋರುತ್ತಿದ್ದರೆ ಈ ಔಷಧವು ನಿಃಸಂಶಯವಾಗಿ ಹಿತಕರವು. ನೋಯುವ ಸ್ಥಳದಲ್ಲಿ ಬಧಿರತೆಯು; ಸ್ಪರ್ಶವು ಸಹನವಾಗುವದಿಲ್ಲ; ಸ್ನಾಯುಗಳ ಶೈಥಿಲ್ಯವೂ ಅಶಕ್ತತೆಯೂ ಯಾವಾಗಲೂ ನೋತಂತೆ ಇರುವದು, ಯಾವದೇ ಕೆಲಸ ಮಾಡಲು ಇಚ್ಛೆ ಇರುವದಿಲ್ಲ. ಸ್ನಾಯುವೈಕಲ್ಯ: ಸ್ನಾಯುಗಳು ಹಾರುವವು; ಅರ್ಧಾಂಗ ವಾಯು: ಹಿಸ್ಟೀರಿಯಾ (ಉನ್ಮಾದವಾಯು) ದ ಭಾವನೆಗಳು, ವಿಶೇಷತಃ ಮುಂಜಾನೆ ಹೆಚ್ಚು ಇರುವವು: ಅಪಸ್ಮಾರದಲ್ಲಿ ಬಾಯಿಗೆ ಬುರುಗು ಬರುವದು, ಶೀತವು ತೀವ್ರ ತುಂಬುತ್ತವೆ; ಯಾವಾಗಲೂ ನಿದ್ರೆಯುಳ್ಳವ; ಸಾಧಾರಣತಃ ಇತರರಿಗೆ ಸಾಕಾಗುವಷ್ಟು ನಿದ್ದೆ ಸಾಕಾಗುವದಿಲ್ಲ. ಪ್ರಾತಃ ಕಾಲದಲ್ಲಿ ಎದ್ದನಂತರ ನೋತಂತೆ ಇರುವದು; ಮೈಯಲ್ಲಿ ಜಾಡ್ಯವು; ಯಾವಾಗಲೂ ನಿದ್ರೆಮಾಡಬೇಕೆಂದು ಅನಿಸುತ್ತದೆ; ಆದ್ದರಿಂದ ಜಾಡ್ಯ ಮಂದತನ ಮಂಪರು; ನಿದ್ರೆಯಲ್ಲಿ ಮನೆಯೊಳಗೆ ಕಳ್ಳರು ಸೇರಿದಂತೆ ಭಾವನೆ; ಸ್ವಪ್ನ; ನಿದ್ರೆಯಲ್ಲಿ ಮೇಲಿಂದಮೇಲೆ ಅಂಜಿ ಏಳುವದು.

**ಜ್ವರ:**— ಸುಸ್ತಿ; ಆಲಸ್ಯ; ಕಣ್ಣುಮುಚ್ಚಿರೋಣ; ನೀರಿನಂತೆ ವಾಂತಿ; ಸ್ನಾಯುಗಳು ಹಾರೋಣ; ಮಂಪರಾದ ಭಾವನೆಗಳು ಇದ್ದಲ್ಲಿ

ಎಲ್ಲ ತರದ ಜ್ವರದ ಮೇಲೆ ಈ ಔಷಧದ ಉಪಯೋಗವಾಗುವದು; ಶರೀರದ ಬೇರೆ ಬೇರೆ ಭಾಗಗಳಲ್ಲಿ ಚಳಿಯಾಗುತ್ತದೆ; ಚಳಿಯಿದ್ದ ಕಾಲಕ್ಕೇ ನೀರಡಿಕೆಯಾಗುತ್ತದೆ; ಸಂಧಿವಾತ ಜ್ವರದಲ್ಲಿಯೂ ಸಂನಿಪಾತ ಜ್ವರದಲ್ಲಿಯೂ ಈ ಔಷಧವು ಹಿತಕರವು. ಸನ್ನಿಪಾತ ಜ್ವರದಲ್ಲಿ ಭ್ರಮು, ವಾತ ಮುಂತಾದ ಭಾವನೆಗಳು ಇರುತ್ತವೆ. ರೋಗಿಯು ತುಟಿಯಲ್ಲಿಯೇ ತಿಳಿಯದಂತೆ ಮಾತನಾಡುವನು; ಕೊಯಿನಲ್ಲಿನ ದುರುಪಯೋಗದಿಂದಾಗಲೀ ಹೆಚ್ಚು ಸೇವನೆ ಮಾಡಿದ್ದರಿಂದಾಗಲೀ ಬರುವ ಜ್ವರ; ಕೊಯಿನಲ್ಲಿನ ದುಷ್ಪರಿಣಾಮಗಳನ್ನು ನಾಶಗೊಳಿಸಲು ಬಹು ಉತ್ತಮವಾದ ಔಷಧವು. ತೇವಿನ ಸ್ಥಳದಲ್ಲಿ ಇದ್ದದರಿಂದ ಬರುವ ಜ್ವರ ಮುಂತಾದ ರೋಗ ( ನೇಟ್ರಂ ಸ. ) ಚಳಿ (ಹಿಮ) ಜ್ವರ; ಮುಂಜಾನೆ ೪ ತಾಸಿನ ಸುಮಾರಕ್ಕೆ ಚಳಿಯು ತುಂಬಿ ಮಧ್ಯಾಹ್ನದ ವರೆಗೆ ಹಾಗೇ ಇರುತ್ತದೆ; ಮುಂದೆ ಒಳ್ಳೇ ಭರದಿಂದ ಜ್ವರ ತುಂಬುತ್ತದೆ; ತಲೆಶೂಲಿ ಬಹಳ; ನೀರಡಿಕೆಯಾಗುತ್ತದೆ; ನಂತರ ಅಶಕ್ತತೆ ತರುವ ಹಾಗೂ ಹುಳಿವಾಸನೆಯುಳ್ಳ ಬೆವರು ಬಿಡುತ್ತದೆ; ನಡದಲ್ಲಿ ನೋವು ಬಹಳ; ಮೈಯಲ್ಲಿ (ಸುಸ್ತು) ಆಲಸ್ಯ ತುಂಬ ಹೋಗುತ್ತದೆ ರೋಗಿಯು ಅಶಕ್ತನಾಗುತ್ತಾನೆ; ಚರ್ಯೆ ನಿಃಸತ್ವ; ತುಟಿಯಮೇಲೆ ಬೊಕ್ಕೆಗಳು ಏಳುತ್ತವೆ; ಈ ಭಾವನೆಗಳಿದ್ದಲ್ಲಿ ಶೀತಜ್ವರದ ಮೇಲೆ ಈ ಔಷಧವು ನಿಶ್ಚಯವಾಗಿ ಹಿತಕರವು. ರಾತ್ರಿಯಲ್ಲಿ ಬೆವರು ಬಹಳ ಬಿಡುತ್ತದೆ; ಬಾಯಿಯಿಂದ ಜೊಲ್ಲು ಸೋರುತ್ತದೆ;

**ತ್ವಚೆ:—** ಯಾವ ತ್ವಗ್ರೋಗದಲ್ಲಿ ನೀರಿನಂತೆ ತೆಳ್ಳಗೆ ಸ್ರಾವವು ಹೋಗುತ್ತದೆ ಅಂಥ ಹುಣ್ಣುಗಳು ಏಳುತ್ತವೆ, ಇಲ್ಲವೆ ತ್ವಚೆಯು ಅತಿಶಯ ಒಣಗಿದಂತೆ ಇರುತ್ತದೆ. ಇಂಥ ಯಾವದೇ ತ್ವಗ್ರೋಗದಲ್ಲಿ ಇದರ ಉಪಯೋಗವಾಗುತ್ತದೆ. ಇಸಬಿನಲ್ಲಿ ತೆಳ್ಳನ್ನ ಹಾಗು ಬಿಳೀ ಹಕಳಿಗಟ್ಟಿದ್ದಲ್ಲಿ ಇದರ ವಿಶೇಷ ಉಪಯೋಗವು ಆಗುವದು. ಹೊರಗಿನಿಂದ ಈ ಔಷಧದ ಲೇಪಮಾಡಬಹುದು; ತೆಳ್ಳಗೆ ಸ್ರಾವವಿರುವಂಥ ಬೊಕ್ಕೆಗಳು; ಮೊಳಕಾಲಿನ ಮೇಲೆಯಾಗಲಿ ಮೊಳಕೈಯಲ್ಲಾಗಲಿ ತಗ್ಗಿನಲ್ಲಿ ಬೊಕ್ಕೆಗಳು; ಸಣ್ಣಮಕ್ಕಳು ಸ್ವಲ್ಪ ತುರಿಸಿಕೊಂಡಲ್ಲಿ ತ್ವಚೆಯು ತೆರೆದಂತೆ ಆಗುತ್ತದೆ. ( ನೇಟ್ರಂಫಾ ), ನೇಟ್ರಂಮೂರಕ್ಕೆ ಸರಿಯಾದ ಭಾವನೆಗಳು ಇದ್ದರೆ

ನಿಃಸಂಶಯ ಗುಣವಾಗುವದು. ತಲೆಯಮೇಲೆ ಹುಂಣುಗಳು; ಅವುಗಳ ಮೇಲೆ ಬಿಳೇ ಹಕಳೆಗಟ್ಟುತ್ತವೆ. ( ಕಾ. ಸ. ) ಇದು ಕ್ರಿಮಿದಂಶದ ಮೇಲಿನ ( ಹುಳಗಳ ಕಡಿತದ ) ಮುಖ್ಯ ಔಷಧವು. ದಂಶವಾದ ಕೂಡಲೆ ಹೊರಗಿನಿಂದ ಲೇಪನಮಾಡಬೇಕು. ಶೀತಜ್ವರದಲ್ಲಿ ಪಿತ್ತದ ಗಾದರಿಗಳು ಏಳುತ್ತವೆ. ಬಹಳ ತಿಂಡಿ ಬಿಡುತ್ತದೆ. ಸ್ವಲ್ಪೇ ಶಾರೀರಿಕ ಶ್ರಮಮಾಡಿದರೂ ಗಾದರಿಗಳು ಏಳುತ್ತವೆ. ರೂಪಾಯಿಯ ಆಕಾರದ ಹುಂಣುಗಳು ಆಗುತ್ತವೆ, ಅವುಗಳೊಳಗಿಂದ ಸ್ರಾವವು ಸೋರುತ್ತದೆ; ವೃಷಣ ತೊಡೆಗಳಲ್ಲಿಯೂ ಹುಂಣುಗಳಾಗುತ್ತವೆ. ಆದರಿಂದ ಉರುವುಳ್ಳ ತೆಳ್ಳನ್ನ ಸ್ರಾವವು ಹೋಗುತ್ತದೆ. ಉಪ್ಪು ಅಥವಾ ಉಪ್ಪಿನ ಪದಾರ್ಥ ಬಹಳ ತಿಂದದ್ದರಿಂದ ಇಸಬೂ ಪ್ಪೆಣೂ ಆಗುತ್ತವೆ. ಸಂದುಗಳ ತಗ್ಗಿನಲ್ಲಿ, ಹಣೆಯಮೇಲೆ, ಶೀರ್ಷ ಪೃಷ್ಠ ಭಾಗದಲ್ಲಿ; ತಲೆಯಮೇಲೆ ಕೂದಲಿದ್ದಲ್ಲಿ; ಕಿವಿಯ ಹಿಂಭಾಗದಲ್ಲಿ, ಕಂಣಿನ ರೆಪ್ಪೆಯಮೇಲೆ ಮುಂತಾದ ಸ್ಥಳಗಳಲ್ಲಿ ಪ್ಪೆಣಿನ ಹುಂಣುಗಳಾಗುತ್ತವೆ. ಕೂದಲಿದ್ದ ಸ್ಥಳವು ಎಂಣೆ ಹಚ್ಚಿದಂತೆ ಕಾಣಿಸುತ್ತದೆ. ಕೂದಲುಗಳು ಉದುರುತ್ತವೆ. ಉಗುರುಗಳು ಒಣಗಿದಂತೆ ಇದ್ದು ಕರಕರ ಸಪ್ಪಳಾಗುತ್ತದೆ, ಮತ್ತು ಅಲ್ಲಾಡುತ್ತವೆ. ಅಂಗ್ಯೆಯಲ್ಲಿ ಸರೋಲಿಗಳೇಳುತ್ತವೆ.

**ಇತರ ಅವಯವ**:— ಶರೀರದ ಯಾವದೇ ಭಾಗದಲ್ಲಿ ಜಲಶೋಥ (ಬಾವು) ( ನೇಟ್ರಂ. ಸಲ್ಫ. ) ಒಂದು ಸ್ಥಳದಲ್ಲಿಯ ಶ್ಲೇಷ್ಮಲ ತ್ವಚೆಯು (ಶರೀರದ ಒಳಭಾಗದಲ್ಲಿಯ ತ್ವಚೆ) ಒಂದು ಭಾಗವು ಒಣಗಿದಂತಿದ್ದರೆ ಎರಡನೆಯ ಭಾಗದಲ್ಲಿಯ ತ್ವಚೆಯಿಂದ ತೆಳ್ಳನ್ನ ನೀರಿನಂಥ ಸ್ರಾವವು ಹೋಗುತ್ತಿರುತ್ತದೆ. ರಕ್ತವು ನೀರಿನಂತೆ ತೆಳ್ಳಗಾಗಿರುತ್ತದೆ. ಪೀತ ಪಂಡು ರೋಗವು, ತ್ವಚೆ ಹೊಲಸಿರೋಣ, ಚರ್ಮ ಹಳದಿ, ಸಪ್ಪಗಿರೋಣ ಮುಂತಾದ ರೋಗದ ಮೇಲೆ ಇದು ಮುಖ್ಯ ಔಷಧವು. ಕಲ್ಕೆ. ಫಾ. ಜೊತೆಗೆ ಕೊಡಬೇಕು. ಅಶಕ್ತರೋಗಿಗೆ ಪೀತ ಪಂಡುರೋಗದಲ್ಲಿ ಫೇರಂ. ಫಾಸದ ಉಪಯೋಗವಾಗುವದಿಲ್ಲ. ಇಂಥಲ್ಲಿ ಕಲ್ಕೆ. ಫಾಸ ಮತ್ತು ನೇಟ್ರಂಮೂರ. ಇವುಗಳನ್ನೇ ಕೊಡಬೇಕು. ಮಧುಮೇಹ, ನಾಳಗುದ (ಮೂತ್ರಪಿಂಡದಾಹ Brights disease ), ಜಂತು; ಉಪ್ಪು ಬಹಳ ತಿಂದದ್ದರಿಂದಾಗುವ ಪಂಡುರೋಗ, ತ್ವಚೆಯು ನಿಸ್ತೇಜವಿದ್ದು, ಹೊಲಸು ಇರುವದು.

ಮುಂತಾದ ರೋಗಗಳಲ್ಲಿ ನೇಟ್ರಂಮೂರದ ಭಾವನೆಗಳಿದ್ದಲ್ಲಿ ಈ ಔಷಧದ ಉಪಯೋಗವು ಬಹಳಾಗುವದು. ತಿನಸು, ಉಣಸು ನೆಟ್ಟಗಾಗಿದ್ದರೂ ರೋಗಿಯು ಸವೆಯುತ್ತಿರುತ್ತಾನೆ. ವಿಶೇಷತಃ ರೋಗಿಯ ಕುತ್ತಿಗೆಯು ಬಡಕಾಗಿರುತ್ತದೆ. ಶೀತಜ್ವರದಲ್ಲಿಯೂ ಕೊಯನೆಲದ ಅತಿರೇಕದಿಂದ ಬಂದ ಅಶಕ್ತತೆಯಲ್ಲಿಯೂ ನೇಟ್ರಂಮೂರ ಬಹಳ ಗುಣಕಾರಿಯು. ಕಂಕುಳಲ್ಲಿಯ ಹಾಗೂ ಇತರ ಸ್ಥಳಗಳಲ್ಲಿಯ ಗ್ರಂಥಿಗಳು ಬಾತದ್ದು ಇರುತ್ತವೆ. ಗಂಟಲ ವಾಳ, ಗಂಟಲು ಉಬ್ಬು (Goitre) ನಾಲಿಗೆಯು ಜಿಗಟು, ಸ್ವಚ್ಛ, ಅದರ ಮೇಲೆ ನೀರಿನಂಥ ತೆಳ್ಳನ್ನ ಗುಳ್ಳಿಗಳು, ಜೊಲ್ಲು ಸುರಿಯೋಣ ಹಾಗೂ ಬೇರೆ ಕಡೆಯಿಂದ ನೀರಿನಂತೆ ತೆಳ್ಳನ್ನ ಸ್ರಾವವು ಹೋಗೋಣ ಇವು ಅದರ ಪ್ರಮುಖ ಲಕ್ಷಣಗಳು. ಉಗುರು ಬೆಳೆಯುವದಿಲ್ಲ, ತಲೆಯಲ್ಲಿ ಹುಣಗಳಾದ್ದರಿಂದ ಅಲ್ಲಿಯೂ ಕೂದಲು ಬೆಳೆಯುವದಿಲ್ಲ, ಕೂದಲು ಉದುರುತ್ತವೆ.

**ವೃದ್ಧಿ, ಕ್ಷಯ:**— ಸಾಧಾರಣತಃ ಮುಂಜಾನೆ ಸಮುದ್ರ ದಂಡೆಯ ಕ್ಷಾರಯುಕ್ತ ಹವೆಯಲ್ಲಾಗಲಿ ಶೀತ ಹವೆಯಲ್ಲಾಗಲಿ ಭಾವನೆಗಳು ಹೆಚ್ಚಾಗಿರುತ್ತವೆ, ನಡುನಡುವೆ ನಿಯಮಿತ ವೇಳೆಗೆ ರೋಗವು ಪುನಃ ಪುನಃ ಉದ್ಭವಿಸುತ್ತದೆ, ಇದು ಸಹ ಇದರ ಲಕ್ಷಣವಿದೆ, ಸಾಯಂಕಾಲ ದಲ್ಲಿ ಹಗುರು ಅನಿಸುತ್ತದೆ. ಕಠಿಣ ಸ್ಥಳದಲ್ಲಿ ಮಲಗುವದರಿಂದ ಟೊಂಕು ನೋಯುವದು ಇದರಿಂದ ಹಗುರವೆನಿಸುತ್ತದೆ. ಕೊಯನೆಲ್ಲು ಮುಂತಾದ ವಿಷಪದಾರ್ಥದ ಸೇವನ ಬಹಳ ಮಾಡಿದ್ದರಿಂದ ರೋಗವಾಗುತ್ತದೆ. ಮೂತ್ರ ಮಾಡಿದ ನಂತರ ಸಹ ಲಕ್ಷಣಗಳು ಒಲವತ್ತರ ಇರುತ್ತವೆ.

**ಉಪಯೋಗ:**— ೬ × ಶಕ್ತಿಯ ಔಷಧ ತೆಗೆದುಕೊಳ್ಳಬೇಕು, ಆದರೂ ೩೦ × ಶಕ್ತಿಯ ಔಷಧ ಎಷ್ಟೋ ಸಾರೆ ಉತ್ತಮ ಗುಣ ಕೊಡು ತ್ತದೆ. ಮುಂಜಾನೆ ಉತ್ಪನ್ನವಾಗುವ ಬಹಳ ದಿವಸದ ಮಸ್ತಕಶೂಲಿಯು ೨೦೦ × ಶಕ್ತಿಯಿಂದ ಹೋಗುವದು, ನಾಡೀಗತ ರೋಗವಿದ್ದಲ್ಲಿ ೧೨ × ಶಕ್ತಿಯನ್ನು ಕೊಡಬೇಕು, ಮುಟ್ಟಾಗಿರುವ ಕಾಲದಲ್ಲಿ ಆಗುವ ನಿರುತ್ಸಾಹ ಮುಂತಾದ್ದಕ್ಕೆ ೩೦ × ದಿಂದ ಗುಣ ಬರುವದು, ಅರತಲೆ (ಅರ್ಧತಲೆ),

ಶೂಲಿಯಲ್ಲಿ ಇದನ್ನೇ ಕೊಡಬೇಕು. ದಮ್ಮು, ಬಾಯಿಯಿಂದ ಜೊಲ್ಲು ಸೋರುವದು, ಬಹಳ ದಿವಸದ ಉಪದಂಶ, ಮೇಹ, ಸಂಭೋಗೇಚ್ಛೆಯು ಹೆಚ್ಚಾಗಿರೋಣ, ಅಪಸ್ಮಾರ, ಹಿಸ್ಟೇರಿಯಾ (ಉನ್ಮಾದವಾಯು), ಮುಂತಾದ ರೋಗಗಳಲ್ಲಿ ೨೦೦ × ಶಕ್ತಿಯಾಗಲಿ ಹೆಚ್ಚಿನ ಶಕ್ತಿಯಾಗಲಿ ಉಪಯೋಗ ಮಾಡಿದರೇನೇ ಗುಣಬರುತ್ತದೆ. ಅವರೋಧವನ್ನು ಕಳೆಯುಬೇಕಾದರೆ ೩೦ × ಯನ್ನೇ ಕೊಡಬೇಕು, ಕ್ಷಪುದಂಶ, ಬಾಯಿ ಬರೋಣ, ಮುಂತಾದ ರೋಗಗಳಲ್ಲಿ ಕಡಿಮೆ ಶಕ್ತಿಯ (೨×, ೩×, ಮುಂತಾದ) ಔಷಧದ ನೀರು ಮಾಡಿ ಬಾಯಿ ಮುಕ್ಕಳಿಸಬೇಕು ಅಥವಾ ಹೊರಗೆ ಇದರ ನೀರಿನಲ್ಲಿ ತೋಯಿಸಿದ ಬಟ್ಟೆಯ ಪಟ್ಟಿಯನ್ನು ಇಡಬೇಕು. ಕೂದಲು ಉದುರುವ ಬೇನೆಗೆ ೧ × ಶಕ್ತಿಯ ನೀರು ಮಾಡಿಯಾಗಲಿ ಮುಲಮುವಾಗಲಿ ಮಾಡಿ ಹಚ್ಚಬೇಕು.

**ಇತರ ಔಷಧಗಳ ಸಂಬಂಧ:—** ಕರ್ಣನಲಿಕೆಯ ರೋಗದಲ್ಲಿ ಆಗುವ ಬಧಿರತೆಗೆ ಕಾಲೀಸಲ್ಫ, ಕಾಲೀಮೂರ ಇವುಗಳ ಲಕ್ಷಣಗಳನ್ನು ಲಕ್ಷ್ಯದಲ್ಲಿ ತರಬೇಕು. ಜಠರ ಹಾಗೂ ಆಂತ್ರಗತ ಬೇನೆಗಳಲ್ಲಿ ನೇಟ್ರಂ ಸ. ಹಾಗೂ ಹುಡಿಗೆಯರ ಮುಟ್ಟಿನಲ್ಲಿ, ತಲೆನೋವಿನಲ್ಲಿ ಕಲ್ಕೆ. ಫಾ, ಫೇರಂ. ಫಾಸ, ಇವುಗಳ ಲಕ್ಷಣಗಳನ್ನು ಮನಸ್ಸಿನಲ್ಲಿ ತರಬೇಕು. ಮುಟ್ಟು ಬಹಳ ಹೋಗುತ್ತಿದ್ದಲ್ಲಿ ನೇಟ್ರಂಮೂರವು ಗುಣಕೊಡುವದು. ಕ್ರಿಮಿ ದಂಶದಲ್ಲಿ ನೇಟ್ರಮೂರದಂತೆ ಫೆರಂ. ಫಾ. ಮತ್ತು ಕಾಲಿ. ಫಾ., ಇವುಗಳ ಉಪಯೋಗ ಸಹ ಗುಣಕರವಾಗುವದು. ಕಾಮುಣಿಯಲ್ಲಿ ನೇಟ್ರಂ. ಸ. ಮತ್ತು ಕಾಲೀಮೂರಗಳ ನಂತರ ನೇಟ್ರಂ. ಮೂರದ ಉಪಯೋಗ ಮಾಡಬೇಕು.

**ಪ್ರಮಾಣ:—** ೪।೫ ಪಡೆಗಳನ್ನು ಅಥವಾ ೩।೪ ಗುಂಜಿ ಚೂರ್ಣವನ್ನು ರೋಗದ ತೀವ್ರತೆಯ ಮಾನದ ಮೇಲಿಂದ ತಾಸಿಗೊಮ್ಮೆ ಅಥವಾ ೨।೩ ತಾಸಿಗೊಮ್ಮೆ ಕೊಡಬೇಕು.

---

# ನೇಟ್ರಂ ಸಲ್ಫ್ಯೂರಿಕಂ

## ( Natrum Sulphuricum )

**ಇತರ ಹೆಸರುಗಳು**:— ಸೋಡಿಯಂ ಸಲ್ಫೇಟ, ಸಲ್ಫೇಟ ಆಫ ಸೋಡಾ, ಗ್ಲಾಬರ್ಸ ಸಾಲ್ಟ ಇವು ಇದರ ಇತರ ಹೆಸರುಗಳು.

**ಕಾರ್ಯಕ್ಷೇತ್ರ**:— ಈ ಕ್ಷಾರವು ಪಿಂಡಗಳಲ್ಲಿಯು ರಸದ್ರವ್ಯದಲ್ಲಿ ದೊರೆಯುತ್ತದೆ. ಪಿಂಡಗಳಲ್ಲಿ ಅದು ದೊರೆಯುವದಿಲ್ಲ. ಧಾತು, ರಕ್ತ ಮತ್ತು ಶರೀರದಲ್ಲಿಯ ಇತರ ದ್ರವಪದಾರ್ಥಗಳಲ್ಲಿ ಅವಶ್ಯವಿರುವ ಪ್ರಮಾಣಕ್ಕಿಂತ ಹೆಚ್ಚಾಗಿದ್ದ ನೀರನ್ನು ಕಡಿಮೆಮಾಡಿ ಅದರ ಪ್ರಮಾಣವನ್ನು ನಿಯಮಿತ ಮಾಡುವದು ಈ ಕ್ಷಾರದ ಮುಖ್ಯ ಕರ್ತವ್ಯವು. ಕೆಳಗಿನ ಎರಡು ಪ್ರಕಾರದಿಂದ ಈ ನೀರು ಉತ್ಪನ್ನವಾಗುವದು.

(೧) ಲ್ಯಾಕ್ಟಿಕ ಆಸಿಡದ ಪೃಥಕ್ಕರಣ (೨) ಶರೀರದಲ್ಲಿ ಫುಪ್ಪುಸ ದ್ವಾರದಿಂದ ಶೀತ ಹವೆಯನ್ನು ಹೆಚ್ಚು ಪ್ರಮಾಣದಲ್ಲಿ ಸ್ವೀಕರಿಸಿಕೊಳ್ಳುವದು; ಈ ಎರಡು ಕಾರಣಗಳಿಂದ ನೀರು ಹೆಚ್ಚು ಉತ್ಪನ್ನವಾಗುತ್ತದೆ. ನೇಟ್ರಂಸಲ್ಫದ ಕಾರ್ಯವು ನೇಟ್ರಂಮೂರದ ತೀರ ವಿರುದ್ಧವಾದದ್ದು; ಎರಡೂ ಕ್ಷಾರಗಳಲ್ಲಿ ನೀರನ್ನು ತಮ್ಮ ಕಡೆಗೆ ಎಳೆದುಕೊಳ್ಳುವ ಶಕ್ತಿಯುಂಟು; ಆದರೆ ಎರಡೂ ಕ್ಷಾರಗಳ ಉದ್ದೇಶ ಮಾತ್ರ ಬೇರೆ: ಶರೀರದಲ್ಲಿ ನೀರಿನ ಉಪಯೋಗವಾಗಬೇಕು; ಅದರ ಸಹಾಯದಿಂದ ಪಿಂಡಗಳ ದ್ವೈಧೀಕರಣವಾಗಬೇಕು: ಅವುಗಳ ಸಂವರ್ಧನವಾಗಿ ಅವುಗಳ ಸಂಖ್ಯೆಯು ಬೆಳೆಯಬೇಕು; ಈ ಕಾರ್ಯಕ್ಕೆ ನೇಟ್ರಂಮೂರವು ನೀರಿನ ಉಪಯೋಗ ಮಾಡಿಕೊಳ್ಳುತ್ತದೆ. ಉಪಯೋಗವಿಲ್ಲದ ನೀರನ್ನು, ದುಷ್ಪರಿಣಾಮ ಮಾಡುವಂಥ ನೀರನ್ನೂ ಶರೀರದ ಹೊರಗೆ ಹಾಕುವ ಕಾರ್ಯಕ್ಕೋಸ್ಕರ ತನ್ನ ಕಡೆಗೆ ನೀರನ್ನು ಎಳೆಕೊಳ್ಳುವದು ನೇಟ್ರಂ. ಸಲ್ಫದ ಮುಖ್ಯ ಉದ್ದೇಶವು ಪಿಂಡಗಳ ದ್ವೈಧೀಕರಣಮಾಡಿ ಅವುಗಳ ಸಂವರ್ಧನ ಮಾಡುವ ಕಾರ್ಯವನ್ನು ನೇಟ್ರಂಮೂರ ಮಾಡುತ್ತದೆ. ನೇಟ್ರಂಸಲ್ಫ ಇದು ಜೀರ್ಣವಾದಂಥ ಶ್ವೇತಕಣಗಳಲ್ಲಿಯ ನೀರನ್ನು ದೂರಸರಿಸಿ ಅದರ ಪೃಥಕ್ಕರಣ ಮಾಡುತ್ತದೆ. ಮತ್ತು ಶ್ವೇತ ಪಂಡುರೋಗವನ್ನು ಕಳೆಯಲು ಸಹಾಯಕರವಾಗು

ತ್ತದೆ. ನೇಟ್ರಂ ಮೂ. ನೇಟ್ರಂ ಫಾ. ನೇಟ್ರಂಸ. ಈ ಮೂರು ಕ್ಷಾರಗಳಿಗೂ ಶರೀರದಲ್ಲಿಯ ನೀರಿಗೂ ಬಹಳ ನಿಕಟ ಸಂಬಂಧವಿರುವದು. ಆದರೆ ಪ್ರತಿಯೊಂದರ ಕಾರ್ಯಕ್ಷೇತ್ರವು ಮಾತ್ರ ಬೇರೆ ಬೇರೆ. ನೇಟ್ರಂ ಫಾ. ಇದು ಶರೀರದಲ್ಲಿಯ ಲ್ಯಾಕ್ಟಿಕ ಆಸಿಡದ (ದುಗ್ಧಾಮ್ಲತೆ) ಮೇಲೆ ಪರಿಣಾಮಮಾಡಿ ನೀರು ಸಿದ್ಧಪಡಿಸುತ್ತದೆ. ನೇಟ್ರಂಮೂರ ಇದು ಶರೀರದಲ್ಲಿ ಸರ್ವತ್ರ ನೀರು ಮುಟ್ಟಿಸುವ ಕಾರ್ಯಮಾಡುತ್ತದೆ, ನೇಟ್ರಂಸ. ಇದು ನೀರನ್ನು ಶರೀರದ ಹೊರಗೆ ಹಾಕುವ ಕೆಲಸಮಾಡಿ ಅದರ ಪ್ರಮಾಣವನ್ನು ನಿಯಮಿತ ಮಾಡುತ್ತದೆ. ಅಸ್ತರ ಧಾತು (Epithelia tissue) ಹಾಗೂ ಜ್ಞಾನತಂತು ಇವುಗಳಿಗೆ "ನೇಟ್ರಂಸಲ್ಫ" ಕ್ಷಾರವು ಉತ್ತೇಜಕವೆಂದು ಉಪಯೋಗವಾಗುತ್ತದೆ. ಮೂತ್ರಪಿಂಡದಲ್ಲಿಯ ಅಸ್ತಿರಪಿಂಡಗಳಿಗೆ ಉತ್ತೇಜನ ಕೊಟ್ಟು ಮೂತ್ರವನ್ನು ಮೂತ್ರಪಿಂಡನಲಿಕೆಯೊಳಗಿಂದ ಮೂತ್ರಾಶಯದಲ್ಲಿ ತಂದುಬಿಡಲು ಸಹಾಯಕರವಾಗುತ್ತದೆ. ನೇಟ್ರಂಸಲ್ಫದ ಪ್ರಮಾಣವು ಕಡಿಮೆಯಾದ ಕೂಡಲೆ ಅಲ್ಲಿಯ ಜ್ಞಾನತಂತುಗಳ ಮೇಲೆ ಪರಿಣಾಮವಾಗಿ, ಮೂತ್ರಾಶಯದೊಳಗಿಂದ ಮೂತ್ರವು ತಿಳಿಯದಲೇ ಹೋಗುವದು, ಮೂತ್ರಪಿಂಡದಲ್ಲಿ ಮೂತ್ರವೇ ಸಿದ್ಧವಾಗದಿರೋಣವು ಮುಂತಾದ ವಿಕಾರಗಳು ಸಂಭವಿಸುತ್ತವೆ. ಪಿತ್ತ, ಕರಳು ಮುಂತಾದವುಗಳ ಮೇಲೆಸಹ ಇದರ ಕಾರ್ಯವು ಆಗುತ್ತದೆ. ಪಿತ್ತನ್ನು ಹೆಚ್ಚು ತೆಳ್ಳಗಾಗಲಿ, ಗಟ್ಟಿಯಾಗಲಿ ಮಾಡಗೊಡದೆ, ಯಾವಾಗಲೂ ಇರತಕ್ಕ ಅದರ ಘನತೆಯನ್ನು ಸರಿಯಾಗಿಡುವ ಕೆಲಸವು ಈ ಕ್ಷಾರದ್ದೇ ಸರಿ. ಇದರ ಪ್ರಮಾಣವು ಕಡಿಮೆಯಾದಲ್ಲಿ ಪಿತ್ತದ ಪ್ರಮಾಣವು ಕಡಿಮೆ ಇಲ್ಲವೆ ಹೆಚ್ಚು ಆಗುತ್ತದೆ. ಅಥವಾ ಅದು ಹೆಚ್ಚು ಗಟ್ಟಿಯಾಗಲಿ ತೆಳ್ಳಗಾಗಲಿ ಆಗುತ್ತದೆ.

ಕರಳುಗಳಲ್ಲಿ ಈ ಕ್ಷಾರವು ಕಡಿಮೆಯಾದಲ್ಲಿ ಅವರೋಧವಾಗಲಿ ವಾತಯುಕ್ತ ಶೂಲಿಯಾಗಲಿ ಉತ್ಪನ್ನವಾಗುತ್ತದೆ. "ಪ್ಯಾಂಕ್ರಿಯಾ" ಎಂಬ ಇಂದ್ರಿಯದ ಮೇಲೆ ಸಹ ಇದರ ಪರಿಣಾಮವಾಗಿ ಅದರಿಂದ ಪಾಚಕರಸವು ಆಗತಕ್ಕಷ್ಟರಕಿಂತ ಕಡಿಮೆ ಸಿದ್ಧವಾಗುತ್ತದೆ. ಆದ್ದರಿಂದ ಮಧುಮೇಹವಾಗುತ್ತದೆ. ಉದರದಲ್ಲಿ "ಪ್ಯಾಂಕ್ರಿಯಾ" ಎಂಬ ಇಂದ್ರಿಯವು

ಜಠರದ ಕೆಳಭಾಗಕ್ಕೆ ಇರುತ್ತದೆ. ಆದರಲ್ಲಿ ಪಚನ ಕ್ರಿಯೆಗೆ ಸಹಾಯ ವಾಗುವಂಥ ರಸವು ಉತ್ಪನ್ನವಾಗುತ್ತದೆ. ಆ ರಸವು ನಲಿಕಾ ದ್ವಾರದಿಂದ ದ್ವಾದಶಾಂಗುಲಾಂತ್ರದಲ್ಲಿ ತರಲ್ಪಡುತ್ತದೆ; ಪಿಂಡಗಳಲ್ಲಿ ಹೆಚ್ಚಾದ ನೀರು ಹೊರಗೆ ಹೋಗದೇ ಇದ್ದಮೂಲಕ ಅಲ್ಲಿಯೇ ಸಂಚಿತವಾದ್ದರಿಂದ ಕೆಳಗೆ ಬರೆದ ರೋಗಗಳು ಉದ್ಭವಿಸುತ್ತವೆ- ಹಿಮಜ್ವರ, ಪಿತ್ತಜ್ವರ, ಪೈತ್ತಿಕವಾಂತಿ, ಮಧುಮೇಹ, ಪೈತ್ತಿಕರೇಚ, ದುರ್ಗೀಬೇನೆ; ಜಲಶೋಥ (ಉದರ, ಜಲಯುಕ್ತಬಾವು ಮುಂತಾದವು), ಇನ್‌ಫ್ಲುಎಂಝಾ, ವಿಸರ್ಪ ( ಸರ್ಪ ಮತ್ತು. Erysipeles ) ಮುಂತಾದವು; ಹಳದೀ ನೀರುಳ್ಳ ಹುಣ್ಣು ತ್ವಚೆಯ ಮೇಲೆ ಉದ್ಭವಿಸುವದು. ಹಸಿ ಪೈಣು; ಸರೋಲಿ, ಯಕೃತವಿಕೃತಿ; ಪಿತ್ತಾಧಿಕ್ಯ; ಶೀತದಲ್ಲಿ ಹಳದಿ, ಅಥವಾ ಹಸರು ಸ್ರಾವವು ಹೊಗೋಣ ಮುಂತಾದವು.

**ಘೋಷಶ್ವಾ:—** ಕಫ ಪ್ರಕೃತಿಯ ರೋಗಿಗಳಿಗೆ ನೇಟ್ರಂ. ಸ. ಇದು ವಿಶೇಷ ಗುಣಕರವು. ಇಂಥ ರೋಗಿಗಳಿಗೆ ಶೀತ, ತೇವು ಸ್ಥಳದಲ್ಲಿಯೂ ನೀರಿನ ಸಮೀಪದ ಹವೆಯಲ್ಲಿಯೂ ಹೆಚ್ಚು ಬಾಧೆಯಾಗುತ್ತದೆ. ಮತ್ತು ಇದರ ವಿರುದ್ಧ ಪರಿಸ್ಥಿತಿಯಲ್ಲಿ ನೆಟ್ಟಗೆನಿಸುತ್ತದೆ. ನೇಟ್ರಂ. ಸ. ಇದರಿಂದ ರೇಚವು ನೆಟ್ಟಗಾಗುವದೆಂದು ಇದರ ಉಪಯೋಗವು. ಕರಳು, ಕರಳಿನ ಮೇಲಿನ ಹುಣ್ಣು, ಯಕೃತ, ಪ್ಯಾಂಕ್ರಿಯಾ, ಮುಂತಾದವುಗಳಲ್ಲಿಯ ರಸೋತ್ಪತ್ತಿಗೆ ಇದು ಸಹಾಯಕರವು. ಜಠರಗತ ಪೈತ್ತಿಕ ಬೇನೆಗಳಲ್ಲಿ, ತ್ವಚೆಯ ಕೆಳಗೆ ನೀರು ಸಂಚಿತವಾಗಿರೋಣ ಮತ್ತು ಬಾವು ಇರೋಣ ( ನೀರು ತುಂಬಿದ ಬಾವು ); ತ್ವಗ್ರೋಗಗಳಲ್ಲಿ ಹಳದಿ ಬಣ್ಣದ ತೆಳ್ಳನ್ನ ರಸಿಕೆ ಹರಿಯೋಣ, ಹಳದಿ ಹಕಳಿಗಟ್ಟುವಂಥ ಹುಣ್ಣುಗಳು ಉತ್ಪನ್ನವಾಗೋಣ, ಪಿತ್ತವು ಹೆಚ್ಚಿಗಾಗೋಣ, ಪಿತ್ತಾಶ್ಮರಿ (ಪಿತ್ತದಿಂದಾಗುವ ಹರಳುಗಳು—ಮಹಾರಾಷ್ಟ್ರದಲ್ಲಿ ಖಡಾ ಅನ್ನುತ್ತಾರೆ), ಮೂತ್ರದಲ್ಲಿ ಉಸುಕಿನಂಥ ಕಣಗಳು ಸಂಚಿತವಾಗೋಣ, ಮಧುಮೇಹ, ಅಂಗುಲಿವಾತ (gout) ಸರೋಲಿ ಮುಂತಾದ ವಿಕಾರಗಳಲ್ಲಿ ಇದರ ಉಪಯೋಗವಾಗುತ್ತದೆ. ಶೀತಜ್ವರದ ಮೇಲೆ ಇದು ಉತ್ತಮ ಔಷಧವು. ನಾಲಿಗೆಯ ಹಿಂಭಾಗದಲ್ಲಿ, ಹೊಲಸು, ಬೆಳ್ಳಗೆ, ಹಸರು, ಅಥವಾ ನೀಲವರ್ಣದ ಲೇಪ ಕೂಡಿಕೊಂಡಿ

ರೋಣ, ಎಡಮಗ್ಗಲಿಸ ಮೇಲೆ ಭಾರಹಾಕಿ ಮಲಗಿದಲ್ಲಿ ರೋಗವೃದ್ಧಿ ಯಾಗೋಣ, ಇವು ಈ ಕ್ಷಾರದ ಪ್ರಮುಖ ಲಕ್ಷಣಗಳು. ತೇವು (ಶೀತ) ಇದ್ದ ಸ್ಥಳದಲ್ಲಿಯೂ ತಣ್ಣನ್ನ ಹವೆಯಲ್ಲಿರೋಣದರಿಂದಲೂ ಆಗುವ ರೋಗ ಗಳನ್ನು ಈ ಔಷಧವು ನಿವಾರಣ ಮಾಡುತ್ತದೆ. ಶೀತ ಹವೆಯಲ್ಲಿ ಲಕ್ಷಣ ಗಳು ಹೆಚ್ಚಾಗೋಣವು ವಾತುಲ, ಕಫ ಪ್ರಕೃತಿಯ ಲಕ್ಷಣವೇ ಸರಿ. ತೀವ್ರವಾಗಿ ಎದೆಯಲ್ಲಿ ಶೀತ ಸೇರುತ್ತದೆ ಇಲ್ಲವೆ ದಮ್ಮಸ (ಉಬ್ಬಸ) ರೋಗಗಳು ಉತ್ಪನ್ನವಾಗುತ್ತವೆ ಅಂಥ ಹುಡುಗರಿಗೆ ಈ ಔಷಧವು ತೀವ್ರ ಗುಣಕಾರಿಯು. ರಕ್ತಸ್ರಾವವನ್ನು ತೀವ್ರವಾಗಿ ನಿಲ್ಲಿಸುವ ಶಕ್ತಿಯು ಈ ಕ್ಷಾರದಲ್ಲಿದೆ. ಅತ್ಯಾರ್ತವ (ಮುಟ್ಟು ಹೆಚ್ಚು ಪ್ರಮಾಣದಲ್ಲಾಗುವದು) ದಲ್ಲಿಯೂ, ಯಾವದೇ ಅಪಘಾತದಿಂದಾಗಲಿ ಇತರ ಕಾರಣದಿಂದಾಗಲಿ ಆಗುವ ರಕ್ತಸ್ರಾವಿನಲ್ಲಿಯೂ ಇದನ್ನು ಕೊಟ್ಟಲ್ಲಿ ಸ್ರಾವವು ತೀವ್ರವಾಗಿ ನಿಲ್ಲುವದು. ಮೇಲಿಂದ ಮೇಲೆ ರಕ್ತಸ್ರಾವ ಹೆಚ್ಚಾಗುವ ಪ್ರವೃತ್ತಿಯನ್ನು ನಿಲ್ಲಿಸಲು ಇದು ಉಪಯುಕ್ತ ಔಷಧವು. ಬಹಳ ದಿವಸ ಈ ಔಷಧ ಕೊಟ್ಟಲ್ಲಿ ಬಲಿತಿರುವ ಜಂತುಗಳು ಹೊರಬೀಳುತ್ತವೆ.

---

## ಪ್ರಮುಖ ಲಕ್ಷಣಗಳು

**ಮಿದುಳು:**— ಆತ್ಮಹತ್ಯೆ ಮಾಡುವ ಪ್ರವೃತ್ತಿ; ಆ ಪ್ರವೃತ್ತಿಯನ್ನು ನಿಲ್ಲಿಸಲು ಬಹು ಶ್ರಮವಾಗುತ್ತದೆ; ಅದರಿಂದ ರೋಗಿಯು ಸಿಡುಕ ಸ್ವಭಾವದವನೂ ಉನ್ಮತ್ತನೂ ಆಗುತ್ತಾನೆ. ' ನಿದ್ದೆ ಹತ್ತುವದಿಲ್ಲ; ಧೈರ್ಯವು ಕುಂದುತ್ತದೆ; ಕರ್ತವ್ಯಶೂನ್ಯತೆ; ಭ್ರಮ; ನಿರಾಶೆಯುಳ್ಳ ವಿಚಾರಗಳು ತಲೆಸೇರಿದ್ದರಿಂದಲೂ; ಸೀತ ಸ್ಥಳದಲ್ಲಿಯೂ ಲಕ್ಷಣಗಳು ಹೆಚ್ಚಾಗುತ್ತವೆ; ಅಪಘಾತದಿಂದಾಗಲೀ ಇತರ ಕಾರಣಗಳಿಂದಾಗಲೀ ಉತ್ಪನ್ನವಾಗುವ ಮಾನಸಿಕ ರೋಗದಲ್ಲಿ ಇದು ಪ್ರಮುಖ ಔಷಧವು.

**ಮಸ್ತಕ:**— ತಲೆನೋವು, ವಿಶೇಷತಃ ನೆತ್ತಿಯಮೇಲೆ; ಸಿರಗಳು ಟಣಟಣ ಹಾರುತ್ತವೆ. ಪಿತ್ತಾಧಿಕ್ಯದಿಂದ ಬರುವ ಬವಳಿ, ಕಣ್ಣಿಗೆ

ಕ್ತ್ರಲೆ ಬರುವದು, ನಾಲಿಗೆಯ ಮೇಲೆ ಹೊಲಸು, ಹಸರು, ಅಗ್ರವು;
ಯಿಯು ಕಹಿ ಆಗೋಣ; ಪಿತ್ತದ ವಾಂತಿಗಳೂ ರೇಚಗಳೂ ಮುಂತಾದ
ಾವನೆಗಳಿದ್ದು ತಲೆ ನೋಯುತ್ತಿದ್ದರೆ ಇದರಿಂದ ನಿಶ್ಚಿತವಾಗಿ ಗುಣ
ರುವದು. ತಲೆಯ ಹಿಂಭಾಗದಲ್ಲಿ ವೇದನಾತಿರೇಕವು; ತಲೆಗೆ ಅಪಘಾತ
ಂದಾಗುವ ದುಷ್ಪರಿಣಾಮವು; ಇವುಗಳಲ್ಲಿಯೂ ಮಸ್ತಿಷ್ಕಾಘಾತ
ಲ್ಲಿಯೂ ಕೊಡತಕ್ಕ ಪ್ರಮುಖ ಔಷಧವಿದು. ತಲೆಗೆ ರಕ್ತದ ಪ್ರವಾ
ವು ಹೆಚ್ಚು ಪ್ರಮಾಣದಲ್ಲಿ ಹೋದದ್ದರಿಂದ ಆಗುವ ತಲೆನೋವೂ;
್ರಮವೂ, ಮಸ್ತಿಷ್ಕ ದಾಹವೂ ಇದ್ದಲ್ಲಿ ಇದನ್ನು ಕೊಡುವದು.
ಘೆರಂ. ಘಾ. ಮ್ಯಾ. ಘಾ. )

**ನೇತ್ರ:**— ಕಣ್ಣು ಹಳದಿ; ಕಣ್ಣಾರೆಪ್ಪೆಯ ಕೊನೆಯಲ್ಲಿ ಉರುವು ಇದ್ದು ಕಣ್ಣಿನಿಂದ ನೀರು ಸೋರುತ್ತದೆ; ದೊಡ್ಡ ಹುಣ್ಣಿನಂಥ ಕುರುವು; ಉರಿಯುವಂಥ ಸ್ರಾವವು. ಮುಂಜಾನೆ ಕಣ್ಣುಗಳು ಮೆತ್ತಿಹಾಕುವವು. ಬೆಳಕು ನೋಡಕೂಡದು. ಬಹಳ ದಿವಸದ ನೇತ್ರಾಭಿಷ್ಯಂದವು ( ಕಣ್ಣಿನಿಂದ ಪಿಚ್ಚು ಸೋರುವದು ). ಹುಣ್ಣುಗಳಿದ್ದು ಹಸರು ಕೀವೂ ಹೋಗುತ್ತಿದ್ದರೆ.

**ಕಿವಿ:**— ಕಿವಿಗಳು ನೋಯುತ್ತವೆ. ಅದರೊಳಗಿಂದ ಚಮಕಾ ಹೊರಡುತ್ತವೆ. ಶೀತಹವೆಯಲ್ಲಿ ಹೆಚ್ಚಾಗುತ್ತದೆ; ಕಿವಿಯೊಳಗಿಂದ ಏನಾದರೂ ಹೊರಬಿದ್ದು ಹೋಗುತ್ತದೆಂಬ ಭಾವನೆ; ಕಿವಿಯಲ್ಲಿ ಗಂಟೆಬಡದಂತೆ ಘಣಘಣ ಸಪ್ಪಳು ಆಗುತ್ತದೆ.

**ಮೂಗು:**— ಉಪದಂಶದಿಂದ ಆಗುವ ಪಿನಸಿ, ತೇವು ಹಾವಿನಲ್ಲಿ ಹೆಚ್ಚು ಆಗುವದು; ಮೂಗಿನಲ್ಲಿ ನೆಗಡಿ; ಮೂಗು ದಟ್ಟೈಸುವದು; ಮೂಗು ಒಣಗಿದ್ದಿದ್ದು ಉರಿಯುತ್ತದೆ; ಮೂಗಿನ ಹೊಳ್ಳೆಗಳಲ್ಲಿ ತಿಂಡಿ; ಗಂಟಲೊಳಗಿಂದ ಸವುಳು ಸುಂಬಳ ಗೊಣ್ಣೆಗಳನ್ನು ಉಗುಳಿ ಚಲ್ಲಬೇಕಾಗುವದು; ಮುಟ್ಟಾದಾಗ್ಯೆ ಮೂಗು ಬಿಚ್ಚುತ್ತದೆ. ಮೂಗಿನಿಂದ ಬಿದ್ದ ಸುಂಬಳವು ಸ್ವಲ್ಪಕಾಲದಲ್ಲಿ ಹಸರಾಗುತ್ತದೆ.

**ಮುಖಚರ್ಯೆ:**— ನಿಃಸತ್ವ, ಹಳದಿ; ಕಾಮಣಿಯಾದಂತೆ, ಚರ್ಯೆ ಬಾತದ್ದು; ಬಾವು ಕೆಲವು ಕಡೆ ಕೆಂಪು, ಮೆತ್ತಗೆ ಹಾಗೂ ಹೊಳ ಪುಳ್ಳದ್ದು ಇರುತ್ತದೆ. (ಜ್ವರವಿದ್ದಲ್ಲಿ ಫೇರಂ. ಫಾ.) ತೋರೆಯ ಮೇಲೆ ಬೊಕ್ಕೆಗಳು.

**ಮೋರೆ:**— ಬಾಯಿ ಕಹಿಯಾಗಿದ್ದು; ಬಾಯಿಯು ಯಾವಾಗಲೂ ಜಿಗಟು; ದಟ್ಟ, ತಂತುಯುಕ್ತ, ಬಿಳೀ, ಹಸರು ಉಗುಳು, ಮೇಲಿಂದ ಮೇಲೆ ಉಗುಳುವ ಪ್ರವೃತ್ತಿ; ಮೇಲಿಂದ ಮೇಲೆ ದುರ್ಗಂಧ. ಜಿಗಟು ಖೇಕರಿಸಿ ಉಗುಳಬೇಕಾಗುವದು.

**ನಾಲಗೆ:**— ನಾಲಗೆಯ ಬುಡದಲ್ಲಿ ಹೊಲಸು. ಬೆಳ್ಳಗೆ, ಹಸರು, ಕೆಂಪು, ಜಿಗಟು ಕೂತಿರುವದು; ನಾಲಗೆಯು ಜಿಗಟಾಗಿರುವದು. ನಾಲಗೆಯು ಕಹಿಯಾಗಿರುವದು; ನಾಲಗೆಯ ಮೇಲೆ ಉರುಪುಳ್ಳ ಬೊಕ್ಕೆಗಳು; ನೆತ್ತಿಯು ಸ್ಪರ್ಶಮಾಡಿದಕೂಡಲೆ ನೋಯುವದು; ತಣ್ಣೀರು ಕುಡಿದಲ್ಲಿ ಸಮಾಧಾನವಾಗುವದು.

**ಹಲ್ಲು:**— ಹಲ್ಲುನೋವು; ಹೊಗೆಸೊಪ್ಪು (ತಂಬಾಕು) ಸೇದಿದಲ್ಲಿ, ತಣ್ಣಗೆ ಗಾಳಿ ಹತ್ತಿದರೆ, ಹಾಗೂ ತಣ್ಣೀರು ಬಾಯಿಯಲ್ಲಿ ಹಿಡಿದುಕೊಂಡರೆ ಸಮಾಧಾನವಾಗುವದು. ಒಸಡಿಯಲ್ಲಿ ಉರುಪು.

**ಗಂಟಲು:**— ಘಟಸರ್ಪದಲ್ಲಿ ಸೇರಿನಂಥ ತೆಳ್ಳನ್ನ ಹಸರು ವಾಂತಿಯಾಗಲಾರಂಭಿಸಿದಲ್ಲಿ ಈ ಔಷಧವನ್ನು ಇತರ ಔಷಧದ ಸಂಗಡ ನಡು ನಡುವೆ ಕೊಡಬೇಕು; (ಕಾ. ಮೂ,) ಗಂಟಲು ನೋವು; ನುಂಗುವಾಗ ಗಂಟಲದಲ್ಲಿ ಏನಾದರೂ ಗುಂಡುಸಿಕ್ಕಂತೆ ಅನಿಸುವದು. ಗಂಟಲದಲ್ಲಿ ಸೀತವಾದ್ದರಿಂದ ಗಂಟಲದಿಂದ ದಟ್ಟ, ಜಿಗಟು, ತಂತುಯುಕ್ತ ಬಿಳೀ ಕಫದ ಗಂಟುಗಳು ಬೀಳುತ್ತವೆ. ಪ್ರಾತಃಕಾಲದಲ್ಲಿ ಉಪ್ಪುಪ್ಪು ಕಫದ ಗಂಟುಗಳನ್ನು ಖೇಕರಿಸಿ ಹೊರದಬ್ಬಬೇಕಾಗುವದು. ಗಂಟಲದಲ್ಲಿ ವ್ರಣ.

**ಜಠರ:**— ಪಿತ್ತವು ಹೆಚ್ಚಾದ್ದರಿಂದ ಆಗುವ ತೊಂದರೆ; ಪೈತ್ತಿಕ ಭಾವನೆ. ಹಸರು, ಬೆಳ್ಳಗೆ, ಅಥವಾ ಹಸರು, ಕೆಂಪು ನಾಲಿಗೆ ಇದ್ದಲ್ಲಿ

ಪಿತ್ತವು ಹೆಚ್ಚಾಗಿದೆಯೆಂದು ತಿಳಿಯತಕ್ಕದ್ದು; ನಾಲಿಗೆಯು ಬಿಳೇದೂ ಇಲ್ಲವೆ ಬೂದಿಬಣ್ಣದ್ದೂ ಇದ್ದಲ್ಲಿ ಪಿತ್ತವು ಕಡಿಮೆಯಾಗಿದೆಯೆಂದು ತಿಳಿಯತಕ್ಕದ್ದು. ಪಿತ್ತವು ಹೆಚ್ಚಾದಲ್ಲಿ ನೇಟ್ರಂ. ಸ. ಕೊಡತಕ್ಕದ್ದು. ಪಿತ್ತವು ಸ್ವಲ್ಪವಿದ್ದರೆ ಕಾಲೀಮೂರ ಕೊಡತಕ್ಕದ್ದು. ನಾಲಿಗೆ ಬಹಳೇ ಕಹಿ ಹಾಗೂ ಜಿಗಟು ಆಗಿದ್ದರೆ ದಿನಾಲು ಸಾಯಂಕಾಲದಲ್ಲಿ ನೀರಡಿಕೆಯು ಆಗೋಣ; ಜಠರವು ಜಡ ಹಾಗೂ ಬಾತಂತೆ ಭಾವನೆ; ಒಂದೇಸವನೆ ಮಳಮಳಿಸುತ್ತದೆ. ಪಿತ್ತವಾಗಿ ಕಾರಿಕೆಯು ಬರುತ್ತದೆ; ಆಗ್ಗೆ ಬಾಯಿಯು ಕಹಿಯಾಗಲೀ ಹುಳಿಯಾಗಲೀ ಆಗುತ್ತದೆ; ಕಣ್ಣಿಗೆ ಜವಳಿಬರುತ್ತದೆ; ಉಪ್ಪುಪ್ಪು, ಹಸರು ನೀರಿನಂತೆ ವಾಂತಿಯಾಗುತ್ತದೆ. ಪಿತ್ತವು ಹೆಚ್ಚಾದ್ದರಿಂದ ಕಹಿ ನೀರು ವಾಂತಿಯಾಗುತ್ತದೆ. ಪೈತ್ತಿಕಶೂಲಿಯಿದ್ದು ಮೇಲಿನ ಭಾವನೆಗಳು ಇದ್ದು ಮಲವು ಕರೇಬಣ್ಣದ್ದೂ ಇದ್ದಲ್ಲಿ ಈ ಔಷಧವು ಹೆಚ್ಚು ಕ್ಷೇಮಕರವಾಗುವದು. ಸಕ್ಕರೆ ಹಾಕಿದ ಅನ್ನವು ಪಚನವಾಗುವದಿಲ್ಲ. ಕಾಮಣಿಯಲ್ಲಿ ಹಸರು ರೇಚಗಳಾಗುತ್ತವೆ. ತ್ವಚೆ ಹಳದಿಯಿದ್ದು ಕಣ್ಣುಗಳು ಹಳದಿ ಆಗಿರುತ್ತವೆ. ಬಣ್ಣದ ಕೆಲಸ ಮಾಡುವವರಿಗೂ ಮುದ್ರಣಾಲಯಗಳಲ್ಲಿ ಮೊಳೆಜೋಡಿಸುವವರು ಮೇಲಿಂದ ಮೇಲೆ ಸೀಸಿನ ಮೊಳೆಗಳನ್ನು ಬಾಯಲ್ಲಿ ಹಿಡಿಯುವದರಿಂದಲೂ ಆಗುವ ಶೂಲಿ; ೧ × ಅಥವಾ ೨ × ಶಕ್ತಿಯ ಔಷಧವನ್ನು ಮೇಲಿಂದಮೇಲೆ ಕೊಡಬೇಕು. ಗಂಟಲದಲ್ಲಿ ಹುಳಿ ಸುಡುತ್ತದೆ; ಗುದದ್ವಾರದಿಂದ ಅಪಾನವಾಯು ಹೋಗುತ್ತದೆ; ವಾತಜನ್ಯಶೂಲಿಯಲ್ಲಿ ಕರುಳಿನ ಎಡಭಾಗಕ್ಕೆ ಹೊಕ್ಕಳದ ಕೆಳಗೆ ಕುಂಡಲಿಕಾಭಾಗದಲ್ಲಿ ನೋವು ಇರುತ್ತಿದ್ದು ಮುಂಜಾನೆ ಉಪವಾಸವಿದ್ದ ಕಾಲಕ್ಕೆ ನೋವು ಹೆಚ್ಚಿಗೆ ಇರುತ್ತದೆ. ಯಕೃತ ಭಾಗದಲ್ಲಿ ವೇದನೆ; ಯಕೃತವೃದ್ಧಿ; ಎಡಗಡೆ ಮಗ್ಗಲಾಗಿ ಮಲಗಿದಲ್ಲಿ ನೋವು ಹೆಚ್ಚು; ಎಡಗಡೆಯ ಉದರಭಾಗದಲ್ಲಿ ನೋವೂ, ಕೆಮ್ಮೂ, ಇದ್ದು ಕಫವೂ ಬೀಳುತ್ತದೆ. ಪಿತ್ತವೂ ಗಟ್ಟಿಯಾಗಿರುತ್ತದೆ.

**ಉದರವೂ ಮಲವೂ:—** ಅತಿಸಾರ; ಕರೇ ಹಸರು ಬಣ್ಣದ ಪೈತ್ತಿಕ ರೇಚವು; ಪಿತ್ತದ ವಾಂತಿ; ಮುಂಜಾನೆ ಶೌಚವು ತೆಳ್ಳಗಾಗುತ್ತದೆ. ತಂಣನ್ನ ಹವೆಯಲ್ಲಿ ಹೆಚ್ಚಾಗುತ್ತದೆ. ವೃದ್ಧ ಸ್ತ್ರೀಯರಿಗೆ ಶೌಚವು ತೆಳ್ಳ

ಗಾಗುವದು ಇಲ್ಲವೆ ಹಾಗೆ ಆಗುವದು ಆನುವಂಶಕವಿದ್ದಲ್ಲಿ; ನೇಟ್ರಂಮೂರ ಬಹಳ ಕ್ಷೇಮಕರವು. ಅಭ್ಯಾಸವಾಗಲಿ ಇತರ ಮಾನಸಿಕ ಶ್ರಮವಾಗಲಿ ಹೆಚ್ಚು ಮಾಡಿದಲ್ಲಿ ಯಕೃತವು ಕೆಡುತ್ತದೆ. ( ಕಾ. ಫಾ. ) ಯಕೃತದಲ್ಲಿ ಬಾಣ ಬಡೆದಂತೆ ವೇದನೆ; ಸ್ಪರ್ಶವು ಸಹಸವಾಗುವದಿಲ್ಲ; ಯಕೃತದಲ್ಲಿ ರಕ್ತ ಸಂಚಯ; ( ಫೇರಂ. ಫಾ ). ಉದರ ಭಾಗದಲ್ಲಿ ಕಡೆದಂತೆ ವೇದನೆ ( ಮ್ಯಾ. ಫಾ. ಮತ್ತು ಫೇರಂಫಾ. ) ಫೇರಂಫಾ. ಇದು ಉಂಡಕಪುಚ್ಛ ವಿದ್ರಧಿಯ ಮೇಲಿನ ( ಅಪ್ಪೆಂಡಿ ಸಾಯಿಟಿಸ Appendisitis ) ಮುಖ್ಯ ಔಷಧವಿದ್ದು ಇದನ್ನು ನೇಟ್ರಂ ಸಲ್ಫದ ಜೊತೆಗೆ ಒಂದರನಂತರ ಎರಡ ನೇದು ಹೀಗೆ ಕೊಡಬೇಕು; ವಾತಜನ್ಯ ಶೂಲಿಯು ಮೊದಲು ಬಲಭಾಗ ದಲ್ಲಿ ಪ್ರಾರಂಭವಾಗಿ ಅನಂತರ ಎಲ್ಲ ಉದರ ಭಾಗದಲ್ಲಿ ಹಬ್ಬುತ್ತದೆ. ಗುದದ್ವಾರ ಹಾಗೂ ತೊಡೆ ಮುಂತಾದ ಭಾಗಗಳಲ್ಲಿ ಸರೋಲಿಯಂಥ ಬೊಕ್ಕೆಗಳು ಏಳುತ್ತವೆ; ತಂಪು ಹವೆಯಲ್ಲಿ ಎಲ್ಲ ಭಾವನೆಗಳ ವೃದ್ಧಿಯು;

**ಮೂತ್ರೇಂದ್ರಿಯಗಳು:—** ಮಧುಮೇಹದ ಮೇಲಿನ ಪ್ರಮುಖ ಔಷಧ. ಮೂತ್ರದೊಳಗಿಂದ ಶರ್ಕರಾ ( ಸಕ್ಕರೆ ) ಹೋಗುತ್ತಿದ್ದು ಅಶಕ್ತತೆ ಬಹಳಿದ್ದರೆ ಈ ಔಷಧವು ಬಹಳ ಹಿತಕರವು. ಇಟ್ಟಂಗಿಯ ಕಣಗಳಂತೆ ಸಣ್ಣ ಕಣಗಳು ಮೂತ್ರದ ಬುಡದಲ್ಲಿ ಕುಳಿತಿರುವವು. ವಿಶೇಷತಃ ಅಂಗುಲ ವಾತದಲ್ಲಿ ( gout ) ಕಂಡುಬರುವವು. ಪಿತ್ತ ಪ್ರಕೃತಿಯುಳ್ಳ ರೋಗಿಗಳಲ್ಲಿ ಆಗುವ ಅಶ್ಮರಿ ( ಮ. ಮೂತಖಡಾ ); ಮೂತ್ರದಲ್ಲಿ ಕೆಳಗೆ ಹಾಳಿಕೆಯೂ ಇರುವದು. ಮೂತ್ರದಲ್ಲಿ ಪಿತ್ತದ ಅಂಶವೂ ಇರುತ್ತದೆ. ಬಹುದಿವಸದ ಮೂತ್ರಪಿಂಡದ ದಾಹವಿದ್ದು ಮೂತ್ರದೊಳಗಿಂದ ಹಳದಿ, ಹಸರು ಸ್ರಾವವು ಹೋಗುತ್ತಿದ್ದರೆ; ಮೂತ್ರದ ಕಾಲಕ್ಕೆ ಉರುಪು ಇದ್ದರೆ, ಮೂತ್ರವು ಬಹಳಾಗುತ್ತಿದ್ದರೆ– ( ಮಧುಮೇಹದ ಮೂಲಕ ).

**ಪುರುಷರ ಜನನೇಂದ್ರಿಯ:—** ವೃಷಣ ಜಲವೃದ್ಧಿ;(ಕಲ್ಕೆ. ಫಾ. ಬಹಳ ,ದಿವಸದ ಉಪದಂಶದಲ್ಲಿ ಆಗುವ ಸರೋಲಿಗಳು ಆಗುತ್ತಿದ್ದಲ್ಲಿ; ಬಹಳ ದಿವಸದ ಪ್ರಮೇಹವಿದ್ದಲ್ಲಿ; ಪ್ರಮೇಹದಲ್ಲಿ ಅಥವಾ ಉಪದಂಶದಲ್ಲಿ ಹಸರು ಸ್ರಾವವಿದ್ದಲ್ಲಿ; ಅಡಗಿದ ಪ್ರಮೇಹದಲ್ಲಿಯೂ ಉಪಯೋಗವಾಗು ವದು; ಜನನೇಂದ್ರಿಯದಲ್ಲಿ ತಿಂಡಿಯೂ ಬಾವೂ ಇರುವದು.

**ಸ್ತ್ರೀಯರ ಜನನೇಂದ್ರಿಯ:—** ಜನನೇಂದ್ರಿಯಗಳು ಬಾತಿದ್ದು ಹಾಗೂ ದಾಹವು ಇದ್ದು ಇಂದ್ರಿಯಗಳ ಮೇಲೆ ಹುಣ್ಣುಗಳು ಆದಲ್ಲಿ; ಮುಟ್ಟಾದ ಕಾಲದಲ್ಲಿ ಮೂಗು ಬಿಚ್ಚುತ್ತಿದ್ದಲ್ಲಿ; ಮುಟ್ಟು ಪ್ರಮಾಣಬಿಟ್ಟು ಹೆಚ್ಚಿಗಾದಲ್ಲಿ ಉರುಪು ಇದ್ದಲ್ಲಿಯೂ; ಸ್ರಾವವು ಬಹು ತಿಂಡಿ ಉತ್ಪನ್ನ ಮಾಡುವಂಥಾದ್ದು ಇದ್ದಲ್ಲಿ, ಮುಟ್ಟು ಆಗುವ ಕಾಲಕ್ಕೆ ಅವರೋಧವಿದ್ದು ಹೊಟ್ಟೆಶೂಲಿ ಇದ್ದಲ್ಲಿ, ಇಲ್ಲವೆ ಮುಳ್ಳುಮುರಿದಂತೆ ಶೈತ್ಯವಿದ್ದು ಶೌಚಕ್ಕೆ ತೆಳ್ಳಗೆ ನೀರಿನಂತೆ ಆಗುತ್ತಿದ್ದರೆ; ಪ್ರದರದಲ್ಲಿ ಉರಿಯುವಂಥ ಹಾಗೂ ತಿಂಡಿ ಉತ್ಪನ್ನಮಾಡುವಂಥ ಸ್ರಾವವು ಇದ್ದಲ್ಲಿ, ಸ್ರಾವವು ಹೋಗತಕ್ಕ ಭಾಗವು ಕೆಂಪಾಗಿರುತ್ತದೆ; ಗರ್ಭದ ಸಮಯದಲ್ಲಿ ಪೈತ್ಯದ ವಾಂತಿಯಾಗುತ್ತಿದ್ದು ಬಾಯಿಯು ಕಹಿಯಾಗಿದ್ದಲ್ಲಿ; ಗರ್ಭಾಶಯ ಮಾರ್ಗದಲ್ಲಿ ಹುಣ್ಣು ಇದ್ದು ತಿಂಡಿಯು ಇರುತ್ತದೆ; ಗರ್ಭದ ಕಾಲದಲ್ಲಿ ಕಾಲಿಗೆ ಬಾವು ಬರುತ್ತದೆ ಮತ್ತು ಬೆಳ್ಳಗಾಗುತ್ತಿದ್ದರೆ; ( ಶ್ವೇತಸರ್ಪ= Phlegmecia alba Dolens )

**ಶ್ವಸನೇಂದ್ರಿಯಗಳು:—**ಜ್ವರದಲ್ಲಿ ಬಹಳ ಉಬ್ಬಸ ಹುಟ್ಟುತ್ತದೆ, ಮತ್ತು ಹಸರು ಕೀವು ಸಹ ಕಫವು ದಟ್ಟಾಗಿ ಬೀಳುತ್ತದೆ: ತೇವು, ಶೀತ ಸ್ಥಳದಲ್ಲಿ ಯಾವಾಗಲೂ ದಮ್ಮು ಹೆಚ್ಚಾಗುತ್ತದೆ; ಆ ಕಾಲಕ್ಕೆ ಶೌಚವು ತೆಳ್ಳಗಾಗುತ್ತದೆ, ಹಸಿ ದಮ್ಮು; ಗಂಟಲದಲ್ಲಿ ಘರಘರಿಸುತ್ತದೆ; ಲಘುಶ್ವಾಸನಲಿಕಾದಾಹ, ಕೆಮ್ಮು ಮತ್ತು . ಅದರಲ್ಲಿ ದಟ್ಟ, ತಂತು ಯುಕ್ತ ಹಸರು ಕೀವಿನಂಥ ಕಫವೂ ಬೀಳುತ್ತಿದ್ದರೆ; ಕೆಮ್ಮುವಾಗ ಎದೆ ಯಲ್ಲಿ ನೋಯುತ್ತದೆ. ಆಗ್ಗೆ ಎದೆ ಒತ್ತಿಹಿಡಕೊಂಡಲ್ಲಿ ಸಮಾಧಾನವಾಗು ತ್ತದೆ; ಆದ್ದರಿಂದ ರೋಗಿಯು ಕೆಮ್ಮುವ ಕಾಲಕ್ಕೆ ಎದೆ ಹಿಡುಕೊಂಡು ಕೆಮ್ಮುತ್ತಾನೆ; ಎದೆಯಲ್ಲಿ ಎಡಭಾಗಕ್ಕೆ ಚುಚ್ಚಿದಂತೆ ತೀವ್ರ ವೇದನೆ; ಶೀತ ಹವೆಯಲ್ಲಿ ಶ್ವಾಸೋಚ್ಛ್ವಾಸಕ್ಕೆ ತೊಂದರೆ, ಕೆಮ್ಮು ಯಾವಾಗಲೂ ಮುಂಜಾನೆ ಹೆಚ್ಚಾಗಿರುತ್ತದೆ;

**ರುಧಿರಾಭಿಸರಣ:—** ಹೃದಯ ಭಾಗದಲ್ಲಿ ಒತ್ತಿದಂತೆ ಅನಿಸಿ ಅಸ್ವಸ್ಥತೆ ಇರುತ್ತದೆ, ಬಯಲು ಹವೆಯಲ್ಲಿ ಕೂತಲ್ಲಿ ಸಮಾಧಾನ ವೆನಿಸುತ್ತದೆ, ಭವಳಿ, ಕಂಣಿಗೆ ಕತ್ತಲೆ.

**ಹಿಂಗುತ್ತಿಗೆ, ಬೆನ್ನು:—** ಬೆನ್ನಿನಲ್ಲಿ ಹಾಗೂ ಬೆನ್ನು ಹುರಿಯಲ್ಲಿ ಜಜ್ಜಿದಂತೆ ಅನಿಸುತ್ತದೆ. ಹಿಂಗುತ್ತಿಗೆಯಲ್ಲಿಯೂ ಬೆನ್ನುಹುರಿಯಲ್ಲಿಯೂ ನೋಯುತ್ತದೆ; ಮಸ್ತಿಷ್ಕ ದಾಹದಲ್ಲಿ ಹಿಂಗುತ್ತಿಗೆಯಲ್ಲಿಯೂ ತಲೆಯ ಹಿಂಭಾಗದಲ್ಲಿಯೂ ತೀವ್ರ ವೇದನೆ, ಹಿಂಗುತ್ತಿಗೆಯು ಹಿಂದೆ ಎಳೆದಂತೆ ಕಾಣುತ್ತದೆ, ಬೆನ್ನಿನಲ್ಲಿ ಸೆಟಿಬೇನೆ ( ಸೆಟಸುವದು=convulsion )

**ಕೈಕಾಲು:—** ಪೈತ್ತಿಕ ಭಾವನೆಗಳು ಇದ್ದಲ್ಲಿ ಸಂಧಿವಾತದಲ್ಲಿ ದಿನಾಲು ಇಲ್ಲವೆ ಮೇಲಿಂದ ಮೇಲೆ ಇತರ ಔಷಧದ ಜೊತೆಗೆ ಇದನ್ನೂ ಕೊಡಬೇಕು, ಬಹಳ ದಿವಸದ್ದಾಗಲೀ ತಾತ್ಕಾಲಿಕವಾಗಲೀ ಅಂಗುಲಿವಾತದಲ್ಲಿ (gout) ಇದು ಹಿತಕರವು. (ಫೇರಂಫಾ. ರೋಗಿಯು ಮಾದಕ ಪದಾರ್ಥ ಸೇವನೆಯನ್ನು ವರ್ಜಪಡಿಸುವದು) ಕಂಕುಳದಲ್ಲಿಯ ಗ್ರಂಥಿಗಳು ಬಾಯುತ್ತವೆ ಮತ್ತು ಅವುಗಳಲ್ಲಿ ಕೀವು ಸಹ ಆಗುತ್ತದೆ. ಉಗುರಿನ ಸುತ್ತಮುತ್ತಲು ದಾಹವೂ ಕೀವೂ, ಉಗುರಿನ ಕೆಳಭಾಗದಲ್ಲಿ ಉರುವು, ಹುಟ್ಟಿಸುವಂಥ ನೋವು ಇರುತ್ತದೆ, ಹೆಬ್ಬಟ್ಟಿನಲ್ಲ ತಿಂಡಿ ಬಿಡುತ್ತದೆ, ಎಡಗಡೆಯ ಮೊಳಕಾಲಿನಲ್ಲಿ ಚುಚ್ಚಿದಂತೆ ನೋವು, ಕೈಗೆ ಕಂಪ ( ನಡುಗು ) ಕಾಲಿಗೆ ಬಾವು, ಗೃಧ್ರಸಿ (Sciatica) ಮಲಗಿದಾಗ, ಏಳುವಾಗ ಇದ್ದು ಮಗ್ಗಲಾಗುವಾಗ ವೇದನೆಗಳು ಹೆಚ್ಚಾಗುವವು. ಕಟಿ ಪಶ್ಚಾದ್ಭಾಗದಿಂದ ಮೊಳಕಾಲಿನ ವರೆಗೆ ಭರದ ವೇದನೆ ಅಥವಾ ಕಳೆ. ಸಂದುಗಳಲ್ಲಿ ಕರಕರ ವೆಂಬ ಸಪ್ಪಳ, ಅಂಗಾಲಿನಲ್ಲಿ ಉರುವು, ಮೊಳಕಾಲಿನ ವರೆಗೆ ಸಹ ಹುಬ್ಬುವದು, ನಡೆಯುವಾಗ ಜೋಲಿಯು ಹೋಗುತ್ತದೆ, ಹಾಗೂ ಬಿದ್ದಂತೆ ಭಾವನೆ.

**ನಿದ್ರೆ ಮುಂತಾದ್ದು:—** ಅತಿಶಯ ದಣುವಿಕೆ, ದಣಿದಂತೆ ಭಾವನೆಯು, ವಿಶೇಷತಃ ಮೊಳಕಾಲಿನಲ್ಲಿ ದಣಿದಂತೆ ಅನಿಸುತ್ತದೆ, ಕಾಮುಣಿ ಮುಂತಾದ ಪೈತ್ತಿಕ ವಿಕಾರದಲ್ಲಿ ಈ ಭಾವನೆಯು ಹೆಚ್ಚಾಗಿ ಕಾಣಿಸುತ್ತದೆ, ಸರ್ವಾಂಗದಲ್ಲಿ ಕಂಪ ( ನಡುಗು ), ಬರೆಯುವಾಗ ಕೈ ನಡುಗುವದು, ನಿದ್ರೆಯಲ್ಲಿ ಕೈಕಾಲುಗಳು ಅಲ್ಲಾಡುತ್ತವೆ, ಮಾಂದ್ಯ ಹಾಗೂ ಮ್ಲಾನತೆ ಇವೆರಡೂ ಮುಂದೆ ಆಗತಕ್ಕ ಕಾಮುಣಿಯ ಲಕ್ಷಣಗಳು, ಮಧ್ಯಾಹ್ನ

ದಲ್ಲಿಯೂ ಓದುವ ಕಾಲಕ್ಕೂ ಮಾಂದ್ಯ ಬಹಳ ಆನಿಸುತ್ತದೆ, ಸಾಯಂಕಾಲ ದಲ್ಲಿ ಸಮಾಧಾನವೆನಿಸಿ ಮುಂಜಾನೆ ಬೇನೆ ಹೆಚ್ಚು. ಬಹಳ ಅಸ್ವಸ್ಥತೆ ಯನ್ನು ಉತ್ಪನ್ನ ಮಾಡುವಂಥ ಸ್ವಪ್ನ ಬೀಳುತ್ತವೆ. ನಿದ್ದೆಯಿಂದ ಗಾಬರಿ ಯಾಗಿ ಏಳುತ್ತಾನೆ, ದಮ್ಮಿನ ಉಬ್ಬಸದಿಂದಾಗಲಿ ಹೊಟ್ಟೆನೋವಿನಿಂದಾ ಗಲಿ ಎಚ್ಚರಿಕೆಯಾಗುವದು.

**ಜ್ವರ:—** ಸೀತಜ್ವರದ ಮೇಲಿನ ಮುಖ್ಯ ಹಾಗೂ ಬಲಿಷ್ಠವಾದ ಔಷಧವಿದು; ಸೀತಜ್ವರದ ಎಲ್ಲ ಅವಸ್ಥೆಗಳಲ್ಲಿಯೂ ಇದರ ಉಪಯೋಗ ವಾಗುವದು; ಪಿತ್ತದ ವಾಂತಿಯು; ಹಸರು, ಹಳದಿ, ಕರೇ, ಕೆಂಪು ವಾಂತಿಯಿದ್ದಲ್ಲಿ; ಬಾಯಿಯು ಕಹಿ ಇರುತ್ತದೆ. ಪೈತ್ತಿಕ ಜ್ವರದಲ್ಲಾಗಲಿ ಕಟ್ಟಿನ ಜ್ವರದಲ್ಲಾಗಲಿ ಹಸರು, ಹಳದಿ, ಕೆಂಪು, ಕರೇ ಬಣ್ಣದ ವಾಂತಿಯು ಆಗುತ್ತಿದ್ದಲ್ಲಿ ಇದರ ಉಪಯೋಗವಾಗುವದು: (ಫೆರಂ ಫಾ.) ಜ್ವರದ ಮೇಲೆ ಫೆರಂ ಫಾ. ದ ಜೊತೆಗೆ ಕೊಡತಕ್ಕದ್ದು; ಹೊಟ್ಟೆಯೊಳಗೆ ಚಳಿ ತುಂಬಿರುತ್ತದೆ; ಸಾಯಂಕಾಲದಲ್ಲಿ ಮುಳ್ಳುಮುರಿದಂತೆ ಚಳಿಯು ತುಂಬು ತ್ತದೆ; ಸರ್ವಾಂಗವು ಬರ್ಫಿನಂತೆ ತಣ್ಣಗಾಗುತ್ತದೆ; ತಲೆ ಮಾತ್ರ ಬಿಸಿ ಇರುತ್ತದೆ; ನೀರಡಿಕೆ ಇರುವದಿಲ್ಲ; ಬೆವರು ಬಿಡುತ್ತದೆ; ಯಕೃತಭಾಗದಲ್ಲಿ ನೋವು; ಶೌಚಕ್ಕೆ ತೆಳ್ಳಗಾಗುತ್ತದೆ; ಹೊಲಸು; ಹಸರು, ಕೆಂಪು ಈ ಪ್ರಕಾರ ನಾಲಿಗೆ ಇದ್ದಲ್ಲಿ ಯಾವದೇ ಜ್ವರದಲ್ಲಿ ಇದು ನಿಃಸಂಶಯ ಹಿತಕರವು.

**ತ್ವಚೆ:** — ಕಂಣು, ಚರ್ಯೆ, ಎದೆ, ತಲೆ, ಗುದದ್ವಾರ ಮುಂತಾದವು ಗಳಲ್ಲಿ ಸರೋಲಿಗಳು ಏಳುವ ಪ್ರವೃತ್ತಿಯು; ಚಿಕ್ಕಮಕ್ಕಳಲ್ಲಿ ಪೈತ್ತಿಕ ಭಾವನೆಗಳು ಇದ್ದು ಕ್ಷೈಣವಾದಲ್ಲಿ; ತ್ವಚೆಯು ಸ್ವಲ್ಪ ತುರಿಸಿದಲ್ಲಿ ಸಹ ಬೆವರು ಗೊಂಡಂತೆ ಕಾಣುತ್ತದೆ.(ನೇಟ್ರಂಮೂರ ನೇಟ್ರಂಫಾಸ. ಉರಿ ಕ್ಷೈಣ ಮುಂತಾದ ಹುರುಕಿನ ಹುಂಣುಗಳು, ಅವುಗಳೊಳಗಿಂದ ತೆಳ್ಳಗೆ ಹಳದಿ ಬಣ್ಣದ ಸ್ರಾವವು ಹೋಗುತ್ತಿದ್ದರೆ; ಇಂಥ ಯಾವದೇ ತ್ವಚೆರೋಗದಲ್ಲಿ ಇದು ಉಪಯುಕ್ತವು. ಜತೆಗೆ ಪೈತ್ತಿಕ ಭಾವನೆಗಳು ಇದ್ದಲ್ಲಿ ಇದರ ಉಪಯೋಗವಾಗುವದೇ ಸರಿ, ಬೊಟ್ಟುಗಳು ಬಾತಿದ್ದು ಸೆಟೆದದ್ದು, ಅಂಗೈಗಳು ತಿಕ್ಕಿದಂತೆ ಇದ್ದು ನೋಯುತ್ತವೆ. ಮತ್ತು ಅವುಗಳೊಳಗಿಂದ

ತಿಳಿ ನೀರು ಹರಿಯುತ್ತದೆ, ತ್ವಗ್ಶೋಥ (Erisipelas) ಎದ್ದು ಅದರಲ್ಲಿ ಕೆಂಪು, ಮೆತ್ತಗೆ ಹಾಗೂ ಹೊಳೆಯುವ ಹುಣ್ಣುಗಳು ಇರುತ್ತವೆ. ಹಾಗೂ ವೇದನೆಗಳು ಬಹಳೇ ತೀಕ್ಷ್ಣವಿರುತ್ತವೆ. (ಫೇರಂಫಾ.) ಗಜಕರ್ಣ; ತುರಿಸಿದಲ್ಲಿ ಹಳದೀ ಬಣ್ಣದ ಹಕಳೆಗಳು ಹೊರಡುತ್ತವೆ. ತ್ವಚೆಯು ಹಸಿಯಾದಂತೆ ಇದ್ದು ಕಾಮಣಿಯಲ್ಲಿರುವಂತೆ ಹಳದೀ ಬಣ್ಣವು ಇರುತ್ತದೆ. ಬಟ್ಟೆಗಳನ್ನು ತೆಗೆಯುವಾಗ್ಯೆ ವ್ಯೆಯೆಲ್ಲ ತಿಂಡಿ ಬಿಡುವದು ಈ ಬೇನೆಯ ಮುಖ್ಯ ಲಕ್ಷಣವಿರುತ್ತದೆಂಬ ಸಂಗತಿಯನ್ನು ಲಕ್ಷದಲ್ಲಿಡಬೇಕು. ಸರ್ಪೋಲಿಯಂಥ ಹುಣ್ಣುಗಳು ಏಳುತ್ತವೆ. ಹಳೇ, ಬಹಳ ವರ್ಷದ ಭಗಂದರವು (Fistula) ಅದರೊಳಗಿಂದ ನೀರಿನಂತೆ ತೆಳ್ಳಗೆ ಕೀವು ಸೋರುತ್ತದೆ. ಹಾಗೂ ಹುಣಿಸ ಸುತ್ತುಮುತ್ತಲು ನೀಲವರ್ಣದ ಗೆರೆ ಕೊರೆದಂತೆ ಕಾಣುತ್ತದೆ.

**ಇತರ ಅವಯವ:**— ಜಲಶೋಥ; ತ್ವಚೆಯ ಕೆಳಗೆ ಜಲಸಂಚಯವೂ, ಕೀವೂ; ಉದರ, ಕೈ, ಕಾಲು, ಕಣ್ಣು ಮುಂತಾದವುಗಳಲ್ಲಿ ನೀರು ತುಂಬಿದ ಬಾವು. ಶರೀರದ ಯಾವದೇ ಅವಯವದೊಳಗಿಂದ ಹಳದೀ, ತೆಳ್ಳನ್ನ ಸ್ರಾವವಿದ್ದಲ್ಲಿ; ಶ್ವೇತ ಪಂಡುರೋಗ ಕಫ ಪ್ರಕೃತಿಯ ರೋಗಗಳಿಗೆ ವಿಶೇಷ ಹಿತಕರ. ಕಫವು ಹಳದಿ, ತೆಳ್ಳನದೂ ಹಸರೂ ಇದ್ದಲ್ಲಿ, ಕ್ಷಯದಲ್ಲಿಯ ಕೆಮ್ಮಿನಮೇಲೆ ಸಹ ಇದನ್ನು ಕೊಡಬಹುದು; ಉಪಯೋಗವಾಗುವದು. ಗೃಧ್ರಸಿ (Sciatica); ಕೀವು ಸಹಿತ ರಕ್ತವಿಕಾರ, (ಮೈಮೇಲೆ ಅಲ್ಲಲ್ಲಿ ಕುರುವು ಆಗುವವು; ಹಲ್ಲಿನಿಂದ ರಕ್ತಹೋಗೋಣ ಮುಂತಾದವು)

**ವೃದ್ಧಿ, ಕ್ಷಯ**:— ತೇವು ಸ್ಥಳದಲ್ಲಿ, ಶೀತ ಮಳೆಗಾಲದಂಥ ಹವೆಯಲ್ಲಿಯೂ, ಮುಂಜಾನೆಯೂ ಭಾವನೆಗಳು ಹೆಚ್ಚಾಗಿರುತ್ತವೆ; ಊಷ್ಣ, ಬೈಲು, ಒಣ ಹವೆಯಲ್ಲಿ ಸಮಾಧಾನವಾಗುತ್ತದೆ; ಕೊಳಚಿ ಭೂಮಿಯಲ್ಲಿಯೂ ನೀರಿನ ಸಮೀಪದ ಸ್ಥಳದಲ್ಲಿಯೂ ಬೆಳೆಯುವಂಥ ವನಸ್ಪತಿಗಳಲ್ಲಾಗಲೀ ಮೀನಗಳನ್ನಾಗಲಿ ತಿಂದದ್ದರಿಂದ ಆಗುವ ರೋಗಗಳಮೇಲೆ ಉಪಯೋಗವಾಗುವದು . ಯಾವದೇ ಕಾರಣದಿಂದಾಗಲಿ ಹೊಟ್ಟೆಯಲ್ಲಿ ನೀರು ಹೆಚ್ಚಿಗೆ ಹೋದದ್ದರಿಂದಾಗಲಿ ಭಾವನೆಗಳು ಹೆಚ್ಚಾಗುತ್ತವೆ. ಎಡಮಗ್ಗಲ

ಮೇಲೆ ಮಲಗಿದಲ್ಲಿ ಎಲ್ಲ ಭಾವನೆಗಳು ಹೆಚ್ಚಾಗುತ್ತವೆ. ವೇದನೆ ಇದ್ದದ ರಿಂದ ಅಸಮಾಧಾನವು ಹೆಚ್ಚಾಗಿ ಒಂದೇಸವನೇ ಒಂದು ಮಗ್ಗಲ ಮೇಲಿಂದ ಮತ್ತೊಂದು ಮಗ್ಗಲಮೇಲೆ ಆಗಬೇಕೆಂದು ಅನಿಸುತ್ತದೆ.

**ಉಪಯೋಗ:—** ಸಾಧಾರಣತಃ ೬×ಶಕ್ತಿಯ ಔಷಧವನ್ನು ಉಪಯೋಗಿಸಬೇಕು; ಬಂಣದ ಕೆಲಸ ಮಾಡುವವರೂ, ಮೊಳೆ ಜೋಡಿಸುವವರೂ (Compositors) ೧× ಅಥವಾ ೨× ಶಕ್ತಿಯ ಔಷಧವನ್ನು ಸೇವಿಸಬೇಕು; ಅದರಿಂದ ಗುಣಕಾಣಿಸದಿದ್ದರೆ ೨೦೦× ಶಕ್ತಿಯ ಔಷಧ ವನ್ನೂ ಉಪಯೋಗಿಸಬಹುದು; ಗಜಕರ್ಣದ ಬೇನೆಗೆ ಹೆಚ್ಚಿನ ಶಕ್ತಿಯು ಅಂದರೆ ೨೦೦× ಶಕ್ತಿಯ ಔಷಧ ಕೊಟ್ಟಲ್ಲಿ ಗುಣಬರುವದು. ಮಾತ್ರ ಮೇಲಿಂದಮೇಲೆ ಕೊಡಬಾರದು;

**ಇತರ ಔಷಧಗಳ ಸಂಬಂಧ:** — ಮಸ್ತಿಷ್ಕಾಘಾತದಲ್ಲಿ ಕಾಲೀ ಫಾಸದ ಭಾವನೆಗಳನ್ನು ಲಕ್ಷದಲ್ಲಿಡಬೇಕು; ದಮ್ಮಿನಲ್ಲಿ ಸಿಲಿಕಾದ ವಿಚಾರ ಮಾಡುವದು ಅವಶ್ಯವದೆ; ಯಕೃತರೋಗದಿಂದ ಉತ್ಪನ್ನವಾಗುವ ಉದರ ಬೇನೆಯಮೇಲೆ ಕಾಲೀಮೂರ ಮತ್ತು ಮ್ಯಾಗ್ನೆ ಫಾ. ಇವುಗಳನ್ನು ಕೊಡಬೇಕಾಗುವದು. ಕಾಮಣಿ ಇದ್ದಲ್ಲಿ ಕಾಲೀ. ಫಾ; ಮ್ಯಾಗ್ನೆ ಫಾ. ಕಾಲೀಮೂರ ನೆಟ್ರಂಮೂ ಇವುಗಳ ಸಂಗಡ ನೇಟ್ರಂಸಲ್ಫದ ಸಂಬಂಧವು ಬರುತ್ತದೆ. ಮೇಹದಲ್ಲಿ (ಬಹುಶಃ ಹಳೆಯ ಬೇನೆಯಲ್ಲಿ) ಕಾಲೀ ಸ. ಕಾಲೀಮೂರ ನೇಟ್ರಂಮೂರ ಇವುಗಳ ಸಂಬಂಧ ಬರುತ್ತದೆ. ನೇಟ್ರಂಸಲ್ಫ ಕೊಡತಕ್ಕ ಪ್ರಮೇಹದಲ್ಲಿ ವೇದನೆ ಇರುವದಿಲ್ಲ; ಹಾಗೂ ಸ್ರಾವವು ಗಟ್ಟಿ ಹಸರು ಹಳದೀ ಬಂಣದ್ದು ಇರುತ್ತದೆ. ಜನನೇಂದ್ರಿಯದ ಹಾಗೂ ಅಂಡಾ ಶಯದ (ಜಲಶೋಥ) ಬಾವಿನಲ್ಲಿ ಕಲ್ಕೆ ಫಾ; ಸಿ.; ನೇಟ್ರಂಮೂರ ಇವು ಗಳ ಸಂಗಡ ನೇಟ್ರಂ ಸ. ಕೊಡತಕ್ಕದ್ದು. “ಉಂಡಕಪುಚ್ಛವಿದ್ರಧಿ (Appendicitis) ಯಲ್ಲಿಯೂ ಉಪದಂಶದಲ್ಲಿಯೂ ಫೆರಂಫಾ; ಕಾಲೀಫಾ ಕಾಲೀಮೂ; ಮ್ಯಾ. ಫಾ. ಇವುಗಳ ಭಾವನೆಗಳ ವಿಚಾರ ಲಕ್ಷದಲ್ಲಿಡ ತಕ್ಕದ್ದು.

**ಪ್ರಮಾಣ:--** ೪-೫ ವಡೆಗಳನ್ನು ಅಥವಾ ೩-೪ ಗುಂಜಿ ಪುಡಿಯನ್ನು ೨ ೩ ತಾಸಿಗೆ ಒಮ್ಮೆ ಹೀಗೆ ದಿವಸದಲ್ಲಿ ೩-೪ ಸಾರೆ ಕೊಡತಕ್ಕದ್ದು.

---

# ಫೇರಂ. ಫಾಸ್ಫಾರಿಕಂ.

## Ferrum Phosphoricum

**ಇತರ ಹೆಸರು:**— ಫಾಸ್ಫೇಟ ಆಫ ಆಯರ್ನ; ಫೆರೀ ಫಾಸ್ಫಸ್. ಇವು ಇದರ ಎರಡನೇ ಹೆಸರುಗಳು.

**ಕಾರ್ಯಕ್ಷೇತ್ರ:**— ಶರೀರದ ಆರೋಗ್ಯವನ್ನು ಕಾಯುವದು ಮಾತ್ರ ಇದರ ಕೆಲಸವೆಂದು ಅನ್ನಕೂಡದು; ಆದರೆ ಶರೀರದ ಅಸ್ತಿತ್ವಕ್ಕೆ ಸಹ ಈ ಕ್ಷಾರದ ಅತ್ಯಂತ ಅವಶ್ಯಕತೆಯುಂಟು. ಹೇಮೋಗ್ಲೊಬಿನವೆಂಬ ರಕ್ತರಂಜಕ ದ್ರವ್ಯದಲ್ಲಿ (ರಕ್ತಕ್ಕೆ ಕೆಂಪು ಬಣ್ಣವನ್ನುಂಟುಮಾಡುವ ದ್ರವ್ಯ) ಫೆರಂ. ಫಾ. ಈ ಕ್ಷಾರವು ದೊರೆಯುತ್ತದೆ; ಶರೀರದಲ್ಲಿಯ ಇತರ ಯಾವದೇ ಧಾತುವಿನಕಿಂತ ಮನುಷ್ಯನ ಕೂದಲದಲ್ಲಿ ಇದರ ಪ್ರಮಾಣವು ಹೆಚ್ಚಾಗಿರುತ್ತದೆ. ಸಾಧಾರಣತಃ ೧೬೫ ಪೌಂಡ ತೂಕವಿದ್ದ ಮನುಷ್ಯನ ರಕ್ತದಲ್ಲಿ ಇದರ ತೂಕವು ೪೪ ಗ್ರೇನ ಇಷ್ಟೇ ಆಗುತ್ತದೆ; ಅಲ್ಬ್ಯುಮಿನನೆಂಬ ಪದಾರ್ಥವು ಪ್ರತಿಯೊಂದು ಪಿಂಡದ ತಳಹದಿಯೇ ಸರಿ. ಅಂದರೆ ಪ್ರತಿಯೊಂದು ಪಿಂಡದಲ್ಲಿ ಈ ಕ್ಷಾರವು ಇದ್ದೇ ಇರುವದು ಮತ್ತು ಅಲ್ಬ್ಯುಮೆನದಲ್ಲಿ ಲೋಹವಿರುತ್ತದೆ, ಅಂದರೆ ಪ್ರತಿಯೊಂದು ಪಿಂಡದಲ್ಲಿ ಲೋಹಕ್ಷಾರವು ಇರಲೇಬೇಕು ಎಂದು ಬೇರೆ ಹೇಳುವ ಅವಶ್ಯಕತೆ ಇಲ್ಲ. ಶ್ವಾಸದ ಸಂಗಡ ಫುಪ್ಫುಸದಲ್ಲಿ ಬಂದ ಪ್ರಾಣವಾಯುವನ್ನು ಎಳೆದುಕೊಳ್ಳುವ ಶಕ್ತಿಯು ಈ ಕ್ಷಾರದಲ್ಲಿದೆ. ಈ ಕ್ಷಾರವು ಶರೀರದಲ್ಲಿ ರಕ್ತದೊಳಗಿಂದ ಪ್ರಾಣವಾಯುವನ್ನು ಎಳೆದುಕೊಳ್ಳುವ ಕಾರ್ಯವನ್ನು ಮಾಡುತ್ತಿರುತ್ತದೆ ಮತ್ತು ಈ ಕಾರ್ಯವು ಅವ್ಯಾಹತ ರೀತಿಯಿಂದ ಬಿಟ್ಟುಬಿಡದೆ ನಡೆದಿರುತ್ತದೆ. ಶರೀರದಲ್ಲಿ ಪ್ರತಿಒಂದು ಮಹತ್ವದ ಕಾರ್ಯವು ಇದರ ಮೇಲೇ ಅವಲಂಬಿಸಿರುತ್ತದೆ. ಶರೀರದಲ್ಲಿಯ ಪ್ರತಿ ಒಂದು ಅವಯುವಕ್ಕೆ ಪ್ರಾಣವಾಯುವನ್ನೂ ಪೋಷಕದ್ರವ್ಯಗಳನ್ನೂ ಮುಟ್ಟಿಸುವ ಕಾರ್ಯವನ್ನು ಈ ಕ್ಷಾರವು ರಕ್ತದ ದ್ವಾರಾ ಮಾಡುತ್ತಿರುತ್ತದೆ. ಅವಯುವಗಳಲ್ಲಿ ಮಂದರೀತಿಯಿಂದ ನಡೆದ ಜ್ವಲನಕ್ರಿಯೆಯ ಮೇಲೆ ಶರೀರದ ಬಾಳುವಿಕೆಯೇ ಅವಲಂಬಿಸಿದೆ ಮತ್ತು ಆ ಜ್ವಲನಕ್ಕೇನೇ ಪ್ರಾಣವಾಯುವಿನ ಅವಶ್ಯಕತೆ ಇದೆ. ಆದ್ದರಿಂದಲೇ

ಪ್ರಾಣವಾಯುವನ್ನು ಒಯ್ಯುವ ಕ್ಷಾರವು ಶರೀರದಲ್ಲಿ ಕಡಿಮೆಯಾದ ಕೂಡಲೆ ಆ ಕೊರತೆಯ ಪರಿಣಾಮವು ಶರೀರದ ಮೇಲೆ ಆಗದೇ ಇರಲಾರದು. ಜ್ವರಜರೋಣವು ಲೋಹದ ಕೊರತೆಯ ಮುಖ್ಯ ಲಕ್ಷಣವು. ಲೋಹದ ಸಂಖ್ಯೆಯು (ಪ್ರಮಾಣವು) ಕಡಿಮೆಯಾದ ಕೂಡಲೆ ಇದ್ದ ಕ್ಷಾರವನ್ನು ಶರೀರದಲ್ಲ ಎಲ್ಲ ಕಡೆಗೆ ಹಂಚಿಕೊಡುವದರ ದೆಸೆಯಿಂದ ರಕ್ತಾಭಿಸರಣದ ಕ್ರಿಯೆಯು ಕಸುವಿನಿಂದ ನಡೆಯುತ್ತದೆ. ಆದರಿಂದ ಶರೀರದಲ್ಲಿ ಉಷ್ಣತೆಯು ಬೆಳೆಯುತ್ತದೆ ಮತ್ತು ಅದರ ಪರ್ಯವಸಾನವು ಜ್ವರದ ಭಾವನೆಯನ್ನು ಹುಟ್ಟಿಸುವದರಲ್ಲಿ ಆಗುತ್ತದೆ. ಅದೇ ಕಾಲಕ್ಕೆ ಸ್ನಾಯುಗಳ ತಂತುಗಳಲ್ಲಿಯ ಲೋಹಪ್ರಮಾಣದ ವ್ಯತ್ಯಾಸ ಉಂಟಾದ್ದರಿಂದ ಸ್ನಾಯುಗಳು ಶಿಥಿಲ ಹಾಗೂ ಲಿಬಲಿಬಿ ಆಗುತ್ತವೆ. ಸ್ನಾಯುಗಳ ಶೈಥಿಲ್ಯದಿಂದ ರಕ್ತವಾಹಿನಿಗಳು ವಿಸ್ತಾರ ಹೊಂದುತ್ತವೆ. ಯಾಕೆಂದರೆ, ಸ್ನಾಯುಗಳು ಈ ವಾಹಿನಿಗಳ ಗೋಡೆಗಳ ಒಂದು ತರವು ಇದ್ದು ಮೇಲೆ ಹೇಳಿದಂತೆ ಅವುಗಳಿಗೆ ಶಿಥಿಲತೆಯುಂಟಾಗುತ್ತದೆ ಮತ್ತು ವಿಸ್ತಾರ ಹೊಂದಿದ ಸ್ಥಳದಲ್ಲಿ ರಕ್ತವು ಸಂಚಿತವಾಗುತ್ತದೆ. ಮತ್ತು ರಕ್ತಸಂಚಯದ ಭಾವನೆಯುಂಟಾಗುತ್ತದೆ. ಈ ತರದ ರಕ್ತಸಂಚಯವಾಗುವದೇ ದಾಹವಾಗುವ ಮುಖ್ಯ ಕಾರಣವು. ರಕ್ತಸಂಚಯವು ಹೆಚ್ಚಾದಲ್ಲಿ ರಕ್ತವಾಹಿನಿಗಳ ಮೇಲೆ ಬಿಗುವು ಬಹಳಾದ್ದರಿಂದ ಅವು ಒಡೆದು ಸಹ ಹೋಗುತ್ತವೆ. ರಕ್ತಸ್ರಾವವು ಆಗಲಾರಂಭಿಸುತ್ತದೆ. ಮತ್ತು ಸ್ಥಾನಪರತ್ವದಿಂದ ಇತರ ಭಾವನೆಗಳು ಸಹ ಉದ್ಭವಿಸುತ್ತವೆ. ಆದರೆ ಲೋಹವನ್ನು ಹೊಟ್ಟೆಯಲ್ಲಿ ಕೊಟ್ಟು ಲೋಹದ ಕೊರತೆಯನ್ನು ತುಂಬಿಕೊಟ್ಟರೆ ಸ್ನಾಯುಗಳ ಆಕುಂಚನಶಕ್ತಿಯು ಬೆಳೆಯುತ್ತದೆ, ರಕ್ತಸಂಚಯವಿಲ್ಲದ್ದಾಗುತ್ತದೆ; ದಾಹವೂ ಸ್ರಾವವೂ ಕಡಿಮೆಯಾಗುತ್ತವೆ. ಲೋಹದ ಪ್ರಮಾಣದ ಕೊರತೆಯುಂಟಾದ್ದರಿಂದ ಅದರ ಪರಿಣಾಮವು ಇತರ ಕ್ಷಾರಗಳ ಮೇಲೆ ವಿಶೇಷತಃ ಕಾಲೀಮೂರದ ಪ್ರಮಾಣದ ಮೇಲೆ ಅದರ (ಕೊರತೆಯ) ಪರಿಣಾಮವೂ ಆಗುತ್ತದೆ. ಎಲ್ಲರಿಗೂ ಪರಿಚಿತವಾದ ನೆಗಡಿಯು ಅದರ ಉದಾಹರಣವೇ ಸರಿ. ಲೋಹವು ಕಡಿಮೆಯಾಯಿತೆಂದರೆ, ಹೃದಯ, ಜಠರ, ಫುಪ್ಫುಸ ಮುಂತಾದ ಮಹತ್ವದ ಇಂದ್ರಿಯ

ಗಳ ಕಾರ್ಯವು ಸವನಾಗಿ ಸುವ್ಯವಸ್ಥಿತರೀತಿಯಿಂದ ನಡೆಯುವದಕ್ಕೋ ಸ್ಕರ, ತ್ವಚೆ, ಹಾಗೂ ಶರೀರದ ಇತರ ಬಾಹ್ಯ ಭಾಗಗಳೊಳಗಿಂದ ರಕ್ತವು ಹೆಚ್ಚು ಎಳೆಯಲ್ಪಟ್ಟು ಆಯಾ ಇಂದ್ರಿಯಗಳ ಕಡೆಗೆ ಒಯ್ಯಲ್ಪಡುತ್ತದೆ. ತ್ವಚೆಯ ಛಿದ್ರಗಳು ಮುಚ್ಚಲ್ಪಟ್ಟದ್ದರಿಂದ ಶರೀರದಲ್ಲಿ ವಿಜಾತೀಯ ಹಾಗೂ ನಿಷ್ಕ್ರಿಯ ಪದಾರ್ಥಗಳ ಸಂಗ್ರಹವಾಗುತ್ತದೆ ಆದ್ದರಿಂದ ಸಾಹಜಿಕ ರೀತ್ಯಾ ಅವುಗಳನ್ನು ಶ್ಲೇಷ್ಮಲ ತ್ವಚೆಯೊಳಗಿಂದ ಸ್ರಾವರೂಪದಿಂದ ಹೊರಗೆ ದಬ್ಬಿಹಾಕುವ ಪ್ರಯತ್ನವು ನಡೆಯುತ್ತದೆ. ಅದಕ್ಕೆ ಸ್ಥಾನ ಪರತ್ವದಿಂದ ನೆಗಡಿ, ಪ್ಲ್ಯೂರಿಸಿ ( ಫುಪ್ಫುಸಾವರಣದಾಹ ) Pneumonia ( ಶ್ವಸನಕ ಜ್ವರ ) ಮುಂತಾದ ಹೆಸರು ಕೊಡಲ್ಪಡುತ್ತದೆ. ಸ್ರಾವವು ಪ್ರಾರಂಭವಾದ ನಂತರ ಫೇರಂಫಾಸದ ಉಪಯೋಗವಾಗುವದಿಲ್ಲ. ಆಗ್ಗೆ ಕಾಲೀಮೂರ ಮುಂತಾದ ಔಷಧಗಳ ಯೋಜನೆ ಮಾಡಬೇಕು. ಈ ಕ್ಷಾರದ ಕಾರ್ಯಕ್ಷೇತ್ರದ ವಿಚಾರ ಮಾಡಿದಲ್ಲಿ ಸಾಧಾರಣತಃ ಕೆಳಗೆ ಹೇಳಿದ ವಿಕಾರಗಳ ಮೇಲೆ ಇದರ ಉಪಯೋಗವಾಗುವದು. ಪ್ರಾಣ ವಾಯುವಿನ ಮತ್ತು ಇದರ ಸಂಬಂಧವನ್ನು ಲಕ್ಷಿಸಿದಲ್ಲಿ ಪಂಡುರೋಗ ( ಶ್ವೇತ ಹಾಗೂ ಪೀತ ) ದ ಮೇಲೆ ಇದರ ಉಪಯೋಗವಾಗುವದು; ಸ್ರಾವವು ಆರಂಭವಾಗುವ ಪೂರ್ವದಲ್ಲಿಯ ರಕ್ತಸಂಚಯಜನ್ಯ ದಾಹದ ಮೇಲೆ ( ಅಂದರೆ ದಾಹದ ಪ್ರಥಮಾವಸ್ಥೆಯಲ್ಲಿ ) ನಡೆದಾಡುವದರಿಂದ ಹೆಚ್ಚಾಗುವ, ಶೀತೋಪಚಾರದಿಂದ ಕಡಿಮೆಯಾಗುವ ವೇದನೆ; ರಕ್ತಸ್ರಾವ; ಅಪಘಾತದಿಂದ ತಾತ್ಕಾಲಿಕ ಗಾಯ, ಜ್ವರ, ಕೆಮ್ಮು, ಉರುಪು; ಉಷ್ಣತೆ ಮುಂತಾದ ಬೇನೆಗಳ ಮೇಲೆ ಇದರ ಉಪಯೋಗವು ಚನ್ನಾಗಿ ಆಗುವದು. ಶರೀರದ ಯಾವದೇ ಭಾಗದಲ್ಲಿ ದಾಹದ ಭಾವನೆಗಳು ಕಂಡುಬಂದಲ್ಲಿ ಅಲ್ಲಿ ( ಪ್ರಥಮಾವಸ್ಥೆಯಲ್ಲಿ ) ಫೇರಂಫಾಸದ ಯೋಜನೆ ಮಾಡಬೇಕು.

---

## ಪ್ರಮುಖ ಲಕ್ಷಣಗಳು

**ಮಿದುಳು:—** ಮಿತಿಮೀರಿ ಚಟುವಟಿಕೆಯುಳ್ಳವ; ಆನಂದವೃತ್ತಿಯುಳ್ಳವ; ಬಡಬಡಿಸುವ ವೃತ್ತಿಯುಳ್ಳವ; ವಿಚಾರದ ಏಕಾಗ್ರತೆಯು ಆಗುವದಿಲ್ಲ; ಹೆಸರುಗಳ ಹಾಗೂ ಮುಖ್ಯ ಸಂಗತಿಗಳ ವಿಸ್ಮರಣ.

ಮಾತಾಡುವಾಗ ಸರಿಯಾದ ಶಬ್ದಗಳು ಧ್ಯಾನದಲ್ಲಿ ಬರದೇ ಇರೋಣ; ಧೈರ್ಯವು ಗಲಿತವಾದ್ದು; ನಿರಾಶೆ; ನಿದ್ರೆಯಾದನಂತರ ಸಮಾಧಾನವಾಗುವದು; ಯಃಕಃಚಿತ್ ಸಣ್ಣ ಸಂಗತಿಗಳ ಬಗ್ಗೆ ಮಹತ್ವವೆನಿಸುವದು ಹಾಗೂ ಅದರಿಂದ ಆಗುವ ಮನಸ್ತಾಪ; ಮಿದುಳಿನ ಕಡೆಗೆ ರಕ್ತಸಂಚಯ; ಅದರಿಂದ ಭ್ರಮ. ವಾತವಾಗಿ ರೋಗಿಯು ಬಡಬಡಿಸುತ್ತಾನೆ, ಹಾಸಿಗೆಯೊಳಗಿಂದ ಓಡಿಹೋಗಬೇಕೆಂಬ ಭಾವನೆ; ಸಿಟ್ಟಿನಿಂದ ತಲೆಯ ಭಾಗಕ್ಕೆ ರಕ್ತಸಂಚಯವಾಗಿ ಅದರಿಂದ ಕಣ್ಣಿಗೆ ಕತ್ತಲೆ ಬರುತ್ತದೆ.

**ಮಸ್ತಕ:**— ರಕ್ತದ ಪ್ರವಾಹವು ತಲೆಯ ಕಡೆಗೆ ಕಸುವಿನಿಂದ ಏರಿದರೆ; ಹಣೆಯಲ್ಲಿ ನೋವು ಬಹಳಾಗಿದ್ದರೆ (ನೇಟ್ರಂ ಫಾ.) ಕಣ್ಣಿನಲ್ಲಿಯೂ ಕಣ್ಣಿನ ಮೇಲಿನಭಾಗದಲ್ಲಿಯೂ ವೇದನೆ ಬಹಳ ಇದ್ದರೆ ( ನೇಟ್ರಂ ಸ. ) ಚಳಿಯ ಮೂಲಕ ಮುಟ್ಟು ( ಮುಟ್ಟಿನ ಸ್ರಾವವು ) ಹೆಚ್ಚಾಗಿ ಹೋಗುತ್ತಿದ್ದು ತಲೆಯು ನಿಃಶ್ಚೇಷ್ಟವಾಗುತ್ತದೆ ಹಾಗೂ ನೋಯುತ್ತದೆ. ಮುಖಭಾಗವು ಕೆಂಪು ಇದ್ದು ಜ್ವರವೂ ಇರುತ್ತದೆ ಹಾಗೂ ತಲೆಶೂಲಿಯೂ ಇರುವದಾದರೆ; ಕಣ್ಣಿನ ಪ್ರಾಂತದ ನಾಡಿಗಳು ಹಾರುತ್ತಿದ್ದರೆ, ತಲೆಗೆ ಕೈ ಸಹ ಹತ್ತಗೊಡುವದಿಲ್ಲ; ವಿಶೇಷತಃ ಬಲಭಾಗಕ್ಕೆ ಸುತ್ತಿಗೆಯಿಂದ ಒಡೆದಂತೆ ಶೂಲಿಗಳು; ತಣ್ಣೀರು ಗೊಜ್ಜಿದಲ್ಲಿ ಸುಖವೆನಿಸುತ್ತದೆ. ಮೂಗು ಬಿಚ್ಚಿದ್ದರಿಂದ ಸಹ ಸಮಾಧಾನವೆನಿಸುವದು; ಅನ್ನವು ಕಾರಿಕೆಯ ರೂಪದಿಂದ ಬಿದ್ದುಹೋದನಂತರ ತಲೆನೋವು ಇದ್ದಲ್ಲಿ ಇದನ್ನು ಸೇವಿಸಿದಲ್ಲಿ ಉಪಯೋಗವಾಗುವದು. ( ನೇಟ್ರಂ ಫಾ. ) ಈ ಸಮಯದಲ್ಲಿ ಕೂದಲುಗಳಿಗೆ ಸ್ಪರ್ಶಮಾಡಿದ ಕೂಡಲೆ ತಲೆನೋವು ಆರಂಭವಾಗುತ್ತದೆ. ಬಿಸಿಲಿನಲ್ಲಿ ತಿರುಗಾಡಿದ್ದರಿಂದಾಗುವ ದುಷ್ಪರಿಣಾಮ; ಕಲ್ಕೆ. ಫಾ. ವನ್ನು ಜತೆಗೆ ಕೊಡಬೇಕು; ಸಣ್ಣಮಕ್ಕಳ ತಲೆನೋವಿನ ಮೇಲಿನ ಮುಖ್ಯೌಷಧವಿದು. ಮುಖಚ್ಛಾಯೆಯು ಕೆಂಪು; ಕಣ್ಣುಗಳೂ ಕೆಂಪು; ತಲೆ ಅಲ್ಲಾಡಿಸಿದ್ದರಿಂದ, ಬಗ್ಗಿಸಿದ್ದರಿಂದ ಅಥವಾ ನಡೆದಾಡಿದ್ದರಿಂದಲೂ ನೋವು ಹೆಚ್ಚಾದಲ್ಲಿ; ಮಸ್ತಿಷ್ಕದಾಹದಲ್ಲಿ ಮಾಂದ್ಯವಿದ್ದು ಕಣ್ಣು ಮುಚ್ಚುಹಾಕುತ್ತಿದ್ದು ಜಾಡ್ಯವೆನಿಸುತ್ತಿದ್ದಲ್ಲಿ ಇದರ ಉಪಯೋಗವಾಗುವದು. ತಲೆ ಬುರುಡಿಯಲ್ಲಿಯ ದಾಹವಿದ್ದಲ್ಲಿ.

**ನೇತ್ರ:—** ಕಣ್ಣು ಬಂದಿರುವವು. ನೇತ್ರದಾಹವು (ಕಾಲೀ ಮೂ.) ಕಣ್ಣುಗಳು ಕೆಂಪು; ಹಾಗೂ ವೇದನೆಯುಳ್ಳವು; ಅಲ್ಲಾಡಿದ್ದರಿಂದ ವೇದನೆಯ ಪ್ರಕೋಪವು; ಗೊಬ್ಬರ ಮುಂತಾದ ವಿಸ್ಫೋಟಕ ಜ್ವರಗಳಲ್ಲಿ ನೇತ್ರದಾಹವು; ಆದರಿಂದ ಬೆಳಕಿನ ಕಡೆಗೆ ನೋಡಕೂಡದು; ನೇತ್ರದರ್ಪಣ ದಾಹದ ಪ್ರಥಮಾವಸ್ಥೆ; ಕಣ್ಣುಗುಡ್ಡಿಯ ಮೇಲಿನ ಹುಣ್ಣುಗಳಲ್ಲಿಯ ನೋವು ಕಡಿಮೆ ಮಾಡುವದಕ್ಕೋಸ್ಕರ ಕಣ್ಣುಗಳಲ್ಲಿ ಅರಿಗಳಾದಲ್ಲಿ; ಕಣ್ಣುಗಳಲ್ಲಿ ಉಸುಕಿನ ಕಣಗಳು ಸಿಕ್ಕಂತೆ ಅನಿಸುವದು ( ಕಾಲಿ. ಮೂ. ) ಕಣ್ಣು ಕೆಂಪಾಗಿರುವವು, ನೋಯುವವು, ನೀರಿನಿಂದ ತುಂಬಿರುವವು ( ನೇಟ್ರಂ ಮೂ. ) ಬಲಗಣ್ಣಿನ ಕೆಳರೆಪ್ಪೆಯಲ್ಲಿ ( ಕಣ್ಣು ) ಚಿಟ್ಟೆ.

**ಕಿವಿ:—** ದಾಹಮೂಲಕ ಕಿವಿಯ ಬೇನೆಗಳು; ಚಳಿಮೂಲಕ ಕಿವಿ ನೋವು; ತೀವ್ರ ಹಾಗೂ ಚುಚ್ಚಿದಂತೆ ಕಠಿಣ ವೇದನೆ; ಉರುಪೂ ಇರುತ್ತದೆ; ಕಿವಿಯಲ್ಲಿ ಸಪ್ಪಳ; ಕಸುವಿನಿಂದ ನೀರೂ ಹರಿಯುತ್ತದೇನೊ ಅಂತ ಅನಿಸುವದು; ಕರ್ಣದಾಹದ ಪ್ರಥಮಾವಸ್ಥೆ, ಕಿವಿಯ ಸುತ್ತಮುತ್ತಲು ಕೆಂಪಾಗಿರುವದು, ಹಾಗೂ ಉರುಪೂ ಇರುವದು; ದಾಹಮೂಲಕ ಬಧಿರತೆ ಒಳಗೆ ಕೀವುಗಟ್ಟುತ್ತಿದ್ದಲ್ಲಿ ಕಡೆದಂತೆ ಎಳೆದಂತೆ ಆಗುವ ವೇದನೆಗಳು; ಕಿವಿ ಒಡೆಯುವದು; ಕೀವು ಸೋರಿದರೂ ವೇದನೆ ಕಡಿಮೆಯಾಗುವದಿಲ್ಲ ಈ ಸಮಯದಲ್ಲಿ ಕಲ್ಕೆ. ಸ. ಜತೆಗೆ ಕೊಡತಕ್ಕದ್ದು. ಕಿವಿಯ ಪರದೆಯಲ್ಲಿ ( tympanum ) ದಾಹ.

**ಮೂಗು:—** ಶೀತದ ಪ್ರಥಮಾವಸ್ಥೆ; ಚಳಿಯಾಗುವ ಪ್ರವೃತ್ತಿ ಇದ್ದರೆ ಕಲ್ಕೆ. ಫಾ. ಜತೆಗೆ ಕೊಡಬೇಕು. ಚಳಿಸಹಿತ ಜ್ವರ; ಅಪಘಾತದಿಂದಾಗಲಿ ಇತರ ಕಾರಣದಿಂದಾಗಲಿ ಮೂಗಿನಿಂದ ಕೆಂಪು ರಕ್ತವು ಹೋಗುತ್ತಿದ್ದಲ್ಲಿ ಇದು ಉತ್ತಮ ಔಷಧವು, ಮೂಗು ಬಿಚ್ಚುವ ಪ್ರವೃತ್ತಿ ಇದ್ದಲ್ಲಿ; ಅಶಕ್ತ ಹಾಗೂ ಪಂಡುರೋಗವಿದ್ದ ರೋಗಿಗಳಲ್ಲಿ ವಿಶೇಷವಾಗಿ ( ಕಾಲಿ. ಫಾ., ಕಲ್ಕೆ ಫಾ. ನೇಟ್ರಂ ಸ. ) ಮೂಗಿನ ಹೊಳ್ಳೆಯಲ್ಲಿ ಬಹಳ ಉರುಪು ಇರುತ್ತದೆ. ಮತ್ತು ಶ್ವಾಸ ಒಳಗೆ ಎಳಕೊಳ್ಳುವ ಕಾಲಕ್ಕೆ ಹೆಚ್ಚಾಗುತ್ತದೆ.

**ಮುಖಚರ್ಯೆ:—** ಸತೇಜ ಹಾಗೂ ಹೊಳೆಯುವಂಥಾದ್ದು; ಮುಖಚ್ಛಾಯೆಯ ಮೇಲೆಯೂ ತಲೆಯ ಮೇಲೆಯೂ ಬೆವರೂ ವೇದನೆಯೂ; ಹಿಂಗುತ್ತಿಗೆಯಲ್ಲಿ ತಂಣಾಸ್ನ ಭಾವನೆ ಇದ್ದು ಮುಖವು ಕೆಂಪಗೆ. ರಕ್ತದಲ್ಲಿ ರಕ್ತಕಣ (ಕೆಂಪು ಕಣಗಳು) ಕಡಿಮೆಯಾದ ಕಾರಣ ಮುಖವು ನಿಸ್ತೇಜವೂ ಕಳೆಗುಂದಿದಂತೆಯೂ ಕಾಣುತ್ತದೆ. (ಕಲ್ಕೆ. ಫಾ. ) ಕಂಣಿನ ಕೆಳಭಾಗದಲ್ಲಿ ಕರೆ ವರ್ತುಲವಾಗುತ್ತದೆ. ಮುಖಚ್ಛಾಯೆಯಲ್ಲಿ ವೇದನೆ; ಉಷ್ಣೋಪಚಾರದಿಂದ ಸಮಾಧಾನವೆನಿಸುತ್ತದೆ. ಅಲ್ಲಾಡಿದಲ್ಲಿ ವೇದನೆ ಹೆಚ್ಚಾಗುತ್ತದೆ. ಮುಖದಮೇಲೆ ಎದ್ದ ಬೊಕ್ಕೆಗಳ ಪ್ರಥಮಾವಸ್ಥೆಯಲ್ಲಿಯ ವೇದನೆ ಇದ್ದಲ್ಲಿ ( ನೇಟ್ರಂ ಸ. )

**ಮುಖ:—** ಮುಖಪಾಕ; ಒಸಡೆಗಳು ಬಾತಿದ್ದು ಅದರಿಂದ ಆಗುವ ದಾಹ.

**ನಾಲಿಗೆ:—** ಸ್ವಚ್ಛ; ಕೆಂಪು; ನಾಲಿಗೆಯು ಕೆಲಕಾಲದಲ್ಲಿ ಕಪ್ಪು ಇತರ ಕಾಲದಲ್ಲಿ ಕೆಂಪು ಮತ್ತು ಬಾತದ್ದು ಕಾಲೀ. ಮೂರ ಮತ್ತು ಇದು ಒಂದರನಂತರ ಎರಡನೇದು ಹೀಗೆ ಬಿಟ್ಟು ಬಿಟ್ಟು ಕೊಡಬೇಕು.

**ಹಲ್ಲು:—** ದಂತಶೂಲಿ; ಮುಖವು ಬಿಸಿಯಾಗಿರುವದು. ಅಲ್ಲಾಡಿದ್ದರಿಂದ ಹಾಗೂ ಊಷ್ಣೋಪಚಾರದಿಂದ ಹೆಚ್ಚಾಗುವದು. ಹಲ್ಲು ಬರುವ ಕಾಲಕ್ಕೆ ಬರುವ ಜ್ವರ ಮುಂತಾದ ಬೇನೆಗಳಲ್ಲಿ ಕಲ್ಕೆ ಫಾ. ದಿಂದ ಪೂರ್ಣಗುಣ ಬಾರದಿದ್ದರೆ ಇದನ್ನು ಕೊಡತಕ್ಕದ್ದು. ಹಲ್ಲುಗಳ ಸ್ಪರ್ಶದಿಂದಾಗಲಿ ಒತ್ತಿದ್ದರಿಂದಾಗಲಿ ನೋಯುವವು. ಹಲ್ಲುಗಳು ಉದ್ದಾದಂತೆ ಭಾವನೆ.

**ಗಂಟಲ:—** ಗಂಟಲು ನೋಯುವದು; ಅದು ಒಣಗಿದಂತೆ ಇದ್ದು, ಕೆಂಪು ಹಾಗೂ ದಾಹವುಳ್ಳದ್ದೂ ಇರುತ್ತದೆ; ಗಂಟಲದಾಹದ ಪ್ರಥಮಾವಸ್ಥೆಯಲ್ಲಿ ವೇದನೆ, ಕೆಂಪಾಗಿರೋದು; ಉಷ್ಣತೆ; ಈ ವಿಕಾರಗಳ ಮೇಲೆ ಕಾಲೀಮೂರದ ಜೊತೆಗೆ ಕೊಡಬೇಕು. ಕೀವು ಇದ್ದರೆ ಕಲ್ಕೆ. ಸ. ದ ಜೊತೆಗೆ ಕೊಡಬೇಕು. ಗಂಟಲದಲ್ಲಿ ವ್ರಣಗಳಿದ್ದು ಜ್ವರ ಹಾಗೂ ವೇದನೆ ಇದ್ದಲ್ಲಿ; ಕಿರಿನಾಲಿಗೆಯ ದಾಹ (ಕಲ್ಕೆ. ಸ. ಹಾಗೂ ಕಾಲೀಮೂ.) ಗವಯಿ, ಪುರಾಣೀಕ; ವಕ್ತೃ ಮುಂತಾದವರ ಗಂಟಲಬೇನೆಯ ಮೇಲೆ

ಈ ಔಷಧದ ಉಪಯೋಗವಾಗುವದು. ಗವಯಿಗಳ ಗಾಯನದ ನಂತರ ಹಾಗೂ ವಕ್ತೃಗಳ ಭಾಷಣದ ನಂತರ ಗಂಟಲ ಕೂತಿದ್ದರೆ; ಗದ್ದದ ಕೆಳಗಿನ ಗ್ರಂಥಿಗಳು ಬೆಳೆದಿದ್ದರೆ; ಗಂಟಲದೊಳಗಿಂದ ಆಗುವ ರಕ್ತಸ್ರಾವವು. ಘಟಸರ್ಪದ ಪ್ರಥಮಾವಸ್ಥೆಯಲ್ಲಿ ಬರುವ ಜ್ವರವನ್ನು ನಾಶಮಾಡುವ ಡಕ್ಕೋಸ್ಕರ ಇದನ್ನು ಕೊಡತಕ್ಕದ್ದು

**ಜಠರ:—** ಮಾಂಸ ಹಾಗೂ ಹಾಲು ಇವುಗಳನ್ನು ಸೇವನ ಮಾಡಲಿಕ್ಕೆ ಬೇಸರಿಕೆ; ತಣ್ಣೀರಿನ ನೀರಡಿಕೆ; ಮದ್ಯದಂಥ ಉತ್ತೇಜಕ ಪದಾರ್ಥದ ಸೇವನದ ಇಚ್ಛೆ; ಕಮರುತೇಗು; ಜಠರದಾಹದ ಪ್ರಥಮಾವಸ್ಥೆ; ಜಠರದಲ್ಲಿ ವೇದನೆ, ಬಾವು. ಸ್ಪರ್ಶಾಸಹಿಷ್ಣುತೆ; ಹಾಗೂ ಉರುಪು ಇರುತ್ತವೆ; ಅನ್ನ ಸ್ವಲ್ಪ ತಿಂದರೂ ವೇದನೆ ಹೆಚ್ಚಾಗುವದು; ಗಂಟಲದಲ್ಲಿ ಹುಳಿಸುಡುವುದು; (ಕಲ್ಕೆ. ಫಾ. ಮತ್ತು ನೇಟ್ರಂ ಫಾ.) ಅಗ್ನಿಮಾಂದ್ಯ; ಮುಖಚರ್ಯೆ ಕೆಂಪು; ಸುಡುವಂಥಾದ್ದು, ಅಶಕ್ತ, ಅನ್ನದ ವಾಂತಿ; ವಾಂತಿಯು ಬಹಳಾಗುವದು ಅದರಲ್ಲಿ ಅನ್ನದ ಅಗಳುಬೀಳುವವು; ತಿಂದ ಅನ್ನದ ತೇಗು; ತಣ್ಣನ್ನ ಪೇಯದಿಂದ ಸಮಾಧಾನವು. ತಣ್ಣೀರು ಕುಡಿದಲ್ಲಿ ಹೊಟ್ಟೆನೋವು ಸ್ವಲ್ಪ ನಿಲ್ಲುವದು; ಹೊರಗಿನಿಂದ ಕಾಸಿದಲ್ಲಿ ಸಮಾಧಾನವುಂಟಾಗುವದು; ಚಳಿಯಿಂದ ಸಣ್ಣಮಕ್ಕಳ ಹೊಟ್ಟೆ ಕೆಡುವಸು; ಆದರಿಂದ ಶೌಚವು ತೆಳ್ಳಗಾಗುತ್ತದೆ; ಕ್ಷುಧಾನಾಶ; ತಿಂದಕೂಡಲೆ ಮಳಮಳಿಸುವದು ಇಲ್ಲವೇ ವಾಂತಿ; ಕಾರಿಕೆ ಒಮ್ಮೊಮ್ಮೆ ಹುಳಿನಾತ ಇದ್ದದ್ದು; ಕೆಂಪು ರಕ್ತದ ಗಂಟು ಸಹ ಕಾರಿಕೆಯಲ್ಲಿ ಬೀಳುತ್ತವೆ.

**ಉದರ ಮತ್ತು ಮಲವು—** ಆಂತ್ರ (ಕರುಳು) ದಾಹ; ಆಂತ್ರ ಜ್ವರ; ಪಟಿಕೆಬೇನೆ ( ದುಗ್ಗೀಬೇನೆ ); ಆಮಾಂಶ; ಉದರಾವರಣದಾಹ; ಮುಂತಾದವುಗಳ ಪ್ರಥಮಾವಸ್ಥೆಯಲ್ಲಿ; ಚಳಿಯಾಗಿ ನಡುಗುಹುಟ್ಟುತ್ತ ದೆಂದು ರೋಗಿಗೆ ಅನಿಸುತ್ತಿದ್ದರೆ; ಸಳದಲ್ಲಿ ಉಷ್ಣತೆಯೂ ಶುಷ್ಕತೆಯೂ ಇದ್ದ ಮೂಲಕ ಅವರೋಧ; ಹೊಟ್ಟೆಜಾಡಿಸುವದೂ ಇರುವದು. ಶೀತ ಮೂಲಕ ಅಪಕ್ವ ಅನ್ನದ ಅಥವಾ ನೀರಿನಂತೆ ತೆಳ್ಳನ್ನ ರೇಚವಿರುವದಾದರೆ; ಆಮಾಂಶ (ಕಾಲೀಮೂ. ಮುಖ್ಯ ಔಷಧವು); ಲೋಳೆಯಂಥ ಅಥವಾ

ರಕ್ತಯುಕ್ತ ಆವು ಬೀಳುತ್ತಿದ್ದರೆ; ಮೇಲಿಂದಮೇಲೆ ಶೌಚಕ್ಕೆ ಹೋಗ ಬೇಕಾಗುವದು ಆದರೆ ಹೊಟ್ಟೆಮುರಿಯುವದಿಲ್ಲ; ರಕ್ತಮೂಲವ್ಯಾಧಿ; ರಕ್ತವು ಬಹು ಕೆಂಪವರ್ಣದ್ದು ಬೀಳುವದು. ರಕ್ತವು ಗಟ್ಟಿಯಾಗುವ ಪ್ರವೃತ್ತಿ ಇರುವದು; ಮೊಳಕೆಗಳು ಸೋಯುತ್ತವೆ; ಸೋವು ಬಹಳ; (ಕಲ್ಕೆ. ಫ್ಲೊ. ವ್ಯಾಸೆಲಿನದಲ್ಲಿ ಕಲಸಿ ಮೇಲಿನಿಂದ ಲೇಪ ಮಾಡ ಬಹುದು); ಗುದಭ್ರಂಶದ (ಮ್ಕೊ ಹೊರಬೀಳುವದು) ಪ್ರವೃತ್ತಿ (ಕಲ್ಕೆ. ಫ್ಲೊ.); ಅಪಚನದಿಂದ ಜಂತುಗಳು ಆಗುತ್ತವೆ. (ನೇಟ್ರಂ ಫಾ. ಮುಖ್ಯ ಔಷಧವು); ನಳಗಳನ್ನು ಒತ್ತಿದಲ್ಲಿ ಸೋಯುತ್ತವೆ. ( ಕಾಲೀಮೂ. ) ಯಕೃತದಾಹ; ದಾಹಯುಕ್ತ ಅಂತರ್ಗಳ.

**ಮೂತ್ರೇಂದ್ರಿಯ:—** ಮೇಲಿಂದ ಮೇಲೆ ಮೂತ್ರಮಾಡುವ ಇಚ್ಛೆ; ಕೆಮ್ಮುವ ಕಾಲಕ್ಕೆ ಮೂತ್ರವಾಗುವದು; ಮೂತ್ರದೊಳಗಿಂದ ರಕ್ತವು ಹೋಗುವದು; ಮೂತ್ರಾಶಯದಾಹದಲ್ಲಿ ಜ್ವರ, ವೇದನೆ, ಕಾವು ಮುಂತಾದವುಗಳ ಮೇಲೆ ಈ ಔಷಧ ಕೊಡುವದು. ನಾಡಿಯು ತೀವ್ರದಿಂದ ಹಾರುತ್ತಿದ್ದರೆ ಹಾಗೂ ಶರೀರದಲ್ಲಿ ವೇದನೆ, ರಕ್ತಸಂಚಯ, ಒತ್ತಾಯ, ಕಾವು ಮುಂತಾದವು ಇದ್ದು ಮಧುಮೇಹವಿದ್ದಲ್ಲಿ ಇದು ಹಿತಕರವು. ಸ್ನಾಯುಗಳ ಶಿಥಿಲತೆಯ ಮೂಲಕ ಮೂತ್ರವು ತಿಳಿಯದಲೇ ಆಗುವದು. (ಕಾ. ಫಾ.); ಜಂತುವಾದ್ದರಿಂದ ಈ ಭಾವನೆ ಇದ್ದಲ್ಲಿ ನೇಟ್ರಂ, ಫಾ. ದ ಜೊತೆಗೆ ಕೊಡಬೇಕು. ಮೂತ್ರಾಶಯದಾಹವಾದ್ದರಿಂದ ಮೂತ್ರ ಪ್ರತಿಬಂಧವಾಗುತ್ತದೆ ಹಾಗೂ ಮೂತ್ರವು ಹೋಗುತ್ತಿದ್ದ ಕಾಲಕ್ಕೆ ವೇದನೆ ಹಾಗೂ ಉರುವು ಆಗುವದು. ಅಂಥ ಸಮಯದಲ್ಲಿ ( ನೇಟ್ರಂ. ಮೂರ ). ವಿನಾಕಾರಣ ಮೇಲಿಂದ ಮೇಲೆ ಮೂತ್ರವನ್ನು ತಡೆದು ಹಿಡಿಯುವ ಚಟ ಇದ್ದವರಿಗೆ ಮೂತ್ರಾಶಯದಾಹವಾಗುತ್ತಿದ್ದರೆ ಮೂತ್ರ ವನ್ನು ತಡೆದುಹಿಡಿಯಬಾರದು ಅಂದರೆ ಈ ಚಟ ಬಿಟ್ಟುಬಿಡುವದು ಲೇಸು). ಸಣ್ಣ ಹುಡುಗರಿಗೆ ಕೆಲಕೆಲವು ಪ್ರಸಂಗದಲ್ಲಿ ಮೂತ್ರವು ಸಿದ್ಧವಾಗುವದೇ ಇಲ್ಲ. ಇಂಥ ಸಮಯದಲ್ಲಿ ಈ ಔಷಧವನ್ನು ಹೊಟ್ಟೆಯಲ್ಲಿ ಕೊಡತಕ್ಕದ್ದು ಮತ್ತು ಹೊರಗಿನಿಂದ ಕಾವು ಕೊಡಬೇಕು. ಮೂತ್ರಪಿಂಡದಾಹ (Brights disease) ದ ಬೇನೆಯಲ್ಲಿ ಜ್ವರವಿದ್ದು ಮೂತ್ರವು ಕೆಂಪು

ಬಣ್ಣದ್ದು ಇದ್ದರೆ, ಮೂತ್ರಪಿಂಡದಾಹದಲ್ಲಿ ಮೂತ್ರವಾದನಂತರ ಸಮಾಧಾನವೆನಿಸುತ್ತದೆ. ಮತ್ತು ಬಹಳ ವೇಳೆ ನಿಂತರೆ ತಾಪವಾಗುತ್ತದೆ.

**ಪುರುಷರ ಜನನೇಂದ್ರಿಯ:—** ವೃಷಣದಲ್ಲಿಯ ಸಿರಗಳು ದಪ್ಪಾಗುತ್ತವೆ; ವೇದನೆಯೂ ಇರುತ್ತದೆ; ಉಡುಚು, ವೃಷಣದಾಹ ಮುಂತಾದವುಗಳಲ್ಲಿ ಜ್ವರ, ವೇದನೆ ಮುಂತಾದವುಗಳಿದ್ದಲ್ಲಿ ಇದನ್ನು ಕೊಡುವದು. ಪ್ರಮೇಹದ ದಾಹಾವಸ್ಥೆಯಲ್ಲಿ ಕಾಲೀ. ಮೂರದ ಜೊತೆಗೆ ಒಂದರ ನಂತರ ಮತ್ತೊಂದು ಇದರಂತೆ ಇದನ್ನು ಕೊಡಬಹುದು. ರೇತಸ್ಖಲನ ವಿದ್ದಲ್ಲಿ.

**ಸ್ತ್ರೀಯರ ಜನನೇಂದ್ರಿಯ:—** ಗರ್ಭಾಶಯ ಹಾಗೂ ಗರ್ಭಾಶಯದ ಮಾರ್ಗ ಇವುಗಳಲ್ಲಿಯ ದಾಹ, ವೇದನೆ ಮುಂತಾದವುಗಳಿಗೆ ಇದನ್ನು ಕೊಡುವದು. ಗರ್ಭಾಶಯಮಾರ್ಗವು ಒಣಗಿದಂತಿದ್ದು ಸೆಟೆಬೇನೆ ಇದ್ದಲ್ಲಿ. ಪ್ರಮೇಹದ ಪ್ರಥಮಾವಸ್ಥೆಯಲ್ಲಿ ಹೊರಗಿನಿಂದ ಲೇಪದಂತೆ ಉಪಯೋಗಿಸಬಹುದು. ರಕ್ತಸಂಚಯ, ಜ್ವರ ಹಾಗೂ ತಿಂದ ಅನ್ನವೇ ವಾಂತಿಯಾಗುತ್ತಿದ್ದು ಸಪೀಡ ಆರ್ತವ (ಮುಟ್ಟಿನ ಕಾಲಕ್ಕೆ ವೇದನೆ ಇರುವದು) ಇದ್ದಲ್ಲಿ ಮ್ಯಾ. ಫಾ. ಜತೆಗೆ ಕೊಡಬಹುದು. ಸಪೀಡಾರ್ತವ ಇದ್ದ ರೋಗಿಯು ಮುಟ್ಟುಮುಗಿದ ನಂತರ ಪುನಃ ಮುಟ್ಟಾಗುವ ದಿವಸ ಬರುವ ವರೆಗೆ ಈ ಔಷಧವನ್ನು ಪೀಡಾರ್ತವ ಪ್ರತಿಬಂಧಕವೆಂದು ತೆಗೆದು ಕೊಳ್ಳುವದು (ಕಾಲೀ. ಫಾಸ). ಮುಟ್ಟು ಬಹಳೇ ಕೆಂಪು ಇದ್ದು ತೀವ್ರವೇ ಗಟ್ಟಿಯಾಗುತ್ತಿದ್ದಲ್ಲಿ. ಮೂರು ವಾರಕ್ಕೊಮ್ಮೆ ಮುಟ್ಟು ಆಗುವದು. ಮುಟ್ಟು ಮಿತಿಮೀರಿ ಆಗುವದು, ಹೊಟ್ಟೆಯಲ್ಲಿ ಜಡವೆನಿಸುವದು ಹಾಗೂ ತಲೆಶೂಲಿ ಇರುವದು. ರುತು (ಮುಟ್ಟು) ಕಾಲದಲ್ಲಿ ಮೇಲಿಂದಮೇಲೆ ಮೂತ್ರವಾಗುವದು. ಸಂಭೋಗವಾದನಂತರವಾಗಲಿ ಗರ್ಭಾಶಯವನ್ನು ಪರೀಕ್ಷೆ ಮಾಡುವ ಕಾಲಕ್ಕಾಗಲಿ ಅಲ್ಲಿ ವೇದನೆ ಆಗೋಣ; ಗರ್ಭಿಣಿ ಇದ್ದಾಗ್ಯೆ ಪ್ರಾತಃಕಾಲದಲ್ಲಿ ಆಗತಕ್ಕ ವಾಂತಿ; ತಿಂದ ಅನ್ನವೇ ವಾಂತಿಯಾಗುತ್ತಿದ್ದಲ್ಲಿ; ವಾಂತಿಯಾದ ನಂತರ ಬಾಯಿಯು ಹುಳಿಯಾಗುತ್ತಿದ್ದರೆ; (ನೇಟ್ರಂ. ಫಾ.); ಸ್ತನವಿದ್ರಧಿಯ( ಮೊಲೆಹುಣ್ಣು ) ಪ್ರಥಮಾವಸ್ಥೆಯಲ್ಲಿ; ಪ್ರಸೂತಿ ನಂತರದ ವೇದನೆಯ ಮೇಲೆ ಇದನ್ನು ಕೊಡುವದು; ಪ್ರಸೂತಿ

ಯಾದ ಕೂಡಲೆ ಈ ಔಷಧ ಕೊಟ್ಟಲ್ಲಿ ಕೂಸು ಗರ್ಭಾಶಯದಿಂದ ಹೊರಗೆ ಬರುವ ಕಾಲಕ್ಕೆ ಆಗಿರುವ ನೋವೂ ಕೆರೆಯಲ್ಪಟ್ಟಂತೆ ಆದ ಗರ್ಭಾಶಯದ ಭಾಗವೂ ನೆಟ್ಟಗಾಗುವದು. ಮತ್ತು ಪ್ರಸೂತಿ ಜ್ವರ, ಪೂಯದುಷ್ಟ ರಕ್ತಜನ್ಯ ಜ್ವರ ಮುಂತಾದ ಬೇನೆಗಳಾಗುವ ಹೆದರಿಕೆ ಉಳಿಯುವದಿಲ್ಲ.

**ಶ್ವಸನೇಂದ್ರಿಯ:—** ಶ್ವಸನೇಂದ್ರಿಯ ಭಾಗದಲ್ಲಿಯ ಯಾವದೇ ಠಾವಿನಲ್ಲಿ ಆದ ದಾಹದ ಪ್ರಥಮಾವಸ್ಥೆಯಲ್ಲಿಯ ಜ್ವರ, ವೇದನೆ ಮುಂತಾದವುಗಳ ಮೇಲೆ ಈ ಔಷಧ ಕೊಡತಕ್ಕದ್ದು; ನ್ಯುಮೋನಿಯಾದ ಮೇಲೆ; ಸಣ್ಣ ಮಕ್ಕಳಿಗೆ ಆಗತಕ್ಕ ಹೊಟ್ಟೆಹಾರುವ ಬೇನೆ, ಫುಪ್ಪುಸಾವರಣದಾಹ ಶ್ವಾಸನಲಿಕಾ ದಾಹ, ಕಂಠದಾಹ ಮುಂತಾದವುಗಳ ಮೇಲೆ ಈ ಔಷಧದ ಉಪಯೋಗ ಚನ್ನಾಗಿ ಆಗುವದು. ವೇದನೆ ಇರುವವರೆಗೆ ಇತರ ಔಷಧದ ಜತೆಗೆ ಇದನ್ನು ಕೊಡಲೇಬೇಕು; ಕಫ ಬಹಳ ಬೀಳುವದಿಲ್ಲ; ಬೀಳುವ ಕಫವು ರಕ್ತಮಿಶ್ರಿತವಿರುತ್ತದೆ. ಮತ್ತು ಕಫ ಬೀಳುವಾಗ ನೋಯುತ್ತದೆ. ಎದೆಯಲ್ಲಿ ಚುಚ್ಚಿದಂತೆ ವೇದನೆ; ಶ್ವಾಸಕ್ಕೆ ಪ್ರತಿಬಂಧವಾಗುವಾಗ್ಗೆ ಮುಂತಾದ ಸ್ಥಿತಿಯಲ್ಲಿ ಇದು ಮುಖ್ಯ ಔಷಧವೆಂದು ತಿಳಿದು, ಬೆವರು ಬಂದು ಶ್ವಾಸಕ್ಕೆ ಆಗಿರುವ ಪ್ರತಿಬಂಧವಿಲ್ಲದಂತಾಗುವ ವರೆಗೆ ಇದನ್ನು ಕೊಡತಕ್ಕದ್ದು. ಒಣಕೆಮ್ಮು, ಕಠಿಣ, ವೇದನೆ ಸಹಿತ, ಮೇಲಿಂದಮೇಲೆ ಬರುವದು, ಕ್ಷೋಭದಾಯಕ, ಹಾಗೂ ಸ್ವಲ್ಪ ಸ್ವಲ್ಪ ವೇಳೆ ಪರ್ಯಂತರ ಪುನಃ ಪುನಃ ಬರತಕ್ಕಂಥಾದ್ದು, ಹಾಗೂ ಚಳಿಯಲ್ಲಿಯೂ ಕೆಮ್ಮಿನಲ್ಲಿಯೂ ಪ್ರಥಮಾರಂಭಕ್ಕೆ ಈ ಔಷಧದಿಂದಲೇ ಆರಂಭ ಮಾಡಬೇಕು. ಕೆಮ್ಮುವ ಕಾಲಕ್ಕೆ ಮೂತ್ರ ಸಹ ಆಗುತ್ತದೆ, ಗಂಟಲು ಘರಘರಿಸಿ ರಾತ್ರಿಯಲ್ಲಿ ಕೆಮ್ಮು ಬರುತ್ತಿದ್ದರೆ ಈ ಔಷಧದಿಂದ ಹಿತವಾಗುವದು; ಕೋಡಗಗೆಮ್ಮು ಇದ್ದು ಆದರಲ್ಲಿ ಜ್ವರ ಸಹ ಇದ್ದಲ್ಲಿ; ದಮ್ಮಿನ ಮೇಲೆ ಸಹ ಇದನ್ನು ಕೊಡಬಹುದು; ಎದೆಯೊಳಗಿಂದ ಕೆಂಪು ರಕ್ತವು ಬೀಳುತ್ತಿದ್ದರೆ, ಇದು ಕ್ಷಯದ ಪೂರ್ವಲಕ್ಷಣವೆಂದು ತಿಳಿಯತಕ್ಕದ್ದು. ಫುಪ್ಪುಸದಲ್ಲಿ ರಕ್ತ ಸಂಚಯವಾಗಿದ್ದರಿಂದ ವೇದನೆ ಉತ್ಪನ್ನವಾಗುತ್ತದೆ. ಶ್ವಾಸ ಕಟ್ಟಿದಂತೆ ಸಹ ಅನಿಸುತ್ತದೆ; ನ್ಯುಮೋನಿಯಾ (ಫುಪ್ಪುಸ ಸಂಬಂಧಿ) ಪ್ಲೂರಿಸಿ (ಪಕ್ಕಶೂಲಿ) ಮುಂತಾದ ಬೇನೆಗಳಲ್ಲಿ ಪ್ರಾರಂಭಕ್ಕೆ ಶ್ವಾಸೋಚ್ಛ್ವಾಸವು

ತೀವ್ರವಾಗಿ ನಡೆಯುತ್ತದೆ; ಶ್ವಾಸವನ್ನು ಒಳಗೆ ಎಳೆದುಕೊಳ್ಳುವದು ಅಶಕ್ಯವಾಗುತ್ತದೆ. ವೇದನೆ ನಿಲ್ಲಿಸಲಿಕ್ಕೆ ಈ ಔಷಧವನ್ನು ಬಿಸಿನೀರೊಳಗೆ ಕಲಸಿ ಹೊರಗಿನಿಂದ ಲೇಪ ಮಾಡಬೇಕು. ಭಾಷಣ ಮಾಡಿದ ನಂತರ, ಗಾಯನ ಮಾಡಿದ ನಂತರವೂ ಸ್ವರವು ಕೂತಿದ್ದು ಇಲ್ಲವೆ ಒಡೆದದ್ದು ಇದ್ದರೆ; ಕಂಠದಲ್ಲಿ ತಿಂಡಿ ಇರುವದು ಹಾಗೂ ವೇದನೆ ಇರುವದು;

**ರುಧಿರಾಭಿಸರಣ:—** ಹೃದಯ, ಹೃದಯಾವರಣ, ರಕ್ತವಾಹಿನಿಗಳು ಇವುಗಳ ದಾಹದಲ್ಲಿ ರಕ್ತವಾಹಿನಿಗಳ ವಿಸ್ತಾರವು (ಅನ್ಯೂರಿಜಂ ಇದರ ಮೇಲೆ ಕಲ್ಕೆಫ್ಲೂ ಪ್ರಮುಖ ಔಷಧವು) ಹಾಗೂ ಹೃದಯ ವಿಸ್ತಾರದ ಮೇಲೆ ಇದು ಒಳ್ಳೆ ಗುಣಕರ ಔಷಧವು. ಹೃದಯದಲ್ಲಿ ಧಡಧಡಿಸುವದು, ನಾಡಿಯು ತುಂಬಿದ್ದು ಬಹು ತೀವ್ರವಾಗಿ ನಡೆಯುತ್ತದೆ; ನಾಗಮೋಡೀ ಆಕಾರದ ಸಿರಗಳು; ರಕ್ತದಲ್ಲಿ ರಕ್ತಕಣಗಳ ನ್ಯೂನತೆ (ಪಂಡುರೋಗ ಕಲ್ಕೆ. ಫಾ.)

**ಕುತ್ತಿಗೆ ಮತ್ತು ಬೆನ್ನು:—** ಚಳಿಯ ಮೂಲಕ ಹಿಂಗುತ್ತಿಗೆಯು ಸೆಟೆದದ್ದು; ಈ ಸೆಟೆಯುವದರಿಂದಾಗುವ ವೇದನೆ ಇದ್ದು ಅಲ್ಲಾಡಿದ್ದರಿಂದ ವೇದನೆ ಹೆಚ್ಚಾಗುವದು. ಬೆನ್ನು, ಟೊಂಕ ಮುಂತಾದವುಗಳಲ್ಲಿ ವೇದನೆ; ಟೊಂಕಶೂಲಿ (ಕಲ್ಕೆ. ಫಾ).

**ಕೈಕಾಲು:—** ಸಂಧಿವಾತ ಜ್ವರ, ಅದರಿಂದ ಬೊಟ್ಟುಗಳಲ್ಲಿ ಬಾವು ಇದ್ದು ನೋವೂ ಇರುತ್ತದೆ. ಮೊಳಕಾಲಲ್ಲಿಯೂ ಕಾಲಿನ ಹರಡಿಗಳಲ್ಲಿಯೂ ತೀವ್ರ, ಬಾಣ ಹೊಡೆದಂತೆ ವೇದನೆ; ಅಲ್ಲಾಡಿದ್ದರಿಂದ ಹೆಚ್ಚಾಗುತ್ತದೆ; ಕಾಸಿಕೊಂಡಿದ್ದರಿಂದ ಸಮಾಧಾನ; ಬಲಮುಂಗೈಯಲ್ಲಿಯೂ, ಹೆಗಲಿನಲ್ಲಿಯೂ ಸಂಧಿವಾತ, ಕಳೆಗಳು ಎದೆಯವರೆಗೆ ಬರುವವು; ಒಂದು ಸಂದು ಒಮ್ಮೆ ಹಿಡಿಯುತ್ತದೆ; ಇನ್ನೊಂದು ಮತ್ತೊಂದು ಸಾರೆ ಹೀಗೆ ನಡೆದಿರುತ್ತದೆ; ಶೀತದಿಂದಾಗುವ ಸಂಧಿವಾತ; ಜಘನಾಸ್ಥಿ ಸಂದುಗಳಲ್ಲಿ ದಾಹ. ಶೂಲಿ ಮುಂತಾದ್ದು. ಅಸ್ಥಿಭಂಗ; ಸಂದು ತಪ್ಪೋಣ, ಮೃದು ಭಾಗಗಳ ಮೇಲೆ ಆಗುವ ಅಪಘಾತಗಳು; ವೇದನೆ, ಜ್ವರ, ರಕ್ತಸಂಚಯ ಮುಂತಾದವುಗಳಮೇಲೆ; ಕೈ ಬಾತದ್ದು ಹಾಗೂ ವೇದನೆ ಇರುವದು. ಅಂಗೈಗಳು

ಬಿಸಿ ಇರುತ್ತವೆ. ಎಲ್ಲೆಲ್ಲಿ ಬೇನೆ ಇದೆಯೋ ಅಲ್ಲಲ್ಲಿ ಶಕ್ಯವಿದ್ದಲ್ಲಿ ಬಿಸಿ ನೀರಿನೊಳಗಿಂದ ಈ ಔಷಧದ ಕಾವು ಕೊಡಬೇಕು,

**ನಿದ್ದೆ:—** ತಲೆಯ ಕಡೆಗೆ ರಕ್ತಸಂಚಯು ಹೆಚ್ಚಾಗಿದ್ದಲ್ಲಿ ನಿದ್ದೆ ಗೇಡಾಗುವದು; ರಾತ್ರಿಯಲ್ಲಿ ಅಸ್ವಸ್ಥತೆಯು, ಚಿಂತಾಜನಕ ಸ್ವಪ್ನಗಳು. ಮಧ್ಯಾಹ್ನದಲ್ಲಿ ಮೈ ಜಡವಿರುತ್ತದೆ. ದಣಿವಿಕೆ; ಆಲಸ್ಯ; ಸೆಟೆಬೇನೆ ಇದ್ದು ಅದರಲ್ಲಿ ಜ್ವರವು (ಸಣ್ಣ ಮಕ್ಕಳಿಗೆ) ಇದ್ದಲ್ಲಿ ಅಪಸ್ಮಾರ; ಚಳಿ ಮೂಲಕ ರಕ್ತಸಂಚಯುಜನ್ಯ ವಾತಶೂಲಿ.

**ಜ್ವರ:—** ಜ್ವರದಲ್ಲಿ ಮೊದಲು ಚಳಿಯಾಗುತ್ತದೆ. ಮೈ ಮುಳ್ಳು ಹಿಡಿಯುತ್ತದೆ. ನಾಡಿಯು ತೀವ್ರವಾಗಿ ಹಾರುತ್ತದೆ. ವೇದನೆ ಇರುತ್ತದೆ; ಯಾವದೇತರದ ಜ್ವರದಮೇಲೆ ಈ ಔಷಧವು ಹಿತಕರವು; ಶೀತ ಜ್ವರದಲ್ಲಿ ದಿನಾಲು ಮಧ್ಯಾಹ್ನದಲ್ಲಿ ಶೀತವೆನಿಸಿ ಜ್ವರ ಬಂದು ತಿಂದ ಅನ್ನ ಕಾರಿ ಹೋಗುತ್ತಿದ್ದರೆ ಈ ಔಷಧ ಬಹಳ ಗುಣಕಾರಿಯು. ಜ್ವರದ ಮಾನವು ಹೆಚ್ಚು ಇದ್ದು ನಾಡಿಯು ತೀವ್ರ ಹಾರುತ್ತಿದ್ದರೆ ಹಾಗೂ ರಾತ್ರಿಯಲ್ಲಿ ಬೆವರು ಚನ್ನಾಗಿ ಬರುತ್ತಿದ್ದರೆ ಇದನ್ನು ಕೊಡುವದು.

**ತ್ವಚೆ:—** ತ್ವಚೆಯ ಯಾವದೇ ದಾಹವುಳ್ಳ ರೋಗದ ಪ್ರಥಮಾವಸ್ಥೆಯಲ್ಲಿ, ಹುಣ್ಣು, ಕುರುವು, ಉಗುರುಸುತ್ತು, ಸರೋಲಿ ಮುಂತಾದವುಗಳಲ್ಲಿ ಇದನ್ನು ಮೊದಲಿನಿಂದ ಕೊಟ್ಟಲ್ಲಿ ರಕ್ತಸಂಚಯುವು ಕಡಿಮೆಯಾಗಿ ವೇದನೆ ಇಲ್ಲದಂತಾಗುತ್ತದೆ. ವಿಸ್ಫೋಟಕ ಜ್ವರ, ತ್ವಚೆಯ ದಾಹ ಇವುಗಳ ಪ್ರಥಮಾವಸ್ಥೆಯಲ್ಲಿ ಕಾಲೀಮೂರದ ಜೊತೆಗೆ ಬಂದರನಂತರ ಎರಡನೇದು ಹೀಗೆ ಕೊಡಬೇಕು. ತಾರುಣ್ಯದ ಬೊಕ್ಕೆಗಳು (ಮುಡಿಬೊಕ್ಕೆ) ಜ್ವರಯುಕ್ತ ವ್ರಣ, ವಿಸರ್ಪ ಮುಂತಾದವುಗಳಲ್ಲಿ ಕೊಡತಕ್ಕದ್ದು.

**ಇತರ ಅವಯುವ:—** ಮೃದು ಭಾಗದಮೇಲೆ ಆಗುವ ಯಾವದೇ ಅಪಘಾತದ (ಸಂದುತಪ್ಪೋಣ, ಎಡವಿದಗಾಯ, ಬೊಟ್ಟು ಒಡೆಯೋಣ, ಪೆಟ್ಟು ಗಾಯ ಮುಂತಾದ್ದು) ಮೇಲೆ ಹೊಟ್ಟೆಯಲ್ಲಿ ಕೊಡುವದು ಹಾಗು ಹೊರಗಿನಿಂದ ಲೇಪ ಸಹ ಮಾಡಬಹುದು. ಪೆಟ್ಟು ತಾಕಿ ಬಹಳ ದಿವಸ

ವಾಗದೇ ಇದ್ದಲ್ಲಿ ಹಾಗೂ ಕೀವು ಆಗಿರದಿದ್ದರೆ ಇದರಿಂದ ಗುಣ ಅವಶ್ಯ ಬರುವದು. ಅಸ್ಥಿಭಂಗದಲ್ಲಿಯೂ ಇತರ ಯಾವದೇ ಕಾರಣದಿಂದಾಗುವ ಅಸ್ಥಿರೋಗದಲ್ಲಿ ಸುತ್ತಮುತ್ತಲಿನ ಮೃದುಭಾಗದಲ್ಲಿ ದಾಹವಾಗುತ್ತಿದ್ದಲ್ಲಿ ಇದನ್ನು ಕೊಡಬಹುದು. ಪಂಡುರೋಗ, ರಕ್ತದಲ್ಲಿ ಕೆಂಪು ಕಣಗಳ ಕೊರತೆ ಹಾಗೂ ಅದರಿಂದ ಆಗುವ ಪಂಡುರೋಗ; ಸ್ರಾವವು ಉತ್ಪನ್ನ ವಾಗುವ ಪೂರ್ವದಲ್ಲಿಯ ರಕ್ತಸಂಚಯದಮೇಲೆ ಇದನ್ನು ಕೊಡುವದು. ಶರೀರದ ಯಾವದೇ ಭಾಗದಿಂದಾಗುವ ರಕ್ತಸ್ರಾವದ ಮೇಲೆ. ರಕ್ತವು ಕೆಂಪು ಇದ್ದು ತೀವ್ರವಾಗಿ ಗಟ್ಟಿಯಾಗುವದು. ಮೂಗು ಒಡೆ ಯುತ್ತಿದ್ದರೆ; ವಿಶೇಷತಃ ಸಣ್ಣ ಹುಡುಗರಿಗೆ ಹಾಗೂ ಅಶಕ್ತ ಜನರಿಗೆ ಇದನ್ನು ಕೊಡುವದು. ಇಂಥ ಸ್ಥಿತಿಯಲ್ಲಿ ಹೊಟ್ಟೆಯಲ್ಲಿಯೂ ಕೊಡು ವದು, ಹಾಗೂ ಮೂಗಿನೊಳಗೆ ಔಷಧವನ್ನು ಹಾಕುವದು. ಗಾಯ ದೊಳಗಿಂದ ರಕ್ತ ಹೋಗುತ್ತಿದ್ದಲ್ಲಿ ಈ ಔಷಧವನ್ನು ಹುಣ್ಣಿನಮೇಲೆ ಹಚ್ಚುವದು, (ಮೆತ್ತುವದು), ಗಾಯವನ್ನು ಗಟ್ಟಿ ಕಟ್ಟಿ ಇಟ್ಟಲ್ಲಿ ಸಹ ಸಮಾಧಾನವೆನಿಸುವದು. ರಕ್ತದ ಕೊರತೆಯಿಂದಾಗುವ ಜಲಶೋಥ (ಜಲೋದರ=Dropsy) ಕಲ್ಕೆ. ಫಾ.ಸದ ಜತೆಗೆ ಕೊಡುವದು; ತರುಣ ವಯಸ್ಸಿನಲ್ಲಿ ನಾಗಮೋಡಿಯ ಆಕಾರದ ಸಿರಗಳು (Varicose veins) ಅಸ್ಥಿದಾಹ, ಪೀತಪಂಡುರೋಗವಿದ್ದರೆ ಕಲ್ಕೆಫಾಸದ ಜತೆಗೆ ಇದನ್ನು ಕೊಡುವದು.

**ವೃದ್ಧಿ ಕ್ಷಯ:—** ರಕ್ತಸಂಚಯಜನ್ಯ ಬೇನೆಗಳ ಮೇಲೆ ಈ ಔಷಧದ ಕಾರ್ಯಕ್ಷೇತ್ರವಿದ್ದ ಕಾರಣ ಅವು ಅಲ್ಲಾಡೋಣ ಹೆಚ್ಚಾದ್ದರಿಂದಲೂ ಮಾನಸಿಕ ಕ್ಷೋಭದಿಂದಲೂ ಉಷ್ಣೋಪಚಾರದಿಂದಲೂ ಹೆಚ್ಚಾಗುತ್ತವೆ ಮತ್ತು ಶೀತೋಪಚಾರದಿಂದಲೂ ಮಂದ ಮಂದ ಅಲ್ಲಾಡಿದ್ದರಿಂದಲೂ ಕಡಿಮೆಯಾಗುತ್ತವೆ. ವೃದ್ಧರಿಗೆ ಆಗುವ ಬೇನೆಗಳಿಗೆ ಈ ಔಷಧವು ಬಹಳೇ ಗುಣಕರವು.

**ಉಪಯೋಗ:—** ೬× ಮತ್ತು ೧೨× ಶಕ್ತಿಯ ಉಪಯೋಗ ಸಾಧಾರಣತಃ ಮಾಡಬೇಕು. ಆದರೂ ಪಂಡುರೋಗದಂಥ ಬೇನೆಗಳ

ಮೇಲೆ ೧× ಅಥವಾ ೨× ಶಕ್ತಿಯಿಂದಲೇ ಗುಣವಾಗುವದು. ರಾತ್ರಿಯಲ್ಲಿ ಔಷಧ ಕೊಡುವದಾದಲ್ಲಿ ೧೨× ಗಿಂತ ಕೆಳಗಿನ ಶಕ್ತಿಯ ಔಷಧ ಕೊಡಬಾರದು. ಅದರಿಂದ ನಿದ್ರೆಯ ಪ್ರತಿಬಂಧವಾಗುವ ಸಂಭವವಿದೆ. ಹೀಗೆ ಕೆಲ ವೈದ್ಯರ ಮತವಿದೆ. ಶೈತ್ಯ; ಉಷ್ಣಕಾಲದಲ್ಲಾಗುವ ಬೇನೆಗಳು ಪ್ರಮೇಹ ಮುಂತಾದ ಬೇನೆಗಳ ಮೇಲೆ ೨೦೦× ಶಕ್ತಿಯ ಔಷಧಯೋಜನೆ ಮಾಡಬೇಕು. ರಕ್ತಯುಕ್ತ ಮೂಲವ್ಯಾಧಿಯಲ್ಲಿ ಆಗುವ ವೇದನೆ ೨× ಶಕ್ತಿಯ ಔಷಧದಿಂದಲೇ ನೆಟ್ಟಗಾದ ಉದಾಹರಣಗಳುಂಟು. ಅತ್ಯಾರ್ತವ (ಮುಟ್ಟು ಬಹಳಾಗೋಣ), ರಕ್ತಸಂಚಯ, ಟೊಂಕಶೂಲಿ, ರಕ್ತಮೂಲವ್ಯಾಧಿ ಮುಂತಾದವುಗಳಲ್ಲಿ ಆಗುವ ಮಾನಸಿಕ ತಾಪವು ೬× ಶಕ್ತಿಯಿಂದ ನೆಟ್ಟಗಾಗುತ್ತದೆ. ಸಿದ್ರಾನಾಶದ ಮೇಲೆ ಹಾಗೂ ಜಲಶೋಥ ( ಉದರ ) ಇವುಗಳಿಗೆ ೩೦× ಔಷಧ ಕೊಡತಕ್ಕದ್ದು. ಬಾಹ್ಯೋಪಚಾರದ ಸಲುವಾಗಿ ೬× ಶಕ್ತಿಯದಾಗಲೀ ಅದಕ್ಕೂ ಕಡಿಮೆ ಶಕ್ತಿಯದಾಗಲೀ ಔಷಧ ಉಪಯೋಗಿಸುವದು ಅವಶ್ಯಕ.

**ಇತರ ಔಷಧದ ಸಂಬಂಧ:—** ಫೇರಂಫಾಸದ ನಂತರ ಬಹಳವಾಗಿ ಸರ್ವರೋಗಗಳ ಮೇಲೆ ಕಾಲೀಮೂರದ ಉಪಯೋಗವಾಗುತ್ತದೆ. ಘಟಸರ್ಪ ( Diptheria ) ನ್ಯುಮೋನಿಯಾ, ಇವುಗಳಲ್ಲಿ ಫೆರಂಫಾ. ನಂತರ ಕಾಲೀಮೂರದ ಉಪಯೋಗವಾಗುತ್ತದೆ. ಪೀತ ಪಂಡುರೋಗದಲ್ಲಿ ಕಲ್ಕೆ. ಫಾಸ ಪೂರ್ವದಲ್ಲಿಯಾಗಲಿ ನಂತರವಾಗಲಿ. ಫೆರಂಫಾ. ಕೊಡತಕ್ಕದ್ದು. ರಕ್ತಮೂಲವ್ಯಾಧಿಯಲ್ಲಿ ಕಲ್ಕೆ. ಫ್ಲೂದ ಜತೆಗೆ ಮತ್ತು ಮಧುಮೇಹದಲ್ಲಿ ನೇಟ್ರಂ. ಸಲ್ಫದ ಜತೆಗೆ ಈ ಔಷಧವು ಬಹಳ ಗುಣಕರವು. ತಲೆಶೂಲಿಯಲ್ಲಿ ಫೇರಂ. ಫಾದ ನಂತರ ನೇಟ್ರಂ ಫಾ. ನೆಟ್ಟಗೆ ಗುಣಕೊಡುವದು. ಆಮ್ಲಪಿತ್ತ ಮೂಲಕ ಹೊಟ್ಟೆಶೂಲಿಯಲ್ಲಿ ಫೇರಂ. ಫಾ. ಮತ್ತು ನೇಟ್ರಂ. ಫಾ. ಇವುಗಳನ್ನು ಒಂದರ ನಂತರ ಮತ್ತೊಂದು ಇಲ್ಲವೆ ಎರಡೂ ಕೂಡಿಸಿ ಬಹಳ ದಿವಸ ಕೊಡಬೇಕಾಗುವದು.

**ಪ್ರಮಾಣ:—** ೩ರಿಂದ ೫ರ ವರೆಗೆ ವಟಿಕೆಗಳನ್ನು ಅಥವಾ ೩।೪ ಗುಂಜಿ ಚೂರ್ಣವನ್ನು ಹಾಗೇ ಬಾಯಿಯಲ್ಲಿ ಇಲ್ಲವೆ ನೀರಿನಲ್ಲಿ ಹಾಕಿ

ಅವಶ್ಯವಿದ್ದ ಹಾಗೆ ೧೫ ಮಿನೀಟಿಗೆ ಒಮ್ಮೆ ಅಥವಾ ೨ ತಾಸಿಗೊಮ್ಮೆ ಹೀಗೆ ಕೊಡಬೇಕು. ಗುಣಬರಲು ಹತ್ತಿದನಂತರ ಔಷಧ ಕೊಡುವ ಕಾಲದ ನಡುವಿನ ಅವಧಿಯನ್ನು ಬೆಳೆಯಿಸಬೇಕು. ದಾಹವಿದ್ದ ಭಾಗದ ಮೇಲೆ ಔಷಧದ ೩× ಶಕ್ತಿಯ ಧಾವನಜಲದ ಪಟ್ಟಿ ಇಡಬೇಕು.

---

# ಮ್ಯಾಗ್ನೆಶಿಯಾ ಫಾಸ್ಫೋರಿಕಂ

## ( Magnesia Phosphoricum )

**ಇತರ ಹೆಸರು:—** ಫಾಸ್ಫೇಟ ಆಫ ಮ್ಯಾಗ್ನೇಸಿಯಾ ಎಂಬುದು ಇದರ ಎರಡನೇ ಹೆಸರು—

**ಕಾರ್ಯಕ್ಷೇತ್ರ:—** ಈ ಕ್ಷಾರವು ಜ್ಞಾನತಂತುವಿನಲ್ಲಿಯ ಶ್ವೇತ ವರ್ಣದ ತಂತುಗಳ ಘಟಕವಿದೆ. ರಕ್ತಕಣ, ಸ್ನಾಯು: ಮಿದುಳು, ಪೃಷ್ಠ ವಂಶದೊಳಗಿನ ಮಗಜು ( ಗರ್ಭ, ಸತ್ವ ) ಜ್ಞಾನತಂತು, ಅಸ್ಥಿ, ಹಲ್ಲು ಮುಂತಾದವುಗಳಲ್ಲಿ ಪ್ರವರ್ತಿಸುವದು. ಜ್ಞಾನತಂತುಗಳೂ ಸ್ನಾಯುಗಳೂ ಬೇರೆ ಬೇರೆ ವರ್ಣದ ತಂತುಗಳಿಂದ ರಚಿಸಲ್ಪಟ್ಟಿವೆ. ಈ ಪ್ರತಿಯೊಂದು ತಂತುವಿನಲ್ಲಿ ತಾರಾಯಂತ್ರದ ತಂತಿಗಳಂತೆ ಸ್ವತಂತ್ರವಾಗಿ ಕಾರ್ಯ ಮಾಡುವ ಶಕ್ತಿಯು ಇರುತ್ತದೆ. ಇದರಲ್ಲಿಯು ಶ್ವೇತವರ್ಣದ ತಂತುಗಳಲ್ಲಿಯ ಕಾರ್ಯವನ್ನು ಮಾಡುವ ಶಕ್ತಿಯು ಮ್ಯಾಗ್ನೇಶಿಯಾಫಾಸದ ಅಸ್ತಿತ್ವದ ಮೇಲೆ ಅವಲಂಬಿಸಿರುತ್ತದೆ. ಜ್ಞಾನತಂತುಗಳಲ್ಲಿ ಈ ಕ್ಷಾರದ ಪ್ರಮಾಣವು ಕಡಿಮೆಯಾದಲ್ಲಿ ಸೆಟೆಬೇನೆ, ವೇದನೆ, ಅರ್ಧಾಂಗವಾಯು ಮುಂತಾದ ವಿಕೃತಿಗಳು ( ಸಂಕಟಗಳು ) ಹುಟ್ಟುವವು. ಉರುಪು ಇಲ್ಲದ ಬೇರೆ ಯಾವತ್ತು ತರಹದ ವೇದನೆಗಳ ಮೇಲೆ ಈ ಔಷಧದ ಉಪಯೋಗವಾಗುವದು. ಹೊಟ್ಟೆ ಮುರಿಯುವ ವೇದನೆ, ಒಳಗೆ ಚುಚ್ಚುವ ವೇದನೆ, ನಿಂತು ನಿಂತು ಸಿಡಿಲಿನಂತೆ ಒಮ್ಮೆಲೆ ಬಂದು ಒಮ್ಮೆಲೆ ನಿಂತು ಹೋಗುವಂಥ ವೇದನೆ, ತೂತು ಕೊರೆಯುತ್ತ ಹೋದಂತೆ ಭಾವನೆಯನ್ನು ಉತ್ಪನ್ನಮಾಡುವ ವೇದನೆ— ಇಂಥ ವೇದನೆಯಮೇಲೆ ಇದು

ಉತ್ತಮ ಔಷಧವು. ತೀವ್ರವಾದ, ಅತಿ ತೀವ್ರವಾಗಿ ಬರುವಂಥ ಹಾಗೂ ಬಹು ಕಠಿಣವಾಗಿರುವ ವೇದನೆಯು ಇದ್ದು ಉಷ್ಣೋಪಚಾರದಿಂದ ಕಡಿಮೆಯಾಗುತ್ತಿದ್ದಲ್ಲಿ ಮ್ಯಾ. ಫಾಸದ ಪ್ರಮಾಣವು ಕಡಿಮೆಯಾಗಿದೆಯೆಂದು ತಿಳಿಯತಕ್ಕದ್ದು. ವೇದನೆ ಇದ್ದಾಗ ಎಳೆದಂತೆ; ಜಗಿದು ಕಟ್ಟಿದಂತೆ ಅನಿಸುವದು ಹಾಗೂ ಒತ್ತಿದ್ದರಿಂದಲೂ ಕಾಸಿದ್ದರಿಂದಲೂ ಸಮಾಧಾನ ವೆನಿಸುವದು. ಇಂಥ ವೇದನೆಯು ಮ್ಯಾ. ಫಾ. ಕ್ಕೆ ಒಳಪಡತಕ್ಕಂಥ ವೇದನೆಯ ಲಕ್ಷಣವೇ ಸರಿ.

ಮ್ಯಾ. ಫಾ. ದ ಕಾರ್ಯವು ಫೇರಂ ಫಾ. ದ ಕಾರ್ಯದ ತೀರ ವಿರುದ್ಧವಾದದ್ದು ಎಂದು ಕಂಡುಬರುತ್ತದೆ, ಶರೀರದಲ್ಲಿ ಫೇರಂ. ಫಾ. ದ ಅಣುಗಳ ಪ್ರಮಾಣವು ಕಡಿಮೆಯಾಯಿತೆಂದರೆ ಸ್ನಾಯುತಂತುಗಳು ಶಿಥಿಲವಾಗುತ್ತವೆ. ಅದರಿಂದ ರಕ್ತಸಂಚಯ, ಜ್ವರ ಮುಂತಾಗ ಬೇನೆಗಳು ಉದ್ಭವಿಸುತ್ತವೆ. ಮ್ಯಾ. ಫಾ. ದ ಅಣುಗಳ ಪ್ರಮಾಣವು ಕಡಿಮೆಯಾದಲ್ಲಿ ಸ್ನಾಯುಗಳು ಆಕುಂಚಿತವಾಗುತ್ತವೆ. ಮತ್ತು ಅದರಿಂದ ಸೆಟೆಬೇನೆ, ಮುಂತಾದವುಗಳಾರಂಭವಾಗುತ್ತವೆ. ಜಠರ ಭಾಗದಲ್ಲಿ ಮ್ಯಾ. ಫಾ. ದ ಪ್ರಮಾಣವು ಸಾಕಷ್ಟು ಇಲ್ಲದೇ ಹೋದರೆ ಅಲ್ಲಿಯ ಸ್ನಾಯುಗಳು ಆಕುಂಚಿತವಾಗುತ್ತವೆ. ( ಮುದುರಿಕೊಳ್ಳುತ್ತವೆ ) ಅದರಿಂದ ಜಠರದಲ್ಲಿ ಸಹ ಸೆಟೆಬೇನೆ ಆಗಲಾರಂಭಿಸುತ್ತದೆ. ಜ್ಞಾನತಂತುಗಳ ಪಿಂಡಗಳಲ್ಲಿಯೂ ಸ್ನಾಯುಗಳಲ್ಲಿಯೂ ಯಾವ ಬೇನೆಗಳ ಮೂಲ ಕಾರಣಗಳು ವಾಸಮಾಡಿಕೊಂಡಿರುವವು ಅಂಥ ಎಲ್ಲ ಬೇನೆಗಳಿಗೆ ಈ ಔಷಧ ಕೊಟ್ಟಲ್ಲಿ ಉಪಯೋಗವಾಗುವದು. ಅದೇ ಪ್ರಕಾರ ಸ್ನಾಯುಗಳ ಆಕುಂಚನದಿಂದ ಉದ್ಭವಿಸುವ ಯಾವದೇ ಬೇನೆಯಲ್ಲಿ ಇದು ಪ್ರಮುಖ ಔಷಧವು. ಆದ್ದರಿಂದಲೇ ಈ ಔಷಧದ ಉಪಯೋಗವು ಕೆಳಗೆ ಹೇಳಿದ ಬೇನೆಗಳಲ್ಲಾಗುವದು- ಕುಸಿಬೀಳೋಣ, ಬಿಕ್ಕು, ಸ್ನಾಯುಗಳು ಹಾರೋಣ, ಸೆಟೆಬೇನೆ, ಬಾಲಗ್ರಹ, ಧನುರ್ವಾತ, ಮೂತ್ರ ಕಟ್ಟೋಣ ( ಆಗದಿರೋಣ ) ಕೋಡಗ್ಗೆಮ್ಮು, ಹಲ್ಲು ಕಟಕರಿಸೋಣ ( ಗಟ್ಟಿಯಾಗಿ ಹತ್ತಿಕೊಂಡಿರೋಣ), ಅಪಸ್ಮಾರ, ಹಸ್ತಕಂಪ ಮುಂತಾದ ಅನೇಕ ಸಂಕಟಗಳಮೇಲೆ ಈ ಔಷಧದ ಉಪಯೋಗವಾಗುವದು. ಹಾಗೂ ಕೈಕಾಲುಗಳಲ್ಲಿ ಒಮ್ಮಿಂದೊಮ್ಮೆ ಬರುವಂಥ

ಕಠಿಣ ವೇದನೆಗಳೂ ವಾತ ಜನ್ಯ ಶೂಲವೂ, ವ್ಯಥೆಯುಳ್ಳ ಆರ್ತವ(ಮುಟ್ಟು) ಮುಂತಾದ ರೋಗಗಳಲ್ಲಿಯೂ ಈ ಔಷಧವು ಗುಣಕೊಡುವದು. ತೆಳ್ಳನ್ನ, ಬಡಕ, ಸೊರಗಿದ, ಕ್ಷೀಣ ಪ್ರಕೃತಿಯುಳ್ಳ ಅಂಜುಬುರಕ ಸ್ವಭಾವವುಳ್ಳ ಜನರಮೇಲೆ ವಿಶೇಷವಾಗಿ ಈ ಔಷಧವು ನಾಟುವದು. ಬಲಭಾಗದಲ್ಲಿ ಆಗುವ ಕಷ್ಟಗಳ ಮೇಲೆ ಒಳ್ಳೇ ಉಪಯೋಗವಾಗುವದು. ಸಾಧಾರಣತಃ ಶೀತ ಪ್ರಕೃತಿಗಳಮೇಲೆ ಈ ಔಷಧದ ಆಟ ನೆಟ್ಟಗೆ ನಡೆಯುತ್ತದೆ. ಕಾವು ಕೊಡುವದು, ಒತ್ತುವದು ಮುಂತಾದ ಉಪಚಾರದಿಂದ ಸಮಾಧಾನ ವೆನಿಸುವದು; ಸೆಟಿಬೇನೆ, ವೇದನೆ ಮುಂತಾದ ಬೇನೆಗಳಲ್ಲಿ ರೋಗದ ಮಾನದಿಂದ ನೋಡಲಾಗಿ ರೋಗಿಯು ಬಹಳೇ ಸೋತಂತೆ ಕಾಣುತ್ತಾನೆ. ಮತ್ತು ಎಷ್ಟೋ ಸಮಯದಲ್ಲಿ ಬೆವರು ಬಹಳ ಬಿಡುತ್ತದೆ. ರೋಗವು ಹಳೇದಿರಲಿ ಹೊಸದಿರಲಿ ರೋಗಿಯು ಮ್ಲಾನ, ಮಂದ, ಸೋತವನಿದ್ದು ಅವನಿಗೆ ಕೂಡೋಣಾಗುವದಿಲ್ಲ. ಹೀಗಿದ್ದಲ್ಲಿ ಅವನಮೇಲೆ ಮ್ಯಾಗ್ನೇಶಿಯಾ ಫಾಸದ ಅಮಲು ನಡೆಯುವದೆಂದು ತಿಳಿಯಬೇಕು. ಇಂಥ ಲಕ್ಷಣ ಗಳಿದ್ದಲ್ಲಿ ಮ್ಯಾ. ಫಾ. ಕ್ಷಾರದ ಪ್ರಮಾಣ ಕಡಿಮೆಯಾಗಿದೆಂದು ತಿಳಿಯ ತಕ್ಕದ್ದು. ಮ್ಯಾ. ಫಾಸ ಇದನ್ನು ಬಿಸಿ ನೀರಿನಲ್ಲಿ ಹಾಕಿ ಕುಡಿಯಲು ಕೊಡತಕ್ಕದ್ದು. ಹಾಗೂ ಹೊರಗಿನಿಂದ ಆ ನೀರಿನಲ್ಲಿ ತೋಯಿಸಿ ಅಲ್ಲಿ ಇಟ್ಟಲ್ಲಿಯೂ ಗುಣವಾಗುವದು.

---

## ಪ್ರಮುಖ ಲಕ್ಷಣಗಳು

**ಮಿದುಳು:—** ಮ್ಯಾ. ಫಾಸಕ್ಕೂ, ಕಾಲೀಫಾಸಕ್ಕೂ ಮಿದುಳಿನ ರೋಗಗಳಿಗೂ ಬಹಳ ನಿಕಟಸಂಬಂಧವಿದೆ. ಕಾಲೀಫಾ. ಇದು ಜ್ಞಾನ ತಂತುಗಳೊಳಗಿನ ಬೂದಿ ಬಣ್ಣದ ತಂತುಗಳ ಮೇಲೆ ತನ್ನ ಕಾರ್ಯವನ್ನು ಮಾಡುತ್ತದೆ; ಶ್ವೇತ ತಂತುಗಳ ಮೇಲೆ ಮ್ಯಾಗ್ನೆ. ಫಾ. ದ ಕಾರ್ಯವಿದೆ. ಇವುಗಳ ಸಂಬಂಧವು ಬಹಳೇ ನಿಕಟವಿರುವದು. ಒಂದು ಕ್ಷಾರದ ಅಣುಗಳು ಕಡಿಮೆಯಾದರೆ ಇನ್ನೊಂದರ ಅಣುಗಳು ಸಹ ಕಡಿಮೆಯಾಗು ತ್ತವೆ. ಆದ್ದರಿಂದಲೇನೆ ಉಭಯ ಕ್ಷಾರಗಳ ಪ್ರಮುಖ ಲಕ್ಷಣಗಳಲ್ಲಿ

ಬಹಳೇ ಸಾಮ್ಯತೆ ಇದೆ. ಆದರೂ ಕೆಳಗೆ ಬರೆದ ಭಾವನೆಗಳು ಲಕ್ಷ್ಯದಲ್ಲಿಡು ವಂತೆ ಇವೆ. ಆಭಾಸ, ಭ್ರಾಮಕ ಕಲ್ಪನೆ, ಮರೆಗೂಳಿತನ, ( ಮರೆವು ), ಮಂದಬುದ್ಧಿ, ವಿಚಾರ ಮಾಡಲು ಅಪಾತ್ರತೆ, ಮಾನಸಿಕಶ್ರಮ ಮಾಡಲು ಬೇಸರಿಕೆ. ಈ ಭಾವನೆಗಳು ಇದ್ದು ರೋಗಿಯು ತನ್ನಷ್ಟಕ್ಕೆ ತಾನೇ ಬಡ ಬಡಿಸುತ್ತಿರುತ್ತಾನೆ, ಅಥವಾ ಉದಾಸೀನ ಹಾಗೂ ಮ್ಲಾನನಿರುತ್ತಾನೆ.

**ಮಸ್ತಕ:**— ಸಂಣ ಮಕ್ಕಳ ಮಿದುಳಿನ ವಿಕಾರ, ಈ ವಿಕಾರದಲ್ಲಿ ಅರುವು ತಪ್ಪುವದು ಮೈ ಸೆಟಿಸೋಣ ಮುಂತಾದ ಭಾವನೆಗಳೂ ಇದ್ದಲ್ಲಿ ಇದರ ಉಪಯೋಗವು ವಿಶೇಷವಾಗುವದು. ಮಸ್ತಕ ಶೂಲಿಯಲ್ಲಿ, ತೀವ್ರ ಚುಚ್ಚಿದಂಥ, ಎಳೆಯುವಂಥ ನೋವು ಉಂಟಾಗುವದು. ಹಾಗೂ ಚಳಕು ಹಿಡಿಯುವದು. ವೇದನೆ ( ನೋವು ) ಒಮ್ಮಿಂದೊಮ್ಮೆ ಪ್ರಬಲ ವಾಗುವದು. ಮತ್ತು ಉಷ್ಣೋಪಚಾರದಿಂದ ಕಡಿಮೆಯಾಗುವದು. ಉಷ್ಣೋಪಚಾರದಿಂದ ನೆಟ್ಟಗಾಗುವ ಹಾಗೂ ಶೀತೋಪಚಾರದಿಂದ ಹೆಚ್ಚಾಗುವ ಯಾವದೇ ತಲೆಶೂಲೆಯಲ್ಲಿ ಈ ಔಷಧದ ಉಪಯೋಗವಾಗು ವದು. ತರುಣ ಸಶಕ್ತ ಪ್ರಕೃತಿಯ ಹುಡುಗರಲ್ಲಿ ವಿಶೇಷತಃ ಸಾಲೆಗೆ ಹೋಗತಕ್ಕ ಹುಡುಗರಲ್ಲಿ ತೀವ್ರ, ಜೋರಿನ ಸಳಕು ತುಂಬುತ್ತದೆ (ಹಿಡಿಯುತ್ತದೆ) ಮಾನಸಿಕ ಶ್ರಮದಿಂದ ಹೆಚ್ಚಾಗುತ್ತದೆ. ನೆತ್ತಿಯ ಮೇಲೆ. ತಲೆಯ ಹಿಂಭಾಗದಲ್ಲಿ ಬೆನ್ನುಹುರಿಯಲ್ಲುದ್ಭವಿಸುವಂಥ ವೇದನೆಗಳು ಹಾಗೂ ಎರಡೂ ಹೆಗಲಿನ ನಡುವೆ ಹೆಚ್ಚಾಗಿರುತ್ತವೆ. ವೇದನೆಯು ಶೀರ್ಷಪೃಷ್ಠಭಾಗದಲ್ಲಿ ಆರಂಭವಾಗಿ ಎಲ್ಲ ತಲೆ ತುಂಬ ಹಬ್ಬುತ್ತದೆ. ಈ ವೇದನೆಯಿಂದ ಮಳಮಳಿ ಉಂಟಾಗಿ ಮೈಯೆಲ್ಲ ಮುಳ್ಳುಹಿಡಿಯುತ್ತದೆ. ತಲೆಯು ಒಂದೇಸವನೆ ನಡಗುತ್ತಿರುತ್ತದೆ (ಕಾ. ಫಾ.)

**ನೇತ್ರ:**— ಕಣ್ಣ ರೆಪ್ಪೆಗಳು ಮುಚ್ಚುಹಾಕುತ್ತವೆ. (ಕಾಲಿ. ಫಾ) ಕಣ್ಣ ಗೊಂಬೆಗಳು ಆಕುಂಚಿತವಾಗಿರುತ್ತವೆ, ದೃಷ್ಟಿಯು ಕೆಟ್ಟಿದ್ದು, ಕಣ್ಣೆದುರಿಗೆ ಬೇರೆ ಬೇರೆ ಬಂಣಗಳೂ, ಚಿಕ್ಕೆಗಳೂ ಕಾಣಿಸುತ್ತವೆ. ಬೆಳಕಿನ ಕಡೆಗೆ ನೋಡಲಾಗುವದಿಲ್ಲ. ಒಂದಕ್ಕೆ ಎರಡು ಕಾಣಿಸುತ್ತವೆ. ಕಣ್ಣ ರೆಪ್ಪೆಗಳು ಹಾರುತ್ತಿರುತ್ತವೆ (ಕಲ್ಕೆ. ಫಾ.); ದೃಷ್ಟಿಯು ಡೊಂಕಾಗಿರುವದು;

ನೇತ್ರಶೂಲೆಯಲ್ಲಿ ವಿಶೇಷತಃ ಬಲಗಡೆಯಲ್ಲಿ ಕೈಹಚ್ಚಿದ್ದರಿಂದ ವೇದನೆ ಹೆಚ್ಚಾಗುತ್ತದೆ. ಹೊರಗಿನಿಂದ ಕಾವುಕೊಟ್ಟಲ್ಲಿ ಕಡಿಮೆಯಾಗುತ್ತದೆ. ಕಂಣಿನಿಂದ ನೀರು ಸೋರುತ್ತದೆ; ( ನೇಟ್ರಂ ಮೂ. ) ನೇತ್ರನಾಡಿಗಳ ಅಶಕ್ತತೆಯ ಮೂಲಕ ದೃಷ್ಟಿಮಾಂದ್ಯವಾಗುತ್ತದೆ ( ಕಾ. ಫಾ. )

**ಕಿವಿ:**— ಕರ್ಣನಾಡಿಯು ರೋಗದಿಂದಾಗುವ ಬಧಿರತೆ, ಕರ್ಣಶೂಲ (ಕಿವಿಸೋವು); ಮೇಲಿಂದ ಮೇಲೆ ನಿಂತು ನಿಂತು ಒಮ್ಮೆಂದೊಮ್ಮೆ ಬರುವ ವೇದನೆ, ಶೀತೋಪಚಾರದಿಂದ ಹೆಚ್ಚಾಗುತ್ತವೆ. ಉಷ್ಣೋಪಚಾರದಿಂದ ಸಮಾಧಾನವಾಗುತ್ತದೆ; ವೇದನೆ ಬಲಗಿವಿಯ ಹಿಂದಿನ ಭಾಗದಲ್ಲಿ ಬಹಳ ತಾಗಿ ಹೆಚ್ಚಾಗಿರುವದು; ತಂಣನ್ನ ಹವೆಯಲ್ಲಿ ಹೋಗುವದರಿಂದಲೂ, ಮೋರೆಗಾಗಲೀ ಹಿಂಗುತ್ತಿಗೆಗಾಗಲೀ ತಂಣೀರಿನ ಸ್ಪರ್ಶವಾದಲ್ಲಿ ಹೆಚ್ಚಾಗುವದು;

**ಮೂಗು:**— ಯಾವದೇ ತರದ ಶೀತದಿಂದಾಗುವ ರೋಗವಿಲ್ಲದಿದ್ದರೂ ಮೂಗಿಗೆ ವಾಸನೆಯು ಬಾರದೇ ಇರೋಣವೂ ಅಥವಾ ಬೇರೊಂದು ವಾಸನೆ ಬರುತ್ತದೆ. ಬಹಳ ದಿವಸ ಔಷಧ ತೆಗೆದುಕೊಂಡಲ್ಲಿ ನೆಟ್ಟಗಾಗುವದು; ಒಮ್ಮೊಮ್ಮೆ ಮೂಗು ದಟ್ಟಿಸಿದ್ದೂ ಒಣಗಿದಂತೆಯೂ ಇರುವದು. ಮತ್ತೊಮ್ಮೆ ಮೂಗಿನಿಂದ ಸ್ರಾವವು ಹರಿಯುವದು. ಈ ಪ್ರಕಾರ ಒಮ್ಮೆ ಒಂದು ಮತ್ತೊಮ್ಮೆ ಮತ್ತೊಂದು ಹೀಗೆ ನಡೆದಲ್ಲಿ ಈ ಔಷಧವು ಗುಣ ಕೊಡುವದು.

**ಮುಖಚರ್ಯೆ:**— ಒಮ್ಮೆಂದೊಮ್ಮೆ, ನಿಂತು ನಿಂತು ಬರುವ ವೇದನೆಗಳು; ಚಳಕುಹಿಡಿಯೋಣ; ಉಷ್ಣೋಪಚಾರದಿಂದ ಸಮಾಧಾನ; ಆದರೆ ಸ್ಪರ್ಶದಿಂದಲೂ, ಶೀತೋಪಚಾರದಿಂದಲೂ ಹೆಚ್ಚಾಗುವದು; ಬಲಗಡೆ ಭಾಗದಲ್ಲಿ ವೇದನೆ ಹೆಚ್ಚು; ಮಧ್ಯಾನ್ಹದ ೨ ಗಂಟೆಯ ಸುಮಾರಕ್ಕೆ ಹಾಗೂ ಹಾಸಿಗೆಯಲ್ಲಿ ಮಲಗಿದಾಗ್ಯೂ ವೇದನೆ ಹೆಚ್ಚಾಗುವದು. ಬಲಗಣ್ಣಿನ ತೆಗ್ಗಿನಿಂದ ಹಲ್ಲಿನ ವರೆಗೆ ವೇದನೆ ಮುಖದ ಬಲಭಾಗದಲ್ಲೆಲ್ಲ ಹಬ್ಬುತ್ತದೆ. ಬಾಯಿತೆರೆಯುವಾಗ ಸ್ಪರ್ಶದಿಂದಲೂ ಶೀತೋಪಚಾರದಿಂದಲೂ ಹೆಚ್ಚಾಗುತ್ತದೆ. ಗಲ್ಲದ ಮೇಲೆ ವೇದನೆಯಿದ್ದು ಕಣ್ಣೊಳ

ಗಿಂದ ನೀರುಹೋಗುತ್ತಿದ್ದಲ್ಲಿ ನೇಟ್ರಂ ಮೂರವನ್ನು ಉಪಯೋಗಿಸಬೇಕು. ವೇದನೆಯು ದಾಹಜನ್ಯವಿದ್ದಲ್ಲಿ ಫೇ. ಫಾ. ಕೊಡಬೇಕಾಗುವದು. ಬಲ ಗಡೆಯ ಗದ್ದದ ಮೇಲ್ಭಾಗದಿಂದ ತಲೆ ಹಾಗೂ ಕಿವಿಯ ವರೆಗೆ ಮುಟ್ಟುವ ಚಳುಕು ಈ ಔಷಧದಿಂದ ಗುಣವಾಗುವದು.

**ಮೋರೆ:—** ತುಟಿ ಮುಂತಾದವುಗಳಲ್ಲಿಯ ಸ್ನಾಯುಗಳು ಹಾರೋಣ, ಧನುರ್ವಾತದ ಸೆಟೆಯೋಣ, ಮಾತಾಡುವಾಗ ಒಮ್ಮೆಂ ದೊಂಮೆ ಗುಗ್ಗೋಣ, ಹಲ್ಲು ಕಟಗರಿಸೋಣ, ಬಾಯಿಯು ಒಣಗಿದ್ದು ಜಿಗಟುಜೊಲ್ಲು ಸೋರುವದು; ತುಟಿಯ ಕೊನೆಗಳು ಹುಳಮೈದದ್ದು; ಮುಂತಾದ ವಿಕೃತಿಗಳಲ್ಲಿ ಈ ಔಷಧವನ್ನು ಬಿಸಿನೀರಿನೊಳಗಿಂದ ಕೊಟ್ಟಲ್ಲಿ ತೀವ್ರವೇ ಗುಣಬರುವದು.

**ನಾಲಗೆ:—** ಸಾಧಾರಣತಃ ಹೊಟ್ಟೆನೋವಿನಲ್ಲಿ ನಾಲಿಗೆಯು ಸ್ವಚ್ಛ ವಿರುತ್ತದೆ. ಹೊರಕಡೆಯ ಬೇನೆಯಿದ್ದಾಗ ನಾಲಗೆಯ ಮೇಲೆ ಬಿಳೇ ಅಗ್ರವಿರುತ್ತದೆ.

**ಹಲ್ಲು:—** ಹಲ್ಲು ಒಡೆಯುವಕಾಲಕ್ಕೆ ಸಣ್ಣಮಕ್ಕಳಿಗೆ ಸೆಟೆಬೇನೆ ಆದಲ್ಲಿ (ಕಲ್ಕೆ. ಫಾ.); ಹಲ್ಲುಶೂಲೆ; ತೀವ್ರ ಹಾಗೂ ನಿಂತುನಿಂತು ಬರುವ ಸಳುಕು; ಉಷ್ಣೋಪಚಾರದಿಂದ ಸಮಾಧಾನವಾಗುವದು. ಶೀತೋಪ ಚಾರದಿಂದ ಸಮಾಧಾನವಾಗುತ್ತಿದ್ದರೆ ಫೇರಂಫಾಸದ ಉಪಯೋಗ ವಾಗುವದು. ಹಲ್ಲು ತಿಕ್ಕಿಕೊಳ್ಳುವ ಕಾಲಕ್ಕೆ ತಣ್ಣೀರಿನಿಂದ ಅಸಮಾಧಾನ. ಮಲಗಿದ ನಂತರ ಅಥವಾ ಶೀತೋಪಚಾರದಿಂದ ಹಲ್ಲು ನೋವು ಹೆಚ್ಚಾ ಗುವದು. ಮೇಲಿಂದಮೇಲೆ ಬೇರೆಬೇರೆ ಕಡೆಯಲ್ಲಿ ಆಗುವ ವೇದನೆ; ಹುಳತ ಹಲ್ಲಿನಲ್ಲಿ ಆಗುವ ತೀವ್ರ ವೇದನೆ; ಮ್ಯಾ. ಫಾ. ದಿಂದ ಗುಣ ಬರದಿದ್ದರೆ ಕಲ್ಕೆ. ಫಾ. ಕೊಡಬೇಕು. ಹಲ್ಲುಗುರುವು, ಸಣ್ಣ ಮಕ್ಕಳಿಗೆ ಹಲ್ಲು ಒಡೆಯುವ ಕಾಲಕ್ಕೆ ಆಗುವ ಜ್ವರವಿಲ್ಲದೆ ಸೆಟೆಬೇನೆ ಆಗೋಣ; ಮುಂತಾದ ರೋಗಗಳ ಮೇಲೆ ಕೊಡತಕ್ಕದ್ದು.

**ಗಂಟಲು:—** ಗಂಟಲಿನಲ್ಲಿ ಸೆಟೆಬೇನೆ; ಶ್ವಾಸನಲಿಕೆಯು ಒಮ್ಮೆಂ ದೊಮ್ಮೆ ಮುಚ್ಚಿದಂತಾಗುತ್ತದೆ. ನುಂಗುವ ಕಾಲಕ್ಕೆ ಮುಸಿಕಿಬಿಗಿದಂತಾ

ಗುತ್ತದೆ. ಗಂಟಲದೊಳಗೆ ಬಿಗಿದಂತಾಗುತ್ತದೆ. ನಿಂತು ನಿಂತು ಒಮ್ಮೊಂದೊಮ್ಮೆ ಬರುವ ಕೆಮ್ಮು. ಮಾತಾಡುವಾಗ ಇಲ್ಲವೆ ಗಾಯನ ಮಾಡುವಾಗ ಒಮ್ಮೊಂದೊಮ್ಮೆ ಕರ್ಕಶ ಸ್ವರ ಹೊರಡುತ್ತದೆ. (ಕಾ. ಫಾ.) ಗಂಟಲವಾಳ (Goitre) ಗಂಟಲ ಬಲಭಾಗಕ್ಕೆ ಗಟ್ಟಿಯಾಗುತ್ತದೆ ಹಾಗೂ ನೋವು ಇರುತ್ತದೆ.

**ಜಠರ:—** ಜಠರಶೂಲೆಯಲ್ಲಿ ನಾಲಿಗೆ ಸ್ವಚ್ಛ ಇರುತ್ತದೆ. ಜಠರದಲ್ಲಿಯ ವೇದನೆಯಾಗುವದರಿಂದಲೂ ಕಾಲುಗಳನ್ನು ಎತ್ತಿಹಿಡಿದುಕೊಳ್ಳುವದರಿಂದಲೂ ಉಷ್ಣೋಪಚಾರದಿಂದಲೂ ಸಮಾಧಾನವಾಗುವದು. ಜಠರದಲ್ಲಿ ಒರಟು. ಹೊಟ್ಟೆಯಲ್ಲಿ ಮುರಿಯುವದು ಅಥವಾ ಬಿಗಿದಂತೆ ಆಗೋಣ; ಅಪಚನದಲ್ಲಿ ನಾಲಗೆಯು ಸ್ವಚ್ಛವಿದ್ದಲ್ಲಿ (ಕಲ್ಕೆ. ಫಾ; ಫೇರಂ ಫಾ.) ಬಿಕ್ಕು; ಜಠರ ಸ್ನಾಯುಗಳ ಆಕುಂಚನದಿಂದ ಆಗುವ ಓಕರಿಕೆ; ಬಿಕ್ಕು ಇದ್ದಾಗ್ಯೆ ಸಹ ಹಗಲಿರುಳು ವಾಂತಿಯಾಗುತ್ತದೆ. ಆಮ್ಲಪದಾರ್ಥಗಳು ಸಹನವಾಗುವದಿಲ್ಲ; ಕಾಫಿಯ ದ್ವೇಷ (ಬೇಸರಿಕೆ); ಸಕ್ಕರೆಯನ್ನು ತಿನ್ನಲು ಪ್ರಬಲೇಚ್ಛೆ; ತಿಂದ ಅನ್ನವು ಗಂಟಲಿಗೆ ಹಾಯುತ್ತದೆ; ತೇಗು; ಬಿಸಿನೀರು ಕುಡಿದಲ್ಲಿ ಸಮಾಧಾನವಾಗುತ್ತದೆ; ಗಂಟಲದಲ್ಲಿ ಹುಳಿಸುಡುವದು; ಹೊಟ್ಟೆಯಲ್ಲಿ ಶೂಲಿಗಳು ನಿಂತುನಿಂತು ಒಮ್ಮೊಂದೊಮ್ಮೆ ಉದ್ಭವಿಸುತ್ತವೆ. ತಣ್ಣೀರು ಕುಡಿದಲ್ಲಿ ಹೆಚ್ಚಾಗುತ್ತವೆ; ಹೊಟ್ಟೆಯಲ್ಲಿ ವಾಯು ತುಂಬಿದ್ದರಿಂದ ಹೊಟ್ಟೆ ನೋಯುತ್ತದೆ ಹಾಗೂ ಬಿಗಿದಂತೆ ಆಗುತ್ತದೆ. ವಾತಜನ್ಯ ಅಗ್ನಿಮಾಂದ್ಯ; ವಾತಜನ್ಯಶೂಲೆ; (ವಾತದಿಂದ ಆಗುವ ಮಾಂದ್ಯ ಮತ್ತು ಶೂಲೆ.)

**ಉದರ ಮತ್ತು ಮಲ:—** ಆಮಾಂಶ; ಪ್ರಬಲ, ತೀವ್ರ, ಸಹನವಾಗದಂಥ ಹೊಟ್ಟೆಮುರಿಯುವದು, ಶೌಚಕ್ಕೆ ಹೋಗಬೇಕೆಂದೆನಿಸುವದು, ತಿಕ್ಕಿದ್ದರಿಂದ, ಕಾಸಿದ್ದರಿಂದ, ಕಾಲುಗಳನ್ನೆತ್ತಿ ಹೊಟ್ಟೆಗೆ ಹಚ್ಚಿಕೊಂಡದ್ದರಿಂದಾಗಲಿ ಸಮಾಧಾನವಾಗುತ್ತದೆ. ಒಮ್ಮೊಂದೊಮ್ಮೆ ನಿಂತು ನಿಂತು ಬರುವ ವೇದನೆ. ವಾಯು ಸರಿಯುತ್ತದೆ. ಆದರೂ ಅದರಿಂದ ಸಮಾಧಾನವಾಗುವದಿಲ್ಲ; ಶೌಚದ ಕಾಲಕ್ಕೆ ವಾಯು ಜೋರಿನಿಂದ ಸರಿಯುತ್ತದೆ.

ವೇದನೆಯುಕ್ತ ಹೊರಕಡಿಗೆ ಆಗೋಣ; ತೆಳ್ಳನ್ನ ರೇಚಗಳಾಗುತ್ತವೆ. ರಕ್ತಮೂಲವ್ಯಾಧಿಯಲ್ಲಿ ಬಲವತ್ತರ ಸೆಟಿಬೇನೆ ಬರುತ್ತದೆ. ಹೊಟ್ಟೆಜಾಡಿ ಸೋಣ; ಆಮಾಂಶ; ಆಂತ್ರದಾಹ (ಕರುಳುಗಳಲ್ಲಿಯ ಕಾಯಿಲೆ); ಶೂಲ ಮುಂತಾದ ರೋಗಗಳಲ್ಲಿ ಮ್ಯಾಗ್ನೆಶಿಯಾ ಫಾಸವನ್ನು ಹಾಕಿ ಸಿದ್ಧ ಮಾಡಿದ ನೀರಿನಿಂದ ಮೇಲಿಂದಮೇಲೆ ಬಸ್ತಿ ಕೊಡಬೇಕು. ಮಕ್ಕಳಿಗೆ ಆಗುವ ಅವರೋಧ. ಶೌಚಕ್ಕೆ ಕೂಡುವ ಕಾಲಕ್ಕೆ ಹೊಟ್ಟೆಯಲ್ಲಿ ಶೂಲೆಯಿದ್ದದರಿಂದ ಸಣ್ಣ ಮಕ್ಕಳು ಜೋರಿನಿಂದ ಒದರುತ್ತವೆ, ಚೀರುತ್ತವೆ. ಹೊಟ್ಟೆಯೊಳಗೆ ಗುರಗುರಿಸುತ್ತದೆ. ಮಲವು ಶುಷ್ಕ (ಒಣಗಿದ್ದು), ಗಟ್ಟಿ, ಕರೇದು, ಸಾಧಾರಣ ಕೆಂಪ ಬಣ್ಣದಂತೆ ಇರುತ್ತದೆ. ಮತ್ತು ಮಲವು ತ್ರಾಸವಾಗಿ ಹೊರಬೀಳುತ್ತದೆ.

**ಮೂತ್ರೇಂದ್ರಿಯ:—** ಮೂತ್ರವಾಗುವದು ಒಮ್ಮಿಂದೊಮ್ಮೆ ನಿಲ್ಲುತ್ತದೆ. (ಫೇರಂ ಫಾಸ) ಮತ್ತು ಮ್ಯಾ. ಫಾ. ಇವುಗಳನ್ನು ಒಂದರ ನಂತರ ಮತ್ತೊಂದು ಹೀಗೆ ಕೊಡಬೇಕು. ಮೂತ್ರಾಶಯದಲ್ಲಿಯೂ ಮೂತ್ರಮಾರ್ಗದಲ್ಲಿಯೂ ಒಟ್ಟೆಹಿಡಿಯೋಣ; ಮೂತ್ರದ ಕಾಲಕ್ಕೆ ತಿಣುಕ ಬೇಕಾಗುವದು, ಅದರಿಂದ ನೋವು; (ಫೇರಂ ಫಾ. ಮತ್ತು ಕಾಲೀಫಾ.) ನಿಂತಲ್ಲಿಯೂ ನಡೆಯುವಾಗಲೂ ಮೇಲಿಂದಮೇಲೆ ಮೂತ್ರಮಾಡಬೇಕೆಂದು ಅನಿಸುತ್ತದೆ; ಆಶ್ಮರಿಯು (ಮೂತಖಡಾ) ಇಳಿಯುತ್ತಿರುವಾಗ ಮೂತ್ರಮಾರ್ಗದಲ್ಲಿ ವೇದನೆ; (ನೇಟ್ರಂ ಸ.) ಮೂತ್ರದೊಳಗಿಂದ ಫಾಸ್ಫೇಟಗಳು ಬಹಳ ಹೋಗುತ್ತವೆ.

**ಪುರುಷರ ಜನನೇಂದ್ರಿಯ:—** ಪ್ರಮೇಹದಿಂದ ಮೂತ್ರಮಾರ್ಗದ ಸಂಕೋಚನವಾಗಿದ್ದಿರುತ್ತದೆ, ಅದರಿಂದ ಮೂತ್ರದ ಧಾರೆಯು ಸಣ್ಣದಾಗಿರುವದು. ಪ್ರಮೇಹದ ಮೂಲಕ ಮೂತ್ರ ಮಾರ್ಗದಲ್ಲಿ ನಿಂತು ನಿಂತು ವೇದನೆ ಆಗೋಣ. ಸಂಭೋಗೇಚ್ಛೆಯು ಬಲವತ್ತರ.

**ಸ್ತ್ರೀಯರ ಜನನೇಂದ್ರಿಯ:—** ಸಪೀಡಾರ್ತವ ( ಮುಟ್ಟಾಗುವ ಕಾಲಕ್ಕೆ ವೇದನೆ ), ಮುಟ್ಟು ಶೂಲೆ; ವೇದನೆಯಾಗಲಿ ಕಳೆಯಾಗಲಿ ನಿಂತು ನಿಂತು ಬರುವವು ಮತ್ತು ವಿಶೇಷತಃ ಬಲಭಾಗದಲ್ಲಿ ಹೆಚ್ಚಾಗಿರುವವು; ಕಾವು

ಕೊಟ್ಟಲ್ಲಿ ಸಮಾಧಾನವಾಗುವದು; ಮುಟ್ಟಿನಕಾಲಕ್ಕೆ ಈ ಔಷಧ ಕೊಡುತ್ತಾ ಹೋದಲ್ಲಿ ವೇದನೆ ಕಡಿಮೆಯಾಗುತ್ತವೆ. (ಕಾ. ಫಾ.) ಮುಟ್ಟುಶೂಲೆ ಪ್ರತಿಬಂಧಕವೆಂದು ಫೆರಂಫಾಸದ ಉಪಯೋಗವಾಗುವದು; ಮುಟ್ಟಿನ ಸಂಗಡ ಸುಟ್ಟಂಥ, ಕೊಳೆತಂಥ ಚೂರುಗಳು ಹೊರಬೀಳುತ್ತವೆ. ಮುಟ್ಟು ತೀವ್ರವಾಗಿ ಆಗುತ್ತದೆ. ಮತ್ತು ಅದು ಕರ್ರಗೆ ಇದ್ದು ತಂತುಯುಕ್ತ ವಿರುತ್ತದೆ. ನಿಂತು ನಿಂತು ಹೋಗುವಂಥ ಮುಟ್ಟು ಇದ್ದು ಅದು ತೀವ್ರವೇ ಗಟ್ಟಿಯಾಗುವಂಥಾದ್ದು ಇರುತ್ತದೆ. ಹೊಕ್ಕಳ ಕೆಳಭಾಗದಲ್ಲೆಲ್ಲ ನೋಯು ತ್ತದೆ. ನಿಂತು ನಿಂತು ತೀವ್ರ ಕಳೆಗಳು ಬರುತ್ತವೆ. ಗರ್ಭಾಶಯ ಮಾರ್ಗದಲ್ಲಿ ವೇದನೆ ಮತ್ತು ಉರುಪು ಗರ್ಭಾಶಯವು ಅಕುಂಚಿತವಾಗಿ ರಕ್ತವು ಹೊರಚಿಮ್ಮಿದಂತೆ ಆಗುತ್ತದೆ. ಪ್ರಸೂತಿ ಸಮಯದ ಶೂಲೆಗಳೂ ನಿಂತು ನಿಂತು ಒಮ್ಮೆದೊಂಮ್ಮೆ ಬರುತ್ತವೆ. ಕಾಲಿನಲ್ಲಿ ನೋವು; ಪ್ರಸೂತಿ ಕಾಲದಲ್ಲಿ ಸೆಟೆಯೋಣ; ಪ್ರಸೂತಿಯನಂತರ ಒಳಗೆ ಮಾಂಸವು ನಿಂತರೆ ಈ ಔಷಧ ಕೊಟ್ಟಲ್ಲಿ ಜೋರಿನಿಂದ ಶೂಲೆಗಳು ಬಂದು ಮಾಂಸ ಹೊರಬೀಳು ತ್ತದೆ. ಈ ಔಷಧ ಬಿಸಿ ನೀರಿನಲ್ಲಿ ಕೊಟ್ಟಲ್ಲಿ ಪ್ರಸೂತಿಯನಂತರ ಬರುವ ಶೂಲೆಗಳು ನಿಲ್ಲುತ್ತವೆ.

**ಶ್ವಸನೇಂದ್ರಿಯ:**— ದಮ್ಮು; ಹೊಟ್ಟೆಯಲ್ಲಿ ವಾಯು ತುಂಬಿ ಕೊಂಡಿದ್ದರೆ ದಮ್ಮಿನ ಕಷ್ಟವು ಹೆಚ್ಚಿಗೆ ಇರುತ್ತದೆ. ಎದೆಯಲ್ಲಿ ನೋಯು ತ್ತದೆ. ಒಮ್ಮೆದೊಂಮ್ಮೆ ಭರದಿಂದ ಬರುವ ಕೆಮ್ಮು ಕೂತುಕೊಂಡ ದ್ದಲ್ಲಿಯೆ ನೆಟ್ಟಗಾಗುತ್ತದೆ. ಕಫ ಸರಿಯುವದಿಲ್ಲ; ಕೋಡಗ ಕೆಮ್ಮು ರಾತ್ರಿಯಲ್ಲಿಯೂ ಮಲಗಿದ್ದರಿಂದಲೂ ಹೆಚ್ಚಾಗುತ್ತದೆ. (ಕಾ. ಮ್ಯೂ.) ಬಹಳ ದಿವಸದ ಕೋಡಗ ಕೆಮ್ಮು ಇದ್ದಲ್ಲಿ ಈ ಔಷಧ ಬಿಟ್ಟುಬಿಡದೆ ಕೊಟ್ಟಲ್ಲಿ ಗುಣವಾಗುವದು; ಒಮ್ಮಿಂದೊಮ್ಮೆ ಚೀರಿದಂತೆ ಕರ್ಕಶ ಧ್ವನಿ ಹೊರಡುತ್ತದೆ; ಎದೆಯಲ್ಲಿ ವಿಶೇಷತಃ ಬಲಭಾಗಕ್ಕೆ ವೇದನೆ; ಅಲ್ಲಾಡಿದ್ದ ರಿಂದ ಹೆಚ್ಚಾಗುತ್ತದೆ, ಶ್ವಾಸವು ಮುಂದವಿದ್ದು ಒಳಗೆ ಎಳಕೊಳ್ಳುವಾಗ ಕಷ್ಟವಾಗುತ್ತದೆ. (ಫೆರಂ ಫಾ.) ಒಮ್ಮೆದೊಂಮ್ಮೆ ಕೆಮ್ಮು ಏಳುತ್ತದೆ. ಎದೆಯಲ್ಲಿಯೂ ಗಂಟಲದಲ್ಲಿಯೂ ಬಿಗಿದಂತಾಗುತ್ತದೆ; ಗಂಟಲು ಒಣಗಿ ದಂತೆ ಇದ್ದು ತಿಂಡಿಬಿಡುತ್ತದೆ. ಮತ್ತು ಅದರಿಂದ ಕೆಮ್ಮು ಬರುತ್ತದೆ.

**ರುಧಿರಾಭಿಸರಣ**:— ಹೃದಯಶೂಲೆ; (Anjina Pectoris) ಈ ಔಷಧವನ್ನು ಮೇಲಿಂದಮೇಲೆ ಬಿಸಿನೀರಿನೊಳಗಿಂದ ಕೊಡತಕ್ಕದ್ದು; ಹೃದಯದಲ್ಲಿ ಒಮ್ಮಿಂದೊಮ್ಮೆ ಧಡಧಡಿಸುತ್ತದೆ; ಸ್ವಲ್ಪ ಕಾರಣದಿಂದ ಸಹ ಹೃದಯ ಕ್ರಿಯೆಯು ತೀವ್ರದಿಂದ ಆಗಲಾರಂಭಿಸುತ್ತದೆ; ಎಡಗಡೆ ಮಗ್ಗಲಾಗಿ ಮಲಗಿದಲ್ಲಿ ಧಡಧಡಿಸುವದು ನಿಲ್ಲುತ್ತದೆ. ಹಿಂದಿನ ಕಾಲು; ಬೆನ್ನು; ಬೆನ್ನಿನ ಕೆಳಭಾಗದಲ್ಲಿ ಹಾಗೂ ಹಿಂಗುತ್ತಿಗೆಯಲ್ಲಿ ನೋಯುತ್ತದೆ. ಬೆನ್ನಿನಲ್ಲಿ ಎಲ್ಲಿಯಾದರೂ ತೀವ್ರವೇದನೆ ಆಗುತ್ತಿದ್ದರೆ; ಸ್ಥಳಬಿಟ್ಟು ಬೇರೆ ಬೇರೆ ಸ್ಥಳದಲ್ಲಾಗುವ ವೇದನೆ. ಬೆನ್ನು ಹುರಿಯಲ್ಲಿ ವೇದನೆ ಇದ್ದು ಕೈಸ್ಪರ್ಶವಾದಲ್ಲಿ ಸಹ ಹೆಚ್ಚಾಗುತ್ತದೆ.

**ಕೈಕಾಲು**:— ಹೆಗಲಿನಲ್ಲಿಯೂ ಕೈಯಲ್ಲಿಯೂ ವಿಶೇಷತಃ ಬಲ ಭಾಗಕ್ಕೆ ಶೂಲೆಗಳೇಳುತ್ತವೆ. ಸಂದಿನಲ್ಲಿ ನೋವು; ಹಸ್ತಕಂಪ (ಕೈನಡುಗು) ನಡುಗು ಇದ್ದ ಅರ್ಧಾಂಗವು; ಕಂಪವಾಯು; ಸರ್ವಾಂಗವು ನೋವು (ಉರುಪು) ತುಂಬಿ ಹೋಗುತ್ತದೆ; ಕಾಲಿನಲ್ಲಿ ವಿಶೇಷತಃ ರಾತ್ರಿಯಲ್ಲಿ ವೇದನೆ; ಸ್ನಾಯುಗಳಲ್ಲಿ ಬಿಗಿದಂತಾಗುತ್ತದೆ; ಪಿಂಡರಿಗಳಲ್ಲಿ ಶೂಲೆಗಳು; ಕುಂಡೆಯ ತಿಗದಿಂದ ಹರಡಿಯ ವರೆಗೆ ಇರುವ ನಾಡಿಯಲ್ಲಿ ಆಗುವ ಪ್ರಾಣಾಂತಕ ವೇದನೆಯಮೇಲೆ ಇದನ್ನು ಉಪಯೋಗಿಸಬಹುದು. ಸಂಧಿವಾತದಲ್ಲಿ ಶೂಲೆಗಳು ಬಹಳ ತೀಕ್ಷ್ಣವಾಗಿರುತ್ತವೆ. ಕೈಸ್ಪರ್ಶವಾದಲ್ಲಿ ಸಹ ಹೆಚ್ಚಾಗುತ್ತವೆ. ಸ್ನಾಯುಗಳ ಚಲನಶಕ್ತಿಯ ದೋಷದಮೇಲೆ ಸಹ ಇದನ್ನು ಉಪಯೋಗಿಸಬೇಕು.

**ನಿದ್ದೆ ಮುಂತಾದ್ದು**:— ನಾಡಿ ಧಾತುಗಳಿಗೆ ಪೋಷಣದಾಯಕವೂ ಕಾರ್ಯಕ್ಷಮತೆಯನ್ನುಂಟುಮಾಡುವ ಶಕ್ತಿಯುಳ್ಳಂಥಾದ್ದೂ ಈ ಔಷಧ ವಿದೆ. ರೋಗಿಯು ಮ್ಲಾನ, ಮಂದ, ದಣಿದವನಂತೆ ಇರುತ್ತಾನೆ; ಕೂಡ ಲಾರನು; ಸರಾಯಿ ಮುಂತಾದ ಮಾದಕಪದಾರ್ಥಗಳ ಸೇವನಾತಿರೇಕ ದಿಂದ ಸ್ನಾಯುಗಳ ಮೇಲೆ ಆಗುವ ದುಷ್ಪರಿಣಾಮ; ಸರ್ವಾಂಗದಲ್ಲಿ ಎಚ್ಚರಿದ್ದಾಗ ಎಲ್ಲ ಸ್ನಾಯುಗಳ ಹಾರಿಕೆ: ಒಮ್ಮಿಂದೊಮ್ಮೆ ಸಿಡಿಲಿನಂತೆ ಬರುವ ವೇದನೆ; ರಾತ್ರಿಯಲ್ಲಿ ವೇದನೆ ಹೆಚ್ಚಿದ್ದು ವೇದನೆ ಇರುವ ಕಾಲಕ್ಕೆ

ಸ್ನಾಯುಗಳ ಆಕುಂಚನ ಸಹ ನಡೆದಿರುತ್ತದೆ; ಮೈ ಸೆಟೆಸೋಣ, ಸರ್ವಾಂಗವೂ ಸೆಟೆದು ಗಟ್ಟಿಯಾಗೋಣ; ಮುಷ್ಟಿಗಳು ಗಟ್ಟಿಮುಟ್ಟಿರುವವು; ಕೈಕಾಲು ತಲೆಗಳಲ್ಲಿ ಕಂಪ (ನಡುಗು); ಬಾಯಿಯಲ್ಲಿ ಬುರುಗು ಅಪಸ್ಮಾರ; ವಿಶೇಷತಃ ಮುಷ್ಟಿಮೈಥುನದಂಥ ಘಾತುಕ ಚಟಗಳಿಂದುಂಟಾಗುವ ಸೆಟೆಬೇನೆ; ಅಪಸ್ಮಾರದಲ್ಲಿ ಮುಷ್ಟಿಗಳು ಡೊಂಕಾಗಿರುತ್ತವೆ ಮತ್ತು ಹಲ್ಲು ಕಟಗರಿಸುತ್ತವೆ. ಲೇಖಕರಿಗೂ ತಂತುವಾದ್ಯ ಬಾರಿಸುವವರಿಗೂ ಆಗುವ ಹಸ್ತಕಂಪ; ಅರ್ಧಾಂಗದಲ್ಲಿ ಸಂಜ್ಞಾನಾಶವಿದ್ದಲ್ಲಿ (ಎಚ್ಚರಿಕೆ ತಪ್ಪಿದ್ದರೆ) ಈ ಔಷಧದ ಉಪಯೋಗವಾಗುತ್ತದೆ. ಮೇಲಿಂದ ಮೇಲೆ ಆಕಳಿಕೆ ಬರುತ್ತವೆ; ಕಣ್ಣು ಮುಚ್ಚು ಹಾಕೋಣ; ನಿದ್ರೆಯಲ್ಲಿ ಕೆಟ್ಟ ಸ್ವಪ್ನಗಳು; ದಣುವಿಕೆಯಿಂದಾಗುವ ನಿದ್ರಾನಾಶ; (ನಿದ್ದೆಗೇಡು).

**ಜ್ವರ:—** ಶೀತಜ್ವರ; ಊಟವಾದ ನಂತರ ಸಾಯಂಕಾಲದಲ್ಲಿ ಚಳಿಯಾಗಿ ಬರುತ್ತದೆ. ಪ್ರಾತಃಕಾಲದಲ್ಲಿ ಸಹ ಬಹಳೇ ಚಳಿಯಾಗಿ ಬರುತ್ತದೆ. ಬೆನ್ನೊಳಗಿಂದ ಮುಳ್ಳು ತುಂಬುತ್ತದೆ. ಅನಂತರ ಉಸುರು ಗಟ್ಟಿದಂತೆ ಆಗುತ್ತದೆ. ಚಳಿ ಬಹಳೇ ಇರುತ್ತದೆ. ಹಲ್ಲುಕಟಗರಿಸುತ್ತವೆ. ಹಲ್ಲುಕಟಗರಿಸುವಾಗ ಸಪ್ಪಳ ಸಹ ಆಗುತ್ತದೆ. ಕಾಲೊಳಗೆ ಪಿಂಡರಿಗಳಲ್ಲಿ ಕಳೆ ಬರುತ್ತವೆ. ಫೆರಂಫಾಸದ ಜತೆಗೆ ಇದನ್ನು ಕೊಡಬೇಕು. ಬೆವರು ಬಹಳ ಬರುತ್ತದೆ. ಪೈತ್ತಿಕ (ಪಿತ್ತ) ಜ್ವರದ ಮೇಲೆ ಸಹ ಇದನ್ನು ಕೊಡಬಹುದು.

**ತ್ವಚೆ:—** ಅಂಗಾಲಿನಲ್ಲಿ ಆಗುವ ಉರುವೂ ವೇದನೆಯೂ; ಬಿಳೇ ಪಕಳಿಗಟ್ಟುವ ಬೊಕ್ಕೆಗಳೂ: ಹುಣ್ಣುಗಳೂ; ಪಿತ್ತದ ಗಾದರಿಗಳೂ; ವಿಶೇಷತಃ ಮುಂಗೈ, ಮೊಳಕೈ, ಮೊಳಕಾಲು ಇವುಗಳಲ್ಲಿ ಆಗುವಂಥವು.

**ಇತರ ಅವಯವ:—** ಸೆಟೆಬೇನೆ; ವೇದನೆ; ಧನುರ್ವಾತ, ಮೈ ನಡುಗುವದು; ಅಪಾಯಕಾರಕ ಹಾಗೂ ಉತ್ತೇಜಕ ಪದಾರ್ಥಗಳ ಸೇವನದಿಂದಾಗುವ ದುಷ್ಪರಿಣಾಮ.

**ವೃದ್ಧಿ, ಕ್ಷಯ:—** ಈ ಔಷಧ ಕೊಡತಕ್ಕಂಥ ವೇದನೆಗಳು ಬಲಗಡೆ ಭಾಗದಲ್ಲಿಯೂ, ಶೀತೋಪಚಾರದಿಂದಲೂ, ಸ್ಪರ್ಶದಿಂದಲೂ ಹೆಚ್ಚಾ

ಗಿರುತ್ತವೆ. ಉಷ್ಣೋಪಚಾರ, ಒತ್ತೋಣ: ತಿಕ್ಕೋಣ, ಕಾಲು ಎತ್ತಿ ಹೊಟ್ಟೆಗೆ ಹಚ್ಚಿ ಕೊಂಡಿರೋಣ ಇವುಗಳಿಂದ ಸಮಾಧಾನವಾಗುತ್ತದೆ; ತಲೆ ದಿಮ್ಮು ಹಿಡಿಯೋಣ, ಮಸ್ತಕಶೂಲ (ತಲೆನೋವು) ಇವು ಬೈಲ ಹವೆಯಲ್ಲಿ ನಡೆದಾಡಿದ್ದರಿಂದ ಕಡಿಮೆಯಾಗುತ್ತವೆ. ಈ ಔಷಧ ಕೊಡತಕ್ಕ ಲಕ್ಷಣಗಳು ಇದ್ದಲ್ಲಿ ಉಷ್ಣೋಪಚಾರದಿಂದ ಯಾವಾಗಲೂ ಗುಣವಾಗುತ್ತದೆ.

**ಉಪಯೋಗ:**— ೬ × ಶಕ್ತಿಯ ಔಷಧ ಸಾಧಾರಣತಃ ಯಾವಾಗಲೂ ಕೊಡತಕ್ಕದ್ದು. ಬಿಸಿನೀರಿನಲ್ಲಿ ಔಷಧ ಕೊಟ್ಟಲ್ಲಿ ತೀವ್ರ ಉಪಯೋಗವಾಗುವದು. ೬× ಶಕ್ತಿಯಿಂದ ಗುಣಬರದಿದ್ದರೆ ೧× ವಾಗಲಿ ೨× ಶಕ್ತಿಯನ್ನಾಗಲಿ ಕೊಡಬೇಕು. ಬಹಳ ದಿವಸದ ಹೊಟ್ಟೆಶೂಲಿಯಲ್ಲಿ ೨× ರ ಉಪಯೋಗ ಮಾಡಬೇಕು; ಪ್ರಸೂತಿಕಾಲದ ಸೂಲಿಗಳೂ ಮೈ ಮುಳ್ಳುಹಿಡಿಯೋಣವೂ ಇವುಗಳ ಮೇಲೆ ೧× ಶಕ್ತಿಯ ಔಷಧ ಮೇಲಿಂದ ಮೇಲೆ ಕೊಡಬೇಕು. ಮುಟ್ಟಾಗುವ ಕಾಲದ ವೇದನೆಯ ಮೇಲೆಯೂ ಇತರತ್ರ ಆಗುವ ವೇದನೆಯ ಮೇಲೆಯೂ ಹೆಚ್ಚಿನ ಶಕ್ತಿಯ ಔಷಧ ಒಂದು ಸರತಿ ಯೋಜನೆಮಾಡಿ ಅನಂತರ ಮೇಲಿಂದ ಮೇಲೆ ಕಡಿಮೆ ಶಕ್ತಿಯನ್ನು ಕೊಡಬೇಕು. ಹೊಟ್ಟೆಶೂಲೆಯಲ್ಲಿ ೩೦× ಶಕ್ತಿಯ ಔಷಧ ಕೊಡುವದು ವಿಹಿತವೆಂದು ಹಲವು ಜನರ ಮತವಿರುತ್ತದೆ. ಆದರೆ ಈ ರೋಗದಲ್ಲಿ ೩× ಶಕ್ತಿಯ ಔಷಧದಿಂದಲೂ ಗುಣಬರುತ್ತದೆಂಬ ಅನುಭವ ನಮ್ಮದಿದೆ. ಸಾಧಾರಣವಾಗಿ ಮೊದಲು ಕಡಿಮೆ ಶಕ್ತಿಯನ್ನು ಕೊಡಬೇಕು. ಅದರಿಂದ ಗುಣಬರದಿದ್ದರೆ ಹೆಚ್ಚಿನ ಶಕ್ತಿಯ ಯೋಜನೆ ಮಾಡಬೇಕು.

**ಇತರ ಔಷಧಗಳ ಸಂಬಂಧ:**— ವಿಶೇಷತಃ ಜ್ಞಾನತಂತುಗಳ ಬೇನೆಗಳಲ್ಲಿಯೇ ಈ ಔಷಧದ ಉಪಯೋಗ; ಜ್ಞಾನತಂತುಗಳ ಬೇನೆಗಳಲ್ಲಿ ಇದರಂತೆಯೇ ಉಪಯೋಗವಾಗುವ ಔಷಧವೆಂದರೆ ಕಾಲೀ. ಫಾ; ಕಾ. ಫಾ. ಇದು ಮಿದುಳಿನ ಪೋಷಕ ದ್ರವ್ಯವು. ಚಲನ ಶಕ್ತಿಯು ನಷ್ಟವಾದಲ್ಲಿ ಕಾಲೀಫಾಸ ಇದು ಚನ್ನಾಗಿ ಕಾರ್ಯಮಾಡುವದು; ಆದರೆ ಮ್ಯಾ. ಫಾ. ಇದು ಸ್ನಾಯುಗಳ ಆಕುಂಚನ, ನಿಂತು ನಿಂತು ಬರುವ ವೇದನೆ ಇವುಗಳ ಮೇಲೆ ತನ್ನ ಕಾರ್ಯವನ್ನು ಸಾಧಿಸುವದು. ಮ್ಯಾ. ಫಾ. ವನ್ನು ಕೊಡತಕ್ಕ ವೇದನೆ ಶೀತೋಪಚಾರದಿಂದ ಹೆಚ್ಚಾಗುತ್ತದೆ; ಆದರೆ ಕಾಲೀ ಫಾ.

ಕೊಡತಕ್ಕ ವೇದನೆ ಶೀತೋಪಚಾರದಿಂದ ಕಡಿಮೆಯಾಗುತ್ತದೆ. ಜಂತುಗಳಾಗಿದ್ದು ದೃಷ್ಟಿಯು ಡೊಂಕಾಗಿದ್ದರೆ ನೇಟ್ರಂ ಫಾಸದ ಉಪಯೋಗವಾಗುತ್ತದೆ. ನೀರಿನಂತೆ ತೆಳ್ಳನ್ನ ಅತಿಸಾರವಿದ್ದಲ್ಲಿ ನೇಟ್ರಂಮೂರದ ಭಾವನೆಗಳನ್ನು ಲಕ್ಷ್ಯದಲ್ಲಿ ತರಬೇಕು. ಅಪಸ್ಮಾರದಲ್ಲಿ ಕಾಲೀ. ಮೂ., ಕಲ್ಕೆ. ಫಾ., ಸಿಲಿಸಿಯಾ ಇವುಗಳ ಸಂಗಡ ಸಂಬಂಧ ಬರುತ್ತದೆ. ತೀವ್ರವಾಗಿ ಹಾಗೂ ಮೇಲಿಂದ ಮೇಲೆ ಒದಲಾಗುವ ವೇದನೆಯಲ್ಲಿ ಕಾಲೀ ಸಲ್ಫದ ಸಂಗಡ ಇದರ ಸಂಬಂಧವಿರುತ್ತದೆ. ವಾತಜನ್ಯ (ಶೂಲೆ ಮುಂತಾದವು) ವಾಗಲಿ ಇತರ ಯಾವದೇ ರೋಗದಲ್ಲಿಯಾಗಲಿ ಮ್ಯಾ. ಫಾ. ದಿಂದ ಗುಣ ಬರದಿದ್ದರೆ ಕಲ್ಕೆ. ಫಾಸದ ಉಪಯೋಗ ಮಾಡಬೇಕು. (ಗುಣಧರ್ಮ ಪ್ರಕರಣ ಪುಟ ೮೪ ನೋಡಿರಿ)

**ಪ್ರಮಾಣ:—** ದರಸರ್ತೆ ೪।೫ ವಡೆಗಳನ್ನಾಗಲಿ ೩।೪ ಗುಂಜಿ ಚೂರ್ಣವನ್ನಾಗಲಿ ಕೊಡಬೇಕು. ಕಳೆ, ಸೆಟೆಬೇನೆ ಮುಂತಾದ ಶೀಘ್ರವಾಗಿ ಬರುವ ಬೇನೆಗಳಲ್ಲಿ ಬಿಸಿನೀರಿನೊಳಗಿಂದ ೧೦।೧೫ ಮಿನಿಟಿಗೊಮ್ಮೆಯಂತೆ ಕೊಡುತ್ತ ಹೋಗಬೇಕು. ಸಮಾಧಾನವಾಗಲಾರಂಭವಾದಲ್ಲಿ ನಡುವಿನ ಕಾಲದ ಅಂತರವನ್ನು ಬೆಳಿಸಬೇಕು. ಈ ಔಷಧ ಬಿಸಿನೀರಿನೊಳಗಿಂದ ಕೊಟ್ಟಲ್ಲಿ ಗುಣವು ತೀವ್ರ ಬರುವದು. ಹಳೇಬೇನೆಯಲ್ಲಿ ದರ ೩ ತಾಸಿಗೊಮ್ಮೆಯಂತೆ ದಿವಸದಲ್ಲಿ ೪।೫ ಸಾರೆ ಕೊಡಬೇಕು.

---

## ಸಿಲಿಕಾ

### Silica

**ಇತರ ಹೆಸರುಗಳು:—** ಸಿಲಿಕಂ ಆಕ್ಸಾಯಿಡ, ಆ್ಯಸಿಡಂ. ಸಿಲಿಕಮ್, ಸಿಲೆಕ್ಸ; ಫ್ಲಿಂಟ (ಗಾರಗಲ್ಲು ಬೆಣಚಗಲ್ಲು), ಕ್ವಾಟ್ಸ (ಸ್ಫಟಿಕ); ಇವೇ ಇದರ ಇತರ ಹೆಸರುಗಳು.

**ಕಾರ್ಯಕ್ಷೇತ್ರ:—** ತ್ವಚೆ; ಕೂದಲು; ಉಗುರು; ಸಂಯೋಜಕ ಧಾತು; ಅಸ್ಥಿಕವಚ; (ಎಲುವುಗಳ ಮೇಲಿನ ಪರಿ) ಜ್ಞಾನತಂತು, ಇವು

ಗಳಲ್ಲಿ ಇದು ಘಟಕದ್ರವ್ಯವೆಂದು ಇರುತ್ತದೆ. ರಕ್ತ, ಮೂತ್ರ. ಪಿತ್ತ, ಕೀವು ಇವುಗಳಲ್ಲಿಯೂ ಈ ಕ್ಷಾರವು ಅಲ್ಪ ಪ್ರಮಾಣದಲ್ಲಿ ಇರುತ್ತದೆ. ಹುಲ್ಲು, ಧಾನ್ಯ ಮುಂತಾದ ಉದ್ಭಿಜ ಪದಾರ್ಥಗಳಲ್ಲಿ ಸಿಲಿಕಾ ಕ್ಷಾರವು ಹೆಚ್ಚು ಪ್ರಮಾಣದಲ್ಲಿ ಇರುವದು; ಆದರೆ ಆ ಮಾನದಿಂದ ಪ್ರಾಣಿಗಳಲ್ಲಿ ವಿಶೇಷತಃ ಮನುಷ್ಯಪ್ರಾಣಿಯಲ್ಲಿ ಬಹಳೇ ಕಡಿಮೆ ಪ್ರಮಾಣದಲ್ಲಿ ಇರುವದು. ಮಾನವೀಶರೀರದಲ್ಲಿ ಕ್ಷಾರದ ಹೆಚ್ಚುಕಡಿಮೆ ಪ್ರಮಾಣದ ಮೇಲೆ ಆಯಾ ಕ್ಷಾರದ ಮಹತ್ವವು ಅವಲಂಬಿಸಿರುವದಿಲ್ಲ. ಯಾವದೇ ಕ್ಷಾರವು ಕಡಿಮೆಪ್ರಮಾಣದಲ್ಲಿದ್ದರೂ ಸಹ ಶರೀರಕ್ಕೆ ಆ ಕ್ಷಾರದ ಅವಶ್ಯಕತೆಯು ಇದ್ದಲ್ಲಿ, ಇತರ ಅವಶ್ಯಕ ಹಾಗೂ ಹೆಚ್ಚು ಪ್ರಮಾಣದ ಕ್ಷಾರದಷ್ಟೇ ಅದರ ಮಹತ್ವವೆಂದು ತಿಳಿಯತಕ್ಕದ್ದು. ಆ ಕಡಿಮೆ ಪ್ರಮಾಣದ ಕ್ಷಾರದ ಪ್ರಮಾಣವು ಕಡಿಮೆಯಾದಲ್ಲಿ ಶರೀರದಲ್ಲಿ ವ್ಯತ್ಯಾಸವಾಗುತ್ತದೆ. ಮತ್ತು ಕಡಿಮೆಯಾದ ಪ್ರಮಾಣವನ್ನು ಪೂರೈಸಿಕೊಟ್ಟಲ್ಲಿ ಆ ವ್ಯತ್ಯಾಸವು ಇಲ್ಲದಂತಾಗುತ್ತದೆಂಬದನ್ನು ಸಿದ್ಧಮಾಡಲು ಶಕ್ಯವಿರುವವರೆಗೆ ಮೂಳ ಪ್ರಮಾಣವು ಹೆಚ್ಚಾಗಲಿ ಕಡಿಮೆಯಾಗಲಿ ಅದರ ವಿಚಾರಮಾಡುವದು ಅನವಶ್ಯಕವು. ಶರೀರದಲ್ಲಿ ಈ ಕ್ಷಾರದ ಕಾರ್ಯವು ಯಾವ ಪ್ರಕಾರದಿಂದ ನಡೆಯುತ್ತದೆಂಬದು ಇನ್ನೂ ಶಾಸ್ತ್ರದೃಷ್ಟಿಯಿಂದ ಸ್ಪಷ್ಟವಾಗಿ ತಿಳಿದು ಬಂದಿಲ್ಲ. ಆದರೆ ಚಿಕಿತ್ಸೆಯಲ್ಲಿ ಅದರ ಉಪಯೋಗವು ಬಹಳ ಆಗುತ್ತದೆಂಬದು ಅನುಭವದಿಂದ ಸಿದ್ಧವಾದ ಸಂಗತಿಯೇ ಸರಿ.

ಸಿಲಿಕಾದ ಕೆಲವು ಲಕ್ಷಣಗಳನ್ನೂ ಚಿಕಿತ್ಸೆಯಲ್ಲಿಯ ಅನುಭವವನ್ನೂ ಲಕ್ಷದಲ್ಲಿ ತಂದಲ್ಲಿ ಈ ಔಷಧವು ಅಸ್ಥಿ, ಸಂಧು, ಗ್ರಂಥಿ, ತ್ವಚೆ, ಶ್ಲೇಷ್ಮಲ ತ್ವಚೆ, ಮುಂತಾದವುಗಳ ಬೇನೆಗಳಲ್ಲಿ, ಗುಣಕೊಟ್ಟಂತೆ ಕಂಡುಬಂದಿದೆ. ಗಂಡಮಾಲೆಯ ಪ್ರಕೃತಿಯುಳ್ಳಂಥ ಹಾಗೂ ಪೌಷ್ಟಿಕ ಅನ್ನ ಸಾಕಷ್ಟು ಸಿಗದೇ ಇದ್ದಂಥ ಮತ್ತು ತಿಂದ ಅನ್ನ ಮೈಗೆ ಹತ್ತದಂಥ ರೋಗಿ ಜನರ ಬೇನೆಗಳಲ್ಲಿ ಈ ಔಷಧವು ಬಹುತರವಾಗಿ ಹಿತಾವಹವಾಗುತ್ತದೆ. ಈ ಔಷಧದ ಕಾರ್ಯವು ಅಥವಾ ಪರಿಣಾಮವು ಬಹುದಿವಸ ಬಾಳುವಂತೆ ಇರುತ್ತದೆ. ಆದ್ದರಿಂದ ಬಹುದಿವಸದ ಬೇನೆಯಲ್ಲಿ ಇದನ್ನು ಮೇಲಿಂದ ಮೇಲೆ ಕೊಡದೇ ಇರುವದು ಲೇಸು.

ಶರೀರದಲ್ಲಿ ಎಲ್ಲಿಯೆ ಆಗಲಿ ಕೀವು ಸೋರುತ್ತಿರೋಣ, ಬಹಳ ದಿವಸದು ಮತ್ತು ಕೀವು ಉತ್ಪನ್ನವಾಗುವರೋಗ, ಬಹಳ ಒಳತನಕ ಹೋದ ಗಾಯುಗಳು, ವ್ರಣ, ಭಗಂದರ ಮುಂತಾದ ವಿಕೃತಿಗಳ ಮೇಲೆ ಈ ಔಷಧವು ನಿಃಸಂಶಯ ಗುಣಕೊಡುವದು. ತ್ವಚೆಯಲ್ಲಾಗಲಿ, ಸಂಯೋಜಕ ಧಾತುಗಳಲ್ಲಾಗಲಿ ( ಅಸ್ಥಿ ಮುಂತಾದವು ) ಎಲ್ಲೆಲ್ಲಿ ದಾಹ ಉತ್ಪನ್ನವಾಗಿ ಕೀವು ಆಗುತ್ತದೊ ಅಲ್ಲಲ್ಲಿ ಸಿಲಿಕಾ ಕ್ಷಾರವನ್ನು ಉಪಯೋಗಿಸಬೇಕು. ಗಂಡಮಾಲಾ ಪ್ರಕೃತಿ; ಬಹುದಿವಸದ ಹಾಗೂ ಮೈಯಲ್ಲಿ ಭೇದಿಸಿದ ಅಶಕ್ತತೆ. ಪೂಯಜನ್ಯ ವಿಕೃತಿ ಇವುಗಳ ಮೇಲಿನ ಮಹತ್ವದ ಔಷಧವಿದು. ಶೀಘ್ರವಾಗಿ ಬೆಳೆಯುವ ರೋಗಗಳಲ್ಲಿ ಬಹಳಾಗಿ ಇದರ ಉಪಯೋಗವಾಗುವದಿಲ್ಲ, ಆದರೂ ಕುರುವು, ಹುಣ್ಣು, ಸರೋಲ, ಉಗುರುಸುತ್ತು, ಸೋರುವ ಗಾಯುಗಳು ಇವುಗಳಿಂದ ಕೀವು ಬಹಳ ಸೋರುತ್ತಿದ್ದಲ್ಲಿ ಸಿಲಿಕಾದ ಉಪಯೋಗವು ಬಹಳಾಗುತ್ತದೆ. ಕೀವು ಆದನಂತರ ಕೀವನ್ನು ಸೋರಿಸಿ ಹುಣ್ಣು ನೆಟ್ಟಗೆ ಮಾಡಲಿಕ್ಕೆ ಇದು ಬಹಳೇ ಸಹಾಯಕರವಾಗುತ್ತದೆ. ಕೀವು ಹುಟ್ಟಲಾರಂಭವಾದನಂತರ ಅಂದರೆ ಒಳಗೆ ಠುಸು ಠುಸು ಅನ್ನ ಹತ್ತಿದನಂತರ ಕೀವು ತೀವ್ರವಾಗಿ ತಯಾರಮಾಡಲಿಕ್ಕೆ ಸಹಾಯಮಾಡಿ ಹುಣ್ಣನ್ನು ಹಣ್ಣುಮಾಡಿ ಶಸ್ತ್ರದವಿನಃ ಹುಣ್ಣಿಗೆ ಬಾಯಿಮಾಡಿ ಕೀವು ಹರಿಯಲು ಸಹಾಯವಾಗುತ್ತದೆ. ಕೊಳೆಯುವಂಥ ಭಾಗವನ್ನು ಹಣ್ಣುಮಾಡಿ ( ಕೀವು ) ಹರಿಯಲಾರಂಭಮಾಡುವ ಕಾರ್ಯಮಾಡಲು ಇದರಲ್ಲಿ ಶಕ್ತಿಯುಂಟು, ಕೀವು ಸಿದ್ಧಮಾಡುವ ಕಾರ್ಯದಲ್ಲಿ ಕಲ್ಕೆ. ಸ. ಹಾಗೂ ಸಿಲಿಕಾ ಈ ಎರಡು ಔಷಧಗಳ ಸಂಬಂಧ ನಿಕಟವದೆ. ಎರಡರಲ್ಲಿಯೂ ಲಕ್ಷದಲ್ಲಿಡುವಂಥ ವೈಶಿಷ್ಟ್ಯ ( ಹೆಚ್ಚುಕಡಿಮೆ ) ವು ಮುಂದೆ ಹೇಳಿದೆ. ಸಿಲಿಕೆಯು ಹುಣ್ಣುಗಳನ್ನು ಹಣ್ಣುಮಾಡುತ್ತದೆ. ಅಂದರೆ ಕೀವು ತೀವ್ರವಾಗಿ ತಯಾರಮಾಡಲು ಸಹಾಯಮಾಡುತ್ತದೆ. ಕಲ್ಕೆ. ಸಲ್ಫ ಇದು ಕೀವು ತಯಾರಮಾಡುವ ಕ್ರಿಯೆಯನ್ನು ನಿಲ್ಲಿಸುತ್ತದೆ. ಮತ್ತು ಸೋರುವ ಹುಣ್ಣುಗಳನ್ನು ನೆಟ್ಟಗೆ ಮಾಡಲು ಸಹಾಯಮಾಡುತ್ತದೆ. ಕೀವು ಆಗುವ ಪೂರ್ವದಲ್ಲಿ ಕಲ್ಕೆ. ಸಲ್ಫ ಕೊಟ್ಟಲ್ಲಿ ಕೀವು ಆಗುವ ಕಾರ್ಯವು ನಿಲ್ಲುತ್ತದೆ. ಕೀವು ಆಗುವ ಕ್ರಿಯೆ ಪ್ರಾರಂಭವಾದ ನಂತರ ಸಿಲಿಕಾ ಕೊಟ್ಟಲ್ಲಿ ಕೀವು

ತೀವ್ರವಾಗಿ ಆಗುತ್ತದೆ. ದಾಹಯುಕ್ತ ಬಾವಿನಲ್ಲಿ ಮೊದಲು ಫೇರಂ. ಫಾ. ಮತ್ತು ಕಾಲೀಮೂರ ಕೊಡತಕ್ಕದ್ದು. ಆದರೆ ಅವುಗಳಿಂದ ಕೀವಾಗುವದು ನಿಲ್ಲದಿದ್ದರೆ ಸಿಲಿಕೆಯನ್ನು ಕೊಡಲಾರಂಭಿಸಬೇಕು. ಅಂತಃಸೇಕ ಅಥವಾ ಅಂತರ್ಗಲನದ (ಒಳಗೆ ಹೀರಿಕೊಳ್ಳಲ್ಪಡುವ) ಕಾರ್ಯ ನಡೆದಿರುವವರೆಗೆ ಕೀವು ಉತ್ಪನ್ನಮಾಡುವದರ ಸಲುವಾಗಿ ಸಿಲಿಕೆಯನ್ನೇ ಕೊಡತಕ್ಕದ್ದು. ಕೀವು ಸಿದ್ಧವಾದ ನಂತರ ಅಂತರ್ಗಲನದ ಕಾರ್ಯವು ನಿಲ್ಲುತ್ತದೆ. ಆದ್ದರಿಂದ ಅಂತರ್ಗಲನದ ಕಾರ್ಯವು ನಡೆಯುವವರೆಗೆ ಸಿಲಿಕೆಯನ್ನೇ ಕೊಡುವದು ಅವಶ್ಯಕವು. ಗಾಯವು ತುಂಬಿ ಬರದೇ ಇದ್ದು ಕೀವು ಒಳಗೆ ಹೀರಿಕೊಳ್ಳಲ್ಪಡುತ್ತಿದ್ದರೆ ಕಲ್ಕೆ. ಸ. ಕೊಡಬೇಕಾಗುವದು.

ಅಸ್ಥಿಕವಚದ ( ಎಲುವಿನ ಮೇಲಿನ ಪರಿ ) ಬೇನೆಗಳಲ್ಲಿಯೂ ಬಹಳೇ ಒಳಭಾಗದಲ್ಲಿ ಆಗುವ ಹುಂಣುಗಳಲ್ಲಿಯೂ ದಪ್ಪ ಹಾಗೂ ಹಳದೀ ಬಂಣದ ಕೀವು ಉಂಟಾಗುವ ಹುಂಣುಗಳಲ್ಲಿಯೂ, ಅವು ಮಾಯದೇ ಒಳಗಿಂದೊಳಗೆ ಮೇಯುತ್ತ ಹೋಗಿ ವ್ರಣ, ಭಗಂದರ, ಮಾಂಜರೀಬೇನೆ ( ಕೊಂಕಳದಲ್ಲಾಗುವ ಕುರುವು ), ಕಂಣುಚಿಟ್ಲಿ ಮುಂತಾದ ಕುರುವುಗಳಲ್ಲಿಯೂ ವಿಶೇಷತಃ ಬೇಸಿಗೆ ಕಾಲದಲ್ಲಿ ಮೈಮೇಲೆ ಅಲ್ಲಲ್ಲಿ ಕೂಡಲುಗುರುವು, ಉಪದಂಶದ ಕುರುವು, ಗ್ರಂಥಿಶೋಥ ಮುಂತಾದ ಹುಂಣುಗಳಲ್ಲಿಯೂ ಇದು ಪ್ರಮುಖ ಔಷಧವು. ಕೇವಲ ರಕ್ತಸ್ರಾವವಾಗಲಿ ಜಲಮಿಶ್ರಿತ ರಕ್ತಸ್ರಾವವಾಗಲಿ ಆಗುತ್ತಿದ್ದಲ್ಲಿ ಅದನ್ನು ರಸವಾಹಿನಿಗಳ (Lymphatics) ದ್ವಾರದಿಂದ ಶೋಷಣಮಾಡಿಕೊಳ್ಳುವ ಶಕ್ತಿಯು ಈ ಔಷಧದಲ್ಲಿದೆ. ಈ ಪ್ರಕಾರದಲ್ಲಿ ಕಲ್ಕೆರಿಯಾ ಫಾ. ನಂತರ ಇದನ್ನು ಕೊಡತಕ್ಕದ್ದು. ಹಳೇ ಅಂಗುಲಿವಾತದಲ್ಲಿಯೂ (gouts) ಸಂಧಿವಾತದಲ್ಲಿಯೂ ಇದನ್ನು ಕೊಡಬಹುದು. ಕಾಲಿಗೆ ಬಿಡುವ ಬೆವರು ನಿಂತಲ್ಲಿ ಈ ಔಷಧದಿಂದ ಅದು ಪೂರ್ವವತ್ ಬಿಡಲಾರಂಭಿಸುತ್ತದೆ. ಕಾಲಿಗೆ ಬಿಡತಕ್ಕ ಬೆವರು ನಿಂತುಹೋದ್ದರಿಂದ ಆಗುವ ಬೇನೆಗಳಲ್ಲಿ ಇದು ಮುಖ್ಯ ಔಷಧವು. ಕಾಲ ಬೆವರು ನಿಂತದ್ದರಿಂದಾಗುವ ದೃಷ್ಟಿ ದುರ್ಬಲತೆ ಮೋತೀಬಿಂದು ( ಕಂಣುಪರೆ ) ಅರ್ಧಾಂಗವಾಯು, ನಷ್ಟಾರ್ತವ, ಕ್ಷಯ ಮುಂತಾದ ಬೇನೆಗಳು ಉದ್ಭವಿಸುತ್ತವೆ. ಈ ಬೇನೆಗಳಲ್ಲಿ ಈ ಔಷಧವು

ಗುಣ ಕೊಡುವದು. ಮಿದುಳಿನಲ್ಲಿಯು ಸಂಯೋಜಕ ಪರಿಗಳಲ್ಲಿ ಸಿಲಿಕಾದ ಪ್ರಮಾಣ ಕಡಿಮೆಯಾದ್ದರಿಂದ ಮಿದುಳಿನ ಮೇಲೆ ಪರಿಣಾಮವಾಗಿ ವಿಚಾರ ಶಕ್ತಿಯು ನಷ್ಟವಾಗುತ್ತದೆ. ಮಾಂದ್ಯ, ಮ್ಲಾನತೆ, ಯಾವತ್ತೂ ನಿದ್ದೆ ಯಲ್ಲಿದ್ದಂತೆ ಇರೋಣ, ಕಾಳಜಿ ಹುಟ್ಟುವಂಥ ಸ್ವಪ್ನಗಳು. ಮಾನಸಿಕ ಕ್ಷೋಭ, ನಿರುತ್ಸಾಹ, ವಿಚಾರಶಕ್ತಿ ನಷ್ಟವಾಗೋಣ, ತಲೆಶೂಲಿ, ಕಂಪ; ಅರ್ಧಾಂಗವಾತದ ಭಾವನೆಗಳು, ಮುಂತಾದ ಲಕ್ಷಣಗಳು ಸಂಯೋಜಕ ಪರಿಯಲ್ಲಿಯು ಸಿಲಿಕಾದ ಪ್ರಮಾಣದ ಕೊರತೆಯು ದ್ಯೋತಕಗಳೇ ಸರಿ. ಸೂಕ್ಷ್ಮ ಪ್ರಮಾಣದಲ್ಲಿ ಈ ಕೊರತೆಯನ್ನು ತುಂಬಿ ಬಿಟ್ಟಲ್ಲಿ ಈ ಲಕ್ಷಣ ಗಳೆಲ್ಲ ನಷ್ಟವಾಗುವವು.

---

## ಪ್ರಮುಖ ಲಕ್ಷಣಗಳು

**ಮಿದುಳು:—** ರೋಗಿಯು ನಿರಾಶನಾಗಿದ್ದು ತನ್ನ ಜೀವವು ತನಗೆ ಬೇಸರವಾಗಿರುತ್ತದೆ; ಏಕಾಗ್ರಚಿತ್ತವಾಗುವದಿಲ್ಲ. ವಿಚಾರ ಬರುವದೇ ಇಲ್ಲ; ಶರೀರದಿಂದ ಶಕ್ತಿಹೀನನು. ಆದರೆ ಮನಸ್ಸಿನಿಂದ ಸಶಕ್ತ ಹಾಗು ಗಟ್ಟಿಯಾಗಿರುತ್ತಾನೆ. ಚಿಂತಾತುರ, ತ್ರಾಸಿಕ, ಸಿಡುಕ; ಮಿದುಳಿನ ದಣುವಿಕೆ; ಸ್ವಲ್ಪ ಮಾನಸಿಕಶ್ರಮ ಮಾಡಿದ ಕೂಡಲೆ ದಣುವಿಕೆಯಾಗು ತ್ತದೆ. ಚಿತ್ತೈಕಾಗ್ರತೆಯಾಗದ ಕಾರಣ ಸಾಲೆಗೆ ಹೋಗುವ ಹುಡುಗೆಯು ರಲ್ಲಿ ಪಠಣಶಕ್ತಿಯು ಅಭಾವವು; ವಿಚಾರ ಮಾಡಲು ಆಗುವದಿಲ್ಲ.

**ಮಸ್ತಕ (ತಲೆ):—** ಕಂಣಿಗೆ ಕತ್ತಲೆ ಬರೋಣ, ಛವಳಿ ಮುಂದಕ್ಕೆ ಆಗಲೀ ಎಡಭಾಗದಲ್ಲಾಗಲೀ ಬೀಳುವೆನೆಂಬ ಭಾವನೆ; ಕಂಣಿಗೆ ಕತ್ತಲೆ ಬಂದು ತಲೆಶೂಲಿಯುಂಟಾಗುತ್ತದೆ ಹಾಗೂ ತಲೆಯ ಮೇಲೆ ಬಟಗಡಲಿ ಯಷ್ಟು ಸಂಣ ಸಂಣ ಗಂಟುಗಳು ಏಳುತ್ತವೆ; ತಲೆಶೂಲಿ ಹೆಚ್ಚಾಗುತ್ತದೆ, ನಾಡಿಗಳು ಹಾರಲಾರಂಭಿಸುತ್ತವೆ; ತಲೆ ತಂಣಗಾಗುತ್ತದೆ; ಮೇಲಿಂದ ಮೇಲೆ ಬಿಗಿದುಕೊಳ್ಳಬೇಕಂತೆ ಅನಿಸುತ್ತದೆ; ಶೀರ್ಷ ಪೃಷ್ಠಭಾಗದಿಂದ ಮುಂದಿನ ಭಾಗದಲ್ಲಿ ಸಳಕು ಬರಲಾರಂಭಿಸುತ್ತವೆ. ಬಲಭಾಗದಲ್ಲಿ ಹೆಚ್ಚಾ

ಹೋರುತ್ತವೆ; ಗದ್ದಲ, ಶ್ರಮ, ಬೆಳಕು, ಓದೋಣ ಮುಂತಾದವುಗಳಿಂದ ಹೆಚ್ಚಾಗುತ್ತವೆ; ಕಾಸಿಕೊಳ್ಳುವದರಿಂದಲೂ ಉಷ್ಣೋಪಚಾರದಿಂದಲೂ ಸಮಾಧಾನವಾಗುತ್ತದೆ. ಸಂನ್ಯಾಸ ಅಥವಾ ಕ್ಷಿಪ್ರಸಂಸೆ (ಗಾಢ ಮೂರ್ಛೆ—Apoplexy) ಯಲ್ಲಿ ಮೂರ್ಛೆ ಬರುವ ಪೂರ್ವದಲ್ಲಿ ತಲೆಯ ಎಡಭಾಗದಲ್ಲಿ ಚುಚ್ಚಿದಂತೆ ವೇದನೆ ಹೊರಡುತ್ತದೆ ಮತ್ತು ಕೈಗಳು ಜಡವಾಗಿ ನೋಯಲಾರಂಭಿಸುತ್ತವೆ. ತಲೆಗೆ ಸ್ಪರ್ಶ ಸಹನವಾಗುವದಿಲ್ಲ. ತಿಂಡಿ ಬಿಡುತ್ತದೆ. ಕೀವು ತುಂಬುವಂಥ ಬೊಕ್ಕೆಗಳು ಏಳುತ್ತವೆ. ಅಕಾಲಕ್ಕೆ ವೇದನೆ ಸಹ ಇರುತ್ತದೆ. ಸೋರುವಂಥ ಹುಣ್ಣಿನೊಳಗಿಂದ ಗಟ್ಟಿ ಹಳದಿ ಕೀವು ಬರುತ್ತದೆ. ಸಣ್ಣ ಹುಡುಗರಿಗೆ ತಲೆಯಲ್ಲಿ ಬೆವರು ಬರುತ್ತದೆ, ನೆತ್ತಿ ತುಂಬಿದ್ದು ಇರುವದಿಲ್ಲ (ಕಲ್ಕೆ. ಫಾ.) ತಲೆಯು ಯಾವಾಗಲೂ ಉಣ್ಣೆಯ ಬಟ್ಟೆಯಿಂದ ಕಟ್ಟಿಕೊಂಡಿರಬೇಕೆಂದೆನಿಸುತ್ತದೆ. ಕೂದಲುಗಳು ಉದುರಿಬೀಳುತ್ತವೆ. (ಕಾ. ಸ.) ತಲೆಯ ಮೇಲೆ ಹುಣ್ಣು.

**ನೇತ್ರ:** — ಅಶ್ರುನಾಡೀ ವ್ರಣ; (Lacrimal fistula = ನೇತ್ರ-ಭಗಂದರ); ಈ ನಾಡೀ ವ್ರಣದಿಂದ ಕೀವೂ ನೀರೂ ಸೋರುತ್ತದೆ: ಕಣ್ಣಿನಲ್ಲಿ ಚಿಟ್ಟಿ; ಕಣ್ಣು ಹಾಗೂ ಕಣ್ಣು ರೆಪ್ಪೆಯ ಸುತ್ತಮುತ್ತಲು ಕುರುವುಗಳು; ಕಣ್ಣು ಗುಡ್ಡಿಯ ಮೇಲೆ ವ್ರಣ; ಕೊಳೆತು ಕಡಿದು ಬೀಳುವಂಥ ವ್ರಣ; ಮೋತೀಬಿಂದು; ಕಾಲಿಗೆ ಬಿಡುವ ಬೆವರು ಬರದೇ ಇದ್ದಲ್ಲಿ ಆಗುವ ದೃಷ್ಟಿ ದುರ್ಬಲತೆ; ಓದುವಾಗ ಬರೆಯುವಾಗ ಅಕ್ಷರಗಳು ಒಂದರಲ್ಲೊಂದು ಕೂಡಿದಂತೆ ಕಾಣಿಸುತ್ತವೆ. ಮೈಲಿ ಬಂದು ಹೋದನಂತರ ಕಣ್ಣಲ್ಲಿ ಆಗುವ ವ್ರಣ ಹಾಗೂ ಸೋರುವ ಪಿಚ್ಚು; ಕಣ್ಣು ಬರೋಣ; ಕಣ್ಣೊಳಗಿಂದ ದಟ್ಟ ಹಳದೀ ಸ್ರಾವವು ಹೋಗುವದು; ಕಣ್ಣುಸೂಲಿ; ವಿಶೇಷವಾಗಿ ಬಲಭಾಗದಲ್ಲಿ.

**ಕಿವಿ:** — ದೊಡ್ಡ ಧ್ವನಿಯು ಸಹಸವಾಗುವದಿಲ್ಲ; ಕಿವಿಯಲ್ಲಿ ಘಣ ಘಣಿಸುವ ಸಪ್ಪಳ; ಕರ್ಣನಲಿಕೆಯಲ್ಲಿ ಸೀತವಾದ್ದರಿಂದ ಬಂದ ಬಧಿರತೆ; ಕಿವಿಯ ಸುತ್ತಮುತ್ತಲು ಕುರುವುಗಳು; ಒಡೆದ ಕಿವಿಯೊಳಗಿಂದ ಸೋರುವ ಹಳದೀ ಬಣ್ಣದ ಸ್ರಾವವು. ಈ ಔಷಧದ ಧಾವನಜಲದಿಂದ ಕಿವಿ ತೊಳೆಯು

ಬೇಕು; ಕರ್ಣಾಸ್ಥಿಯು ಕೊಳೆತಿದ್ದು ಅದರಿಂದ ದುರ್ಗಂಧ ಕೀವು ಬರುತ್ತದೆ. ಸ್ನಾನದ ನಂತರವಾಗಲಿ ಈಸಿದ ನಂತರವಾಗಲಿ ಕರ್ಣದಾಹ.

**ಮೂಗು:**— ಮೂಗಿನ ತುದಿಯು ಕೆಂಪಗೆ; ಮೂಗಿನ ಹೊಳ್ಳೆಗಳಲ್ಲಿ ತಿಂಡಿ; ಸೀನು; ಚಳಿ; ನೆಗಡಿ; ದಟ್ಟ ಹಾಗು ಹೊಲಸು ಸುಂಬಳ; ಪಿನಸಿಯಿದ್ದು ಹೊಲಸು ಸುಂಬಳ; ಉಪದಂಶದಲ್ಲಿಯಾಗಲಿ ಕ್ಷಯದ ಪ್ರಕೃತಿಯಲ್ಲಾಗಲಿ ಮೂಗಿನ ಎಲುವು ಕೊಳೆತಿದ್ದು ಹೊಲಸು ಸ್ರಾವವು ಹೋಗುತ್ತಿದ್ದರೆ ಈ ಔಷಧವು ಹಿತಕರವು. ಮೂಗಿನ ಸುತ್ತುಮುತ್ತಲು ಸಣ್ಣ ಸಣ್ಣ ಬೊಕ್ಕೆಗಳು. ಹಳೆಯ ವ್ರಣವಿದ್ದು ಆದರೊಳಗಿಂದ ಉರಿಯುವಂಥ ಸ್ರಾವವು ಹೋಗುತ್ತಿದ್ದರೆ.

**ಮುಖಚರ್ಯೆ:**— ಮುಖದಮೇಲೆ ಸಣ್ಣ ಸಣ್ಣ ಗಂಟುಗಳು. ಅವುಗಳಿಂದ ನೋವು ಆಗುವದು. ಮೋರೆಯಮೇಲೆ ಬೊಕ್ಕೆಗಳು. ಅವುಗಳೊಳಗಿಂದ ದಟ್ಟನ್ನ ಹಳದೀ ಸ್ರಾವವು ಹೋಗುತ್ತದೆ. ಗದ್ದದ ಎಲುವು ಕೊಳೆಯುತ್ತದೆ.

**ಮೋರೆ:**— ಲಾಲಾ ಗ್ರಂಥಿಗಳಲ್ಲಿ ಕೀವು. ( ಗಟ್ಟಿ ಹಳದೀ ಕೀವು ಸೋರುತ್ತದೆ. ) ಬಾಯಿ ಒರುವದು. ಬಾಯಿಯ ತುದಿ ಎಲುವಿನಲ್ಲಿ ವ್ರಣ.

**ನಾಲಿಗೆ:**— ನಾಲಿಗೆಯು ಬಿರುಸಾಗಿಯೂ ಗಟ್ಟಿಯಾಗಿಯೂ ಇರುವದು. ನಾಲಿಗೆಯ ಮೇಲೆ ಹುಣ್ಣು. ನಾಲಿಗೆಯಮೇಲೆ ಕೂದಲು ಇದ್ದಂತೆ ಅನಿಸುವದು.

**ಹಲ್ಲು:**— ಹಲ್ಲುಗಳು ಸಡಿಲಾಗುವವು; ಸ್ವಲ್ಪ ಒತ್ತಿದರೆ ಒಸಡಿಗಳು ನೋಯುವವು; ಹಲ್ಲಿನಲ್ಲಿ ಅತಿಶಯ ನೋವು; ಅದು ರಾತ್ರಿಯಲ್ಲಿ ಹೆಚ್ಚಾಗುವದು; ಉಷ್ಣೋಪಚಾರದಿಂದಾಗಲಿ ಸೀತೋಪಚಾರದಿಂದಾಗಲಿ ಸಮಾಧಾನವಾಗುವದಿಲ್ಲ; ಕಾಲಿಗೆ ಚಳಿ ತಾಕಿ ಹಲ್ಲುಬೇನೆಯಾಗಿದ್ದರೆ ಈ ಔಷಧದ ಉಪಯೋಗವಾಗುವದು; ಒಸಡಿಗಳಲ್ಲಿ ಕುರುವು; ಹಲ್ಲಿನಮೇಲೆ ವ್ರಣ ಮತ್ತು ಅದರಿಂದ ಹಲ್ಲುಬೇನೆ; ವೇದನೆ ಬಹಳ, ಒಳಗಿನ ಭಾಗದಲ್ಲಿದ್ದಂತೆ ಭಾವನೆ; ಹಲ್ಲಿನೊಳಗಿಂದ ಕೀವು ಸೋರುವದು.

**ಗಂಟಲು**:— ಗಂಟಲ ವಾಳವು ಬೆಳೆಯುವದು; ಕಿರಿನಾಲಿಗೆಯು ದಾಹ; ಕಿರಿನಾಲಿಗೆ ಇಳಿಯುವದು; ಕಿರಿನಾಲಿಗೆಯಲ್ಲಿ ಕೀವಾಗಹತ್ತಿದರೆ ಅದನ್ನು ಬೇಗನೆ ಹಣ್ಣುಮಾಡಲಿಕ್ಕೆ ಈ ಔಷಧವನ್ನು ಕೊಡಬೇಕು; ಇದರಿಂದ ಗುಣ ಬರದಿದ್ದರೆ, ಅಂತರ್ಗಲನವು ಪ್ರಾರಂಭವಾದರೆ, ಕಲ್ಕೆ. ಸ. ಕೊಡಬೇಕು. ಗಂಟಲದಲ್ಲಿ ವ್ರಣ; ದಟ್ಟವಾದ ಹಳದೀ ಕಫವು ಬೀಳುತ್ತದೆ.

**ಜಠರ**:— ಕೂಸುಗಳು ತಿಂದಕೂಡಲೆ ಕಾರುತ್ತವೆ; ಕಾರಿಕೆ ಹುಳಿಯಾಗಿರುವದಿಲ್ಲ; ( ಕಲ್ಕೆ. ಫಾ. ಫೇರಂ. ಫಾ. ) ಮಾದಕ ಪದಾರ್ಥಗಳು ಮೈಗೆ ಹತ್ತುವದಿಲ್ಲ; ಬಹಳ ದಿನದ ಅಗ್ನಿಮಾಂದ್ಯ; ಗಂಟಲದಲ್ಲಿ ಹುಳಿ ಸುಡುತ್ತದೆ; ಹುಳಿ ತೇಗು ಬರುತ್ತವೆ; ಮೈಗೆ ಮುಳ್ಳು ಬರುವದು; ಈ ಲಕ್ಷಣಗಳಿದ್ದರೆ ಈ ಔಷಧವು ವಿಶೇಷವಾಗಿ ಉಪಯೋಗವಾಗುವದು. ( ನೇಟ್ರಂ. ಫಾ. ಕಲ್ಕೆ. ಫಾ. ) ಮುಂಜಾನೆ ವಾಂತಿಯಾಗುವದು; ಬಿಸಿ ಅನ್ನದ ಹಾಗು ಮಾಂಸದ ಬೇಸರ; ಅರುಚಿ; ಹಸಿವೆ ಬಹಳ ಆಗುತ್ತದೆ;

**ಉದರವೂ ಮಲವೂ**;— ಯಕೃತ ವಿದ್ರಧಿ ( ಯಕೃತದಮೇಲೆ ಆಗುವ ಕುರುವು ); ಯಕೃತವು ಗಟ್ಟಿ ಹತ್ತುತ್ತದೆ, ಸಣ್ಣ ಹುಡುಗರ ತುಟಿ ಬಾಯುವದು; ಬಹಳ ಹೊಲಸು ಜುಲಾಬವಾಗಿ ತಲೆಗೆ ಬೆವರು ಬಿಡುತ್ತಿದ್ದರೆ ಈ ಔಷಧವು ನಿಶ್ಚಿತವಾಗಿ ಗುಣಕಾರಿಯು. ಗೆಜ್ಜೆಯಲ್ಲಿಯ ಗ್ರಂಥಿಗಳು ದೊಡ್ಡವಾಗುವವು; ಮೈಲೀ ಚುಚ್ಚಿದನಂತರ ಹುಡುಗರಿಗೆ ಆಗುವ ಹೊಲಸು ಅತಿಸಾರವು; ಮಲಕ್ಕೆ ಕೊಳೆತ ನಾತ ಬರುತ್ತದೆ; ತಲೆಗೆ ಹುಳಿ ಬೆವರು ಬರುತ್ತದೆ; ಉದರ ಭಾಗವು ಗಟ್ಟಿಯಾಗಿ ಬಾತಂತೆ ಬಿಸಿ ಇರುತ್ತದೆ; ಜುಲಾಬು ತಿಳಿನೀರಿನಂತೆ ಹೊಲಸಾಗಿಯೂ ಹಳದೀ ಬಣ್ಣದ್ದೂ ಇರುತ್ತದೆ; ಅವರೋಧಕ್ಕೂ ಇದರ ಉಪಯೋಗವಾಗುವದು; ವಿಸರ್ಜನ ಶಕ್ತಿಯ ಅಭಾವ; ಮಲವು ತಿಣಿಕಿದನಂತರ ಹೊರಬಿದ್ದು ಮತ್ತೆ ಒಳಗೆ ಹೋಗುತ್ತದೆ; ಮೂಲವ್ಯಾಧಿಯ ವೇದನೆ ಬಹಳಾಗುವದು; ಗುದದ್ವಾರದಲ್ಲಿ ಬಿರುಕು ಬಿಡುವದು; ಭಗಂದರ ಹಾಗು ಕೃಮಿಜನ್ಯ ಶೂಲವು.

**ಮೂತ್ರೇಂದ್ರಿಯ**:— ಮೂತ್ರಾಶಯದಲ್ಲಿ ಚಳಿ; ಮೂತ್ರದೊಳಗಿಂದ ಕೀವು ಬಹಳ ಸೋರುತ್ತದೆ; ರಕ್ತವೂ ಸೋರುತ್ತದೆ; ಜಂತಿನ

ಮೂಲಕ ಹಾಸಿಗೆಯಲ್ಲಿಯೇ ಮೂತ್ರವಾಗುತ್ತದೆ; ಮೂತ್ರದಲ್ಲಿ ಕೆಂಪು ಪದರುಗಳು ಕೂಡುತ್ತವೆ.

**ಪುರುಷರ ಜನನೇಂದ್ರಿಯ:—** ಮೂತ್ರವು ನೆಲದಮೇಲೆ ಬಿದ್ದು ಒಣಗಿದನಂತರ ಅಕ್ಕಿಯ ಕಚ್ಚಿನಂತೆ ಬಿಳೀಬಣ್ಣದ ಕಲೆ ಬೀಳುತ್ತದೆ; ಸಂಭೋಗೇಚ್ಛೆಯು ಬಹಳವಾಗುವದರಿಂದ ಬರುವ ಅಸ್ವಸ್ಥತೆ; ತಲೆಯಲ್ಲಿ ಯಾವಾಗಲೂ ಸಂಭೋಗದ ವಿಚಾರಗಳೇ; ಸಂಭೋಗದನಂತರ ದಣುವಿಕೆ; ನಪುಂಸಕತ್ವ; ವೃಷಣದಮೇಲೆ ತಿಂಡಿಯೂ ಬೆವರೂ; ರೇತಸ್ಖಲನ; ವೃಷಣ ಜಲವೃದ್ಧಿ; ಬಹಳ ದಿನದ ಉಪದಂಶ; ಇಂದ್ರಿಯವು ಬಿರುಸಾಗಿ ಅದರೊಳಗಿಂದ ಕೀವು ಸೋರುವದು; ಬಹುದಿವಸದ ಪ್ರಮೇಹವಿದ್ದು ದಟ್ಟಗೆ ಹಳದೀ ಸ್ರಾವವು ಹೋಗುವದು.

**ಸ್ತ್ರೀಯರ ಜನನೇಂದ್ರಿಯ:—** ಮುಟ್ಟಾದಾಗ ಕಾಲಿಗೆ ಹೊಲಸು ಬೆವರು; ಅವರೋಧವಿದ್ದು ಮೈಯೆಲ್ಲ ಬರ್ಫಿನಂತೆ ತಣ್ಣಗೆ; ಮುಟ್ಟು ಕಡಿಮೆ ಪ್ರಮಾಣದಲ್ಲಿ ಇರುವದು; ಮುಟ್ಟು ಬೇಗನೆ ಆಗುವದು; ಅದು ಒಮ್ಮೊಮ್ಮೆ ಹೆಚ್ಚಾಗುತ್ತದೆ; ತಣ್ಣೀರಿನಲ್ಲಿ ನಿಂತರೆ ಮುಟ್ಟು ಹೆಚ್ಚಾಗುವದು ( ಅತ್ಯಾರ್ತವ ); ಮುಟ್ಟಿನ ದಿವಸಗಳು ಬಂದು ಹೋದಬಳಿಕ ಮುಟ್ಟಾಗುವದು; ಜನನೇಂದ್ರಿಯದಮೇಲೆ ತಿಂಡಿಯೂ ಉರಿಪೂ ಇರುವದು ಕಾಮೇಚ್ಛೆಯು ಪ್ರಬಲ; ಸೆರಗು ಬಹಳ ಹೋಗುವದು; ಸ್ರಾವವು ಉರಿಯುವದು; ತಿಂಡಿ ಬಡಿಸುವದು; ಬಂಜೆತನ; ಸ್ತನವಿದ್ರಧಿ ( ಸ್ತನದ ಮೇಲೆ ಆಗುವ ಗಂಟು ಅಥವಾ ಕುರುವು ) ಸ್ತನವು ಗಟ್ಟಿಯಾಗಿದ್ದು ನೋವು ಬಹಳ; ಸ್ತನದ ತುದಿಯಮೇಲೆ ಸೀಳಿದಂತಾಗಿ ವ್ರಣವಾಗುತ್ತದೆ; ಸ್ತನದಲ್ಲಿ ಬಿರುಸು ಗಂಟುಗಳಾಗಿ ಅವುಗಳಲ್ಲಿ ಕೀವಾಗುವ ಸಂಭವವಿರುತ್ತದೆ; ( ಕಾ. ಮೂ. ) ಸ್ತನದಲ್ಲಿ ನಾಡೀವ್ರಣ ( Fistula ) ಗುದದ್ವಾ ದಲ್ಲಿ ಭಗಂದರವು; ಅದರೊಳಗಿಂದ ದಟ್ಟಾದ ಹಳದೀ ಕೀವು ಸೋರುವದು

**ಶ್ವಸನೇಂದ್ರಿಯ:—** ನ್ಯುಮೋನಿಯಾದ ತೃತೀಯಾವಸ್ಥೆಯ ಉಪಯೋಗವಾಗುವದು; ( ಕಲ್ಕೆ. ಸ ) ಎದೆಯು ಯಾವದೇ ಬೇನೆಯು ದಟ್ಟ, ಹಳದಿ, ಹಸರು ಸ್ರಾವವು ಬಹಳ ಹೋಗುತ್ತಿದ್ದರೆ; ಗಂಟಲಿನ

ಘುರಘುರಿಸುತ್ತದೆ; ಮತ್ತು ಕಫವು ಸುಲಭವಾಗಿ ಸಡಿಲಾಗುತ್ತದೆ; ಜೀರ್ಣ ಜ್ವರವಿರುತ್ತದೆ; ರಾತ್ರಿಯಲ್ಲಿ ಬೆವರು ಬಹಳ ಬಿಡುತ್ತದೆ; ಮತ್ತು ಅಶಕ್ತತೆಯುಂಟಾಗುತ್ತದೆ; ( ಕಲ್ಕೆ. ಫಾ; ಸ್ಟೇಟ್ರಂ. ಮೂ. ) ಕಫಕ್ಷಯ; ಬಹು ದಿವಸದ ಶ್ವಾಸನಲಿಕಾದಾಹ; ಸಣ್ಣ ಹಾಗು ಅಶಕ್ತ ಹುಡುಗರಿಗೆ ಆಗುವ ಕೆಮ್ಮು ಮತ್ತು ರಾತ್ರಿಯಲ್ಲಿ ಬೆವರು; ದನಿ ಕೂಡುವದು, ಗಂಟಲಿನಲ್ಲಿ ತಿಂಡಿ ಬಿಡುತ್ತದೆ: ಅದರಿಂದ ಕೆಮ್ಮು ಬರುತ್ತದೆ; ತಣ್ಣೀರು ಕುಡಿದಾಗಲೂ ರಾತ್ರಿಯಲ್ಲಿ ಮಲಗಿದಾಗಲೂ ಕೆಮ್ಮು ಹೆಚ್ಚಾಗುತ್ತದೆ· ಗಂಟಲು ನೋಯುತ್ತದೆ: ಅದರಿಂದ ಕೆಮ್ಮು ಬರುತ್ತದೆ; ಕೆಮ್ಮುವಾಗ ಸಣ್ಣ ಸಣ್ಣ ಕಫದ ಹೊಲಸು ಗಂಟುಗಳು ಬೀಳುತ್ತವೆ. ಅಶಕ್ತತೆಯಿದ್ದು ದಟ್ಟ, ಹಳದೀ ಕೀವಿನಂಥ, ಕಫವು ಬಹಳ ಬೀಳುತ್ತದೆ; ಇದೇ ಇದರ ವಿಶೇಷ ಲಕ್ಷಣವು.

**ರುಧಿರಾಭಿಸರಣ:**— ಬಹುದಿವಸದ ಹೃದಯದ ರೋಗವು: ಬಹಳ ಜೋರಿನಿಂದ ಚಲನವಲನವು ನಡೆದಾಗಲೂ ಸುಮ್ಮನೆ ಕುಳಿತಾಗಲೂ ಹೃದಯದಲ್ಲಿ ದಡದಡಿಸುತ್ತದೆ. ನಾಡಿಯಾದರೂ ವೇಗದಿಂದ ಹಾರುತ್ತದೆ.

**ಕುತ್ತಿಗೆಯೂ ಬೆನ್ನೂ:**— ಎರಡೂ ಹೆಗಲುಗಳ ನಡುವೆ ನೋಯುತ್ತದೆ; ಅಸ್ಥಿಮಾರ್ದವತೆ, ಬೆನ್ನು ಹುರಿಯು ಮಣಿಯುವದು; ಅದರಲ್ಲಿ ಉರುವೂ ಕ್ಷೋಭೆಯೂ; ಬೆನ್ನು ಹುರಿಯ ಮೇಲೆ ಸರೋಲಿಗಳು; ಜಘನಾಸ್ಥಿ ಸಂಧುಗಳ ರೋಗದಲ್ಲಿ ಕೀವಾಗುವದನ್ನು ನಿಲ್ಲಿಸಲಿಕ್ಕೆಂದು ಇದನ್ನು ಕೊಡಬೇಕು.

**ಕೈಕಾಲು:**— ಕೈಕಾಲುಗಳಲ್ಲಿ ಕೀವಾಗುವಂಥ ಬಹಳ ಒಳಗಿನ ಗಾಯಗಳು; ಅವುಗಳೊಳಗಿಂದ ಹಳದೀ ಬಣ್ಣದ ದಟ್ಟವಾದ ಕೀವು ಸೋರುವದು; ಉಗುರುಸುತ್ತು; ಉಗುರು ಸುತ್ತಿನಲ್ಲಿ ಬೇಗನೆ ಕೀವು ಆಗುವದಕ್ಕೂ ಆಗಿರುವ ಕೀವನ್ನು ನಿಲ್ಲಿಸಲಿಕ್ಕೂ ಹಾಗು ಹೊಸ ಉಗುರು ಬೇಗನೆ ಬೆಳೆಯಲಿಕ್ಕೂ ಉತ್ತೇಜಕ ಔಷಧವೆಂದು ಇದನ್ನು ಕೊಡುವದುಂಟು. ಹಳೆಯ ವ್ರಣವು; ಅದರಲ್ಲಿ ಕಳೆ ಹಾಗು ಉರಿವು, ಬಹುದಿವಸ ಮುಂಡೆಬೇನೆ, ಬಹಳ ಬಾವಿನಿಂದ ಕಾಲು ಮಡಿಚಲಿಕ್ಕೆ ಬರುವದಿಲ್ಲ, ಅಸ್ಥಿಗಳಲ್ಲಿ, ವಿಶೇಷವಾಗಿ ಲಂಬಾಸ್ಥಿಗಳಲ್ಲಿ ವೇದನೆ: ಎಲುವುಗಳಿಗೆ ಮುಳ ಹತ್ತುತ್ತದೆ: ನಾಡೀವ್ರಣ;

( ಭಗಂದರ=Fistula ); ನಾಡೀವ್ರಣದೊಳಗಿಂದ ತೆಳ್ಳನ್ನ ಕೀವು ಸೋರು ತ್ತದೆ; ತೊಡೆಯಲ್ಲಿಯೂ ಪಿಂಡರಿಗಳಲ್ಲಿಯೂ ಕುರುವುಗಳೂ ನಾಡೀ ವ್ರಣಗಳೂ; ಕಾಲುಗಳಿಗೆ ಹೊಲಸು ನಾತದ ಬೆವರು ಬಿಡುವದು, ಬೆವರು ಇಂಗಿ ಹೋದರೆ ಕ್ಷಯ, ಸಪ್ಟ್ಯಾರ್ತವ, ಮೋತೀಬಿಂದು ಮುಂತಾದ ಕೆಟ್ಟ ರೋಗಗಳು ಉದ್ಭವಿಸುತ್ತವೆ, ಬಗಲೊಳಗೆ ಹೊಲಸು ಬೆವರು ಬಿಡುವದು; ಉಗುರುಗಳು ಒಡಕಾಗಿಯೂ ಬೆಳೆಯುದೆಯೂ ಇದ್ದು ಅವುಗಳಮೇಲೆ ಬಿಳೀ ಕಲೆಗಳು ಬೀಳುತ್ತವೆ; ಬರೆಯುವಾಗ ಕೈಗೆ ಒರಟೆ ಬರುತ್ತವೆ; ಬಹಳ ನಡೆದಬಳಿಕ ಕಾಲುಗಳಿಗೂ ಬೆರಳುಗಳಿಗೂ ನೋವಾಗಿ ಒರಟೆ ಬರುತ್ತವೆ; ಕೈಕಾಲುಗಳು ದಣಿದಂತೆ ಜಡವಾಗುತ್ತವೆ. ಕಡಿದು ಬೀಳುವಂತೆ ಅನಿಸುತ್ತದೆ.

**ನಿದ್ದೆ ಮುಂತಾದ್ದು:—** ಅಪಸ್ಮಾರ; ಅಪಸ್ಮಾರ ಸೂಲಿಗಳು (Fits) ರಾತ್ರಿಯಲ್ಲಿ ಬರುತ್ತವೆ; ಸೂಲಿಗಳು ಬರುವದಕ್ಕಿಂತ ಮುಂಚಿತ ವಾಗಿ ಹೊಟ್ಟೆಯಲ್ಲಿ ಲಕ್ಷಣಗಳು ಭಾಸವಾಗುತ್ತವೆ; ಸೂಲಿಗಳು ನಿಂತು ನಿಂತು ಬರಲಾರಂಭಿಸುತ್ತವೆ ( ಕಲ್ಕೆ. ಫಾ; ಕಾ. ಫಾ; ಮ್ಯಾ. ಫಾ. ) ಶುಕ್ಲಪಕ್ಷದಲ್ಲಿ ಬರುವ ಅಪಸ್ಮಾರದ ಸೂಲಿಗಳಿಗೆ ಇದರಿಂದ ವಿಶೇಷ ಉಪಯೋಗವಾಗುವದು; ನಾಡಿಗಳಲ್ಲಿಯು ನೋವು ಕಡಿಮೆಯಾಗುವದೇ ಇಲ್ಲ; ರಾತ್ರಿಯಲ್ಲಿ ಹೆಚ್ಚಾಗುತ್ತದೆ; ಉಷ್ಣೋಪಚಾರದಿಂದಾಗಲಿ ಸೀತೋಪಚಾರದಿಂದಾಗಲಿ ಸಮಾಧಾನವಾಗುವದಿಲ್ಲ. ಹಿಸ್ಟೀರಿಯಾ ಕಂಪ; ಸ್ನಾಯು ವೈಕಲ್ಯ; ನಡೆಯುವಾಗ ಜೋಲಿ ಹೋಗುತ್ತದೆ ಸ್ವಲ್ಪ ಮಾನಸಿಕ ತ್ರಾಸವಾದರೂ ಕೂಡ ಸೂಲಿಗಳು ಬರುತ್ತವೆ; ದಣಿವ ಬಹಳಿದ್ದು ಮನಸ್ಸಿಗೆ ಸಮಾಧಾನವಾಗುವದಿಲ್ಲ; ನಿದ್ರಾನಾಶ; ನಿದ್ದೆಯ ಬಡಬಡಿಸುವದು; ಕೆಟ್ಟ ಕನಸುಗಳು ಬೀಳುತ್ತವೆ; ವೃದ್ಧ ರೋಗಿಗಳಿ ಹಾಗು ಕ್ಷಯದ ರೋಗಿಗಳಿಗೆ ನಿದ್ದೆಯು ಬರುವದೇ ಇಲ್ಲ; ನಿದ್ದೆಯು ಸ್ನಾಯುಗಳು ಹಾರುತ್ತವೆ.

**ಜ್ವರ:—** ಶರೀರದಲ್ಲಿ ಕೀವು ಬಹು ದಿವಸದಿಂದ ಹರಿಯುತ್ತಿದ ಜೀರ್ಣಜ್ವರ ಬರುತ್ತದೆ; ಆದರಿಂದ ಕಾಲಿಗೆ ಉರುವು ಬಿಡುತ್ತದೆ; ಇ

ದಿವಸದಲ್ಲಿ ಸ್ವಲ್ಪ ಅಲ್ಲಾಡಿದರೂ ಮೈತುಂಬ ಮುಳ್ಳು ಬರುತ್ತವೆ; ತಂಪು ಹವೆ ಸಹಸವಾಗುವದಿಲ್ಲ; ಮಧ್ಯಾಹ್ನದಲ್ಲಿಯೂ ರಾತ್ರಿಯಲ್ಲಿಯೂ ಜ್ವರ ಬರುತ್ತವೆ; ಕಾಲಿಗೆ ಉರುಪು; ರಾತ್ರಿಯಲ್ಲಿ ಬೆವರುಬಿಡುತ್ತದೆ; ಕ್ಷುಧಾನಾಶವೂ ದಣುವಿಕೆಯೂ; ಕ್ಷಯಬೇನೆಯಲ್ಲಿ ರಾತ್ರಿಯ ಕಾಲದಲ್ಲಿ ಬೆವರು ಬಹಳ ಬಿಟ್ಟು ದಣುವಿಕೆಯಾಗುತ್ತದೆ; ಸಣ್ಣ ಹುಡುಗರಿಗೆ ತಲೆಯ ಸುತ್ತು ಮುತ್ತು ಹೊಲಸು ನಾತದ ಬೆವರು ಬಿಡುವದು; ಶರೀರದಲ್ಲಿ ಕೀವು ಸಿದ್ಧವಾಗುವ ಕಾಲಕ್ಕೆ ಬರುವ ಜ್ವರಕ್ಕೂ ಸಿದ್ಧವಾದ ಕೀವು ಮೈಯೊಳಗೆ ಇಂಗುವ ಕಾಲಕ್ಕೆ ಬರುವ ಜ್ವರಕ್ಕೂ ಇದರಿಂದ ಉಪಯೋಗವಾಗುತ್ತದೆ. ಕೀವಿನಿಂದ ರಕ್ತವು ಕೆಟ್ಟು ಬರುವ ಜ್ವರ.

**ತ್ವಚೆ:—** ತಿಂಡಿ; ಉರುಪು; ಬೊಕ್ಕೆ; ಗಂಟು; ಹುಣ್ಣು; ವ್ರಣ; ನರೋಲಿ; ಉಗುರುಸುತ್ತು; ಕೀವು ಬರುವಂಥ ಹುಣ್ಣುಗಳು; ಉರಿ ಫೈಣು; ಮಡಿಬೊಕ್ಕೆ ಮುಂತಾದವುಗಳು. ಕೀವು ಆಗುವಂಥ ಹುಣ್ಣುಗಳು ಬಹಳ ನೋಯುತ್ತವೆ; ಶರೀರದ ಯಾವದೇ ಭಾಗದಲ್ಲಿ ಕೀವು ಆಗುವ ಪ್ರವೃತ್ತಿ, ವಿಶೇಷವಾಗಿ ಬೇಸಿಗೆಯ ಕಾಲದಲ್ಲಿ; ವ್ರಣದ ಸ್ಥಳದಲ್ಲಿ ಕೆಂಪು ಮಾಂಸವು ಬರುತ್ತದೆ; ವ್ರಣದ ಸುತ್ತುಮುತ್ತಲಿನ ಭಾಗವು ಕಪ್ಪಾಗಿಯೂ ಎದ್ದಂತೆಯೂ ಕಾಣುತ್ತದೆ; ಮತ್ತು ಅದರೊಳಗಿಂದ ಉರಿಯುವಂಥ ಹೊಲಸು ಕೀವು ಬರುತ್ತದೆ; ಉಗುರಿನ ಸುತ್ತುಮುತ್ತು ವ್ರಣ; ತ್ವಚೆಯ ಬೇನೆಯು ಬೇಗನೆ ನೆಟ್ಟಗಾಗುವದಿಲ್ಲ; ಕೀವು ಮಾತ್ರ ಕೂಡಲೆ ಆಗುತ್ತದೆ; ಮೈಲಿಯಲ್ಲಿ ಕೀವು ಆದನಂತರ ಇದರ ಉಪಯೋಗವಾಗುವದು; ಮೈಲಿಯನ್ನು ತೆಗೆಯಿಸಿದ ಬಳಿಕ ಉಂಟಾಗುವ ದುಷ್ಪರಿಣಾಮದ ಮೇಲೆ ಸಹ ಇದನ್ನು ಕೊಡಬಹುದು; ಮಹಾರೋಗ (ಲೆಪ್ರಸಿ) ವಿಶೇಷವಾಗಿ ಮೂಗು ಕೊಳೆತು ಕಡೆದು ಹೋಗುತ್ತಿದ್ದ ಪಕ್ಷದಲ್ಲಿ; ಹುಣ್ಣುಗಳಾಗಿ ಕೆಂಪು ಕಲೆ ಬೀಳುತ್ತವೆ; ಮುಳ್ಳು ಇಲ್ಲವೆ ಕಾಜು ಒಳಗೆ ಮುರಿದಿದ್ದರೆ ಅಥವಾ ಇದ್ದರೆ ಅವುಗಳನ್ನು ಹೊರಗೆಡವಲಿಕ್ಕೆ ಇದರಿಂದ ಸಹಾಯವಾಗುತ್ತದೆ.

**ಇತರ ಅವಯವಗಳು:—** ಹುಣ್ಣುಗಳನ್ನು ಹಣ್ಣು ಮಾಡಲಿಕ್ಕೆ ಇದು ಪ್ರಮುಖ ಔಷಧವು (ಕಾ. ಮೂ.); ಗ್ರಂಥಿಗಳ ಬಾವು (ಕಾ.

ಮೂ.); ಕಾಲೀಪೂರದಿಂದ ಗಂಟು ಕರಗದಿದ್ದರೆ ಹಾಗು ಕೀವು ಆಗಲಿಕ್ಕೆ ಪ್ರಾರಂಭವಾದರೆ; ಕೀವು ಆಗುವಂಥ ಗ್ರಂಥಿಯೊಳಗಿಂದ ದಟ್ಟಾದ ಹಳದೀ ಹೊಲಸು ಸ್ರಾವವು ಸೋರುತ್ತಿದ್ದರೆ; ಉರುಪುಳ್ಳ ಬಾವು; ಭಗಂದರ; ನಾಡೀವ್ರಣ; ಎಲುವಿಗೆ ಹುಳ ಹತ್ತಿ ಅದು ಕೊಳೆಯುವದು; ಸ್ರಾವವು ಹೊಲಸಾಗಿರುತ್ತದೆ; ಜಲಶೋಥ; ಉದರ; ಗಂಡಮಾಲೆಯ ಪ್ರಕೃತಿಯ ಅಶಕ್ತ ರೋಗಿಗಳಿಗೆ ಇದನ್ನು ಕೊಡಬೇಕು.

**ವೃದ್ಧಿ ಮತ್ತು ಕ್ಷಯ:—** ಹುಣ್ಣಿವೆಯ ದಿವಸ ಹಗಲೂ ಇರುಳೂ ಎಲ್ಲ ಭಾವನೆಗಳು ಹೆಚ್ಚಾಗುತ್ತವೆ; ಕಾಸುವದು; ಬೆಚ್ಚನ್ನ ಕೋಣೆಯೊಳಗೂ ಬೇಸಿಗೆ ಕಾಲದಲ್ಲಿಯೂ ಭಾವನೆಗಳು ಕಡಿಮೆಯಿರುತ್ತವೆ; ತಲೆಗೆ ಉಣ್ಣೆಯ ಬಟ್ಟೆಯನ್ನು ಕಟ್ಟಿಕೊಂಡರೆ ನೋಯುತ್ತಿದ್ದ ತಲೆಯು ನೆಟ್ಟಗಾತ್ತದೆ; ಉದರ ಭಾಗದಲ್ಲಿಯ ವೇದನೆ, ಕೆಮ್ಮು, ಸಂಧಿವಾತಜನ್ಯ ವೇದನೆಯಿದ್ದರೆ ಕಾಸುವದರಿಂದ ಸಮಾಧಾನವಾಗುತ್ತದೆ; ಬಿರುಗಾಳಿ ಬಿಡುವ ಪೂರ್ವದಲ್ಲಿ ಬಯಲು ಹವೆಯಲ್ಲಿಯೂ ಚಳಿಗಾಲದಲ್ಲಿಯೂ ಸೀತ ಹವೆಯಲ್ಲಿಯೂ ಸೀತೋಪಚಾರದಿಂದಲೂ ಕಾಲಿನ ಮೇಲೆ ಬಿಡುವ ಬೆವರು ಇಂಗಿದಲ್ಲಿಯೂ ಭಾವನೆಗಳು ಹೆಚ್ಚಾಗುತ್ತವೆ.

**ಉಪಯೋಗ:—** ಸಾಮಾನ್ಯವಾಗಿ ೬ × ಅಥವಾ ೧೨ × ಶಕ್ತಿಯ ಔಷಧವನ್ನು ಉಪಯೋಗಿಸಬೇಕು. ಆದರೆ ಹಳೆಯ ರೋಗದಲ್ಲಿಯೂ ಪ್ರಾಕೃತಿಕ ರೋಗದಲ್ಲಿಯೂ ಹೆಚ್ಚು ಶಕ್ತಿಯ ಔಷಧದಿಂದಲೇ ಗುಣ ಬರುವದು. ಸರೋಲಿ, ವ್ರಣ, ಪಿನಸಿ, ಕುರುವು ಮುಂತಾದ ರೋಗಗಳಿದ್ದರೆ, ಕಡಿಮೆ ಶಕ್ತಿಯ ಔಷಧವನ್ನು ಹೊರಗಿನಿಂದ ಹಚ್ಚಬೇಕು; ಧಾವನಜಲಮಾಡಿ ತೊಳೆಯಬೇಕು. ಕೀವಾಗುವಂಥ ಬಾವುವುಳ್ಳ ಗ್ರಂಥಿಗೂ ಬಹಳ ದಿವಸದ ವಿದ್ರಧಿಗೂ "ಸಿಲಿಕಾ"ವನ್ನು ಹೆಚ್ಚು ಪ್ರಮಾಣದಲ್ಲಿ ಮೇಲಿಂದಮೇಲೆ ಕೊಡಬೇಕು. ಆದರೆ ಕೀವು ಆಗಿದ್ದರೆ, ಅಥವಾ ಆಗುವ ಸ್ಥಿತಿಯಲ್ಲಿ ಇದ್ದರೆ, ೩೦ × ಇಲ್ಲವೆ ಅದಕ್ಕಿಂತ ಹೆಚ್ಚಿನ ಶಕ್ತಿಯ ಔಷಧವನ್ನು ಕೊಡಬೇಕು. ಹಳೆಯ ರೋಗವಿದ್ದರೆ ದಿನಾಲು ಒಂದು ಸಾರೆ, ಶೀಘ್ರಪರಿಣಾಮಿ ರೋಗವಿದ್ದರೆ ೨-೩ ತಾಸಿಗೊಮ್ಮೆ ಕೊಡಬೇಕು. ಸನ್ಯಾಸ (ಮೂರ್ಛೆ) ಅಪಸ್ಮಾರ ಮುಂತಾದ ಬೇನೆಗಳಿಗೆ

೩೦ × ಅಥವಾ ಅದಕ್ಕಿಂತ ಹೆಚ್ಚಿನ ಶಕ್ತಿಯ ಔಷಧವನ್ನು ಕೊಡುವದು ನೆಟ್ಟಗೆ. ಈ ಔಷಧದ ಪರಿಣಾಮವು ಬಹುದಿವಸ ತಡೆಯುವಂಥ ದಿದ್ದುದರಿಂದ ಇದನ್ನು ಮೇಲಿಂದಮೇಲೆ ಕೊಡಬೇಕು.

**ಬೇರೆ ಔಷಧಗಳ ಸಂಬಂಧ:—** ಕೀವು ಆಗುವ ಸ್ಥಿತಿಯಲ್ಲಿ ಕಲ್ಕೆ. ಸಲ್ಫದ ಸಂಬಂಧವು ಬರುತ್ತದೆ; ಸಿಲಿಕಾ ಕೊಟ್ಟರೆ ಕೀವು ಬೇಗನೆ ಸಿದ್ಧವಾಗುತ್ತದೆ; ಕಲ್ಕೆ. ಸಲ್ಫವು ಕೀವು ಆಗುವ ಸ್ಥಿತಿಯನ್ನು ತಡೆಯುತ್ತದೆ, ಹಾಗು ಗಾಯವನ್ನು ಬೇಗನೆ ಮಾಯಿಸುತ್ತದೆ. ವ್ಯೈಲಿಯನ್ನು ತೆಗೆದದ್ದರಿಂದ ಆಗುವ ದುಷ್ಪರಿಣಾಮಕ್ಕೆ ಕಾಲೀಮೂರದಿಂದ ಗುಣ ಬರದಿದ್ದರೆ ಇದನ್ನು ಕೊಡಬೇಕು. ಅಶ್ರುನಲಿಕೆಯಲ್ಲಿಯ ನಾಡಿವ್ರಣದ ಮೇಲೆ ನೇಟ್ರಂ ಮೂರದ ಸಂಬಂಧವನ್ನು ಲಕ್ಷದಲ್ಲಿ ತರತಕ್ಕದ್ದು. ನಿದ್ರೆಯಲ್ಲಿ ತಿಳಿಯದೆ ಮೂತ್ರವಾಗುತ್ತಿದ್ದರೆ ನೇಟ್ರಂ. ಫಾಸದನಂತರ, ನಿದ್ರಾನಾಶದಲ್ಲಿ ಕಾಲೀಫಾಸದ ನಂತರ, ಹಾಗು ವೃಷಣಜಲವೃದ್ಧಿಯಲ್ಲಿ ನೇಟ್ರಂ. ಸಲ್ಫದ ನಂತರ ಇದರ ಉಪಯೋಗವಾಗುವದು. ಕಿವಿ ಒಡೆದು ಕೀವು ಸೋರುತ್ತಿದ್ದರೆ ಮೊದಲು ಕಾಲೀ. ಮೂರವನ್ನು ಕೊಟ್ಟು ಬಳಿಕ ಇದನ್ನು ಕೊಡಬೇಕು.

**ಪ್ರಮಾಣ:—** ೪-೫ ವಡೆಗಳನ್ನು ಅಥವಾ ೩-೪ ಗುಂಜಿ ಪುಡಿಯನ್ನು ದಿನಾಲು ೩-೪ ಸಾರೆ ಕೊಡಬೇಕು. ಕುರುವು ಹಣ್ಣುಮಾಡುವ ಕೆಲಸಕ್ಕೆ ಇದಕ್ಕಿಂತ ತೀವ್ರವಾಗಿ ಮೇಲಿಂದಮೇಲೆ ಕೊಡಬೇಕು. ಬಹಳ ಹಳೆಯ ಬೇನೆಯಲ್ಲಿ ಹೆಚ್ಚು ಶಕ್ತಿಯ ಔಷಧವನ್ನು ಕೊಡುತ್ತಿದ್ದರೆ ಅದನ್ನು ಮೇಲಿಂದಮೇಲೆ ಕೊಡಬಾರದು.

---

೧೫—೭೮೯೮

ಇವುಗಳ ಹೊರತಾಗಿ ಕಲ್ಕೆರಿಯಾ ಫ್ಲುಓರ ಹಾಗು ಸಿಲಿಕಾ ಎಂಬ ಎರಡು ಕ್ಷಾರಗಳು ಸ್ವತಂತ್ರವಿದ್ದು ಯಾವ ಭಾಗದಲ್ಲಿಯೂ ಸಮಾವೇಶ ವಾಗುವಂತೆ ಇಲ್ಲ.

ಈ ಮೂರು ಭಾಗಗಳ ಲಕ್ಷಣಗಳನ್ನು ಸ್ಥೂಲಮಾನದಿಂದ ಕೆಳಗೆ ಕೊಟ್ಟಿದ್ದೇವೆ. ಅವುಗಳನ್ನು ಚನ್ನಾಗಿ ಲಕ್ಷ್ಯದಲ್ಲಿಡಬೇಕು. ಮತ್ತು ಆಯಾ ಲಕ್ಷಣಗಳು ಕಂಡುಬಂದಾಗ ಆಯಾ ಕ್ಷಾರಗಳು ಕಡಿಮೆ ಯಾಗಿರುವವೆಂದು ತಿಳಿದು, ಆ ದೃಷ್ಟಿಯಿಂದ ರೋಗಿಗೆ ಆಗುತ್ತಿರುವ ಬೇರೆ ಲಕ್ಷಣಗಳನ್ನು ಆತನಿಂದ ತಿಳಿದುಕೊಂಡು, ಬಳಿಕ ಚಿಕಿತ್ಸೆಯನ್ನು ಗೊತ್ತುಮಾಡಬೇಕು.

ಮೊದಲು ಫಾಸ್ಫೇಟಗಳ ಭಾಗವನ್ನು ತೆಗೆದುಕೊಳ್ಳುವಾ. ಫಾಸ್ಫೇಟ ಗಳ ಸರ್ವಸಾಧಾರಣ ಲಕ್ಷಣಗಳು ಕೆಳಗಿನಂತೆ ಇರುತ್ತವೆ.

ಫಾಸ್ಫೇಟದ ರೋಗಿಯು ತ್ರಾಸಿಕ ಸ್ವಭಾವದವ, ಅಂಜುಬುರುಕ, ಉತಾವಳಿ, ಚಿಂತೆಮಾಡುವವ, ಮ್ಲಾನ, ಹಾಗು ನಿರುತ್ಸಾಹಿಯಾಗಿದ್ದು ಆತನಲ್ಲಿಯ ಸ್ವಾಭಾವಿಕ ಚೈತನ್ಯವು ಕಡಿಮೆಯಾಗಿಯೂ ಬಲಹೀನ ವಾಗಿಯೂ ಇರುತ್ತದೆ. ಸ್ವಭಾವವು ಸಿಟ್ಟಿನದಾಗಿರುತ್ತದೆ; ತೊಗಲು ಮೆತ್ತಗೆ; ಕೂದಲು ಮೆತ್ತಗೆ ಹಾಗು ಮಿಂಚುತ್ತವೆ; ತ್ವಚೆಯು ಹಳದಿ ಹಾಗು ನಿಃಸತ್ವ; ಸಿಟ್ಟುಬಂದಾಗ ಮಾತ್ರ ಅದು ಕೆಂಪಾಗುತ್ತದೆ; ಮುಖಚರ್ಯೆ ಬಾತಿರುವದು; ಕಣ್ಣುಗಳು ಬಳಸಟ್ಟಿರುವವು; ಕಣ್ಣಿನ ಸುತ್ತಲು ನೀಲವರ್ಣದ ವರ್ತುಲ; ರೋಗಿಯ ಅಶಕ್ತತೆಯು ಬಹು ಬೇಗ ಬೆಳೆಯುವದು; ಆತನು ಬೇಗನೆ ಸೊರಗುತ್ತಾನೆ.

ಮೇಲಿನ ಲಕ್ಷಣಗಳು ಸ್ಥೂಲಮಾನದಿಂದ ಈ ಭಾಗಕ್ಕೆ ಸಂಬಂಧ ಪಟ್ಟ ಐದೂ ಕ್ಷಾರಗಳಿಗೆ ಹತ್ತುತ್ತವೆ. ಇವುಗಳ ಹೊರತಾಗಿ ಬೇರೆ ಬೇರೆ ಕ್ಷಾರಗಳ ವಿಶೇಷ ಲಕ್ಷಣಗಳನ್ನು ಇನ್ನು ಕ್ರಮದಿಂದ ಕೆಳಗೆ ಕೊಡುತ್ತೇವೆ.

**ಕಲ್ಕೆರಿಯಾ ಫಾಸ:—** ಮುಖಚರ್ಯೆಯು ಮುಪ್ಪಿನ ಮುದುಕ ರಂತೆ ಕೃಶವಿರುತ್ತದೆ. ಮೋರೆಯ ಮೇಲಿನ ತೊಗಲು ಮಣ್ಣಿನ ಬಣ್ಣದ್ದು

ಮತ್ತು ನಿರಿಗೆಗಟ್ಟಿದ್ದು. ಕಿವಿ, ಮೂಗು, ಮುಂತಾದ ಮಹತ್ವದ ಬೇರೆ ಸ್ಥಳಗಳು ತಣ್ಣಗಾಗಿರುವವು. ಮೋರೆಯ ಮೇಲೆ ಬೊಕ್ಕೆಗಳು; ಕಲೆಗಳು; ಚುಕ್ಕಿಗಳು; ಹಾಗು ವ್ರಣಗಳು; ವಿಶೇಷವಾಗಿ ಹುಡುಗೆಯರಿಗೂ ಹೆಂಗಸರಿಗೂ ಆಗುತ್ತವೆ. ಮೋರೆಯ ತುದಿಯಲ್ಲಿ ನೋವು ಇರುತ್ತದೆ. ಕೆಳಗಿನ ತುಟಿಯಗಿಂತ ಮೇಲಿನ ತುಟಿಯು ಸ್ವಲ್ಪ ದೊಡ್ಡದಿದ್ದಂತೆ ಭಾಸ ವಾಗುತ್ತದೆ. ತಲೆಯು ದೊಡ್ಡದಾಗಿದ್ದು ಕುತ್ತಿಗೆಯು ಮಾತ್ರ ಸಣ್ಣದೂ ಸೊರಗಿದ್ದೂ ಇರುತ್ತದೆ. ಹೊಟ್ಟೆಯು ದೊಡ್ಡದಾಗಿಯೂ ಕಾಲುಗಳು ಸಣ್ಣಾಗಿಯೂ ಪ್ರಮಾಣಶೂನ್ಯವಾಗಿಯೂ ಇರುತ್ತವೆ. ಸಂದುಗಳು ಸದ್ದುಮಾಡುತ್ತಾಗಿರುತ್ತವೆ. ಸ್ವಲ್ಪ ಶ್ರಮವಾದರೂ ಮುಖದ ಮೇಲೆ ತಣ್ಣಗೆ ಬೆವರುಬಿಡುವದು. ರೋಗಿಯು ಅಸ್ವಸ್ಥನಿರುವದರಿಂದ ಆತನಿಗೆ ಮೇಲಿಂದ ಮೇಲೆ ಸ್ಥಲಾಂತರ ಮಾಡಬೇಕೆಂದು ಅನಿಸುತ್ತದೆ. ಆದರೆ ಅಶಕ್ತತೆಯ ಮೂಲಕ ಹಾಗೆ ಮಾಡಲಿಕ್ಕೆ ಬರುವದಿಲ್ಲ. ಅದರಿಂದ ಆತನು ಶಾಂತಚಿತ್ತ ನಾಗಿ ಸುಮ್ಮನೆ ಬಿದ್ದುಕೊಂಡಿರುವಂತೆ ಕಾಣುತ್ತದೆ. ಆದರೆ ವಸ್ತು ಸ್ಥಿತಿಯು ಹಾಗೆ ಇರುವದಿಲ್ಲ. ತ್ವಚೆಯ ಮೇಲಿನ ಸಿರಗಳು ಉಬ್ಬಿ ದಂತೆಯೂ ಸ್ಪಷ್ಟವಾಗಿಯೂ ಕಾಣಿಸುತ್ತವೆ.

**ಕಾಲೀ ಫಾಸ:—** ಕಾಲೀ ಫಾಸ ಕೊಡತಕ್ಕ ರೋಗಿಯು ಅರ್ಧ ಮರ್ಧ ಕಣ್ಣುಮುಚ್ಚಿಕೊಂಡು ಮಲಗಿರುತ್ತಾನೆ; ಅಥವಾ ಒಂದೇ ಕಡೆಗೆ ದಿಟ್ಟಿಸಿ ನೋಡುತ್ತಾನೆ. ಆತನ ಕಣ್ಣುಗಳು ಕಾಚಿನಂತೆ ಲಕಲಕ ಹೊಳೆಯುತ್ತವೆ. ಸಂಪೂರ್ಣ ಕಣ್ಣು ತೆರೆದು ನೋಡುತ್ತಾನೆ. ಮುಖ ಚರ್ಯೆಯು ಮಂದವಾಗಿ ಮಾದಕಪದಾರ್ಥವನ್ನು ಸೇವಿಸಿದವರಂತೆ ಕಾಣಿ ಸುತ್ತದೆ. ಚರ್ಯೆ ಸೊರಗಿದ್ದು, ಕಣ್ಣುಗಳು ಒಳಸಟ್ಟಿದ್ದು, ತೊಗಲು ಕಪ್ಪು, ನೀಲಿ, ಹಾಗು ಹೊಲಸು ಕಾಣಿಸುತ್ತದೆ.

**ನೇಟ್ರಂ ಫಾಸ —** ರೋಗಿಯು ಯಾವಾಗಲು ಮಂದವಾಗಿರುತ್ತಾನೆ. ಕಣ್ಣುಗಳು ಯಾವಾಗಲು ಮುಚ್ಚಿದಂತಿರುತ್ತವೆ. ಅಂಜಿಕೆ, ಅಳವಕ್ಕಿತನ, ಬೆದರಿಕೆ, ಚಿಂತೆ, ಗಾಬರಿ ಮುಂತಾದ ವಿಕಾರಗಳು ಮುಖದಮೇಲೆ ಸ್ಪಷ್ಟ ವಾಗಿ ಕಾಣಿಸುತ್ತವೆ. ಅಸ್ಥಿಗಳಲ್ಲಿ ಎಲ್ಲಿಯೂ ಮೋಹಕತನವು ಕಾಣುವದೇ

ಇಲ್ಲ. ಸ್ನಾಯುಗಳು ಕಡಿಮೆಯಾಗಿ ಅಸ್ಥಿಗಳೇ ಬೆಳೆದಿರುವಂತೆ ಕಾಣುತ್ತದೆ. ಕಿವಿಗೂ ಮೂಗಿಗೂ ಒಂದೇಸವನೆ ತಿಂಡಿ ಬಿಡುತ್ತದೆ. ರೋಗಿಯು ಅವುಗಳನ್ನು ಯಾವಾಗಲೂ ತುರಿಸಿಕೊಳ್ಳುತ್ತಾನೆ.

**ಫೆರಂಫಾಸ**:— ಮುಖವು ನೀಲಿ, ಕರ್‍ರಗೆ, ಹಾಗು ಸಪ್ಪಗೆ. ಕಣ್ಣುಗಳು ಯಾವಾಗಲು ಕೆಂಪಾಗಿರುವವು. ಶ್ಲೇಷ್ಮಲ ತ್ವಚೆಯು ಬೆಳ್ಳಗೆ ನಾಡಿಗಳು ಟಣಟಣ ಹಾರುತ್ತಿದ್ದು ಸ್ಪಷ್ಟವಾಗಿ ಕಾಣಿಸುತ್ತವೆ. ಉಸುರು ತೀವ್ರವಾಗಿಯೂ ಕಷ್ಟದಾಯಕವೂ. ಮೂಗಿನ ಹೊಳ್ಳೆಗಳು ಹಾರುತ್ತವೆ. ಹಣೆಯ ಮೇಲೆಯೂ ಗದ್ದದ ಮೇಲೆಯೂ ಬೊಕ್ಕೆಗಳು. ಮಡಿಬೊಕ್ಕೆಗಳು. ಮುಖದಮೇಲೆ ಶಿಥಿಲತೆ, ಅಸ್ವಸ್ಥತೆ, ಹಾಗು ಹೆದರಿಕೆ ಇರುತ್ತವೆ. ಜ್ವರ ಮತ್ತು ದಾಹ. ಇಂಥ ರೋಗಗಳಲ್ಲಿ ಮುಖವು ಕೆಂಪಾಗುತ್ತದೆ.

**ಮಗ್ನೆಶಿಯಾ ಫಾಸ**:— ಮುಖವು ದುಃಖ, ಕಷ್ಟ, ಅಂಜಿದಂತೆ, ಸಪ್ಪಗೆ, ಹಾಗು ಚಿಂತಾತುರವಿರುತ್ತದೆ. ಬಾಳುವೆಯ ಬೇಸರ. ಜನರ ಸಹವಾಸವು ಬೇಡಾಗುವದು. ರೋಗಿಗೆ ಆಗುವ ವೇದನೆಗಳ ಮೂಲಕ ಇಂಥ ಮನೋವೃತ್ತಿಯಾಗಿರುತ್ತದೆ. ಮೋರೆಯ ಮೇಲಿನ ತೊಗಲು ಜೋತುಬಿದ್ದದ್ದು. ರೋಗಿಯು ಸೊರಗಿರುತ್ತಾನೆ. ಆತನ ತ್ವಚೆ ಕಳೆಯಿಲ್ಲದ್ದು. ಮಹತ್ವಾಕಾಂಕ್ಷೆಯು ಬಹಳವಿದ್ದರೂ ಬೇಗನೆ ದಣಿಯುತ್ತಾನೆ; ಆದ್ದರಿಂದ ಕೈಯಿಂದ ಕೆಲಸವಾಗುವದಿಲ್ಲ. ಗಡಿಬಿಡಿ ಬಹಳವಿದ್ದರೂ ವಿಚಾರವು ಕಡಿಮೆ. ವಿಚಾರಗಳು ಬೇಗನೆ ತೋಚುವದಿಲ್ಲ. ಮಾತನಾಡುವಾಗ ಕೈಕಾಲ ಸನ್ನೆ ಮಾಡುತ್ತಾನೆ. ಇಚ್ಛಾಶಕ್ತಿಯು ತೀರ ಕಡಿಮೆ. ನೋವು ತಾಳಲಿಕ್ಕೆ ಆಗುವದಿಲ್ಲ. ಮೈಯಲ್ಲಿ ಜಿಗಟುತನವು ಕಡಿಮೆಯಿರುತ್ತದೆ. ಸ್ವಂತದ ಇಚ್ಛಾಶಕ್ತಿಯು ಕಡಿಮೆಯಿದ್ದದರಿಂದ ಬೇರೆ ಜನರಿಗೆ ಬೇಗನೆ ವಶನಾಗುತ್ತಾನೆ. ಅನುಕರಣಶೀಲನು.

**ಸಲ್ಫೇಟಗಳು**:— ಫಾಸ್ಫೇಟ ಅಥವಾ ಕ್ಲೋರಾಯಿಡ ಕೊಡತಕ್ಕ ರೋಗಿಗಳಿಗಿಂತ ಸಲ್ಫೇಟಗಳನ್ನು ಕೊಡತಕ್ಕ ರೋಗಿಗಳ ಶರೀರವು ಕಡಿಮೆ ನಾಜೂಕ ಇರುತ್ತದೆ; ಅಂದರೆ ಬಿರುಸಾಗಿರುತ್ತದೆ. ಶರೀರದಿಂದ ಹೊರಚೆಲ್ಲಲ್ಪಡುವ ದ್ರವ್ಯಗಳು ( ಅಂದರೆ ಬೆವರು, ಸ್ರಾವ, ಉಸುರು ಮುಂತಾದ

ವಿಸ್ಸೃಷ್ಟ ದ್ರವ್ಯಗಳು ) ಹೊಲಸು, ದುರ್ಗಂಧ, ಕೊಳೆತ ನಾತವುಳ್ಳವು ಇರುತ್ತವೆ. ಮುಖವು ಸಾಮಾನ್ಯವಾಗಿ ಸಪ್ಪಗಿರುತ್ತದೆ. ಹೊಟ್ಟೆ, ಕಿವಿ, ಮುಂತಾದ ಭಾಗಗಳು ಮಾತ್ರ ಕೆಂಪಾಗಿರುತ್ತವೆ. ತಲೆಯನ್ನು ಹೊರುವ ತ್ರಾಣವು ಗೋಣಿನಲ್ಲಿ ಇರುವದಿಲ್ಲ. ಆದ್ದರಿಂದ ತಲೆಯು ಸ್ವಲ್ಪ ಮುಂದಕ್ಕೆ ಬಾಗಿದಂತೆ ಕಾಣಿಸುತ್ತದೆ. ರೋಗಿಯು ಸಣ್ಣ ತಲೆದಿಂಬಿನ ಮೇಲೆಯಾಗಲಿ ತಲೆದಿಂಬು ಇಲ್ಲದೆಯಾಗಲಿ ಮಲಗುತ್ತಾನೆ.

ಮೇಲೆ ಹೇಳಿದ ಲಕ್ಷಣಗಳು ಈ ಭಾಗದಲ್ಲಿರುವ ಮೂರೂಕ್ಷಾರ ಗಳಿಗೆ ಸ್ಥೂಲಮಾನದಿಂದ ಹತ್ತುತ್ತವೆ. ಇವುಗಳ ಹೊರತಾಗಿ ಪ್ರತಿಯೊಂದು ಕ್ಷಾರದ ವಿಶೇಷ ಲಕ್ಷಣಗಳನ್ನು ಕೆಳಗೆ ಕೊಡುತ್ತೇವೆ.

**ಕಲ್ಕೆರಿಯಾ ಸಲ್ಫ**:— ಸರ್ವಸಾಧಾರಣವಾಗಿ ಮುಖದಮೇಲೆ ಬೊಕ್ಕೆಗಳಾಗಲಿ ಹುಣ್ಣುಗಳಾಗಲಿ ಇರುತ್ತವೆ. ಮುಖದ ಮೇಲಿಂದ ರೋಗಿಗೆ ಯಾವದೋ ಒಂದುತರದ ಕಷ್ಟವನ್ನು ಸಹನ ಮಾಡಬೇಕಾಗುತ್ತದೆಂದು ತೋರುತ್ತದೆ. ಕಣ್ಣಿನ ರೆಪ್ಪೆಗಳು ನೋಯುತ್ತವೆ. ತುಟಿಯು ಕೆಳಗೆ ಹುಣ್ಣುಗಳು. ಮುಖದ ಮೇಲಾಗಲಿ ಬೇರೆ ಕಡೆಯಾಗಲಿ ಬಹು ದಿವಸದ ಉರುವುಳ್ಳ ಒಣ ಪ್ಯೆಣು ಇದ್ದಂತೆ ಕಾಣುತ್ತದೆ. ತ್ವಚೆ ತ್ವಗ್ರೋಗವುಳ್ಳದ್ದು.

**ಕಾಲೀ ಸಲ್ಫ**:— ಮಹತ್ವಾಕಾಂಕ್ಷೆಯಿಲ್ಲ. ಪ್ರತೀಕಾರ ಮಾಡುವ ಬುದ್ಧಿಯೂ ಇಲ್ಲ; ಶಕ್ತಿಯೂ ಇಲ್ಲ. ಹೆಂಡತಿ ಹೇಳಿದಂತೆ ಮಾಡುವನು. ಮುಖದಮೇಲಿಂದ ಬಲಹೀನನಂತೆಯೂ ಕೈಲಾಗದವನಂತೆಯೂ ಕಾಣಿಸುತ್ತಾನೆ. ಮೋರೆಯು ಬಾತಿರುತ್ತದೆ. ಎಡಗಣ್ಣಿನ ಹತ್ತರ ಹೆಚ್ಚು ಬಾತಂತೆ ಕಾಣುವದು. ಮುಖಕ್ಕೂ ಸರ್ವಾಂಗಕ್ಕೂ ಹಳದೀಬಣ್ಣವು ಬರುತ್ತದೆ. ತುಟಿಗಳು ನಿರಿಗೆಗಟ್ಟಿದಂತೆ ನಾಲಿಗೆಯು ಕೆಂಪಾಗುವದು. ಗೋಣು ಸುಲಭವಾಗಿ ಅಲ್ಲಾಡುವದಿಲ್ಲ.

**ನೇಟ್ರಂ ಸಲ್ಫ**:— ಪಿತ್ತಪ್ರಕೃತಿ. ಮುಖವು ಮುಂಜಾವಿನಲ್ಲಿ ಬಲಗಡೆಗೆ ಬಾತಂತೆ ಕಾಣುವದು. ಸಪ್ಪಗೆ, ಹಳದಿ, ಉದಾಸೀನ, ರಾತ್ರಿ ಬೆಳತನಕ ಜಾಗರಣ ಮಾಡಿದವರಂತೆ ಕಾಣುತ್ತಾನೆ. ದೃಷ್ಟಿಯು ಮಂದ

ವಾಗಿದ್ದು ಕಣ್ಣಿಗೆ ಮಸಮಸಕು ಕಾಣಿಸುತ್ತದೆ. ತುಟಿಗಳು ಒಣಗಿ ಅವುಗಳೊಳಗಿಂದ ಹೊಟ್ಟು ಹೊರಡುತ್ತದೆ.

**ಕ್ಲೋರಾಯಿಡ:—** ಕ್ಲೋರಾಯಿಡದ ರೋಗಿಯು ಫಾಸ್ಫೇಟದ ರೋಗಿಗಿಂತ ಕಡಿಮೆ ಅಂಜುಬುರುಕನಾಗಿಯೂ ಕಡಿಮೆ ಉತಾವಳಿಯಾಗಿಯೂ ಇರುತ್ತಾನೆ; ಸಲ್ಫೇಟದ ರೋಗಿಗಿಂತ ಕಡಿಮೆ ಗಟ್ಟಿಗನೂ ಹೆಚ್ಚು ನಾಜೂಕನೂ ಇರುತ್ತಾನೆ. ಶರೀರದೊಳಗಿಂದ ಹೊರಬೀಳುವ ದ್ರವ್ಯಗಳು (ಬೆವರು, ಸ್ರಾವ, ಮುಂತಾದವುಗಳು) ಕಡಿಮೆ ಉಗ್ರವಿರುತ್ತವೆ. ಸಲ್ಫೇಟದಷ್ಟು ಹೊಲಸು ಇರುವದಿಲ್ಲ. ಮುಖವು ಬೇಸೆಯುವರಂತೆ ಬಾತಿರುತ್ತದೆ. ಬೊಕ್ಕೆಗಳು ಏಳುತ್ತವೆ. ರೋಗಿಯು ಸರ್ವಸಾಧಾರಣವಾಗಿ ಜಡ, ಮಂದ, ಸುಸ್ತ, ಕ್ರಿಯಾಶೂನ್ಯನಂತೆ ಕಾಣಿಸುತ್ತಾನೆ. ಮೈಕಟ್ಟು ಕೊರೆದು ತೆಗೆದಂತೆಯೂ ಪ್ರಮಾಣಬದ್ಧವೂ ಇರುತ್ತದೆ.

ಮೇಲಿನ ಎಲ್ಲ ಲಕ್ಷಣಗಳು ಸ್ಥೂಲಮಾನದಿಂದ ಈ ಭಾಗದಲ್ಲಿ ಬರುವ ಎರಡೂ ಕ್ಷಾರಗಳಿಗೆ ಹತ್ತುತ್ತವೆ. ಅವುಗಳ ಹೊರತಾಗಿ ಈ ಭಾಗದಲ್ಲಿಯ ಪ್ರತಿಯೊಂದು ಕ್ಷಾರದ ವಿಶೇಷ ಲಕ್ಷಣಗಳನ್ನು ಕೆಳಗೆ ಹೇಳುತ್ತೇವೆ.

**ಕಾಲೀಮೂರ:—** ಗ್ರಂಥಿಗಳು ಬಾಯುತ್ತವೆ. ಅವು ಬಹಳ ಗಟ್ಟಿಯಾಗಿರುವದಿಲ್ಲ. ನೇಟ್ರಂಮೂರ ರೋಗಿಯ ವ್ರಣಕ್ಕಿಂತ ಕಾಲೀಮೂರ ರೋಗಿಯ ವ್ರಣವು ಹೆಚ್ಚು ಒಳಗೆ ಹೋಗುತ್ತವೆ ಮತ್ತು ನೋಯುತ್ತವೆ. ಆದರೆ ಕಲ್ಕೆ. ಫಾ. ದಷ್ಟು ಒಳಗೆ ಹೋಗಿರುವದಿಲ್ಲ. ಕಾಲೀಮೂರದ ರೋಗಿಯು ಪೌಷ್ಟಿಕ ಅನ್ನ ಉಂಡು ಬೆಳೆದಿರುತ್ತಾನೆ. ಆತನ ಕೂದಲು ಕರ್ರಗೆ ಮಿಂಚುತ್ತವೆ. ಮೋರೆಯಮೇಲೆ ಚಿಂತೆಯ ಕಳೆ. ಸರಿದಾಡಿದರೆ ರೋಗಿಗೆ ತ್ರಾಸವಾಗುತ್ತದೆ. ಎಲ್ಲಿಯಾದರೂ ಮನಸ್ಸು ತೊಡಗಿದರೆ ಆತನಿಗೆ ನೆಟ್ಟಗೆನಿಸುತ್ತದೆ. ಆದುದರಿಂದ ಆತನು ತನ್ನ ಬೆರಳುಗಳಿಂದ ಸುಮ್ಮಸುಮ್ಮನೆ ಏನಾದರೂ ಆಟವಾಡುತ್ತಾನೆ. ಕಾಲೀಮೂರದ ಸ್ರಾವವು ಎಳೆಯುಳ್ಳದ್ದಿರುವದು. ಅದು ನೇಟ್ರಂಮೂರದ ಸ್ರಾವಕ್ಕಿಂತ ದಟ್ಟಾಗಿರುವದು. ಮುಖವು ಬಾತಿರುತ್ತದೆ. ಸ್ವಭಾವವು ಮಂದವಾಗಿರುತ್ತದೆ.

**ನೇಟ್ರಂ ಮೂರ:—** ಮುಖಮುದ್ರೆಯು ಕಪ್ಪು, ನೀಲಿ, ಎಣ್ಣೆಗಮಟ, ಹಾಗು ಮಿಂಚುವದು. ಕೆಲವು ಸಾರೆ ಅದು ಹಳದೀ ಬಣ್ಣದ್ದೂ ಇರುವದುಂಟು. ವಿಶೇಷವಾಗಿ ಎಡಮಗ್ಗಲಿಗೆ ಬಾವು ಇರುತ್ತದೆ. ವ್ರಣಗಳು ಸಮನಾಗಿದ್ದು ಕೆಂಪು ಬಣ್ಣದವಿರುತ್ತವೆ. ಅವುಗಳಲ್ಲಿ ಬಿಳೀ ಚಿಕ್ಕಿಗಳೂ ಇರುತ್ತವೆ. ಕಣ್ಣುಗಳು ಯಾವಾಗಲು ನೀರಿನಿಂದ ತುಂಬಿ ಸೋರುತ್ತವೆ. ಕಣ್ಣಿನ ರೆಪ್ಪೆಯ ಕೂದಲುಗಳ ಬುಡಕ್ಕೆ ಬೊಕ್ಕೆಗಳಿದ್ದು ಅಲ್ಲಿಯ ತ್ವಚೆಯು ತಿಕ್ಕಿದಂತೆಯೂ ತೊಗಲು ಸುಲಿದಂತೆಯೂ ಇರುತ್ತದೆ. ತುಟಿಯ ಮೇಲೆಯೂ ಮೋರೆಯ ಮೇಲೆಯೂ ನೀರಿನ ಬೊಕ್ಕೆಗಳು, ಸ್ರಾವವು ಸ್ವಚ್ಛವಾಗಿ, ತಿಳಿನೀರಿನಂತೆ, ಪಾರದರ್ಶಕ, ಉರುವುಳ್ಳ ನೋಯುವಂಥದಿರುತ್ತದೆ. ಸ್ವಭಾವವು ಸಚಿಂತ, ಏಕಾಂತಪ್ರಿಯ, ಮುಂದೆ ಸರಿಯದಂಥದು, ಅಳುಬುರುಕ, ನಿರುತ್ಸಾಹಿ, ಮಾತಿನ ಬೇಸರ. ಶರೀರಯಷ್ಟಿಯು ತೆಳ್ಳಗೆ, ಬಡಕ.

ಮೇಲಿನ ಮೂರು ಭಾಗಗಳಲ್ಲಿ ಸಮಾವಿಷ್ಟವಾಗದೆ ಇರುವ ಬೇರೆ ಎರಡು ಕ್ಷಾರಗಳ ಲಕ್ಷಣಗಳನ್ನು ಕೆಳಗೆ ಹೇಳುತ್ತೇವೆ.

**ಕಲ್ಕೆರಿಯಾ ಫ್ಲೂಓರ:—** ಮುಖವು ಸಂಗಮರವರಿ ಕಲ್ಲಿನಂತೆ ಸ್ವಚ್ಛ ಬೆಳ್ಳಗೆ, ಮೋರೆಯ ಮೇಲೆಯೂ ಬೇರೆ ಅವಯವದೊಳಗಿಂದಲೂ ತೊಗಲಿನೊಳಗೆ ಸಿರಗಳ ನೀಲವರ್ಣದ ಜಾಲಿಗೆಯು ಸ್ಪಷ್ಟವಾಗಿ ಕಾಣಿಸುತ್ತದೆ. ತೊಗಲು ಹುರಬರಕವಿದ್ದು ಒಣಗಿರುತ್ತದೆ. ಕೊರಳೊಳಗಿನ ಗ್ರಂಥಿಗಳು ಬೆಳದು ಬಿರುಸಾಗಿರುತ್ತವೆ. ಕಲ್ಕೆ. ಫ್ಲೂದ ರೋಗಿಯು ಕಾಣಲಿಕ್ಕೆ ಎಬಡನಂತೆಯೂ ಹುಚ್ಚನಂತೆಯೂ ಇರುತ್ತಾನೆ.

**ಸಿಲಿಕಾ:**– ಮುಖಮುದ್ರೆಯು ಸಪ್ಪಗೆ ಹಳದಿ. ತೊಗಲಿಗೆ ನೀಳುಗಳೂ ತೂತುಗಳೂ ಸುಲಭವಾಗಿ ಬೀಳುತ್ತವೆ. ಗದ್ದದ ಮೇಲೆ ಮಡಿಬೊಕ್ಕೆಗಳು. ಮೋರೆಯು ಗಂಡಮಾಲೆ ಪ್ರಕೃತಿಯದು ಇಲ್ಲವೆ ಕ್ಷಯಪ್ರಕೃತಿಯದು. ರೋಗಿಯು ಸಾಧಾರಣವಾಗಿ ಸುಂದ, ಸುಸ್ತ, ಸೋಮಾರಿ, ಹಟಮಾರಿ, ಹಾಗು ನಿಗ್ರಹಿ ಕಾಣಿಸುತ್ತಾನೆ. ಆತನು ದಣಿದವರಂತೆ ಕಾಣುವನು. ಆದರೆ ಹುರಿದುಂಬಿಸುವ ಸಂಗತಿಗಳು ಒದ

ಗಿದರೆ ಭರದಿಂದ ಕೆಲಸ ಮಾಡುವ ಪ್ರವೃತ್ತಿಯಿರುವದು. ಆತನ ಪಂಚ ಜ್ಞಾನೇಂದ್ರಿಯಗಳು ಬಹಳೇ ಚುರುಕಾಗಿರುತ್ತವೆ. ಅದರಿಂದ ಆತನಿಗೆ ತ್ರಾಸವಾಗುತ್ತದೆ.

---

## ರೋಗಗಳೂ ಅವುಗಳ ನಿದಾನದ ಬಗ್ಗೆ ಕೆಲವು ಲಕ್ಷಣಗಳೂ

ಹನ್ನೆರಡು ಕ್ಷಾರಗಳ ಲಕ್ಷಣಗಳ ಬಗ್ಗೆ ಇಷ್ಟು ಸಂಗತಿಗಳನ್ನು ಹೇಳಿದ ನಂತರ ಮೊದಲು ಹೇಳಿದಂತೆ ರೋಗನಿದಾನದ ಬಗ್ಗೆ ಕೆಲವು ಲಕ್ಷಣಗಳನ್ನು ಇನ್ನು ಮುಂದೆ ಹೇಳುವೆವು. ಮೊದಲು ಮುಖದ ಮೇಲಿಂದಲೂ ಭಾವನೆಗಳ ಮೇಲಿಂದಲೂ ಸ್ಥೂಲಮಾನದಿಂದ ಯಾವ ರೋಗವಿದೆಯೆಂಬದನ್ನು ತಿಳಿದುಕೊಳ್ಳಲು ಸಹಾಯವಾಗುವಂಥ ಕೆಲವು ಉಪಯುಕ್ತ ಸಂಗತಿಗಳನ್ನು ಕೆಳಗೆ ಕೊಡುತ್ತೇವೆ.

**ಮುಖಚರ್ಯೆ:—** ಬೆಳ್ಳಗೆ, ಕಳೆಗುಂದಿದ, ಮೇಣದಂತೆ ಮೆತ್ತಗೆ, ಬಾತಿದ್ದ ಮುಖವಿದ್ದರೆ ಮೂತ್ರಪಿಂಡದ ಬೇನೆಯಿರುತ್ತದೆಂದು ಊಹಿಸ ಬೇಕು. ಪೀತ ಪಂಡುರೋಗದ ರೋಗಿಗಳ (ಹೆಂಗಸರ) ಮುಖಚರ್ಯೆಯು ಹಳದೀ ಇರುವದು. ಅದು ಅಚ್ಚ ಹಳದಿ ಅಥವಾ ಹಸರು ಇದ್ದರೆ ಕಾಮಣಿ ಯಾಗಿದೆಯೆಂದು ತಿಳಿಯಬೇಕು. ಹೃದಯ ರೋಗವಾಗಿದ್ದರೆ ಮುಖವೂ ತುಟಿಗಳೂ ಬಹಳ ಮಾಡಿ ನೇರಲ ಬಣ್ಣದ್ದಿರುತ್ತವೆ. ಶರೀರವು ದಣಿಯಲು ಕಣ್ಣಿನ ಸುತ್ತುಮುತ್ತು ಕಪ್ಪು ವಲಯಗಳು ಕಾಣಿಸುತ್ತವೆ. ನಿದ್ರಾನಾಶ, ಕರುಳಿನ ರೋಗ, ಅಪಚನ, ಚಳಿಜ್ವರ ಮುಂತಾದವುಗಳಿಂದ ಬರುವ ಅಶಕ್ತತೆಯಲ್ಲಿಯೂ ಈ ಭಾವನೆಗಳು ಇರುವದುಂಟು. ಹೃದಯಸೂಲಿ, ನ್ಯುಮೋನಿಯಾ, ಹೃದಯಾವರಣದಾಹ, ಫುಪ್ಫುಸಾವರಣ ದಾಹ ಮುಂತಾದ ರೋಗಗಳಲ್ಲಿ ಮುಖಚರ್ಯೆಯು ಚಿಂತಾತುರವಾಗಿ ಕಾಣುತ್ತದೆ.

**ಕಣ್ಣು:—** ಕಣ್ಣುಗಳು ನಿಚ್ಚಳವಾಗಿ ಮುಂದೆ ಬಂದಂತೆ ಕಾಣು ತ್ತಿದ್ದರೆ, ಅಥವಾ ಗುಡ್ಡಿಗಳು ಹೊರಬಿದ್ದಂತೆ ಕಾಣುತ್ತಿದ್ದರೆ, ಗಂಟಲವಾಳವು

(ಗಾಯಿಟರ) ಆಗಿದೆಯೆಂದು ತಿಳಿಯಬೇಕು. (ಕೊರಳಿನ ಮುಂಭಾಗದಲ್ಲಿ ಗಲಗಂಡ ಅಥವಾ ಗಂಟಲವಾಳವೆಂಬ ಗ್ರಂಥಿಯು ಇರುತ್ತದೆ. ಆ ಗ್ರಂಥಿಗೆ ರೋಗವಾದರೆ ಬುದ್ಧಿಯೂ ಮಿದುಳೂ ಬೆಳೆಯುವದಿಲ್ಲ. ಮತ್ತು ಕೂಸು ಎಬಡಸಂತೆಯೂ ಹುಚ್ಚಸಂತೆಯೂ ಕಾಣಿಸುತದೆ.)

ಜ್ವರವು ಬಂದಾಗ ಕಣ್ಣಿನಲ್ಲಿ ಅಸ್ವಾಭಾವಿಕವಾದ ತೇಜವೂ ಹೊಳಪೂ ಕಾಣುತ್ತದೆ. ಕ್ಷಯರೋಗಿಯ ಕಣ್ಣುಗಳು ಸ್ವಚ್ಛವಿದ್ದು ಹೊಳೆಯುತ್ತವೆ. ಚಿಕ್ಕಮಕ್ಕಳ ಕಣ್ಣುಗಳು ಕಾಜಿನಂತೆ ನುಣುಪಾಗಿಯೂ ಪಾರದರ್ಶಕವೂ ಇದ್ದರೆ ಆಂತ್ರಗ್ರಂಥಿಯ ದಾಹವಿರುತ್ತದೆಂದು ತಿಳಿಯಬೇಕು.

ತುಟಿ, ನಾಲಿಗೆ, ಹಾಗು ತೊಗಲು ಒಣಗಿರುವದು; ಬಹಳ ಅಸ್ವಸ್ಥವೆನಿಸುವದು; ಮತ್ತು ಕಣ್ಣುಗಳು ಪಾರದರ್ಶಕವಿರುವದು—ಈ ಭಾವನೆಗಳು ಜಠರದಾಹದ ನಿದರ್ಶಕಗಳು. ಜ್ವರವು ಬಂದಾಗ ಕಣ್ಣುಗಳು ಹೀಗೆ ಇರುವದು ಅನಿಷ್ಟ ಲಕ್ಷಣವೆಂದು ತಿಳಿಯಬೇಕು. ದಣುವಿಕೆ ತರುವಂಥ ರೋಗದಲ್ಲಿಯೂ ಶಕ್ತಿಪಾತದಲ್ಲಿಯೂ ಕಣ್ಣುಗಳು ಒಳಗೆ ಹೋದಂತೆ ಕಾಣಿಸುತ್ತವೆ.

ಪಂಡುರೋಗಿಯ ಕಣ್ಣುಗಳು ನಿಸ್ತೇಜವಿರುತ್ತವೆ. ಕಾಮುಣಿಯಾದವರ ಕಣ್ಣುಗುಡ್ಡಿಗಳೂ ಮುದುಕರ ಕಣ್ಣುಗುಡ್ಡಿಗಳೂ ಹಳದೀ ಕಾಣಿಸುತ್ತವೆ. ಆನುವಂಶಿಕ ಹೃದಯ ರೋಗದಲ್ಲಿಯೂ ಸಂಧಿವಾತ ಪಕೃತಿಯಲ್ಲಿಯೂ ಕಣ್ಣುಗಳು ನೀಲವರ್ಣವಾಗಿ ಕಾಣಿಸುತ್ತವೆ. ತುಟಿಗಳು ನಿಃಸ್ತೇಜವಿರುವದು ಪಂಡುರೋಗದ ಲಕ್ಷಣವಿದ್ದಂತೆ ಅದು ಹೃದಯ ರೋಗದ ಲಕ್ಷಣವೂ ಇರುತ್ತದೆ. ಜ್ವರವು ಬಂದಾಗ ಹಾಗು ಜಠರ ವಿಕೃತಿಯಾದಾಗ ತುಟಿಗಳು ಒಣಗುತ್ತವೆ.

ಮೂಗು:— ಮೂಗು ಮುಕುರಾಗಿರುವದು ಬಹಳವಾಗಿ ಉಪದಂಶದ ಲಕ್ಷಣವು. ಇಂಥ ಜನರ ಮೂಗು ಅಗಲು, ಸಪಾಟ, ಚಪ್ಪಟೆಯಾಗಿ ಕೂತಂತೆ ಇರುತ್ತದೆ.

ಸಣ್ಣ ಹುಡುಗರ ಮುಖಚರ್ಯೆಯ ಮೇಲಿಂದ ಅವರಿಗೆ ಆಗುತ್ತಿರುವ ವೇದನೆಯ ಸ್ವರೂಪವು ತಿಳಿಯುತ್ತದೆ. ಹಣೆಗೆ ಗಂಟು ಹಾಕುವದು,

ನಿರಿಗೆಗಟ್ಟುವದು, ಹುಬ್ಬು ಮೇಲೆ ಏರಿಸುವದು, ಇವು ತಲೆಸೂಲಿಯ ಲಕ್ಷಣಗಳು.

ಸಣ್ಣ ಹುಡುಗರ ಹೊಟ್ಟೆಯಲ್ಲಿ ನೋವು ಇದ್ದರೆ ಮೋರೆಯ ತುದಿಗಳು ಮೇಲಕ್ಕೆ ಎತ್ತಿದಂತೆ ಕಾಣುತ್ತವೆ. ಮೂಗಿನ ಸೊಳ್ಳೆಗಳು ಹಿಗ್ಗುವದು, ಹುಬ್ಬು ಮೇಲಕ್ಕೆ ಏರುವದು, ಇದು ಎದೆಯಲ್ಲಿಯ ನೋವಿನ ಲಕ್ಷಣವು. ಜ್ವರದ ಪ್ರಥಮಾವಸ್ಥೆಯಲ್ಲಿ ಹುಡುಗರ ಚರ್ಯೆಯು ನಿಶ್ಚಿಂತ ವಿದ್ದಂತೆ ಕಾಣಿಸುತ್ತದೆ. ಮೂಗು ಅಗಲಾಗುರುವದು, ಬಾಯಿ ತೆರೆದಿರು ವದು, ಇವು ಮಿದುಳಿನ ಬೆಳಿಗೆಯಾಗದ್ದರ ಲಕ್ಷಣಗಳು. ಎಬಡ ಹಾಗು ಹುಚ್ಚು ಹುಡುಗರಲ್ಲಿ ಈ ಲಕ್ಷಣಗಳಿರುವವು. ಅಸ್ಥಿಮಾರ್ದವತೆಯಲ್ಲಿಯೂ ಮುಟ್ಟುದೋಷದಲ್ಲಿಯೂ ಕೂಸುಗಳ ನೆತ್ತಿಯು ಬೇಗನೆ ತುಂಬಿ ಬರುವದಿಲ್ಲ. ನಿರೋಗಿ ಹುಡುಗರ ನೆತ್ತಿಯು ಸಾಧಾರಣವಾಗಿ ಮೊದಲನೆಯ ಅಥವಾ ಎರಡನೆಯ ವರ್ಷದಲ್ಲಿ ತುಂಬುತ್ತದೆ.

**ಆಸನ ಅಥವಾ ಕೂಡುವದು:—** ರೋಗಿಯು ಕುಳಿತ ಸ್ಥಿತಿಯ ಮೇಲಿಂದಲೂ ಆತನು ಕೂಡುವ ಪದ್ಧತಿಯ ಮೇಲಿಂದಲೂ ಅವನಿಗೆ ಯಾವ ರೋಗವಾಗಿರಬಹುದು ಎಂಬ ಬಗ್ಗೆ ಅನುಮಾನ ಮಾಡಬಹುದು. ಎದುರಿಗೆ ತಲೆದಿಂಬನ್ನು ಇಟ್ಟು ಅದರ ಮೇಲೆ ತಲೆಯನ್ನು ಇಟ್ಟು ಕುಳಿತಿರುವ ರೋಗಿಯು ದಮ್ಮಿನ ವಿಕಾರದವನೆಂದು ತಿಳಿಯಬೇಕು. ಹೃದಯ, ಫುಪ್ಫುಸ, ಮೂತ್ರಪಿಂಡ ಇವುಗಳ ರೋಗದಿಂದ ಈ ವಿಕಾರ ಗಳು ಹುಟ್ಟುತ್ತವೆ. ಒಂದೇ ಮಗ್ಗಲ ಮೇಲೆ ಮಲಗಿಕೊಂಡರೆ ಬಹಳ ಮಾಡಿ ಫುಪ್ಫುಸದ ವಿಕಾರವು ಆಗುವದು, ಇದು ಫುಪ್ಫುಸ ವಿಕಾರದ ಲಕ್ಷಣವು.

ಕಾಲುಗಳನ್ನು ಹೊಟ್ಟೆಗೆ ಹಚ್ಚಿ ಒಂದು ಮಗ್ಗಲಾಗಿ ಮಲಗುವದು ಶೂಲವಿಕಾರದ ( ವಾತಸೂಲಿಯ ) ಅಥವಾ ಮಸ್ತಿಷ್ಕದಾಹದ ಚಿನ್ಹವು. ಬೆನ್ನು ಕೆಳಗೆ ಮಾಡಿ ಮಲಗುವದು ಬಹುಶಃ ದಣುವಿಕೆ ಉಂಟುಮಾಡುವ ರೋಗದಲ್ಲಿ (ವಿಷಮಜ್ವರದಂಥ ದೋಷಯುಕ್ತ ರೋಗದಲ್ಲಿ) ಕಂಡುಬರು ತ್ತದೆ. ಉದರಾವರಣದಾಹದಲ್ಲಿಯೂ ರೋಗಿಯು ಸೋತಿರುತ್ತಾನೆ. ಈ

ರೋಗದಲ್ಲಿ ಉದರದ ಸ್ನಾಯುಗಳ ಮೇಲೆ ಹೆಚ್ಚು ಒತ್ತಾಯ ವಾಗಬಾರದೆಂದು ರೋಗಿಯು ತನ್ನ ತೊಡೆಗಳನ್ನು ಮಡಚಿಕೊಂಡು ಮಲಗುತ್ತಾನೆ.

ಧನುರ್ವಾತ, ಹಿಸ್ಟೀರಿಯಾ, ಅಪಸ್ಮಾರ, ಸೆಟೆಬೇನೆ, ಬಾಲಗ್ರಹ, ಇವುಗಳಲ್ಲಿ ರೋಗಿಯು ಬಿಲ್ಲಿನಾಕಾರವಾಗಿರುವನು. ಅಂದರೆ ಅವನ ತಲೆಯು ಅವನ ಕಾಲಿನ ಹಿಂಭಾಗಕ್ಕೆ ಹತ್ತಿರುತ್ತದೆ.

ಒಂದು ಕಾಲನ್ನು ಮೊಳಕಾಲಲ್ಲಿ ಮಡಿಚಿ ಅದನ್ನು ಹಿಂಬಡದ ಮೇಲಿಟ್ಟು ಅದರ ಮೇಲೆ ಎರಡನೆಯ ಕಾಲನ್ನಿಟ್ಟು ಮಲಗಿದ್ದರೆ, ಹಾಗು ಆ ರೋಗಿಗೆ ಮಾರಿಕೆಯೂ ಆಗಿದ್ದರೆ, ಆತನು ಬದುಕುವದಿಲ್ಲವೆಂದು ತಿಳಿಯಬೇಕು.

**ಹೃದಯ ವಿಕಾರ:—** ಶ್ವಾಸೋಚ್ಛ್ವಾಸಕ್ಕೆ ಬಹಳ ಕಷ್ಟವಾಗುವದು; ಉದರ ( ಜಲಶೋಥ ) ಹಾಗು ಮುಖಚರ್ಯೆಯು ಕರ್‍ರಗೆ, ನೀಲಿಯಾಗುವದು, ಇವು ಮೂರು ಹೃದಯವಿಕಾರದ ಪ್ರಮುಖ ಲಕ್ಷಣಗಳು. ಹೃದಯದಲ್ಲಿ ದಡದಡಿಸುವದು, ನೋಯುವದು, ಮೂರ್ಛೆ ಬರುವದು, ಹಾಗು ಕೆಮ್ಮುವದು ಈ ಲಕ್ಷಣಗಳಾದರೂ ಮೇಲೆ ಹೇಳಿದ ಲಕ್ಷಣಗಳ ಜತೆಗೆ ಇರುವವು. ಒಮ್ಮಿಂದೊಮ್ಮೆ ಮೂರ್ಛೆಯುಂಟಾಗಿ ಸಾವು ಬರುವದು ಬೇರೆ ಯಾವ ರೋಗಕ್ಕಿಂತಲೂ ಹೃದಯವಿಕಾರದಲ್ಲಿಯೇ ಮೇಲಿಂದ ಮೇಲೆ ಕಂಡುಬರುವದು.

**ನಾಡಿ:—** ನಿರೋಗಿ ಹಾಗು ನಡುವಯಸ್ಸಿನ ಮನುಷ್ಯರಲ್ಲಿ ಸಾಧಾರಣವಾಗಿ ಪ್ರತಿಯೊಂದು ಮಿನಿಟಿಗೆ ೭೦ರಿಂದ ೭೫ರ ವರೆಗೆ ನಾಡಿಯು ಹಾರುತ್ತದೆ. ಆದರೆ ಇದು ಅಬಾಧಿತವಾದ ನಿಯಮವಲ್ಲ. ಹಲವು ಸಶಕ್ತ ಪ್ರಕೃತಿಯ ಜನರಲ್ಲಿ ಕಡಿಮೆಯೆಂದರೆ ೪೦ ರ ವರೆಗೆ ಹಾರುತ್ತದೆ. ಬೇರೆ ಕೆಲವರಲ್ಲಿ ೯೦ ರ ವರೆಗೆ ಸಹ ಇರುವದುಂಟು. ಬೇರೆ ಬೇರೆ ವಯಸ್ಸಿನಲ್ಲಿಯೂ, ಹೆಂಗಸರಲ್ಲಿಯೂ, ಬೇರೆ ಬೇರೆ ರೀತಿಯಾಗಿ ಮಲಗುವದರಿಂದಲೂ ನಾಡಿಯ ಪ್ರಮಾಣವು ಹೆಚ್ಚು ಕಡಿಮೆಯಾಗುವದು. ನಾಡಿಯ ಹಾರಿಕೆಯ ಪ್ರಮಾಣವು ಬೇರೆ ಬೇರೆ ವಯಸ್ಸಿನಲ್ಲಿ ಕೆಳಗಿನಂತೆ ಇರುತ್ತದೆ.

| | | | |
|---|---|---|---|
| ಹುಟ್ಟಿದ ಕೂಡಲೆ...... | ೧೩೦ | ರಿಂದ | ೧೪೦. |
| ೧ನೆಯ ವರ್ಷ......... | ೧೧೫ | ,, | ೧೩೦. |
| ೨ನೆಯ ವರ್ಷ......... | ೧೦೦ | ,, | ೧೧೫. |
| ೩ನೆಯ ವರ್ಷ......... | ೯೦ | ,, | ೧೦೦. |
| ೭ ವರ್ಷ............. | ೮೫ | ,, | ೯೦. |
| ೧೪ ವರ್ಷ........... | ೮೦ | ,, | ೮೫. |
| ನಡು ವಯಸ್ಸಿನಲ್ಲಿ....... | ೭೦ | ,, | ೭೫. |
| ಮುಪ್ಪಿನಲ್ಲಿ........... | ೫೦ | ,, | ೬೫. |

ಹೆಂಗಸರ ನಾಡಿಗಳು ಗಂಡಸರ ನಾಡಿಗಳಿಗಿಂತ ಸುಮಾರು ೧೦-೧೫ ರಷ್ಟು ಹೆಚ್ಚಾಗಿರುವವು. ಕುಳಿತವರ ನಾಡಿಗಿಂತ ನಿಂತವರ ನಾಡಿಯು ೧೦-೧೨ ಹೆಚ್ಚಿಗಿರುತ್ತದೆ. ಶ್ರಮವಾದಾಗ, ಉಂಡಬಳಿಕ, ನೀರು ಕುಡಿದ ನಂತರ, ಮುಂಜಾನೆಗಿಂತ ಸಂಜೆಗೆ, ಮುಟ್ಟಾಗುವ ಕಾಲದಲ್ಲಿ ನಾಡಿಯು ಹೆಚ್ಚು ಇರುತ್ತದೆ; ನಿದ್ದೆಯಲ್ಲಿ ಕಡಿಮೆಯಾಗುತ್ತದೆ.

ಹೃದಯವು ನಿರೋಗಿಯಾಗಿದ್ದರೂ ಜ್ವರವು ಬಂದಾಗ ನಾಡಿಯು ಬೇಗನೆ ಹಾರುತ್ತದೆ. ಜ್ವರವು ಹೆಚ್ಚುಕಡಿಮೆಯಾದಂತೆ ನಾಡಿಯ ಪ್ರಮಾಣವೂ ಹೆಚ್ಚುಕಡಿಮೆಯಾಗುವದು. ಕ್ಷಯದ ಪ್ರಥಮಾವಸ್ಥೆ, ಇನ್‌ಫ್ಲುಯೆಂಝಾ ಹಾಗು ಬೇರೆ ಕ್ರಿಮಿಜನ್ಯ ರೋಗಗಳಲ್ಲಿ ನಾಡಿಯು ತೀವ್ರವಾಗಿ ಹಾರುವದು. ದಾಹಜನ್ಯ ಜ್ವರಗಳಲ್ಲಿ ನಾಡಿಯು ೧೫೦ ರ ವರೆಗೆ ಏರುವದು. ನಾಡಿಯ ಬಡಿತಗಳು ೧೭೦ ರ ವರೆಗೆ ಬೆಳೆದರೆ ಬೇನೆಯು ಅಸಾಧ್ಯವೆಂದು ತಿಳಿಯಬೇಕು. ದಾಹಜನ್ಯ ರೋಗಗಳಲ್ಲಿಯಾಗಲೀ ಜ್ವರದಲ್ಲಿಯಾಗಲೀ ನಾಡಿಯು ತುಂಬಿ ವೇಗದಿಂದ ಹಾರುವಂತೆ ಕಾಣುತ್ತದೆ. ನಾಡಿಯು ತುಂಬಿದಂತೆ ಇದ್ದರೂ ಮಂದವಾಗಿ ಹರಿಯುತ್ತಿದ್ದರೆ ಅದು ನಿರುತ್ಸಾಹದ ಲಕ್ಷಣವು; ಅಥವಾ ಮಿದುಳಿನ ರೋಗದ ಲಕ್ಷಣವು. ಮಸ್ತಿಷ್ಕಾಘಾತ, ಅಪಸ್ಮಾರ, ಅರ್ಧಾಂಗವಾಯು, ಪಂಡುರೋಗ, ಆರೋಗ್ಯ ಸ್ಥಾಪನಾವಸ್ಥೆ, ಇವುಗಳಲ್ಲಿಯಾದರೂ ನಾಡಿಯು ಬಹಳೇ ಮಂದವಿರುತ್ತದೆ. ಕಾಮಣಿಯಲ್ಲಿಯೂ ಮಧುಮೇಹದಲ್ಲಿಯೂ ನಾಡಿಯು

ಮಂದವಾಗುತ್ತದೆ, ಸನ್ನಿಪಾತಜ್ವರದಲ್ಲಿಯೂ (ಟಾಯಿಫಾಯಿಡ)ನಾಡಿಯು ಜ್ವರದ ಮಾನದಿಂದ ಮಂದವಾಗಿಯೇ ಹಾರುತ್ತದೆ. ನಾಡಿಯು ಅನಿಯಮಿತವಿರುವದು ಹೃದಯವಿಕಾರದ ಲಕ್ಷಣವು. ಹೃದಯಶಕ್ತಿಪಾತದಲ್ಲಿ ನಾಡಿಯ ಅನಿಯಮಿತತನವು ಅಸಾಧ್ಯರೋಗದ ಲಕ್ಷಣವೇ ಸರಿ. ಕ್ಷೀಣವೂ, ಬಲಹೀನವೂ, ಕೈಗೆ ಸಹ ಹತ್ತದಂಥ ನಾಡಿಯು ಇರುವದು ಬಹಳವಾಗಿ ಮರಣದ ಲಕ್ಷಣವೆಂದೇ ತಿಳಿಯಬೇಕು. ಬಹಳ ದಣಿದರೂ ಹೀಗೆ ಆಗುವದು. ಹೃದಯವಿಕಾರವಿದ್ದರೆ ನಾಡಿಯು ನಡುನಡುವೆ ತಪ್ಪಿ ತಪ್ಪಿ ಹಾರುತ್ತದೆ.

**ಫುಪ್ಫುಸವಿಕಾರ:**— ಕೆಮ್ಮುವದೂ ಉಸುರಾಡಿಸುವದೂ ಕಷ್ಟದಾಯಕವಾಗುವದು; ಕಫವು ಬೀಳುವದು; ಒಮ್ಮೊಮ್ಮೆ ಎದೆಯಲ್ಲಿ ನೋಯುವದು; ಎದೆಯಿಂದ ರಕ್ತವು ಸೋರುವದು; ಇವು ಫುಪ್ಫುಸವಿಕಾರದ ಪ್ರಮುಖ ಲಕ್ಷಣಗಳು, ಇವುಗಳ ಹೊರತಾಗಿ ಜ್ವರವೂ, ಅಶಕ್ತತನವೂ, ಸೊರಗುವದೂ ಇವೆಲ್ಲ ಅದರ ಸರ್ವಸಾಧಾರಣ ಲಕ್ಷಣಗಳೇ ಅಹುದು.

ಗಂಟಲಿನಲ್ಲಿ ಸೊಂಯಿ ಸೊಂಯಿ ಎಂತಲೂ ಘರ ಘರ ಎಂತಲೂ ದನಿಯಾಗಿ ಕಫವು ಬೀಳುತ್ತಿದ್ದರೆ ಶ್ವಾಸನಲಿಕೆಯಲ್ಲಿ ದಾಹವಾಗಿದೆಯೆಂದು ತಿಳಿಯಬೇಕು.

ಕೆಮ್ಮಿ ಕೆಮ್ಮಿ ಮೇಲಿಂದಮೇಲೆ ಉಬ್ಬಸ ಬಂದು ಕಾರಿಕೆಯಾಗುತ್ತಿದ್ದರೆ ಅದು ಕೋಡಗ ಕೆಮ್ಮಿನ ಲಕ್ಷಣವೆಂದು ತಿಳಿಯಬೇಕು. ಕಫಕ್ಷಯದಲ್ಲಿಯೂ ಈ ಭಾವನೆಯಿರುವದು. ಮುಂಜಾವಿನಲ್ಲಿಯೂ ರಾತ್ರಿಯಲ್ಲಿ ಮಲಗುವಾಗಲೂ ಗಂಟಲಲ್ಲಿ ತುರಿಸಿದಂತಾಗಿ ಬಹುದಿವಸ ಕೆಮ್ಮು ಬರುತ್ತಿದ್ದರೆ ಕಫಕ್ಷಯದ ಮೊದಲನೆಯ ಅವಸ್ಥೆಯು ಆರಂಭವಾಗಿದೆಯೆಂದು ತಿಳಿಯಬೇಕು. ಚಿಕ್ಕಮಕ್ಕಳಿಗೆ ಜಂತು ಆಗಿದ್ದರೆ ರಾತ್ರಿಯಲ್ಲಿ ಕೆಮ್ಮಿ ಕೆಮ್ಮಿ ತ್ರಾಸವಾಗುವದು, ರಾತ್ರಿಯಲ್ಲಿಯೂ ಮಲಗಿದನಂತರವೂ ಕೆಮ್ಮು ಹೆಚ್ಚಾಗುತ್ತಿದ್ದರೆ; ಕಿರಿನಾಲಿಗೆಯು ಇಳಿದಿದೆಯೋ ಹೇಗೆ ಎಂಬುದನ್ನು ನೋಡಬೇಕು. ಅಪಚನದಿಂದಾಗುವ ಬೇನೆಗಳಲ್ಲಿಯೂ ಹೃದಯವಿಕಾರದಲ್ಲಿಯೂ ಕೆಮ್ಮಿನ ಉಪದ್ರವವಾಗುತ್ತದೆ. ಕೆಮ್ಮು, ಬುರುಗಿನಂಥ

ಕಫವು, ಸ್ವಲ್ಪ ಜ್ವರವು, ಇವಾದರೂ ಬಹುಮಟ್ಟಿಗೆ ಶೀಘ್ರ ಶ್ವಾಸನಲಿಕಾ-ದಾಹದ ಲಕ್ಷಣಗಳೇ.

ಉಸುರನ್ನು ಒಳಗೆ ಎಳೆಯುವಾಗ ತೀವ್ರ ವೇದನೆಯಾಗುವದು; ಒಣ ಕೆಮ್ಮು ಸ್ವಲ್ಪ ಸ್ವಲ್ಪ ಬರುವದು; ಹಾಗು ಸ್ವಲ್ಪ ಜ್ವರವು ಬರುವದು; ಇವು ಫುಪ್ಫುಸಾವರಣದಾಹದ ಲಕ್ಷಣಗಳು.

ಒಮ್ಮೆಂದೊಮ್ಮೆ ಚಳಿಯಾಗಿ ಜ್ವರ ಬರುವದು, ಉಸುರಾಡಿಸುವಾಗ ತೊಂದರೆಯಾಗುವದು, ಹಾಗು ಕೆಂಪು ಕಫ ಬೀಳುವದು, ಇವು ನ್ಯುಮೋನಿಯಾದ ಲಕ್ಷಣಗಳು. ಬಹು ದಿವಸದ ಕೆಮ್ಮು ಇದ್ದು ಜ್ವರವು ಬರದಿದ್ದರೆ, ಅದು ಬಹಳಮಾಡಿ ಶ್ವಾಸನಲಿಕಾದಾಹದ ಲಕ್ಷಣವಿರಬಹುದು. ರೋಗಿಯು ದಿನದಿನಕ್ಕೆ ಸೊರಗುವನು, ಬೆವರು ಬಿಡುವದು, ಕೆಮ್ಮು ಬಹುಮಟ್ಟಿಗೆ ಇರುವದು, ಜ್ವರವು ನಿಂತು ನಿಂತು ಬರುವದು, ಇವೆಲ್ಲ ಕಫಕ್ಷಯದ ಲಕ್ಷಣಗಳು. ಸಣ್ಣ ಹುಡುಗರ ಶ್ವಾಸೋಚ್ಛ್ವಾಸವು ಜೋರಿನಿಂದ ಆಗುವದು, ಮೂಗಿನ ಸೊಳ್ಳೆಗಳು ಹಾರುವವು, ಹಾಗು ಕೆಮ್ಮು ಇರುವದು, ಇವು ಲಘುಶ್ವಾಸ ನಲಿಕಾದಾಹದ (ಕ್ಯಾಪಿಲರಿ ಬ್ರಾಂಕಾಯಿಟ್ಸ) ಲಕ್ಷಣಗಳು. ಪ್ರೌಢ ಜನರಿಗೆ ಆಗುವಂಥ ನ್ಯುಮೋನಿಯದಲ್ಲಿಯೂ ಈ ಲಕ್ಷಣಗಳು ಇರುವವು.

**ಗಂಟಲು:—** ಗಂಟಲು ನೋಯುವದೂ ದನಿಯು ಕೂಡುವದೂ ಇವು ಗಂಟಲರೋಗದ ಪ್ರಮುಖ ಲಕ್ಷಣಗಳು. ಗಂಟಲದಾಹ, ಕಿರಿನಾಲಿಗೆಯ ದಾಹ, ಘಟಸರ್ಪ, ಉಪದಂಶ, ಕ್ಷಯ, ಗಂಟಲಿನಲ್ಲಿ ಗ್ರಂಥಿಯೂ ಹುಣ್ಣೂ ಆಗುವದು, ಇವೇ ಮುಂತಾದ ರೋಗಗಳಲ್ಲಿ ಗಂಟಲು ನೋಯುತ್ತದೆ. ದನಿ ಕೂಡುವದು ಕಂಠನಲಿಕೆಯ ಇಲ್ಲವೆ ಧ್ವನಿನಲಿಕೆಯ ಲಕ್ಷಣವು. ಇದರಲ್ಲಿ ಗಂಟಲನೋವೂ ಇರುವದುಂಟು.

ದನಿ ಕೂಡುವದು, ಗೊಗ್ಗರ ದನಿ, ಒಣ ಕೆಮ್ಮು, ನುಂಗುವಾಗ ನೋವು, ಇವು ಶೀಘ್ರ ಹಾಗು ಹಳೆಯ ಕಂಠನಲಿಕಾದಾಹದ ಲಕ್ಷಣಗಳು.

**ಮುಖ:—** ತುಟಿ ಒಣಗುವದು ಅಪಚನದ ಮುಖ್ಯ ಲಕ್ಷಣವಾಗಿದೆ. ಪಂಡುರೋಗದಲ್ಲಿ ತುಟಿಗಳು ಬೆಳ್ಳಗಾಗುವವು. ಹೃದಯದ

ವಿಕಾರಗಳಲ್ಲಿ ( ಹೃದಯವೃದ್ಧಿ, ಆನುವಂಶಿಕ ಹೃದಯರೋಗ ಇವುಗಳಲ್ಲಿ ) ತುಟಿಗಳು ಕಪ್ಪು ಅಥವಾ ನೀಲಿಯಾಗುತ್ತವೆ. ತುಟಿಗಳು ಸೀಳಿದ್ದು ಸುತ್ತು ಮುತ್ತಲಿನ ಭಾಗವು ಕೆಂಪಾಗಿದ್ದರೆ, ಅದು ಉಪದಂಶದ ನಿಚ್ಚಳವಾದ ಲಕ್ಷಣವು. ಸುತ್ತಲಿನ ಭಾಗವು ಕೆಂಪಾಗದೆ ಬರೇ ತುಟಿಗಳು ಸೀಳಿದ್ದರೆ ಉಪದಂಶವಾಗಿಲ್ಲೆಂದು ತಿಳಿಯಬೇಕು.

ಕೆಳಗಿನ ವಿಕಾರಗಳಲ್ಲಿ ಹೊಲಸು ಉಸಿರು ಇರುವದು.

೧. ಮೋರೆಯನ್ನೂ ಹಲ್ಲುಗಳನ್ನೂ ಸ್ವಚ್ಛವಾಗಿ ತೊಳೆಯದೆ ಇರುವದು. ಅದರಿಂದ ಹಲ್ಲಿಗೆ ಹುಳ ಹತ್ತುತ್ತವೆ, ಕೀವು ಸೋರುತ್ತದೆ, ಹಾಗು ಹೊಲಸು ನಾರುತ್ತದೆ.

೨. ಕಿರಿನಾಲಿಗೆಯ ರೋಗ, ಗಂಟಲಿನ ರೋಗ, ಅಗ್ನಿಮಾಂದ್ಯ, ಅವರೋಧ, ಮತ್ತು ಅಪಚನದ ತಕರಾರು.

೩. ಮೂಗಿನ ರೋಗ, ಪಿನಸಿ.

೪. ಫುಪ್ಪುಸರೋಗ, ಫುಪ್ಪುಸ ಕೊಳೆಯುವದು ಇತ್ಯಾದಿ.

ಮಧುಮೇಹದಲ್ಲಿ ಬಾಯಿಗೆ ಮಧುರ ವಾಸವು ಬರುತ್ತದೆ. ಮದ್ಯ ಪಾನ ಮಾಡುವವರ ಬಾಯಿಗೆ ಬರುವ ಹೊಲಸು ನಾತವಂತೂ ಪ್ರಸಿದ್ಧವದೆ.

**ಜೊಲ್ಲು**:— ಬಾಯಿ ಬರುವದು, ದೀರ್ಘಜಠರದಾಹ, ಬಸುರು, ಅರ್ಧಾಂಗದ ಕೆಲವು ಪ್ರಕಾರಗಳು, ಗಂಟಲಬೇನೆ, ನಾಯಿ ಕಚ್ಚುವದು, ಹುಚ್ಚು ಹಿಡಿಯುವದು, ಪಾದರಸ ( ಪಾರಜ ) ದಂಥ ಔಷಧವನ್ನು ತೆಗೆದುಕೊಳ್ಳುವದು, ಇವೇ ಮುಂತಾದ ವಿಕಾರಗಳಲ್ಲಿ ಜೊಲ್ಲು ಹೆಚ್ಚಾಗಿ ಸೋರುತ್ತದೆ.

ಮಧುಮೇಹ, ತೀವ್ರ ಅತಿಸಾರ, ಬಹುದಿನದ ಮೂತ್ರಪಿಂಡದಾಹ. ಮುಂತಾದ ಬೇನೆಗಳಲ್ಲಿ ಜೊಲ್ಲು ಕಡಿಮೆ ಸೋರುತ್ತದೆ.

**ಒಸಡೆ**:— ಮುಖಪಾಕ ಅಥವಾ ಬಾಯಿ ಬರುವದು. ಈ ರೋಗ ದಲ್ಲಿ ಒಸಡಿಗಳು ಕೆಂಪಾಗಿದ್ದು ಅವುಗಳಲ್ಲಿ ವ್ರಣಗಳಾಗುತ್ತವೆ. ಪಾಂಡು ರೋಗದಲ್ಲಿ ಅವು ಬೆಳ್ಳಗಾಗಿಯೂ, ಛಾಪಖಾನೆಯಲ್ಲಿ ಮೊಳೆ ಜೋಡಿಸು ವವರ ಒಸಡಿಗಳು ಸೀಸಿನ ವಿಷದಿಂದ ನೀಲಿಯಾಗಿಯೂ ಇರುತ್ತವೆ.

ನಾಲಿಗೆಯ ಬಗ್ಗೆ **ಸಾಮಾನ್ಯರೋಗಗಳೂ ಅವುಗಳ ಚಿಕಿತ್ಸೆಯೂ** ಎಂಬ ಪ್ರಕರಣದಲ್ಲಿ "ನಾಲಿಗೆಯೂ ರುಚಿಯೂ" ಎಂಬ ವಿಭಾಗದಲ್ಲಿ ಕೊಟ್ಟಿರುವ ಮಾಹಿತಿಯನ್ನು ಅವಶ್ಯವಾಗಿ ಓದಬೇಕು.

**ಉದರವಿಕಾರ:**— ಜಠರ, ಯಕೃತ, ಅಗ್ನಿ ಆಶಯ (ಪ್ಯಾಂಕ್ರಿಯಾ), ಲಘು ಆಂತ್ರ, ಬೃಹದಾಂತ್ರ, ಪ್ಲೀಹಾ, ಮೂತ್ರಪಿಂಡ, ಉದರಾವರಣ, ಮುಂತಾದ ಇಂದ್ರಿಯಗಳ ಎಷ್ಟೋ ರೋಗಗಳು "ಉದರ ವಿಕಾರ"ವೆಂಬ ಭಾಗದಲ್ಲಿ ಬರಬಹುದು. ಅವುಗಳ ಲಕ್ಷಣಗಳಾದರೂ ಸ್ವಾಭಾವಿಕವಾಗಿ ಬಹುವಿಧವಾಗಿರಬಹುದು. ಹೀಗಿದ್ದರೂ ಮುಂದೆ ಹೇಳಿದ ಮೂರು ಪ್ರಮುಖ ಲಕ್ಷಣಗಳು ಉದರವಿಕಾರದ ನಿಚ್ಚಳವಾದ ದ್ಯೋತಕಗಳೆಂದು ತಿಳಿಯಲಿಕ್ಕೆ ಯಾವ ಅಡ್ಡಿಯೂ ಇಲ್ಲ.

ಉದರ ಭಾಗದಲ್ಲಿ ವೇದನೆ, ಇಂದ್ರಿಯವೃದ್ಧಿ (ಯಕೃತ, ಪ್ಲೀಹಾ, ಜಠರ, ಮುಂತಾದ ಇಂದ್ರಿಯಗಳ ವೃದ್ಧಿ), ಮತ್ತು ಗುಲ್ಮ, ಇವು ಆ ಮೂರು ಲಕ್ಷಣಗಳು. ಇವುಗಳಲ್ಲದೆ ಕಾರಿಕೆಯೂ ಒಂದು ಲಕ್ಷಣವಾಗಬಹುದು. ಕರುಳಿನಲ್ಲಿ ವ್ಯತ್ಯಾಸವಾಗಿದ್ದರೆ, ಅತಿಸಾರ, ಅವರೋಧ, ಈ ಭಾವನೆಗಳಿರುತ್ತವೆ.

ರೋಗಿಯು ಸಾಧಾರಣವಾಗಿ ನಿರೋಗಿಯಾಗಿರುವನು, ಯಾವದೇ ತರಹ ತಕರಾರು ಇರುವದಿಲ್ಲ, ಆದರೂ ಹೊಟ್ಟೆಯಲ್ಲಿ ಒಮ್ಮಿಂದೊಮ್ಮೆ ಕಳ ವಳುವದು, ನಾಡಿಯು ೧೦೦ಕ್ಕಿಂತ ಹೆಚ್ಚಾಗುವದಿಲ್ಲ, ಕಳೆಯು ಮಾಸದಿಂದ ಅಶಕ್ತತೆ ಹಾಗು ಶಕ್ತಿಪಾತ ಇರದೆ ಇರುವದು, ವಾಂತಿಯೂ ಅವರೋಧವೂ ಒಮ್ಮೆ ಇರುವದು, ಮತ್ತೊಮ್ಮೆ ಇರುವದಿಲ್ಲ, ಈ ಲಕ್ಷಣಗಳಿದ್ದರೆ ಹೊಟ್ಟೆಯಲ್ಲಿ ಸೂಲಿಯುಂಟಾಗಿದೆ ಎಂದು ತಿಳಿಯಬೇಕು. ಒಮ್ಮಿಂದೊಮ್ಮೆಯಾಗಲಿ, ನಿಂತುನಿಂತಾಗಲಿ, ಹೊಟ್ಟೆಯೊಳಗೆ ತೀವ್ರ ವೇದನೆಯಾಗುವದೇ ಸೂಲಿ. ಸೂಲಿಗಳಲ್ಲಿ ಮೂರು ಪ್ರಕಾರಗಳುಂಟು; ಆಂತ್ರಸೂಲಿ, ಯಕೃತಸೂಲಿ, ಹಾಗು ಮೂತ್ರಸೂಲಿ. ಈ ಮೂರೂ ಸೂಲಿಗಳಲ್ಲಿ ಸಾಮಾನ್ಯವಾಗಿ ಮುಂದೆ ಹೇಳಿದ ಭಾವನೆಗಳು ಇದ್ದೇ ಇರುತ್ತವೆ.

೧. ಕಳೆಯು ಬಹಳ ತೀವ್ರವಿರುತ್ತದೆ. ಮೊದಲು ಅದರ ಕಲ್ಪನೆ ಸಹ ಇರದೆ ಒಮ್ಮೆಲೆ ಆರಂಭವಾಗುತ್ತದೆ.

೨. ವಾಂತಿಯು ಬಹಳಸಾರೆ ಆಗುತ್ತದೆ.

೩. ಮೋರೆಯು ಸಪ್ಪಗೆ, ನಿಃಸ್ತೇಜ, ಸಚಿಂತವಾಗಿದ್ದು ನಾಡಿಯು ತೀವ್ರ ಹಾಗು ತೀಕ್ಷ್ಣವಿರುತ್ತದೆ. ಅದರ ಬಡೆತಗಳು ೧೦೦ ಕ್ಕಿಂತ ಹೆಚ್ಚಾಗುವದಿಲ್ಲ.

೪. ಜ್ವರವಿರುವದಿಲ್ಲ.

೫. ಒತ್ತಿದರೆ ನೆಟ್ಟಗೆನಿಸುತ್ತದೆ.

ಈ ಮೂರೂ ಸೂಲಿಗಳ ವಿಶಿಷ್ಟಲಕ್ಷಣಗಳನ್ನು ಕೆಳಗೆ ಕೊಡುತ್ತೇವೆ.

**ಆಂತ್ರಸೂಲಿ:—** ಒಳಗೆ ವಾಯು ತುಂಬಿಕೊಂಡಿದ್ದರಿಂದ ಆಂತ್ರ ಶೂಲಿ ಏಳುತ್ತದೆ. ಅದರ ವೇದನೆಗಳು ಒಮ್ಮೊಂದೊಮ್ಮೆ ನಿಂತು ನಿಂತು ಒಮ್ಮೊಂದೊಮ್ಮೆ ಬರುವಂಥವೂ ಹೊಟ್ಟೆಮುರಿದು ಬರುವಂಥವೂ ಇರುವವು. ಬೇರೆ ಸೂಲಿಗಳಂತೆ ಅವು ಉದರದ ಹೊರಭಾಗಕ್ಕೆ ಇರುವದಿಲ್ಲ; ಹೊಕ್ಕಳ ಸುತ್ತುಮುತ್ತು ಇರುತ್ತವೆ. ಒತ್ತಿದರೆ ನೆಟ್ಟಗೆನಿಸುತ್ತದೆ. ಬಹಳವಾಡಿ ವಾತದಿಂದಲೇ ಹೊಟ್ಟೆಯು ಉಬ್ಬಿರುತ್ತದೆ.

**ಯಕೃತ ಸೂಲಿ:—** ಪಿತ್ತ ನಲಿಕೆಯಲ್ಲಿ ಪಿತ್ತದ ಕರಣೆಗಳು ಸಿಕ್ಕಿ ಕೊಂಡದ್ದರಿಂದಲೇ ಈ ಸೂಲಿಯು ಏಳುತ್ತದೆ; ಕಳೆಯು ಬಲಭುಜದ ಹತ್ತರ ಹಿಂದಿನಿಂದ ಮೇಲಕ್ಕೆ ಏರುತ್ತದೆ. ಉದರಭಾಗದ ಕೆಳಗಡೆಗೆ ಎಂದಿಗೂ ಹೋಗುವದಿಲ್ಲ. ಕಳೆಯು ಜೋರು (Fit) ಬಂದು ಹೋದರೂ ಸಹ ಯಕೃತ ಭಾಗದಲ್ಲಿ ಸ್ವಲ್ಪ ಸ್ವಲ್ಪ ನೋವು ಇದ್ದೇ ಇರುತ್ತದೆ. ಕೆಲವು ತಾಸುಗಳಲ್ಲಿ ಅಥವಾ ಒಂದೆರಡು ದಿವಸಗಳಲ್ಲಿ ಕಾಮಣಿಯು ಕಾಣ ಹತ್ತುತ್ತದೆ.

**ಮೂತ್ರಸೂಲಿ:—** ಮೂತ್ರನಲಿಕೆಯಲ್ಲಿ ಅಶ್ಮರಿಗಳು ನಿಂತಿದ್ದರಿಂದ ಈ ಸೂಲಿಯು ಉದ್ಭವಿಸುತ್ತದೆ. ಇದರ ಕಳೆಗಳು ಟೊಂಕದಿಂದ ಕೆಳಗೆ ತೊಡೆಯವರೆಗೂ ಅದೇ ಮಗ್ಗಲಿನ ವೃಷಣದಲ್ಲಿಯೂ ಇಳಿಯುತ್ತವೆ.

ವೃಷಣವು ಸಾಧಾರಣವಾಗಿ ಮೇಲೆ ಎಳೆದಂತೆಯೂ ಬಿಗಿದು ಹಿಡಿದಂತೆಯೂ ಕಾಣುತ್ತದೆ. ವೇದನೆಯ ಜೋರು ಒಂದೆರಡು ದಿವಸ ಇರುತ್ತದೆ. ಅದು ಬಂದನಂತರ ಮೇಲಿಂದ ಮೇಲೆ ಮೂತ್ರದ ಬಾಧೆಯಾಗುವದುಂಟು. ಮೂತ್ರದೊಳಗಿಂದ ರಕ್ತವು ಹೋಗುತ್ತದೆ. ಮೂತ್ರವು ಹನಿಹನಿಯಂತೆ ಹೋಗುತ್ತದೆ; ಮತ್ತು ಅದು ಆಗುವಾಗ ನೋಯುತ್ತದೆ.

ಹೊಕ್ಕಳು ಮತ್ತು ಗೆಜ್ಜಿ ಇವುಗಳ ನಟ್ಟನಡುವೆ ಬಲಭಾಗದಲ್ಲಿ ಕೈ ಹಚ್ಚಿದರೆ ಹೊಟ್ಟೆಯಲ್ಲಿ ನೋಯುವದು, ವಿಶೇಷವಾಗಿ ಶ್ರಮ ಮಾಡಿದ ಬಳಿಕ ಆ ನೋವು ಹೆಚ್ಚಾಗುವದು, ನಾಡಿಯು ಬೇಗನೆ ಹಾರುವದು, ಜ್ವರವು ನಡುನಡುವೆ ಬರುವದು, ಈ ಲಕ್ಷಣಗಳಿದ್ದು ರೋಗಿಯು ಹರೆಯದವನಿದ್ದರೆ ಆತನಿಗೆ ಬಹಳ ಮಾಡಿ ಉಂಡಕಪುಚ್ಛವಿದ್ರಧಿ (ಅಪೆಂಡಿಸಾಯಿಟಿಸ್) ಆಗಿದೆಯೆಂದು ತಿಳಿಯಬೇಕು.

**ಜಠರರೋಗ:—** ಮಳಮಳಿಸುವದು ಹಾಗು ಓಕರಿಸುವದು ಇವೆರಡು ಜಠರರೋಗದ ನಿಶ್ಚಿತ ಲಕ್ಷಣಗಳು.

ಬಹಳ ದಿವಸದ ಜಠರದಾಹ, ಜಠರವ್ರಣ, ಜಠರಗುಲ್ಮ, ಈ ರೋಗಗಳಲ್ಲಿ ವಾಂತಿಯಲ್ಲಿ ಅನ್ನದ ಸಂಗಡ ರಕ್ತವೂ ಬೀಳುತ್ತದೆ. ಆ ರಕ್ತವು ಕೆಂಪಾಗಲೀ ನಸುಗೆಂಪಾಗಲೀ ಇರುತ್ತದೆ. ಬಾಯಿಗೆ ರುಚಿಯಿಲ್ಲ. ತುಟಿಗಳು ಒಣಗಿದ್ದು ವಾಯು ತುಂಬಿರುವದು (ತೇಗು ಬರುವದು, ವಾಯು ಸರಿಯುವದು), ಗಂಟಲಿನಲ್ಲಿ ಉರಿವು, ಎದೆ ಸುಡುತ್ತದೆ, ಬಾಯಿಗೆ ನೀರು ಬಿಡುತ್ತದೆ, ಹಸಿವೆಯಾಗುವದಿಲ್ಲ, ಬಹಳ ಹಸಿವೆಯಾಗುತ್ತದೆ, ಬಾಯಿಗೆ ಹೊಲಸು ನಾತ ಬರುತ್ತದೆ, ಇವೆಲ್ಲ ಜಠರವಿಕೃತಿಯ ಲಕ್ಷಣಗಳು.

ಜ್ವರವಿರುವದಿಲ್ಲ, ಮಳಮಳಿಸುವದು, ಹೊಟ್ಟೆಯಲ್ಲಿ ಅಸ್ವಸ್ಥತೆ ಇರುವದು, ತಲೆ ನೋಯುವದು, ಉದಾಸೀನತೆ, ಮ್ಲಾನತೆ, ಹೊಟ್ಟೆಗೆ ಸ್ಪರ್ಶವು ತಾಳುವದಿಲ್ಲ. ಈ ಲಕ್ಷಣಗಳಿದ್ದರೆ ಶೀಘ್ರ ಪರಿಣಾಮಿ ಅಗ್ನಿಮಾಂದ್ಯವಿದೆಯೆಂದು ತಿಳಿಯಬೇಕು. ಮೇಲಿನ ಲಕ್ಷಣಗಳಿದ್ದು ವೇದನೆಯೂ ಇದ್ದರೆ, ಶೀಘ್ರ ಜಠರದಾಹವಿದೆಯೆಂದು ತಿಳಿಯಲಿಕ್ಕೆ ಅಡ್ಡಿಯಿಲ್ಲ.

ಬಹಳ ದಿವಸದ ಅಪಚನ ರೋಗ, ಜಠರದಲ್ಲಿ ವೇದನೆ, ಒತ್ತಿದರೆ ನೋಯುವದು; ಈ ಲಕ್ಷಣಗಳು ಬಹುತರವಾಗಿ ಜಠರವ್ರಣ, ಜಠರಗುಲ್ಮ ಹಾಗು ಬಹುದಿವಸದ ಜಠರದಾಹ ಈ ಮೂರು ರೋಗಗಳಲ್ಲಿ ಕಾಣಿಸುತ್ತವೆ.

ಅತಿಸಾರ, ಅವರೋಧ, ಹಾಗು ವೇದನೆ ಈ ಮೂರು ಲಕ್ಷಣಗಳು ಸಾಮಾನ್ಯವಾಗಿ ಕರುಳಿನ ರೋಗಗಳಲ್ಲಿ ಕಾಣಿಸುತ್ತವೆ.

ಕೆಳಗಿನ ವಿಕಾರಗಳಲ್ಲಿ ಗುದದ್ವಾರದಿಂದ ರಕ್ತವು ಬೀಳುತ್ತದೆ.

೧. ರಕ್ತಮೂಲವ್ಯಾಧಿ.
೨. ಗುದದ್ವಾರದಲ್ಲಿ ಬಿರುಕು ಬಿಡುವದು.
೩. ಗುದಕ್ಷತ ಅಥವಾ ವ್ರಣ.
೪. ಬದ್ಧಾಂತ್ರ. ( ಇಂಟೆಸ್ಟಾಯಿನಲ್ ಇಂಟರಸೆಪ್‌ಶನ್. ಕರುಳಿನ ಮೇಲೆ ಕರುಳು ಬರುವದು )
೫. ( ವಿಶೇಷವಾಗಿ ಚಿಕ್ಕಮಕ್ಕಳ ) ಗುದದ್ವಾರದಲ್ಲಿ ಜೋತಾಡುವ ಗ್ರಂಥಿ ( ಪಾಲಿಪ್ಸ ).
೬. ವಿಷಮಜ್ವರ.

ಇವುಗಳ ಹೊರತಾಗಿ ಶ್ವೇತ ಪಂಡುರೋಗ, ಯಕೃತರೋಗ, ಹಾಗು ಕೃಶತೆ ಮುಂತಾದ ರೋಗಗಳಲ್ಲಿಯೂ ಗುದದ್ವಾರದಿಂದ ರಕ್ತವು ಬೀಳುತ್ತದೆ. ಗುದಕ್ಷತ ಹಾಗು ಬದ್ಧಾಂತ್ರ ಇವುಗಳಲ್ಲಿ ರಕ್ತವಷ್ಟೇ ಬೀಳುವದಿಲ್ಲ. ಗುದವ್ರಣದಲ್ಲಿ ರಕ್ತವು ಕೀವಮಿಶ್ರಿತವೂ ಅಥವಾ ಶ್ಲೇಷ್ಮಲಮಿಶ್ರಿತವೂ ಇರುತ್ತದೆ; ಮತ್ತು ಬದ್ಧಾಂತ್ರದಲ್ಲಿ ಅದು ಕೇವಲ ಶ್ಲೇಷ್ಮಲ ಮಿಶ್ರಿತ ವಿರುತ್ತದೆ.

**ಯಕೃತ:—** ಹೃದಯ ಹಾಗು ಫುಪ್ಫುಸ ಭಾಗಗಳಲ್ಲಿಯ ರೋಗಗಳ ಲಕ್ಷಣಗಳಂತೆ ಯಕೃತ ವಿಕಾರದಲ್ಲಿಯ ಲಕ್ಷಣಗಳನ್ನು ಸ್ಪಷ್ಟವಾಗಿ ಹೇಳಲಿಕ್ಕೆ ಬರುವಂತೆ ಇಲ್ಲ. ಆದರೂ ಯಕೃತ ಭಾಗದಲ್ಲಿ ವೇದನೆಯಿರುವದು ಹಾಗು ಕಾಮಣಿಯಾಗುವದು, ಇವು ಯಕೃತರೋಗದ ಪ್ರಮುಖ ಲಕ್ಷಣಗಳು. ಮತ್ತು ವಿಶೇಷವಾಗಿ ಹೇಳತಕ್ಕ ಲಕ್ಷಣವೆಂದರೆ, ಯಕೃತ ರೋಗದಲ್ಲಿ ರೋಗಿಯು ಯಾವಾಗಲು ನಿರುತ್ಸಾಹಿಯೂ, ನಿರಾಶನೂ,

ಉದಾಸೀನನೂ ಇರುತ್ತಾನೆ; ಅಲ್ಲದೆ ಬೇರೆ ಅಪಚನದ ಉಪದ್ರವಗಳೂ ಇರುತ್ತವೆ. ಯಕೃತದಾಹದಲ್ಲಿ ವೇದನೆಯು ಬಲಗಡೆಯ ಹೆಗಲಿನವರೆಗೆ ಇರುವದು. ಇದೂ ಒಂದು ಯಕೃತವಿಕಾರದ ವಿಶೇಷ ಲಕ್ಷಣವೇ ಸರಿ.

ಯಕೃತದಲ್ಲಿ ಹೆಚ್ಚುಕಡಿಮೆ ಆಗದಿರುವದು, ಆಲಸ್ಯ, ಬಹಳ ಮಾಂದ್ಯ ವಿಶೇಷವಾಗಿ ಊಟವಾದ ಬಳಿಕ, ನಾಲಿಗೆಯ ಮೇಲೆ ಅಗ್ರುವೂ ಬಿರುಕೂ, ಅಪಚನದ ತಕರಾರು, ಅವರೋಧ, ತಲೆಸೂಲಿ, ಮುಂತಾದ ಲಕ್ಷಣಗಳಿದ್ದರೆ, ಯಕೃತದಲ್ಲಿ ವಿಕೃತಿಯಾಗಿದೆಯೆಂದು ತಿಳಿಯಬೇಕು.

**ಪ್ಲೀಹಾ:—** ಎಡಗಡೆಗೆ ಪ್ಲೀಹೆಯ ಭಾಗದಲ್ಲಿ ವೇದನೆ ಹಾಗು ಅಸ್ವಸ್ಥತೆ; ತ್ವಚೆಯು ಅತಿಶಯ ನಿಃಸ್ತೇಜವಾದದ್ದು; ಅಶಕ್ತತೆಯ ಅತಿರೇಕವು; ಈ ಲಕ್ಷಣಗಳು ಬಹುತರವಾಗಿ ಪ್ಲೀಹಾವೃದ್ಧಿಯಲ್ಲಿ ಇರುತ್ತವೆ. ಈ ಲಕ್ಷಣಗಳು ಇರದಿದ್ದರೂ ಪ್ಲೀಹಾವೃದ್ಧಿಯಾಗುವದು ಎಂಬದನ್ನು ಮರೆಯಬಾರದು. ಪ್ಲೀಹಾ ರೋಗದಲ್ಲಿ ಪಂಡುರೋಗವು ಇದ್ದೇ ಇರುವದು. ಕೆಳಗೆ ಹೇಳಿದ ವಿಕಾರಗಳಿದ್ದರೆ ಪ್ಲೀಹಾವೃದ್ಧಿಯಾಗುವದು.

೧. ರಕ್ತವಿಕಾರ. ( ಪಂಡುರೋಗ ಮುಂತಾದವು )

೨. ಚಳಿಜ್ವರದಂಥ ಕೃಮಿರೋಗಗಳು.

೩. ಚಿಕ್ಕಮಕ್ಕಳಿಗೆ ಕೂಡ, ಮೇಲೆ ಹೇಳಿದ ವಿಕಾರಗಳು ಇರದಿದ್ದರೂ, ಪ್ಲೀಹಾವೃದ್ಧಿಯಾಗುವದು. ಆನುವಂಶಿಕ ಉಪದಂಶ, ಮತ್ತು ಕ್ಷಯ, ಈ ಕಾರಣಗಳ ಮೂಲಕ ಸಣ್ಣ ಹುಡುಗರಲ್ಲಿ ಬಹುತರವಾಗಿ ಪ್ಲೀಹಾವೃದ್ಧಿಯು ಕಾಣಿಸುತ್ತದೆ.

**ಮೂತ್ರಪಿಂಡ:—** ಕಳೆಯಿಲ್ಲದ ತ್ವಚೆ, ಹಾಗು ಜಲಶೋಥ ( ನೀರಿನಿಂದ ತುಂಬಿದ ಬಾವು ) ಇವೆರಡು ಮೂತ್ರಪಿಂಡರೋಗದ ಲಕ್ಷಣಗಳೆಂದು ತಿಳಿಯಬೇಕು.

ಜಲಶೋಥ ( ಉದರ )ವೆಂಬ ರೋಗವು ಹೃದಯ, ಯಕೃತ, ಅಥವಾ ಮೂತ್ರಪಿಂಡ ಈ ಮೂರು ಇಂದ್ರಿಯಗಳಲ್ಲಿ ಯಾವದಾದರೊಂದು ಇಂದ್ರಿಯದಲ್ಲಿ ವ್ಯತ್ಯಾಸವಾದರೆ ಉತ್ಪನ್ನವಾಗುತ್ತದೆ.

**ಹೃದಯುಜನ್ಯ ಜಲಶೋಥ**ದಲ್ಲಿ ಹೃದಯದಿಂದ ದೂರದಲ್ಲಿ ಅಂದರೆ ಕೈಕಾಲು ಮುಂತಾದ ಅವಯುವಗಳಲ್ಲಿ ಮೊದಲು ಬಾವು ಬರುವದು. ಸಾಯಂಕಾಲದಲ್ಲಿ ಹರಡಿಗಳ ಸುತ್ತುಮುತ್ತು ಬಾವು ಬರುತ್ತದೆಂದು ರೋಗಿಯು ದೂರು ಹೇಳುತ್ತಾನೆ. ಹೃದಯದ ಅಶಕ್ತತೆಯ ಬೇರೆ ಭಾವನೆಗಳೂ ಇರುತ್ತವೆ. ಬಾವು ಉತ್ಪನ್ನವಾಗುವದಕ್ಕಿಂತ ಮುಂಚೆ ಉಸುರಾಡಿಸಲಿಕ್ಕೆ ತೊಂದರೆಯಾಗುತ್ತದೆ.

**ಯುಕೃತಜನ್ಯ ಜಲಶೋಥ**ದಲ್ಲಿ ಬಾವು ಹೊಟ್ಟೆಯಲ್ಲಿಯೇ ಆರಂಭವಾಗುತ್ತದೆ. ಅಲ್ಲಿಯೇ ನೀರು ನಿಂತು ಅದು ಬೆಳೆಯುತ್ತದೆ, ಇದಕ್ಕೇ ಉದರವೆನ್ನುವರು. ಅನಂತರ ಕಾಲು ಬಾಯುತ್ತದೆ. ಯಕೃತ ವೃದ್ಧಿಯು ಅಥವಾ ಯಕೃತ ವಿಕೃತಿಯು ಇತರ ಭಾವನೆಗಳೂ ಇರುತ್ತವೆ. ನೀರು ತುಂಬಿ ಹೊಟ್ಟೆ ಉಬ್ಬಿದ ಬಳಿಕ ಉಸುರಾಡಿಸಲಿಕ್ಕೆ ತೊಂದರೆಯಾಗುತ್ತದೆ. ಹೃದಯುಜನ್ಯ ಶೋಥದಲ್ಲಿ ಉಸುರಾಡಿಸುವ ತೊಂದರೆಯು ಬಾವು ಬರುವದಕ್ಕಿಂತ ಮುಂಚೆ ಆಗುತ್ತದೆ. ಆದರೆ ಯಕೃತಜನ್ಯ ಶೋಥದಲ್ಲಿ ಅದು ಬಾವು ಬಂದನಂತರ ಆಗುತ್ತದೆ.

**ಮೂತ್ರಪಿಂಡಜನ್ಯ ಜಲಶೋಥ**ದಲ್ಲಿ ಆರಂಭದಿಂದಲೇ ಸಾರ್ವತ್ರಿಕ ಬಾವು ಇರುತ್ತದೆ; ಅಂದರೆ ಅದು ಕಾಲಿನಲ್ಲಿಯೂ ಕಣ್ಣಿನ ಮೇಲೆಯೂ ಒಮ್ಮೆಲೆ ಆರಂಭವಾಗುತ್ತದೆ. ಎಷ್ಟೋ ಸಾರೆ ಮುಂಜಾನೆ ಎದ್ದ ಬಳಿಕ ಕಣ್ಣಿನ ಸುತ್ತಲು ಬಾವು ಇದ್ದಂತೆ ಕಂಡುಬರುತ್ತದೆ. ಮೂತ್ರದ ಪರೀಕ್ಷೆಯನ್ನು ಮಾಡಲಾಗಿ ಅದರಲ್ಲಿಯೂ ಕೆಲವು ದೋಷಗಳು ಕಂಡುಬರುತ್ತವೆ. ಮತ್ತು ಮುಖದಮೇಲೆ ಒಂದು ವಿಶಿಷ್ಟವಾದ ಮೇಣದಂಥ ಕಳೆಯಿಲ್ಲದ ಹೊಳಪು ಕಂಡುಬರುತ್ತದೆ.

ಮೂತ್ರವು ವಾಡಿಕೆಗಿಂತ ಕಡಿಮೆಯಾಗುವದು, ಅದು ಹೊಗೆಯ ಬಣ್ಣದ್ದಿರುವದು, ಮೈಯೆಲ್ಲ ಬಾಯುವದು, ಈ ಲಕ್ಷಣಗಳು ಅದೇ ಆರಂಭವಾಗಿದ್ದರೆ, ಮೂತ್ರಪಿಂಡದಾಹವಾಗಿದೆ ಎಂದು ತಿಳಿಯಬೇಕು.

ಮೂತ್ರದ ಆರಂಭದಲ್ಲಿ ಕೀವಾಗಲಿ ಕೆಂಪು ರಕ್ತವಾಗಲಿ ಹೋಗುತ್ತಿದ್ದರೆ ಅದು ಮೂತ್ರನಲಿಕೆಯ ರೋಗವೆಂದು ತಿಳಿಯತಕ್ಕದ್ದು.

ಮೂತ್ರದ ಕೊನೆಗೆ ಕೀವಾಗಲಿ ರಕ್ತವಾಗಲಿ ಹೋಗುತ್ತಿದ್ದರೆ, ಹಾಗು ಅದು ಗಟ್ಟಿಯಾಗುತ್ತಿದ್ದರೆ, ಮೂತ್ರಾಶಯದ ಯಾವದೋ ಒಂದು ರೋಗವಿದೆಯೆಂದು ತಿಳಿಯಬೇಕು.

ಮೂತ್ರವು ಬಹಳಾಗುವದು, ಬಹಳ ನೀರಡಿಕೆಯಾಗುವದು, ಬಹಳ ಹಸಿವೆಯಾಗುವದು, ಮತ್ತು ಕ್ರಮವಾಗಿ ಸೊರಗುವದು, ಇವೆಲ್ಲ ಮಧು ಮೇಹದ ಲಕ್ಷಣಗಳು.

**ಜ್ವರ:—** ಜ್ವರವು ಸ್ವತಂತ್ರ ರೋಗವಲ್ಲ. ಅಸಂಖ್ಯ ರೋಗಗಳಲ್ಲಿ ಕಂಡುಬರುವ ಭಾವನೆಯೇ ಜ್ವರವು. ಹೀಗಿದ್ದರೂ ಅದು ಒಂದು ಸ್ವತಂತ್ರ ರೋಗವೆಂದೇ ಜನರು ತಿಳಿಯುತ್ತಾರೆ. ಉದಾಹರಣಾರ್ಥವಾಗಿ—ಸನ್ನಿಪಾತ ಜ್ವರ, ಸಂತತಜ್ವರ, ಚಳಿಜ್ವರ, ವಿಸ್ಫೋಟಕಜ್ವರ ಇತ್ಯಾದಿ. ಈ ದೃಷ್ಟಿಯಿಂದ ಜ್ವರಗಳಲ್ಲಿ ಸ್ಥೂಲಮಾನವಾಗಿ ಎರಡು ಭಾಗಗಳನ್ನು ಕಲ್ಪಿಸಬಹುದು. (೧) ವಿಸ್ಫೋಟಕಜ್ವರಗಳು. (ಯಾವ ಜ್ವರದಲ್ಲಿ ಮೈಮೇಲೆ ಹುಣ್ಣು ಗಳಾಗಲಿ ಬೊಕ್ಕೆಗಳಾಗಲಿ ಏಳುತ್ತವೆಯೋ ಆ ಜ್ವರಕ್ಕೆ ವಿಸ್ಫೋಟಕಜ್ವರ ವೆಂದು ಹೆಸರು.) ಮೈಲಿ, ಗೊಬ್ಬರ, ಗಣಜಲಿ, ಮಧುರಾ ಮುಂತಾದವು ವಿಸ್ಫೋಟಕಜ್ವರಗಳು. (೨) ಮೈಮೇಲೆ ಹುಣ್ಣಾಗಲಿ ಬೊಕ್ಕೆಯಾಗಲಿ ಏಳದಿರುವ ಜ್ವರಗಳು. ಚಳಿಜ್ವರ, ದಾಹಜನ್ಯಜ್ವರ, ನ್ಯುಮೋನಿಯಾ, ಪ್ಲೂರಿಸಿ, ಫುಪ್ಫುಸಾವರಣದಾಹ ಮುಂತಾದವು ಎರಡನೆಯ ಪ್ರಕಾರದ ಜ್ವರದ ಉದಾಹರಣಗಳು.

ಒಮ್ಮೆಲೆ ತುಂಬಿಬರುವ ಜ್ವರಗಳಲ್ಲಿ ಸಾಧಾರಣವಾಗಿ ಮೊದಲು ಚಳಿಯಾಗುತ್ತದೆ, ಬಳಿಕ ಜ್ವರ ಬರುತ್ತವೆ. ಚಳಿಜ್ವರ, ಪೂಯದುಷ್ಟ ರಕ್ತಜನ್ಯಜ್ವರ, ಒಮ್ಮೊಮ್ಮೆ ಸನ್ನಿಪಾತಜ್ವರ, ಇವುಗಳಲ್ಲಿಯೂ ಮತ್ತು ವಿಸ್ಫೋಟಕಜ್ವರ, ನ್ಯುಮೋನಿಯಾ, ಇನ್‌ಫ್ಲುಯೆಂಝಾ, ದಾಹಜನ್ಯಜ್ವರ, ಮುಂತಾದ ಜ್ವರಗಳಲ್ಲಿಯೂ ಮೊದಲು ಚಳಿಯು ಭರದಿಂದ ತುಂಬುವದು. ಜ್ವರದಲ್ಲಿ ಮೇಲಿಂದಮೇಲೆ ಚಳಿ ತುಂಬುವದೂ, ಜ್ವರವು ೧೦೪ಕ್ಕಿಂತ ಹೆಚ್ಚಿಗೆ ಏರುವದೂ, ಇದು ಬಹುತರವಾಗಿ ಪೂಯದುಷ್ಟರಕ್ತಜನ್ಯ ಜ್ವರದ ಲಕ್ಷಣವು. ಅಂಜಿಕೆಯಿಂದಾಗಲಿ ಮಾನಸಿಕ ತ್ರಾಸದಿಂದಾಗಲಿ ಮೈಮೇಲೆ ಮುಳ್ಳುಬರುತ್ತವೆ. ಸಣ್ಣ ಹುಡುಗರಿಗೆ ಮೈಲಿ, ಗೊಬ್ಬರ

ಮುಂತಾದ ಜ್ವರಗಳಲ್ಲಿ ಚಳಿ ತುಂಬುತ್ತದೆ ಅಥವಾ ಬಿಕ್ಕು ಹತ್ತುತ್ತದೆ. ಯಕೃತ ಭಾಗದಲ್ಲಿ ಕಳೆಯು ಭರದಿಂದ ಬರುವ ಕಾಲಕ್ಕೆ ಜ್ವರವು ಬಾರದೆ ಚಳಿಯಾಗುತ್ತದೆ. ಜ್ವರವು ಬಾರದೆ ಕೇವಲ ಚಳಿಯಾಗುವದು ಹಿಸ್ಟೇರಿಯಾದ ಲಕ್ಷಣವು. ಈ ಲಕ್ಷಣವು ಒಮ್ಮೊಮ್ಮೆ ಚಳಿಜ್ವರದಲ್ಲಿಯೂ ಕಂಡುಬರುತ್ತದೆ.

**ಮೈಯೊಳಗಿನ ಕಾವು:—** ಸಾಧಾರಣವಾಗಿ ಶರೀರದಲ್ಲಿಯ ಉಷ್ಣತೆಯುಮಾನವು ನಿರೋಗಿಸ್ಥಿತಿಯಲ್ಲಿ ೯೭ ರಿಂದ ೯೮ ರ ವರೆಗೆ ಇರುತ್ತದೆ. ಪ್ರಕೃತಿಯು ನೆಟ್ಟಗಿದ್ದು ಅದು ೧೦೦ ರ ವರೆಗೆ ಸಹ ಇರಬಹುದು. ವ್ಯಾಯಾಮದಿಂದಲೂ ಹೊರಗಿನ ಶಕೆಯಿಂದಲೂ ಅದು ಸ್ವಲ್ಪ ಬೆಳೆಯಬಹುದು. ನಿದ್ದೆಮಾಡುವಾಗ ಅದು ೧—೨ ಅಂಶದಷ್ಟು ಕಡಿಮೆಯಾಗುವದು. ಮೈಯೊಳಗಿನ ಕಾವು ಸಂಜೆಗೆ ೬ ರಿಂದ ೮ ಅಂಶಗಳ ವರೆಗೆ ಬೆಳೆಯುತ್ತದೆ; ಹಾಗು ಮುಂಜಾನೆ ೪ ರಿಂದ ೬ ಅಂಶಗಳ ವರೆಗೆ ಇಳಿಯುತ್ತದೆ. ಉಷ್ಣತೆಯು ಮುಪ್ಪಿನಲ್ಲಿ ಕಡಿಮೆಯಿರುತ್ತದೆ; ಹಾಗು ಚಿಕ್ಕಂದಿನಲ್ಲಿ ಅದು ಹೆಚ್ಚಾಗಿರುತ್ತದೆ. ಥರ್ಮಾಮಿಟರ ಎಂಬದೊಂದು ಜ್ವರವನ್ನು ಅಳೆಯುವ ಕಾಜಿನ ನಲಿಕೆಯಿರುತ್ತದೆ. ಅದನ್ನು ಬಗಲಲ್ಲಿ ಇಲ್ಲವೆ ಬಾಯಿಯಲ್ಲಿ ಹಿಡಿದು ಮೈಯಲ್ಲಿ ಜ್ವರವು ಎಷ್ಟಿದೆ ಎಂಬದನ್ನು ನೋಡುತ್ತಾರೆ. ಬಗಲಿನಲ್ಲಿ ಹಿಡಿಯುವದಕ್ಕಿಂತ ಬಾಯಲ್ಲಿ ಹಿಡಿದರೆ ಉಷ್ಣತೆಯು ಸ್ವಲ್ಪ ಹೆಚ್ಚಾಗುತ್ತದೆ. ೯೮ ರಿಂದ ೯೮.೬ ರ ವರೆಗೆ ಇದ್ದರೆ ಅದು ನಿರೋಗಿ ಮನುಷ್ಯನ ಉಷ್ಣತೆಯ ಅಳತೆಯೆಂದು ತಿಳಿಯಬೇಕು. ಸಾಮಾನ್ಯವಾಗಿ ೯೯ ರಿಂದ ೧೦೨ ರ ವರೆಗೆ ಇರುವ ಜ್ವರವು ಮಧ್ಯಮವೆಂದು ತಿಳಿಯಬೇಕು. ೧೦೨ ರಿಂದ ೧೦೪ ರ ವರೆಗೆ ಇದ್ದರೆ ಅದು ಹೆಚ್ಚಾಯಿತೆಂದು ತಿಳಿಯಬೇಕು. ೧೦೫ ರಿಂದ ೧೦೬ ರ ವರೆಗಿನ ಜ್ವರವು ಚಿಂತಾಜನಕವೇ ಸರಿ. ಇದಕ್ಕಿಂತ ಹೆಚ್ಚು ಜ್ವರವು ಬಂದರೆ, ಅಥವಾ ೯೫ ಕ್ಕಿಂತ ಕಡಿಮೆಯಾಗಿದ್ದರೆ, ಬಹುಮಟ್ಟಿಗೆ ರೋಗಿಗೆ ನೆಟ್ಟಗಾಗುವದಿಲ್ಲ. ರಕ್ತಸ್ರಾವವಾದನಂತರ ನೆಟ್ಟಗಾದ ರೋಗಿಯ ಆರೋಗ್ಯಸ್ಥಾಪನಾವಸ್ಥೆಯಲ್ಲಿಯೂ, ಹೃದಯಶಕ್ತಿಪಾತದಲ್ಲಿಯೂ, ಮಾರಿಕಾ, ಮಧುಮೇಹ ಮುಂತಾದ ಶಕ್ತಿಪಾತಮಾಡುವಂಥ ರೋಗಗಳಲ್ಲಿಯೂ ಜ್ವರದ ಮಾನವು ೯೮ ಕ್ಕಿಂತ ಕಡಿಮೆಯಿರುತ್ತದೆ.

೯೭ ಅಂಶಕ್ಕಿಂತ ಕಡಿಮೆ ಅಂದರೆ ಶರೀರದಲ್ಲಿಯ ಸ್ವಾಭಾವಿಕ ಉಷ್ಣತೆಯು ಕಿಂತ ಕಡಿಮೆ ಉಷ್ಣತೆಯಿರುವದು, ಇದು ಸರ್ವಸಾಧಾರಣವಾಗಿ ಅಶಕ್ತ ತನದ, ಮುಪ್ಪಿನ, ಕ್ಷಯರೋಗದ ಪೂರ್ವಾವಸ್ಥೆಯ, ಹಾಗು ಕರುಳಿನಲ್ಲಿ ಆಗುವ ರಕ್ತಸ್ರಾವದ ಲಕ್ಷಣವು. ಮೈಯೊಳಗಿನ ಕಾವು ದಿನಾಲು ಮುಂಜಾನೆ ಮತ್ತು ಸಂಜೆಗೆ ೯೭ಕ್ಕಿಂತ ಕಡಿಮೆಯಿದ್ದರೆ, ಹಾಗು ಈ ಕ್ರಮವು ಬಹು ದಿವಸದ ವರೆಗೆ ತಪ್ಪದೆ ನಡೆದರೆ, ಕ್ಷಯದ ಪೂರ್ವಾವಸ್ಥೆಯು ಆರಂಭವಾಗಿದೆಯೆಂದು ತಿಳಿಯಲು ಯಾವ ಅಡ್ಡಿಯೂ ಇಲ್ಲ. ವಿಷಮಜ್ವರದಲ್ಲಿ ಜ್ವರವು ಒಮ್ಮಿಂದೊಮ್ಮೆ ಕಡಿಮೆಯಾದರೆ, ಕರುಳುಗಳಲ್ಲಿ ರಕ್ತಸ್ರಾವವು ಆರಂಭವಾಗಿದೆಯೆಂದು ತಿಳಿಯಬೇಕು. ವಿಷಮಜ್ವರದಲ್ಲಿ ಜ್ವರವು ಮೆಲ್ಲಮೆಲ್ಲಗೆ ಏರುತ್ತದೆ. ಚಳಿಜ್ವರ, ನ್ಯುಮೋನಿಯಾ, ಪೂಯು ದುಷ್ಟರಕ್ತಜನ್ಯಜ್ವರ ಮುಂತಾದ ರೋಗಗಳಲ್ಲಿ ಅದು ಒಮ್ಮಿಂದೊಮ್ಮೆ ಏರುತ್ತದೆ. ಮುಂಜಾನೆ ಜ್ವರವು ಕಡಿಮೆಯಾಗುವದು ಸುಚಿನ್ಹವು. ಆದರೆ ರಾತ್ರಿಯಿಂದ ಬೆಳತನಕ ಜ್ವರವು ಏರುವದು ಒಳಿತಲ್ಲ.

ಸಾಧಾರಣವಾಗಿ ಜ್ವರವು ಒಂದು ಅಂಶದಷ್ಟು ಏರಿದರೆ, ನಾಡಿಯು ಹಾರಿಕೆಯು ಹತ್ತರಿಂದ ಬೆಳೆಯುತ್ತದೆ.

ಜ್ವರವು ಬಹಳ ದಿವಸಗಳ ವರೆಗೆ ಒಂದೇಸವನೆ ೧೦೫ ರಿಂದ ೧೦೬ ರ ವರೆಗೆ ಇರುವದು ಅಸಾಧ್ಯಬೇನೆಯ ಲಕ್ಷಣವು.

**ಮಿದುಳಿನ ರೋಗ:**— ನಡುನಡುವೆ ಒಮ್ಮಿಂದೊಮ್ಮೆ ಸ್ವಲ್ಪ ಕಾಲ ಎಚ್ಚರತಪ್ಪುವದು ಮೂರ್ಛೆಯ ಹಾಗು ಅಪಸ್ಮಾರದ ಲಕ್ಷಣವು.

ರೋಗಿಗೆ ಬಹು ಕಾಲದ ವರೆಗೆ ಸಂಪೂರ್ಣವಾಗಿ ಎಚ್ಚರತಪ್ಪಿದರೆ, ಆತನಿಗೆ ಸನ್ಯಾಸ ಅಥವಾ ಮೂರ್ಛೆಯ ರೋಗವಾಗಿದೆಯೆಂದು ತಿಳಿಯಬೇಕು.

ಮುಂದೆ ಹೇಳಿದ ವಿಕಾರಗಳಲ್ಲಿ ಸ್ಮರಣಶಕ್ತಿಯು ಕಡಿಮೆಯಾಗುತ್ತದೆ. ಮಿದುಳು ದಣಿಯುವದು, ಶಕ್ತಿಕ್ಷೀಣ ಮಾಡುವ ರೋಗ, ಸರ್ವಸಾಧಾರಣ ಅಶಕ್ತ ಪ್ರಕೃತಿ, ಮುಷ್ಟಿಮೈಥುನ, ಮಿತಿಮೀರಿ ಸ್ತ್ರೀ

ಸಂಗ, ಇಳಿವಯಸ್ಸು, ಮದಾತ್ಯಯ, ಹುಚ್ಚು ಹಿಡಿಯುವದು, ನಿರುತ್ಸಾಹ, ಏನೂ ಮಾಡಬಾರದೆಂದು ಅನಿಸುವದು, ( ನ್ಯೂರಾಸ್ಥೆನಿಯಾ ) ಮನಸ್ಸಿಗೆ ಒಮ್ಮಿಂದೊಮ್ಮೆ ಧಕ್ಕೆಕೊಡುವ ಪ್ರಸಂಗಗಳು ಇತ್ಯಾದಿ.

**ಪಕ್ಷಾಘಾತ ( ಅರ್ಧಾಂಗವಾಯು)**:— ಪಕ್ಷಾಘಾತದಲ್ಲಿ ಎರಡು ಪ್ರಕಾರಗಳುಂಟು. ಒಮ್ಮೆಲೆ ಬರುವದು ಒಂದು; ಮೆಲ್ಲಮೆಲ್ಲಗೆ ಹಬ್ಬುವದು ಮತ್ತೊಂದು. ಪಕ್ಷಾಘಾತವಾಗುವದಕ್ಕಿಂತ ಕೆಲವು ತಾಸುಗಳ ಇಲ್ಲವೆ ಕೆಲವು ಮಿನಿಟುಗಳ ಮುಂಚೆ ಯಾವ ಲಕ್ಷಣವೂ ಕಾಣಿಸದೆ ರೋಗಿಗೆ ಒಮ್ಮಿಂದೊಮ್ಮೆ ಅದು ಬರುವದು.

ಎರಡನೆಯ ಪ್ರಕಾರದಲ್ಲಿ ಪಕ್ಷಾಘಾತದ ಪೂರ್ವ ಚಿನ್ಹಗಳು ಎಷ್ಟೋ ದಿವಸಗಳ ಅಥವಾ ಎಷ್ಟೋ ತಿಂಗಳುಗಳ ಮುಂಚೆಯೇ ಕಾಣಹತ್ತುತ್ತವೆ. ಪಕ್ಷಾಘಾತದ ಸ್ಥಳದಲ್ಲಿ ಜುಮ್ಮು ಹಿಡಿಯುವದು, ಕೈಕಾಲು ಮರಕಟ್ಟುವದು, ಅವು ಒಮ್ಮೊಮ್ಮೆ ನೋಯುವದು, ಹಾಗು ಬಲಹೀನವಾಗುವದು, ಇವೆಲ್ಲ ಅದರ ಪೂರ್ವ ಚಿನ್ಹಗಳು. ಒಂದು ಕೈ, ಒಂದು ಕಾಲು, ಅಥವಾ ಎರಡೂ ಕೈಗಳು, ಎರಡೂ ಕಾಲುಗಳು, ಮೋರೆ, ಹಾಗು ಶರೀರದ ಯಾವದಾದರೊಂದು ವಿಶಿಷ್ಟ ಭಾಗದಲ್ಲಿ ಪಕ್ಷಾಘಾತವು ಆಗುವದು.

**ವೇದನೆ**: — ಇನ್‌ಫ್ಲುಯೆಂಝಾ, ಮೈಲಿ, ಆಂತ್ರಜ್ವರ, ಚಳಿಜ್ವರ, ಈ ಬೇನೆಗಳಲ್ಲಿ ಮೈಯೆಲ್ಲ ಒಮ್ಮಿಂದೊಮ್ಮೆ ನೋಯಲಾರಂಭಿಸಿ ಜ್ವರವು ಬರುವದು.

ಸಂಧಿವಾತ. ಅಂಗುಲಿವಾತ ಇವುಗಳಲ್ಲಿ ನೋವು ಸಂದುಗಳಲ್ಲಿ ಇರುವದು. ಸಂಧಿವಾತ ಮತ್ತು ಅಂಗುಲಿವಾತ ಇವುಗಳ ನಡುವಿನ ಭೇದವನ್ನು ನೆನಪಿನಲ್ಲಿಡಬೇಕು.

| **ಅಂಗುಲಿವಾತ.** | **ಸಂಧಿವಾತ.** |
| --- | --- |
| ೧. ಬಹುತರವಾಗಿ ಮೂವತ್ತು ವರ್ಷ ಮೀರಿದ ಗಂಡಸರಿಗೆ ಆಗುತ್ತದೆ. | ೧. ಗಂಡಸರಿಗೂ ಹೆಂಗಸರಿಗೂ ಪ್ರಾಯದಲ್ಲಿ ಆಗುತ್ತದೆ. |

೨. ಬಹಳವಾಡಿ ಬೆರಳು ಮುಂತಾದ ಸಣ್ಣ ಸಂದುಗಳಲ್ಲಿ ಆಗುತ್ತದೆ. ವೇದನೆಯು ಒಂದು ಸಂದಿನಿಂದ ಮತ್ತೊಂದು ಸಂದಿಗೆ ಹರಿದಾಡುವದಿಲ್ಲ.

೩. ಬಾವು ಕೆಂಪಗೂ ಗಟ್ಟಿಯೂ ಇರುತ್ತದೆ. ಆದರೆ ಒತ್ತಿದರೆ ತಗ್ಗು ಬೀಳುತ್ತದೆ. ಸ್ಪರ್ಶವು ಸ್ವಲ್ಪ ಕೂಡ ಸಹನವಾಗುವದಿಲ್ಲ. ನಿದ್ದೆಯಲ್ಲಿಯೂ ನೋಯುವದು.

೨. ಬಹಳವಾಡಿ ದೊಡ್ಡ ಸಂದುಗಳು ಬಿಗಿಯುತ್ತವೆ. ವೇದನೆಯು ಸಂದಿನಿಂದ ಸಂದಿಗೆ ಹರಿದಾಡುತ್ತದೆ. ಮೇಲಿಂದ ಮೇಲೆ ಸ್ಥಳ ಬದಲಿಸುತ್ತದೆ.

೩. ಬಾವಿನ ಸ್ಥಳವು ಕಾದಿರುತ್ತದೆ ಹಾಗು ಕಳೆಗುಂದಿರುತ್ತದೆ. ಒತ್ತಿದರೂ ಅಗಲಾಡಿಸಿದರೂ ನೋಯುತ್ತದೆ.

**ಟೊಂಕಸೂಲಿ:**— ಈ ಭಾವನೆಯು ಹಲವು ರೋಗಗಳಲ್ಲಿ ಕಂಡುಬರುತ್ತದೆ. ಮೈಲಿ, ಇನ್‌ಫ್ಲುಯೆಂಝಾ, ಮುಂತಾದ ಕಟ್ಟಿನ ಜ್ವರಗಳಲ್ಲಿಯೂ ಹಾಗು ಕಸುವಿಲ್ಲದವರಿಗೂ, ದಣಿದಾಗ, ಹಡೆದಾಗ, ಶಸ್ತ್ರಕ್ರಿಯೆಯಾದಾಗ, ಉಸುರುಗಟ್ಟುವದು, ಸಂಧಿವಾತ, ಡೂಗು ಹಾಯುವದು, ಮೂತ್ರಪಿಂಡದ ಕೆಲವು ರೋಗಗಳಲ್ಲಿ ಟೊಂಕಸೂಲಿಯು ಸ್ಪಷ್ಟವಾಗಿ ಕಂಡುಬರುವದು.

---

## ಹೆಂಗಸರ ಬೇನೆಗಳು

**ಗರ್ಭಾಶಯುಭ್ರಂಶ ಅಥವಾ ಯೋನಿಭ್ರಂಶ:** — ಗರ್ಭಾಶಯುದಲ್ಲಿ ಬಹು ದಿವಸದ ವರೆಗೆ ನೋಯುವದು ಹಾಗು ಜ್ವರವು ಇರದಿರುವದು, ಇದು ಗರ್ಭಾಶಯುದ ಬಾವಿನ ಅಥವಾ ಗರ್ಭಾಶಯುಭ್ರಂಶದ ಲಕ್ಷಣವು. ಗರ್ಭಾಶಯುಭ್ರಂಶವಾಗಿ ಬಹಳ ದಿವಸಗಳು ಆಗಿರದಿದ್ದರೆ (ಅಂದರೆ ಗರ್ಭಾಶಯುಭ್ರಂಶದ ಆರಂಭಾವಸ್ಥೆಯಲ್ಲಿ) ಜಗ್ಗಿದಂತೆ ವೇದನೆಯಾಗುತ್ತದೆ. ಗರ್ಭಾಶಯುದಲ್ಲಿಯಾಗಲೀ ಅದರ ಸುತ್ತುಮುತ್ತಲಿನ ಭಾಗದಲ್ಲಿಯಾಗಲೀ

ದಾಹವೂ ಬಾವೂ ಇರುವದು, ಅಥವಾ ಆ ಭಾಗದಲ್ಲಿ ಗಂಟು ಆಗುವದು, ಇವು ಬಹುಮುಟ್ಟಿಗೆ ಗರ್ಭಾಶಯಭ್ರಂಶದ ಕಾರಣಗಳೆಂದು ತಿಳಿಯಬೇಕು.

**ನಷ್ಟಾರ್ತವ:—** ( ಮುಟ್ಟು ಆಗದಿರುವದು. ) ಗರ್ಭೇಂದ್ರಿಯದ ಬೆಳಿಗೆಯು ಸಂಪೂರ್ಣವಾಗಿ ಆಗಿರದಿದ್ದರೆ ಮುಟ್ಟು ಎಂದಿಗೂ ಆಗುವದಿಲ್ಲ. ಕೆಲ ಕಾಲದ ವರೆಗೆ ಮುಟ್ಟು ನಿಲ್ಲುವದರ ಕಾರಣಗಳನ್ನು ಮುಂದೆ ಹೇಳುತ್ತೇವೆ.

ಗರ್ಭಧಾರಣ, ಕ್ಷಯರೋಗ, ಪಂಡುರೋಗ, ವಿಶೇಷವಾಗಿ ಪೀತ ಪಂಡುರೋಗ, ಬಹು ಜೋರಿನ ಮತ್ತು ಬಲಗುಂದಿಸುವ ರೋಗದನಂತರ, ಮನಸ್ಸಿಗೆ ಪೆಟ್ಟು ತಾಕಿದನಂತರ, ಕೂಸು ಮೊಲೆಕುಡಿಯುವಾಗ, ಅಂಡಾಶಯದಲ್ಲಿ ಗಂಟು ಆದಾಗ, ಮತ್ತು ಗರ್ಭಾಶಯದಲ್ಲಿ ದಾಹವೂ ಬಾವೂ ಇರುವಾಗ, ಮುಂತಾದವುಗಳು. ಮುಟ್ಟಿನ ಸರತಿಯು ಬಂದಾಗ ಚಳಿಯಾಗುತ್ತಿದ್ದರೂ ಒಮ್ಮೊಮ್ಮೆ ಮುಟ್ಟು ನಿಲ್ಲುವದು. ವಯಸ್ಸಿನ ೪೫ ಅಥವಾ ೪೭ನೆಯ ವರುಷದಲ್ಲಿ ಮುಟ್ಟು ಸಂಪೂರ್ಣವಾಗಿ ನಿಲ್ಲುವದು.

**ರಕ್ತಸ್ರಾವ:—** ಮುಟ್ಟಾಗುವ ಕಾಲದಲ್ಲಿ, ಅಂತಸ್ ತ್ವಚೆಯ ದಾಹ, ಯೋನಿಕಂದ, ಗರ್ಭಪಾತದ ಕಾಲಕ್ಕೂ ಗರ್ಭಪಾತದ ನಂತರವೂ, ಗರ್ಭಾಶಯವು ಮೊದಲಿನ ಸ್ಥಿತಿಯನ್ನು ಹೊಂದದಿರುವದು ( ಅಕುಂಚಿತವಾಗದಿರುವದು ), ಗರ್ಭಾಶಯವು ತಿರುಗುವದು, ಈ ರೋಗಗಳಲ್ಲಿ ಗರ್ಭಾಶಯ ಮಾರ್ಗದಿಂದ ರಕ್ತಸ್ರಾವವಾಗುವದುಂಟು. ಇವುಗಳ ಹೊರತಾಗಿ ಸ್ಥೂಲವಿರುವಂಥ ಹಾಗು ಮೈಯಲ್ಲಿ ಬಹಳ ರಕ್ತವಿರುವಂಥ ಹೆಂಗಸರಲ್ಲಿ ಸ್ವಲ್ಪೇ ಕಾರಣದಿಂದ ಬಹಳ ರಕ್ತಸ್ರಾವವಾಗುತ್ತದೆ. ಮೇಲಿಂದ ಮೇಲೆ ಬಸಿರಾಗುವಂಥ, ಮೈಯಲ್ಲಿ ಬಹಳ ದಿವಸ ಹಾಲು ಬರುವಂಥ, ಕೆಲಸ ಮಾಡದೆ ಸುಮ್ಮನೆ ಕೂಡ್ರುವಂಥ, ಹೆಚ್ಚು ಮಾನಸಿಕ ಶ್ರಮವನ್ನು ಮಾಡುವಂಥ, ಹಿಸ್ಟೇರಿಯಾ ರೋಗವಿದ್ದಂಥ ಹೆಂಗಸರಲ್ಲಿ ಮತ್ತು ಕಟ್ಟಿನ ಜ್ವರವು ಬಂದನಂತರವೂ ಗರ್ಭಾಶಯದಿಂದ ರಕ್ತಸ್ರಾವವಾಗುತ್ತದೆ.

**ಸಪೀಡಾರ್ತವ:—** ಗರ್ಭೇಂದ್ರಿಯದ ಸ್ನಾಯುಭಾಗದ ಬೆಳಿಗೆಯು ಸಾಕಷ್ಟು ಆಗದಿರುವದು, ಗರ್ಭಾಶಯದ ಅಂತಸ್ ತ್ವಚೆಯ ದಾಹ, ಹೆಂಗಸರ ಅಂಡಾಶಯದ ದಾಹ, ಗರ್ಭಾಶಯದಲ್ಲಿ ಎಳೆಯುಳ್ಳ ಗಂಟು ಆಗುವದು, ಮುಂತಾದ ಕಾರಣಗಳ ಮೂಲಕ ಮುಟ್ಟಾಗುವ ಕಾಲದಲ್ಲಿ ನೋಯುವದು.

**ಪ್ರದರ:—**(ಬಿಳೇ ಸೆರಗು ಹೋಗುವದು.) ಗರ್ಭಾಶಯದಲ್ಲಿಯೂ, ಗರ್ಭಾಶಯ ಮಾರ್ಗದಲ್ಲಿಯೂ ದಾಹವಾಗುವದರಿಂದ ಈ ಬೇನೆ ಬರುವದು. ಸಣ್ಣ ಹುಡಿಗೆಯರ ಯೋನಿಮಾರ್ಗದಲ್ಲಿ ಕಡಲೆಯಂಥ ಯಾವದಾದರೊಂದು ಪದಾರ್ಥವನ್ನು ಇಟ್ಟಿದ್ದರೆ, ಅಥವಾ ಜಂತುಗಳಾಗಿದ್ದರೆ, ಸೆರಗು ಹೋಗ ತೊಡಗುವದು. ದೊಡ್ಡ ಹೆಂಗಸರ ಯೋನಿಮಾರ್ಗದಲ್ಲಿ ಪೇಸರಿ, ಕಂಕಣ ಕಾರ, ಕಾಗದ ಮುಂತಾದ ಕ್ಷೋಭದಾಯಕ ಪದಾರ್ಥಗಳನ್ನು ಇಡುವದು, ಯೋನಿಮಾರ್ಗವನ್ನು ಪ್ರಖರ ಔಷಧಗಳಿಂದ ತೊಳೆಯುವದು, ಮಿತಿಮೀರಿ ಸಂಭೋಗ ಮಾಡುವದು, ಪ್ರಮೇಹವಾಗುವದು, ಮುಂತಾದ ಕಾರಣಗಳಿಂದಲೂ ಸೆರಗು ಹೋಗುವದು. ಸಾಮಾನ್ಯವಾದ ಅಶಕ್ತತೆ, ಕ್ಷಯದ ಪ್ರಕೃತಿ, ಮಧುಮೇಹ, ಮುಪ್ಪು, ಮದಾತ್ಯಯ, ಪಂಡುರೋಗ, ಉಪದಂಶ, ಸಂಧಿವಾತ ಮುಂತಾದ ಪ್ರಾಕೃತಿಕ ರೋಗಗಳು; ಜ್ವರದಿಂದ ಎದ್ದ ನಂತರ, ಆರೋಗ್ಯ ಸ್ಥಾಪನಾವಸ್ಥೆಯಲ್ಲಿ, ಯೋನಿಭಾಗದಲ್ಲಿ ಗಂಟುಗಳಾದರೆ, ಯೋನಿಮಾರ್ಗವು ಬಾಯುವದು ಹಾಗು ಉರಿಯುವದು, ಗರ್ಭಾಶಯಭ್ರಂಶ, ಯೋನಿಮಾರ್ಗಕ್ಕೆ ಪೆಟ್ಟು ತಾಕುವದು, ಯೋನಿಯು ಅಕುಂಚನವಾಗದಿರುವದು, ಮುಂತಾದ ಕಾರಣಗಳಿಂದಲೂ ಪ್ರದರರೋಗವಾಗುವದು.

---

# ಸಾಮಾನ್ಯ ರೋಗಗಳೂ ಜೀವನ ರಸಾಯನ ಚಿಕಿತ್ಸೆಯೂ

## Common Diseases & Bio—Chemic Treatment.

ಯಾವದಾದರೊಂದು ರೋಗದ ಸಾಂಗೋಪಾಂಗ ವಿಚಾರಮಾಡಬೇಕಾದರೆ, ರೋಗದ ಸ್ಥೂಲ ವ್ಯಾಖ್ಯೆ, ಅದರ ಉತ್ಪತ್ತಿಯ ಕಾರಣಗಳು, ಆ ರೋಗದಲ್ಲಿ ಆಗುವ ವಿಕೃತ ಶಾರೀರ ( ಮಾರ್ಬಿಡ್ ಅನಾಟಮಿ ), ವಿಕೃತಿ ವಿಜ್ಞಾನ ( ಪ್ಯಾಥಾಲಾಜಿ ), ರೋಗದ ಲಕ್ಷಣಗಳು, ಅದರ ನಿದಾನ ಸಾಧ್ಯಾಸಾಧ್ಯ ವಿಚಾರ, ಔಷಧೀಯ ಹಾಗು ಬೇರೆ ಚಿಕಿತ್ಸೆ, ಮುಂತಾದ ಯಾವತ್ತು ವಿಷಯಗಳ ಸವಿಸ್ತರ ಮಾಹಿತಿಯನ್ನು ಹೇಳಬೇಕಾಗುತ್ತದೆ. ರೋಗದ ಬಗ್ಗೆ ಇದಕ್ಕಿಂತ ಹೆಚ್ಚಿನ ಮಾಹಿತಿಯನ್ನು ಹೇಳುವದಾದರೆ, ಆ ರೋಗದ ಇತಿಹಾಸ, ಅದು ಯಾವ ದೇಶದಲ್ಲಿ, ಯಾವ ಜಾತಿಯಲ್ಲಿ, ಮತ್ತು ಯಾವ ವಯಸ್ಸಿನಲ್ಲಿ ಹೆಚ್ಚಾಗುವದು, ಅದೇ ರೋಗದಲ್ಲಿ ಆಗತಕ್ಕ ಸಂಭವನೀಯ ಉಪದ್ರವಗಳಾವವು, ಕ್ರಿಮಿಶಾಸ್ತ್ರ ದೃಷ್ಟಿಯಿಂದ ಅದರ ಉಪಪತ್ತಿ, ಮುಂತಾದವುಗಳ ಬಗ್ಗೆಯೂ ಹೇಳಬೇಕಾಗುತ್ತದೆ. ಇಷ್ಟೆಲ್ಲ ಸಮಾಚಾರಗಳನ್ನು ಹೇಳುವದೆಂದರೆ, ವೈದ್ಯಶಾಸ್ತ್ರದಮೇಲೆ ಒಂದು ಬಹು ದೊಡ್ಡ ಪುಸ್ತಕವನ್ನೇ ಬರೆಯಬೇಕಾಗುವದು. ಆದರೆ ಈ ಪುಸ್ತಕದ ಉದ್ದೇಶವು ಹಾಗಿಲ್ಲ. ಹಿಂದೆ ಪ್ರಸ್ತಾವನೆಯಲ್ಲಿ ಹೇಳಿದಂತೆ ನಮಗೆ ವೈದ್ಯ ಶಾಸ್ತ್ರದ ಭಿನ್ನ ಭಿನ್ನ ಅಂಗಗಳಲ್ಲಿಯ “ ಚಿಕಿತ್ಸೆ”ಯೆಂಬ ಒಂದೇ ಅಂಗವನ್ನು ಕುರಿತು ಈ ಗ್ರಂಥದಲ್ಲಿ ಬರೆಯತಕ್ಕದ್ದದೆ. ಜೀವನ ರಸಾಯನ ಶಾಸ್ತ್ರವಾಗಲಿ ಹೋಮಿಯೋಪಥಿಯಾಗಲಿ ಇವೆರಡೂ ಚಿಕಿತ್ಸಾಶಾಸ್ತ್ರಗಳೇ ಅಹುದು. ಅಂದರೆ, ವೈದ್ಯಶಾಸ್ತ್ರದಲ್ಲಿಯ ಪ್ರಮುಖ ಹಾಗು ಅವಶ್ಯಕ ಅಂಗವಾಗಿರುವ ಚಿಕಿತ್ಸೆಯ ಸಂಬಂಧವಾಗಿಯೇ ಈ ಎರಡೂ ಶಾಸ್ತ್ರಗಳ ಪ್ರತ್ಯಕ್ಷ ಸಂಬಂಧವಿರುತ್ತದೆ, ಆದುದರಿಂದ ಈ ಶಾಸ್ತ್ರದ ಮೇಲಿನ ಇಂಗ್ಲಿಷ ಗ್ರಂಥಗಳಲ್ಲಿ ರೋಗಗಳ ಬಗ್ಗೆ ಬೇರೆ ಸಂಗತಿಯನ್ನು ಹೇಳದೆ ಅದರ ಚಿಕಿತ್ಸೆಯ ಬಗ್ಗೆ ಮಾತ್ರವಷ್ಟೇ ಹೇಳುತ್ತಾರೆ, ಈ ಪದ್ಧತಿಗೆ ಅನುಸಾರವಾಗಿ ನಾವಾದರೂ ಈ ಗ್ರಂಥದಲ್ಲಿ ರೋಗಗಳ ಹೆಸರುಗಳನ್ನು

ಹೇಳಿ, ಅವುಗಳ ಭಾವನೆ ಮುಂತಾದ ಸಂಗತಿಯನ್ನು ಹೇಳದೆ, ಆಯಾ ರೋಗಗಳಿಗೆ ಉಪಯೋಗವಾಗುವಂಥ ಜೀವನ ರಸಾಯನ ಔಷಧಗಳ ಮಾಹಿತಿಯನ್ನು ಕೊಟ್ಟು, ಅಷ್ಟರಿಂದಲೇ ಕಾರ್ಯಭಾಗವನ್ನು ತೀರಿಸ ಬೇಕೆಂದು ವಿಚಾರಮಾಡಿದ್ದೆವು. ಆದರೆ, ಇಂಗ್ಲಿಷ ಭಾಷೆಯನ್ನು ಅರಿಯದ ವೈದ್ಯ ಜನರಿಗೆ ಇದರ ಉಪಯೋಗವಾಗಬೇಕಾಗಿರುವದರಿಂದ, ಮತ್ತು ಹಳ್ಳಿಯ ಜನರಿಗೆ ರೋಗಗಳ ಬಗ್ಗೆ ಸಾಮಾನ್ಯ ಮಾಹಿತಿಯನ್ನು ಮಾಡಿ ಕೊಡುವದು ಅವಶ್ಯವಿರುವದರಿಂದ, ರೋಗಗಳ ಕಾರಣಗಳ ಹಾಗು ಭಾವನೆಗಳ ಬಗ್ಗೆ ನಾಲ್ಕು ಮಾತುಗಳನ್ನು ಹೇಳಬೇಕಾಯಿತು. ಆದರೆ ಈ ಸಂಗತಿಗಳನ್ನು ಮೇಲೆ ಹೇಳಿದಂತೆ ಈ ಪುಸ್ತಕದಲ್ಲಿ ಸವಿಸ್ತರವಾಗಿ ಕೊಡುವದು ಶಕ್ಯವಿಲ್ಲ. ಆದರೂ ಮಹತ್ವದ ಯಾವ ಸಂಗತಿಯನ್ನೂ ಬಿಟ್ಟು ಬಿಡದೆ, ಸ್ಥೂಲಮಾನದಿಂದ ರೋಗಗಳ ಜ್ಞಾನವಾಗಿ, ಅವುಗಳಬಗ್ಗೆ ಸರಿಯಾದ ಕಲ್ಪನೆಯು ಬರುವಷ್ಟು ವಿವೇಚನ ಮಾಡಿದ್ದೇವೆ. ಅಷ್ಟರಿಂದ ವಾಚಕರ ಕಾರ್ಯಭಾಗವಾದೀತೆಂದು ಅನಿಸುತ್ತದೆ. ಇಷ್ಟರಿಂದಲೇ ಜೀವನ ರಸಾಯನ ಔಷಧಗಳನ್ನು ಹೇಗೆ ಉಪಯೋಗಿಸಬೇಕು ಎಂಬ ಬಗ್ಗೆ ಪೂರ್ಣ ಜ್ಞಾನವಾಗಲಾರದು. ಆದುದರಿಂದ ಜೀವನ ರಸಾಯನ ಔಷಧಗಳ ( ಹನ್ನೆರಡು ಕ್ಷಾರಗಳ ) ಗುಣಧರ್ಮಗಳ ಅಭ್ಯಾಸವನ್ನು ಚನ್ನಾಗಿ ಮಾಡಬೇಕು. ಮತ್ತು ಆ ಗುಣಧರ್ಮ ಜ್ಞಾನದಮೇಲೆ ವಾಚಕರು ಅವಲಂಬಿಸಬೇಕು. ಜೇನೆಯು ನೆಟ್ಟಗಾಗಬೇಕಾದರೆ ಯಾವ ಯಾವ ಕ್ಷಾರಗಳ ಕೊರತೆಯಾಗಿದೆ ಹಾಗು ಆ ಕೊರತೆಯ ಲಕ್ಷಣಗಳು ಯಾವವು ಎಂಬದನ್ನು ತಿಳಿದುಕೊಳ್ಳದೆ, ಕೇವಲ ರೋಗದ ಹೆಸರು, ಕಾರಣ ಮತ್ತು ಲಕ್ಷಣ ಇವುಗಳನ್ನಷ್ಟೇ ತಿಳಿದುಕೊಂಡರೆ, ಚಿಕಿತ್ಸೆಯ ಕಾರ್ಯದಲ್ಲಿ ಸಾಕಷ್ಟು ಯಶವು ಬರಲಾರದೆಂಬದನ್ನು ನೆನಪಿನಲ್ಲಿಡಬೇಕು.

ಮೇಲೆ ಹೇಳಿದಂತೆ ಈ ಪ್ರಕರಣದಲ್ಲಿ ರೋಗಗಳ ಲಕ್ಷಣಗಳು, ಕಾರಣಗಳು ಮುಂತಾದವುಗಳ ಬಗ್ಗೆ ಸಮಾಚಾರವನ್ನು ಹೇಳಿ, ಅನಂತರ ಆಯಾ ರೋಗಗಳಲ್ಲಿ ಉಪಯೋಗವಾಗುವಂಥ ಔಷಧಗಳನ್ನೂ ಮತ್ತು ಆಯಾ ಔಷಧಗಳ ಲಕ್ಷಣಗಳನ್ನೂ ಹೇಳುವೆವು. ಪುಸ್ತಕದಲ್ಲಿ ಹೇಳಿದಷ್ಟೇ ಔಷಧಗಳು ಆಯಾ ರೋಗಗಳಲ್ಲಿ ಉಪಯೋಗವಾಗುವವೆಂದು ತಿಳಿಯ

ಬಾರದು. ಯಾವದಾದರೊಂದು ರೋಗದಲ್ಲಿ ಎರಡನೆಯ ಕ್ಷಾರದ ಭಾವನೆಗಳು ಕಂಡುಬಂದರೆ ಆ ಕ್ಷಾರದ ಅಥವಾ ಔಷಧದ ಉಲ್ಲೇಖವು ಈ ಗ್ರಂಥದಲ್ಲಿ ಮಾಡಿರುವದಿಲ್ಲವೆಂದು ಆ ರೋಗದಲ್ಲಿ ಆ ಔಷಧದ ಉಪಯೋಗವು ಆಗುವದಿಲ್ಲವೆಂದು ತಿಳಿಯಬಾರದು. ಅನುಭವದಮೇಲಿಂದ ಉಪಯುಕ್ತವೆಂದು ಕಂಡುಬಂದಿರುವ ಔಷಧಗಳನ್ನು ಮಾತ್ರ ಈ ಪುಸ್ತಕದಲ್ಲಿ ಹೇಳಿದ್ದೇವೆ. ಆದರೆ ಬೇರೆ ಬೇರೆ ಜನರ ಅನುಭವಗಳೂ ಬೇರೆ ಬೇರೆ ಇರುತ್ತವೆ. ತಮ್ಮ ತಮ್ಮ ಅನುಭವಕ್ಕೆ ಅನುಸರಿಸಿ ತಮ್ಮ ತಮ್ಮ ನಂಬಿಗೆಯ ಮೇರೆಗೆ ಬೇರೆ ಔಷಧಗಳನ್ನೂ ಉಪಯುಕ್ತವೆಂದು ಕಂಡುಬಂದರೆ ಕೊಟ್ಟು ನೋಡಬಹುದು.

ಬೇನೆಗಳ ಲಕ್ಷಣಗಳ ಬಗ್ಗೆಯೂ ಹಾಗು ಔಷಧಗಳ ಶಕ್ತಿಯ ಬಗ್ಗೆಯೂ ಹೀಗೆಯೇ ಹೇಳಬಹುದು. ಔಷಧಗಳ ಮುಂದೆ ಕೊಟ್ಟಿರುವ ಲಕ್ಷಣಗಳಲ್ಲಿ ಕೆಲವು ಅಥವಾ ಎಲ್ಲ ಲಕ್ಷಣಗಳು ಇದ್ದರೆ ಮಾತ್ರ ಆ ಔಷಧಗಳನ್ನು ಕೊಡಬೇಕು, ಇಲ್ಲದಿದ್ದರೆ ಕೊಡಕೂಡದು ಎಂದು ತಿಳಿಯಬಾರದು. "ಗುಣಧರ್ಮ" ಪ್ರಕರಣದಲ್ಲಿ ಔಷಧಗಳ ಭಾವನೆಗಳನ್ನು ಸವಿಸ್ತರವಾಗಿ ಕೊಟ್ಟಿದ್ದೇವೆ. ಆ ಭಾವನೆಗಳನ್ನು ರೋಗದಲ್ಲಿ ಕಂಡುಬರುವ ಭಾವನೆಗಳಿಗೆ ಹೋಲಿಸಿ ನೋಡಿ, ಶರೀರದಲ್ಲಿ ಯಾವ ಕ್ಷಾರವು ಕಡಿಮೆಯಾಗಿದೆ ಎಂಬದನ್ನು ಕಂಡುಹಿಡಿದು, ಬಳಿಕ ಔಷಧ ಯೋಜನೆಯನ್ನು ಮಾಡಬೇಕು. ಔಷಧದ ಶಕ್ತಿಯ ಬಗ್ಗೆ ಹೇಳುವದಾದರೆ, ಈ ಪುಸ್ತಕದಲ್ಲಿ ಇಂಥಿಂಥ ಶಕ್ತಿಯ ಔಷಧವನ್ನು ಕೊಡಬೇಕು ಎಂದು ಬರೆದದ್ದು ಕೇವಲ ಮಾರ್ಗದರ್ಶಕವೆಂದೇ ತಿಳಿಯಬೇಕು; ಅಲ್ಲದೆ ತ್ರಿಕಾಲಾಬಾಧಿತವಾದ ನಿಯಮವೆಂದು ತಿಳಿಯಬಾರದು.

ಈ ಪ್ರಕರಣದಲ್ಲಿ ದಿನಾಲು ಕಂಡುಬರುವ ಸರ್ವಸಾಧಾರಣ ರೋಗಗಳ ವಿವೇಚನವನ್ನು ಮಾಡಿದ್ದೇವೆ. ಯಾವತ್ತೂ ರೋಗಗಳ ವಿವೇಚನ ಮಾಡುವದು ಶಕ್ಯವೂ ಇಲ್ಲ, ಇಷ್ಟವೂ ಇಲ್ಲ. ಜೀವನ ರಸಾಯನ ಚಿಕಿತ್ಸಾ ತತ್ವದ ಪರಿಚಯವೂ ಹನ್ನೆರಡು ಕ್ಷಾರಗಳ ಗುಣಧರ್ಮದ ಸಮ್ಯಕ್ ಜ್ಞಾನವೂ ಇರುವಂಥ ಜನರಿಗೆ ಈ ಗ್ರಂಥದಲ್ಲಿ ಕೊಡದೇ ಇದ್ದ

ರೋಗಗಳ ಚಿಕಿತ್ಸೆಯನ್ನು ಸಹ ಮಾಡುವದು ಕಠಿಣವಾಗಲಾರದು. ಭಾವನೆಗಳ ಮೇಲಿಂದ ಯಾವ ಕ್ಷಾರವು ಕಡಿಮೆಯಾಗಿದೆ ಎಂಬದು ತಿಳಿದರೆ, ರೋಗದ ಹೆಸರು ಗೊತ್ತಾಗದಿದ್ದರೂ, ಅದರ ಚಿಕಿತ್ಸೆಯನ್ನು ಮಾಡಬಹುದು. ರೋಗದ ವಿಶಿಷ್ಟ ಲಕ್ಷಣ ಸಮುಚ್ಚಯದ ಮೇಲಿಂದಲೇ ಅದಕ್ಕೆ ಹೆಸರು ಕೊಡುತ್ತಾರೆ. ಆ ವಿಶಿಷ್ಟ ಲಕ್ಷಣ ಸಮುಚ್ಚಯದ ಹೆಸರು ಗೊತ್ತಾಗದಿದ್ದರೂ, ಅದರಿಂದ ಯಾವ ಅಡ್ಡಿಯೂ ಆಗಲಾರದು. ಮುಂದೆ "ಭಾವನಾಕೋಶ"ವೆಂಬ ಪ್ರಕರಣದಲ್ಲಿ ಕೊಟ್ಟಿರುವ ಮಾಹಿತಿ ಯಾದರೂ ಈ ಸಂದರ್ಭದಲ್ಲಿ ಉಪಯುಕ್ತವಾಗಿದೆ. ಅದರ ಉಪಯೋಗ ವನ್ನಾದರೂ ಅವಶ್ಯವಾಗಿ ಮಾಡಬೇಕು.

ಜೀವನ ರಸಾಯನ ಚಿಕಿತ್ಸಕರಿಗೆ ಜಂತು ಶಾಸ್ತ್ರವು ಸಮ್ಮತವಿಲ್ಲ. ಕೆಲವು ರೋಗಗಳಲ್ಲಿ ಜಂತುಗಳು ಇರುತ್ತವೆ ಎಂಬದನ್ನು ಅವರು ಒಪ್ಪು ತ್ತಾರೆ. ಆದರೆ ಅವುಗಳಿಂದಲೇ ಆ ರೋಗದ ಉತ್ಪತ್ತಿಯಾಯಿತೆಂದು ಅವರು ಒಪ್ಪುವದಿಲ್ಲ. ಶರೀರದಲ್ಲಿಯ ಅವಶ್ಯಕ ಘಟಕ ಕ್ಷಾರಗಳ ಕೊರತೆಯೇ ರೋಗದ ಮೂಲ ಕಾರಣವೆಂಬದು ಅವರ ಮಹತ್ವದ ಸಿದ್ಧಾಂತವು. ಕೆಲವು ರೋಗಗಳಲ್ಲಿ ಜಂತುಗಳಾಗುವದಾದರೂ ಈ ಕೊರತೆಯು ದ್ಯೋತಕವೆಂದೇ ಅವರು ತಿಳಿಯುತ್ತಾರೆ. ವಿಶಿಷ್ಟ ರೋಗಗಳಲ್ಲಿ ವಿಶಿಷ್ಟ ಭಾವನೆಗಳು ಆಗುವಂತೆಯೇ ವಿಶಿಷ್ಟ ರೋಗಗಳಲ್ಲಿ ವಿಶಿಷ್ಟ ಜಂತುಗಳೂ ಆಗುತ್ತವೆ, ಅಷ್ಟೇ. ಅದಕ್ಕೆ ಹೆಚ್ಚಿನ ಮಹತ್ವವಿಲ್ಲೆಂದು ಅವರು ಪ್ರತಿಪಾದಿಸುತ್ತಾರೆ. ಚಳಿಜ್ವರ, ದುರ್ಗೀಣಬೇನೆ, ಕ್ಷಯ, ವಿಷಮಜ್ವರ, ಮುಂತಾದ ಅನೇಕ ರೋಗಗಳು ಜಂತುಜನ್ಯವಿರುತ್ತವೆ. ಆದರೂ ನಾವು ಈ ನಮ್ಮ ಗ್ರಂಥದಲ್ಲಿ ಅದರ ಬಗ್ಗೆ ಯಾವ ಉಲ್ಲೇಖವನ್ನೂ ಮಾಡಿರುವದಿಲ್ಲ. ಇದಕ್ಕೆ ಇನ್ನೊಂದು ಕಾರಣವೇನೆಂದರೆ, ರೋಗವನ್ನು ತಿಳಿದುಕೊಳ್ಳುವ ದೃಷ್ಟಿಯಿಂದ ಸಾಮಾನ್ಯ ವಾಚಕರಿಗೆ ಅದರ ಉಪಯೋಗವೂ ಆಗುವದಿಲ್ಲ. ರಕ್ತ, ಕಫ, ಮೂತ್ರ ಮುಂತಾದವುಗಳಲ್ಲಿಯ ದೋಷಗಳನ್ನು ಪರೀಕ್ಷಿಸಲಿಕ್ಕೆ ಅವಶ್ಯವಾಗಿ ಬೇಕಾಗುವ ಯಾಂತ್ರಿಕ ಹಾಗು ಬೇರೆ ಸಾಧನಗಳು ಪಟ್ಟಣಗಳಲ್ಲಿಯ ಡಾಕ್ಟರ ಜನರ ಹತ್ತರ ಕೂಡ ಇರುವದಿಲ್ಲ. ಅಂದಬಳಿಕ ಹಳ್ಳಿಯ ಸಾಮಾನ್ಯ ಜನರಿಗೆ ಅವು ದೊರೆಯುವದು ಹೇಗೆ? ಆದುದರಿಂದ ನಿದಾನ

ಹಾಗು ಚಿಕಿತ್ಸಾ ಇವುಗಳಿಗೆ ಪ್ರತ್ಯಕ್ಷ ಉಪಯೋಗವಾಗದಂಥ ಸಂಗತಿಗಳನ್ನು ಹೇಳಿ ಪುಸ್ತಕದ ಪುಟಗಳನ್ನು ಬೆಳೆಯಿಸುವದು ಸರಿದೋರಲಿಲ್ಲ. ಇಷ್ಟರಿಂದಲೇ ಜಂತುಶಾಸ್ತ್ರದ ಮಹತ್ವವು ನಮಗೆ ಗೊತ್ತಿಲ್ಲವೆಂತಲೂ ಅಥವಾ ನಾವು ಅದನ್ನು ಹೀಯಾಳಿಸುತ್ತೇವೆಂತಲೂ ಯಾರೂ ತಿಳಿಯಬಾರದು.

**ಸ್ಟೇಥಾಸ್ಕೋಪ**:— ಹೃದಯ ಪರೀಕ್ಷೆ ನಲಿಕೆ– ಇದರ ಸಹಾಯದಿಂದ ಹೃದಯದಲ್ಲಿಯೂ ಫುಪ್ಪುಸದಲ್ಲಿಯೂ ಆಗುತ್ತಿರುವ ಸಪ್ಪಳದ ಮೇಲಿಂದ ಹೃದಯದಲ್ಲಿಯೂ ಫುಪ್ಪುಸದಲ್ಲಿಯೂ ಉಂಟಾಗಿರುವ ರೋಗಗಳನ್ನು ಕಂಡುಹಿಡಿಯಬಹುದು. ಆದರೆ ಅದರ ಬಗ್ಗೆ ನಾವು ಈ ಪುಸ್ತಕದಲ್ಲಿ ಬರೆದಿರುವದಿಲ್ಲ. ಸಾಮಾನ್ಯ ಜನರಿಗೆ ಕೇವಲ ಪುಸ್ತಕದ ವಾಚನದಿಂದ ಇದರ ಬಗ್ಗೆ ಸರಿಯಾದ ಜ್ಞಾನವು ಆಗುವದೆಂದು ನಮಗೆ ಅನಿಸುವದಿಲ್ಲ. ಅನುಭವಿಕರಿಂದ ಮೊದಲು ಶಿಕ್ಷಣವನ್ನು ಪಡೆದನಂತರವೇ ಪುಸ್ತಕದೊಳಗಿನ ಸಂಗತಿಗಳು ತಿಳಿಯಹತ್ತುತ್ತವೆ. ಇದಲ್ಲದೆ ಔಷಧಗಳ ಗುಣದರ್ಮ ವಿವರಣೆಯಲ್ಲಿಯೂ ಚಿಕಿತ್ಸೆಯಲ್ಲಿಯೂ ಇದರ ಬಗ್ಗೆ ಯಾವ ಉಲ್ಲೇಖವನ್ನೂ ಮಾಡಿರುವದಿಲ್ಲ. ಆದ್ದರಿಂದ ಇಂಥ ಮಾಹಿತಿಯಿಂದ ವಿಶೇಷ ಲಾಭವಾಗಲಾರದು, ಎಂಬದೇ ಎರಡನೆಯ ಕಾರಣವು.

ಔಷಧಗಳ ಪ್ರಮಾಣದ ಬಗ್ಗೆ ಹಿಂದೆ " ವಿಷಯ ಪ್ರವೇಶ " ಮತ್ತು " ಹನ್ನೆರಡು ಕ್ಷಾರಗಳ ಗುಣಧರ್ಮ " ಈ ಎರಡು ಪ್ರಕರಣಗಳಲ್ಲಿ " ಔಷಧಗಳ ಪ್ರಮಾಣ"ವೆಂಬ ಸದರಿನ ಕೆಳಗೆ ಹೇಳಿದ್ದೇವೆ.

---

# ಅಗ್ನಿಮಾಂದ್ಯ

**Dyspepsia** **ಡಿಸ್‌ಪೆಪ್ಸಿಯಾ**

ಕ್ಷುಧಾನಾಶ, ಕ್ಷುಧಾತಿಶಯ, ಹುಳಿ, ಕಾರ ಮತ್ತು ಕಮ್ಮಗೆ ಮಸಾಲೆಹಾಕಿದ ಪದಾರ್ಥಗಳನ್ನು ತಿನ್ನುವ ಆಸೆ, ಹೊಟ್ಟೆಯಲ್ಲಿ ವಾಯು ತುಂಬಿಕೊಂಡಿರುವದು, ಗಂಟಲಿನಲ್ಲಿ ಉರಿಯುವದು, ಗಂಟಲಿನಲ್ಲಿ ಹುಳಿ ಸುಡುವದು, ಕಮರು ತೇಗು ಬರುವದು, ಬಾಯಿಗೆ ನೀರು ಬಿಡುವದು,

ಮುಳಮುಳಿಸುವದು, ಉಂಡಬಳಿಕ ಹೊಟ್ಟೆಯಲ್ಲಿ ಜಡವೂ ಅಸ್ವಸ್ಥವೂ ಅನಿಸುವದು, ಹೊಟ್ಟೆಯಲ್ಲಿ ಒತ್ತಿದರೆ ನೋಯುವದು, ನಾಲಿಗೆಯ ಮೇಲೆ ತೆಪ್ಪುಗಟ್ಟುವದು, ಬಾಯಿ ನಾರುವದು, ಹೊಟ್ಟೆಯಲ್ಲಿ ಕುಟ್ಟುಹಿಡಿಯುವದು, ಹೊಟ್ಟೆಯು ಉಬ್ಬಿ ತುಂಬಿದಂತೆ ಕಾಣುವದು, ಮಾನಸಿಕ ಹಾಗು ಶಾರೀರಿಕ ಶ್ರಮವನ್ನು ಮಾಡಬಾರದೆಂದು ಅನಿಸುವದು, ನಿರುತ್ಸಾಹ, ತ್ರಾಸಿಕ ಸ್ವಭಾವ, ಅರನಿದ್ದೆ ಇಲ್ಲವೆ ಕನಸು ಬೀಳುವದು, ಉಂಡಬಳಿಕ ಎದೆಯಲ್ಲಿ ದಡದಡಿಸುವದು, ಅತಿಸಾರ, ಅವರೋಧ, ತಲೆಸೂಲಿ, ಇವೆಲ್ಲ ಅಗ್ನಿಮಾಂದ್ಯದ ಲಕ್ಷಣಗಳು. (ಒಮ್ಮೊಮ್ಮೆ ಅಪಚನದಿಂದ ವಿಶೇಷವಾಗಿ ಹುಡುಗರಿಗೆ ಚಳಿ ತುಂಬಿ ೨, ೩ ಅಂಶಗಳ ವರೆಗೆ ಜ್ವರವು ಬರುತ್ತದೆ.)

ಕರಕಾದ, ಅಪಕ್ವ ಅಥವಾ ಕಮ್ಮನ್ನ ಪದಾರ್ಥಗಳನ್ನು ಬಹಳ ತಿನ್ನುವದು, ಸೆರೆ ಕುಡಿಯುವದು, ಅಳತೆಗೆಟ್ಟು ಚಹ ಕುಡಿಯುವದು, ಶ್ರಮ ಒಹಳ ಮಾಡುವದು (ವಿಶೇಷವಾಗಿ ಉಂಡಬಳಿಕ), ಸ್ತ್ರೀಸಂಗ ಬಹಳ ಮಾಡುವದು, ಮಾನಸಿಕ ತ್ರಾಸ, ಅಸ್ವಸ್ಥತೆ, ತಂಬಾಕ ತಿನ್ನುವದು, ಮುಂತಾದವುಗಳು ಅಗ್ನಿಮಾಂದ್ಯದ ಸ್ಥೂಲ ಕಾರಣಗಳು.

**ಫೇ. ಫಾ:**— ನೋವು, ಬಾವು, ಸ್ಪರ್ಶವು ತಾಳದಿರುವದು. ಮುಂತಾದ ದಾಹಯುಕ್ತ ಭಾವನೆಗಳಿದ್ದರೆ. ಕ್ಷುಧಾಮಾಂದ್ಯ. ತಿಂದ ಅನ್ನವು ಕಾರಿಕೆಯಲ್ಲಿ ಬೀಳುವದು. ಹೊಟ್ಟೆಸೂಲಿ. ಕಾಸಿದರೆ ನೆಟ್ಟಗೆ ಅನಿಸುತ್ತದೆ. ನಾಲಿಗೆಯು ಬಹುತರವಾಗಿ ಜಳಜಳ ಇರುತ್ತದೆ. ಜ್ವರವು ಬರುತ್ತದೆ. ಮೋರೆಯು ನಡುನಡುವೆ ಕೆಂಪಾಗುತ್ತದೆ. ಹಾಲಿನ ಬೇಸರಿಕೆ. ಹಾಲು ಕುಡಿದ ಬಳಿಕ ಮಳಮಳಿಸುವದು, ಕಾರಿಕೆಯೂ ಆಗುವದು.

**ಕಾ. ಮೂ:**— ಪಿತ್ತಪ್ರಕೋಪ. ನಾಲಿಗೆಯು ವಿಶೇಷವಾಗಿ ಮುಂಜಾವಿನಲ್ಲಿ ಬಿಳೀಬಣ್ಣದ್ದೂ ಬೂದೀಬಣ್ಣದ್ದೂ ಆಗುವದು. ಬದ್ಧಕೋಷ್ಠ. ಅಪಚನ. ಯಕೃತ ಭಾಗದಲ್ಲಿ ಜಡವೆನಿಸುವದು. ಪಚನಕ್ರಿಯೆ ಮಂದವಾಗುವದು. ಹೊಟ್ಟೆ ಉಬ್ಬುವದು. ಹೋಳಿಗೆ, ಪಕ್ವಾನ್ನ ಮುಂತಾದವುಗಳನ್ನು ತಿಂದನಂತರ ಅಸ್ವಾಸ್ಥ್ಯವು. ಚಹಾ, ಕಾಫಿ ಮುಂತಾದ ಅತ್ಯಂತ ಉಷ್ಣ ಪೇಯದಿಂದಾಗುವ ಅಗ್ನಿಮಾಂದ್ಯವು ಈ

ಔಷಧವನ್ನು ಕೂಡಲೆ ಕೊಟ್ಟರೆ ಜಠರದಲ್ಲಿ ಸುಟ್ಟಂಥ ಅಂತಸ್ ತ್ವಚೆಯು ಬೇಗನೆ ನೆಟ್ಟಗಾಗುವದು.

**ನೇ. ಫಾ:—** ಆಮ್ಲಪಿತ್ತ. ಉಂಡಬಳಿಕ ಹೊಟ್ಟೆಯಲ್ಲಿ ಬಹಳ ನೋಯುತ್ತದೆ. ಕ್ಷುಧಾನಾಶ; ಹುಳಿ ತೇಗು; ತಿಂದ ಅನ್ನ ಎದೆಗೆ ಹಾಯುವದು. ಜಂತಿನಿಂದ ಎದೆ ಸುಟ್ಟು ಅದರಿಂದ ನಿದ್ದೆ ಬರುವದಿಲ್ಲ. ಸಿಡುಕ, ತ್ರಾಸಿಕ ಹಾಗು ಅಸ್ವಸ್ಥ ಮಕ್ಕಳಿಗೆ ಅಪಚನವಾಗಿ ತೆಳ್ಳಗೆ ಹುಳಿ ವಾಂತಿಯಾಗುವದು; ಮಲವು ಹಸರು ಆಗುವದು; ಬಾಯಿಗೆ ಹುಳಿ ನಾತವು ಬರುವದು; ಮುಂತಾದ ಭಾವನೆಗಳಿದ್ದರೆ ಈ ಔಷಧದಿಂದ ಒಳ್ಳೇ ಗುಣವು ಬರುವದು. ಗಂಟಲದಲ್ಲಿ ಕಿರಿನಾಲಿಗೆಯು ಸುತ್ತುಮುತ್ತು ಹಳದೀ ಪಟಲ. ಹುಳಿರುಚಿ. ಆಮ್ಲಪಿತ್ತ. ಊಟವಾಗಿ ಎರಡು ತಾಸಿನ ಬಳಿಕ ಅಪಚನದಿಂದ ಹೊಟ್ಟೆಯಲ್ಲಿ ಸೂಲಿ. ಜಠರವ್ರಣ. ಫೇರಂಫಾಸವನ್ನೂ ಇದನ್ನೂ ಅದಲುಬದಲು ಮಾಡಿ ಕೊಡಬೇಕು.

**ನೇ. ಮೂ:—** ಬಾಯಿಗೆ ನೀರು ಬಿಡುವದು. ಅಪಚನ. ನೀರು ಬಿಟ್ಟನಂತರ ಕಾರಿಕೆಯಾಗಿ ಬುರುಗೂ ನೀರೂ ಬೀಳುತ್ತದೆ. ಹುಳಿ ಬಿದ್ದು ಹೋಗುವದಿಲ್ಲ. ಶೌಚದ ಬಗ್ಗೆ ತಕರಾರು. ಬಾಯಿಗೆ ಹೊಲಸುನಾತ. ಹಸಿವೆ ಬಹಳ. ಹುಳಿ ಅನ್ನ ತಿಂದರೆ ಚಳಿಯಾಗಿ ಜ್ವರವು ಬರುವದು; ಬೆವರುಬಿಟ್ಟು ದಣುವಾಗುವದು; ಈ ಭಾವನೆಗಳಿದ್ದಾಗ ನೇಟ್ರಂಮೂರ ವನ್ನು ಬಹು ದಿವಸ ಕೊಟ್ಟರೆ ನೆಟ್ಟಗೆನಿಸುತ್ತದೆ.

**ಕಲ್ಕೆ. ಫಾ:—** ಅಪಚನದ ಯಾವದೇ ರೋಗದಲ್ಲ ನಡುನಡುವೆ ಉಂಡಕೂಡಲೆ ಕೊಟ್ಟರೆ ಬಹಳ ಉಪಯೋಗವಾಗುವದು. ನೀರಡಿಕೆ ಬಹಳಾಗುವದು. ಸ್ವಲ್ಪ ಅನ್ನ ಅಥವಾ ತಣ್ಣೀರು ಹೊಟ್ಟೆಯಲ್ಲಿ ಹೋದರೂ ಹೊಟ್ಟೆ ಕಡಿಯುವದು. ಅಗ್ನಿಪ್ರದೀಪವಾಗುವದಿಲ್ಲ. ಹೊಟ್ಟೆಯಲ್ಲಿ ವಾಯು ಹಿಡಿಯುವದು ಬಹಳಾಗಿದ್ದರೆ ಇದು ರಾಮಬಾಣ ಔಷಧವು. ಪಚನವು ಆಗುವದೇ ಇಲ್ಲ. ೧ × ಶಕ್ತಿಯ ಕಲ್ಕೆಫಾಸವನ್ನು ಉಂಡಬಳಿಕ ಅರ್ಧ ತಾಸಿನ ಮೇಲೆ ನೀರಿನಲ್ಲಿ ಕಲಸಿ ಕೊಟ್ಟರೆ ಅಗ್ನಿಯು ಪ್ರದೀಪ್ತವಾಗಿ ತಿಂದ ಅನ್ನವು ಮೈಗೆ ಹತ್ತಲು ಸಹಾಯವಾಗುತ್ತದೆ.

**ಕಾ. ಫಾ:—** ವಿಷಮಜ್ವರದಂತೆ ಹಿಂಡಿ ಹಿಪ್ಪಿಮಾಡುವ ರೋಗಗಳ ನಂತರ ಬಹಳ ಹಸಿವೆಯಾಗುವದು. ಒಮ್ಮೆ ಉಂಡರೂ ಮತ್ತೊಮ್ಮೆ ಉಣ್ಣಬೇಕೆನಿಸುತ್ತದೆ. ಭಸ್ಮಕವೆಂಬ ರೋಗಕ್ಕೆ ಇದರಿಂದ ಉಗಯೋಗ-ವಾಗುವದು. ಹೊಟ್ಟೆಯಲ್ಲಿ ಯಾವಾಗಲು ಕಲಸಿದಂತಾಗುವದು. ಅಂಜಿಕೆಯಿಂದ ಹೊಟ್ಟೆ ಕಡಿಯುವದು. ಅತಿಶಯ ಅಶಕ್ತ ರೋಗಿಗೆ ಅಪಚನದ ಮೇಲೆ. ಹೊಟ್ಟೆಯಲ್ಲಿ ವಾಯು ತುಂಬಿದ್ದರಿಂದ ಎದೆಯಲ್ಲಿ ನೋಯುವದು. ಹೃದಯವು ಅಶಕ್ತವಿದ್ದರೆ, ಉಂಡಕೂಡಲೆ ಮಳಮಳಿಸಿ ಕಣ್ಣುಮುಚ್ಚುವದು; ತೇಗಿಗೆ ಹೊಲಸು ನಾತವೂ ಹೊಲಸು ರುಚಿಯೂ ಇರುವದು; ತೇಗು ಬಂದನಂತರ ಮಳಮಳವು ನಿಲ್ಲುವದು; ಈ ಭಾವನೆ-ಗಳಿದ್ದರೆ ಕಾಲೀಫಾಸದಿಂದ ಒಳ್ಳೇ ಗುಣ ಬರುವದು.

**ಕಾ. ಸ:—** ಹೊಟ್ಟೆಯೂ ಹೊಕ್ಕಳವೂ ಉಬ್ಬುತ್ತದೆ. ಹೊಟ್ಟೆಯು ತುಂಬಿದಂತೆ ಜಡವೆನಿಸುತ್ತದೆ. ಜಠರದಲ್ಲಿ ತೀಕ್ಷ್ಣ ಕಳೆಗಳು. ಮ್ಯಾ. ಫಾ. ದಿಂದ ನೆಟ್ಟಗೆನಿಸದಿದ್ದರೆ ಇದರ ವಿಶೇಷ ಉಪಯೋಗವಾಗುತ್ತದೆ. ಬಹುದಿವಸದ ಜಠರಶೈತ್ಯ. ಅಪಚನ. ನಾಲಿಗೆಯು ಹಳದಿ ಮತ್ತು ಮೆತ್ತಗೆ. ಬಹಳ ದಿನದ ಅಗ್ನಿಮಾಂದ್ಯ. ಅಪಚನ, ಹೊಟ್ಟೆಸೂಲಿ ಹಾಗು ಬಾಯಿಯಿಂದ ಜೊಲ್ಲು ಸೋರುವದು, ಈ ಭಾವನೆಗಳಿದ್ದರೆ ನೇಟ್ರಂಮೂರ ಮತ್ತು ಕಾಲೀಮೂರ ಮೊದಲು ಕೊಟ್ಟು, ಅದರಿಂದ ಗುಣವು ಬರದಿದ್ದರೆ ಕಾಲೀ ಸಲ್ಫ ಕೊಡಬೇಕು, ನೀರಡಿಕೆ ಆಗದಿರುವದು, ಬಿಸಿನೀರು ಕುಡಿದರೆ ತ್ರಾಸವಾಗುವದು, ಸ್ವಲ್ಪ ಚಳಿಯಾದರೂ ಜಠರದಲ್ಲಿ ವೇದನೆಯಾಗುವದು, ಮತ್ತು ಅದು ಉದರಭಾಗದಲ್ಲಿ ಹಬ್ಬುವದು, ಈ ಲಕ್ಷಣಗಳಿದ್ದರೆ ಕಾಲೀ ಸಲ್ಫದಿಂದ ಬಹಳ ಉಪಯೋಗವಾಗುವದು.

**ಮ್ಯಾ. ಫಾ:—** ನಾಲಿಗೆಯು ಸ್ವಚ್ಛವಾಗಿದ್ದು ನಿಂತು ನಿಂತು ಒಮ್ಮಿಂದೊಮ್ಮೆ ಬಿಕ್ಕು ಬರುವದು. ಜಠರದಲ್ಲಿ ವೇದನೆ. ಗಟ್ಟಿಯಾಗಿ ಹಿಗಿದಂತೆಯೂ ಜಗ್ಗಿದಂತೆಯೂ ಅನಿಸುವದು. ಹೊಟ್ಟೆ ಮುರಿಯುತ್ತದೆ. ಉಷ್ಣಪೇಯದಿಂದ ನೆಟ್ಟಗೆನಿಸುತ್ತದೆ. ತೇಗು ಬಂದರೆ ಸಮಾಧಾನವಾಗುವದಿಲ್ಲ. ರೋಗಿಗೆ ಸಕ್ಕರೆಯನ್ನು ತಿನ್ನುವ ಇಚ್ಛೆ ಬಹಳಾಗುತ್ತದೆ.

**ನೇ. ಸ:—** ಪಿತ್ತಪ್ರಕೋಪ. ಬಾಯಿ ಕಹಿಯಾಗುವದು. ಕಹಿ ಪಿತ್ತದ ಅಥವಾ ಹಸರು ಪದಾರ್ಥದ ವಾಂತಿ. ನಾಲಿಗೆಯು ಹಸರು ಮತ್ತು ನೀಲಿ. ಪಿತ್ತಯುಕ್ತ ಕಪ್ಪು ಮತ್ತು ಹಸರು ಮಲವು. ಮುಂಜಾವಿನಲ್ಲಿ ಬಾಯಿಗೆ ಕಹಿ ರುಚಿ. ತಲೆಸೂಲಿ. ಬವಳಿ. ಯಕೃತ ಭಾಗದಲ್ಲಿ ಚುಚ್ಚಿದಂತೆ ವೇದನೆ.

**ಕಲ್ಕೆ. ಸ:—** ಹಣ್ಣುಹಂಪಲ, ಚಹಾ, ಹಸರು ಹಾಗು ಹುಳಿಯಾದ ಪಲ್ಲೆಗಳನ್ನು ತಿನ್ನುವ ಇಚ್ಛೆ ಬಹಳ. ಹಸಿವೆಯೂ ನೀರಡಿಕೆಯೂ ಬಹಳಾಗುತ್ತದೆ. ಮಳಮಳಿಸುವದು. ತಲೆ ತಿರುಗುವದು. ಹೊಟ್ಟೆಯಲ್ಲಿ ಉರುಪು.

**ಸಿ:—** ಬಹಳ ದಿನದ ಅಗ್ನಿಮಾಂದ್ಯ. ಹುಳಿ ತೇಗು. ಗಂಟಲಿನಲ್ಲಿ ಹುಳಿ ಸುಡುವದು. ಬಿಸಿ ಅನ್ನ ಹಾಗು ಮಾಂಸ ತಿನ್ನುವ ಬೇಸರಿಕೆ. ಹಸಿವೆ ಬಹಳ. ಸೆರೆ ಮುಂತಾದ ಮಾದಕ ಪದಾರ್ಥಗಳು ತಾಳುವದೇ ಇಲ್ಲ.

**ಉಪಯುಕ್ತ ಸೂಚನೆ:—** ಅನ್ನವನ್ನು ಹಲ್ಲುಗಳಿಂದ ಸರಿಯಾಗಿ ಕಚ್ಚಿ, ತುತ್ತು ಜೊಲ್ಲಿನಕೂಡ ಹೊಟ್ಟೆಯೊಳಗೆ ಇಳಿಯುವಂತೆ ಮಾಡಬೇಕು. ಮೆಲ್ಲಗೆ ಊಟಮಾಡಬೇಕು. ಅವಸರದಿಂದ ಉಣ್ಣಬಾರದು. ಅಜೀರ್ಣವಾಗುವಷ್ಟು ತಿನ್ನಬಾರದು. ಚಹಾ, ಸೆರೆ ಮುಂತಾದ ಮಾದಕ ಪದಾರ್ಥಗಳನ್ನೂ ಜಡಾನ್ನವನ್ನೂ ಸಂಪೂರ್ಣವಾಗಿ ಬಿಟ್ಟುಬಿಡಬೇಕು. ಗೊತ್ತುಮಾಡಿದ ಹೊತ್ತಿಗೆನೇ ಉಣ್ಣಬೇಕು. ಉಂಡಬಳಿದ ಹಲ್ಲುಗಳನ್ನು ಸ್ವಚ್ಛವಾಗಿ ತೊಳೆಯಬೇಕು. ಊಟವಾದ ಬಳಿಕ ಬಾಯಿಯನ್ನು ಸ್ವಚ್ಛವಾಗಿ ತೊಳೆಯದಿದ್ದರೆ ಎಷ್ಟೋಸಾರೆ ಅನ್ನದ ಕಣಗಳು ಹಲ್ಲಿನ ಸಂದಿನಲ್ಲಿ ಸಿಕ್ಕು ಅಪಚನ ಮೊದಲಾದ ರೋಗಗಳು ಆಗುತ್ತವೆ. ಆದುದರಿಂದ ಹಲ್ಲುಗಳನ್ನು ಸ್ವಚ್ಛವಾಗಿ ಇಡಬೇಕು. ಉಣ್ಣುವಾಗ ನೀರು ಕುಡಿಯಬಾರದು. ಉಂಡಬಳಿಕ ಎರಡು ತಾಸಿನ ಮೇಲೆ ಬೇಕಾದಾಗ ಬೇಕಾದಷ್ಟು ನೀರು ಕುಡಿದರೂ ಅಪಾಯವಾಗುವದಿಲ್ಲ. ಉಂಡಬಳಿಕ ಎರಡು ತಾಸು ಬಿಟ್ಟು ಮಲಗಬೇಕು. ಬೇಗನೆ ಮಲಗಿ ಬೇಗನೆ ಏಳಬೇಕು. ಸೂರ್ಯೋದಯದ ಪೂರ್ವದಲ್ಲಿಯೂ ಸಾಯಂಕಾಲದಲ್ಲಿಯೂ ಬಯಲು ಹವೆಯಲ್ಲಿ

ಸ್ವಲ್ಪ ತಿರುಗಾಡಿ ಬರಬೇಕು. ಬಹುತರವಾಗಿ ದಿನಾಲು ತಣ್ಣೀರಿನಿಂದ ಜಳಕ ಮಾಡಬೇಕು. ಪಚನವಾಗುವಂಥ ಅನ್ನವನ್ನು ಎರಡು ತುತ್ತು ಕಡಿಮೆ ತಿನ್ನಬೇಕು. ಹಸಿಬಿಸಿ, ತಂಗಳ, ಕರಕಾದ ಹಾಗು ತಡೆಯುದಂಥ ಪದಾರ್ಥಗಳನ್ನು ತಿನ್ನಬಾರದು ಎಂದು ಬೇರೆ ಹೇಳಬೇಕಾಗಿಲ್ಲ. ಆಮ್ಲ ಪಿತ್ತದ ಹೊಟ್ಟೆಕಡಿತವಿದ್ದರೆ ಸೇಟ್ರಂಫಾಸ ಮತ್ತು ಫೇರಂಫಾಸ ಈ ಔಷಧ ಗಳನ್ನು ದಿನಾಲು ಅದಲುಬದಲುಮಾಡಿ ೩/೪ ಸಾರೆಯಂತೆ ೪/೬ ತಿಂಗಳ ವರೆಗೆ ಬಿಟ್ಟುಬಿಡದೆ ಕೊಟ್ಟರೆ ಆ ರೋಗವು ಸಂಪೂರ್ಣವಾಗಿ ನೆಟ್ಟಗಾಗುತ್ತ ದೆಂದು ಅನುಭವವದೆ. ಆಮ್ಲಪಿತ್ತದ ರೋಗಿಯು (ಅಕ್ಕಿಯ) ಅನ್ನವನ್ನು ತೀರ ಬಿಟ್ಟುಬಿಡಬೇಕು.

---

## ಅತಿಸಾರ

**Diarrhoea** ಡಾಯೆರಿಯಾ

ಶೌಚಕ್ಕೆ ತೆಳ್ಳಗಾಗುವದೂ ಮೇಲಿಂದ ಮೇಲೆ ಆಗುವದೂ ಈ ರೋಗದ ಪ್ರಮುಖ ಲಕ್ಷಣವು. ಬಿಳೀ, ಹಳದಿ, ಹಸರು, ನೀರಿನಂತೆ ತೆಳ್ಳಗೆ, ಒಮ್ಮೊಮ್ಮೆ ಕಪ್ಪು ಬಣ್ಣದ ಶೌಚವೂ ಆಗುವದು. ಶೌಚದ ಪೂರ್ವದಲ್ಲಿ ಹೊಟ್ಟೆಯಲ್ಲಿ ಗುರುಗುರು ಅನ್ನುವದು, ವೇದನೆಯಾಗುವದು, ಗಡಿಬಿಡಿಯಾಗುವದು, ಈ ಭಾವನೆಗಳು ಒಮ್ಮೊಮ್ಮೆ ಇರುತ್ತವೆ; ಒಮ್ಮೊಮ್ಮೆ ಇರುವದಿಲ್ಲ. ಹೊಟ್ಟೆಯಲ್ಲಿ ಕುಟ್ಟ ಹಿಡಿಯುವದು. ಮಲವು ಹುಳಿ ಅಥವಾ ಕೊಳಕು ನಾರುವದು. ಕಳೆ ಬಂದರೆ ಅದು ಶೌಚದನಂತರ ನಿಲ್ಲುತ್ತದೆ. ಒಮ್ಮೊಮ್ಮೆ, ವಿಶೇಷವಾಗಿ ಕ್ಷಯವಾಗಿದ್ದರೆ, ಹೊಟ್ಟೆ ಜಾಡಿಸಿ ರೋಗಿಯು ದಣಿಯುತ್ತಾನೆ. ಜಿಗಟು, ಲೋಳೆಯುಳ್ಳ ಜುಲಾಬಗಳೂ ಆಗುತ್ತವೆ. ಜುಲಾಬಿನಲ್ಲಿ ಅಪಕ್ವ ಅನ್ನವೂ ಬೀಳುವ ದುಂಟು. ವಿಶೇಷ ಜೋರಿನ ರೋಗಗಳಲ್ಲಿ ಜ್ವರ ಬರುವದು, ತಲೆ ನೋಯುವದು, ಹೊಟ್ಟೆ ಹಸಿಯುವದು, ನಾಲಿಗೆಯ ಮೇಲೆ ಪುಟ ಬರುವದು, ಮುಂತಾದ ಲಕ್ಷಣಗಳಿರುವವು. ಈ ರೋಗವು ಸಣ್ಣ ಹುಡುಗರಲ್ಲಿ ಹೆಚ್ಚಾಗಿ ಕಂಡುಬರುವದು.

ಅಪಚನ, ತಂಗಳ ಹಾಗು ಕರಕು ಅನ್ನ ತಿನ್ನುವದು, ತಾಳಲಾರ ದಷ್ಟು ತಿನ್ನುವದು, ಮನಸ್ಸಿಗೆ ಧಕ್ಕೆಯಾಗುವದು, ಹವೆಯಲ್ಲಿ ಬಹಳ ಚಳಿ ಇಲ್ಲವೆ ಶಕೆ, ತೇವಿನ ಸ್ಥಳದಲ್ಲಿ ಇರುವದು, ಇವು ಅತಿಸಾರದ ಕಾರಣಗಳು.

**ಫೇ. ಫಾ**:— ಮೇಲಿಂದ ಮೇಲೆ ನೀರಿನಂತೆ ತೆಳ್ಳಗೆ ಜುಲಾಬು ಆಗುತ್ತದೆ. ವೇದನೆಯುಕ್ತ ಜುಲಾಬು ಒಮ್ಮಿಂದೊಮ್ಮೆ ದೊಡ್ಡ ಪ್ರಮಾಣದಲ್ಲಿ ಆಗುತ್ತದೆ. ವಾಂತಿಯೂ ಆಗುತ್ತದೆ, ಸಣ್ಣ ಹುಡುಗರಿಗೆ ಹಸರು ಹಾಗು ಶ್ಲೇಷ್ಮ ಲ ಮಲವಾಗುತ್ತದೆ. ಕೂಸು ನೆರಳುತ್ತದೆ ಹಾಗು ಒಂದೇಸವನೆ ಒಂದು ಮಗ್ಗಲಿಂದ ಮತ್ತೊಂದು ಮಗ್ಗಲಾಗುತ್ತದೆ. ಚಳಿಯಿಂದ ರೇಚವಾಗುತ್ತದೆ. ಆಮಾತಿಸಾರ (ಅಪಚನವಾಗಿ ತಿಂದ ಅನ್ನವು ಹಾಗೆಯೇ ಜಾಡಿಸುತ್ತದೆ.) ಜ್ವರ, ನೀರಡಿಕೆ ಮುಂತಾದ ಭಾವನೆಗಳಾಗುವವು.

**ನೇ. ಫಾ**:— ಹಸರು ಹುಳಿ ಜುಲಾಬು. ಕೂಸುಗಳಿಗೆ ಹಲ್ಲು ಬರುವ ಕಾಲಕ್ಕೆ ಆಗುವ ಜುಲಾಬು. ಗ್ರೀಷ್ಮ ಋತುವಿನಲ್ಲಿ ಕಸಕು ಫಲ ಗಳನ್ನು ತಿನ್ನುವದರಿಂದಲೂ ಹೊಟ್ಟೆಯಲ್ಲಿ ಜಂತುಗಳು ಆಗುವದರಿಂದಲೂ ಆಗುವ ರೇಚ. ನಾಲಿಗೆಯು ಮೇಲೆ ಕೆನೆಯಂಥ ದಟ್ಟವಾದ ಹಳದೀ ಪುಟವಿದ್ದರೆ ಗುಣವು ಖಂಡಿತವಾಗಿ ಬರುವದು. ಪಿತ್ತವು ಹೆಚ್ಚಾಗಿ ಆಗುವ ಅತಿಸಾರವು.

**ಕಾ. ಮೂ**:— ಹಳದಿ ಅಥವಾ ಬೆಳ್ಳಗೆ ಜುಲಾಬು. ನಾಲಿಗೆಯು ಬೆಳ್ಳಗಾಗುವದು. ಸ್ನಿಗ್ಧ ಪದಾರ್ಥವನ್ನು ತಿಂದಿದ್ದರೆ, ರಕ್ತಯುಕ್ತ ಅಥವಾ ಜಿಗಟು ಮೆತ್ತನ್ನ ರೇಚ. ವಿಷಮಜ್ವರದಲ್ಲಿಯ ಅತಿಸಾರವು.

**ಕಾ. ಫಾ**:— ಅಕ್ಕಿಯ ಕಚ್ಚಿನಂತೆ ಬಿಳೀ ರೇಚವು. ಹೊಲಸು ನಾರುವ ಜುಲಾಬು. ವೇದನೆಯು ಒಮ್ಮೊಮ್ಮೆ ಇರುವದು, ಒಮ್ಮೊಮ್ಮೆ ಇರುವದಿಲ್ಲ. ಜುಲಾಬಿನಿಂದ ರೋಗಿಯು ದಣಿಯುವನು. ಹೆದರಿಕೆ ಯಿಂದಾಗಲಿ ಬೇರೆ ಕಾರಣದಿಂದಾಗಲಿ ಮನಸ್ಸಿಗೆ ಧಕ್ಕೆ ತಗಲಿ ಆಗುವ ಅತಿಸಾರವು.

**ನೇ. ಮೂ**:— ಒಮ್ಮೆ ಮಲಾವರೋಧ ಮತ್ತೊಮ್ಮೆ ಅತಿಸಾರ-ಬಹಳ ಉಪ್ಪು ತಿಂದದರಿಂದ ಆಗುವ ಜಿಗಟು, ಅಳ್ಳಕೆ, ಬುರುಗು ಇದ್ದ ರೇಚ. ಬಳಿಕ ಆ ಸ್ಥಳದಲ್ಲಿ ತೀವ್ರ ವೇದನೆ. ಚಿಕ್ಕ ಮಕ್ಕಳಿಗೆ ಹಳೆಯ ಅತಿಸಾರದಿಂದ ಕುತ್ತಿಗೆಯು ಸಣ್ಣಾಗುವದು; ಮುಖವು ಜಿಗಟಾಗಿ ಎಣ್ಣೆಣ್ಣೆ ಸುರಿಯುವದು; ಮುಂತಾದ ಭಾವನೆಗಳು.

**ನೇ. ಸ**:— ಬಹು ದಿವಸ ಹೊಟ್ಟೆ ಜಾಡಿಸುವದು. ಮುಂಜಾನೆ ಹೊಟ್ಟೆ ಜಾಡಿಸುವದು. ಕರ್‍ರಗೆ, ಹಳದಿ, ಹಸರು, ತಿಳಿನೀರಿನಂಥ ರೇಚವು. ತಿನ್ನುವದರಿಂದ ಹೆಚ್ಚಾಗುವದು. ತಂಪು ಹವೆಯಲ್ಲಿ ವಿಕಾರವೃದ್ಧಿಯಾಗುವದು. ಮುದುಕರಿಗೆ ಆಗುವ ಅತಿಸಾರವು. ಮುಂಜಾವಿನಲ್ಲಿ ಹಾಸಿಗೆಯಿಂದ ಎದ್ದ ಕೂಡಲೆ ಸ್ವಲ್ಪ ಚಲನವಲನವಾದರೂ ಬೇಗನೆ ಶೌಚದ ಭಾವನೆಯಾಗಿ ಹೊಟ್ಟೆಜಾಡಿಸುವಂಥ ರೋಗಿಗಳಿಗೆ ಇದರಿಂದ ವಿಶೇಷವಾಗಿ ಉಪಯೋಗವಾಗುವದು.

**ಕಲ್ಕೆ. ಫಾ**:— ಕೂಸುಗಳಿಗೆ ಹಲ್ಲು ಒಡೆಯುವ ಕಾಲಕ್ಕೆ ಆಗುವ ಅತಿಸಾರದ ಮೇಲೆ ಇದು ರಾಮಬಾಣ ಔಷಧವು. ಎಸರು ಬಂದ ನೀರಿನಂತೆ, ಹೊಲಸು ನಾರುವ, ಸಪ್ಪಳ ಮಾಡುತ್ತ, ಒಮ್ಮೆಲೆ ಜೋರಿನಿಂದ ಬರುವ ಅತಿಸಾರವು. ಒಮ್ಮೆ ಹಸರು ಬಣ್ಣದ್ದು, ಮತ್ತೊಮ್ಮೆ ಆವಿನಿಂದ ಕೂಡಿದ್ದು.

**ಸಿ**:— ಹುಡುಗರಿಗೆ ಆಗುವ ಅತಿಸಾರ. ತಲೆ ಬೆವರುವದು. ಆ ಬೆವರಿಗೆ ಹುಳಿ ನಾತ ಬರುವದು. ಹೊಟ್ಟೆಯು ಉಬ್ಬಿ ಬಿರುಸಾಗುವದು. ಮೈಲೀ ಚುಚ್ಚಿದ್ದರಿಂದ ಆಗುವ ಹೊಲಸು ಅತಿಸಾರ.

**ಕಾ. ಸ**:— ಹಳದಿ, ಜಿಗಟು, ನೀರಿನಂತೆ ತೆಳ್ಳಗೆ, ಹಾಗು ಕೀವವುಳ್ಳ ಅತಿಸಾರ. ನಾಲಿಗೆಯ ಹಿಂದಿನ ಭಾಗದಲ್ಲಿ ಹಳದಿ ಪುಟವು. ಕರ್‍ರಗೆ, ತೆಳ್ಳಗೆ, ಹಾಗು ಹೊಲಸು ಜುಲಾಬು. ಹೊಟ್ಟೆಯಲ್ಲಿ ಸೂಲಿಗಳು. ಮ್ಯಾ. ಫಾ. ದಿಂದ ಗುಣಬರದಿದ್ದರೆ.

**ಮ್ಯಾ. ಫಾ**:— ಹೊಟ್ಟೆ ಮುರಿದು ರೇಚವಾಗುವದು. ರೇಚವು ತೆಳ್ಳಗಿದ್ದು ಒಮ್ಮೆಲೆ ಜೋರಿನಿಂದ ಆಗುತ್ತದೆ. ಹೊಟ್ಟೆ ಕಡಿಯುತ್ತದೆ.

ಕಾವು ಕೊಟ್ಟರೆ ವೇದನೆಯು ಕಡಿಮೆಯಾಗುವದು. ಕಾರಿಕೆಯೂ ಇರುತ್ತದೆ. ಕಾಲಿಗೆ ಕಳೆ ಬರುವದು. ಹುಡುಗರಿಗೆ ಹೊಟ್ಟೆ ಕಡಿದು ಜುಲಾಬು ಆಗುತ್ತದೆ; ಒಂದೇಸವನೆ ತಲೆ ಅಲ್ಲಾಡಿಸುವದು; ಮುಗಿಲ ಕಡೆಗೆ ನೋಡುವದು; ನಾಲಿಗೆಯು ಹಳದೀ ಅಥವಾ ನೀಲಿಯಾಗುವದು; ನೀರಡಿಕೆಯು ಆಗದಿರುವದು; ಈ ಭಾವನೆಗಳಿದ್ದರೆ ಮ್ಯಾ. ಫಾ. ಹಾಗು ಕಲ್ಕೆ. ಫಾ. ಈ ಎರಡು ಔಷಧಗಳನ್ನು ಕೊಟ್ಟರೆ ಸಮಾಧಾನವಾಗುವದು.

**ಕಲ್ಕೆ. ಸ:—** ಕೀವೂ ರಕ್ತವೂ ಇದ್ದ ರೇಚವಾಗುವದು. ನಾಲಿಗೆಯು ಬೆಳ್ಳಗಾಗುವದು.

**ಉಪಯುಕ್ತ ಸೂಚನೆ:—** ಕಲ್ಕೆ. ಫಾ; ಫೇರಂ. ಫಾ; ನೇಟ್ರಂ. ಫಾ. ಈ ಮೂರು ಔಷಧಗಳಿಂದಲೇ ಬಹುತರವಾಗಿ ಸಣ್ಣ ಹುಡುಗರ ಅತಿಸಾರವು ನೆಟ್ಟಗಾಗುವದು. ಮುಪ್ಪಿನವರ ಅತಿಸಾರಕ್ಕೆ ನೇಟ್ರಂ ಸಲ್ಫದಿಂದ ಬಹಳ ಉಪಯೋಗವಾಗುವದು. ನಡುನಡುವೆ ಬಿಸಿನೀರಿನ ಬಸ್ತಿಯನ್ನು (ಎನಿಮಾ) ಕೊಟ್ಟು ಗುದದ್ವಾರವನ್ನು ತೊಳೆಯುವದು ನೆಟ್ಟಗೆ. ಅಫು ಮೊದಲಾದ ಮಾದಕ ಪದಾರ್ಥಗಳನ್ನು ಕೊಟ್ಟು ರೇಚವನ್ನು ನಿಲ್ಲಿಸುವ ಯತ್ನವನ್ನು ಎಂದಿಗೂ ಮಾಡಬಾರದು. ಅಂಥ ಪ್ರಯತ್ನದಿಂದ ಶರೀರದ ಮೇಲೆ ಬಹಳ ಕೆಟ್ಟ ಪರಿಣಾಮವಾಗುವದು. ಯಾವ ಕ್ಷಾರದ ಕೊರತೆಯಿಂದ ಅತಿಸಾರವು ಆಗುವದೋ ಆ ಕ್ಷಾರವನ್ನು ಪೂರಯಿಸಿಯೇ ರೋಗವನ್ನು ನೆಟ್ಟಗೆ ಮಾಡುವದು ಅವಶ್ಯವು ಮತ್ತು ಹಿತಕರವು.

ನುಚ್ಚು ಹುರಿದು ಸಿದ್ಧಮಾಡಿದ ಹಗುರು ಅನ್ನವನ್ನು ತಿನ್ನಲಿಕ್ಕೆ ಕೊಡಬೇಕು. ಜಡವಾದ ಅನ್ನವನ್ನೂ ವಾತುಲ ಪದಾರ್ಥಗಳನ್ನೂ ಕೊಡಬಾರದು. ಮಾಂಸ ತಿನ್ನುವವರು ಅದನ್ನು ಕೆಲವು ದಿವಸ ಬಿಡಬೇಕು. ಜವೆಗೋದಿಯ ನೀರು, ಅಂಟಿನ ಪೇಯ, ಅಗಸಿಯ ಚಹ, ಇವು ಇಂಥ ರೋಗಿಗಳಿಗೆ ತಡೆಯುತ್ತವೆ. ಹಾಲು, ಮಜ್ಜಿಗೆ, ಸುಣ್ಣದ ಮೇಲಿನ ತಿಳಿ ನೀರು ಇವುಗಳಿಂದ ಹಿತವಾಗುತ್ತದೆ. ಕೈಕಾಲುಗಳನ್ನು ಯಾವಾಗಲೂ ಬೆಚ್ಚಗೆ ಇಡಬೇಕು; ನೀರು ಇದ್ದ ಹಾಗು ತೇವು ಇದ್ದ ಸ್ಥಳದಲ್ಲಿ ಹೋಗಬಾರದು, ನಿದ್ದೆ ಕಟ್ಟುವದರಿಂದಲೂ ರಾತ್ರಿಯ ಕಾಲದಲ್ಲಿ ತಂಪು ಹವೆಯಲ್ಲಿ

ತಿರುಗಾಡುವದರಿಂದಲೂ ಅತಿಸಾರದ ಉಪದ್ರವವು ಮೇಲಿಂದಮೇಲೆ ಆಗುವದು. ಹೊಟ್ಟೆ ಮುರಿಯುತ್ತಿದ್ದಾಗ ಉಣ್ಣೆಯ ಬಟ್ಟೆಯ ಪಟ್ಟೆಯನ್ನು ಹೊಟ್ಟೆಯಮೇಲೆ ಇಡಬೇಕು.

---

## ಅತ್ಯಾರ್ತವ

**Menorrhagia.** ಮೆನೊರ್ಹೇಜಿಯಾ

ಅತ್ಯಾರ್ತವವೆಂದರೆ ಮುಟ್ಟು ಬಹಳ ಹೋಗುವದು. ಮುಟ್ಟು ಬೇಗನೆ, ತಡಮಾಡಿ, ಅಥವಾ ಸರಿಯಾದ ಕಾಲಕ್ಕೆ ಬರುವದು. ಆದರೆ ಸ್ರಾವವು ಮಾತ್ರ ಬಹಳ ದಿವಸ ಹೆಚ್ಚು ಪ್ರಮಾಣದಲ್ಲಿ ಹೋಗುತ್ತದೆ. ಗರ್ಭಾಶಯಭ್ರಂಶ, ಯೋನಿಕಂದ, ಅತಿಸಂಗ, ಅಥವಾ ಅತಿಶಯ ಸಂಭೋಗದ ಇಚ್ಛೆ ಮುಂತಾದ ಕಾರಣಗಳಿಂದ ಈ ವಿಕಾರವು ಉಂಟಾಗುವದು. ರಕ್ತದ ಕೆಲವು ದೋಷಗಳು ಹಾಗು ಸನ್ನಿಪಾತ ಜ್ವರದಂಥ ದೋಷಯುಕ್ತ ಜ್ವರವು ಇವುಗಳಿಂದಲೂ ಈ ರೋಗವು ಆಗುವದುಂಟು. ರಕ್ತವು ತೆಳ್ಳಗಾಗಿದ್ದೂ ಗಂಟುಗಟ್ಟಿದ್ದೂ ಬೇರೆ ಬೇರೆ ಬಣ್ಣದ್ದೂ ಇರುವದು.

ಜೀವನ ರಸಾಯನ ಶಾಸ್ತ್ರದ ದೃಷ್ಟಿಯಿಂದ ಕಾಲ್ಶಿಯಮ್ (ಕಾಲೀಮೂರ) ಎಂಬ ಕ್ಷಾರವು ಕಡಿಮೆಯಾದ್ದರಿಂದ ಫಿಬ್ರಿನ್ ಎಂಬ ಪದಾರ್ಥವು ನಿಷ್ಕ್ರಿಯವಾಗುತ್ತದೆ; ಮತ್ತು ಅದು ರಕ್ತದಲ್ಲಿ ಸೇರಲು ರಕ್ತವು ಗಟ್ಟಿಯಾಗುತ್ತದೆ. ಫಿಬ್ರಿನ್‌ದಿಂದ ರಕ್ತವಾಹಿನಿಗಳಲ್ಲಿ ಕ್ಷೋಭವಾಗಿ ಅದರಿಂದ ರಕ್ತಸ್ರಾವವಾಗುತ್ತದೆ. ಯೋನಿಭಾಗದ ಸ್ನಾಯುಗಳಲ್ಲಿ ಕಲ್ಕೆ. ಫ್ಲೊ. ಎಂಬ ಕ್ಷಾರದ ಪ್ರಮಾಣವು ಕಡಿಮೆಯಾದ್ದರಿಂದ ಅದರ ಆಕುಂಚನಶಕ್ತಿಯು ಕಡಿಮೆಯಾಗುತ್ತದೆ; ಮತ್ತು ಅದರಿಂದಲೂ ರಕ್ತಸ್ರಾವವು ಬಹಳಾಗುತ್ತದೆ. ಸ್ಥಿತಿಸ್ಥಾಪಕ ಶಕ್ತಿಯುಳ್ಳ ತಂತುಗಳಿಂದಲೇ ಸ್ನಾಯುಗಳಲ್ಲಿ ಆಕುಂಚನ ಶಕ್ತಿಯು ಬರುತ್ತದೆ. ಈ ತಂತುಗಳು ನಿರ್ಮಾಣವಾದ ಕೂಡಲೆ ರಕ್ತಸ್ರಾವವು ನಿಲ್ಲುತ್ತದೆ. ಮತ್ತು ಅವುಗಳನ್ನು ನಿರ್ಮಾಣಮಾಡುವ ಶಕ್ತಿಯು ಕಲ್ಕೆ. ಫ್ಲೊ. ದಲ್ಲಿ ಇರುತ್ತದೆ.

**ಕಲ್ಕೆ. ಫ್ಲೊ:—** ಇದು ಈ ರೋಗದ ಮೇಲಿನ ಪ್ರಮುಖ ಔಷಧವು. ಇದು ಗರ್ಭಾಶಯದ ಆಕುಂಚನ ಶಕ್ತಿಯನ್ನು ಬೆಳೆಯಿಸಿ ಬೇನೆಯನ್ನು ನೆಟ್ಟಗೆ ಮಾಡುತ್ತದೆ. ಗರ್ಭಾಶಯದೊಳಗಿಂದ ಏನಾದರೂ ಹೊರಗೆ ಹೋಗುತ್ತದೆಂದು ಅನಿಸಿ ಬಹಳ ವೇದನೆಯಾಗುತ್ತದೆ; ಮತ್ತು ಮುಟ್ಟು ಹೋಗುತ್ತದೆ. ಗರ್ಭಾಶಯ ಭ್ರಂಶವೂ ಇರುತ್ತದೆ.

**ಫೇ. ಫಾ:—** ಮುಟ್ಟು ಮುಗಿದ ಬಳಿಕ ಮತ್ತೊಮ್ಮೆ ಮುಟ್ಟಾಗುವ ಕಾಲವು ಬರುವ ವರೆಗೆ ಈ ಔಷಧವನ್ನು ಕೊಡಬೇಕು. ಅದರಿಂದ ಗರ್ಭಾಶಯದಲ್ಲಿ ರಕ್ತಸಂಚಯವಾಗುವ ಪ್ರವೃತ್ತಿಯು ನಿಲ್ಲುತ್ತದೆ; ಮತ್ತು ಹೆಚ್ಚು ರಕ್ತಸ್ರಾವವಾಗುವದಿಲ್ಲ. ತೆಳ್ಳಗಿರುವ ಹಾಗು ಕ್ಷೀಣ ರಕ್ತರಾಗಿರುವ ರೋಗಿಗಳಿಗೆ ಈ ಔಷಧದಿಂದ ವಿಶೇಷವಾಗಿ ಉಪಯೋಗವಾಗುವದು.

**ಕಾ. ಮೂ:—** ಮುಟ್ಟು ಕರ್‍ರಗೆ, ಜಿಗಟು, ಹಾಗು ಗಟ್ಟಿಯಾಗಿ ಆಗುತ್ತದೆ. ಮುಟ್ಟು ಮೇಲಿಂದಮೇಲೆ ಆಗುತ್ತದೆ. ನಾಲಿಗೆಯು ಬೆಳ್ಳಗಿದ್ದು ಮೇಲೆ ಹೇಳಿದಂತೆ ಮುಟ್ಟು ಆಗುತ್ತಿದ್ದರೆ, ಈ ಔಷಧದ ಉಪಯೋಗವು ಬಹಳವಾಗುತ್ತದೆ.

**ಕಲ್ಕೆ. ಫಾ:—** ಸರ್ವಸಾಧಾರಣ ಶಕ್ತಿದಾಯಕವೆಂದು ಈ ಔಷಧವನ್ನು ಬೇರೆ ಔಷಧಗಳ ಸಂಗಡ ಮೇಲಿಂದಮೇಲೆ ಕೊಡಬೇಕು.

"ಮುಟ್ಟು" ಎಂಬ ಸದರು ನೋಡಿರಿ.

---

# ಅಂಗವಧ (ಅರ್ಧಾಂಗ)

**Paralysis.** **ಪ್ಯಾರಾಲಿಸಿಸ್**

ಒಂದಾಗಲಿ ಹೆಚ್ಚಾಗಲಿ ಸ್ನಾಯುಗಳ ಐಚ್ಛಿಕವಾದ ಗತಿದಾಯಕ ಶಕ್ತಿಯು ಕಡಿಮೆಯಾದರೆ, ಇಲ್ಲವೆ ಸಂಪೂರ್ಣವಾಗಿ ನಾಶಹೊಂದಿದರೆ, ಅದಕ್ಕೆ ಅಂಗವಧವೆಂತಲೂ ಅರ್ಧಾಂಗವಾಯುವೆಂತಲೂ ಅನ್ನುತ್ತಾರೆ. ಎಡಗಡೆಯ ಅಥವಾ ಬಲಗಡೆಯ ಅರ್ಧಾಂಗದಲ್ಲಿ ಆಯಾಭಾಗದ ಒಂದು

ಕೈ ಅಥವಾ ಒಂದು ಕಾಲು ತೀರ ಬಲಹೀನವಾಗುವದು. ಅದೇವೇಳೆಗೆ ಶರೀರದ ಯಾವದಾದರೊಂದು ಅವಯವದಲ್ಲಿ ( ನಾಲಿಗೆ, ಮುಖ, ಕಣ್ಣು ಮುಂತಾದವುಗಳಲ್ಲಿಯೂ ) ಅಂಗವೈಕಲ್ಯವು ಬರುವದು. ವೈಕಲ್ಯವುಂಟಾದ ಭಾಗವು ನಿರ್ಜೀವವಾಗುತ್ತದೆ. ಒಮ್ಮೊಮ್ಮೆ ಆಯಾ ಭಾಗದ ಸ್ಪರ್ಶಜ್ಞಾನವೂ ಸಂಪೂರ್ಣವಾಗಿ ಇಲ್ಲದಂತಾಗುತ್ತದೆ. ಯಾವ ಮಗ್ಗಲಿಗೆ ಅಂಗವಧವಾಗಿರುತ್ತದೆಯೋ ಆ ಮಗ್ಗಲಿನ ಜ್ಞಾನೇಂದ್ರಿಯಗಳು ( ಕಿವಿ, ಕಣ್ಣು, ಮೂಗು ಮುಂತಾದವು ) ಕಾರ್ಯಹೀನವಾಗುತ್ತವೆ. ಒಮ್ಮೊಮ್ಮೆ ಮುಖವು ಸೊಟ್ಟಾಗುತ್ತದೆ. ಬಾಯಿಯೊಳಗೆ ಆ ಭಾಗದಿಂದ ಜೊಲ್ಲು ಸೋರುತ್ತದೆ. ಆ ಭಾಗದ ಕಣ್ಣಿನಿಂದ ನೀರು ಸೋರುತ್ತದೆ. ರೆಪ್ಪೆಯು ಮುಚ್ಚಿದ್ದಾಗಲಿ ತೆರೆದದ್ದಾಗಲಿ ಇರುತ್ತದೆ. ಅದರ ಚಲನವಲನವು ನಿಂತು ಹೋಗುತ್ತದೆ. ಆ ಭಾಗದ ತುಟಿಯನ್ನು ಮುಚ್ಚಲಿಕ್ಕೆ ಬರುವದಿಲ್ಲ. ಮಾತನಾಡುವಾಗ ತಟ್ಟಿಸುತ್ತದೆ. ಸ್ಮರಣಶಕ್ತಿಯು ಕಡಿಮೆಯಾಗುತ್ತದೆ. ರೋಗಿಯು ಸಿಟ್ಟಿನವನೂ ನಿರುತ್ಸಾಹಿಯೂ ಆಗುತ್ತಾನೆ. ಇವು ಈ ರೋಗದ ಸ್ಥೂಲ ಲಕ್ಷಣಗಳು.

ಅಂಗವಧದ ಪ್ರಕಾರಗಳು ಎರಡು. ಒಮ್ಮೆಲೆ ಆಗುವದು ಒಂದು, ಮೆಲ್ಲಮೆಲ್ಲನೆ ಆಗುವದು ಮತ್ತೊಂದು. ಮಿದುಳಿನಲ್ಲಿಯ ರಕ್ತವಾಹಿನಿಯು ಒಡೆಯುವದೂ ಅವಘಾತವಾಗುವದೂ ಇವೆರಡು ಒಮ್ಮೆಲೆ ಆಗುವ ಪಕ್ಷಘಾತದ ಕಾರಣಗಳು. ಮಿದುಳು ಮೆತ್ತಗಾಗುವದು, ಮಿದುಳಿನ ಭಾಗದಲ್ಲಿ ಕುರುವಾಗಲಿ ಗ್ರಂಥಿಯಾಗಲಿ ಆಗುವದು, ಮಿದುಳು ಭಾಗದಲ್ಲಿಯ ಧಮನಿಗಳಲ್ಲಿ ರಕ್ತವು ಗಟ್ಟಿಯಾಗುವದು, ಇವು ಮೆಲ್ಲಮೆಲ್ಲಗೆ ವ್ಯಾಪಿಸುವ ಪಕ್ಷಘಾತದ ಕಾರಣಗಳು.

ನಾಡಿಗಳ ಹಾಗು ಸ್ನಾಯುಗಳ ಕಾರ್ಯವು ಸುವ್ಯವಸ್ಥಿತವಾಗಿ ನಡೆಯಲಿಕ್ಕೆ ಅವಶ್ಯವಿರುವ ನಿರಿಂದ್ರಿಯ ಕ್ಷಾರಗಳ ಪ್ರಮಾಣದಲ್ಲಿ ಕೊರತೆಯಾಗುವದೇ ಜೀವನ ರಸಾಯನ ಶಾಸ್ತ್ರದ ದೃಷ್ಟಿಯಿಂದ ಅಂಗವಧದ ಮುಖ್ಯ ಕಾರಣವು. ಇದರ ಎರಡನೆಯ ಕಾರಣವೆಂದರೆ, ಸಂಯೋಜಕ ಧಾತು, ಸ್ನಾಯುತಂತು ಅಥವಾ ನಾಡೀಕಂದ ಇವುಗಳ ನಡುವೆ ಅಲ್ಬ್ಯು

ಮಿನ್ ಅಥವಾ ಫಿಬ್ರಿನ್ ಇವುಗಳಿಂದ ಯುಕ್ತವಾದ ಸೇಂದ್ರಿಯ ಪದಾರ್ಥ ಗಳು ತುಂಬಿಕೊಂಡಿರುವದರಿಂದ ಆ ಸ್ಥಳದಲ್ಲಿ ರಕ್ತಾಭಿಸರಣದ ಕಾರ್ಯವು ಸರಿಯಾಗಿ ಆಗುವದಿಲ್ಲ. ಈ ಸ್ಥಳದಲ್ಲಿ ಅವಶ್ಯವಿದ್ದ ಕ್ಷಾರಗಳನ್ನು ಪೂರಯಿಸುವದು ಶಕ್ಯವಿಲ್ಲದ್ದರಿಂದಲೂ ಅಂಗವಧವಾಗುವದು.

**ಕಾ. ಫಾ:**—ಇದು ಎಲ್ಲ ತರದ ಅಂಗವಧದಲ್ಲಿ ಪ್ರಮುಖ ಔಷಧವು. ಒಮ್ಮೆಲೆ ಆಗುವ ಪಕ್ಷಘಾತವಿರಲಿ ಮೆಲ್ಲಮೆಲ್ಲಗೆ ಆಗುವ ಪಕ್ಷಘಾತವಿರಲಿ. ಸ್ವರಭಂಗ; ಮುಖಪಕ್ಷಘಾತ (ಬಾಯಿ ಸೊಟ್ಟಾಗುವದು); ಬಾಲಪಕ್ಷ ಘಾತ (ಹುಡುಗರಿಗೆ ಆಗುವ ಅರ್ಧಾಂಗ).

**ಮ್ಯಾ. ಫಾ:**— ಕಾಲೀ ಫಾಸವನ್ನೂ ಇದನ್ನೂ ಅದಲುಬದಲು ಮಾಡಿ ಕೊಡಬೇಕು; ಸಳಕು ಇದ್ದರೆ ಕೊಡಬೇಕು. ಕೈಯೂ ತಲೆಯೂ ತಮ್ಮಷ್ಟಕ್ಕೆ ತಾವೇ ನಡುಗುತ್ತವೆ. ಸ್ನಾಯುಗಳ ಸಿಥಿಲತೆ. ಕಂಪವಾಯು. ರೋಗಿಯು ಸುಂದನೂ ದಣಿದವನೂ ಇರುತ್ತಾನೆ. ಕೆಳಗೆ ಕೂಡಲಿಕ್ಕೆ ಕಷ್ಟವಾಗುತ್ತದೆ. ತಣ್ಣೀರಿನಲ್ಲಿ ಬಹಳ ಹೊತ್ತು ನಿಂತದ್ದರಿಂದ ಬರುವ ಅರ್ಧಾಂಗವು.

**ಕಲ್ಕೆ. ಫಾ:**— ಕಾಲು ನಿಂತುನಿಂತು ತಣ್ಣಗಾಗುವದು, ಬಧಿರ ವಾಗುವದು, ಹಾಗು ಜುಮ್ಮುಹಿಡಿಯುವದು. ಬೇರೆ ಔಷಧಗಳನ್ನು ಕೊಡುತ್ತಿರುವಾಗ ನಡುನಡುವೆ ಇದನ್ನೂ ಕೊಡಬೇಕು. ಮೆಲ್ಲಮೆಲ್ಲಗೆ ಬರುವ ಅಂಗವಧ. ಮಾನಸಿಕ ಅಶಕ್ತತೆ. ಬೆನ್ನಿನಲ್ಲಿ ಜಜ್ಜಿದಂತೆ ನೋಯು ವದು. ಪ್ರೇಮಭಂಗದಿಂದ ನಿರಾಶನಾಗಿ ಆತ್ಮಹತ್ಯೆಯನ್ನು ಮಾಡಿ ಕೊಳ್ಳಬೇಕೆಂದು ವಿಷ ತಕ್ಕೊಂಡರೂ ಸಾವು ಬರದೆ ಕೈಕಾಲುಗಳು ಮಾತ್ರ ಬಲಹೀನವಾಗಿದ್ದ ಒಬ್ಬ ರೋಗಿಯು ಕಲ್ಕೆ. ಫಾಸದಿಂದ ನೆಟ್ಟಗಾದನು.

**ಫೇ. ಫಾ:** – ದಾಹಜನ್ಯ ಅಂಗವಧವಿದ್ದರೆ ಇದನ್ನೂ ಬೇರೆ ಔಷಧ ಗಳನ್ನೂ ಅದಲುಬದಲು ಮಾಡಿ ಕೊಡಬೇಕು.

**ಸಿ:**— ಸಂದುಗಳು ಬಲಹೀನವಾಗುವದರಿಂದ ಬರುವ ಅಶಕ್ತತೆಯಲ್ಲಿ ಇದರ ಉಪಯೋಗವಾಗುವದು.

**ಉಪಯುಕ್ತ ಸೂಚನೆ:—** ಒಮ್ಮೆಲೆ ಆಗುವ ಅಂಗವಧವಿದ್ದರೆ ತಜ್ಞರಾದ ವೈದ್ಯರನ್ನು ಕರೆಕಳಿಸಿ ಅವರ ಹೇಳಿಕೆಯ ಮೇರೆಗೆ ಔಷಧ ಕೊಡಬೇಕು. ಈ ರೋಗವು ಬಹಳ ಅಪಾಯಕಾರಕವಿರುವದರಿಂದ ಕಾಲಕ್ಕೆ ಸರಿಯಾಗಿ ವೈದ್ಯ ಜನರ ಸಹಾಯವನ್ನು ಪಡೆಯದಿದ್ದರೆ ಆದರಿಂದ ದುಷ್ಪರಿಣಾಮವಾಗುವ ಸಂಭವವಿದೆ. ಬೇರೆ ಯಾವ ಔಷಧಗಳಿಗಿಂತಲೂ ಮೇಲೆ ಹೇಳಿದ ಔಷಧಗಳೇ ಎಲ್ಲ ಪ್ರಕಾರದ ಅಂಗವಧದಲ್ಲಿ ಬಹಳ ಉಪಯುಕ್ತವಾಗಿರುವವು. ಔಷಧಗಳನ್ನು ಬಹು ದಿವಸಗಳ ವರೆಗೆ ಕೊಡಬೇಕು. ಉತ್ತೇಜಕ ಹಾಗು ಅಜೀರ್ಣವಾಗುವಂಥ ಪದಾರ್ಥಗಳನ್ನು ತಿನ್ನಬಾರದು.

"ಹಸ್ತಕಂಪ" ವೆಂಬ ಸದರು ನೋಡಿರಿ.

---

# ಅಂಗುಲಿವಾತ

**Gout** ಗಾವುಟ

ಅಂಗುಲಿವಾತವು ಒಂದು ತರದ ಸಂಧಿವಾತವು. ಇದು ಚಿಕ್ಕ ಮಕ್ಕಳಿಗೆ ಆಗುವದಿಲ್ಲ. ಮೂವತ್ತು ವರ್ಷ ಮೀರಿದವರಿಗೆ, ವಿಶೇಷವಾಗಿ ಗಂಡಸರಿಗೆ, ಆಗುತ್ತದೆ. ವ್ಯಾಯಾಮವನ್ನು ಕಡಿಮೆ ಮಾಡುವಂಥ ಹಾಗು ಮಿಷ್ಟಾನ್ನವನ್ನು ಉಣ್ಣುವಂಥ ಶ್ರೀಮಂತ ಜನರಿಗೆ ಆಗುವ ರೋಗವಿದು. ಇದು ಬಡ ಜನರಿಗೆ ಸಹಸಾ ಆಗುವದಿಲ್ಲ. ಸಂಧಿವಾತವು ಬಡಜನರ ರೋಗವು. ಅಂಗುಲಿವಾತದಲ್ಲಿ ಸಣ್ಣ ಸಂದುಗಳು ಬಿಗಿದು ಹಿಡಿಯುತ್ತವೆ. ಮೊದಲು ಅಪಚನ, ಹೃದಯದಲ್ಲಿ ಉರಿಯುವದು, ವಾಯು ಸರಿಯುವದು, ಉಂಡಬಳಿಕ ದಣಿವು, ಹೊಟ್ಟೆಯು ತುಂಬಿದಂತೆ ಭಾರವೆನಿಸುವದು, ಬಾಯಿ ನಾರುವದು, ಮುಂಜಾನೆ ಬಹಳ ಉಗುಳು ಬರುವದು, ಮೂತ್ರವು ಕಡಿಮೆಯೂ ಕೆಂಪು ಬಣ್ಣದ್ದೂ ಆಗುವದು, ನಾಡಿಯ ಹಾರಿಕೆಯಲ್ಲಿ ಅನಿಯಮಿತತನವೆನಿಸುವದು, ರಾತ್ರಿಯಲ್ಲಿ ಅಸ್ವಸ್ಥತೆ, ಸ್ವಲ್ಪ ಹೆಚ್ಚು ಗಾಳಿ ತಾಕಿದರೆ ಚಳಿಯಾಗುವದು, ಈ ಭಾವನೆಗಳು ಮೊದಲು ಕಾಣಿಸುತ್ತವೆ. ಮಧ್ಯರಾತ್ರಿಯ ಸುಮಾರಕ್ಕೆ ಸಣ್ಣ ಸಂದುಗಳಲ್ಲಿ ನೋಯಹತ್ತು

ತ್ತದೆ. ಮುಖ್ಯವಾಗಿ ಕಾಲಿನ ಹೆಬ್ಬೆಟ್ಟು ಬಿಗಿದು ಹಿಡಿಯುತ್ತದೆ. ಸೋಯು ತ್ತಿದ್ದ ಸಂದುಗಳಲ್ಲಿ ಕೆಂಪಾಗಿ ಮಿಂಚುವ ಬಾವು ಬರುತ್ತದೆ. ಒತ್ತಿದರೆ ತಗ್ಗುಬೀಳುತ್ತದೆ. ಕೀವು ಎಂದಿಗೂ ಆಗುವದಿಲ್ಲ. ಬೇರೆ ಸಂದುಗಳೂ ಬಿಗಿಯುತ್ತವೆ. ಆದರೆ ಸಂಧಿವಾತದಂತೆ ನೋವೂ ಬಾವೂ ಒಂದು ಸಂದಿ ನಿಂದ ಮತ್ತೊಂದು ಸಂದಿಗೆ ಹೋಗುವದಿಲ್ಲ. ಜ್ವರವು ಒಮ್ಮೊಮ್ಮೆ ೧೦೨ ಅಂಶದ ವರೆಗೆ ಇರುತ್ತದೆ. ಈ ರೋಗವು ಎರಡು ಮೂರು ದಿನ ಗಳಿಂದ ಎರಡು ಮೂರು ವಾರಗಳ ವರೆಗೆ ಉಳಿಯುತ್ತದೆ. ಮೊದಮೊದಲು ಈ ರೋಗದ ಉಪದ್ರವವು ಎರಡು ಮೂರು ವರ್ಷಕ್ಕೊಮ್ಮೆ ಆಗುವದು. ಆದರೆ ಬರಬರುತ್ತ ರೋಗದ ಉಪದ್ರವವು ಮೇಲಿಂದಮೇಲೆ ಆಗತೊಡಗಿ ಕೊನೆಗೆ ಇದಕ್ಕೆ ಜೀರ್ಣ ಅಂಗುಲಿವಾತದ ಸ್ವರೂಪವು ಪ್ರಾಪ್ತ ವಾಗುವದು.

ಬಹು ದಿವಸದ ಅಂಗುಲಿವಾತದಲ್ಲಿ ಸಂದು ಸೆಟೆಯುತ್ತದೆ. ಅಲ್ಲಾಡಿ ದರೆ ವೇದನೆಯು ಹೆಚ್ಚಾಗುವದು. ಸ್ಪರ್ಶವು ಸ್ವಲ್ಪ ಕೂಡ ತಾಳುವದಿಲ್ಲ. ಸಂದು ಕೆಂಪಾಗುವದು. ಅಪಚನವಾಗುವದು. ಸ್ವಭಾವವು ಸಿಟ್ಟಿನ ದಾಗುವದು. ಇವೇ ಮುಂತಾದ ಲಕ್ಷಣಗಳಿರುವವು. ಸಶಕ್ತ, ಸ್ಥೂಲ, ವಾತುಲ ಪ್ರಕೃತಿಯ ಜನರಿಗೆ ಇದರಿಂದ ಬಹಳ ತ್ರಾಸವಾಗುವದು.

**ಫೇ. ಫಾ:**— ದಾಹದ ಆರಂಭಾವಸ್ಥೆಯಲ್ಲಿಯು ಭಾವನೆಗೆಳಿದ್ದರೆ; ಅಲ್ಲಾಡುವದರಿಂದ ನೋವು ಹೆಚ್ಚಾಗುತ್ತಿದ್ದರೆ; ಹಾಗು ಜ್ವರವು ಬರುತ್ತಿದ್ದರೆ ಈ ಔಷಧವನ್ನು ಬೇರೆ ಔಷಧಗಳ ಸಂಗಡ ನಡುನಡುವೆ ಕೊಡಬೇಕು. ಮೇಲಿನಿಂದಲೂ ಲೇಪ ಮಾಡಬೇಕು.

**ನೇ. ಫಾ:**— ಶೀಘ್ರ ಅಥವಾ ದೀರ್ಘ ಅಂಗುಲಿವಾತದಲ್ಲಿ ಹುಳಿ ವಾಸನೆಯುಳ್ಳ ಬೆವರು ಬಹಳ ಬರುವದು. ನಾಲಿಗೆಯು ಬಂಗಾರದಂತೆ ಹಳದಿಯಾಗುವದು.

**ನೇ. ಸ:**— ಶೀಘ್ರ ಅಂಗುಲಿವಾತದಲ್ಲಿ ಇದನ್ನು ಫೇರಂಫಾಸದ ಸಂಗಡ ಕೊಡಬೇಕು. ಮಿಷ್ಟಾನ್ನವನ್ನು ಉಣ್ಣುವಂಥ ಶ್ರೀಮಂತ ಜನರ ಕಾಲಿನ ಬೆರಳುಗಳಿಗೆ ಆಗುವ ಶೀಘ್ರ ಅಥವಾ ದೀರ್ಘ ಅಂಗುಲಿವಾತಕ್ಕೆ

ಇದು ಮುಖ್ಯ ಔಷಧವು. ದೀರ್ಘಾಂಗುಲಿವಾತಕ್ಕೆ ಇದೊಂದೇ ಔಷಧವು ಸಾಕು. ನೇಟ್ರಂಸಲ್ಫದ ನಾಲಿಗೆಯ ಬಣ್ಣವನ್ನೂ ಹಾಗು ಬೇರೆ ಪೈತ್ತಿಕ ಭಾವನೆಗಳನ್ನೂ ನೆನಪಿನಲ್ಲಿಡಬೇಕು.

**ಕಲ್ಕೆ. ಫಾ**;— ತಣ್ಣನ್ನ ಕೆಟ್ಟ ಹವೆಯಲ್ಲಿ ಮತ್ತು ರಾತ್ರಿಯಲ್ಲಿ ನೋವು ಹೆಚ್ಚಾಗುವದು.

**ಕಲ್ಕೆ ಫ್ಲೋ**:— ಅಂಗುಲಿವಾತದ ಮೂಲಕ ಬೊಟ್ಟುಗಳ ವಿಸ್ತಾರವಾಗಿದ್ದರೆ.

" ಸಂಧಿವಾತ " ವೆಂಬ ಸದರು ನೋಡಿರಿ.

---

## ಅಂಡಾಶಯದಾಹ

" ವೃಷಣದಾಹ "ವೆಂಬ ಸದರು ನೋಡಿರಿ.

---

## ಅರ್ಧಾಂಗವಾಯು

" ಅಂಗವಧ"ವೆಂಬ ಸದರು ನೋಡಿರಿ.

---

## ಅಸ್ಥಿಗತ–ರೋಗ

**Diseases of Bones.** **ಡಿಸೀಜಿಸ್ ಆಫ ಬೋನ್ಸ.**

ಅಸ್ಥಿಗಳ ರೋಗಗಳು ಬಹಳವಿರುತ್ತವೆ. ಅವುಗಳ ಚಿಕಿತ್ಸೆಯು ಒಳ್ಳೆಯ ಜಾಣರಾದ ವೈದ್ಯರ ಹೊರತು ಬೇರೆ ಜನರಿಗೆ ಸಾಧಿಸಲಾರದು. ಅಸ್ಥಿರೋಗಗಳ ಚಿಕಿತ್ಸೆಯನ್ನು ಸ್ಥೂಲಮಾನದಿಂದ ಒತ್ತಟ್ಟಿಗೆ ಸ್ವಲ್ಪದರಲ್ಲಿ ಕೆಳಗೆ ಹೇಳುತ್ತೇವೆ.

ಅಸ್ಥಿಗಳು ಬೆಳೆಯುವದಿಲ್ಲ; ಅಸ್ಥಿಯು ಮೆತ್ತಗಿರುವದು. (ವಿಶೇಷವಾಗಿ ಚಿಕ್ಕ ಮಕ್ಕಳ ಅಸ್ಥಿ ); ಅದು ನೋಯುವದು; ಕೊಳೆಯುವದು; ಕಳಚಿ ಬೀಳುವದು; ಅದರಲ್ಲಿ ವ್ರಣವಾಗುವದು; ಕೀವು ಸೋರುವದು; ಅಸ್ಥಿಯು ಸವೆಯುವದು; ಬಾಯುವದು; ಅದರ ಮೇಲೆ ಗಂಟಾಗುವದು;

ಅಸ್ಥಿಯು ಡೊಂಕಾಗುವದು ( ಬಂಗಡಿಗಾಲು ಆಗುವದು, ಬೆನ್ನಿಗೆ ಡೂಗು ಬರುವದು ); ಅಸ್ಥಿಭಂಗವಾಗುವದು ( ಎಲುವು ಮುರಿಯುವದು ); ಇವು ಅಸ್ಥಿರೋಗಗಳು.

ಚಿಕ್ಕ ಮಕ್ಕಳಿಗೆ ಪೌಷ್ಟಿಕ ಹಾಗು ಸಾಕಷ್ಟು ಅನ್ನವು ಸಿಗದಿರುವದು ಅಸ್ಥಿಯ ದಾಹ, ಪ್ರಮೇಹ, ಉಪದಂಶ, ಸಂಧಿವಾತ, ಕ್ಷಯ, ಅಪಘಾತ, ಇವು ಅಸ್ಥಿರೋಗದ ಸ್ಥೂಲ ಕಾರಣಗಳು.

ಜೀವನ ರಸಾಯನ ಶಾಸ್ತ್ರದ ದೃಷ್ಟಿಯಿಂದ ನೋಡಲಾಗಿ, ಅಪಘಾತ ದಿಂದಾಗುವ ಅಸ್ಥಿರೋಗದ ಹೊರತಾಗಿ ಬೇರೆ ಯಾವತ್ತು ಅಸ್ಥಿರೋಗ ಗಳಿಗೆ ಅವುಗಳಲ್ಲಿ ಕಲ್ಕೆ. ಫಾಸ ಕ್ಷಾರವು ಕಡಿಮೆಯಾಗುವದೇ ಮೂಲ ಕಾರಣವು. ಅಸ್ಥಿಗಳು ಸಿದ್ಧವಾಗುವ ಕಾಲಕ್ಕೆ ಅಲ್ಬ್ಯುಮಿನ್ ಎಂಬ ಪದಾರ್ಥವು ಸಿಮೆಂಟಿನಂತೆ ಉಪಯೋಗಿಸಲ್ಪಡುತ್ತದೆ. ಅಲ್ಬ್ಯುಮಿನ್ ಪದಾರ್ಥವು ಶರೀರದಲ್ಲಿ ಸಾಕಷ್ಟು ಇದ್ದರೂ ಕೂಡ ಕೇವಲ ಕಲ್ಕೆ. ಫಾಸದ ಕಣಗಳು ಕಡಿಮೆಯಾಗುವದರಿಂದ ಅಸ್ಥಿಗಳು ಕೊಳೆಯುಹತ್ತುತ್ತವೆ. ಆದುದರಿಂದ ಕಲ್ಕೆ. ಫಾಸ ಔಷಧವನ್ನು ಸಾಕಷ್ಟು ಪ್ರಮಾಣದಲ್ಲಿ ಕೊಟ್ಟು, ಉಂಟಾಗಿದ್ದ ಕೊರತೆಯನ್ನು ಹೋಗಲಾಡಿಸುವದೇ ಅಸ್ಥಿಗತ ರೋಗವನ್ನು ನೆಟ್ಟಗೆ ಮಾಡುವ ಶಾಸ್ತ್ರಸಮ್ಮತವಾದ ಮಾರ್ಗವು.

**ಕಲ್ಕೆ ಫಾ:**— ಅಸ್ಥಿಗತ ರೋಗಗಳ ಮೇಲೆ ಕಲ್ಕೆ. ಫಾಸವು ರಾಮಬಾಣ ಔಷಧವು. ಅಸ್ಥಿಗಳ ರಚನೆಯಲ್ಲಿ ಕಲ್ಕೆ, ಫಾಸವು ( ಅಂದರೆ ಸುಣ್ಣವು ) ಬಹಳವಿರುತ್ತದೆಂಬದು ಎಲ್ಲರಿಗೂ ಗೊತ್ತಿದ್ದ ಮಾತಾಗಿದೆ. ಎಲುವು ಮೆತ್ತಗೆ ಮತ್ತು ಅಶಕ್ತವಾಗಿದ್ದರೆ ಕಲ್ಕೆ. ಫಾಸವನ್ನು ಬಹಳ ದಿವಸಗಳ ವರೆಗೆ ಕೊಡಬೇಕು. ಅದರಿಂದ ಅವು ಬಿರುಸಾಗಿಯೂ ಕಸು ವುಳ್ಳವೂ ಆಗುತ್ತವೆ. ಮುರಿದಿದ್ದ ಎಲುವು ಮೊದಲಿನಂತೆ ಕೂಡಿಕೊಳ್ಳ ಲಿಕ್ಕೆ ಕಲ್ಕೆ. ಫಾಸದಿಂದ ಬಹಳ ಸಹಾಯವಾಗುತ್ತದೆ. ಮುಟ್ಟುದೋಷ, ಹುಡುಗರ ಬಂಗಡಿಗಾಲು, ಡೂಗು ಬೆಳೆಯುವದು ಮುಂತಾದ ರೋಗಗ ಳಲ್ಲಿ ಅದರ ಉಪಯೋಗ ಮಾಡಬೇಕು. ಮಕ್ಕಳಿಗೆ ಬೇಗನೆ ನಡೆಯಲಿಕ್ಕೆ ಬರುವದಿಲ್ಲ, ಗೋಣು ನಿಲ್ಲುವದಿಲ್ಲ, ನೆತ್ತಿಯು ತುಂಬಿರುವದಿಲ್ಲ, ಹಲ್ಲುಗಳು ಬೇಗನೆ ಬರುವದಿಲ್ಲ, ಇವೆಲ್ಲ ಅಸ್ಥಿದೋಷದ ಲಕ್ಷಣಗಳು; ಈ ಔಷಧದಿಂದ

ನೆಟ್ಟಗಾಗುತ್ತವೆ. ಇದರ ಸಂಗಡ ಕಾಲೀಫಾಸವನ್ನು ಬಹಳ ದಿವಸಗಳ ವರೆಗೆ ಕೊಡಬೇಕು. ಯಾವದೇ ಅಸ್ಥಿಗತ ರೋಗವಿದ್ದರೂ ಈ ಔಷಧ ವನ್ನು ನಡುನಡುವೆ ಕೊಡುತ್ತಿರಬೇಕು. ಎಲುವಿನ ವ್ರಣಕ್ಕೂ, ವ್ರಣದ ತುದಿಗಳು ಬಿರುಸಾಗಿದ್ದು ಒಳಗಿನಿಂದ ಹೊಲಸು ಕೀವು ಸೋರುತ್ತಿದ್ದರೂ ಇದನ್ನು ಕೊಡಬೇಕು.

**ಸಿ:**— ಅಸ್ಥಿಗಳ ಅನೇಕ ರೋಗಗಳಲ್ಲಿ ಈ ಔಷಧದ ಉಪಯೋಗ ವಾಗುತ್ತದೆ. ದಟ್ಟಾದ, ಹಳದಿ, ಹೊಲಸು ಕೀವು ಸೋರುವದೇ ಇದರ ಪ್ರಮುಖ ಲಕ್ಷಣವು. ಅಸ್ಥಿವ್ರಣ, ಜಘನಾಸ್ಥಿಸಂಧಿಗೆ ( Hip joint ) ಸಂಬಂಧಪಟ್ಟ ರೋಗಗಳಿಗೆ ಇದರಿಂದ ವಿಶೇಷ ಉಪಯೋಗವಾಗುವದು. ಸ್ರಾವವು ಬಹಳ ಹೊಲಸು ಇರುತ್ತವೆ. ಎಲುವು ಕೊಳೆಯುವದು, ಹಾಗು ಕಳಚಿ ಬೀಳುವದು.

**ಕ್ಯಾ. ಸ:**— ರಕ್ತದಿಂದ ಕೂಡಿದ ಸ್ರಾವವಿದ್ದರೆ; ಸ್ರಾವವಾಗುವ ಕ್ರಿಯೆಯನ್ನು ನಿಲ್ಲಿಸುತ್ತದೆ; ಅಸ್ಥಿವ್ರಣ; ತಲೆಯ ಬುರುಡೆಯು ಸಣ್ಣ ದಾಗುವದು.

**ಕಲ್ಕೆ. ಫ್ಲೋ:**— ಸ್ರಾವವು ಎಲುವಿನೊಳಗಿಂದ ಸೋರುತ್ತಿರುವದು. ಎಲುವುಗಳ ಮೇಲೆ ಬಿರುಸು ಹಾಗು ಹುರಬರಕ ಬೊಕ್ಕೆಗಳು ಏಳುತ್ತವೆ. ಎಲುವಿಗೆ ಪೆಟ್ಟು ಹತ್ತಿ ಗಟ್ಟಿಯಾದ ಗಂಟುಗಳು ಏಳುತ್ತವೆ. ನಾಸಿಕ ಅಸ್ಥಿಯ ( ಮೂಗಿನ ಎಲುವಿನ ) ರೋಗದಲ್ಲಿ ಮೂಗು ಬಹಳ ಹೊಲಸು ನಾರುತ್ತದೆ. ಇದೇ ಈಗ ಹುಟ್ಟಿದ ಕೂಸುಗಳ ತಲೆಯಮೇಲೆ ರಕ್ತಗುಲ್ಮ ವಿರುತ್ತದೆ. ಅಸ್ಥಿವ್ರಣದಮೇಲೆ ಈ ಔಷಧವನ್ನು ನಡುನಡುವೆ ಕೊಡಬೇಕು. ಪಾರಜವನ್ನು ತೆಗೆದುಕೊಂಡದ್ದರಿಂದಲೂ ಉಪದಂಶದಿಂದಲೂ ಎಲುವು ಕೆಟ್ಟಿದ್ದರೆ ಇದನ್ನು ಕೊಡಬೇಕು.

**ಕಾ ಫಾ:**— ಎಲುವು ಸವೆದು ಸಣ್ಣಾಗುತ್ತಿದ್ದರೆ; ಹೊಲಸು ಅತಿಸಾರದ ಉಪದ್ರವವಿದ್ದರೆ ವಿಶೇಷ ಉಪಯೋಗವಾಗುವದು.

**ಫೇ ಫಾ:**— ಯಾವದೇ ಅಸ್ಥಿರೋಗದ ಪ್ರಥಮಾವಸ್ಥೆಯಲ್ಲಿ, ದಾಹಾವಸ್ಥೆಯಲ್ಲಿ, ವಿಶೇಷವಾಗಿ ಎಲುವಿನ ಮೃದುಭಾಗವೂ ಅಸ್ಥಿ

ಕವಚವೂ ಕೆಟ್ಟಿದ್ದರೆ, ಅಸ್ಥಿಯಿಂದ ಸೋರುವ ಸ್ರಾವದ ಲಕ್ಷಣಗಳ ಮೇಲೆ ಯೋಜಿಸಿದ ಔಷಧವನ್ನೂ ಇದನ್ನೂ ಅದಲುಬದಲು ಮಾಡಿ ಕೊಡಬೇಕು.

**ನೇ. ಸ:—** ಎಲುವಿನಲ್ಲಿ ಸೋವು; ಸಂದುಗಳಲ್ಲಿ ಕರಕರ ಸಪ್ಪಳ; ಮೊಳಕಾಲು ಸೆಟೆಯುವದು.

**ಉಪಯುಕ್ತ ಸೂಚನೆ:—** ಅಸ್ಥಿಯ ರೋಗಗಳು ನೆಟ್ಟಗಾಗಲಿಕ್ಕೆ ಔಷಧವನ್ನು ಎಷ್ಟೋ ದಿವಸ—ಎಷ್ಟೋ ತಿಂಗಳ ವರೆಗೆ—ಕೊಡಬೇಕಾಗುವದು. ರೋಗಿಯ ಶಕ್ತಿಯನ್ನು ಉಳಿಸಲಿಕ್ಕೆ ಪೌಷ್ಟಿಕ ಹಾಗು ಪಚನಕ್ಕೆ ಸುಲಭವಾಗುವಂಥ ಹಗುರು ಅನ್ನವನ್ನು ಸಾಕಷ್ಟು ಕೊಡಬೇಕು. ಭಾವನೆಗಳಿಗೆ ಅನುಸಾರವಾಗಿ ಹೊಟ್ಟೆಯೊಳಗೆ ಕೊಡುತ್ತಿರುವ ಔಷಧವನ್ನು ಹೊರಗಿನಿಂದಲೂ ಲೇಪ ಮಾಡಬಹುದು. ಮಲಮುವನ್ನೂ ಧಾವನಜಲವನ್ನೂ ಸಿದ್ಧಪಡಿಸಿ ಅದನ್ನೂ ಉಪಯೋಗಿಸಬೇಕು.

---

## ಅಸ್ಥಿಮಾರ್ದವತೆ

Rickets. ರಿಕೆಟ್ಸ.

ಅಸ್ಥಿಮಾರ್ದವತೆಯೆಂಬ ರೋಗವು ಕೂಸುಗಳಿಗೆ ಆರು ತಿಂಗಳದಿಂದ ಎರಡು ವರ್ಷಗಳ ವರೆಗೆ ಆಗುತ್ತದೆ. ಆರು ತಿಂಗಳ ಮುಂಚೆಯಾಗಲಿ ಎರಡು ವರ್ಷಗಳ ನಂತರವಾಗಲಿ ಅದು ಬಹುತರವಾಗಿ ಆಗುವದಿಲ್ಲ. ಕಲ್ಕೆ. ಫಾಸದ (ಸುಣ್ಣದ) ಪ್ರಮಾಣವು ಶರೀರದಲ್ಲಿ ಸಾಕಷ್ಟು ಇರದ್ದರಿಂದ ಕೂಸುಗಳ ಎಲುವುಗಳು ಸರಿಯಾಗಿ ಬೆಳೆಯುವದಿಲ್ಲ. ಅವು ಸೊತ್ತಗಿರುವವು ಹಾಗು ಡೊಂಕಾಗುವವು. ನೆತ್ತಿಯು ತುಂಬಿ ಬರುವದಿಲ್ಲ. ಬೆನ್ನು ಹುರಿಯು ಮಣಿಯುತ್ತದೆ. ಸಂದುಗಳು ಬಾಯುತ್ತವೆ. ಕೈಕಾಲುಗಳು ಸಣ್ಣಾಗುತ್ತವೆ. ರೋಗವು ಬೆಳೆಯುತ್ತ ಹೋದ ಹಾಗೆ ತಲೆಯು ದೊಡ್ಡದಾಗುತ್ತದೆ. ಎದೆಯ ಎಲುವುಗಳು ಮುಂದೆ ಹಾಯುತ್ತವೆ. ಹೊಟ್ಟೆಯು ದೊಡ್ಡದಾಗುತ್ತದೆ ಹಾಗು ಬಿರುಸು ಹತ್ತುತ್ತದೆ. ಒಳಗೆ ಗಾಳಿಯು ತುಂಬಿಕೊಂಡಿರುವದರಿಂದ ಅದು ನಗಾರಿಯಂತೆ ಬಾರಿಸುತ್ತದೆ. ಯಕೃತವೂ ಪ್ಲೀಹೆಯೂ ಬೆಳೆದಿರುತ್ತವೆ. ಸ್ನಾಯುಗಳು ಮತ್ತಗೆ ಹಾಗು

ಶಿಥಿಲವಾಗುತ್ತವೆ. ತ್ವಚೆಯು ರುಕ್ಷ ಮತ್ತು ಹುರಬರಕ ಆಗುತ್ತದೆ. ತಿಗದ ಹತ್ತರದ ತೊಗಲಿಗೆ ಗೆರೆ ಬೀಳುತ್ತವೆ. ಹಸಿವೆಯು ಒಮ್ಮೊಮ್ಮೆ ಬಹಳಾಗುತ್ತದೆ; ಒಮ್ಮೊಮ್ಮೆ ಆಗುವದೇ ಇಲ್ಲ. ಒಮ್ಮೆ ಹೊಟ್ಟೆ ಜಾಡಿಸುವದು; ಮತ್ತೊಮ್ಮೆ ಅವರೋಧವಾಗುವದು. ಕೆಮ್ಮು ಇರುವದು. ತಲೆಗೆ ಬೆವರು ಬಿಡುವದು. ಕೂಸು ತ್ರಾಸಿಕ ಸ್ವಭಾವದ್ದಾಗುವದು. ಹಲ್ಲುಗಳು ಬೇಗನೆ ಬರುವದಿಲ್ಲ. ಅಶಕ್ತತೆಯ ಮೂಲಕ ಬೇಗನೆ ನಡೆಯಲಿಕ್ಕೆ ಬರುವದಿಲ್ಲ. ಮುಂತಾದ ಭಾವನೆಗಳಿರುತ್ತವೆ.

ಹವೆಯಲ್ಲಿ ಒಮ್ಮಿಂದೊಮ್ಮೆ ಆಗುವ ಬದಲಾವಣೆಯಿಂದಾಗಲೀ ಕುಪಥ್ಯದಿಂದಾಗಲೀ ನ್ಯುಮೋನಿಯಾ ಅಥವಾ ಮಸ್ತಿಷ್ಕದಾಹವುಂಟಾಗಿ ಕೂಸು ಸಾವಿಗೆ ತುತ್ತಾಗುವದು.

ಸಾಕಷ್ಟು ಪೌಷ್ಟಿಕ ಅನ್ನವು ತಿನ್ನಲಿಕ್ಕೆ ದೊರೆಯದಿರುವದೇ ಈ ರೋಗದ ಮುಖ್ಯ ಕಾರಣವು. ಈ ರೋಗವು ಬಹುತರವಾಗಿ ಮೇಲಿಂದ ಮೇಲೆ ಬಸಿರಾಗುವ ಹೆಂಗಸರ ಕೂಸುಗಳಿಗೆ ಆಗುತ್ತದೆ.

**ಕಲ್ಕೆ. ಫಾ:**— ಶರೀರದಲ್ಲಿ ಅಸ್ಥಿಗಳಲ್ಲಿಯ ಸುಣ್ಣದ ಪ್ರಮಾಣವು ಕಡಿಮೆಯಾದುದರಿಂದ ಉಂಟಾಗುವ ರೋಗಗಳಿಗೆ ಇದು ಪ್ರಮುಖ ಔಷಧವು. ಮೇಲೆ ಹೇಳಿದ ಅಸ್ಥಿಮಾರ್ದವತೆಯ ಎಲ್ಲ ಭಾವನೆಗಳು ಕಲ್ಕೆ. ಫಾಸವನ್ನು ಕೊಟ್ಟರೆ ಸಂಪೂರ್ಣವಾಗಿ ನಾಶವಾಗುತ್ತವೆ. ಕಲ್ಕೆ. ಫಾಸವು ಮುಖ್ಯವಾಗಿ ಕೂಸುಗಳ ಔಷಧವು. ಕೂಸುಗಳ ಯಾವದೇ ರೋಗದಲ್ಲಿಯೂ ಇದನ್ನು ಕೊಟ್ಟರೆ ವಿಶೇಷ ತಪ್ಪಾಗಲಾರದು. ನೆತ್ತಿಯು ತುಂಬದಿರುವದು, ಅತಿಸಾರ, ದಿನದಿನಕ್ಕೆ ಸವೆಯುತ್ತ ಹೋಗುವದು, ಇವು ಈ ರೋಗದಲ್ಲಿಯ ಈ ಔಷಧದ ಪ್ರಮುಖ ಲಕ್ಷಣಗಳು.

**ನೇ. ಫಾ:**— ತಿಂದ ಅನ್ನವು ಪಚನವಾಗುವದಿಲ್ಲ. ಪಿತ್ತಯುಕ್ತ ಭಾವನೆಗಳು. ಪೌಷ್ಟಿಕ ಅನ್ನವು ಸಿಗದ್ದರಿಂದ ಹುಡುಗರಿಗೆ ಆಗುವ ರೋಗಗಳಲ್ಲಿ ಇದರ ಉಪಯೋಗವು ವಿಶೇಷವಾಗಿ ಆಗುವದು. ಬಹಳ ಸಾರೆ ಬೆಳ್ಳಗೆ ಜಾಡಿಸುವದು. ಸರತಿಗೆ ೧೦ ಗ್ರೇನಿನಂತೆ ದಿನಾಲು ನಾಲ್ಕು ಸಾರೆ ಕೊಡಬೇಕು. ಕಲ್ಕೆ. ಫಾಸದ ಸಂಗಡ ಇದನ್ನು ಕೊಡಬೇಕು.

**ಸಿ:**— ತಲೆಗೆ ಬಹಳ ಬೆವರು ಬಿಡುತ್ತಿದ್ದರೆ ಅಥವಾ ಹೊಲಸು ಜುಲಾಬು ಆಗುತ್ತಿದ್ದರೆ ಈ ಔಷಧವನ್ನು ಕಲ್ಕೆ. ಫಾಸದ ಸಂಗಡ ಅದಲು ಬದಲು ಮಾಡಿ ಇಲ್ಲವೆ ನಡುನಡುವೆ ಕೊಡಬೇಕು. ನೆತ್ತಿಯು ತುಂಬುವದಿಲ್ಲ. ತಲೆಯು ದೊಡ್ಡದು; ಆದರೆ ಬೇರೆ ಅವಯವಗಳು ಸೊರಗಿಸವೆಯುತ್ತವೆ. ಮುಖವು ಕಳೆಗುಂದಿದ್ದು. ಹೊಟ್ಟೆಯು ಉಬ್ಬಿ ಬಿಸಿ ಹತ್ತುತ್ತದೆ. ಬೆಚ್ಚನ್ನ ಬಟ್ಟೆಯಿಂದ ಸುಖವಾಗುತ್ತದೆ. ಗ್ರಂಥಿಗಳಲ್ಲಿಯೂ ಅಸ್ಥಿಗಳಲ್ಲಿಯೂ ಬಾವು, ಉರಿವು, ಮುಂತಾದ ಲಕ್ಷಣಗಳು.

**ಕಾ. ಫಾ:**— ಮಿತಿಮೀರಿ ಅಶಕ್ತತನವು ಬಂದಿದ್ದರೆ: ಬಡಕತನ; ಹೊಲಸು ಅತಿಸಾರ ಮುಂತಾದವುಗಳಿಗೆ.

**ನೇ. ಮೂ:**— ಬೇಸೆಯ ಆರಂಭಕ್ಕೆ, ವಿಶೇಷವಾಗಿ ತೊಡೆಗಳು ಬಹಳ ಸೊರಗಿದ್ದರೆ; ಎಲುವುಗಳು ಮೆತ್ತಗೂ ಮಣಿಯುವಂಥವೂ ಇದ್ದರೆ ಇದನ್ನು ಕೊಡಬೇಕು.

**ಉಪಯುಕ್ತ ಸೂಚನೆ:**— ಕಲ್ಕೆ. ಫಾಸವು ಈ ರೋಗದ ಮೇಲಿನ ಪ್ರಮುಖ ಔಷಧವು. ಅದನ್ನು ಬಹು ದಿವಸದ ವರೆಗೆ ಬಿಟ್ಟು ಬಿಡದೆ ಕೊಡಬೇಕು. ಅದರ ಸಂಗಡ ಕಾ. ಫಾ. ಹಾಗು ನ್ಯಾ. ಫಾ. ಇವುಗಳನ್ನೂ ಕೊಡಬೇಕಾಗುವದು. ಚೊಚ್ಚಲ ಕೂಸಿಗೆ ಈ ರೋಗವಾಗಿದ್ದರೆ, ಮರುಚಲ ಕೂಸಿಗೆ ಅದು ಆಗಬಾರದೆಂದು ತಾಯಿಯು ಗರ್ಭಿಣಿಯಾಗಿರುವಾಗಲೇ ಆಕೆಗೆ ಕಲ್ಕೆ. ಫಾಸ ಔಷಧವನ್ನು ಕೊಡಬೇಕು. ಅದರಿಂದ ಮುಂದಾಗುವ ಮಕ್ಕಳಿಗೆ ಈ ರೋಗವು ಆಗುವದಿಲ್ಲ. ಕೂಸಿಗೆ ಸ್ವಚ್ಛವಾದ ಬಯಲು ಹವೆಯಲ್ಲಿ ಬಹಳ ತಿರುಗಾಡಿಸಬೇಕು. ಪಚನ ಶಕ್ತಿಗೆ ಅನುಸರಿಸಿ ಪೌಷ್ಟಿಕ ಹಾಗು ಸಾದಾ ಅನ್ನವನ್ನು ಕೊಡಬೇಕು. ಹಾಲು ಕುಡಿಯುವ ಕೂಸುಗಳಿಗೆ ಸುಣ್ಣದ ಮೇಲಿನ ನೀರೂ ಹಾಲೂ ಸರಿಸಮಾನವಾಗಿ ಅಥವಾ ಮೂರು ಭಾಗ ಹಾಲಿಸಲ್ಲಿ ಒಂದು ಭಾಗ ನೀರನ್ನು ಕೂಡಿಸಿ ಕೊಡಬೇಕು.

" ಮುಟ್ಟುದೋಷ " ವೆಂಬ ಸದರಿನ ಕೆಳಗೆ ಕೊಟ್ಟಿರುವಂಥ ಉಪಯುಕ್ತ ಸೂಚನೆಯನ್ನು ನೋಡಿರಿ.

# ಆತಪಮೂರ್ಛೆ

**Sun-Stroke.** **ಸನ್‌ಸ್ಟ್ರೋಕ.**

ಆತಪಮೂರ್ಛೆಯೆಂಬ ರೋಗವು ಕೇವಲ ಬಿಸಿಲಿನ ತೀಕ್ಷ್ಣತೆಯಿಂದಲೇ ಆಗುತ್ತದೆಂತಲ್ಲ. ಅತಿಶಯ ಉಷ್ಣತೆಯ ಪರಿಣಾಮದಿಂದ ಕೂಡ ಈ ರೋಗವು ಆಗುವದುಂಟು. ಇದು ಉಷ್ಣ ಪ್ರಾಂತಗಳಲ್ಲಿ ಹೆಚ್ಚಾಗಿ ಕಂಡುಬರುವದು. ರೋಗದ ಜೋರು ಬಹಳಾಗಿದ್ದರೆ ರೋಗಿಯು ಒಮ್ಮೊಮ್ಮೆ ಒಂದು ತಾಸಿನ ಒಳಗೇ ಸಾಯುತ್ತಾನೆ. ಇಂಥ ಸಮಯದಲ್ಲಿ ಆತನಿಗೆ ಹೃದಯಶಕ್ತಿಪಾತ, ಕಷ್ಟಶ್ವಾಸ, ಮತ್ತು ಕಣ್ಣು ಮುಚ್ಚುಹಾಕುವದು ಮುಂತಾದ ಲಕ್ಷಣಗಳಿರುವವು. ರೋಗವು ಸೌಮ್ಯಸ್ವರೂಪದ್ದಿದ್ದರೆ, ತಲೆನೋಯುವದು, ಕತ್ತಲೆಬರುವದು, ಎದೆಯು ತುಂಬಿದಹಾಗೆ ಅನಿಸುವದು, ಮಳಮಳಿಸುವದು, ಓಕರಿಸುವದು, ಕಣ್ಣು ಮುಂದೆ ತರತರದ ಬಣ್ಣಗಳು ಕಾಣಿಸುವದು, ಹೊಟ್ಟೆಜಾಡಿಸುವದು, ಮೂತ್ರವು ಮೇಲಿಂಡಮೇಲೆ ಆಗುವದು, ಮುಂತಾದ ಲಕ್ಷಣಗಳಿರುವವು. ಮೊದಲು ಕಣ್ಣು ಮುಚ್ಚುಹಾಕುತ್ತವೆ; ಬರಬರುತ್ತ ಅದು ಹೆಚ್ಚಾಗಿ ಕೊನೆಗೆ ರೋಗಿಗೆ ಎಚ್ಚರ ತಪ್ಪುತ್ತದೆ. ಮುಖವು ಕೆಂಪಾಗುತ್ತದೆ; ತೊಗಲು ಬಿಸಿಯಾಗುತ್ತದೆ; ನಾಡಿಯು ಬೇಗನೆ ಹಾರುತ್ತದೆ; ಜ್ವರವು ೧೧೦ ಅಂಶಕ್ಕಿಂತ ಹೆಚ್ಚಿಗಿರುತ್ತದೆ. ತಲೆಯು ಮಿತಿಮೀರಿ ನೋಯುವದು ಹಾಗು ಕಣ್ಣಿನ ನಾಡಿಗಳು ಟಣಟಣ ಹಾರುವವು.

ಜೀವನರಸಾಯನ ಶಾಸ್ತ್ರದ ದೃಷ್ಟಿಯಿಂದ ನೋಡಲಾಗಿ, ಶರೀರದಲ್ಲಿ ನೇಟ್ರಂಮೂರವೆಂಬ ಕ್ಷಾರವು ಕಡಿಮೆಯಾದುದರಿಂದ ಮಿದುಳಿನಲ್ಲಿ ಆರ್ದ್ರತೆಯು ಕಡಿಮೆಯಾಗಿ ಶುಷ್ಕತೆಯು ಬೆಳೆಯುವದೇ ಈ ರೋಗದ ಮುಖ್ಯ ಕಾರಣವು.

**ನೇ. ಮೂ:** – ಇದು ಈ ರೋಗದ ಮೇಲಿನ ಪ್ರಮುಖ ಔಷಧವು. ಭ್ರಮ ಮುಂತಾದವು ಆಗಿದ್ದರೆ ಕಾಲೀಫಾಸ ಕೊಡಬೇಕು. ರೋಗಿಗೆ ಎಚ್ಚರತಪ್ಪುತ್ತದೆ, ಉಸುರುಕಟ್ಟುತ್ತದೆ, ಮುಖವು ಕೆಂಪೇರುತ್ತದೆ, ಉಸುರುಸಿಕ್ಕಂತೆಯೂ ಕಷ್ಟದಾಯಕವೂ, ನಾಡಿಯು ಅಶಕ್ತವಿದ್ದರೂ

ಬೇಗನೆ ಹಾರುವದು, ಮುಂತಾದ ಭಾವನೆಗಳಿದ್ದರೆ ನೇಟ್ರಂಮೂರದಿಂದ ಗುಣವು ಖಂಡಿತವಾಗಿ ಬರುವದು.

**ಫೇ. ಫಾ:—** ಜ್ವರವು ಬಹಳ ಇರುವದು; ನೀರಡಿಕೆಯಾಗುವದು; ಮುಂತಾದ ಲಕ್ಷಣಗಳಿದ್ದರೆ ಈ ಔಷಧದ ಉಪಯೋಗ ಮಾಡಬೇಕು.

**ಸಿ:—** ಮಳಮಳಿಸುತ್ತಿದ್ದರೆ ಇದನ್ನು ಕೊಡಬೇಕು.

**ಉಪಯುಕ್ತ ಸೂಚನೆ:—** ಸಾಮಾನ್ಯವಾಗಿ ಉಷ್ಣ ಹವೆಯಲ್ಲಿಯೂ ಬಿಸಿಲಕಾಲದಲ್ಲಿಯೂ ಮನೆಯ ಹೊರಗೆ ಹೋಗಬಾರದು. ಬಹಳ ಬಿಸಿಲಿನೊಳಗಿಂದ ಬಂದಕೂಡಲೆ ಸ್ವಲ್ಪಾದರೂ ವಿಶ್ರಾಂತಿಯನ್ನು ತೆಗೆದುಕೊಳ್ಳದೆ ತಣ್ಣೀರು ಕುಡಿಯಬಾರದು. ಈ ರೋಗವು ಬಂದಬಳಿಕ ನೇಟ್ರಂ ಮೂರ ಹಾಗು ಫೇರಂಫಾಸ ಇವುಗಳನ್ನು ಬಿಟ್ಟುಬಿಡದೆ ಅದಲು ಬದಲುಮಾಡಿ ಕೊಡಬೇಕು.

"ಜ್ವರ"ವೆಂಬ ಸದರಿನ ಕೆಳಗೆ ಕೊಟ್ಟಿರುವ ಸೂಚನೆಗಳನ್ನು ನೋಡಿರಿ.

---

## ಆಮಾಂಶ

**Dysentery.** ಡೀಸೆಂಟ್ರಿ.

ಬೃಹದಾಂತ್ರಗಳಲ್ಲಿ (ನಳಗಳಲ್ಲಿ) ದಾಹವಾಗಲಿ ವ್ರಣವಾಗಲಿ ಉಂಟಾಗಿ ಮೇಲಿಂದಮೇಲೆ ಶೌಚಕ್ಕೆ ಹೋಗಬೇಕೆಂದು ಅನಿಸುವದು, ತಿಣುಕುವದು, ಹೊಟ್ಟೆಮುರಿಯುವದು, ಆಮವೂ ರಕ್ತದಿಂದ ಕೂಡಿದ ಮಲವೂ ಹೋಗುವದು, ಮತ್ತು ಒಮ್ಮೊಮ್ಮೆ ಜ್ವರವೂ ಬರುವದು, ಮುಂತಾದ ಲಕ್ಷಣಗಳು ಆಮಾಂಶದಲ್ಲಿ ಇರುತ್ತವೆ. ಒಮ್ಮೊಮ್ಮೆ ಈ ರೋಗವು ಒಮ್ಮಿಂದೊಮ್ಮೆ ಆರಂಭವಾಗುವದು. ಆದರೆ ಬಹುತರವಾಗಿ ಅದು ಆರಂಭವಾಗುವದಕ್ಕಿಂತ ಮುಂಚೆ ಹಸಿವೆಯು ಆಗದಿರುವದು, ಅವರೋಧ, ಹೊಟ್ಟೆಯಲ್ಲಿ ಅಸ್ವಸ್ಥತೆ ಎನಿಸುವದು, ಜ್ವರವು ಬರುವದು, ಕರುಳಿನಲ್ಲಿ ನೋಯುವದು, ಮುಂತಾದ ಚಿನ್ಹಗಳು ಮೊದಲು ಕಂಡು ಬರುತ್ತವೆ. ಮೊದಲು ಮಲವು ಬಹಳ ಹೋಗುವದು. ಆದರೆ ಮುಂದೆ

ಸ್ವಲ್ಪ ಕಾಲದಲ್ಲಿಯೆ ಮಲವು ನಿಂತು ಬಿಳಿಯ ಆಮವೂ ರಕ್ತವೂ ಬೀಳಲಾರಂಭಿಸುತ್ತದೆ. ಶೌಚಕ್ಕೆ ಮೇಲಿಂದ ಮೇಲೆ ಹೋಗಬೇಕಾಗುವದು. ಎಷ್ಟು ತಿಣುಕಿದರೂ ಶೌಚಕ್ಕೆ ಆಗುವದೇ ಇಲ್ಲ. ಉರುಪೂ ಇರುವದು. ಮಲವು ಬಹಳ ಹೊಲಸು ನಾರುತ್ತದೆ. ಹೀಗೆ ಬಹಳ ದಿವಸ ನಡೆದರೆ ಕರುಳಿನಲ್ಲಿ ಕ್ಷತಗಳಾಗುವವು ಹಾಗು ಕರುಳು ಕೊಳೆಯುತ್ತದೆ. ಹನ್ನೆರಡು ಕ್ಷಾರಗಳ ಯೋಜನೆಯನ್ನು ಸರಿಯಾಗಿ ಮಾಡಿದರೆ ಕ್ಷತದ ಮತ್ತು ಕೊಳೆಯುವದರ ಅಂಜಿಕೆಯೇ ಉಳಿಯುವದಿಲ್ಲ. ಹೊಟ್ಟೆಯು ಜೋರಿನಿಂದ ಮುರಿಯಹತ್ತಿದರೆ ಒಮ್ಮೊಮ್ಮೆ ಸೆಟೆಬೇನೆಯೂ ಅಗುವದುಂಟು. ಕಣ್ಣಿಗೆ ಕತ್ತಲೆ ಬರುತ್ತದೆ ಮತ್ತು ಗುದದ್ವಾರವು ಹೊರಜೀಳುತ್ತದೆ. ಮೂತ್ರವಾಗುವದಿಲ್ಲ ಅಥವಾ ಮೂತ್ರದ ಕಾಲಕ್ಕೆ ನೋವಾಗುತ್ತದೆ.

ಕೆಟ್ಟಿದ್ದ ಹೊಲಸು ನೀರು ಕುಡಿಯುವದು, ತೇವಿನ ಸ್ಥಳದಲ್ಲಿ ಇರುವದು, ಬೇಸಿಗೆಯ ಕಾಲದಲ್ಲಿ ತಣ್ಣಗೆ ಮಾಡಿದ ನೀರು ಕುಡಿಯುವದು. ಹವೆಯಲ್ಲಿ ಒಮ್ಮಿಂದೊಮ್ಮೆ ಚಳಿಯುಂಟಾಗುವದು, ಕಸಕು ಇಲ್ಲವೆ ಕೊಳೆತ ಹಣ್ಣುಗಳನ್ನು ತಿನ್ನುವದು, ಮುಂತಾದ ಕಾರಣಗಳಿಂದ ಈ ರೋಗವು ಹುಟ್ಟುತ್ತದೆ. ಆಂತ್ರಜ್ವರದಲ್ಲಿಯೂ (ಸನ್ನಿಪಾತ ಜ್ವರದಲ್ಲಿಯೂ) ಆಮಾಂಶವು ಕಂಡುಬರುತ್ತದೆ.

**ಮ್ಯಾ. ಫಾ**:— ಹೊಟ್ಟೆಯಲ್ಲಿಯೂ ಕರುಳಿನಲ್ಲಿಯೂ ಕಳೆ ಏಳುವದು. ಹೊಟ್ಟೆಯು ಮುರಿದು ಮೂತ್ರಕ್ಕೂ ಶೌಚಕ್ಕೂ ಹೋಗುವ ಇಚ್ಛೆಯಾಗುವದು. ಕಾಲುಗಳನ್ನು ಮಡಚಿ ಅವುಗಳನ್ನು ಹೊಟ್ಟೆಗೆ ಹಚ್ಚಿಕೊಂಡು ಮಲಗಿದರೆ ಅಥವಾ ಉಷ್ಣೋಪಚಾರವನ್ನು ಮಾಡಿದರೆ ವೇದನೆಯು ಕಡಿಮೆಯಾಗುವದು.

**ಫೇ. ಫಾ**:— ರೋಗದ ಆರಂಭದಲ್ಲಿ ಜ್ವರವು ಬರುವದು ಮತ್ತು ದಾಹಯುಕ್ತ ವೇದನೆಯಾಗುವದು. ಮಲವು ತೆಳ್ಳಗೆ ಬಿಸಿಯಾಗಿರುವದು. ಕಾಲೀ ಮೂರವನ್ನೂ ಇದನ್ನೂ ಅದಲುಬದಲು ಮಾಡಿ ಕೊಡಬೇಕು.

. **ಕಾ. ಮೂ**:— ರೋಗದ ಆರಂಭದಿಂದ ಸರಿಯಾದ ವೇಳೆಗೆ ಫೇರಂ ಫಾಸವನ್ನೂ ಇದನ್ನೂ ಅದಲುಬದಲು ಮಾಡಿ ಕೊಟ್ಟರೆ ಈ ಎರಡು

ಔಷಧಗಳಿಂದಲೇ ಬಹುತರವಾಗಿ ಸಮಾಧಾನವಾಗುವದು. ಹೊಟ್ಟೆಯಲ್ಲಿ ಕತ್ತರಿಸಿದಂತೆ ಒಂದೇಸವನೆ ಬಹಳ ವೇದನೆಯಾಗುವದು. ಮೇಲಿಂದಮೇಲೆ ಶೌಚಕ್ಕೆ ಹೋಗುವ ಇಚ್ಛೆಯಾಗುವದು. ಮೊದಲು ಹೊಟ್ಟೆ ಮುರಿದು ಬಳಿಕ ಶೌಚಕ್ಕೆ ಆಗುವದು. ಮಲವು ಹಳದೀ ಮತ್ತು ಜಿಗಟು ಇರುವದು. ಆಮವೂ ರಕ್ತವೂ ಬೀಳುತ್ತದೆ. ನಾಲಿಗೆಯ ಮೇಲೆ ಬಿಳಿಯ ಪುಟ ಬರುವದು. ಕಳೆಯೇಳುತ್ತಿದ್ದರೆ ಇದನ್ನೂ ವ್ಯಾ. ಫಾ. ವನ್ನೂ ಅದಲು ಬದಲು ಮಾಡಿ ಕೊಡಬೇಕು.

**ಕಾ. ಫಾ:—** ಹೊಲಸು ಮತ್ತು ಕೊಳಕು ಜುಲಾಬು. ಒಮ್ಮೊಮ್ಮೆ ಕೇವಲ ರಕ್ತದ ರೇಜಗಳೇ ಆಗುತ್ತವೆ. ನಾಲಿಗೆಯು ಒಣಗಿರುತ್ತದೆ. ಹೊಟ್ಟೆಯು ಉಬ್ಬುತ್ತದೆ. ಶೌಚ ಮಾಡಿ ಬಂದರೂ ಹೊಟ್ಟೆಯು ಮುರಿಯುತ್ತದೆ.

**ಕಲ್ಕೆ ಸ:—** ಕಾಲಿಮೂರದನಂತರ ರಕ್ತಮಿಶ್ರಿತವಾದ ಆಮವಿದ್ದರೆ.

**ಕಲ್ಕೆ. ಫಾ:—** ನಡುನಡುವೆ ಎರಡನೆಯ ಔಷಧಗಳ ಸಂಗಡ ಪೌಷ್ಟಿಕ ಔಷಧವೆಂದು ಕೊಡಬೇಕು.

**ಉಪಯುಕ್ತ ಸೂಚನೆ:—** ಈ ಬೇನೆಯು ಕಾಲೀ ಮೂರದಿಂದಲೇ ಬಹುಮಟ್ಟಿಗೆ ನೆಟ್ಟಗಾಗುತ್ತದೆ. ಅದರಿಂದ ಗುಣವು ಬರದಿದ್ದರೆ, ವಿಶೇಷ ವಾಗಿ ಜಿಗಟು, ಶ್ಲೇಷ್ಮಲ, ಕೀವಿನಂತೆ ಮಲವು ಬೀಳುತ್ತಿದ್ದರೆ. ಕಲ್ಕೆ. ಸಲ್ಫವನ್ನು ಕೊಡಬೇಕು. ನಾಲಿಗೆಯು ಒಣಗುವದು, ಹೊಟ್ಟೆಯು ಉಬ್ಬುವದು, ವಾತ, ಭ್ರಮ ಮುಂತಾದ ಪ್ರವೃತ್ತಿಗಳಾಗುವದು, ಮತ್ತು ಮಲವು ತೀರ ಹೊಲಸು ನಾರುವದು, ಈ ಭಾವನೆಗಳಿದ್ದರೆ ಕಾಲೀಫಾಸದ ಉಪಯೋಗವಾಗುವದು. ಕೇವಲ ರಕ್ತವೇ ಬೀಳುತ್ತಿದ್ದರೂ ಕಾಲೀ ಫಾಸದ ಉಪಯೋಗವಾಗುತ್ತದೆ. ಜ್ವರವು ಬರುತ್ತಿದ್ದರೆ ಫೇರಂ ಫಾಸ ವನ್ನು ಕೊಡಬೇಕು. ಹೊಟ್ಟೆಯು ಒಂದೇಸವನೆ ಕಡಿಯುತ್ತಿದ್ದು ಒತ್ತುವದರಿಂದ ಹೆಚ್ಚಿಗೆ ನೋಯುತ್ತಿದ್ದರೆ ಫೇರಂ ಫಾಸದ ಉಪಯೋಗ ಮಾಡಬೇಕು. ವೇದನೆಯು ನಿಂತು ನಿಂತು ಬರುತ್ತಿದ್ದು ಹೊಟ್ಟೆಯಲ್ಲಿ ಮುರಿಯುತ್ತಿದ್ದರೆ, ಮತ್ತು ಒತ್ತುವದರಿಂದ, ಹೊಟ್ಟೆಗೆ ಕಾಲು ಹಚ್ಚಿ

ಕೂಡುವದರಿಂದ, ಹಾಗು ಮಲಗುವದರಿಂದ ಸಮಾಧಾನವಾಗುತ್ತಿದ್ದರೆ ಮ್ಯಾ. ಫಾ. ವನ್ನೇ ಉಪಯೋಗಿಸಬೇಕು. ವೇದನೆ, ಸೆಟಿಬೇನೆ ಮುಂತಾದ ವುಗಳ ಬಗ್ಗೆ ಮ್ಯಾ. ಫಾ. ಔಷಧವನ್ನು ಬೀಸಿನೀರಿನಲ್ಲಿ ಕಲಸಿ ಮೇಲಿಂದ ಮೇಲೆ ಕೊಡುತ್ತಿರಬೇಕು. ನೀರಿನಲ್ಲಿ ಇನ್ನಿಷ್ಟು ಮ್ಯಾ. ಫಾ. ವನ್ನು ಕಲಸಿ ಅಗರ ಬಸ್ತಿಯನ್ನು ಕೊಡಬೇಕು; ಅಥವಾ ಆ ನೀರನ್ನು ಶರೀರದಲ್ಲಿ ಮೇಲಿಂದಮೇಲೆ ಚುಚ್ಚಬೇಕು. ರೋಗಿಯು ತೀರ ಸುಮ್ಮನೆ ಬಿದ್ದು ಕೊಂಡಿರಬೇಕು. ಯಾವದೇ ತರದ ಶ್ರಮವನ್ನೂ ವ್ಯಾಯಾಮವನ್ನೂ ಮಾಡಬಾರದು. ಬಲವತ್ತರವಾದ ಔಷಧಗಳನ್ನು ಕೊಟ್ಟು ಬೇನೆಯನ್ನು ತಡೆಯುವ ಪ್ರಯತ್ನ ಮಾಡಬಾರದು. ಅಂಥ ಔಷಧಗಳನ್ನು ಕೊಟ್ಟರೆ ಮೈಯೊಳಗಿನ ವಿಷಪದಾರ್ಥಗಳನ್ನು ಹೊರದೂಡುವ ಮಾರ್ಗಗಳು ಕಟ್ಟಾಗಿ ಅವೆಲ್ಲ ಮೈಯೊಳಗೇ ಉಳಿಯುತ್ತವೆ. ಅದರಿಂದ ದೇಹಕ್ಕೆ ಅಪಾಯವಾಗುವ ಸಂಭವವಿರುತ್ತವೆ. ಬಹುತರವಾಗಿ ಆಮವು ನಿಂತಬಳಿಕ ಆವರೋಧವಾಗುವ ಪ್ರವೃತ್ತಿಯಾಗುತ್ತದೆ. ಅದು ಹಾಗಾಗಬಾರದೆಂದು ಔಷಧದಲ್ಲಿಯೂ ಅನ್ನದಲ್ಲಿಯೂ ಯೋಗ್ಯವಾದ ಹೆಚ್ಚುಕಡಿಮೆಯನ್ನು ಮಾಡಬೇಕು. ಮಾದಕ ಹಾಗು ಹುಳಿ ಪದಾರ್ಥಗಳನ್ನು ಕೊಡಬಾರದು. ಜವೆಗೋದಿಯ ನೀರು, ಅಕ್ಕಿಯ ಕಚ್ಚು, ಗಂಜಿ ಮುಂತಾದ ಪಚಸಕ್ಕೆ ಹಗುರಾದ ಅನ್ನವನ್ನೇ ಕೊಡಬೇಕು. ಗುಣವಾಗುತ್ತ ಹೋದಹಾಗೆ ಅನ್ನದಲ್ಲಿ ಬದಲಾವಣೆ ಮಾಡಬೇಕು; ಮತ್ತು ಅದನ್ನು ಕ್ರಮದಿಂದ ಬೆಳಿಸುತ್ತ ಬೆಳಿಸುತ್ತ ಕೊನೆಗೆ ದಿನದ ಅನ್ನವನ್ನು ಕೊಡಬೇಕು.

---

## ದನಿ ಕೂಡುವದು

**Hoarseness.** **ಹೋರ್ಸನೆಸ್.**

ಶಬ್ದೇಂದ್ರಿಯದ ಶ್ಲೇಷ್ಮಲ ತ್ವಚೆಯಲ್ಲಿ ರಕ್ತಸಂಚಯವಾಗುವದು, ಹಾಗು ಶಬ್ದರಜ್ಜುಗಳು ಸಡಿಲಾಗುವವು. ಇದರಿಂದ ದನಿಯು ಗೊಗ್ಗರ ವಾಗುತ್ತದೆ, ಚಳಿಯೇ ಅದರ ಮುಖ್ಯ ಕಾರಣವು. ಶ್ವಾಸನಲಿಕಾದಾಹ, ಕಂಠನಲಿಕಾದಾಹ, ಬಹಳ ಮಾತನಾಡುವದು, ದನಿಗೆ ಶ್ರಮ ಕೊಡುವದು ಮುಂತಾದ ಕಾರಣಗಳೂ ಇರುವದುಂಟು.

**ಫೇ. ಫಾ:—** ದನಿಗೆ ಬಹಳ ಶ್ರಮ ಕೊಡುವದರಿಂದ ಹಾಡುವವರ ಗಂಟಲವು ನೋಯುತ್ತದೆ ಮತ್ತು ದನಿಯು ಗೊಗ್ಗರಾಗುತ್ತದೆ. ಚಳಿಯಿಂದಲೂ ಹೀಗೆ ಆಗುವದುಂಟು. ಇದು ಸಾಯಂಕಾಲದಲ್ಲಿ ಹೆಚ್ಚಾಗುವದು.

**ಕಾ. ಮೂ:—** ದನಿಯು ಚಳಿಯಿಂದ ಕರ್ಕಶವೂ ಗೊಗ್ಗರವೂ ಆಗುವದು. ಬಹಳ ದಿನಗಳ ವರೆಗೆ ಹೀಗಾದರೆ ಈ ಔಷಧದ ಸಂಗಡ ಕಾಲೀಸಲ್ಫವನ್ನೂ ಕೊಡಬೇಕು.

**ಕಾ. ಸ:—** ಕಾಲೀಮೂರದಿಂದ ಗುಣವು ಬರದಿದ್ದರೆ ಇದನ್ನು ಕೊಡಬೇಕು.

**ಕಾ. ಫಾ:—** ಅಶಕ್ತತನವೂ ಮಾನಸಿಕ ದಣುವಿಕೆಯೂ ಇರುತ್ತದೆ. ಗಂಟಲಿನಲ್ಲಿ ದಣಿದಂತೆಯೂ ಸೋತಂತೆಯೂ ಅನಿಸುತ್ತದೆ. ಫೇರಂ. ಫಾಸದ ನಂತರ ಕೊಡಬೇಕು.

**ಕಲ್ಕೆ. ಫಾ:—** ಹಳೆಯ ಬೇನೆಯ ಮೇಲೆ; ಮೇಲಿಂದ ಮೇಲೆ ಗಂಟಲು ಕೂಡುತ್ತಿದ್ದರೆ; ಮೇಲಿಂದ ಮೇಲೆ ಖೇಕರಿಸಬೇಕಾದರೆ, ಮತ್ತು ಬಿಳಿಯ ಸ್ವಚ್ಛ ಕಫವು ಬೀಳುತ್ತಿದ್ದರೆ; ಫೇರಂ ಫಾಸದ ಸಂಗಡ ಇದನ್ನು ಅದಲುಬದಲು ಮಾಡಿ ಕೊಡಬೇಕು.

**ಉಪಯುಕ್ತ ಸೂಚನೆ:—** ಕ್ಷೋಭಕಾರಕ ಅನ್ನವನ್ನೂ ಪೇಯಗಳನ್ನೂ ಬಿಟ್ಟುಬಿಡಬೇಕು. ಗಂಟಲಿಗೆ ಚಳಿಯೂ ಗಾಳಿಯೂ ಹತ್ತಗೊಡಬಾರದು. ಗಂಟಲಿಗೆ ಶ್ರಮವಾಗದಂತೆ ನಡೆಯಬೇಕು. ಉಷ್ಣ ಉಪಚಾರಗಳನ್ನು ಮಾಡಬೇಕು. ನಾರು ಬಟ್ಟೆಯನ್ನು ಎರಡು ಮೂರು ಪದರು ಮಡಿಚಿ, ಅದನ್ನು ತಣ್ಣೀರಿನಲ್ಲಿ ಎದ್ದಿ, ಕುತ್ತಿಗೆಗೆ ಸುತ್ತಿ, ಅದರ ಮೇಲೆ ಉಣ್ಣೆಯ ಬಟ್ಟೆಯನ್ನು ಎಲ್ಲ ಕಡೆಯಿಂದ ಸುತ್ತಬೇಕು. ರಾತ್ರಿಯಲ್ಲಿ ಮಲಗುವಾಗ ಇಂಥ ಉಪಚಾರವನ್ನು ಮಾಡಿದರೆ ಅದರಿಂದ ಬಹಳ ಲಾಭವಾಗುವದು. ಮನೂಕೆಯನ್ನೂ ಅದರಿಂದ ಸಿದ್ಧವಾಗುವ ದ್ರಾಕ್ಷಾಸವವನ್ನೂ ಸೇವಿಸಿದರೆ ಅದರಿಂದ ದನಿಯು ಸುಧಾರಿಸಲಿಕ್ಕೆ ಸಹಾಯವಾಗುತ್ತದೆ.

---

# ಸೆಟೆಬೇನೆ

**Convulsions.** **ಕನ್ವ್ಹಲ್ಶನ್ಸ.**

**ವ್ಯಾ. ಫಾ:—** ಎಲ್ಲ ತರದ ಸೆಟೆಬೇನೆಯಲ್ಲಿ ವ್ಯಾ. ಫಾ. ದ ಉಪಯೋಗವಾಗುತ್ತದೆ. ಇದನ್ನು ಬಿಸಿನೀರಿನಲ್ಲಿ ಹಾಕಿ ಮೇಲಿಂದ ಮೇಲೆ ಕೊಡಬೇಕು. ವ್ಯಾ. ಫಾ. ದಿಂದ ನೆಟ್ಟಗಾಗದಿದ್ದರೆ ಕಲ್ಕೆ. ಫಾಸ ಕೊಡಬೇಕು. ಈ ಎರಡು ಔಷಧಗಳಲ್ಲಿ ಯಾವದರಿಂದ ಗುಣವು ಬರುತ್ತೆ ದೆಂಬದು ತಿಳಿಯದಂತಾದರೆ ಎರಡೂ ಔಷಧಗಳನ್ನು ಒತ್ತಟ್ಟಿಗೆ ಕೂಡಿಸಿ ಅಥವಾ ಅದಲುಬದಲು ಮಾಡಿ ಕೊಡುವದು ಒಳಿತು.

**ಉಪಯುಕ್ತ ಸೂಚನೆ:—** ಸೆಟೆಯುತ್ತಿರುವ ಸ್ಥಳವನ್ನು ಗಟ್ಟಿ ಮುಟ್ಟಾಗಿ ಬಿಗಿಯಬೇಕು, ಅಥವಾ ಹಿಡಿಯಬೇಕು.

"ಬಾಲಗ್ರಹ"ವೆಂಬ ಸದರು ನೋಡಿರಿ.

---

# ಬಿಕ್ಕು

**Hiccough.** **ಹಿಕ್ಕಫ್.**

ಎದೆ ಮತ್ತು ಹೊಟ್ಟೆ ಇವುಗಳ ನಡುವೆ ಒಂದು ಸ್ನಾಯುಮಯ ಪಟಲವಿರುತ್ತದೆ. ಅದಕ್ಕೆ ಮಹಾಪ್ರಾಚೀರ (Diaphragm) ಎಂದು ಹೆಸರು. ಅದಕ್ಕೂ ಶ್ವಾಸೋಚ್ಛ್ವಾಸಕ್ಕೂ ಬಹಳ ನಿಕಟವಾದ ಸಂಬಂಧ ವಿದೆ. ಈ ಇಂದ್ರಿಯವು ನಿಂತು ನಿಂತು ಆಕುಂಚನವಾಗುವದೇ ಬಿಕ್ಕು. ಅದರ ಆಕುಂಚನದಿಂದ ಹವೆಯು ಒಮ್ಮೆಲೆ ಒಳಗೆ ಎಳೆಯಲ್ಪಡುತ್ತದೆ. ಮತ್ತು ಒಂದು ತರದ ವಿಶಿಷ್ಟವಾದ ಸಪ್ಪಳಾಗುತ್ತದೆ. ಅದೇ ಬಿಕ್ಕು.

ಮಿದುಳಿನ ಕೆಲವು ರೋಗಗಳು, ಬಹು ದಿವಸದ ಕ್ಷೀಣ ರಕ್ತತೆ, ಶಕ್ತಿಪಾತ ಮಾಡುವ ರೋಗಗಳು, ಅಪಚನದಿಂದ ಜಠರದಲ್ಲಿ ವಾಯು ತುಂಬುವದು, ಕಮ್ಮಗೆ ಮಸಾಲೆ ಹಾಕಿದ ಪದಾರ್ಥಗಳನ್ನೂ ಅಡಿಕೆ ಯನ್ನೂ ತಿನ್ನುವದು, ಇವು ಈ ರೋಗದ ಕಾರಣಗಳು. ಕೂಸುಗಳಿಗೆ ಚಳಿಯಾಗಿ ಬಿಕ್ಕು ಬರುತ್ತದೆ.

ದೂಷಿತ ಭಾಗದ ಸ್ನಾಯುತಂತುಗಳಲ್ಲಿ ವ್ಯಾ. ಫಾ. ದ ಪ್ರಮಾಣವು ಕಡಿಮೆಯಾದ್ದರಿಂದ ಬಿಕ್ಕು ಬರುತ್ತದೆಂದು ಜೀವನ ರಸಾಯನ ಶಾಸ್ತ್ರಜ್ಞರ ಅಭಿಪ್ರಾಯವಿದೆ.

**ವ್ಯಾ. ಫಾ:—** ಇದು ಬಿಕ್ಕಿನ ಮೇಲೆ ಪ್ರಮುಖ ಔಷಧವು. ಅತಿ ಬಲವತ್ತರ ಹಾಗು ಬಹು ದಿವಸ ತಡೆಯುವಂಥ ಬಿಕ್ಕು; ಬಿಕ್ಕಿ ಬಿಕ್ಕಿ ಎದೆ ನೋಯುತ್ತದೆ. ನಿಂತು ನಿಂತು ಒಮ್ಮೆಲೆ ಬಿಕ್ಕಿನ ತೆರೆಗಳು ಬರುತ್ತವೆ. ಅಫುವನ್ನು ತಿಂದು ಬಿಕ್ಕು ನಿಲ್ಲಿಸುವ ಪ್ರಯತ್ನವು ವಿಫಲವಾಗಿದ್ದರೆ ಈ ಔಷಧದ ಉಪಯೋಗವಾಗುವದು. ಬಿಸಿ ನೀರಿನಲ್ಲಿ ಇದನ್ನು ಮೇಲಿಂದ ಮೇಲೆ ಕೊಟ್ಟರೆ ಬೇಗನೆ ಉಪಯೋಗವಾಗುವದು.

**ನೇ. ಮೂ:—** ಕೊಯನಲದ ದುಷ್ಪರಿಣಾಮದಿಂದ ವರ್ಷಗಟ್ಟಲೆ ಬರುತ್ತಿರುವ ಬಿಕ್ಕು ( ಕೊಯನಲ ತೆಗೆದುಕೊಂಡ ಕೂಡಲೆ ಭರದಿಂದ ಬರುವ ಬಿಕ್ಕು ) ಇದರಿಂದ ನೆಟ್ಟಗಾಗುತ್ತದೆ.

---

# ಉದರಾವರಣದಾಹ

**Peritonitis.** **ಪೇರಿಟೋನಾಯಿಟಿಸ್.**

ಉದರ ಭಾಗದ ಪೊಳ್ಳಿನ ಮೇಲೆ ಇರುವ ಪಟಲದಲ್ಲಿ ದಾಹಯುಕ್ತ ಭಾವನೆಗಳು ಉಂಟಾಗುತ್ತವೆ. ಉದರಭಾಗದಲ್ಲಿ ಬಾವೂ ನೋವೂ ಇರುವದು. ಜಗ್ಗಿದಂತೆ ಅನಿಸುವದು. ಸ್ಪರ್ಶವಂತೂ ಸಹನವಾಗುವದೇ ಇಲ್ಲ. ಹಲವು ಸಾರೆ ಮಲಾವರೋಧವೂ ಮೂತ್ರಸ್ತಂಭನವೂ ಇರುತ್ತವೆ. ಜ್ವರವು ಬರುವದು, ನಾಡಿಯು ಲಗುಬಗೆಯಿಂದ ಹಾರುವದು, ನಾಲಿಗೆಯ ಮೇಲೆ ಕಿಟ್ಟು ಕೂಡುವದು, ಓಕರಿಸುವದು, ಮುಂತಾದ ಲಕ್ಷಣಗಳೂ ಇರುತ್ತವೆ. ಸಾಧಾರಣವಾಗಿ ಉದರದ ಪೊಳ್ಳಿನಲ್ಲಿರುವ ಯಕೃತ, ಮೂತ್ರಪಿಂಡ, ಜಠರ, ಕರುಳು ಮುಂತಾದ ಇಂದ್ರಿಯಗಳಲ್ಲಿ ಒಂದಾಗಲಿ ಹೆಚ್ಚಾಗಲಿ ಹೆಚ್ಚು ಕಡಿಮೆ ಪ್ರಮಾಣದಲ್ಲಿ ದೂಷಿತವಾಗುತ್ತವೆ. ಅದಕ್ಕೆ ಅನುಸರಿಸಿ ಇತರ ಭಾವನೆಗಳೂ ಕಂಡುಬರುತ್ತವೆ. ಉದರಭಾಗದಲ್ಲಿ

ವೇದನೆಯುಳ್ಳ ಬಾವು, ಸ್ಪರ್ಶವು ತಾಳದಿರುವದು, ಜ್ವರವು ಬರುವದು, ಕಾಲುಗಳನ್ನು ಮುದುಡಿಕೊಂಡು ಅಂಗಾತ ಮಲಗುವದು, ಕಾಲು ಚಾಚಿದರೆ ನೋವು ಹೆಚ್ಚಾಗುವದು, ಇವು ಈ ರೋಗದ ಮುಖ್ಯ ಭಾವನೆಗಳು.

**ಫೇ. ಫಾ:**— ಪ್ರಥಮಾವಸ್ಥೆ. ವೇದನೆ, ಜ್ವರ, ನಾಡಿಯು ಬೇಗನೆ ಹಾರುವದು, ಮೈಗೆ ಮುಳ್ಳು ಬರುವದು, ಸ್ಪರ್ಶವು ತಾಳದಿರುವದು, ಓಕರಿಸುವದು, ಮುಂತಾದ ಭಾವನೆಗಳು.

**ಕಾ. ಮು:**— ದ್ವಿತೀಯಾವಸ್ಥೆ. ಬಾವು. ಹೊಟ್ಟೆಯುಬ್ಬಿ ಬಿರುಸಾಗುವದು. ನಾಲಿಗೆಯು ಬೆಳ್ಳಗಾಗುವದು. ಅವರೋಧ. ಫೇರಂ ಫಾಸವನ್ನೂ ಇದನ್ನೂ ಅದಲುಬದಲು ಮಾಡಿ ಕೊಡಬೇಕು.

**ಕಲ್ಕೆ. ಫಾ:**— ಬೇರೆ ಔಷಧಗಳ ಸಂಗಡ ನಡುನಡುವೆ ಕೊಡಬೇಕು

**ಉಪಯುಕ್ತ ಸೂಚನೆ:**— ರೋಗದ ಪ್ರಥಮಾವಸ್ಥೆಯಲ್ಲಿ ಫೇರಂ ಫಾಸವನ್ನು ಒಂದೇಸವನೆ ಮೇಲಿಂದಮೇಲೆ ಕೊಡುತ್ತಿರಬೇಕು. ದ್ವಿತೀಯಾವಸ್ಥೆಯಲ್ಲಿ ಕಾಲೀ ಮೂರವನ್ನೂ ಫೇರಂ ಫಾಸವನ್ನೂ ಅದಲು ಬದಲು ಮಾಡಿ ಕೊಡಬೇಕು. ಫೇರಂ ಫಾಸವನ್ನು ಬಿಸಿ ನೀರಿನಲ್ಲಿ ಹಾಕಿ ಅದರ ಬಸ್ತಿಯನ್ನು ಕೊಡುವದರಿಂದ ಬಹಳ ಲಾಭವಾಗುವದು. ಹೊಟ್ಟೆಯನ್ನು ಕಾಸುವದಾದರೂ ಒಳಿತು. ತೆಳ್ಳಗಿನ ಅನ್ನವನ್ನೇ ತಿನ್ನಲಿಕ್ಕೆ ಕೊಡಬೇಕು. ಕುಡಿಯಲಿಕ್ಕೆ ಬಿಸಿ ನೀರನ್ನು ಎಷ್ಟು ಬೇಕಾದಷ್ಟು ಕೊಡಬೇಕು. ಬಿಸಿ ನೀರಿನಿಂದ ವೇದನೆ, ದಾಹ, ಸೆಟೆಯುವದು ಮುಂತಾದ ಭಾವನೆಗಳು ಕಡಿಮೆಯಾಗುತ್ತವೆ; ಮತ್ತು ಅದರಿಂದ ಔಷಧವು ಮೈತುಂಬ ಬೇಗನೆ ಹಬ್ಬುವದೆಂದು ಜೀವನ ರಸಾಯನ ಶಾಸ್ತ್ರಜ್ಞರ ಅಭಿಪ್ರಾಯವಿದೆ.

" ಉಂಡುಕಪುಚ್ಛವಿದ್ರಧಿ " ಎಂಬ ಸದರು ನೋಡಿರಿ.

---

# ಉನ್ಮಾದವಾಯು

**Hysteria.** **ಹಿಸ್ಟೆರಿಯಾ.**

ಹಿಸ್ಟೆರಿಯಾ ಎಂಬ ಇಂಗ್ಲಿಷ ಶಬ್ದದ ಭಾಷಾಂತರವನ್ನು ಕೆಲವರು ಉನ್ಮಾದವಾಯು ಎಂದು ಮಾಡುತ್ತಾರೆ. ಆದರೆ ಆ ಬೇನೆಯ ಸ್ವರೂಪವನ್ನು ಲಕ್ಷ್ಯಕ್ಕೆ ತಂದರೆ, ಉನ್ಮಾದವಾಯುವೆಂಬ ಭಾಷಾಂತರವು ಎಷ್ಟರ ಮಟ್ಟಿಗೆ ಒಪ್ಪುವದೆಂಬ ಬಗ್ಗೆ ಸಂಶಯವುಂಟಾಗುತ್ತದೆ. ಹಿಸ್ಟೆರಿಯಾ ಎಂಬುದು ರೋಗವಲ್ಲ; ಅದು ಒಂದುತರದ ವಾತಾತ್ಮಕ ಪ್ರಕೃತಿ. ಅದು ಇಂಥದೊಂದು ವಿಶಿಷ್ಟವಾದ ಇಂದ್ರಿಯದ ರೋಗವೆಂದು ಹೇಳಲಿಕ್ಕೆ ಬರುವದಿಲ್ಲ. ಹಿಸ್ಟೆರಿಯಾದಲ್ಲಿ ಕಾಣಬರದಂಥ ಚಿಹ್ನವುಳ್ಳ ರೋಗವೇ ಇಲ್ಲವೆಂದರೂ ಸಲ್ಲುವದು. ರೋಗದ ಕಾರಣವನ್ನು ಹೇಳಲಿಕ್ಕೆ ಬರದಿದ ರೆ, ಇಂದ್ರಿಯದ ವಿಕೃತಿಯಲ್ಲಿ ಹೆಚ್ಚುಕಡಿಮೆಯಾಗಿರದಿದ್ದರೆ. ಅಂಥ ರೋಗಕ್ಕೆ ಹಿಸ್ಟೆರಿಯಾ ಎಂದು ಕರೆಯಬಹುದು. ಒಂದೇಸಮನೆ ನಗುವದು, ಅಳುವದು, ಕೆಲೆಯುವದು, ಬಿಕ್ಕಿಬಿಕ್ಕಿ ಅಳುವದು, ತೇಗು ಬರುವದು, ಸೆಟೆಯುವದು, ಸಳಕು ತುಂಬುವದು, ದಾಹವೂ ರಕ್ತಸಂಚಯವೂ ಇಲ್ಲದೆ ಸ್ಪರ್ಶವನ್ನು ತಾಳದಿರುವದು, ಅಪಚನ ಹಾಗು ಮುಟ್ಟಿನ ಬಗ್ಗೆ ತಕರಾರು, ಮುಂತಾದ ಎಲ್ಲತರದ ಲಕ್ಷಣಗಳು ಈ ರೋಗದಲ್ಲಿ ಕಂಡುಬರುತ್ತವೆ.

ಈ ರೋಗವು ಮನೋವಿಕಾರಜನ್ಯವಿದ್ದುದರಿಂದ ಇದಕ್ಕೆ ಕಾಲೀ ಫಾಸವೇ ಮುಖ್ಯ ಔಷಧವು.

**ಕಾ. ಫಾ:—** ಮುಖ್ಯ ಔಷಧವು. ಮನಸ್ಸಿಗೆ ಒಮ್ಮೆಂದೊಮ್ಮೆ ಬಹಳ ತ್ರಾಸವಾಗುವದು. ಗಂಟಲದಲ್ಲಿ ಗಂಟು ಬರುವದು. ನಗುವದು, ಅಳುವದು, ಒದರುವದು, ಆಕಳಿಸುವದು ಮುಂತಾದ ಲಕ್ಷಣಗಳಿರುವವು. ಇವು ವಿಶೇಷವಾಗಿ ಹೆಂಗಸರಿಗೆ ಆಗುವವು.

**ನೇ. ಮೂ:—** ರೋಗಿಯು ಖಿನ್ನನೂ, ಉದಾಸೀನನೂ, ವಿಚಾರ ಮಗ್ನನೂ ಆಗಿರುವನು. ಮುಟ್ಟು ಅನಿಯಮಿತವಾಗಿ ಬರುವ ಪಂಡು ರೋಗದ ಹೆಂಗಸರಿಗೆ. ಬೆವರು ಬಿಟ್ಟಕೂಡಲೆ ಎಲ್ಲ ಭಾವನೆಗಳೂ ನಾಶ ವಾಗುತ್ತವೆ.

**ಕಲ್ಕೆ. ಫಾ**:— ಇದನ್ನು ನಡುನಡುವೆ ಕೊಡಬೇಕು.

**ಉಪಯುಕ್ತ ಸೂಚನೆ**:— ಕಾಲೀ ಫಾಸವು ಮುಖ್ಯ ಔಷಧವು. ಭಾವನೆಗಳು ನಿಂತಬಳಿಕ ಸಹ ಅದನ್ನು ಬಹು ದಿವಸ ನಿಯಮದಿಂದ ಕೊಡಬೇಕು. ಭಾವನಾನುಸಾರವಾಗಿ ಬೇರೆ ಔಷಧಗಳನ್ನು ಇದರ ಸಂಗಡ ಕೊಡಬೇಕು. ರೋಗಿಗೆ ಎಚ್ಚರ ತಪ್ಪಿದರೆ ಮೋರೆಯ ಮೇಲೆ ನೀರು ಸಿಂಪಡಿಸಬೇಕು. ಉಳ್ಳೀಗಡ್ಡೆಯ ಮೂಸಿ ತೋರಿಸಬೇಕು. ಬಯಲು ಹವೆಯಲ್ಲಿ ತಿರುಗಾಡುವದು, ರಾತ್ರಿಯಲ್ಲಿ ಬೇಗನೆ ಮಲಗುವದು, ಉತ್ತೇಜಕ ಪದಾರ್ಥಗಳನ್ನು ಬಿಟ್ಟುಬಿಡುವದು, ಪೌಷ್ಟಿಕ ಪದಾರ್ಥವನ್ನು ನಿಯಮಿತ ಕಾಲಕ್ಕೆ ತಿನ್ನುವದು, ಈ ಮೇರೆಗೆ ನಡೆದರೆ ಬೇನೆಯು ಬೇಗನೆ ನೆಟ್ಟಗಾಗುವದು.

---

# ಉಪಜಿಹ್ವಿಕೆಯ ರೋಗ

**Diseases of Tonsils** ಡಿಸೀಜಿಸ್ ಆಫ ಟಾನ್‌ಸಿಲ್ಸ.

ಬಾಯಿಯಲ್ಲಿ ಗಂಟಲ ಎಲುವಿನ ಕಮಾನದ ಎರಡೂ ಮಗ್ಗಲಿಗೆ ಉಪಜಿಹ್ವಿಕೆ ಎಂಬದೊಂದು ಇಂದ್ರಿಯವಿರುತ್ತದೆ. ಈ ಇಂದ್ರಿಯವು ಬೋರೆಯ ಬೀಜದಷ್ಟು ಒಂದು ಸಣ್ಣ ಗಂಟಾಗಿರುತ್ತದೆ. ಈ ಇಂದ್ರಿಯ ದಲ್ಲಿ ದಾಹಜನ್ಯ ಭಾವನೆಯು ಉಂಟಾಗಿ ಇಂದ್ರಿಯವು ದೊಡ್ಡದಾಗುತ್ತದೆ. ಇದೇ ಈ ರೋಗದ ಸ್ವರೂಪವು. ದಾಹಜನ್ಯ ರೋಗದಲ್ಲಿ ಜ್ವರ, ವೇದನೆ, ಕೆಂಪು, ಬಾವು ಮುಂತಾದ ಲಕ್ಷಣಗಳಿರುವವು. ಒಮ್ಮೊಮ್ಮೆ ಅದರಲ್ಲಿ ಕೀವಾಗಿ ಅದು ಒಡೆಯುತ್ತದೆ. ಅದು ಹಬ್ಬುತ್ತ ಹೋದರೆ ಅನ್ನ ನುಂಗಲಿಕ್ಕೆ ತ್ರಾಸವಾಗುತ್ತದೆ. ಕಿವಿಗೆ ಕೇಳಿಸುವದಿಲ್ಲ. ಉಸುರಾಡಿಸ ಲಿಕ್ಕೂ ತೊಂದರೆಯಾಗುತ್ತದೆ. ಕೂಸುಗಳಿಗೆ ಈ ರೋಗದಿಂದ ಸೆಟೆಬೇನೆ ಯಾಗುವದು.

ಇದರ ಕಾರಣವೆಂದರೆ ಚಳಿ. ಗಂಡಮಾಲೆಯ ಪ್ರಕೃತಿಯವರಿಗೆ ಈ ರೋಗವು ಮೇಲಿಂದ ಮೇಲೆ ಆಗುವದು.

**ಫೇ. ಫಾ**:— ಜ್ವರ; ವೇದನೆ; ಉಪಜಿಹ್ವಿಕೆಯು ಕೆಂಪಾಗುವದು; ನುಂಗುವಾಗ ನೋಯುವದು; ದಾಹವು ಕಡಿಮೆಯಾಗಿ ಬಾವು ನಿಲ್ಲಿಸಲಿಕ್ಕೆ ಇದನ್ನು ಹೊಟ್ಟೆಯಲ್ಲಿ ಮೇಲಿಂದ ಮೇಲೆ ಕೊಡಬೇಕು; ಹಾಗು ಬಾಯಿ ಮುಕ್ಕಳಿಸಬೇಕು.

**ಕಾ. ಮೂ**:— ಬಾವು ಬಂದನಂತರ, ಕೀವಾಗುವದನ್ನು ತಪ್ಪಿಸಲಿಕ್ಕೆ. ನಾಲಿಗೆಯು ಬೆಳ್ಳಗಾಗುವದು. ಗಂಟಲಿನಲ್ಲಿ ಬಿಳೀ ಕಲೆಗಳು ಕಾಣುವವು. ಮೇಲಿಂದ ಮೇಲೆ ಹೊಟ್ಟೆಯಲ್ಲಿ ಕೊಡಬೇಕು; ಮತ್ತು ಬಾಯಿ ಮುಕ್ಕಳಿಸಬೇಕು.

**ಕಲ್ಕೆ. ಫಾ**:— ಉಪಜಿಹ್ವಿಕೆಯು ಬಾತು ಬಹಳ ದಿವಸವಾಗಿದ್ದರೆ. ಬಾಯಿ ತೆರೆಯುವಾಗಲೂ ತುತ್ತು ನುಂಗುವಾಗಲೂ ನೋಯುತ್ತದೆ. ಬೇರೆ ಔಷಧಗಳ ಸಂಗಡ ನಡುನಡುವೆ ಕೊಡಬೇಕು. ದನಿಯು ಗೊಗ್ಗ ರಾಗುವದು. ೨× ಶಕ್ತಿಯ ಔಷಧವನ್ನು ಬಹಳ ದಿವಸ ಕೊಟ್ಟರೆ ಬೆಳೆದಿದ್ದ ಹುಡುಗರ ಉಪಜಿಹ್ವಿಕೆಯು ಕಡಿಮೆಯಾಗುವದು.

**ಕಲ್ಕೆ. ಸ**:— ಕೀವು ಸೋರಹತ್ತಿದ ಬಳಿಕ ಕೊಡಬೇಕು.

**ನೇ. ಫಾ**:— ಉಪಜಿಹ್ವಿಕೆಯ ಬಹು ದಿವಸದ ಬಾವು. ಜಠರದಲ್ಲಿ ಪಿತ್ತವು ಬೆಳೆದು ಉಪಜಿಹ್ವಿಕೆಗೆ ಚಳಿಯಾಗುತ್ತದೆ. ಮತ್ತು ಅದರೊಳಗಿಂದ ಹಳದೀ ಸ್ರಾವವು ಸೋರುತ್ತದೆ.

**ನೇ. ಮೂ**:— ಕಿರಿನಾಲಿಗೆ ಬಾಯುವದು. ಜೊಲ್ಲು ಸೋರುವದು. ನಾಲಿಗೆಯು ಸ್ವಚ್ಛವಿದ್ದು ನೇಟ್ರಂ ಮೂರಸ ಇತರ ಭಾವನೆಗಳಿದ್ದರೆ ಇದರ ಉಪಯೋಗವಾಗುವದು. ३೦ ‹ ಶಕ್ತಿಯ ಔಷಧದಿಂದ ಬಹಳ ದಿವಸ ಬೆಳೆದಿದ್ದ ಉಪಜಿಹ್ವಿಕೆಯು ನೆಟ್ಟಗಾದ ಉದಾಹರಣಗಳಿವೆ.

**ಮ್ಯಾ. ಫಾ**:— ಬಲಗಡೆಯ ಉಪಜಿಹ್ವಿಕೆ ಬಾಯುವದು. ಗಂಟಲು ಕೆಂಪಾಗಿ ನೋಯುತ್ತದೆ; ಹಾಗು ಬಾಯುತ್ತದೆ. ತಲೆಯಾದರೂ ಕೆಂಪಾಗಿ ನೋಯುತ್ತದೆ.

**ಕಾ. ಫಾ**:— ಉಪಜಿಹ್ವಿಕೆಯು ದೊಡ್ಡದಾಗಿ ನೋಯುತ್ತದೆ. ಅದರ ಮೇಲೆ ಬಿಳೀ ಬಣ್ಣದ ಕಲೆಗಳು ಕಾಣುವವು.

**ಉಪಯುಕ್ತ ಸೂಚನೆ:—** ಮೊದಲಿನಿಂದ ಫೇರಂಫಾಸ ಹಾಗು ಕಾಲೀಮೂರ ಇವುಗಳನ್ನು ಮೇಲಿಂದ ಮೇಲೆ ಕೊಟ್ಟರೆ ಮುಂದೆ ಯಾವ ತ್ರಾಸವೂ ಆಗದೆ ಸಮಾಧಾನವಾಗುತ್ತದೆ. ೩× ಶಕ್ತಿಯ ಔಷಧವನ್ನು ಬಿಸಿನೀರಿನಲ್ಲಿ ಹಾಕಿ ಅದರಿಂದ ಬಾಯಿ ಮುಕ್ಕಳಿಸಬೇಕು; ಅಥವಾ ಆ ನೀರಿನ ಕಾವು ಕೊಡಬೇಕು.

"ಗಂಟಲುಸೋವು" ಎಂಬ ಸದರು ನೋಡಿರಿ.

---

# ಉಪದಂಶ

**Syphilis.** **ಸಿಫಿಲಿಸ್.**

ಉಪದಂಶವು ಸಾಂಸರ್ಗಿಕ ರೋಗವು. ಅದು ಹೆಂಗಸರಲ್ಲಿಯೂ ಗಂಡಸರಲ್ಲಿಯೂ ಕಂಡುಬರುತ್ತದೆ. ಉಪದಂಶದ ರೋಗಿಗಳ ಸಂಗದಿಂದಲೂ ಈ ಬೇನೆಯು ಬರುವದು. ಸಂಗವಾದ ಬಳಿಕ ಎಂಟು ದಿವಸದಿಂದ ತಿಂಗಳೊಳಗಾಗಿ ಇಂದ್ರಿಯದ ಮೇಲೆ ತಿಂಡಿಯೂ ಉರುವೂ ಆರಂಭವಾಗುತ್ತದೆ. ಮುಂದೆ ಅಲ್ಲಿ ಸಣ್ಣ ಹುಣ್ಣು ಆಗುತ್ತದೆ. ಇಂದ್ರಿಯವು ಬಾಯುವದು ಮತ್ತು ನೋಯುವದು. ಎರಡೂ ಕಷೆಯ ಗೆಜ್ಜೆಗಳಲ್ಲಿಯ ಗ್ರಂಥಿಗಳು ಉರಿಯುತ್ತವೆ. ಅವು ಬಾಯುತ್ತವೆ ಮತ್ತು ಸೋಯುತ್ತವೆ. ಅವುಗಳಿಗೆ ಉಡುಚು ಎನ್ನುತ್ತಾರೆ. ಚಟ್ಟೆಗಳಲ್ಲಿ ಎರಡು ಪ್ರಕಾರಗಳುಂಟು. ಕೆಲವು ಮೆತ್ತಗಿರುತ್ತವೆ ಮತ್ತು ಬೇರೆ ಕೆಲವು ಗಟ್ಟಿಯಾಗಿರುತ್ತವೆ. ಮೆತ್ತಗಿನದು ಸೌಮ್ಯ ಸ್ವರೂಪದ್ದಿರುತ್ತದೆ. ಉಪದಂಶದ ವಿಷವು ಎಲ್ಲ ಕಡೆಗೆ ಹಬ್ಬುವದಿಲ್ಲ. ಒಂದೇ ಸ್ಥಳದಲ್ಲಿ ಉಳಿಯುತ್ತದೆ. ಉಡುಚಿನಲ್ಲಿ ಕೀವು ತುಂಬಿ ಅದು ಒಡೆಯುತ್ತದೆ. ಆದರೆ ಬಿರುಸು ಚಟ್ಟೆಯಲ್ಲಿ ವಿಷವು ಮೈತುಂಬ ಹಬ್ಬುತ್ತದೆ. ಅದರ ಪರಿಣಾಮವನ್ನು ರೋಗಿಯು ಬಹು ದಿವಸ ಅನುಭವಿಸಬೇಕಾಗುವದು. ಆತನ ಸಂತತಿಗೆ ಸಹ ಅದರ ವಿಷವು ಬಾಧಿಸುವದು. ಇದರಲ್ಲಿ ಉಡುಚಿನ ಗಂಟುಗಳು ಬಾಯುವವು. ಆದರೆ ಕೀವು ತುಂಬಿ ಒಡೆಯುವದಿಲ್ಲ. ವ್ರಣಗಳು ಹೆಂಗಸರ ಹಾಗು ಗಂಡಸರ ಇಂದ್ರಿಯದ ಕೆಳಗಿನ ಮೃದು ತ್ವಚೆಯ ಮೇಲೆ ಏಳುವವು. ಅವುಗಳೊಳಗಿಂದ ಕೀವಿನಂಥ ಸ್ರಾವವು ಸೋರುತ್ತದೆ. ಇಂದ್ರಿಯದ ಮೇಲಿನ ತೊಗಲನ್ನು ಹಿಂದಕ್ಕೆ

ಜಗ್ಗಲಿಕ್ಕೆ ಬರುವದಿಲ್ಲ. ಮೂತ್ರಮಾರ್ಗದಲ್ಲಿಯೂ ವ್ರಣಗಳಾಗುವವು. ಯೋಗ್ಯ ಚಿಕಿತ್ಸೆಯಾಗಿ ವಿಷದ ನಿರ್ಮೂಲನವಾಗದಿದ್ದರೆ ೩।೪ ತಿಂಗಳಲ್ಲಿ ವಿಷವು ಮೈತುಂಬ ಹಬ್ಬಿ ಭೇದಿಸುವ ಭಾವನೆಗಳು ಕಂಡುಬರುತ್ತವೆ. ಸ್ವಲ್ಪಿಲ್ಲ ಸ್ವಲ್ಪ ಜ್ವರ ಬರುತ್ತದೆ. ರಕ್ತಕ್ಷೀಣತೆಯೆನಿಸುತ್ತದೆ. ಅದರಿಂದ ಮುಖವು ಕಗ್ಗಿ ಕಳೆಗುಂದಿದ ಹಾಗೆ ಕಾಣುತ್ತದೆ. ಕಣ್ಣುಗಳು ಕಳೆಯಿಲ್ಲದೆ ಹಳದೀ ಕಾಣಿಸುತ್ತವೆ. ತ್ವಚೆಯ ಮೇಲೆ ಕೆಂಪು ಬೊಕ್ಕೆಗಳು ಏಳುತ್ತವೆ. ಜೊಲ್ಲು ಸೋರುತ್ತದೆ. ಶ್ಲೇಷ್ಮಲ ತ್ವಚೆಯು ಕೆಂಪಗಾಗಿ ಬಾಯಿಯಲ್ಲಿ ಸಣ್ಣ ಸಣ್ಣ ಕೆಂಪು ಬೊಕ್ಕೆಗಳು ಏಳುತ್ತವೆ. ಕ್ಷತಗಳೂ ಬೀಳುತ್ತವೆ. ಕೂದಲೂ ಉಗುರೂ ಉದುರುತ್ತವೆ. ಕೆಲವು ಕಡೆಗೆ ಗ್ರಂಥಿಗಳು ಬಿರುಸಾಗಿದ್ದರೂ ನೋಯುವದಿಲ್ಲ. ಎಲುವಿನಲ್ಲಿಯೂ ಸಂದುಗಳಲ್ಲಿಯೂ ಬಹಳ ನೋಯುತ್ತದೆ. ರಾತ್ರಿಯಲ್ಲಿ ಹೆಚ್ಚಿಗೆ ನೋಯುತ್ತದೆ. ಅಸ್ಥಿಗಳ ಮೇಲೆ ಹುಣ್ಣುಗಳಾಗುತ್ತವೆ. ಎಲುವುಗಳು ಕೊಳೆತು ಕಳಚಿ ಬೀಳುತ್ತವೆ. ತ್ವಚೆ, ಸ್ನಾಯು (ಫುಪ್ಫುಸ, ಮಿದುಳು ಮೊದಲಾದ) ಇಂದ್ರಿಯಗಳ ಸ್ಥಳದಲ್ಲಿ ಗಂಟುಗಳಾಗುತ್ತವೆ. ಕಣ್ಣಿನ ಮೇಲೆಯೂ ಪರಿಣಾಮವಾಗಿ ದೃಷ್ಟಿನಾಶವು ಕೂಡ ಆಗುವದು. ಅಂಡವೃದ್ಧಿಯಾಗುವದು.

**ಕಾ. ಮೂ:—** ಶರೀರದಲ್ಲಿ ಈ ಕ್ಷಾರದ ಕೊರತೆಯಾದರೆ ಫಿಬ್ರಿನ್ ಎಂಬ ಪದಾರ್ಥವು ನಿಷ್ಕ್ರಿಯವಾಗಿ ಹರಿಯಲಾರಂಭಿಸುತ್ತದೆ. ನಾಜೂಕಾದ ಅಂತಸ್ತ್ವಚೆಯಲ್ಲಿ, ನಾಡಿಕಂದದಲ್ಲಿ, ಹಾಗು ಸೂಕ್ಷ್ಮರಕ್ತವಾಹಿನಿಗಳಲ್ಲಿ ಅದು ಸೇರಿಕೊಂಡು ಅಲ್ಲಿ ಕ್ಷೋಭವನ್ನು ಉಂಟುಮಾಡುತ್ತದೆ; ಮತ್ತು ಇಂದ್ರಿಯದ ಮೇಲೆ ಚಟ್ಟೆಗಳು ಬೀಳುತ್ತವೆಯೆಂದು ಜೀವನ ರಸಾಯನ ಶಾಸ್ತ್ರಜ್ಞರ ಅಭಿಪ್ರಾಯವಿರುತ್ತದೆ. ಕಾಲೀಮೂರ ಅಥವಾ ಪೊಟ್ಯಾಶಿಯಂ ಕ್ಲೋರಾಯಿಡ ಎಂಬುದೇ ಈ ರೋಗದ ಮೇಲೆ ಪ್ರಮುಖ ಔಷಧವೆಂದು ತಿಳಿಯಲ್ಪಡುತ್ತದೆ.

**ಫೇ. ಫಾ·—** ಉರುವು. ಕೆಂಪಾಗುವದು. ಒಂದೇಸವನೆ ಸಣ್ಣಾಗಿ ನೋಯುವದು. ಗೆಜ್ಜೆಯಲ್ಲಿ ಉಡುಚಾಗುವದು. ಸ್ಪರ್ಶವು ಸಹನವಾಗುವದಿಲ್ಲ. ಇಂಥವುಗಳಿಗೆ ಇದನ್ನು ಕೊಡಬೇಕು.

**ಕಾ. ಮೂ:—** ಪ್ರಮುಖ ಔಷಧವು. ಉಡುಚು ಬಾತಬಳಿಕ ಮೆತ್ತನ್ನ ವ್ರಣವಾಗುವವು. ಉಡುಚಿಗೂ ವ್ರಣಕ್ಕೂ ೩ × ಶಕ್ತಿಯ ಔಷಧವನ್ನು ಹೊರಗಿನಿಂದ ಲೇಪ ಮಾಡಬೇಕು. ಉಪದಂಶದಿಂದ ಒಸಡಿ ಯೊಳಗೆ ವ್ರಣವಾಗುವದು. ಬಹಳ ದಿವಸದ ಕಾವು. ಪಾರಜದಂತೆ ಈ ಔಷಧವಾದರೂ ಈ ರೋಗಕ್ಕೆ ಮದ್ದಾಗಿರುತ್ತದೆ. ಚಟ್ಟಿಯೊಳಗಿಂದ ಬೂದಿಬಣ್ಣದ ಸ್ರಾವವು ಹೋಗುತ್ತದೆ. ಮೂತ್ರದ ಕಾಲಕ್ಕೆ ವೇದನೆ ಯಾಗುವದು. ಕಾಲೀಮೂರದ ನೀರಿನಿಂದ ಇಂದ್ರಿಯವನ್ನು ಸ್ವಚ್ಛವಾಗಿ ತೊಳೆಯಬೇಕು.

**ನೇ. ಸ:—** ಉಪದಂಶದ ವಿಕಾರದಿಂದ ಆಗುವ ತ್ವಚಾಂತರ್ಗತ ರೋಗಗಳ ಮೇಲೆ. ವಿಶೇಷವಾಗಿ ಗುದದ್ವಾರದಲ್ಲಿ ನರೋಲಿಯಾಗುವದು. ಮೇಲಿನಿಂದಲೂ ಹಚ್ಚಬೇಕು.

**ನೇ ಮೂ:** - ಹಳೆಯ ಕಾವು. ಕೆಂಪು ನೀರು ಸೋರುವದು. ನೇಟ್ರಂಮೂರದ ಇತರ ಭಾವನೆಗಳಿದ್ದರೆ.

**ಕಾ. ಫಾ:—** ಬಹಳೇ ಹೊಲಸು ನಾರುವ ಹಾಗು ಕೊಳೆಯುವ ಹುಣ್ಣಾಗಿದ್ದರೆ.

**ಕಾ. ಸ:—**ಈ ಔಷಧದ ವಿಶಿಷ್ಟ ಲಕ್ಷಣಗಳಿಂದ ಕೂಡಿದ ಪ್ರಮೇಹ. ಭಾವನೆಗಳು ಸಾಯಂಕಾಲದಲ್ಲಿ ಹೆಚ್ಚು ಪ್ರಬಲವಾಗುತ್ತವೆ.

**ಸಿ:—** ಈ ಔಷಧವನ್ನು ಕೊಟ್ಟರೆ ಬೇಗನೆ ಕೀವಾಗಿ ಸೋರ ಹತ್ತುತ್ತದೆ. ಇದರ ಸಂಗಡ ಕಲ್ಕೆ. ಸಲ್ಫವನ್ನು ಕೊಡಬೇಕು. ಬಹಳ ದಿವಸದ ಕೀವವುಳ್ಳ ಉಪದಂಶ. ಮೇಲಿಂದಮೇಲೆ ಗಟ್ಟಿಯಾದ ಉಡುಚು ಗಳು ಏಳುತ್ತವೆ. ಪಾರಜವು ಹೆಚ್ಚಾದುದರಿಂದ ಆಗುವ ದುಷ್ಪರಿಣಾಮ ವನ್ನು ನಾಶಗೊಳಿಸುತ್ತದೆ. ತ್ವಚೆಯ ಮೇಲೆ ಉಪದಂಶದಿಂದ ವ್ರಣ ವಾಗುವದು. ಎಲುವಿಗೆ ಹುಳಹತ್ತಿ ಅದು ಕಳಚಿಬೀಳುವದು. ಮತ್ತು ಹೊಲಸು ಕೀವು ಸೋರುವದು.

**ಕಲ್ಕೆ ಸ:—** ಕೀವು ಬಹಳ ದಿವಸ ಸೋರುತ್ತಿದ್ದರೆ ಈ ಔಷಧವು ಅದನ್ನು ನಿಲ್ಲಿಸುತ್ತದೆ. ಇದರ ಸಂಗಡ ಸಿಲಿಕಾ ಕೊಡಬೇಕು.

**ಕಲ್ಕೆ. ಫ್ಲೊ:**— ಬಿರುಸಾಗಿದ್ದ ವ್ರಣ. ಎಲುವಿನ ಮೇಲಿನ ವ್ರಣ.

**ಉಪಯುಕ್ತ ಸೂಚನೆ:**— ಉಪದಂಶದ ಸಂಸರ್ಗವಾಗದಂತೆ ಜಾಗರೂಕರಾಗಿರಬೇಕು. ಉಪದಂಶದ ರೋಗಿಗಳ ಪಾತ್ರೆಯಲ್ಲಿ ಊಟ ಮಾಡಿದರೂ, ಅಥವಾ ಅಂಥವರ ಮುದ್ದು ತೆಗೆದುಕೊಂಡರೂ, ಕೆಟ್ಟ ಚಾಳಿ ಇಲ್ಲದವರಿಗೆ ಕೂಡ, ಈ ರೋಗವು ಆಗುವದುಂಟು.

---

# ಉಂಡುಕಪುಚ್ಛವಿದ್ರಧಿ

**Appendicitis.** **ಅಪೆಂಡಿಸಾಯಿಟಿಸ್.**

ಹೊಕ್ಕಳದ ಕೆಳಗೆ ಬಲಗಡೆಗೆ ನೋಯುತ್ತದೆ. ಸ್ಪರ್ಶವು ಸಹನವಾಗುವದಿಲ್ಲ. ಹೊಕ್ಕಳ ಮತ್ತು ಗೆಜ್ಜೆಯ ನಟ್ಟನಡುವೆ ಒಂದು ವಿಶಿಷ್ಟ ಸ್ಥಳದಲ್ಲಿ ಬಹಳ ನೋಯುತ್ತದೆ. ಏನೋ ಕಡಿದಂತೆ ವೇದನೆಯಾಗುವದು. ಜ್ವರವಿರುತ್ತದೆ. ಆ ಸ್ಥಳವು ಕೆಂಪಗೆ ಕಾಣುತ್ತದೆ. ಸ್ಪರ್ಶವು ಸಹನವಾಗುವದಿಲ್ಲ. ಅಲ್ಲಿ ಬಿಸಿ ಹತ್ತುತ್ತದೆ. ಆ ಸ್ಥಳದಲ್ಲಿ ಬಾವು ಇದ್ದು ಅದು ಮೆತ್ತಗಿರುತ್ತದೆ ಮತ್ತು ಸರಿದಾಡಿದಂತೆ ಕಾಣುತ್ತದೆ. ಒಮ್ಮೊಮ್ಮೆ ಅದು ಬಹಳ ಬಿರುಸಾಗಿರುತ್ತದೆ. ಈ ಸ್ಥಳದಲ್ಲಿ ಕುರುವು ಸಹ ಆಗುವ ಸಂಭವವುಂಟು. ಕೆಲವು ಸಾರೆ ವೇದನೆಯು ಬಹಳ ತೀವ್ರವಾಗುವದು, ಚುಚ್ಚಿದಂತಾಗುವದು, ಸಹನವಾಗುವದಿಲ್ಲ. ಸರಿದಾಡಿದರೆ ಅದು ಹೆಚ್ಚಾಗುತ್ತದೆ. ಅವರೋಧವೂ ಇರುತ್ತದೆ. ಶೌಚಕ್ಕೆ ಒಮ್ಮೊಮ್ಮೆ ತೆಳ್ಳಗೆ ಹಾಗು ಜಿಗಟು ಆಗುತ್ತದೆ. ಓಕರಿಕೆಯೂ ಇರುವದು. ಹೊಟ್ಟೆಯು ನಗಾರಿಯಂತೆ ಉಬ್ಬಿ ತೇಗು ಬರುವವು; ಬಿಕ್ಕು ಇರುವದು. ಮೂತ್ರಕ್ಕೆ ತ್ರಾಸವಾಗುತ್ತದೆ. ಇವೇ ಮುಂತಾದ ಲಕ್ಷಣಗಳಿರುತ್ತವೆ. ಈಚೆಯಲ್ಲಿ ಈ ಬೇನೆಯು ಬಹಳ ಹಬ್ಬಿರುತ್ತದೆ. ಶಸ್ತ್ರಕ್ರಿಯೆಯ ಹೊರತಾಗಿ ಇದಕ್ಕೆ ಬೇರೆ ಉಪಾಯವೇ ಇಲ್ಲವೆಂಬ ತಿಳುವಳಿಕೆಯು ಜನರಲ್ಲಿ ರೂಢವಾಗಿದೆ. ಆದರೆ ಹೊಟ್ಟೆಯಲ್ಲಿ ಔಷಧವನ್ನು ಕೊಟ್ಟು ಈ ರೋಗವನ್ನು ಸಂಪೂರ್ಣವಾಗಿ ನೆಟ್ಟಗೆ ಮಾಡಬಹುದು. ಭಾವನೆಗಳು ಕಂಡುಬಂದ ಕೂಡಲೆ

ಹನ್ನೆರಡು ಕ್ಷಾರಗಳ ಉಪಚಾರವನ್ನು ಮಾಡಿದರೆ ಬೇನೆಯು ಬೆಳೆಯದೆ ರೋಗಿಯು ನೆಟ್ಟಗಾಗುವನು. ಕುರುವು ಆಗುವ ಪ್ರಸಂಗವೇ ಬರುವದಿಲ್ಲ.

ಉಂಡಕದಲ್ಲಿ ಅಥವಾ ಉಂಡಕಪುಚ್ಛದಲ್ಲಿ ಮಲವಾಗಲಿ ಇತರ ಪದಾರ್ಥವಾಗಲಿ ನಿಂತುಕೊಂಡಿರುವದೇ ಈ ಬೇನೆಯ ಮುಖ್ಯ ಕಾರಣವು. ಆ ಸ್ಥಳಕ್ಕೆ ಪೆಟ್ಟು ಹತ್ತುವದು, ಭಾರ ಎತ್ತುವದು, ಅದೇಮೇರೆಗೆ ನ್ಯುಮೋನಿಯಾ, ಟಾಯಿಫಾಯಿಡ ಮುಂತಾದ ಕಾರಣಗಳ ಮೂಲಕ ಈ ಬೇನೆಯು ಬರಬಹುದು. ಸರ್ವಸಾಧಾರಣವಾಗಿ ೨೦ ವರ್ಷಕ್ಕಿಂತ ಕಡಿಮೆ ವಯಸ್ಸಿನ ಜನರಿಗೆ ಈ ಬೇನೆಯು ಹೆಚ್ಚಾಗಿ ಆಗುವದು.

**ಫೇ. ಫಾ:**— ಜ್ವರ, ಸೋವು, ಬಾವು, ನಾಡಿಯು ಬೇಗನೆ ಹಾರುವದು, ಮುಂತಾದ ದಾಹದ ಪ್ರಥಮಾವಸ್ಥೆಯಲ್ಲಿಯ ಭಾವನೆಗಳು.

**ಕಾ. ಮೂ:**— ದ್ವಿತೀಯಾವಸ್ಥೆ. ಬಾವು. ಸ್ಪರ್ಶವನ್ನು ತಾಳುವ ದಾಗುವದಿಲ್ಲ. ಸ್ರಾವವು ಆರಂಭವಾದ ಕಾಲಕ್ಕೆ. ಆ ಭಾಗವು ಬಿರುಸು ಹತ್ತುತ್ತಿದ್ದರೆ. ಸ್ರಾವದ ಲಕ್ಷಣಗಳು ಕಂಡುಬಂದ ಕೂಡಲೆ ಇದನ್ನು ಕೊಟ್ಟರೆ ಕೀವು ಆಗುವದಿಲ್ಲ. ಇದರ ಸಂಗಡ ಫೇರಂ ಫಾಸ ಕೊಡಬೇಕು. ಬಿಸಿನೀರಿನಲ್ಲಿ ಕಾಲೀ ಮೂರವನ್ನು ಹಾಕಿ ಸಿದ್ಧಮಾಡಿ ಅದರ ಬಸ್ತಿಯನ್ನು ಮೇಲಿಂದಮೇಲೆ ಕೊಡಬೇಕು.

**ಕಾ. ಸ:**— ಜೋರಿನಿಂದ ಚುಚ್ಚುವಂಥ ವೇದನೆಯಾಗುತ್ತಿದ್ದರೆ

**ಸಿ:**— ಕುರುವು ಆಗಿ ಕೀವು ತುಂಬಿದ್ದರೆ.

**ಕಲ್ಕೆ. ಸ:**— ಕಟಿಭಾಗದಲ್ಲಿ ಬಲಗಡೆಗೆ ವೇದನೆಯಾಗುತ್ತದೆ. ವ್ರಣ ಮುಂತಾದವುಗಳು ಆಗುತ್ತವೆ.

**ನೇ. ಸ:**— ಉಂಡುಕ ಭಾಗದಲ್ಲಿ ಸಣ್ಣಾಗಿ ಸೋಯುತ್ತದೆ. ಸ್ಪರ್ಶವು ಸಹನವಾಗುವದಿಲ್ಲ. ನಾಲಿಗೆಯ ಮೇಲೆ ಪುಟ ಬರುತ್ತದೆ. ವಾಯು ಒಂದು ಭಾಗದಿಂದ ಮತ್ತೊಂದು ಭಾಗಕ್ಕೆ ಸರಿಯುತ್ತದೆ. ಒಂದೇಸವನೆ ವಾಂತಿಯಾಗುತ್ತದೆ.

**ಕಲ್ಕೆ. ಫ್ಲೊ:**— ಹಳೆಯ ರೋಗದಲ್ಲಿ ಗಂಟು ಗಟ್ಟಿಯಾಗುತ್ತದೆ; ಒತ್ತಿದರೆ ನೋಯುತ್ತದೆ.

"ಕುರುಹು" ಎಂಬ ಸದರಿಸಲ್ಲಿಯ ಔಷಧಗಳನ್ನು ನೋಡಿರಿ.

**ಉಪಯುಕ್ತ ಸೂಚನೆ:—** ರೋಗದ ಲಕ್ಷಣವು ಕಂಡುಬಂದ ಕೂಡಲೆ ಫೇರಂಫಾಸವನ್ನು ಬಿಸಿನೀರಿನಲ್ಲಿ ಒಂದೇಸವನೆ ಕೊಡಬೇಕು. ಆ ಭಾಗದಲ್ಲಿ ಗಟ್ಟಿಯಾಗಿದ್ದು ನೋವಾಗಿ ದ್ವಿತೀಯಾವಸ್ಥೆಯು ಆರಂಭವಾಗಿದ್ದರೆ ಕಾಲೀಮೂರವನ್ನೂ ಕೊಡಬೇಕು. ಕೆಲವು ರೋಗಿಗಳಿಗೆ ಈ ರೋಗವು ಮೇಲಿಂದಮೇಲೆ ಆಗುತ್ತದೆ. ತಾತ್ಕಾಲಿಕ ಉಪಚಾರ ಮಾಡಿದರೆ ನಿಲ್ಲುತ್ತದೆ; ಕುಪಥ್ಯವಾದರೆ ಮತ್ತೆ ಆಗುತ್ತದೆ. ಹೀಗಾಗಿ ರೋಗವು ಹಳೆಯದಾಗುತ್ತದೆ. ರೋಗದ ಭರವಿದ್ದಕಾಲಕ್ಕೆ ಫೇರಂ ಫಾಸ ಹಾಗು ಕಾಲೀಮೂರ ಇವುಗಳನ್ನು ಕೊಡಬೇಕು. ಕುರುವು ಆಗಿ ಕೀವು ತುಂಬುತ್ತಿದ್ದರೆ ಸಿಲಿಕಾ ಮತ್ತು ಕಲ್ಕೆ. ಸಲ್ಫ ಇವುಗಳ ಉಪಯೋಗಮಾಡಬೇಕು. ವೇದನೆಯು ತೀವ್ರವಿದ್ದು ಉದರದ ಸ್ನಾಯುಗಳು ಬಿರುಸು ಹತ್ತುತ್ತಿದ್ದರೆ ಅಥವಾ ಹೊಟ್ಟೆಯಲ್ಲಿ ವಾಯು ತುಂಬಿಕೊಂಡಿದ್ದರೆ ೧×ಶಕ್ತಿಯ ಮ್ಯಾ. ಫಾ. ವನ್ನು ಕೊಡಬೇಕು. ಬಹಳ ದಿವಸದ ಮಲಾವರೋಧವಿದ್ದು ಶೌಚಕ್ಕೆ ಗಟ್ಟಿಯಾಗಿ ಆಗುತ್ತಿದ್ದರೆ ನೇಟ್ರಂ ಸಲ್ಫ ಕೊಡಬೇಕು. ಮಲಾವರೋಧದ ಪ್ರವೃತ್ತಿ ಇದ್ದುದರಿಂದಲೇ ಈ ರೋಗವು ಮೇಲಿಂದಮೇಲೆ ಆಗುವ ಸಂಭವವಿದೆ. ಮಲಾವರೋಧದ ಕಾಟವು ತಪ್ಪಿದರೆ ಈ ರೋಗವೂ ನಿಂತು ಬಿಡುವದು. ಬಹಳ ಅಶಕ್ತತೆಯಿದ್ದರೆ ನೇಟ್ರಂಮೂರ ಮತ್ತು ಕಾಲೀಫಾಸ ಇವುಗಳನ್ನು ಕೊಡಬೇಕು. ನಡುನಡುವೆ ಬಹಳ ಜ್ವರವು ಬರುವದು, ನಾಡಿಯು ಬೇಗನೆ ಹಾರುವದು, ಮುಂತಾದ ಭಾವನೆಗಳಿದ್ದರೆ ಕಾಲೀಫಾಸ ಮತ್ತು ಫೇರಂಫಾಸ ಇವುಗಳಿಂದ ಗುಣವಾಗುವದು. ಸಾಯಂಕಾಲದಲ್ಲಿ ಭಾವನೆಗಳು ಹೆಚ್ಚಾಗುತ್ತಿದ್ದರೆ ಕಾಲೀ ಸಲ್ಫವನ್ನು ಉಪಯೋಗಿಸಬೇಕು. ಕೊಳೆಯುವದು, ಕಳಚಿ ಬೀಳುವದು ಆರಂಭವಾಗಿದ್ದರೆ ಕಾಲೀಫಾಸವನ್ನು ಕೊಡಬೇಕು. ಕಲ್ಕೆ. ಫಾಸವನ್ನು ಶಕ್ತಿದಾಯಕವೆಂದು ನಡುನಡುವೆ ಕೊಡುತ್ತಿರಬೇಕು. ಪಥ್ಯದ ಬಗ್ಗೆ ವ್ಯವಸ್ಥೆಯನ್ನು ಬೇರೆ ದಾಹಯುಕ್ತ ರೋಗಗಳಲ್ಲಿಯಂತೆ ಇಡಬೇಕು. ಬಿಸಿ ಬಿಸಿ ಪೋಟೀಸ ಮಾಡಿ ನೋಯುತ್ತಿದ್ದ ಸ್ಥಳದಲ್ಲಿ ಕಟ್ಟಬೇಕು. ಬಿಸಿನೀರಿನ ಬಸ್ತಿ ಕೊಡಬೇಕು. ಮತ್ತು ಕುಡಿಯಲಿಕ್ಕೆ ಬಿಸಿ ನೀರು ಎಷ್ಟು ಬೇಕಾದಷ್ಟು ಕೊಡಬೇಕು.

---

# ಕಫಕ್ಷಯ

## Pulmonary Tuberculosis.

## ಪಲ್ಮನರಿ ಟ್ಯೂಬರಕ್ಯುಲೊಸಿಸ್.

ಸಾವಕಾಶವಾಗಿ ಶಕ್ತಿಕ್ಷೀಣವಾಗುತ್ತ ಸವೆಯುವದು, ಬಹುದಿವಸದವರೆಗೆ ಒಣಕೆಮ್ಮು ಬರುತ್ತಿರುವದು, ವಿಶೇಷವಾಗಿ ಸಾಯಂಕಾಲದಲ್ಲಿ ಜ್ವರವು ಸಣ್ಣಾಗಿ ಬರುವದು, ಇವು ಕಫಕ್ಷಯದ ಆರಂಭದ ಲಕ್ಷಣಗಳು. ಎದೆಯೊಳಗಿಂದ ರಕ್ತವು ಬೀಳುವದು, ಕಾರಣವಿಲ್ಲದೆ ಅಪಚನವಾಗುವದು, ಸ್ವಲ್ಪ ಶ್ರಮ ಮಾಡಿದರೂ ಅಶಕ್ತತೆ ಬರುವದು, ಮನಸ್ಸು ದಣಿಯುವದು, ಜಡವೆನಿಸುವದು, ಶರೀರದ ತೂಕವು ಕಡಿಮೆಯಾಗುವದು, ಪಂಡುರೋಗವಾಗುವದು, ನಾಡಿಯು ಬೇಗನೆ ಹಾರುವದು, ಇವಾದರೂ ಕಫಕ್ಷಯದ ಪೂರ್ವಾವಸ್ಥೆಯ ಚಿನ್ಹಗಳೇ. ಈ ಲಕ್ಷಣಗಳೆಲ್ಲ ಏಕಕಾಲಕ್ಕೆ ಇರುತ್ತವೆಂತಲ್ಲ. ಒಮ್ಮೆ ಕೆಲವು ಇದ್ದರೆ ಮತ್ತೊಮ್ಮೆ ಬೇರೆ ಕೆಲವು ಇರಬಹುದು. ಈ ರೋಗದ ನಿದಾನ ಮಾಡುವ ವಿಷಯದಲ್ಲಿ ಶರೀರದೊಳಗಿನ ಉಷ್ಣತೆಯ ಮಾಸವು ಒಂದು ಮಹತ್ವದ ಸಾಧನವಾಗಿದೆ. ಬಹುತರವಾಗಿ ದಿನಾಲು ಸ್ವಲ್ಪಿಲ್ಲ ಸ್ವಲ್ಪ ಜ್ವರವು ಬರುತ್ತಿದ್ದರೆ, ಶರೀರದಲ್ಲಿ ಎಲ್ಲಿಯಾದರೂ ಕ್ಷಯದ ಬೀಜವದೆ ಮತ್ತು ಅದು ಬೆಳೆಯಹತ್ತಿದೆ ಎಂದು ಸ್ಪಷ್ಟವಾಗಿ ತಿಳಿಯಬೇಕು. ಬಹುತರವಾಗಿ ಮುಂಜಾನೆ ಜ್ವರವು ತೀರ ಕಡಿಮೆಯಿರುತ್ತದೆ. ಮಧ್ಯಾನ್ಹದಲ್ಲಿಯಾಗಲಿ ರಾತ್ರಿಯಲ್ಲಿಯಾಗಲಿ ಅದು ಬೆಳೆಯುತ್ತ ಹೋಗುವದು. ಒಮ್ಮೊಮ್ಮೆ ಮುಂಜಾನೆ ಹೆಚ್ಚಾಗಿದ್ದು ಮಧ್ಯಾನ್ಹದಲ್ಲಿಯೂ ರಾತ್ರಿಯಲ್ಲಿಯೂ ಕಡಿಮೆಯಾಗುವದುಂಟು. ಕ್ಷಯದ ಸಂಶಯವು ಬರುತ್ತಿದ್ದರೆ, ಥರ್ಮಾಮಿಟರನ್ನು ಎರಡು ತಾಸಿಗೊಮ್ಮೆ ಹಚ್ಚಿ ಉಷ್ಣತೆಯ ಮಾಸವನ್ನು ತಿಳಿದುಕೊಳ್ಳಬೇಕು. ಒಮ್ಮೊಮ್ಮೆ ಮೊದಮೊದಲು ಸಾಯಂಕಾಲದಲ್ಲಿ ಚಳಿ ಮಾತ್ರ ಆಗುತ್ತದೆ; ಜ್ವರವು ಇರುವದೇ ಇಲ್ಲ. ಮುಂದೆ ಕೆಲವು ದಿವಸಗಳನಂತರ ಜ್ವರವೂ ಕಂಡುಬರುತ್ತದೆ. ರೋಗವು ಬೆಳೆಯುತ್ತ ಹೋದ ಹಾಗೆ ಬೆವರು ಬಿಡುತ್ತದೆ. ಬೆವರು ವಿಶೇಷವಾಗಿ ರಾತ್ರಿಯಲ್ಲಿ ಬಹಳ ಬರುತ್ತದೆ. ಅದರಿಂದ ರೋಗಿಯು ದಣಿದು ಹಿಂಡಿ ಹಿಪ್ಪಿಯಾಗುತ್ತಾನೆ.

ಕಫಕ್ಷಯವು ಫುಪ್ಫುಸದ ರೋಗವು. ಈ ರೋಗದಲ್ಲಿ ಫುಪ್ಫುಸದೊಳಗೆ ಆಗುವ ಹೆಚ್ಚು ಕಡಿಮೆಗಳಿಗೆ ಅನುಸರಿಸಿ ಸಾಧಾರಣವಾಗಿ ಮೂರು ಅವಸ್ಥೆಗಳನ್ನು ಕಲ್ಪಿಸಬಹುದು. ಪ್ರಥಮಾವಸ್ಥೆಯಲ್ಲಿ ಫುಪ್ಫುಸದಲ್ಲಿ ರಕ್ತ ಸಂಚಯವಾಗುತ್ತದೆ. ಸ್ವಲ್ಪ ಶ್ರಮಮಾಡಿದರೂ ದಣಿಯುವದು, ಮಾಂದ್ಯ ಬರುವದು, ಮುಂಜಾನೆ ಸ್ವಲ್ಪ ಒಣಕೆಮ್ಮು ಬರುವದು, ಒಮ್ಮೊಮ್ಮೆ ಎದೆಯೊಳಗಿಂದ ರಕ್ತವು ಬೀಳುವದು, ಪಂಡುರೋಗವಾಗುವದು, ಸಣ್ಣಾಗಿ ಜ್ವರವು ಬರುವದು, ಇವು ಕಫಕ್ಷಯದ ಪ್ರಥಮಾವಸ್ಥೆಯ ಲಕ್ಷಣಗಳು.

ದ್ವಿತೀಯಾವಸ್ಥೆಯಲ್ಲಿ ಫುಪ್ಫುಸಗಳು ಗಟ್ಟಿಯಾಗುತ್ತವೆ. ಈ ಫುಪ್ಫುಸಗಳು ಸ್ವಾಭಾವಿಕವಾಗಿ ಸ್ಪಂಜದಂತೆ ಛಿದ್ರಗಳಿದ್ದು ಮೆತ್ತಗಿರುತ್ತವೆ. ಆದರೆ ಬರಬರುತ್ತ ಅವು ಗಟ್ಟಿಯಾಗುತ್ತವೆ. ಈ ಅವಸ್ಥೆಯಲ್ಲಿ ರೋಗಿಯು ಬಹಳ ಅಶಕ್ತನಾಗುವನು. ಅವನು ಭರದಿಂದ ಸವೆಯುತ್ತಾನೆ. ಜ್ವರವು ಸಂಜೆಗೆ ಹೆಚ್ಚಾಗುವದು. ರಾತ್ರಿಯಲ್ಲಿ ಬೆವರು ಬಹಳ ಬರುವದು. ಪಂಡುರೋಗವು ಬೆಳೆಯುವದು. ಕೆಮ್ಮುವಾಗ ಕಫವು ಸಡಿಲಾಗುವದು.

ತೃತೀಯಾವಸ್ಥೆಯಲ್ಲಿ ಫುಪ್ಫುಸದ ಘಟಕಗಳು ಬೇರೆಬೇರೆಯಾಗುತ್ತವೆ. ಸಣ್ಣ ಛಿದ್ರಗಳು ಇಲ್ಲದಂತಾಗಿ ಅಲ್ಲಲ್ಲಿ ಪೊಳ್ಳು ಬೀಳುತ್ತದೆ. ದ್ವಿತೀಯಾವಸ್ಥೆಯೊಳಗಿನ ಎಲ್ಲ ಭಾವನೆಗಳು ಬಲಿಯುತ್ತವೆ. ಕೆಮ್ಮು ಕೆಮ್ಮು ಬಹಳ ತ್ರಾಸವಾಗುತ್ತದೆ. ಕೀವಿನಂಥ ಹಳದೀ ಬಣ್ಣದ ಕಫದ ಲೊಟ್ಟೆಗಳು ಪಾತ್ರೆಯ ತುಂಬ ಒಂದೇಸವನೆ ಬೀಳುತ್ತವೆ. ಕಫದ ಲೊಟ್ಟೆಯನ್ನು ನೀರಿನಲ್ಲಿ ಚಲ್ಲಿದರೆ ಅದು ನಾಣ್ಯದಂತೆ ದುಂಡಗಾಗುತ್ತದೆ. ( ಇದು ಕಫಕ್ಷಯದ ಲೊಟ್ಟೆಯ ವಿಶೇಷ ಲಕ್ಷಣವು ). ಕಫವು ಬಹಳ ಜಿಗಟಾಗಿಯೂ ಇರುವದುಂಟು. ಉಸಿರು ಹೊಲಸು ನಾರುತ್ತದೆ. ಎದೆಯೊಳಗಿಂದ ರಕ್ತವು ಬಹಳ ಬೀಳುತ್ತದೆ. ಜ್ವರವು ಹೆಚ್ಚಾಗಿದ್ದು, ಅದರ ಏರಿಳಿತಗಳಲ್ಲಿ ಬಹಳ ಅಂತರವಿರುತ್ತದೆ. ಸಂಗ್ರಹಣಿಯ ವಿಕಾರವೂ ಒಮ್ಮೊಮ್ಮೆ ಕಂಡುಬರುತ್ತದೆ. ಜುಲಾಬು ಬಹಳಾಗುತ್ತವೆ. ಮತ್ತು ಅವು ಬಹಳ ಹೊಲಸು ನಾರುತ್ತವೆ. ಹೊಟ್ಟೆಯಲ್ಲಿ ಗುರುಗುರು ಸಪ್ಪಳಾಗಿ ಅಥವಾ ಕಳೆಯುಂಟಾಗಿ ಬಳಿಕ ಶೌಚಕ್ಕೆ ಆಗುವದು. ರೋಗಿಯು ತೀರ

ಕ್ಷೀಣವಾಗಿ ಕೇವಲ ಅಸ್ಥಿಪಂಜರದಂತೆ ಕಾಣಿಸುತ್ತಾನೆ. ಕಾಲಿಗೆ ಬಾವು ಬರುತ್ತದೆ. ರೋಗಿಗೆ ಕೊನೆಯ ವರೆಗೂ ಎಚ್ಚರ ತಪ್ಪುವದಿಲ್ಲ.

ಈ ಮೂರೂ ಅವಸ್ಥೆಗಳಲ್ಲಿ ಹಸಿವೆಯು ಮಂದವಾಗುವದು, ಅಜೀರ್ಣದ ಚಿನ್ಹಗಳು ಕಾಣುವದು, ನಾಡಿಯು ಭರದಿಂದ ಸಾಗುವದು, ಮ್ಲಾನವೆನಿಸುವದು, ಮನಸ್ಸಿಗೆ ಸೊಗಸೇ ಇರದಿರುವದು, ಕೆಮ್ಮಿನ ಉಪದ್ರವದ ಮೂಲಕ ನಿದ್ದೆಯು ಬರದಿರುವದು, ಶರೀರದ ತೂಕವು ಕ್ರಮವಾಗಿ ಕಡಿಮೆಯಾಗುವದು, ಸ್ವಲ್ಪ ನಡೆದರೂ ಎದೆಯಲ್ಲಿ ಡಡಡಡಿಸುವದು, ದಮ್ಮು ಬರುವದು, ಶ್ವಾಸೋಚ್ಛ್ವಾಸವು ಹೆಚ್ಚಾಗುವದು, ಹೆಂಗಸರು ಮುಟ್ಟು ಆಗದಿರುವದು, ಮುಂತಾದ ಲಕ್ಷಣಗಳು ಹೆಚ್ಚು ಕಡಿಮೆ ಪ್ರಮಾಣದಲ್ಲಿ ಇರುತ್ತವೆ.

ಪ್ರಥಮಾವಸ್ಥೆಯಲ್ಲಿ ಸರಿಯಾದ ಚಿಕಿತ್ಸೆಯನ್ನು ಮಾಡಿದರೆ ರೋಗಿಯು ಬಹುಮಟ್ಟಿಗೆ ನೆಟ್ಟಗಾಗುತ್ತಾನೆ. ಪ್ರಥಮಾವಸ್ಥೆಯ ಲಕ್ಷಣಗಳಿದ್ದ ರೋಗಿಯು ವರ್ಷಗಟ್ಟಲೆ ಬದುಕಬಹುದು. ಆದರೆ ದ್ವಿತೀಯಾವಸ್ಥೆಗೆ ಮುಟ್ಟಿದ ರೋಗಿಯು ಬದುಕುವದು ಮಾತ್ರ ಕಠಿಣವಿರುತ್ತದೆ. ತೃತೀಯಾವಸ್ಥೆಯಲ್ಲಿ ಆತನು ಬದುಕುವದು ಅಶಕ್ಯವೇ ಸರಿ. ರೋಗವು ಆರಂಭವಾದನಂತರ ಅದು ಮೂರನೆಯ ಅವಸ್ಥೆಗೆ ಮುಟ್ಟಲಿಕ್ಕೆ ಒಂದೆರಡು ವರ್ಷಕ್ಕಿಂತ ಹೆಚ್ಚು ಕಾಲವು ಬೇಕು. ಆದರೆ ಒಮ್ಮೊಮ್ಮೆ ರೋಗದ ಜೋರು ಬಹಳವಾಗಿ ರೋಗಿಯು ಮೂರು ನಾಲ್ಕು ತಿಂಗಳೊಳಗಾಗಿ ಮೃತ್ಯುವಿನ ಪಾಲಾಗುತ್ತಾನೆ. ಈ ರೋಗವು ಆನುವಂಶಿಕವಿರುತ್ತದೆ. ಅದು ಸಂಸರ್ಗಜನ್ಯವೂ ಇರುತ್ತದೆ. ಕ್ಷಯದಿಂದ ಬಳಲುವ ಆಕಳು ಎಮ್ಮೆಗಳ ಹಾಲು ಕುಡಿದವರಿಗೆ ಕೂಡ ಅದು ಆಗುವದುಂಟು. ನ್ಯುಮೋನಿಯಾ, ಪ್ಲೂರಿಸಿ, ಈ ರೋಗಗಳಾದನಂತರ ಶರೀರದಲ್ಲಿ ಕ್ಷಯ ರೋಗದ ಸ್ಥಾಪನೆಯಾಗುವದು. ಸ್ವಚ್ಛ ಹವೆಯಿಲ್ಲದ ಕತ್ತಲೆಯ ಸ್ಥಳದಲ್ಲಿ ಇರುವದು, ತಿನ್ನಲಿಕ್ಕೆ ಸಾಕಷ್ಟು ಅನ್ನವು ಸಿಗದಿರುವದು, ಬಹಳ ದಿವಸ ಚಿಂತೆ ಮಾಡುವದು, ಶಾರೀರಿಕ ಇಲ್ಲವೆ ಮಾನಸಿಕ ಶ್ರಮವನ್ನು ಬಹಳ ಮಾಡುವದು, ಬಹಳ ನಿದ್ದೆ ಕಟ್ಟುವದು, ಸ್ತ್ರೀಸಂಗ ಬಹಳ ಮಾಡುವದು,

ಚಿಕ್ಕ ವಯಸ್ಸಿನಲ್ಲಿ ಸ್ತ್ರೀಸಂಗಕ್ಕೆ ಆರಂಭ ಮಾಡುವದು. ಮುಷ್ಟಿಮೈಥುನ, ಉಪದಂಶ, ಮಿದುಳಿನ ರೋಗ, ಇವೆಲ್ಲ ಕ್ಷಯರೋಗದ ಕಾರಣಗಳೇ.

ತೂಕವು ಬೆಳೆಯುವದು, ಜ್ವರವು ಕಡಿಮೆಯಾಗುವದು, ಹಸಿವೆಯಾಗುವದು, ಉಂಡ ಅನ್ನವು ಪಚನವಾಗುವದು, ಪಂಡುರೋಗವು ನಾಶವಾಗುವದು, ಅಶಕ್ತತೆಯೂ ದಣುವಿಕೆಯೂ ಅನಿಸದಿರುವದು, ಇವು ಶುಭಚಿನ್ಹಗಳೆಂದು ತಿಳಿಯಬೇಕು.

**ಫೇ. ಫಾ:—** ಜ್ವರವು ಬರುವದು; ಮುಖವು ಕೆಂಪಾಗುವದು; ಶ್ವಾಸೋಚ್ಛ್ವಾಸವು ಮೆಲ್ಲಗೆ ಮತ್ತು ಕಷ್ಟದಿಂದ ಆಗುವದು; ಬಹಳ ಮಾತಾಡಿದರೆ ದನಿ ಕೂಡುವದು; ಕೆಮ್ಮು ಬಯಲು ಹವೆಯಲ್ಲಿ ಹೆಚ್ಚಾಗುತ್ತದೆ; ಒಣ ಕೆಮ್ಮು ಹಾಗು ಗಂಟಲಿನಲ್ಲಿ ತುರಿಸಿ ಒಂದೇಸವನೆ ಬರುವ ಕೆಮ್ಮು; ಎದೆಯಲ್ಲಿ ನೋಯುವದು; ಫುಪ್ಫುಸದೊಳಗಿಂದ ರಕ್ತಸ್ರಾವವಾಗುವದು; ರಕ್ತಮಿಶ್ರಿತ ಕಫವು ಬಿದ್ದಕೂಡಲೆ ಈ ಔಷಧವನ್ನು ಕೊಡಲು ಆರಂಭ ಮಾಡಿದರೆ ರೋಗವೃದ್ಧಿಯಾಗದೆ ಸಮಾಧಾನವಾಗುವದು. ಪ್ರಥಮಾವಸ್ಥೆಯಲ್ಲಿ ಇದು ಹೆಚ್ಚು ಉಪಯುಕ್ತವಾಗಿದೆ.

**ಕಲ್ಕೆ. ಫಾ:—** ಕಫಕ್ಷಯದ ಪ್ರಥಮಾವಸ್ಥೆಯಲ್ಲಿಯ ಅಶಕ್ತತೆ. ನವೆಯುವದು. ತತ್ತಿಯೊಳಗಿನ ಬಿಳಿಯ ಅಂಟಿನಂಥ ಸ್ವಚ್ಛವಾದ ಕಫವು. ಬಹಳ ಹಳೆಯ ಕೆಮ್ಮು. ಬೇರೆ ಔಷಧಗಳ ಸಂಗಡ ನಡುನಡುವೆ ಕೊಡಬೇಕು. ಪಚನಶಕ್ತಿಯು ಮಂದವಿರುವದು. ಬೆವರು ಬಹಳ ಬಿಡುತ್ತದೆ. ಅದು ತಲೆಗೆ ಹಾಗು ಕುತ್ತಿಗೆಗೆ ಮಾತ್ರ ಬಿಡುತ್ತದೆ. ಕ್ಷಯರೋಗದಲ್ಲಿ ಕೈಕಾಲುಗಳು ತಣ್ಣಗಾಗುತ್ತವೆ. ರಾತ್ರಿಯಲ್ಲಿ ಬಿಡತಕ್ಕ ಬೆವರಿನ ಮೇಲೆ ಇದರ ಉಪಯೋಗವಾಗುವದು. ದನಿಯು ಗೊಗ್ಗರಾಗುವದು. ಮೇಲಿಂದಮೇಲೆ ಬಿಕ್ಕುಬರುವದು. ಉಸುರು ಕಟ್ಟುವದು. ಕ್ಷಯರೋಗದ ಅತಿಸಾರವು. ಕ್ಷಯದ ಲಕ್ಷಣಗಳಿದ್ದು ಗುದದ್ವಾರದಲ್ಲಿ ಭಗಂದರವಾಗಿದ್ದರೆ ಅಥವಾ ಯಾವದಾದರೊಂದು ಕಾರಣದಿಂದ ಅದು ಮಾಯಿಕೊಂಡಂತೆ ಕಾಣಿಸಿ ಕ್ಷಯದ ಬೇರೆ ಲಕ್ಷಣಗಳಿದ್ದರೆ ಈ ಔಷಧದಿಂದ ವಿಶೇಷ ಉಪಯೋಗವಾಗುವದು.

**೩:—** ಕ್ಷಯದ ಮೇಲಿನ ಮಹತ್ವದ ಔಷಧವು. ರಾತ್ರಿಯಲ್ಲಿ ಬೆವರು ಬಹಳ ಬಿಡುವದು. ಗಂಟಲದಲ್ಲಿ ತುರಿಸಿದಂತಾಗಿ ರಾತ್ರಿಯಲ್ಲಿ ಕೆಮ್ಮು ಹೆಚ್ಚಾಗಿ ಬರುವದು. ಕಾಲಿಗೆ ಹೊಲಸು ಬೆವರು ಬಿಡುವದು. ಮಲಾವರೋಧ. ಹಸಿ ಕೆಮ್ಮು, ಗಂಟಲಿನಲ್ಲಿ ಘುರಘುರ ಸಪ್ಪಳಾಗುವದು. ದಟ್ಟನ್ನ, ಹಳದಿ, ಹಸರು, ಕೀವವುಳ್ಳ ಹೊಲಸು ಕಫವು ಬಹಳ ಬೀಳು ವದು. ಜೀರ್ಣಜ್ವರವು ಬರುವದು. ಅಂಗಾಲು ಉರಿಯುವದು. ಬಾಯಿಗೆ ರುಚಿಯಿಲ್ಲ. ಹಸಿವೆಯಾಗುವದಿಲ್ಲ. ರೋಗಿಯು ಅಶಕ್ತನಿರುತ್ತಾನೆ; ಯಾವಾಗಲು ಮೈಯಲ್ಲಿ ಬಟ್ಟೆಯನ್ನು ಹಾಕಿಕೊಳ್ಳಬೇಕು; ಇಲ್ಲದಿದ್ದರೆ ಚಳಿಯಾಗುವದು. ಕ್ಷಯರೋಗದಲ್ಲಿ ಆಗುವ ಯಾವತ್ತು ಭಾವನೆಗಳು ಸಿಲಿಕಾದಲ್ಲಿ ಇರುತ್ತವೆ. ಆದುದರಿಂದ ಆನುವಂಶಿಕ ಪ್ರಕೃತಿಯ ದೋಷ ಗಳ ಮೇಲೆ ಇದರ ಉಪಯೋಗವು ಬಹಳಾಗುವದು. ರೋಗಿಯು ಹುಟ್ಟಿದಂದಿನಿಂದ ಕ್ಷಯದ ಪ್ರಕೃತಿಯವನಿದ್ದರೆ, ಅಥವಾ ಅವನಲ್ಲಿ ಆನು ವಂಶಿಕ ಬೀಜವಿದ್ದು ಅದು ಮುಂದೆ ಎಂದಾದರೂ ಬೆಳೆಯುವ ಸಂಭವವಿದ್ದರೆ, ಹೆಚ್ಚು ಶಕ್ತಿಯ (ಅಂದರೆ ೨೦೦ × ಶಕ್ತಿಯ ಅಥವಾ ಅದಕ್ಕಿಂತ ಹೆಚ್ಚಿನ ಶಕ್ತಿಯ) ಸಿಲಿಕಾವನ್ನು ಆತನಿಗೆ ಕೊಡುತ್ತಿರಬೇಕು. ರೋಗದ ಕೊನೆಯ ಅವಸ್ಥೆಯಲ್ಲಿ ಕೂಡ ಹೆಚ್ಚು ಶಕ್ತಿಯ (೧೦೦೦ × ಶಕ್ತಿಯ) ಔಷಧವನ್ನು ಕೊಟ್ಟದ್ದರಿಂದ ರೋಗಿಗೆ ಸಮಾಧಾನವಾದ ಉದಾಹರಣಗಳಿವೆ.

**ಕಲ್ಕೆ. ಸ:—** ಕೀವವುಳ್ಳ ಕಫವು ಸುಲಭವಾಗಿ ಬೀಳುತ್ತದೆ. ಒಮ್ಮೊಮ್ಮೆ ಕಫದಲ್ಲಿ ರಕ್ತವೂ ಬೀಳುತ್ತದೆ. ಗಂಟಲಿನಲ್ಲಿ ಘುರಘುರ ಸಪ್ಪಳಾಗಿ ಹಸರು, ಹಳದೀ ಕಫವು ಬೀಳುತ್ತಿದ್ದರೆ ಇದರ ಉಪಯೋಗ ವಾಗುವದು.

**ಕಾ. ಸ:—** ಕಫವು ತೆಳ್ಳಗೆ ಹಳದೀ ಇರುತ್ತದೆ. ಎಷ್ಟೋ ಸಾರೆ ಅದು ಹೊರಗೆ ಬೀಳುವದಿಲ್ಲ; ಗಂಟಲಿನಿಂದ ಹೊಟ್ಟೆಯೊಳಗೆ ನುಂಗಲ್ಪಡು ತ್ತದೆ. ತ್ವಚೆಯು ಒಣಗಿ ಹುರಬರಕಾಗುತ್ತದೆ. ಸಾಯಂಕಾಲದಲ್ಲಿ ಜ್ವರವು ಬರುವದು.

**ಕಾ. ಮು:—** ಕಫವು ಬೆಳ್ಳಗೆ ದಟ್ಟಾಗಿರುತ್ತದೆ. ನಾಲಿಗೆಯ ಮೇಲೆ ಬಿಳಿಯ ಅಥವಾ ಬೂದಿಬಣ್ಣದ ಪುಟ ಬರುತ್ತದೆ.

**ನೇ. ಮೂ:—** ಕಫವು ಹಸಿಯಾಗಿರುತ್ತದೆ. ಗಂಟಲಿನಲ್ಲಿ ಘರ ಘರ ಸಪ್ಪಳಾಗುತ್ತದೆ. ತಿಳಿನೀರಿನಂಥ ಕಫವು ಬೀಳುತ್ತದೆ; ಒಮ್ಮೊಮ್ಮೆ ರಕ್ತವೂ ಬೀಳುತ್ತದೆ. ರಕ್ತಸ್ರಾವವಿದ್ದ ರೋಗಿಗೆ ಫೇರಂಫಾಸದ ಸಂಗಡ ಈ ಔಷಧವನ್ನೂ ದೊಡ್ಡ ಪ್ರಮಾಣದಲ್ಲಿ ಕೊಡಬೇಕು. ಹಗಲು ಸುಸ್ತಿ ಇರುಳು ಅಸ್ವಸ್ಥತೆ ಇರುತ್ತದೆ. ಸ್ವಲ್ಪ ಶ್ರಮ ಮಾಡಿದರೂ ದಣಿವು ಬರುತ್ತದೆ. ಬಹಳ ದಿವಸದ ನೆಗಡಿಯಿರುತ್ತದೆ. ನಾಲಿಗೆಗೆ ರುಚಿಯೂ ಮೂಗಿಗೆ ವಾಸವೂ ಇರುವದಿಲ್ಲ. ಇದು ಸಮುದ್ರದಂಡೆಯ ಕ್ಷಾರ ಹವೆಯಲ್ಲಿ ಹೆಚ್ಚಾಗುವದು. ಬಹಳ ಹಳೆಯ ಕೆಮ್ಮು. ಕಫವು ಬುರುಗಿನಂತೆ ಬೀಳುತ್ತದೆ.

**ಕಾ. ಫಾ:—** ಎದೆಯಲ್ಲಿ ದಡದಡಿಸುವದು. ಹೃದಯದ ಕ್ರಿಯೆಯು ಅನಿಯಮಿತವಾಗಿ ನಡೆಯುತ್ತದೆ. ಉಸಿರು ಮೆಲ್ಲಗೆ ಸಾಗುತ್ತದೆ. ತೀರ ಸೋತಂತೆ ಅನಿಸುತ್ತದೆ. ನಿದ್ರೆ ಹತ್ತುವದಿಲ್ಲ. ಹೊಲಸು, ಕೊಳೆತ ಕಫವು ಬೀಳುತ್ತದೆ.

**ನೇ. ಸ:—** ಪಿತ್ತದ ಭಾವನೆಯಿರುವದು. ಎದೆಯಲ್ಲಿ ಕಲಿಸಿದಂತಾಗುವದು. ಹಸರು, ಹಳದಿ, ಕೀವವುಳ್ಳ ಕಫವು ಬೀಳುವದು. ಎಡಗಡೆಯ ಫುಪ್ಫುಸದ ಕೆಳಭಾಗವು ಕೆಟ್ಟಿರುತ್ತದೆ.

**ಉಪಯುಕ್ತ ಸೂಚನೆ:—** ಕ್ಷಯದ ರೋಗಿಯು ಸ್ವಚ್ಛವಾದ ಒಣ ಹವೆಯುಳ್ಳ ಸ್ಥಳದಲ್ಲಿ ಇರಬೇಕು. ಆದಷ್ಟು ಮಟ್ಟಿಗೆ ಬಯಲು ಹವೆಯಲ್ಲಿಯೇ ಇರಬೇಕು. ರಾತ್ರಿಯಲ್ಲಿ ಕೂಡ ಹವೆಯಾಡುವ ಸ್ಥಳದಲ್ಲಿಯೇ ಮಲಗಬೇಕು. ಉಣ್ಣೆಯ ಬಟ್ಟೆಗಳನ್ನು ಉಡಬೇಕು. ಮೇಲಿಂದ ಮೇಲೆ ನೆಗಡಿಯಾಗದಂತೆ ಎಚ್ಚರಪಡಬೇಕು. ಕ್ಷಯದ ರೋಗಿಗಳಿಗೆ ಸೂರ್ಯನ ಕಿರಣಗಳ ಉಪಯೋಗವು ಬಹಳಾಗುವದು. ರೋಗಿಯು ಮುಂಜಾವಿನ ಎಳೆ ಬಿಸಿಲಿನಲ್ಲಿ ಕುಳಿತು ಸೂರ್ಯಕಿರಣಗಳ ಉಪಯೋಗ ಮಾಡಿಕೊಳ್ಳಬೇಕು. ಶೌಚವು ಸರಿಯಾಗಿ ಆಗಬೇಕೆಂದು ಬಿಸಿನೀರಿನ ಬಸ್ತಿಯನ್ನು ಮೇಲಿಂದ ಮೇಲೆ ತೆಗೆದುಕೊಳ್ಳಬೇಕು. ಪೌಷ್ಟಿಕವಾದ ಹಾಗು ಹಗುರಾದ ಅನ್ನವನ್ನೇ ಉಣ್ಣಬೇಕು. ಉಣ್ಣುವಾಗ ನೀರು

ಕುಡಿಯಬಾರದು. ಊಟವಾದ ಬಳಿಕ ಒಂದೆರಡು ತಾಸು ಬಿಟ್ಟು ಬೇಕಾದಾಗ ನೀರು ಕುಡಿಯಬಹುದು. ಒಂದೇ ಕಾಲಕ್ಕೆ ಬಹಳ ತಿನ್ನ ಬಾರದು. ಸರತಿಗೆ ಸ್ವಲ್ಪಸ್ವಲ್ಪದಂತೆ ಹೆಚ್ಚು ತಿಂದರೂ ಅಡ್ಡಿಯಿಲ್ಲ. ಆದರೆ ಅಜೀರ್ಣವಾಗುವಷ್ಟು ತಿನ್ನಬಾರದು. ದಿನಾಲು ಊಟವಾದ ಬಳಿಕ ನೆಲಗಡಲೆಯ (ಸೇಂಗಾದ) ಕಾಳುಗಳನ್ನು ಕಬ್ಬಿಣ ಹಂಚಿನ ಮೇಲೆ ಹುರಿದು ಉಪ್ಪು ಹಚ್ಚಿ ತಿನ್ನಬೇಕು. ಅದರಿಂದ ಕ್ಷಯರೋಗಿಗೆ ಬಹಳ ಲಾಭವಾಗುವದು. ಇದು ಬಡವರ "ಕಾಡ್ಲಿವ್ಹರ ಆಯಿಲ" ಎಂದು ಬಲ್ಲವರ ಅಭಿಪ್ರಾಯವಿದೆ. ಪ್ರಾಣಾಯಾಮದಿಂದಲೂ ಬಹಳ ಲಾಭ ವಾಗುವದು. ದಿನಾಲು ನಿಯಮದಿಂದ ಸ್ವಲ್ಪ ಸ್ವಲ್ಪ ಹಗುರಾದ ವ್ಯಾಯಾಮ ಮಾಡುತ್ತಿರಬೇಕು. ಭಾವನಾನುಸಾರವಾಗಿ ಉಪಯೋಗ ವಾಗುವ ಔಷಧಗಳನ್ನು ಆ ಭಾವನೆಗಳು ನಿಂತಬಳಿಕಲೂ ಮುಂದೆ ಕೆಲವು ದಿವಸ ತೆಗೆದುಕೊಳ್ಳುವದು ಅವಶ್ಯವಿರುತ್ತದೆ.

ಕಫಕ್ಷಯವು ಸಾಂಸರ್ಗಿಕ ರೋಗವು. ಈ ರೋಗದ ಸಂಸರ್ಗವು ಕುಟುಂಬದ ಬೇರೆ ಜನರಿಗೆ ಆಗದಂತೆ ಆದಷ್ಟು ಮಟ್ಟಿಗೆ ಎಚ್ಚರಪಡಬೇಕು. ರೋಗಿಯ ಶ್ವಾಸವು ಪ್ರತ್ಯಕ್ಷ ತಮ್ಮ ಮೈಮೇಲೆ ಬರುವಂತೆ ಅವನ ಹತ್ತರ ಕುಳಿತುಕೊಳ್ಳಬಾರದು. ಫಿನಾಯಿಲ, ಪೊಟ್ಯಾಶ ಪರಮ್ಯಾಂಗನೇಟ ಮುಂತಾದ ಜಂತುಘ್ನ ಪದಾರ್ಥಗಳನ್ನು ಹಾಕಿದ ನೀರಿನಲ್ಲಿ ರೋಗಿಯ ಕಫವು ಬೀಳುವಂತೆ ವ್ಯವಸ್ಥೆ ಇಡಬೇಕು. ರೋಗಿಯ ಊಟದ ಹಾಗು ಮಲಮೂತ್ರದ ಪಾತ್ರೆಗಳನ್ನು ಇಂಥ ನೀರಿನಿಂದಲೇ ಸ್ವಚ್ಛವಾಗಿ ತೊಳೆಯ ಬೇಕು. ಆತನ ಬಟ್ಟೆಗಳನ್ನೂ ಪಾತ್ರೆಗಳನ್ನೂ ಒತ್ತಟ್ಟಿಗೆ ಇಡಬೇಕು. ಅವುಗಳನ್ನು ಮನೆಯಲ್ಲಿಯ ಬೇರೆ ಕೆಲಸಕ್ಕೆ ಉಪಯೋಗ ಮಾಡಬಾರದು. ರೋಗಿಯ ಬಟ್ಟೆಗಳನ್ನು ಬಿಸಿನೀರಿನಲ್ಲಿ ಕುದಿಸಿ ತೆಗೆಯಬೇಕು. ರೋಗಿಯ ಹತ್ತರ ಸುತ್ತುಮುತ್ತಲು ಆದಷ್ಟು ಮಟ್ಟಿಗೆ ಸ್ವಚ್ಛತೆಯಿಡಬೇಕು. ಆತನ ಕಫದ ಮೇಲೆಯೂ ಮಲದ ಮೇಲೆಯೂ ನೊಣಗಳಿಗೆ ಕೂಡಗೊಡ ಬಾರದು.

"ಕ್ಷಯರೋಗ"ವೆಂಬ ಸದರು ನೋಡಿರಿ.

---

# ಟೊಂಕಸೂಲಿ

**Backache.** ಬ್ಯಾಕ್ ಏಕ.

ಅವರೋಧ, ಮೂಲವ್ಯಾಧಿ, ಮುಟ್ಟಿನ ಸಂಬಂಧದ ರೋಗಗಳು, ಸಳುಕು ಹಿಡಿಯುವದು, ಸಂಧಿವಾತ ಮುಂತಾದವುಗಳ ಮೂಲಕ ಟೊಂಕದಲ್ಲಿ ನೋವು ಆಗುವದು.

**ಸಿ:—** ಬೆನ್ನುಹುರಿಯು ನಡುವೆ ಯಾವಾಗಲು ಕಳೆ ಬರುವದು. ಸುಮ್ಮನೆ ಬಿದ್ದುಕೊಂಡಿರದೆ ಗತಿಯೇ ಇಲ್ಲ. ನಿಂತು ನಿಂತು ಬೆನ್ನು ಬಿಗಿಯುತ್ತದೆ.

**ಕಲ್ಕೆ. ಫ್ಲೊ:—** ಬದ್ಧಕೋಷ್ಠ. ಬೆನ್ನಿನ ಕೆಳಭಾಗವು ನೋಯುತ್ತದೆ. ಮೈಯಲ್ಲಿ ಜಾಡ್ಯವಿರುತ್ತದೆ; ಸೋತಂತೆಯೂ ಅನಿಸುತ್ತದೆ. ಅಲ್ಲಾಡುವದರಿಂದ ಮೊದಲು ತೊಂದರೆಯಾಗುತ್ತದೆ; ನಡೆಯಹತ್ತಲು ಅದು ಕಡಿಮೆಯಾಗುತ್ತದೆ.

**ನೇ. ಮ್ಯೂ:—** ಗಟ್ಟಿಯಾದ ಸ್ಥಳದಲ್ಲಿ ಮಲಗಿದರೆ ನೆಟ್ಟಗೆನಿಸುತ್ತದೆ. ಟೊಂಕದಲ್ಲಿ ಕಸುವೇ ಇರುವದಿಲ್ಲ. ಮುಂಜಾನೆ ಹೆಚ್ಚು ತಾಪವಾಗುತ್ತದೆ. ಬಹಳ ದಣುವಿಕೆಯೂ ಬೇಸರಿಕೆಯೂ ಬರುತ್ತದೆ. ಗೋಣು ಸಣ್ಣಾಗಿದ್ದು ಮಣಿಯುವದಿಲ್ಲ.

**ನೇ. ಸ:—** ಬೆನ್ನುಹುರಿಯು ಎಲ್ಲ ಕಡೆಗೆ ನೋಯುತ್ತದೆ. ರಾತ್ರಿ ಬೆಳತನಕ ಸಟಸಟ ಹೊಡೆಯುತ್ತದೆ. ಬಲಮಗ್ಗಲಾಗಿಯೇ ಮಲಗಬೇಕು.

**ನೇ. ಫಾ:—** ಮುಂಜಾವಿನಲ್ಲಿ ಹಾಸಿಗೆಯಿಂದ ಎದ್ದಕೂಡಲೆ ಬೆನ್ನುಹುರಿಯು ಕೊನೆಯು ಭಾಗದಲ್ಲಿ ನೋಯುತ್ತದೆ.

**ಫೇ. ಫಾ:—** ಅಲ್ಲಾಡುವಾಗ ನೋಯುತ್ತದೆ. ಎಷ್ಟೋಸಾರೆ ಈ ರೋಗಕ್ಕೆ ಈ ಔಷಧದಿಂದ ಬಹಳ ಉಪಯೋಗವಾಗುತ್ತದೆ. ಮೂತ್ರಪಿಂಡದ ಸ್ಥಳದಲ್ಲಿಯೂ, ಟೊಂಕದಲ್ಲಿಯೂ, ಬೆನ್ನಿನಲ್ಲಿಯೂ ಫೇರಂಫಾಸದ ಉಪಯೋಗವಾಗದಿದ್ದರೆ ಫೇರಂಫಾಸದ ನಂತರ ಕಾಲೀಮೂರ ಕೊಡಬೇಕು.

**ಕಾ. ಫಾ:—** ನೋಯುತ್ತಿದ್ದ ಸ್ಥಳದಲ್ಲಿ ಅಶಕ್ತತೆಯೂ ಸೆಟೆದಂತೆಯೂ ಇರುವದು. ಮೆಲ್ಲಮೆಲ್ಲಗೆ ನಡೆದರೆ ಅದು ಕಡಿಮೆಯಾಗುವದು. ಬಹಳ ನಡೆದರೂ ಬೇಗನೆ ನಡೆದರೂ ವೇದನೆಯು ಹೆಚ್ಚಾಗುವದು. ಮೇಲಕ್ಕೆ ಏಳುವಾಗಲೂ ನಡೆಯಲಿಕ್ಕೆ ಆರಂಭ ಮಾಡುವಾಗಲೂ ವೇದನೆಯು ಹೆಚ್ಚಾಗಿರುವದು.

**ಕಲ್ಕೆ. ಫಾ:—** ನೋಯುತ್ತಿದ್ದ ಸ್ಥಳದಲ್ಲಿ ಬಧಿರತೆಯು, ಚಳಿಯಾಗುವದು, ಅಥವಾ ಜುಮ್ಮುಹಿಡಿಯುವದು. ವಿಶ್ರಾಂತಿಯ ಕಾಲದಲ್ಲಿಯೂ ರಾತ್ರಿಯಲ್ಲಿಯೂ ವೇದನೆಯು ಹೆಚ್ಚಾಗುತ್ತದೆ. ಮುಂಜಾವಿನಲ್ಲಿ ನಿದ್ದೆಯಿಂದ ಎಚ್ಚರಾದ ಬಳಿಕ ಟೊಂಕದಲ್ಲಿ ನೋಯುತ್ತದೆ. ಇದನ್ನು ಫೇರಂಫಾಸದ ಸಂಗಡ ಅದಲುಬದಲು ಮಾಡಿ ಕೊಡಲಿಕ್ಕೆ ಅಡ್ಡಿಯಿಲ್ಲ.

**ಕಾ. ಸ:—** ಸ್ಥಲಾಂತರ ಮಾಡುವ ವೇದನೆ. ಸಾಯಂಕಾಲದಲ್ಲಿಯೂ ಬೆಚ್ಚಗಿನ ಕೋಣೆಯಲ್ಲಿಯೂ ಅದು ಹೆಚ್ಚಾಗುವದು. ಬಯಲೊಳಗಿನ ತಂಪು ಹವೆಯಲ್ಲಿ ನೆಟ್ಟಗೆನಿಸುತ್ತದೆ.

**ವ್ಯಾ. ಫಾ:—** ಕುತ್ತಿಗೆಯಲ್ಲಿಯೂ ಬೆನ್ನಿನಲ್ಲಿಯೂ ನಿಂತುನಿಂತು ಜಗ್ಗಿದಂತೆ ಆಗುತ್ತದೆ. ಉಷ್ಣ ಉಪಚಾರದಿಂದ ಸಮಾಧಾನವಾಗುತ್ತದೆ.

**ಉಪಯುಕ್ತ ಸೂಚನೆ:—** ಔಷಧವನ್ನು ಹೊಟ್ಟೆಯಲ್ಲಿ ಕೊಡಬೇಕು; ಹೊರಗಿನಿಂದಲೂ ಹಚ್ಚಬೇಕು. ಕಾಸುವದರಿಂದ ಹೆಚ್ಚು ಲಾಭವಾಗುವದು. ತಂಪು ಹವೆಯಲ್ಲಿ ಕೆಲಸ ಮಾಡುವ ಜನರು ತಮ್ಮ ಟೊಂಕದ ಸುತ್ತಲು ಉಣ್ಣೆಯ ಹೊಸ ಪಟ್ಟಿಯನ್ನು ಸುತ್ತಬೇಕು. ಟೊಂಕವು ಬಹಳ ನೋಯುತ್ತಿರುವಾಗ ಉಣ್ಣೆಯ ಅರಿವೆಯನ್ನು ಹಂಚಿನ ಮೇಲಿಟ್ಟು ಬೆಚ್ಚಗೆ ಮಾಡಿ ಅದರಿಂದ ಟೊಂಕವನ್ನು ಕಾಸಬೇಕು; ಹೀಗೆ ಮಾಡುವದರಿಂದ ಸಮಾಧಾನವಾಗುತ್ತದೆ.

---

# ಕರ್ಣರೋಗ

**Diseases of the ear.** **ಡಿಸೀಜೆಸ್ ಆಫ ದಿ ಇಯರ.**

ಕರ್ಣೇಂದ್ರಿಯದಲ್ಲಿ ಬಾಹ್ಯಕರ್ಣ, ಮಧ್ಯಕರ್ಣ, ಮತ್ತು ಅಂತಃಕರ್ಣ ಎಂಬ ಮೂರು ಭಾಗಗಳನ್ನು ಕಲ್ಪಿಸಿದ್ದಾರೆ. ಹೊರಮುಗ್ಗಲಿಗೆ ನಮ್ಮ ಕಣ್ಣಿಗೆ ಕಾಣಿಸುವದು ಬಾಹ್ಯಕರ್ಣವು. ಬಾಹ್ಯಕರ್ಣದೊಳಗೆ ಸ್ವಲ್ಪ ಕಮಾನಾಕೃತಿಯಾಗಿ ಕಾಣಿಸುವ ಭಾಗಕ್ಕೆ ಕರ್ಣಕುಹರವೆನ್ನುತ್ತಾರೆ. ಕರ್ಣಕುಹರದ ಈ ಭಾಗವು ಕಿವಿಯೊಳಗೆ ಶ್ರುತಿಪಟಹದ ವರೆಗೆ ಹೋಗಿ ಮುಟ್ಟಿದೆ. ಬಾಹ್ಯಕರ್ಣ ಮತ್ತು ಮಧ್ಯಕರ್ಣ ಇವುಗಳ ನಡುವೆ ಶ್ರುತಿ ಪಟಹ ಅಥವಾ ಕರ್ಣಪಟಹ (ಟಿಂಪ್ಯಾನಂ) ಎಂಬದೊಂದು ಪಡದೆ ಇರುತ್ತದೆ. ಹೊರಗಿನ ದನಿಯು ತೆರೆಗಳು ಕರ್ಣಕುಹರದ ಮಾರ್ಗವಾಗಿ ಶ್ರುತಿಪಟಹದ ವರೆಗೆ ಹೋಗಿ ಮುಟ್ಟುತ್ತವೆ. ಶ್ರುತಿಪಟಹದ ಒಳಭಾಗವು ಪೊಳ್ಳು ಇರುತ್ತದೆ. ಅದರ ಹೆಸರು ಮಧ್ಯಕರ್ಣ. ಗಂಟಲಿನೊಳಗಿಂದ ಅಲ್ಲಿಯ ವರೆಗೆ ಹೋಗುವದೊಂದು ನಲಿಕೆಯಿರುವದು. ಅದಕ್ಕೆ ಯುಸ್ಟೇಚಿ ಯನ್ ಟ್ಯೂಬ ಅಥವಾ ಮಧ್ಯಕರ್ಣನಲಿಕಾ ಎಂದು ಕರೆಯುತ್ತಾರೆ. ಈ ಮಧ್ಯಕರ್ಣನಲಿಕೆಯಿಂದ ಮಧ್ಯಕರ್ಣಕ್ಕೆ ಹೊರಗಿನ ಹವೆಯು ಕೂಡ ಸಂಬಂಧವು ಬರುತ್ತದೆ. ಕಿವಿಯು ಕೂಡ ಸಂಬಂಧವಿದ್ದ ಅಸ್ಥಿಗಳಾದರೂ ಇದೇ ಭಾಗದಲ್ಲಿ ಇರುತ್ತವೆ. ಇದರ ಹಿಂಭಾಗಕ್ಕೆ ಅಂತಃಕರ್ಣವಿರುತ್ತದೆ. ಈ ಸ್ಥಳದಲ್ಲಿ ಬಹಳ ಪೊಳ್ಳುಗಳಿರುತ್ತವೆ. ಇದೇ ಭಾಗದಲ್ಲಿ ಕರ್ಣ ನಾಡಿಯೂ ಮತ್ತು ಬೇರೆ ಶ್ರೋತ್ರೇಂದ್ರಿಯಗಳೂ ಇರುತ್ತವೆ.

ಕಿವಿಯಲ್ಲಿ ದಾಹವು ಉಂಟಾಗಿ ಅದು ಬಾಯುತ್ತದೆ, ನೋಯುತ್ತದೆ; ಕಿವಿಯು ಒಡೆದು ಒಳಗಿನಿಂದ ಕೀವು ಸೋರುವದು; ಕಿವಿಯಲ್ಲಿ ತರತರದ ಸಪ್ಪಳಾಗುವದು; ಕೇಳಿಸದೆ ಇರುವದು; ಕಿವಿಯಲ್ಲಿ ಹುಣ್ಣಾಗುವದು; ಬೊಕ್ಕೆಯಾಗುವದು; ಕರ್ಣಪಟಹವು ದಪ್ಪಾಗುವದು; ಇವು ಕಿವಿಯ ಸರ್ವಸಾಧಾರಣ ರೋಗಗಳು.

ಈ ಎಲ್ಲ ರೋಗಗಳು ಬಹುತರವಾಗಿ ಚಳಿಯಿಂದಲೇ ಉಂಟಾಗು ತ್ತವೆ. ಕಿವಿಯೊಳಗೆ ಹರಳು, ಹುಣಸೆಯ ಬೀಜ ಮುಂತಾದವು ಸೇರಿ

ಮಲವು ಕೂಡಿದ್ದರಿಂದಲೂ ಮೇಲಿಂದ ಮೇಲೆ ತುರಿಸುವದರಿಂದಲೂ ಕೆದರುವದರಿಂದಲೂ ಕಿವಿಯಲ್ಲಿ ವೇದನೆಯುಂಟಾಗುವದು. ಕೊಯಿನೆಲಿಸಂಥ ಔಷಧವನ್ನು ಹೊಟ್ಟೆಯಲ್ಲಿ ಹಾಕಿದರೆ ಇಲ್ಲವೆ ಮೇಲಿಂದ ಮೇಲೆ ಕಿವಿಯು ಒಡೆದರೆ, ಕಿವುಡುತನವು ಬರಬಹುದು. ಗೊಬ್ಬರ ಮೊದಲಾದ ರೋಗವಾದ ಬಳಿಕ ಕಿವಿ ಒಡೆಯುತ್ತದೆ. ಕಿವಿಯ ವಿಷಯದ ಎಲ್ಲ ರೋಗಗಳ ಚಿಕಿತ್ಸೆಯನ್ನು ಇಲ್ಲಿ "ಕರ್ಣರೋಗ" ವೆಂಬ ಒಂದೇ ಸದರಿನಲ್ಲಿ ಹೇಳಿದ್ದೇವೆ.

**ಫೇ. ಫಾ:**— ಜ್ವರ, ವೇದನೆ, ರಕ್ತಸಂಚಯ ಮುಂತಾದ ದಾಹದ ಭಾವನೆಯಿದ್ದ ರೋಗಗಳಿಗೆ. ಚಳಿಯಾಗಿ ಕಿವಿ ನೋಯುವದು; ಉರಿಯುವದು; ಚುಚ್ಚಿದಂತಾಗುವದು. ಹೊರಗಿನಿಂದ ಕಾವು ಕೊಟ್ಟರೆ ನೆಟ್ಟಗೆನಿಸುವದು. ಕಿವಿಯಲ್ಲಿ ಸಪ್ಪಳಾಗುವದು. ಕಿವಿಯಲ್ಲಿ ಬಡೆದಂತೆಯೂ ಒಡೆದಂತೆಯೂ ಆಗುವದು. ಮೇಲಿಂದ ಮೇಲೆ ಕಿವಿಸೂಲಿ ಹಾಕಿ ಒಳಗಿನ ಪಡದೆಯು ಉಬ್ಬುತ್ತದೆ; ಮತ್ತು ಆದರಿಂದ ಕಿವಿಯು ಗಡಚಿಕ್ಕುತ್ತದೆ. ಕಿವಿಯು ಮೇಲಿಂದ ಮೇಲೆ ಬಾಯುತ್ತದೆ; ಆದರೆ ಕೀವು ಆಗುವದಿಲ್ಲ; ಕಿವಿ ಒಡೆಯುವದಿಲ್ಲ. ಹೀಗಾದರೆ ೩× ಅಥವಾ ೬× ಶಕ್ತಿಯ ಔಷಧವನ್ನು ಕೊಡಬೇಕು. ಇದರ ಸಂಗಡ ಬೇರೆ ಯಾವ ಔಷಧವನ್ನೂ ಕೊಡಬಾರದು.

**ಕಾ. ಮೂ:**— ದಾಹಾವಸ್ಥೆಯ ನಂತರ ಪಡದೆಯು ದಪ್ಪವಾಗಿ ಅಥವಾ ಕರ್ಣನಲಿಕೆಯು ಉಬ್ಬಿ ಬರುವ ಕಿವುಡುತನ. ಆದರೆ ಕುದುರೆ ಗಾಡಿಗಳ ಗಲಾಟೆಯಾದರೆ ಚನ್ನಾಗಿ ಕೇಳಬರುತ್ತದೆ. ಕಿವಿಯ ಕೆಳಗಿನ ಗಂಟುಗಳು ಉಬ್ಬುತ್ತವೆ; ಮತ್ತು ಆದರಿಂದ ಕಿವಿಯು ನೋಯುತ್ತದೆ. ನಾಲಿಗೆಯು ಬೆಳ್ಳಗಾಗುತ್ತದೆ. ಚಳಿಯಾಗಿ ಕಿವಿಯೊಳಗಿಂದ ಬಿಳಿಯ ಸ್ರಾವವು ಸೋರುತ್ತದೆ. ನುಂಗುವ ಕಾಲಕ್ಕೆ ಕಿವಿಯಲ್ಲಿ ಕರಕರ ಎಂದು ಸಪ್ಪಳಾಗುತ್ತದೆ.

**ಕಲ್ಕೆ. ಸ:**— ಹಳದೀ ಬಣ್ಣದ ಕೀವು ದಟ್ಟವಾಗಿ, ಒಮ್ಮೊಮ್ಮೆ ರಕ್ತದಿಂದ ಕೂಡಿ ಸೋರುತ್ತದೆ. ಕಿವುಡುತನವಿರುತ್ತದೆ. ಕೀವು ಆಗುವದನ್ನು ನಿಲ್ಲಿಸಬೇಕಾಗಿದ್ದರೆ.

ಸಿ:— ಕಿವಿಯೊಳಗಿಂದ ಬೆಳ್ಳಗೆ ಹೊಲಸು ಕೀವು ಸೋರುತ್ತದೆ. ಈ ಔಷಧದಿಂದ ಕೀವು ಬೇಗನೆ ಆಗುವದು. ಮುಂದೆ ಕಲ್ಕೆ. ಸಲ್ಫವು ಸ್ವಲ್ಪ ದಿವಸಗಳಲ್ಲಿ ಕೀವು ಸೋರುವದನ್ನು ನಿಲ್ಲಿಸುತ್ತದೆ. ಕರ್ಣಸಲಿಕೆಯಲ್ಲಿ ಚಳಿಯೂ ಬಾವೂ ಇದ್ದು ಹೊಲಸು ನಾರುವ ಕೀವು ಸೋರುತ್ತದೆ. ಆದರಿಂದ ಸರಿಯಾಗಿ ಕೇಳಿಸುವದಿಲ್ಲ. ವೇದನೆಯಿದ್ದು ಬಿಸಿನೀರಿನ ಚೀಲದಿಂದ ಕಾವು ಕೊಟ್ಟರೆ ನೆಟ್ಟಗೆನಿಸುತ್ತದೆ. ಕರ್ಣರೋಗದ ಈ ಭಾವನೆಗಳನ್ನು ನೆನಪಿನಲ್ಲಿಡಬೇಕು.

**ಮ್ಯಾ. ಫಾ:**— ನಾಜೂಕು, ತ್ರಾಸಿಕ ಪ್ರಕೃತಿಯ ರೋಗಿಗಳಿಗೆ. ಕಿವಿಯಲ್ಲಿಯ ನಾಡಿಗಳ ಅಶಕ್ತತೆಯಿಂದ ಬರುವ ಕಿವುಡುತನ, ಕಿವಿಯ ಒಳಗೂ ಅದರ ಸುತ್ತುಮುತ್ತಲೂ ಬಹಳ ನೋಯುವದು. ಗಂಟುಗಳು ಉಬ್ಬುವವು. ಸಣ್ಣ ಹುಡುಗರ ಕಿವಿಯು ಬಹಳ ದಿವಸ ಒಡೆಯುವದು. ಕಾಲೀ ಫಾಸದಿಂದ ಗುಣವು ಬರದಿದ್ದರೆ ಇದನ್ನು ಕೊಡಬೇಕು.

**ಕಲ್ಕೆ. ಫಾ:**— ಕಿವಿಯಲ್ಲಿ ತಣ್ಣಗೆನಿಸುತ್ತದೆ. ಕಿವಿಯ ಸುತ್ತುಮುತ್ತಲಿನ ಎಲುವು ನೋಯುತ್ತದೆ. ಗಂಡಮಾಲೆಯ ಪ್ರಕೃತಿಯುಳ್ಳ ಮತ್ತು ಪಂಡುರೋಗದ ರೋಗಿಗಳ ಕಿವಿಯ ಕೆಳಗಿನ ಗ್ರಂಥಿಗಳು ಉಬ್ಬುತ್ತವೆ; ಮತ್ತು ಅವುಗಳಲ್ಲಿ ವೇದನೆಯುಂಟಾಗುತ್ತದೆ. ಚಳಿಯಾಗಿ ಕಿವಿ ಒಡೆಯುತ್ತದೆ. ಈ ಔಷಧವನ್ನು ಬೇರೆ ಔಷಧಗಳ ಸಂಗಡ ನಡುನಡುವೆ ಕೊಡಬೇಕು.

**ನೇ. ಮೂ:**— ಬಧಿರತೆ. ಕಿವಿಯೊಳಗಿಂದ ತೆಳ್ಳಗೆ ಸ್ರಾವವು. ಕಿವಿಯಲ್ಲಿ ಗುರುಗುರು ಸಪ್ಪಳ. ನಾಲಿಗೆಯ ಮೇಲೆ ಬುರುಗುಳ್ಳ ಜೊಲ್ಲು. ಕಿವಿಯಲ್ಲಿ ತುರಿಸುವದು, ಉರಿಯುವದು, ಚುಚ್ಚಿದಂತೆ ನೋಯುವದು.

**ಕಾ. ಸ:**— ಕಿವಿಸೂಲಿ. ತೆಳ್ಳಗೆ ಹಳದಿ, ಹಸರು, ಕೀವು ಸೋರುವದು; ಕೀವು ಹೊಲಸಾಗಿರುತ್ತದೆ. ಕಿವಿಯಲ್ಲಿ ದೇಟಿನ ಆಕಾರದ ಗ್ರಂಥಿ (ಪಾಲಿಪಸ್=ಮೊಳಿಕೆ) ಮತ್ತು ಅದರಿಂದ ಬರುವ ಬಧಿರತೆ ಇದರಿಂದ ನಾಶವಾಗುತ್ತವೆ.

**ಕಾ. ಫಾ:—** ಸ್ವಲ್ಪ ಕೇಳಿಸುತ್ತದೆ. ಕಿವಿಯಲ್ಲಿ ಸಪ್ಪಳಾಗುತ್ತದೆ. ತಲೆಯಲ್ಲಿಯೂ ಸಪ್ಪಳಾಗುತ್ತದೆ; ಅಶಕ್ತತೆಯೆನಿಸುತ್ತದೆ; ಮತ್ತು ಅದರಿಂದ ಏನೂ ತೋಚುವದಿಲ್ಲ. ಕಿವಿಯಲ್ಲಿ ವ್ರಣವಾಗುತ್ತದೆ; ಮತ್ತು ಅದರೊಳಗಿಂದ ಹೊಲಸಾದ ಕೊಳಕು ಕೀವು ಸೋರುತ್ತದೆ. ಕಿವಿಯಲ್ಲಿ ತುರಿಸುತ್ತದೆ. ಇದರಿಂದ ಮುದುಕರಿಗೆ ವಿಶೇಷ ಉಪಯೋಗವಾಗುತ್ತದೆ. ಕಿವಿಯಲ್ಲಿ ಗುಣಗುಣ ಮಾಡುವ ಸಪ್ಪಳವು ಕಾಲೀಫಾಸದಿಂದ ನೆಟ್ಟಗಾಗದಿದ್ದರೆ ಮ್ಯಾ. ಫಾ. ಕೊಡಬೇಕು.

**ನೇ. ಫಾ:—** ಕಿವಿ ನೋಯುತ್ತದೆ. ಕಿವಿಯ ಹೊರಭಾಗಕ್ಕೆ ಮೆತ್ತಗೆ, ತೆಳ್ಳಗೆ, ಕೆನೆಯಂಥ ಹಳದಿ ಪಕಳಿಗಳು ಆಗುವವು. ಒಂದು ಕಿವಿಯು ಕೆಂಪಾಗಿಯೂ ಬಿಸಿಯಾಗಿಯೂ ಇದ್ದು ಅದಕ್ಕೆ ಒಂದೇಸವನೆ ತಿಂಡಿ ಬಿಡುತ್ತದೆ. ಆಗ ಬಹಳವಾಡಿ ಅಪಚನವಾಗಿರುವದು. ನಾಲಿಗೆಯ ಮೇಲೆ ಬಿಳಿಯ ಕಿಟ್ಟು ಕೂಡುವದು. ಕಿವಿಯೊಳಗಿಂಡ ಕೀವು ಸೋರುವದು.

**ಉಪಯುಕ್ತ ಸೂಚನೆ:—** ಕಿವಿಯು ಒಡೆದು ಸೋರುತ್ತಿರುವಾಗ ಹೊಟ್ಟೆಯಲ್ಲಿ ಕೊಡತಕ್ಕ ಔಷಧವನ್ನು ಬೆಚ್ಚಗಿನ ನೀರಿನಲ್ಲಿ ಹಾಕಿ ಅದರಿಂದ ಕಿವಿಯನ್ನು ದಿನಾಲು ತೊಳೆಯಬೇಕು. ಜೀಕಳಿಯಿಂದ ಮೆಲ್ಲಗೆ ತೊಳೆಯಬೇಕು. ಜೋರಿನಿಂದ ತೊಳೆದರೆ ಕಿವಿಯೊಳಗಿನ ಪಡದೆಗೆ ಧಕ್ಕೆ ತಗಲಿ ರೋಗಿಗೆ ತ್ರಾಸವಾಗುವದು. ದಾಹಜನ್ಯ ಕರ್ಣಶೂಲಿಯಿದ್ದರೆ ಹೊರಗಿನಿಂದ ಕಾವು ಕೊಟ್ಟರೆ ಬಹಳ ಲಾಭವಾಗುವದು. ಬಟ್ಟೆಯಲ್ಲಿ ಉಪ್ಪು ಹಾಕಿ ಗಂಟು ಮಾಡಿ ಅದರಿಂದ ಕಾವು ಕೊಡಬೇಕು. ಕರ್ಣಬಧಿರತೆಯನ್ನು ನೆಟ್ಟಗೆ ಮಾಡಲಿಕ್ಕೆ ಔಷಧವನ್ನು ತಿಂಗಳಗಟ್ಟಲೆ ಕೊಡಬೇಕಾಗುವದು; ಅಂದರೇನೇ ಗುಣವು ಬರುವದು. ಕಿವಿಗೆ ಚಳಿಯಾಗಲಿ ಗಾಳಿಯಾಗಲಿ ಹತ್ತಗೊಡಬಾರದು. ರಾತ್ರಿಯಲ್ಲಿ ಮಲಗುವಾಗ ಕಿವಿಯಲ್ಲಿ ಬೆಚ್ಚಗಿನ ಎಣ್ಣೆಯನ್ನು ಹಾಕುವ ಪದ್ಧತಿ ಇಡಬೇಕು.

---

# ಕಾಮಣಿ

**Jaundice.** **ಜಾಂಡಿಸ್.**

ತ್ವಚೆಯೂ ಕಣ್ಣುಗುಡ್ಡೆಗಳೂ ಹಳದೀ ಕಾಣಿಸುತ್ತವೆ; ಮೂತ್ರವು ಹಳದೀ ಬಣ್ಣದ್ದೂ ಮಲವು ಬಿಳೇ ಬಣ್ಣದ್ದೂ ಆಗುತ್ತದೆ; ಇವು ಕಾಮಣಿಯ ಮುಖ್ಯ ಲಕ್ಷಣಗಳು.

ಯಕೃತದಲ್ಲಿ ಪಿತ್ತವು ಸಿದ್ಧವಾಗಿ ಕರುಳಿನಲ್ಲಿ ಹೋಗುತ್ತದೆ. ಅಲ್ಲಿ ಅದು ಅನ್ನದ ಮೇಲೆ ಪರಿಣಾಮ ಮಾಡುತ್ತದೆ. ಆದರೆ ಅದು ಕರುಳಿನಲ್ಲಿ ಹೋಗದೆ ಇರುವಾಗ ರಕ್ತದಲ್ಲಿ ಹೀರಲ್ಪಡುತ್ತದೆ. ಮೈತುಂಬ ಹರಿದಾಡುತ್ತದೆ. ಮತ್ತು ಅದರಿಂದ ತ್ವಚೆಯೂ ಕಣ್ಣುಗುಡ್ಡೆಗಳೂ ಹಳದೀ ಕಾಣಿಸುತ್ತವೆ. ಅದರ ಕೆಲವು ಭಾಗವು ಮೂತ್ರದಿಂದ ಹೊರಬೀಳುವದು. ಆದುದರಿಂದಲೇ ಕಾಮಣಿಯಾದಾಗ ಹಳದೀ ಬಣ್ಣದ ಮೂತ್ರವಾಗುವದು. ಪಿತ್ತವು ಕರುಳಿನಲ್ಲಿ ಹೋಗದೆ ಇದ್ದುದರಿಂದ ಶೌಚಕ್ಕೆ ಬಿಳಿಯ ಬಣ್ಣವು ಬರುತ್ತದೆ. ಯಕೃತ ರೋಗದಲ್ಲಿಯೂ ಪಿತ್ತನಲಿಕೆಯ ರೋಗದಲ್ಲಿಯೂ ಕಾಮಣಿಯು ಕಂಡುಬರುತ್ತದೆ. ಕಾಮಣಿಯಾದಾಗ ನಾಡಿಯು ಮಂದವಾಗಿ ಹಾರುವದು.

ಚಳಿ, ಅಜೀರ್ಣ, ಅಪಚನ, ಮಾನಸಿಕ ತ್ರಾಸ ಇವುಗಳಿಂದಲೂ ಪಿತ್ತದ ಮೇಲೆ ಪರಿಣಾಮವಾಗಿ ಕೆಲಕಾಲದ ವರೆಗೆ ಕಾಮಣಿಯಾಗುತ್ತದೆ.

**ಕಾ. ಮೂ:—** ಕಾಮಣಿ. ಯಕೃತಮಾಂದ್ಯ. ಬೆನ್ನು ಹಿಂದೆ ಭುಜದ ಕೆಳಭಾಗದಲ್ಲಿ ಮತ್ತು ಯಕೃತ ಭಾಗದಲ್ಲಿ ನೋಯುತ್ತದೆ. ನಾಲಿಗೆಯು ಬೆಳ್ಳಗಾಗುತ್ತದೆ. ಮಲವು ಗಟ್ಟಿಯಾಗುತ್ತದೆ. ಅದು ಬೆಳ್ಳಗಾಗಲಿ ಸ್ವಲ್ಪ ಹಳದಿಯಾಗಲಿ ಆಗುತ್ತದೆ.

**ನೇ. ಸ:—** ತ್ವಚೆಯು ಹಳದಿಯಾಗುತ್ತದೆ. ಪಿತ್ತದ ಪ್ರಮಾಣವು ನಿಯಮಿತ ಮಾಡಲಿಕ್ಕೆ ಇದರ ಉಪಯೋಗವಾಗುತ್ತದೆ. ಕಾಲೀ ಮೂರವನ್ನೂ ಇದನ್ನೂ ಅದಲುಬದಲು ಮಾಡಿ ಕೊಡಬೇಕು. ಪಿತ್ತದ ಹಸರು ಜುಲಾಬು. ನಾಲಿಗೆಯು ಹಸರು ಅಥವಾ ನೀಲಿ. ಕಣ್ಣೂ

ತ್ವಚೆಯೂ ಹಳದಿ. ಯಕೃತದಲ್ಲಿ ರಕ್ತಸಂಚಯವಾಗುವದು. ಆದ್ದರಿಂದ ಅಲ್ಲಿ ಚುಚ್ಚಿದಂತೆ ತೀವ್ರ ವೇದನೆಯಾಗುತ್ತದೆ.

**ಉಪಯುಕ್ತ ಸೂಚನೆ:**—ಉಣ್ಣುವ ಅನ್ನವು ಹಗುರಾಗಿರಬೇಕು. ತತ್ತಿ, ಮೀನ, ಬೆಣ್ಣೆ, ಮುಂತಾದ ತೈಲಮಯ ಹಾಗು ಮಾದಕ ಪದಾರ್ಥಗಳನ್ನು ಬಿಟ್ಟುಬಿಡಬೇಕು. ಬಯಲು ಹವೆಯಲ್ಲಿ ಮಿತವಾಗಿ ವ್ಯಾಯಾಮ ಮಾಡಲು ಅಡ್ಡಿಯಿಲ್ಲ. ಭಾವನಾನುಸಾರವಾಗಿ ಬೇರೆ ಔಷಧಗಳ ಯೋಜನೆಯನ್ನು ಮಾಡಬೇಕು.

''ಯಕೃತವಿಕೃತಿ''ಯೆಂಬ ಸದರು ನೋಡಿರಿ.

---

# ಗಣಜಲಿ

**Chicken-Pox.** **ಚಿಕನ್-ಪಾಕ್ಸ.**

ಇದು ಮೈಲಿಯಂಥ ಒಂದು ವಿಸ್ಫೋಟಕ ಜ್ವರವು. ಮುನ್ನಾ ದಿವಸ ಸಣ್ಣಾಗಿ ಜ್ವರವು ಬರುವದು. ಮರುದಿವಸ ಎದೆ, ಬೆನ್ನು ಮುಂತಾದ ಸ್ಥಳದಲ್ಲಿ ಕೆಂಪಗೆ ಬೊಕ್ಕೆಗಳು ಏಳುವವು. ಒಂದೆರಡು ದಿನಗಳಲ್ಲಿಯೆ ಅವುಗಳಲ್ಲಿ ನೀರು ತುಂಬಿ ಬೊಕ್ಕೆಗಳು ಬೆಳ್ಳಗೆ ಕಾಣಿಸುತ್ತವೆ. ನಾಲ್ಕನೆಯ ದಿವಸ ಅವು ಒಣಗುತ್ತವೆ. ಮತ್ತು ಆರನೆಯ ದಿವಸ ಹಕಳಿ ಉಚ್ಚಿ ರೋಗಿಗೆ ನೆಟ್ಟಗಾಗುತ್ತದೆ. ಬೊಕ್ಕೆಗಳು ದೂರದೂರ ಇರುತ್ತವೆ. ಅವುಗಳಲ್ಲಿ ಬಹುಶಃ ಕೀವು ಆಗುವದಿಲ್ಲ; ಮತ್ತು ಹುಣ್ಣಿನ ಕಲೆಯೂ ಉಳಿಯುವದಿಲ್ಲ. ಇದು ಹುಡುಗರ ಬೇನೆ. ಈ ಬೇನೆಯು ಸೌಮ್ಯ ವಾಗಿರುತ್ತದೆ; ಮೈಲಿಯಂತೆ ಉಗ್ರವಿರುವದಿಲ್ಲ. ಮೈಲಿಯ ಹುಣ್ಣಿನ ಸುತ್ತಲಿನ ಭಾಗವು ಬಿರುಸಾಗಿರುತ್ತದೆ ಮತ್ತು ನಡುವೆ ತಗ್ಗು ಬೀಳುತ್ತದೆ. ಗಣಜಲಿಯಲ್ಲಿ ಹಾಗೆ ಆಗುವದಿಲ್ಲ.

''ಮೈಲಿ''ಯೆಂಬ ಸದರು ನೋಡಿರಿ.

**ಫೇ. ಫಾ:**— ಜ್ವರ, ವೇದನೆ, ಅಸ್ವಾಸ್ಥ್ಯ ಮುಂತಾದ ದಾಹ ಯುಕ್ತ ಭಾವನೆಗಳಿದ್ದರೆ ಇದನ್ನು ಕೊಡಬೇಕು. ನಾಲಿಗೆಗೂ ಬೊಕ್ಕೆ

ಗಳಿಗೂ ಅನುಸರಿಸಿ ಯೋಜಿಸಿದ ಬೇರೆ ಔಷಧಗಳ ಸಂಗಡ ಇದನ್ನು ಕೊಡಬೇಕು.

**ಕಾ. ಮ ಊ:—** ದ್ವಿತೀಯಾವಸ್ಥೆ. ನಾಲಿಗೆಯ ಮೇಲೆ ಬಿಳೇಬಣ್ಣದ ಇಲ್ಲವೆ ಬೂದೀ ಬಣ್ಣದ ಪುಟವು ಇದ್ದರೂ ಸರಿ, ಇರದಿದ್ದರೂ ಸರಿ.

**ನೇ. ಮೂ:—** ಕಣ್ಣು ಮುಚ್ಚು ಹಾಕುವದು; ಮಾಂದ್ಯ; ಮತ್ತು ಬಾಯಿಯಿಂದ ಜೊಲ್ಲು ಸೋರುವದು.

**ಕಾ. ಸ:—** ಗಣಜಲಿಯ ಬೊಕ್ಕೆಯೊಳಗಿಂದ ದಟ್ಟಾದ ಹಳದೀ ಕೀವು ಸೋರಹತ್ತಿದ ಬಳಿಕ. ಬೊಕ್ಕೆಗಳು ಅಡಗಿಕೊಂಡಿದ್ದರೆ. ಬೆವರು ಬಿಡುವದಕ್ಕೋಸ್ಕರ ಫೇರಂ. ಫಾಸದ ಸಂಗಡ ಕೊಡಬೇಕು.

**ಉಪಯುಕ್ತ ಸೂಚನೆ:—** ರೋಗಿಯು ಹೊದ್ದುಕೊಂಡು ಸುಮ್ಮನೆ ಮಲಗಬೇಕು. ಗಾಳಿಹತ್ತಿಯಾಗಲಿ ಬೇರೆ ಕಾರಣದಿಂದಾಗಲಿ ಬೊಕ್ಕೆಗಳನ್ನು ಅಡಗಗೊಡಬಾರದು. ಹಗುರು ಅನ್ನವನ್ನು ಉಣ್ಣಬೇಕು.

"ಜ್ವರ"ವೆಂಬ ಸದರು ನೋಡಿರಿ.

---

# ದಡ್ಡು

**Corn.** ಕಾರ್ನ.

ಈ ರೋಗವು ಯಾವಾಗಲೂ ಅಂಗಾಲಿಗೇ ಆಗುವದು. ಅಂಗಾಲಿಗೆ ಬಿರುಸು ಗಂಟು ಆಗಿ ಬಹಳ ನೋಯುತ್ತದೆ. ಅದರಿಂದ ಬಹಳ ತ್ರಾಸ ವಾಗುತ್ತದೆ. ಗಟ್ಟಿಯಾದ ಬೂಟು ಹಾಕಿಕೊಳ್ಳುವದರಿಂದಲೂ ಅಂಗಾಲಿನ ಕೆಲವು ಪ್ರಾಕೃತಿಕ ದೋಷದಿಂದಲೂ ಈ ಬೇನೆಯು ಆಗುವದುಂಟು. ಹೆಬ್ಬಟ್ಟಿನ ಮೇಲೆಯೂ ಗಂಟು ಆಗುವದು. ಆದರೆ ಅದು ಸ್ವಲ್ಪ ಮೆತ್ತಗಿರುವದು.

**ಫೇ. ಫಾ:—** ಬಹಳ ನೋಯುವದು; ಜುಣುಜುಣು ಅನ್ನುವದು; ಮತ್ತು ಉರಿಯುವದು. ಈ ಔಷಧವನ್ನು ಹೊರಗಿನಿಂದಲೂ ಹಚ್ಚಬೇಕು.

**ಕಾ. ಮೂ:—** ಇದನ್ನು ಹೊಟ್ಟೆಯೊಳಗೆ ತಕ್ಕೊಂಡರೆ ಗಂಟು ಕರಗುವದು. ಬಹು ದಿವಸ ತೆಗೆದುಕೊಳ್ಳಬೇಕು.

**ಉಪಯುಕ್ತ ಸೂಚನೆ:—** ಇದನ್ನು ಕೊಯ್ಯುವದರಿಂದಲೂ ಕಿತ್ತುವದರಿಂದಲೂ ವಿಶೇಷ ಲಾಭವಾಗಲಾರದು. ಅದರಿಂದ ಗಂಟು ಬೆಳೆಯುವ ಸಂಭವವಿದೆ. ಗಂಟಿನ ಮೇಲೆ ಹತ್ತಿಯನ್ನು ಇಡಬೇಕು. ಇದರಿಂದ ರೋಗವು ನೆಟ್ಟಗಾಗುವದು.

---

## ಕುರು ಮತ್ತು ರಾಜಗುರು

### Boils and Carbuncles.

### ಬಾಯಿಲ್ಸ ಅಂಡ ಕಾರ್ಬನ್‌ಕಲ್ಸ.

ಮೊದಲು ತ್ವಚೆಯಮೇಲೆ ದಾಹವುಳ್ಳ ಬಿರುಸು ಗಂಟು ಏಳುತ್ತದೆ; ಮತ್ತು ಅದು ಮೆಲ್ಲಮೆಲ್ಲಗೆ ಹಣ್ಣಾಗುತ್ತದೆ. ಈ ಕುರುವು ಕುತ್ತಿಗೆಯ ಮೇಲೆಯೂ ಬೆನ್ನಿನ ಮೇಲೆಯೂ ಆಗುತ್ತದೆ. ಮೋರೆಯ ಮೇಲೆಯೂ ಶರೀರದ ಬೇರೆ ಭಾಗದಲ್ಲಿಯೂ ಅದು ಆಗಬಹುದು. ಕುರುವಿಗಿಂತ ರಾಜಗುರುವು ದೊಡ್ಡದಿರುತ್ತದೆ. ಅದಕ್ಕೆ ಬಹಳ ಮೋರೆಗಳು ಇರುವವು. ರಾಜಗುರುವು ಬಹಳ ನೋಯುತ್ತದೆ. ಸ್ವಲ್ಪ ಜ್ವರವೂ ಬರುತ್ತದೆ. ಕುರುವಿಗಿಂತ ರಾಜಗುರುವಿನ ಬಗ್ಗೆ ಹೆಚ್ಚು ಜಾಗರೂಕರಾಗಿರಬೇಕು. ಅದು ಪ್ರಾಕೃತಿಕ ರೋಗವು; ಬಲಹೀನರಲ್ಲಿ ಕಂಡುಬರುವದು.

**ಫೇ. ಫಾ:—** ದಾಹಾವಸ್ಥೆಯಲ್ಲಿ ಜ್ವರವು, ವೇದನೆ, ರಕ್ತಸಂಚಯ, ಉಷ್ಣತೆ, ಕೆಂಪಾಗುವದು, ಮುಂತಾದ ಭಾವನೆಗಳಿರುತ್ತವೆ. ಈ ಔಷಧವನ್ನು ಮೊದಲಿನಿಂದ ಕೊಟ್ಟರೆ ಕೀವು ಆಗುವದಿಲ್ಲ; ರೋಗವು ಮಾತ್ರ ನೆಟ್ಟಗಾಗುತ್ತದೆ.

**ಕಾ. ಮೂ:—**ದ್ವಿತೀಯಾವಸ್ಥೆಯಲ್ಲಿ. ಕೀವಾಗುವದಕ್ಕಿಂತ ಮುಂಚೆ ಅದು ಆಗಬಾರದೆಂದು ಇದನ್ನೂ ಫೇರಂ ಫಾಸವನ್ನೂ ಅದಲು ಬದಲು ಮಾಡಿ ಕೊಡಬೇಕು.

ಸಿ:— ಕೀವು ಆಗಹತ್ತಿದನಂತರ ಅದನ್ನು ಹೆಚ್ಚು ಮಾಡುತ್ತದೆ. ಮತ್ತು ಹುಣ್ಣನ್ನು ಬೇಗನೆ ಹಣ್ಣುಮಾಡುತ್ತದೆ. ಶಸ್ತ್ರಕ್ರಿಯೆಯಿಲ್ಲದೆ ಅದನ್ನು ಒಡೆದು ಸೋರಿಸುತ್ತದೆ.

"ಹುಣ್ಣು" ಎಂಬ ಸದರು ನೋಡಿರಿ.

**ಉಪಯುಕ್ತ ಸೂಚನೆ:—** ಬಾವು ಕಾಣಲಾರಂಭಿಸಿದ ಕೂಡಲೆ ಆಗಸಿಯ ಅಥವಾ ಕಣಕಿನ ಪೋಟೀಸ ಮಾಡಿ ಕುರುವಿನಮೇಲೆ ಕಟ್ಟಬೇಕು. ಅದನ್ನು ಮೇಲಿಂದಮೇಲೆ ಬದಲಿಸುತ್ತಿರಬೇಕು, ಪೋಟೀಸಿನಿಂದ ಅದು ಬೇಗನೆ ಒಡೆಯುವದು. ಹುಣ್ಣು ಒಡೆದು ಗಾಯವಾದ ಬಳಿಕ ಅದನ್ನು "ಕೆಲೆಂಡುಲಾ"ದ ಧಾವನಜಲದಿಂದ ತೊಳೆಯಬೇಕು. ಮಧುಮೇಹದ ರೋಗಿಗೆ ರಾಜಗುರುವಾದರೆ ಅದನ್ನು ಕೊಯ್ಯುವದು ಕಠಿಣವಾಗಿದೆ. ಆದುದರಿಂದ ಅದನ್ನು ಕೊಯ್ಯುವ ಗೋಜಿಗೆ ಹೋಗಬಾರದು. ಆದಷ್ಟು ಮಟ್ಟಿಗೆ ಅದನ್ನು ಔಷಧದಿಂದಲೇ ನೆಟ್ಟಗೆ ಮಾಡುವ ಪ್ರಯತ್ನ ಮಾಡಬೇಕು. ಅದು ಶಕ್ಯವಿಲ್ಲದಿದ್ದರೆ ಮಾತ್ರ ಅನುಭವಿಕರಾದ ಡಾಕ್ಟರ ಜನರಿಂದ ಉಪಚಾರ ಮಾಡಿಸಿಕೊಳ್ಳಬೇಕು.

---

# ಕೆಮ್ಮು

**Cough.** **ಕಫ್.**

ಕೆಮ್ಮು ಎಂಬುದು ಸ್ವತಂತ್ರ ರೋಗವಲ್ಲ; ಅದು ಒಂದು ಭಾವನೆ. ಫುಪ್ಪುಸ ಮತ್ತು ಗಂಟಲ ಇವುಗಳ ರೋಗಗಳಲ್ಲಿ ಈ ಭಾವನೆ ಕಂಡು ಬರುವದು. ಜಠರ ವಿಕೃತಿ, ಅಥವಾ ಹೃದಯರೋಗ ಇವುಗಳಲ್ಲಿಯೂ ಅದು ಇರುವದುಂಟು. ಆದರೂ ಒಮ್ಮೊಮ್ಮೆ ಈ ರೋಗಗಳ ಇತರ ಲಕ್ಷಣಗಳು ಇರದೆ ಕೆಮ್ಮು ಎಂಬ ಒಂದೇ ಒಂದು ಭಾವನೆಯಿರುವದು. ಆದುದರಿಂದ ಇದೊಂದೇ ಭಾವನೆಯ ಕಡೆಗೆ ಲಕ್ಷ್ಯಗೊಟ್ಟು, ಅದರ ಮೇಲೆ ಯಾವ ಕ್ಷಾರವನ್ನು ಯಾವ ರೀತಿಯಿಂದ ಉಪಯೋಗಮಾಡಬೇಕೆಂಬ ದನ್ನು ಇದರ ಕೆಳಗೆ ಹೇಳುತ್ತೇವೆ.

**ಕಾ. ಮೂ:**— ಬಹಳ ಜೋರಿನ ಕೆಮ್ಮು. ಕೋಡಗ ಕೆಮ್ಮಿನಂತೆ ಉಬ್ಬಸದಿಂದ ಬರುವ ಕೆಮ್ಮು. ಗಂಟಲಿನಲ್ಲಿ ಸೊಂಯಿ ಸೊಂಯಿ ಎಂದು ಸಪ್ಪಳಾಗುವದು. ಕೆಮ್ಮುವಾಗ ಕಣ್ಣುಗುಡ್ಡೆಗಳು ಮುಂದಕ್ಕೆ ಸರಿದಂತೆ ಅನಿಸುತ್ತದೆ. ಶ್ವಾಸ ಕಟ್ಟುವಂಥ ಕರ್ಕಶವಾದ ಕೆಮ್ಮು. ದಟ್ಟಗೆ, ಹಾಲಿನಂತೆ ಬೆಳ್ಳಗೆ, ಜಿಗಟು ಕಫವಿರುವದು. ನಾಲಿಗೆಯು ಬೆಳ್ಳಗೆ ಇಲ್ಲವೆ ಬೂದೀ ಬಣ್ಣದ್ದು.

**ಫೇ. ಫಾ:**— ಬಹು ಜೋರಿನ ಕೆಮ್ಮು; ಒಣ ಕೆಮ್ಮು; ಮತ್ತು ಶೀಘ್ರ ಪರಿಣಾಮಿಯಾದ ಕೆಮ್ಮು. ಎದೆಯಲ್ಲಿ ನೋಯುತ್ತದೆ; ಗಂಟಲು ತುರಿಸುತ್ತದೆ; ಜ್ವರವೂ ಬರುತ್ತದೆ. ಕಫವು ಬೀಳುವದಿಲ್ಲ. ಕೆಮ್ಮುವಾಗ ಮೂತ್ರವಾಗುತ್ತದೆ.

**ಮ್ಯಾ. ಫಾ:**— ಒಂದರ ಹಿಂದೆ ಮತ್ತೊಂದು ಕೆಮ್ಮಿನ ತೆರೆ ಬರುವದು. ಮೈ ಸೆಟೆಯುವದು. ಕಫವು ಸಡಿಲಾಗುವದಿಲ್ಲ. ಎದೆಯಲ್ಲಿಯೂ ಬೆನ್ನಿನಲ್ಲಿಯೂ ನೋಯುತ್ತದೆ. ಎದೆಯಲ್ಲಿ ಬಿಗಿದಂತಾಗುತ್ತದೆ. ಕೋಡಗಕೆಮ್ಮು. ಉಷ್ಣಪೇಯದಿಂದಲೂ ಎದ್ದು ಕುಳಿತರೂ ನೆಟ್ಟಗೆನಿಸುತ್ತದೆ. ಕೆಮ್ಮಿನ ಕಾಟವು ರಾತ್ರಿಯಲ್ಲಿ ಹೆಚ್ಚಾಗುವದು. ಮಲಗಿದ ಬಳಿಕ ತ್ರಾಸವಾಗುವದು.

**ಕಾ. ಸ:**— ಹಳದೀ ಜಿಗಟು ಕಫವು ಬೀಳುತ್ತದೆ. ಕರ್ಕಶವಾದ ಜೋರಿನ ಕೆಮ್ಮು. ಗಂಟಲಿನಲ್ಲಿ ನೋಯುತ್ತದೆ. ಬಯಲು ಹವೆಯಲ್ಲಿ ನೆಟ್ಟಗೆನಿಸುತ್ತದೆ. ಬೆಚ್ಚಗಿನ ಕೋಣೆಯೊಳಗೆ ಕೆಮ್ಮು ಹೆಚ್ಚಾಗುತ್ತದೆ. ಕಫವು ಗಂಟಲಿನಲ್ಲಿ ನುಂಗಲ್ಪಡುವದು. ಗಂಟಲಿನಲ್ಲಿ ನೋತಂತೆ ಅನಿಸುವದು.

**ಸಿ:**— ಕ್ಷಯರೋಗದಲ್ಲಿಯ ಕೆಮ್ಮು; ವಿಶೇಷವಾಗಿ ಮುಂಜಾವಿನಲ್ಲಿ ಹೆಚ್ಚಾಗುವದು. ಸೀತ ಪೇಯದಿಂದ ಅದು ಹೆಚ್ಚಾಗುವದು. ಎದೆಯಲ್ಲಿ ನೋಯುವದು. ಉಷ್ಣ ಮತ್ತು ಸೀತ ಹವೆಯಲ್ಲಿ ನೆಟ್ಟಗೆನಿಸುತ್ತದೆ. ಹಸರು ಕಫವು ಬಹಳ ಬೀಳುತ್ತದೆ. ಅದು ಬಹಳ ಹೊಲಸು ನಾರುತ್ತದೆ. ಅದಕ್ಕೆ ಸಿಹಿಯಾದ ರುಚಿ ಇರುತ್ತದೆ. ನೀರಿನಲ್ಲಿ ಉಗುಳಿದರೆ

ಕಫವು ಮೇಲಕ್ಕೆ ತೇಲದೆ ತಳಕ್ಕೆ ಇಳಿಯುತ್ತದೆ. ಕೆಮ್ಮಿನ ಮೂಲಕ ಸಿದ್ದೆ ಬರುವದಿಲ್ಲ. ರಾತ್ರಿಯಲ್ಲಿ ಮಲಗಗೊಡುವದಿಲ್ಲ. ಬಾಯಿಯು ಜಿಗಟಾಗುವದು. ಅದಕ್ಕೆ ರುಚಿಯೇ ಇರುವದಿಲ್ಲ.

**ನೇ. ಮೂ:—** ಕಫವು ಉಪ್ಪುಪ್ಪು, ನೀರಿನಂತೆ ತೆಳ್ಳಗೆ, ಮತ್ತು ಸ್ವಚ್ಛವಾಗಿರುತ್ತದೆ. ಕಣ್ಣು, ಮೂಗು, ಮತ್ತು ಬಾಯಿ ಇವು ಒಂದೇಸವನೆ ಸೋರುತ್ತವೆ. ಗಂಟಲಿನಲ್ಲಿ ತುರಿಸಿ ತ್ರಾಸಕೊಡುವ ಕೆಮ್ಮು ಬರುತ್ತದೆ. ಬಹಳ ಹೊತ್ತು ತಡೆಯುವ ಒಣ ಕೆಮ್ಮು. ಸಮುದ್ರದಂಡೆಯ ಕ್ಷಾರಯುಕ್ತ ಹವೆಯಲ್ಲಿ ಹೆಚ್ಚಾಗುವದು. ಫೇರಂ ಫಾಸದಿಂದ ಗುಣವು ಬರದಿದ್ದರೆ ನೇಟ್ರಂ ಮೂರವನ್ನು ಕೊಡಬೇಕು.

**ಕಲ್ಕೆ. ಫ್ಲೊ:—** ಹೊಲಸು, ಜಿಗಟು, ಹಳದೀ ಕಫವು ಬೀಳುತ್ತದೆ. ಕಫದ ಸಣ್ಣ ಸಣ್ಣ ಗಂಟುಗಳು ಬೀಳುತ್ತವೆ. ಕಿರಿನಾಲಿಗೆಯು ಬೆಳೆದು ಕೆಮ್ಮು ಬರುತ್ತದೆ. ಮಲಗಿಕೊಂಡರೆ ಕೆಮ್ಮು ಹೆಚ್ಚಾಗುವದು.

**ನೇ. ಸ:—** ಎದೆಯಲ್ಲಿ ಕಲಸಿದಂತಾಗುವದು. ಎದೆಯು ತೆರವಾದಂತೆ ಅನಿಸುವದು. ದಟ್ಟಾದ ಹಳದಿ, ಹಸರು, ಜಿಗಟು, ಮತ್ತು ಎಳೆಯುಳ್ಳ ಕಫವು ಬೀಳುವದು. ಕೆಮ್ಮುವಾಗ ಎದೆಯು ಬಹಳ ನೋಯುವದು; ಅದಕ್ಕೆ ಕೈ ಹಚ್ಚಿದರೆ ಸ್ವಲ್ಪ ನೆಟ್ಟಗೆನಿಸುವದು. ಎದೆಯ ಮೇಲೆ ಭಾರಹಾಕಿ ಬಲಮಗ್ಗಲಾಗಿ ಮಲಗಿದರೆ ಸಮಾಧಾನವಾಗುತ್ತದೆ.

**ಕಲ್ಕೆ. ಫಾ:—** ದಟ್ಟಾದ, ಸ್ವಚ್ಛವಾದ, ಬಿಳಿಯ ಕಫವು ಬೀಳುವದು. ಕಫಕ್ಷಯದಲ್ಲಿ ಇದನ್ನು ನಡುನಡುವೆ ಕೊಡಬೇಕು, ಚಿಕ್ಕಮಕ್ಕಳಿಗೆ ಉಸಿರು ಕಟ್ಟಿಸುವ ಕೆಮ್ಮು ಬರುವದು. ಮಲಗಿದರೆ ನೆಟ್ಟಗೆನಿಸುವದು. ಹುಡುಗರಿಗೆ ಬೇಗನೆ ನಡೆಯಲಿಕ್ಕೆ ಬರದಿದ್ದರೆ, ಅಥವಾ ಅವುಗಳ ನೆತ್ತಿಯು ಬೇಗನೆ ತುಂಬದಿದ್ದರೆ, ಮತ್ತು ತ್ರಾಸದಾಯಕ ಒಣ ಕೆಮ್ಮು ಬರುತ್ತಿದ್ದರೆ ಸುಣ್ಣದ ಪ್ರಮಾಣವು ಕಡಿಮೆಯಾಗಿದೆಯೆಂದು ತಿಳಿದು ಈ ಔಷಧವನ್ನು ಕೊಡಬೇಕು.

**ಕಲ್ಕೆ. ಸ:—** ನೀರಿನಂತೆ ತಿಳಿಯಾದ ಮತ್ತು ರಕ್ತದಿಂದಾಗಲಿ ಕೀವಿನಿಂದಾಗಲಿ ಕೂಡಿದ ಕಫವು ಬೀಳುತ್ತದೆ.

**ಉಪಯುಕ್ತ ಸೂಚನೆ:—** ಕೆಮ್ಮು ಸ್ವತಂತ್ರ ರೋಗವಲ್ಲ. ಶ್ವಸನೇಂದ್ರಿಯ, ಹೃದಯ, ಗಂಟಲ ಮುಂತಾದ ಸ್ಥಳಗಳಲ್ಲಿ ದೋಷವು ಉತ್ಪನ್ನವಾಗುವದರಿಂದ ಈ ಭಾವನೆಯು ಕಂಡುಬರುತ್ತದೆಂದು ಮೇಲೆ ಹೇಳಿದ್ದೇವೆ. ಯಾವ ರೋಗದಲ್ಲಿ ಈ ಭಾವನೆಯು ಕಂಡುಬರುತ್ತದೆಯೋ ಆ ರೋಗವನ್ನು ಪರೀಕ್ಷಿಸಿ, ಅದರ ಸಾಧ್ಯಾಸಾಧ್ಯ ವಿಚಾರವನ್ನು ಮಾಡಿ, ಅದಕ್ಕೆ ಸರಿಯಾದ ಔಷಧ ಯೋಜನೆಯನ್ನು ಮಾಡಬೇಕು. ಈ ಭಾವನೆಯು ಕಂಡುಬರುವಂಥ ರೋಗಗಳ ವಿಚಾರವನ್ನು ಈ ಗ್ರಂಥದಲ್ಲಿ ಬೇರೆ ಕಡೆಗೆ ಸ್ವತಂತ್ರವಾಗಿ ಮಾಡಿದ್ದೇವೆ. ಜ್ವರವಿಲ್ಲದ ಕೆಮ್ಮು ಮೇಲಿಂದಮೇಲೆ ಬರುವಂಥ ಜನರು ತಣ್ಣೀರಿನ ಸ್ನಾನ ಮಾಡಬೇಕು; ಮತ್ತು ಮೈಯನ್ನು—ವಿಶೇಷವಾಗಿ ಎದೆಯನ್ನು – ಒಳಿತಾಗಿ ತಿಕ್ಕಬೇಕು. ಅದರಿಂದ ಬಹಳ ಲಾಭವಾಗುವದು. ಅದೇ ಮೇರೆಗೆ ಕುಡಿಯುವ ನೀರಿನಲ್ಲಿ ಲಿಂಬಿಯ ರಸವನ್ನು ಹಿಂಡಿ ಅದನ್ನು ಯಥೇಚ್ಛವಾಗಿ ಕುಡಿದರೆ ಗುಣವು ಬರುವದೆಂದು ಬಹುಜನರ ಮತವಿದೆ. ಯಾವಾಗಲೂ ಸ್ವಚ್ಛ ಹವೆಯಲ್ಲಿ ಮಲಗಬೇಕು. ಮಾದಕ ಪದಾರ್ಥಗಳನ್ನು ಬಿಟ್ಟುಬಿಡಬೇಕು. ಹಣ್ಣುಹಂಪಲ, ಕಾಯಿಪಲ್ಲೆ ಶುದ್ಧವಾದ ಆಹಾರ ಇವುಗಳನ್ನು ಎಷ್ಟು ಬೇಕಾದಷ್ಟು ತಿನ್ನಬೇಕು.

---

## ಗಜಕರ್ಣ

**Ringworm.** ರಿಂಗವರ್ಮ.

ಗಜಕರ್ಣವು ತ್ವಚೆಯ ರೋಗವು. ಅದು ಆಗಿದ್ದ ಸ್ಥಳದಲ್ಲಿ ಕೆಂಪು ಬಣ್ಣದ ವರ್ತುಲಗಳು ಕಂಡುಬರುತ್ತವೆ; ಮತ್ತು ಅವುಗಳಲ್ಲಿ ಸಣ್ಣಸಣ್ಣ ಬೊಕ್ಕೆಗಳು ಎದ್ದುಕಾಣಿಸುತ್ತವೆ. ಈ ಬೊಕ್ಕೆಗಳು ತ್ವಚೆಗೆ ಸರಿಯಾಗಿಯೂ ವರ್ತುಲಾಕಾರವಾಗಿಯೂ ಇರುತ್ತವೆ. ವರ್ತುಲದ ಮಧ್ಯಭಾಗದಲ್ಲಿಯ ಬೊಕ್ಕೆಗಳು ಇಲ್ಲದಂತಾಗಿ ಅವು ದಂಡೆಗುಂಟ ಹಬ್ಬುತ್ತವೆ. ಈ ಬೊಕ್ಕೆಗಳು ಒಡೆಯುತ್ತವೆ ಮತ್ತು ಆ ಸ್ಥಳದಲ್ಲಿ ಹಕಳಿಗಟ್ಟುತ್ತವೆ. ಸಾಮಾನ್ಯವಾಗಿ ಹೊಟ್ಟೆ, ಬೆನ್ನು, ತೊಡೆ, ಗೆಜ್ಜೆ, ಮೊಳಕೈ ಮುಂತಾದ ಸ್ಥಳಗಳಲ್ಲಿ ಈ ರೋಗವಾಗುವದು. ಸಣ್ಣ ಹುಡುಗರಿಗೆ ಹಾಗು ಮುದುಕ ಮನುಷ್ಯರಿಗೆ

ಅದು ವಿಶೇಷವಾಗಿ ತಲೆಯಲ್ಲಿ ಆಗುವದು. ಒಮ್ಮೊಮ್ಮೆ ಮೋರೆಯ ಮೇಲೆಯೂ ಕೈಮೇಲೆಯೂ ಆಗುವದುಂಟು. ತಿಂಡಿ ಬಹಳ ಹಿಡುತ್ತದೆ. ತುರಿಸಿದ ಬಳಿಕ ಉರಿಯುತ್ತದೆ; ಒಮ್ಮೊಮ್ಮೆ ನೀರೂ ಸೋರುತ್ತದೆ. ಕೂದಲಿದ್ದ ಸ್ಥಳದಲ್ಲಿ ಬೊಕ್ಕೆಗಳಾದರೆ ಅಲ್ಲಿಯ ಕೂದಲು ನಾಶವಾಗುವವು. ತಲೆಯಲ್ಲಿ ಗಜಕರ್ಣವಾದರೆ ಅಲ್ಲಿಯ ಕೂದಲು ಉದುರಿ ಹೋಗಿ ಸಣ್ಣಸಣ್ಣ ದುಂಡನ್ನ ಕಲೆಗಳು ಬೀಳುವವು. ಈ ಕಲೆಗಳಿಗೆ ನೆಗಳು ಅನ್ನುತ್ತಾರೆ. ಬಹಳ ದಿವಸದ ಗಜಕರ್ಣದ ಸ್ಥಳಕ್ಕೆ ಕಪ್ಪು ಬಣ್ಣವು ಬರುತ್ತದೆ.

**ನೇ. ಘಃ:**—ಹೊಟ್ಟೆಯೊಳಗೆ ಕೊಡಬೇಕು; ಹೊರಗಿನಿಂದಲೂ ಹಚ್ಚಬೇಕು. ದಿನಾಲು ಬಹಳಸಾರೆ ಉಪಯೋಗಮಾಡಬೇಕು. "ತ್ವಗ್ರೋಗ"ವೆಂಬ ಸದರು ನೋಡಿರಿ. ಅದರಲ್ಲಿಯ ಲಕ್ಷಣಾನುಸಾರವಾದ ಔಷಧ ಯೋಜನೆಯನ್ನು ಮಾಡಬೇಕು. ನೇಟ್ರಂಫಾಸದ ಮಲಮು ಮಾಡಿ ಹಚ್ಚಬೇಕು. ಇದೇ ಔಷಧದ ಧಾವನಜಲದ ಪಟ್ಟಿಯನ್ನೂ ಕಟ್ಟಬೇಕು.

---

# ಗರ್ಭಪಾತ

**Miscarriage.** **ಮಿಸ್‌ಕ್ಯಾರೇಜ.**

ಗರ್ಭದ ಪೂರ್ಣ ಬೆಳಿಗೆಯಾಗುವದಕ್ಕಿಂತ ಮುಂಚೆ, ಅಂದರೆ ಏಳು ತಿಂಗಳೊಳಗಾಗಿ ಆಗುವ ಗರ್ಭದ ಪತನಕ್ಕೆ ಗರ್ಭಪಾತವೆನ್ನುತ್ತಾರೆ. ಮೂರು ತಿಂಗಳೊಳಗಿನ ಗರ್ಭದ ಪತನಕ್ಕೆ ಗರ್ಭಸ್ರಾವವೆನ್ನುತ್ತಾರೆ. ಆದರೆ ಒಂಬತ್ತು ತಿಂಗಳೊಳಗೆ ಆಗುವಂಥ ಎಲ್ಲ ತರದ ಗರ್ಭಪತನಕ್ಕೆ ನಾವು ನಮ್ಮ ಅನುಕೂಲತೆಗಾಗಿ ಗರ್ಭಪಾತವೆಂಬ ಒಂದೇ ಹೆಸರನ್ನು ಕೊಡುತ್ತೇವೆ. ಸರ್ವಸಾಧಾರಣವಾಗಿ ಹೆಂಗಸು ಮುಟ್ಟಾಗುವ ಕಾಲಕ್ಕೇ ಗರ್ಭಪಾತವಾಗುತ್ತದೆ. ಗರ್ಭ ಧಾರಣವಾದ ನಂತರ ಮೂರು ತಿಂಗಳಲ್ಲಿಯೇ ಗರ್ಭಪಾತವು (ಗರ್ಭಸ್ರಾವವು) ಹೆಚ್ಚಾಗಿ ಆಗುತ್ತದೆ.

ಪ್ರಬಲ ಮನೋವಿಕಾರಗಳು ( ಬಹಳ ದುಃಖ, ಹರ್ಷ, ಸಿಟ್ಟು ಮುಂತಾದವುಗಳು ), ಅಪಘಾತ, ಹವೆಯಲ್ಲಿ ಒಮ್ಮಿಂದೊಮ್ಮೆ ಆಗುವ

ಹೆಚ್ಚು ಕಡಿಮೆ, ಕೃಮಿಯಾಗುವದು; ಹೊಟ್ಟೆಯಲ್ಲಿ ವಾಯು ತುಂಬುವದು, ಹೊಟ್ಟೆ ಮುರಿಯುವದು, ಹೊಟ್ಟೆ ಜಾಡಿಸುವದು, ಮಲಾವರೋಧ, ತಿಣುಕುವದು, ಶರೀರದ ಬೇರೆ ಭಾಗದ ಮೇಲೆ ಶಸ್ತ್ರಕ್ರಿಯೆ ಮಾಡುವದು, ಪ್ಲೇಗ, ಇನ್‌ಫ್ಲುಯೆಂಝಾ ಮುಂತಾದ ರೋಗಗಳು, ರೇಚಕ ಔಷಧ ಗಳನ್ನೂ ವಿಷಾರಿ ಔಷಧಗಳನ್ನೂ ತೆಗೆದುಕೊಳ್ಳುವದು, ಇವೆಲ್ಲ ಗರ್ಭ ಪಾತದ ಕಾರಣಗಳು. ಗರ್ಭಪಾತವಾಗುವ ಸಮಯಕ್ಕೆ ಬೆನ್ನಿನಲ್ಲಿಯೂ ಬೇರೆ ಕಡೆಗೂ ಜಗ್ಗಿದಂತೆ ಬಹಳ ವೇದನೆಯಾಗುತ್ತದೆ. ಆಮವೂ ರಕ್ತವೂ ಹೋಗುತ್ತದೆ. ರಕ್ತಸ್ರಾವದ ಸಂಗಡವೇ ಗರ್ಭವೂ ಹೊರಬೀಳುವದು. ಒಮ್ಮೆ ಗರ್ಭಪಾತವಾದ ನಂತರ ಅದು ಮೇಲಿಂದ ಮೇಲೆ ಆಗುವ ಸಂಭವ ವಿರುತ್ತದೆ. ಅದರಿಂದ ಹೆಂಗಸಿನ ಪ್ರಕೃತಿಯ ಮೇಲೆ ಪರಿಣಾಮವಾಗು ತ್ತದೆ; ಗರ್ಭಾಶಯದಲ್ಲಿ ಬೇರೆ ಬೇರೆ ರೋಗಗಳು ಉಂಟಾಗುತ್ತವೆ; ಮತ್ತು ಹೆಂಗಸು ತೀರ ಅಶಕ್ತಳಾಗುತ್ತಾಳೆ. ಗರ್ಭಪಾತದ ಕಾಲಕ್ಕೆ ಅತಿಶಯ ರಕ್ತಸ್ರಾವವಾಗುವದೇ ಹೆದರಿಕೆಯ ಮುಖ್ಯ ಕಾರಣವಿರುತ್ತದೆ.

**ಕಾ. ಫಾ:**— ಗರ್ಭಪಾತದ ಪ್ರವೃತ್ತಿಯುಳ್ಳ ಸ್ತ್ರೀಯರಿಗೆ ಇದರಿಂದ ಬಹಳ ಉಪಯೋಗವಾಗುವದು. ಇದನ್ನು ದಿನಾಲು ಸ್ವಲ್ಪ ಪ್ರಮಾಣದಲ್ಲಿ ತಿಂಗಳಗಟ್ಟಲೆ ಕೊಡಬೇಕು.

**ಕಲ್ಕೆ. ಫ್ಲೊ:**— ಗರ್ಭಾಶಯದೊಳಗಿನ ಸ್ನಾಯುಗಳ ಆಕುಂಚನ ಶಕ್ತಿಯನ್ನು ಬೆಳಿಸಲಿಕ್ಕೆಂದು ಇದನ್ನು ಕೊಡಬೇಕು. ಬಹಳ ರಕ್ತಸ್ರಾವ ವಾಗುವದು ಮತ್ತು ಗರ್ಭಾಶಯದೊಳಗಿಂದ ಏನಾದರೂ ಹೊರಬೀಳುತ್ತ ದೆಂದು ಅನಿಸುವದು, ಇವೇ ಎರಡು ಈ ರೋಗದ ಪ್ರಮುಖ ಭಾವನೆಗಳು.

**ಕಲ್ಕೆ. ಫಾ:**— ಗರ್ಭಪಾತದ ಪ್ರವೃತ್ತಿಯು ಇದ್ದರೆ ಬೇರೆ ಔಷಧ ಗಳ ಸಂಗಡ ಈ ಔಷಧವನ್ನೂ ನಡುನಡುವೆ ಕೊಡುತ್ತಿರಬೇಕು.

**ಉಪಯುಕ್ತ ಸೂಚನೆ:**— ರೋಗಿಗೆ ಶಾಂತವಾಗಿ ಸುಮ್ಮನೆ ಮಲಗಗೊಡಬೇಕು. ರಕ್ತಸ್ರಾವವು ಇರುವ ಕಾಲಕ್ಕೆ ಟೊಂಕದ ಕೆಳಗೆ ತಲೆಗಿಂಬವನ್ನಿಟ್ಟು ರೋಗಿಯ ಕಾಲು ಕೆಳಗೆ ಮಾಡಿ ಮಲಗಿಸಬೇಕು. ಗರ್ಭಪಾತವಾಗುವ ಸಮಯಕ್ಕೆ ಜಾಣರಾದ ಡಾಕ್ಟರ ಜನರನ್ನು ಕರೆ

ಕಳಿಸಿ ಅವರು ಹೇಳಿದಂತೆ ಉಪಚಾರ ಮಾಡಬೇಕು. ಗರ್ಭಪಾತದ ಪ್ರವೃತ್ತಿಯನ್ನು ನಿಲ್ಲಿಸುವದಕ್ಕಾಗಿ ನಮ್ಮ "ಗರ್ಭಿಣಿಮಿತ್ರ"ವೆಂಬ ಚೂರ್ಣವನ್ನು ಅವಶ್ಯವಾಗಿ ಕೊಟ್ಟು ನೋಡಬೇಕು. ತಾವಾಗಿ ಗರ್ಭಪಾತ ಮಾಡಿಸುವ ಪ್ರಯತ್ನ ಮಾಡಬಾರದು. ಅಂಥ ಪ್ರಯತ್ನದಿಂದ ಸ್ತ್ರೀಯರ ಪ್ರಕೃತಿಯ ಮೇಲೆ ಬಹಳ ಕೆಡಕಾದ ಹಾಗು ಬಹುದಿವಸ ಬಾಳುವಂಥ ಪರಿಣಾಮವಾಗುವದು. ಆದರೂ ಗರ್ಭವು ಒಳಗಿಂದೊಳಗೆ ಮೃತವಾಗಿದ್ದರೆ, ಕಟಿಭಾಗದಲ್ಲಿ ಗುಲ್ಮವಾಗಿ ಗರ್ಭದ ಬೆಳವಣಿಗೆಗೆ ಅಡ್ಡಿಯಾಗುತ್ತಿದ್ದರೆ, ಗರ್ಭೇಂದ್ರಿಯದಲ್ಲಿ ಏನಾದರೂ ದೋಷವಿದ್ದರೆ, ಅಥವಾ ಪಂಡುರೋಗದಂಥ ರೋಗಗಳಾಗಿದ್ದರೆ, ಹೆಂಗಸಿನ ಪ್ರಕೃತಿಯ ದೃಷ್ಟಿಯಿಂದ ವಿಚಾರ ಮಾಡಿ, ಜಾಣರಾದ ಡಾಕ್ಟರ ಜನರ ಅಭಿಪ್ರಾಯವನ್ನು ಕೇಳಿ, ಗರ್ಭಪಾತ ಮಾಡಿಸುವದೇ ಒಮ್ಮೊಮ್ಮೆ ಅವಶ್ಯವಾಗುತ್ತದೆ.

---

## ಗರ್ಭಾಶಯದಾಹ

**Metritis.** **ಮೆಟ್ರಾಯಿಟಸ್.**

ಗರ್ಭಾಶಯದ ಅಂತಸ್ತ್ವಚೆ, ಶ್ಲೇಷ್ಮಲತ್ವಚೆ ಮುಂತಾದ ಸ್ಥಳಗಳಲ್ಲಿ ಆಗುವ ದಾಹದ ವಿಚಾರವನ್ನು ನಾವು ಗರ್ಭಾಶಯದಾಹವೆಂಬ ಸದರಿನ ಕೆಳಗೆ ಒಂದೇ ಕಡೆಯಲ್ಲಿ ಮಾಡಿರುತ್ತೇವೆ. ಈ ರೋಗದಲ್ಲಿ ಶೀಘ್ರದಾಹವೆಂತಲೂ ಹಳೆಯ ದಾಹವೆಂತಲೂ ಎರಡು ಪ್ರಕಾರಗಳುಂಟು. ಟೊಂಕದ ಕೆಳಗೆ ಬೆನ್ನಿನಲ್ಲಿಯೂ ಗೆಜ್ಜೆಯಲ್ಲಿಯೂ ನೋಯುವದು, ಕಟಿಭಾಗದಲ್ಲಿ ಜಡವಾಗಿ ತುಂಬಿದಂತೆ ಅನಿಸುವದು, ಮೂತ್ರದ ಕಾಲಕ್ಕೆ ವೇದನೆಯಾಗುವದು, ಮೂತ್ರಕೃಚ್ಛ್ರವಾಗುವದು, ಹೊಕ್ಕಳ ಕೆಳಗೆ ಒತ್ತಿದರೆ ನೋಯುವದು, ಮುಂತಾದ ಭಾವನೆಗಳು ಶೀಘ್ರದಾಹದಲ್ಲಿ ಇರುವವು. ಹೆಚ್ಚುಕಡಿಮೆ ಪ್ರಮಾಣದಲ್ಲಿ ಜ್ವರವೂ ಇರುವದು. ಮೂರು ನಾಲ್ಕು ದಿವಸಗಳನಂತರ ಸೆರಗು ಹೋಗತೊಡಗುತ್ತದೆ. ಸ್ರಾವವು ಜಿಗಟೂ ಪಾರದರ್ಶಕವೂ ಇದ್ದು ಉಟ್ಟ ಸೀರೆಯ ಮೇಲೆ ಹಳದೀ ಕಲೆಗಳು ಬೀಳುತ್ತವೆ. ಬರಬರುತ್ತ ಆದರ ಪಾರದರ್ಶಕತನವು ಹೋಗಿ ಹೆಚ್ಚುಕಡಿಮೆ

ಪ್ರಮಾಣದಲ್ಲಿ ಕೀವು ಕೂಡುವದು. ಎಂಟು ಹತ್ತು ದಿವಸಗಳಸಂತರ ಇದೆಲ್ಲ ನಿಲ್ಲುತ್ತದೆ; ಸ್ರಾವವೂ ನಿಲ್ಲುತ್ತದೆ.

ಹಳೆಯ ದಾಹದಲ್ಲಿ ಕೆಳಗೆ ಹೇಳಿದ ಲಕ್ಷಣಗಳು ಇರುತ್ತವೆ. ಸ್ರಾವವಾಗುವದು. ಅದು ಬೂದೀ ಬಣ್ಣದ್ದಿರುವದು. ಒಮ್ಮೊಮ್ಮೆ ಜಿಗಟು ಕರಣೆಗಳು ಬೀಳುವವು. (ಗ್ರಂಥಿಯುಕ್ತ ಜಿಗಟು ಸ್ರಾವವು ಗರ್ಭಾಶಯದಲ್ಲಿಯ ಶೈತ್ಯದ ಲಕ್ಷಣವು. ಕೀವವುಳ್ಳ ತುರಿಸುವಂಥ ಸ್ರಾವವಿದ್ದರೆ, ಗರ್ಭಾಶಯಮಾರ್ಗದಲ್ಲಿ ಶೈತ್ಯವಾಗಿ ವ್ಯತ್ಯಾಸವಾಗಿದೆಯೆಂದು ತಿಳಿಯಬೇಕು.) ಗರ್ಭಾಶಯದಲ್ಲಿ ಪ್ರಸೂತಿ ಕಾಲದಂಥ ಸೂಲಿಗಳು ಏಳುವವು ಹಾಗು ಹೊಟ್ಟೆ ಮುರಿಯುವದು; ಮತ್ತು ಆಮಯುಕ್ತ ಕರಣಿಗಳು ಹೊರಬೀಳುವವು. ಮುಟ್ಟು ಒಮ್ಮೊಮ್ಮೆ ಹೆಚ್ಚಾಗುವದು, ಒಮ್ಮೊಮ್ಮೆ ಬಹಳೇ ಕಡಿಮೆಯಾಗುವದು. ಆಗ ಸ್ವಲ್ಪ ಹೊಟ್ಟೆಸೂಲಿಯೂ ಇರುವದು. ಗರ್ಭಾಶಯದಲ್ಲಿ ಹಳೆಯ ದಾಹವಿರುವ ಹೆಂಗಸರಿಗೆ ಅಕಾಲ ಗರ್ಭಪಾತವಿರುವ ಸಂಭವವಿದೆ. ಈ ರೋಗವು ಬಹುದಿವಸ ಉಳಿದರೆ ಮುಂದೆ ಮುಖವು ಬಾಡುವದು. ಮೈಯೊಳಗಿನ ಕಸುವು ಕಡಿಮೆಯಾಗುವದು. ಸ್ನಾಯು ಶಿಥಿಲವಾಗುವದು. ಪಂಡುರೋಗವೂ ಆಗುವದು. ಸ್ಪರ್ಶವು ಸಹನವಾಗುವದಿಲ್ಲ. ನಾಡಿಯಲ್ಲಿ ನಿಂತು ನಿಂತು ನೋಯುವದು. ಇವಲ್ಲದೆ ಹಿಸ್ಟೇರಿಯಾದ ಬೇರೆ ಭಾವನೆಗಳೂ ಕಂಡುಬರುವವು.

ಸೀತ ಹವೆ, ಮುಟ್ಟಿನ ಕಾಲಕ್ಕೆ ಹೆಚ್ಚು ಶ್ರಮ ಮಾಡುವದು, ಹಳೆಯ ಅಪರೋಧ, ಅತಿಸಂಗ, ಹಸ್ತಮೈಥುನ, ಕಂಕಣಕಾರವನ್ನು ಮೇಲಿಂದ ಮೇಲೆ ಗರ್ಭಾಶಯದಲ್ಲಿ ಇಟ್ಟುಕೊಳ್ಳುವದು, ಪೀತ ಪಂಡುರೋಗ, ಗಂಡಮಾಲೆಯ ಪ್ರಕೃತಿ, ಕ್ಷಯ, ಮಾಂಸಾರ್ಬುದ, ಅಶಕ್ತತೆಯನ್ನು ತರುವ ರೋಗಗಳು, ಮುಂತಾದವು ಈ ವಿಕೃತಿಯ ಕಾರಣಗಳಿರುತ್ತವೆ.

**ಫೇ. ಫಾ:—** ದಾಹದ ಪ್ರಥಮಾವಸ್ಥೆಯಲ್ಲಿಯ ಜ್ವರ, ವೇದನೆ, ರಕ್ತಸಂಚಯ ಮುಂತಾದವುಗಳನ್ನು ನಿಲ್ಲಿಸುವದಕ್ಕೆ ಇದನ್ನು ಕೊಡಬೇಕು. ಹೊರಗಿನಿಂದ ಉಷ್ಣೋಪಚಾರವನ್ನು ಮಾಡಬೇಕು. ಫೇರಂ ಫಾಸವನ್ನು ನೀರಿನಲ್ಲಿ ಹಾಕಿ ಅದರ ಕಾವು ಕೊಡಬೇಕು.

**ಕಾ. ಮೂ:—** ದ್ವಿತೀಯಾವಸ್ಥೆ. ಬಾವು ಹಳೆಯದಾಗಿದ್ದರೆ ಅಥವಾ ಗರ್ಭಾಶಯದ ವೃದ್ಧಿಯಾಗಿದ್ದರೆ, ಗರ್ಭಾಶಯವು ಬಿರುಸು ಹತ್ತುತ್ತಿದ್ದರೆ ಕಲ್ಕೆ. ಪ್ಲೂದ ಸಂಗಡ ಇದನ್ನು ಕೊಡಬೇಕು.

**ಉಪಯುಕ್ತ ಸೂಚನೆ:—**ಶೀಘ್ರದಾಹದ ಚಿಕಿತ್ಸೆಯನ್ನು ಕಾಲಕ್ಕೆ ಸರಿಯಾಗಿ ಮಾಡದಿದ್ದರೆ ಒಮ್ಮೊಮ್ಮೆ ಅದರ ದುಷ್ಪರಿಣಾಮವಾಗಿ ಗರ್ಭಾಶಯದ ವೃದ್ಧಿಯಾಗುವದು, ಅದು ಮೆತ್ತಗಾಗುವದು, ಕೊಳೆಯುವದು, ಕೀವಾಗುವದು ಮುಂತಾದ ಪ್ರಕಾರಗಳು ಕಂಡುಬರುತ್ತವೆ. ದೀರ್ಘ ದಾಹವು ಬಹಳ ವರ್ಷಗಳ ವರೆಗೆ ಇರುವದು. ಮುಟ್ಟು ನಿಲ್ಲುವ ಕಾಲಕ್ಕೆ, ಅಂದರೆ ವಯಸ್ಸು ೪೫-೪೭ ವರ್ಷಗಳಾದ ಬಳಿಕ, ಹಲಕೆಲವು ಪ್ರಸಂಗಗಳಲ್ಲಿ ಅದಕ್ಕಿಂತ ಮುಂಚಿತವಾಗಿಯೂ, ಈ ರೋಗವು ತನ್ನಷ್ಟಕ್ಕೆ ತಾನೇ ನೆಟ್ಟಗಾಗುವದುಂಟು. ಪೌಷ್ಟಿಕ ಹಾಗು ಪಚನವಾಗುವಂಥ ಸಾದಾ ಅನ್ನವು, ಸ್ವಚ್ಛವೂ ಶುದ್ಧವೂ ಆದ ಹವೆ, ನಿಯಮಿತ ಸಡಾವಳಿ ಮುಂತಾದವುಗಳಿಂದ ರೋಗವು ನೆಟ್ಟಗಾಗಲಿಕ್ಕೆ ಸಹಾಯವಾಗುವದು. ಬಹಳ ತಿರುಗಾಡುವದು, ಉಗಿಬಂಡಿ, ಮೋಟಾರ ಗಾಡಿ ಇವುಗಳಲ್ಲಿ ಪ್ರವಾಸ ಮಾಡುವದು, ಕುದುರೆಯ ಮೇಲೆ ಕೂಡ್ರುವದು, ಯಂತ್ರದಮೇಲೆ ಕುಳಿತು ಹೊಲೆಯುವದು, ಇವುಗಳನ್ನು ಬಿಟ್ಟುಬಿಡಬೇಕು. ಶೀಘ್ರದಾಹವಾಗಿದ್ದರೆ ಹೊಟ್ಟೆಯನ್ನು ಕಾಸಬೇಕು. ರೋಗಿಗೆ ಹಾಸಿಗೆಯ ಮೇಲೆ ಮಲಗಗೊಡಬೇಕು. ಬಾಣತಿತನದಲ್ಲಿ ಆಗುವಂಥ ಶೀಘ್ರದಾಹದ ಪರಿಣಾಮಗಳು ಭಯಂಕರವಿರುವವು ಎಂಬದನ್ನು ನೆನಪಿಸಲ್ಲಿಟ್ಟು ಅದರ ಬಗ್ಗೆಯೂ ಜಾಗರೂಕರಾಗಿರಬೇಕು; ಮತ್ತು ಯೋಗ್ಯವಾದ ಚಿಕಿತ್ಸೆಯನ್ನು ಮಾಡಬೇಕು.

---

## ಗರ್ಭಾಶಯಭ್ರಂಶ

**Uterine Displacement.** **ಯುಟರಾಯಿನ ಡಿಸ್‌ಪ್ಲೇಸಮೆಂಟ.**

ಗರ್ಭಾಶಯವು ತನ್ನ ಸ್ಥಳ ಬಿಟ್ಟು ಸರಿಯುವದಕ್ಕೆ ಗರ್ಭಾಶಯ ಭ್ರಂಶವೆಂತಲೂ ಯೋನಿಭ್ರಂಶವೆಂತಲೂ ಅನ್ನುತ್ತಾರೆ. ಅದು ಮೇಲೆ,

ಕೆಳಗೆ, ಮುಂದೆ, ಹಿಂದೆ, ಅಥವಾ ಮಗ್ಗಲಿಗೆ ಸರೆದು ಅಲ್ಲಿಯೇ ಉಳಿಯುತ್ತದೆ. ಅದು ಡಬ್ಬುಹಾಕುವದು (ಅಂದರೆ ಮೇಲಿನ ಮೈ ಕೆಳಗೆ ಮತ್ತು ಕೆಳಗಿನ ಮೈ ಮೇಲೆ ಆಗುವದು) ಅಥವಾ ಮುರಿಗೆ ಹಾಕುವದು; ಇದಕ್ಕಾದರೂ ಗರ್ಭಾಶಯಭ್ರಂಶವೆಂದೇ ಕರೆಯುತ್ತಾರೆ. ಗರ್ಭಾಶಯವು ಬಹುತರವಾಗಿ ಪ್ರಸೂತಿಕಾಲದಲ್ಲಿಯೇ ಡಬ್ಬುಹಾಕುವದು. ಅದರಿಂದ ಒಮ್ಮೊಂದೊಮ್ಮೆ ಶಕ್ತಿಪಾತವಾಗುವದು; ರಕ್ತಸ್ರಾವವಾದರೂ ಬಹಳಾಗುವದು. ಗರ್ಭಾಶಯ ಭ್ರಂಶದ ಸ್ವತಂತ್ರವಾದ ಭಾವನೆಗಳು ಯಾವವೂ ಇರುವದಿಲ್ಲ. ಯಾವ ಕಾರಣದಿಂದ ಭ್ರಂಶವಾಗುವದೋ ಆ ಕಾರಣಕ್ಕೆ ಅನುಸಾರವಾಗಿಯೆ ಭಾವನೆಗಳು ಕಂಡುಬರುತ್ತವೆ.

ಗರ್ಭಾಶಯದಲ್ಲಿ ದಾಹವು ಉಂಟಾಗುವದು, ಗಂಟುಗಳು ಏಳುವವು, ಗುದವೂ ಮೂತ್ರಾಶಯವೂ ಯಾವಾಗಲು ಉಬ್ಬಿರುವವು, ಗರ್ಭಾಶಯದ ಕಟ್ಟುಗಳು ಸಡಿಲಾಗುವವು, ಅಪಘಾತವಾಗುವದು, ಪೆಟ್ಟುತಾಕುವದು, ಇವು ಇದರ ಕಾರಣಗಳು.

ಗರ್ಭಾಶಯವು ಒಮ್ಮೊಮ್ಮೆ ಕೆಳಗೆ ಗರ್ಭಾಶಯಮಾರ್ಗದ ವರೆಗೆ ಇಳಿಯುವದು. ಆ ಕಾಲಕ್ಕೆ ಸರ್ವಸಾಧಾರಣವಾಗಿ ಕೆಳಗೆ ಬರೆದ ಲಕ್ಷಣಗಳು ಕಂಡುಬರುವವು.

ಕಟಿಭಾಗದಲ್ಲಿ ಜಡವಾಗಿ ಜಗ್ಗಿದಂತೆ ಅನಿಸುವದು. ವೃಕ್ಕದಲ್ಲಿಯೂ ಮೂತ್ರಪಿಂಡದ ಮಗ್ಗಲಿಗೂ ವೇದನೆಯಾಗುವದು. ಮೂತ್ರವು ಮೇಲಿಂಡಮೇಲೆ ಆಗುವದು; ಅದರಿಂದ ಬಹಳ ತ್ರಾಸವಾಗುವದು. ಮೂತ್ರಸ್ತಂಭವೂ ಅವರೋಧವೂ ಇರುವವು. ಕಾರಿಕೆಯೂ ಅಪಚನವೂ ಇರುವವು. ಒಮ್ಮೊಮ್ಮೆ ವ್ರಣವಾಗುವದು. ಅದು ದೊಡ್ಡದಾಗಿದ್ದರೆ ಕೀವಿನಂತೆ ಹೊಲಸು ಸ್ರಾವವಾಗುವದು. ಸೆರಗು ಹೋಗುವದು, ಮುಟ್ಟು ಬಹಳಾಗುವದು, ಆ ಕಾಲಕ್ಕೆ ನೋಯುವದು, ಅವರೋಧವಿರುವದು, ಮುಂತಾದ ಲಕ್ಷಣಗಳು ಇರುವವು. ಇವಲ್ಲದೆ ಕಣ್ಣಿಗೆ ಕತ್ತಲೆಬರುವದು, ಕೈಕಾಲು ಎದೆ ನೋಯುವದು, ಗಂಟಲು ಉಬ್ಬುವದು, ಉಸುರು ಕಟ್ಟಿದಂತಾಗುವದು ಮುಂತಾದ ಭಾವನೆಗಳಾದರೂ ಒಮ್ಮೊಮ್ಮೆ ಕಂಡುಬರುವವು.

**ಕಲ್ಕೆ. ಫ್ಲೊ**:— ಇದು ಈ ರೋಗದ ಮೇಲಿನ ಪ್ರಮುಖ ಔಷಧವು. ಗರ್ಭಾಶಯದಲ್ಲಿ ಸ್ನಾಯುಗಳ ಶಿಥಿಲತೆಯನ್ನು ಇಲ್ಲದಂತೆ ಮಾಡಿ ರೋಗವು ನೆಟ್ಟಗಾಗಲಿಕ್ಕೆ ಸಹಾಯ ಮಾಡುತ್ತದೆ.

**ಕಾ. ಫಾ**:— ಕಣ್ಣಿಗೆ ಕತ್ತಲೆ ಬರುವದು, ಗಂಟಲಿನಲ್ಲಿ ಗಂಟು ಬಂದಂತಾಗುವದು, ಉಸಿರುಕಟ್ಟುವದು, ಮುಂತಾದ ಭಾವನೆಗಳಿಗೆ ಇದರ ಉಪಯೋಗವಾಗುವದು.

**ಕಲ್ಕೆ. ಫಾ**:— ಇದನ್ನು ಬೇರೆ ಔಷಧಗಳ ಸಂಗಡ ನಡುನಡುವೆ ಕೊಡಬೇಕು.

**ಮ್ಯಾ. ಫಾ**:—ಮುಟ್ಟಾಗುವ ಕಾಲಕ್ಕೆ ಕಳೆ ಏಳುವದು, ಎದೆಯಲ್ಲಿ ಬಹಳ ನೋಯುವದು ಇವುಗಳಿಗೆ ಈ ಔಷಧದ ಉಪಯೋಗವಾಗುವದು.

**ನೇ. ಮೂ**:— ಅಶಕ್ತರಾದ ಸ್ತ್ರೀಯರಿಗೆ ಸೋತಂತೆ ಅನಿಸುತ್ತದೆ. ನೀರಿನಂತೆ ತೆಳ್ಳಗೆ ಸೆರಗು ಹೋಗುತ್ತದೆ. ಕುಳಿತುಕೊಂಡರೆ ಮಾತ್ರ ನೆಟ್ಟಗೆನಿಸುತ್ತದೆ.

**ಫೇ. ಫಾ**:— ಜ್ವರ ಮೊದಲಾದ ದಾಹಯುಕ್ತ ಭಾವನೆಗಳಿದ್ದರೆ ಇದನ್ನು ನಡುನಡುವೆ ಕೊಡಬೇಕು.

**ಉಪಯುಕ್ತ ಸೂಚನೆ**:— ಗರ್ಭಾಶಯಭ್ರಂಶದ ಕಾರಣಕ್ಕೆ ಅನುಸಾರವಾಗಿ ಚಿಕಿತ್ಸೆಯನ್ನು ಮಾಡಬೇಕು. ಗರ್ಭಾಶಯಭ್ರಂಶಕ್ಕೆ ಸ್ವತಂತ್ರ ಭಾವನೆಗಳು ಇರುವದಿಲ್ಲವೆಂದು ಮೇಲೆ ಹೇಳಿಯೆ ಇದೆ. ಹೆಂಗಸರು ಹಡೆದ ಬಳಿಕ ಬಹಳ ವಿಶ್ರಾಂತಿಯನ್ನು ತೆಗೆದುಕೊಳ್ಳುವದು ಅವಶ್ಯವಾಗಿದೆ. ಗರ್ಭಾಶಯದಲ್ಲಿ ಕಂಕಣಕಾರವನ್ನಿಟ್ಟು ಈ ರೋಗವನ್ನು ನೆಟ್ಟಗೆ ಮಾಡುವ ಗೋಜಿಗೆ ಹೋಗಬಾರದು. ಹೊಟ್ಟೆಯಲ್ಲಿ ಔಷಧ ಕೊಟ್ಟು ಅದನ್ನು ನೆಟ್ಟಗೆ ಮಾಡಬಹುದು.

" ಪ್ರಸೂತಿ"ಯೆಂಬ ಸದರು ನೋಡಿರಿ.

# ಗರ್ಭಾಶಯದ ರೋಗ

**Diseases of the uterus.** ಡಿಸೀಜೆಸ್ ಆಫ ದಿ ಯುಟರಸ್.

ಗರ್ಭಾಶಯವು ಪೂರ್ಣವಾಗಿ ಬೆಳೆಯದಿರುವದು, ಗರ್ಭಾಶ್ರಯದ ಭ್ರಂಶವಾಗುವದು, ತೀಕ್ಷ್ಣ ಅಥವಾ ದೀರ್ಘದಾಹವಿರುವದು, ಗರ್ಭಾಶಯದಲ್ಲಿ ಮಾಂಸಾರ್ಬುದ (ಯೋನಿಕಂದ) ವಾಗುವದು, ಇವು ಗರ್ಭಾಶಯದ ರೋಗಗಳು. ಇವುಗಳ ಹೊರತಾಗಿ ಗರ್ಭಾಶಯದಲ್ಲಿ ಕ್ಷಯ ವಾಗುವದು, ಅಪಘಾತಜನ್ಯ ರೋಗವಾಗುವದು, ಇವಾದರೂ ಗರ್ಭಾಶಯದ ರೋಗಗಳೇ ಅಹುದು.

ಅನಾರ್ತವ, ಪೀಡಿತಾರ್ತವ, ಅಲ್ಪಾರ್ತವ, ಸಂಭೋಗ ಕಾಲದಲ್ಲಿ ವ್ಯಥೆ, ಗರ್ಭಧಾರಣವಾಗಲಿಕ್ಕೂ ಪ್ರಸೂತಿಯ ಕಾಲಕ್ಕೆ ಕೂಸು ಹೊರಗೆ ಬರಲಿಕ್ಕೂ ಅಡ್ಡಿಯಾಗುವದು, ಇವೇ ಮುಂತಾದ ಪ್ರಕಾರಗಳು ಗರ್ಭೇಂದ್ರಿಯವು ಸರಿಯಾಗಿ ಬೆಳೆದಿರದಿದ್ದರೆ ಕಂಡುಬರುವವು.

ಗರ್ಭಾಶಯವು ತನ್ನ ಸ್ಥಳ ಬಿಟ್ಟು ಸರಿಯುವದು; ಇದಕ್ಕೆ ಗರ್ಭಾಶಯಭ್ರಂಶವೆನ್ನುತ್ತಾರೆ.

"ಗರ್ಭಾಶಯಭ್ರಂಶ"ವೆಂಬ ಸದರು ನೋಡಿರಿ.

ಗರ್ಭಾಶಯದಾಹ, ಗುಲ್ಮ, ರಕ್ತಸ್ರಾವ, ಪ್ರಸೂತಿಜ್ವರ ಮುಂತಾದ ಸದರುಗಳ ಕೆಳಗೆ ಗರ್ಭಾಶಯದ ಒಗ್ಗೆ ಬೇರೆ ರೋಗಗಳ ಮಾಹಿತಿಯು ಸಿಗುವದು. ಇಲ್ಲಿ ಗರ್ಭಾಶಯದ ಎಲ್ಲ ರೋಗಗಳ ವಿಷಯವಾಗಿ ಸ್ಥೂಲ ಚಿಕಿತ್ಸೆಯನ್ನು ಹೇಳುತ್ತೇವೆ.

**ಫೇ. ಫಾ:—** ಜ್ವರ, ವೇದನೆ, ರಕ್ತಸಂಚಯ ಮುಂತಾದ ದಾಹದ ಪ್ರಥಮಾವಸ್ಥೆಯಲ್ಲಿಯ ಭಾವನೆಗಳ ಮೇಲೆ. ಮೂತ್ರಾಶಯಮಾರ್ಗದ ದಾಹ. ಸಂಭೋಗದ ನಂತರ ಆ ಸ್ಥಳದಲ್ಲಿ ವೇದನೆಯಾಗುವದು. ಗರ್ಭಾಶಯಮಾರ್ಗವು ತೀರ ಒಣಗಿದ್ದು ಅಲ್ಲಿ ಸ್ಪರ್ಶವು ಸಹನವಾಗುವದಿಲ್ಲ. ಮೂತ್ರಾಶಯಮಾರ್ಗದಲ್ಲಿ ಒರಟೆ ಬರುವವು. ಹೊರಗಿನಿಂದ ಉಷ್ಣೋಪಚಾರ ಮಾಡಬೇಕು. ಮತ್ತು ಗರ್ಭಾಶಯದ ಈ ಔಷಧ ಹಾಕಿದಂಥ ಬಿಸಿನೀರಿನ ಬಸ್ತಿಯನ್ನು ಕೊಡಬೇಕು.

**ಕಾ. ಮೂ:—** ದ್ವಿತೀಯಾವಸ್ಥೆ. ಸ್ರಾವವು ಆರಂಭವಾದ ಬಳಿಕ ಗರ್ಭಾಶಯದ ಬಾಯಿ ಹಾಗು ಕುತ್ತಿಗೆಯ ನಡುವೆ ವ್ರಣ. ಆದರೊಳಗಿಂದ ದಟ್ಟಗೆ, ಬೆಳ್ಳಗೆ, ಉರುಪಿಲ್ಲದ, ಸೌಮ್ಯವಾದ ಸ್ರಾವವಿದ್ದರೆ ಇದರಿಂದ ವಿಶೇಷವಾಗಿ ಉಪಯೋಗವಾಗುವದು. ಗರ್ಭಾಶಯದಲ್ಲಿ ಬಹುದಿವಸ ರಕ್ತಸಂಚಯುವಾಗುತ್ತದೆ. ಗರ್ಭಾಶಯುವು ಬೆಳೆದಿರುತ್ತದೆ. ಹೀಗೆ ಬೆಳೆದಿದ್ದ ಸ್ಥಳವು ಕಲ್ಲಿನಂತೆ ಗಟ್ಟಿಯಾಗಿರದಿದ್ದರೆ ಈ ಔಷಧದ ಉಪಯೋಗ ಮಾಡ ಬೇಕು. ಅದು ಗಟ್ಟಿಯಾಗಿದ್ದರೆ ಕಲ್ಕೆ. ಫ್ಲೊ. ಕೊಡಬೇಕು.

**ಕಾ. ಫಾ:—** ಗರ್ಭಾಶಯುದಿಂದ ರಕ್ತಸ್ರಾವವಾಗುವದು. ಅದು ತೆಳ್ಳಗೂ, ಅಚ್ಚ ಕೆಂಪಾಗಿಯೂ, ನಸುಗೆಂಪಾಗಿಯೂ ಇರುವದು. ಗರ್ಭಾಶಯ ಭ್ರಂಶವಾಗುವದು. ರೋಗಿಯು ಅಂಜುಬುರುಕನೂ ಉತಾವಳಿಯೂ ಆಗಿರುವನು.

**ಕಲ್ಕೆ. ಫ್ಲೊ:—** ಇದು ಗರ್ಭಾಶಯುಭ್ರಂಶದ ಮೇಲಿನ ಪ್ರಮುಖ ಔಷಧವು. ಸ್ನಾಯುಗಳ ಶಿಥಿಲತೆಯುನ್ನು ನಾಶಗೊಳಿಸಿ ರೋಗವನ್ನು ನೆಟ್ಟಗೆ ಮಾಡಲು ಇದು ಒಳ್ಳೆಯ ಔಷಧವು. ಗರ್ಭಾಶಯದಲ್ಲಿಯೂ ತೊಡೆಯಲ್ಲಿಯೂ ಬೆನ್ನಿನ ಕೆಳಭಾಗದಲ್ಲಿಯೂ ಜಗ್ಗಿದಂತೆ ವೇದನೆಯಾಗುತ್ತದೆ. ಗರ್ಭಾಶಯುವು ಬೆಳೆಯುವದು. ಹೀಗೆ ಬೆಳೆದಿದ್ದ ಭಾಗವು ಕಲ್ಲಿನಂತೆ ಬಿರುಸು ಹತ್ತುವದು. ಗರ್ಭಾಶಯದ ಕುತ್ತಿಗೆಯ ಮೇಲಿನ ಭಾಗವು ತಿಕ್ಕಿದಂತೆಯೂ ಚಿವುರಿದಂತೆಯೂ ಆಗುವದು. ಬಹು ದಿನದ ಗರ್ಭಾಶಯದಾಹ.

**ಕಲ್ಕೆ. ಫಾ:—** ಗರ್ಭಾಶಯುಭ್ರಂಶ. ಅಶಕ್ತತೆ. ತೀರ ಸೋತ ಹಾಗೆ ಅನಿಸುವದು. ಗರ್ಭಾಶಯುಭ್ರಂಶದ ಮೂಲಕ ಸಂಧಿವಾತದಲ್ಲಿ ಏಳುವಂತೆ ಕಳೆಗಳು ಏಳುತ್ತವೆ. ಗರ್ಭಾಶಯ ಭಾಗದಲ್ಲಿ ಅಶಕ್ತತೆಯೂ ಅಸ್ವಸ್ಥತೆಯೂ ಅನಿಸುತ್ತದೆ. ಮುಟ್ಟಾಗುವದಕ್ಕಿಂತ ಮುಂಚೆ ಪ್ರಬಲವಾದ ಸಂಭೋಗೇಚ್ಛೆಯಾಗುವದು. ಪ್ರಾಕೃತಿಕ ಉಪಾಯವೆಂದು ಈ ಔಷಧದ ಉಪಯೋಗವು ಬಹಳಾಗುವದು. ಗರ್ಭಾಶಯದ ಯಾವದೇ ರೋಗದಲ್ಲಿ ಬೇರೆ ಔಷಧಗಳ ಸಂಗಡ ಈ ಔಷಧವನ್ನೂ ಮೇಲಿಂದಮೇಲೆ ಕೊಡುತ್ತಿರಬೇಕು.

**ಸಪೀಡಾರ್ತವ, ಅಶ್ಮಾರ್ತವ, ಮುಟ್ಟು, ಪ್ರದರ, ಗರ್ಭಾಶಯದಾಹ, ಗರ್ಭಧಾರಣ ಮತ್ತು ಪ್ರಸೂತಿ ಮುಂತಾದ ಸದರುಗಳನ್ನು ನೋಡಿರಿ.**

---

## ಗರ್ಭಧಾರಣ ಮತ್ತು ಪ್ರಸೂತಿ

**Pregnancy and labour.** ಪ್ರೆಗ್ನನ್ಸಿ ಅಂಡ ಲೇಬರ.

ಬಯಕೆಯಾಗುವದು, ಕಾರುವದು, ತಲೆ ನೋಯುವದು, ಕಣ್ಣಿಗೆ ಕತ್ತಲೆ ಬರುವದು, ಮುಂತಾದ ಭಾಪನೆಗಳೇ ಗರ್ಭಿಣಿ ಅವಸ್ಥೆಯಲ್ಲಿ ವಿಶೇಷವಾಗಿ ಕಂಡುಬರುವವು. ಒಯಕೆ, ಕಾರಿಕೆ ಮುಂತಾದ ಪ್ರಕಾರಗಳು ಮೊದಲಿನ ಎರಡು ಮೂರು ತಿಂಗಳಲ್ಲಿಯೇ ಇರುವವು. (ಕಾರಿಕೆ, ತಲೆನೋವು ಮುಂತಾದ ಭಾವನೆಗಳ ಚಿಕಿತ್ಸೆಯನ್ನು ಆಯಾ ಸದರಿನ ಕೆಳಗೆ ಮಾಡಿರುತ್ತದೆ. ಗರ್ಭಿಣಿ ಅವಸ್ಥೆಯಲ್ಲಿಯೂ ಅದೇ ಚಿಕಿತ್ಸೆಯು ಉಪಯೋಗವಾಗುತ್ತದೆ. ಆದುದರಿಂದ ಅದರ ಬಗ್ಗೆ ಆಯಾ ಸ್ಥಳಗಳಲ್ಲಿ ನೋಡಬೇಕು.) ಇವುಗಳ ಹೊರತಾಗಿ ಮೇಲಿಂದಮೇಲೆ ಮೂತ್ರವಾಗುವದು, ಮೊಲೆಗಳು ಉಬ್ಬುವವು; ಮತ್ತು ಅವು ನೋಯುವವು; ಒರಟಿ ಬರುವದು; ಜೊಲ್ಲು ಸೋರುವದು; ಅದರಿಂದ ತ್ರಾಸವಾಗುವದು, ಹಲ್ಲುಬೇನೆ, ಅಪಚನದ ತಕರಾರು, ಅವರೋಧ ಅಥವಾ ಅತಿಸಾರ, ಜನನೇಂದ್ರಿಯದಲ್ಲಿ ತಿಂಡಿ ಬಿಡುವದು, ಮಾನಸಿಕ ತ್ರಾಸವಾಗುವದು, ಮುಂತಾದ ವಿಷಯದ ತಕರಾರು ಗರ್ಭಿಣಿ ಅವಸ್ಥೆಯಲ್ಲಿ ಕಂಡುಬರುವದು.

ಪ್ರಸೂತಿಯ ಸೂಲಿಗಳು ಬಹಳ ಹೊತ್ತು ಬರುವದರಿಂದ ತ್ರಾಸವಾಗುವದು, ಪ್ರಸೂತಿಕಾಲದ ಸೂಲಿಗಳು ಸಾಕಷ್ಟು ಬಾರದಿರುವದು, ಪ್ರಸೂತಿಯಾದನಂತರ ಹೊಟ್ಟೆಯು ಬಹಳ ಕಡಿಯುವದು, ರಕ್ತಸ್ರಾವವು ಬಹಳಾಗುವದು, ದುಗ್ಧಜ್ವರವು ಅಥವಾ ಪೂಯದುಷ್ಟ ರಕ್ತಜನ್ಯ ಜ್ವರವು ಬರುವದು, ಒರಟಿ ಬರುವದು, ಎಚ್ಚರ ತಪ್ಪುವದು, ಗರ್ಭಾಶಯದ ಆಕುಂಚನವಾಗಿ ಅದು ಪೂರ್ವಸ್ಥಿತಿಯನ್ನು ಹೊಂದದಿರುವದು, ಸ್ರಾವವು ಹೋಗುವದು, ಮಾಂಸ ಬೀಳುವ ತಕರಾರು

ಬರುವದು, ಹಾಲು ಕಡಿಮೆಯಾಗುವದು ಅಥವಾ ಕೆಡುವದು, ಸ್ತನ ವಿದ್ರಧಿಯಾಗುವದು, ಸ್ತನದಲ್ಲಿ ಬೇರೆ ವಿಕೃತಿ ಕಂಡುಬರುವದು, ಮುಂತಾದ ಹಲವು ತಕರಾರುಗಳು ಪ್ರಸೂತಿಯ ಕಾಲದಲ್ಲಿ ಉಂಟಾಗುವ ಸಂಭವವಿರುತ್ತದೆ. ಗರ್ಭಿಣಿ ಅವಸ್ಥೆಯಲ್ಲಿಯೂ ಪ್ರಸೂತಿ ಕಾಲದಲ್ಲಿಯೂ ಉಂಟಾಗುವ ತಕರಾರುಗಳ ವಿಚಾರವನ್ನು ಈ ಗ್ರಂಥದಲ್ಲಿ ಬೇರೆ ಬೇರೆ ಕಡೆಗೆ ಮಾಡಿದ್ದೇವೆ. ಇಲ್ಲಿ ಪ್ರಸೂತಿ ಕಾಲದಲ್ಲಿ ಆಗತಕ್ಕ ವಿಕಾರಗಳ ಮೇಲೆ ಯಾವ ಯಾವ ಔಷಧಗಳು ಯಾವ ಯಾವ ರೀತಿಯಿಂದ ಉಪಯೋಗವಾಗುತ್ತವೆಂಬದನ್ನು ಸ್ವಲ್ಪದರಲ್ಲಿ ಒಂದೇಕಡೆಗೆ ಕೊಡುತ್ತೇವೆ.

**ಫೇ. ಫಾ:**— ಬಸಿರಾದಾಗ ಅನ್ನದ ವಾಂತಿಯಾಗುವದು. ಹಡೆದ ಬಳಿಕ ಸೂಲಿಗಳು ಬರುವವು. ದುಗ್ಧಜ್ವರ. ಕೂಸು ಗರ್ಭದಿಂದ ಹೊರ ಬೀಳುವಾಗ ಗರ್ಭಾಶಯದಲ್ಲಿ ಕೊರೆದಂತೆಯೂ ಚಚ್ಚಿದಂತೆಯೂ ಆಗುತ್ತಿದ್ದರೆ ಅದನ್ನು ನೆಟ್ಟಗೆ ಮಾಡಲಿಕ್ಕೆಂದು ಈ ಔಷಧವನ್ನು ಕೊಡಬೇಕು. ಗರ್ಭಾಶಯದಲ್ಲಿ ದಾಹಯುಕ್ತ ವೇದನೆಯಾಗುವದು. ಸ್ತನಗಳ ಬಾವು ಮತ್ತು ನೋವು. ಪ್ರಸೂತಿಜ್ವರದ ಮೇಲೆ ಕಾಲೀ ಫಾಸದ ಸಂಗಡ ಇದನ್ನು ಕೊಡಬೇಕು. ಪ್ರಸೂತಿಯಾದ ಕೂಡಲೆ ಫೇರಂಫಾಸವನ್ನು ಕೊಟ್ಟರೆ ಪ್ರಸೂತಿಯ ನಂತರದ ವೇದನೆಗಳೂ ದುಗ್ಧಜ್ವರವೂ ನಿಲ್ಲುವವು. ಮೊಲೆ ಕುಡಿಯುವ ಕೂಸುಗಳಿಗೆ ಜ್ವರವು ಬಂದರೆ ಈ ಔಷಧವನ್ನು ಕಾಲೀ ಫಾಸದ ಸಂಗಡ ಕೊಡಬೇಕು.

**ಕಾ. ಫಾ:**— ಪ್ರಸೂತಿಯ ವೇದನೆಗಳು ಕಡಿಮೆಯಾಗಿ ಅನಿಯಮಿತವಾಗಿ ಬಹಳ ಸಾರೆ ಬರುತ್ತವೆ. ಪ್ರಾಕೃತಿಕ ಅಶಕ್ತತನದಿಂದಲೂ ಮಾನಸಿಕ ಹೆದರಿಕೆಯಿಂದಲೂ ಪ್ರಸೂತಿಯು ಮಂದವಾಗಿ ಮೆಲ್ಲಗೆ ಆಗುತ್ತದೆ. ರೋಗಿಯು ಅಸ್ವಸ್ಥ, ಬೆದರಬಡಕಳೂ, ಅಳುಬುರುಕಳೂ ಇರುತ್ತಾಳೆ. ಪ್ರಸೂತಿಯ ನಿಜವಾದ ಸೂಲಿಗಳು ಜೋರಿನಿಂದ ಬರಬೇಕಾಗಿದ್ದರೆ. ಇಂಥ ರೋಗಿಗಳಿಗೆ ಹತ್ತು ಹದಿನೈದು ಮಿನಿಟಿಗೆ ಒಮ್ಮೆ ಕಾಲೀ ಫಾಸವನ್ನು ಕೊಟ್ಟರೆ ಮೈಯಲ್ಲಿ ಚಟುವಟಿಕೆ ಬರುತ್ತದೆ; ಪ್ರಸೂತಿಯೂ ಬೇಗನೆ ಆಗುತ್ತದೆ. ಅಕಾಲದಲ್ಲಿ ಗರ್ಭಪಾತದ ಹೆದರಿಕೆಯಿದ್ದರೆ ಇದನ್ನು ಕೊಡಬೇಕು.

ಪೂಯದುಷ್ಟ ರಕ್ತಜನ್ಯ ಜ್ವರದಮೇಲೆ ( ಸೆಪ್ಟಿಕ್ ಫೀವರ ). ಪ್ರಸೂತಿಯು ಕಿಂತ ಮುಂಚೆ ಬಹಳ ದಿವಸದಿಂದ ಈ ಔಷಧವನ್ನು ಕೊಡುವ ಕ್ರಮ ವಿಟ್ಟರೆ ಸುಖಪ್ರಸೂತಿಯಾಗಲಿಕ್ಕೆ ಬಹಳ ಸಹಾಯವಾಗುವದು.

**ವ್ಯಾ. ಫಾ**:— ಒಮ್ಮೆಲೆ ಹಾಗು ನಿಂತು ನಿಂತು ಬರುವ ವೇದನೆ. ಕಾಲಿನ ಪಿಂಡರಿಗಳಲ್ಲಿ ಒರಟಿ ಬರುವವು. ಗರ್ಭಾಶಯದ ದ್ವಾರವು ಬಿರುಸಾಗುವದು. ಅದರ ತುದಿಗಳು ತೆಳ್ಳಗೆ ಆಗುವವು. ಸೂಲಿಗಳು ಕಡಿಮೆ ಯಾಗುತ್ತವೆ ಮತ್ತು ಬಹಳ ವೇಳೆ ತಡೆಯುವದಿಲ್ಲ. ಅಥವಾ ಅವು ಭರದಿಂದ ಬಂದು ಗರ್ಭದೊಳಗಿನ ಪದಾರ್ಥವನ್ನು ಹೊರದೂಡಲು ಜೋರಿನಿಂದ ಪ್ರಯತ್ನ ಮಾಡುವಂತೆ ಅನಿಸುವದು. ಒರಟೆಗಳೂ ಬರುವವು. ಈ ಔಷಧವನ್ನು ಬಿಸಿನೀರಿನಲ್ಲಿ ಮೇಲಿಂದಮೇಲೆ ಕೊಡಬೇಕು.

**ಕಾ. ಮೂ**:— ಮೊಲೆ ಕುಡಿಯುವ ಕೂಸಿನ ಜ್ವರದ ಮೇಲೆಯೂ ಪ್ರಸೂತಿಜ್ವರದ ಮೇಲೆಯೂ ಇದು ಪ್ರಮುಖ ಔಷಧವು. ಸ್ತನಗಳ ಬಾವು ನೋವುಗಳ ಮೇಲೆ ಫೇರಂ ಫಾಸವನ್ನೂ ಇದನ್ನೂ ಅದಲುಬದಲು ಮಾಡಿ ಕೊಡಬೇಕು. ಕೀವು ಆಗುವದಕ್ಕಿಂತ ಮುಂಚೆ ಕೊಟ್ಟರೆ ಹಿತ ವಾಗುವದು. ಪ್ರಸೂತಿಜ್ವರದ ಮೇಲೆ. ಬಸಿರಾದ ಹೆಂಗಸರ ಕಾರಿಕೆಯ ಮೇಲೆ. ಕಫವು ಬೆಳ್ಳಗೆ ಬೀಳುತ್ತಿದ್ದರೆ ಇದನ್ನು ಕೊಡಬೇಕು.

**ಕಲ್ಕೆ. ಫಾ**:— ಮೊಲೆಗಳು ನೋಯುವವು, ಉರಿಯುವವು, ಬಿರುಸಾಗುವವು. ತಾಯಿಯ ಮೊಲೆಹಾಲು ಕೆಟ್ಟು ನೀಲಿಯಾಗುತ್ತದೆ; ಅದು ಉಪ್ಪುಪ್ಪು ಹತ್ತುತ್ತದೆ. ಕೂಸು ಹಾಲು ಕುಡಿಯುವದಿಲ್ಲ. ಪ್ರಸೂತಿಯು ಪೂರ್ವದಲ್ಲಿಯೂ ಅನಂತರವೂ ಬರುವಂಥ ಅಶಕ್ತತೆಯ ಮೇಲೆ ಶಕ್ತಿದಾಯಕ ವೆಂದು ಇದನ್ನು ಕೊಡಬೇಕು. ಗರ್ಭಾಶಯಭ್ರಂಶ. ಮೇಲಿಂದಮೇಲೆ ಗರ್ಭಪಾತವಾಗುವದು. ಇನ್ನೂ ಬಾಣತಿಯಾಗಿರುವಾಗಲೇ ಮುಟ್ಟು ಹೋಗುವದು. ಬಸಿರಾದಾಗ ಯಾವತ್ತು ಅವಯವಗಳಲ್ಲಿ ದಣುವಿಕೆ ಇರುವದು.

**ಕಲ್ಕೆ. ಫ್ಲೋ**:— ಪ್ರಸೂತಿಯು ನಂತರ ಬರುವ ವೇದನೆಗಳು ಬಹಳ ಮಂದವಾಗಿರುತ್ತವೆ. ಆಕುಂಚನ ಕ್ರಿಯೆಯು ಮೆಲ್ಲಗೆ ನಡೆಯುತ್ತದೆ.

ಪ್ರಸೂತಿಯಾದ ಬಳಿಕ ರಕ್ತಸ್ರಾವವನ್ನು ನಿಲ್ಲಿಸುವದಕ್ಕೆಂದು ಈ ಔಷಧ- ವನ್ನು ಕೊಡಬೇಕು. ಮೊಲೆಗಳಲ್ಲಿ ಗಟ್ಟಿಯಾದ ಗಂಟುಗಳು ಹತ್ತುತ್ತವೆ. ಹಾಲು ಬರುವದಿಲ್ಲ ಅಥವಾ ಕಡಿಮೆ ಬರುತ್ತವೆ. ಗರ್ಭಾಶಯದಲ್ಲಿಯ ಸ್ನಾಯುಗಳ ಶೈಥಿಲ್ಯದ ಮೂಲಕ ಸೂಲಿಗಳು ಸಾಕಷ್ಟು ಬರದಿದ್ದರೆ ಇಲ್ಲವೆ ಮಂದವಾಗಿ ಬರುತ್ತಿದ್ದರೆ ಕಲ್ಕೆ. ಫ್ಲೂದ ಉಪಯೋಗವಾಗುತ್ತದೆ. ಆದರೆ ಮಜ್ಜಾತಂತುಗಳ ದೌರ್ಬಲ್ಯದ ಮೂಲಕ ( ಅಂದರೆ ಮಾನಸಿಕ ದೌರ್ಬಲ್ಯದ ಮೂಲಕ ) ಸೂಲಿಗಳು ಸಾಕಷ್ಟು ಬರದಿದ್ದರೆ ಕಾಲೀಫಾಸವನ್ನು ಕೊಡ ಬೇಕು. ಗರ್ಭಾಶಯಭ್ರಂಶವಾಗಿದ್ದರೆ ಈ ಔಷಧದ ಬಸ್ತಿಯನ್ನು ಕೊಟ್ಟರೆ ಗುಣವು ಬರುವದು.

**ನೇ. ಸ:—** ಹಾಲು ವಾಡಿಕೆಗಿಂತ ಹೆಚ್ಚಾಗಿ ಬರುತ್ತಿದ್ದರೆ ಈ ಔಷಧವು ಅದನ್ನು ಕಡಿಮೆ ಮಾಡುವದು. ಬಸಿರಾದಾಗ ಪಿತ್ತದ ವಾಂತಿ ಯಾಗುವದು. ಬಾಯಿಯು ಕಹಿಯಾಗುತ್ತಿದ್ದರೆ ಇದನ್ನು ಕೊಡಬೇಕು.

**ಸಿ:—** ಸ್ತನವಿದ್ರಧಿ. ಕಾಲೀ ಮೂರದಿಂದ ನೆಟ್ಟಗಾಗದೆ ಕೀವು ತುಂಬುವದು. ಮೊಲೆಗಳಲ್ಲಿ ಬಿರುಸಾದ ಗಂಟುಗಳು ಹತ್ತುತ್ತವೆ. ಕೂಸು ಹಾಲು ಕುಡಿಯುವದಿಲ್ಲ. ಒಂದು ವೇಳೆ ಕುಡಿದರೂ ಅದನ್ನು ಕಾರಿ ಬಿಡುತ್ತದೆ. ಮೊಲೆಗಳು ಸೀಳುತ್ತವೆ ಮತ್ತು ಕೊಳೆಯುತ್ತವೆ.

**ಉಪಯುಕ್ತ ಸೂಚನೆ:—**ಬಸಿರಾದಾಗ, ಹಡೆಯುವಾಗ, ಮತ್ತು ಹಡೆದ ಬಳಿಕ, ಜೀವನರಸಾಯನ ಔಷಧಗಳಿಂದ ಬಹಳೇ ಆಶ್ಚರ್ಯಕಾರಕ ವಾದ ಗುಣವು ಬರುತ್ತದೆಂದು ಅನುಭವವಿದೆ. ಈ ಔಷಧಗಳನ್ನು ಕಾಲಕ್ಕೆ ಸರಿಯಾಗಿ ತೆಗೆದುಕೊಂಡರೆ ಹೆಂಗಸರಿಗೆ ಆಗುತ್ತಿರುವ ಮಾನಸಿಕ ತ್ರಾಸವೂ ಹೆದರಿಕೆಯೂ ಬಹುಮಟ್ಟಿಗೆ ಕಡಿಮೆಯಾಗುತ್ತದೆ; ಸುಖಪ್ರಸೂತಿಯಾಗು ತ್ತದೆ; ಮತ್ತು ಪ್ರಸೂತಿ ಕಾಲದ ತ್ರಾಸವು ಸಹನವಾಗುತ್ತದೆ. ಗರ್ಭ ಧಾರಣವಾದಂದಿನಿಂದ ಹಡೆಯುವ ವರೆಗೆ ಹೆಂಗಸರಿಗೆ ಒಂದು ತರದ ಮಾನ ಸಿಕ ವ್ಯಥೆಯಾಗುತ್ತದೆ. ಈ ಕಾಲದಲ್ಲಿ ಜ್ಞಾನತಂತುವಿನ ಕೆಲಸವು ಭರದಿಂದ ಸಾಗುತ್ತದೆ. ಆದುದರಿಂದ ಬಸಿರಾದಾಗ ಕಾಲೀಫಾಸವನ್ನು ಒಂದೇಸವನೆ ಕೊಡುತ್ತ ಹೋದರೆ ಅದರಿಂದ ಬಹಳ ಉಪಯೋಗವಾಗುವದು.

ಪ್ರಸೂತಿಯ ಸೂಲಿಗಳ ಮೇಲೆ ಕಾಲೀಫಾಸವೇ ಪ್ರಮುಖವಾದ ಔಷಧವು. ಒರಟಿಗಳು ಭರದಿಂದ ಬರುತ್ತಿದ್ದರೆ ಅದರ ಸಂಗಡ ಮ್ಯಾ. ಫಾ. ಕೊಡ ಬೇಕು. ಬಸಿರಾದಾಗ ಅಪಚನವಾಗುತ್ತಿದ್ದರೆ ಕಲ್ಕೆ. ಫಾಸವನ್ನು ಕೊಡುತ್ತಿರಬೇಕು. ಇಲ್ಲದಿದ್ದರೆ ಗರ್ಭದೊಳಗಿನ ಕೂಸಿನ ಮೇಲೆ ಅದರ ದುಷ್ಪರಿಣಾಮವಾಗುತ್ತದೆ; ಅದರ ಎಲುವುಗಳ ಬೆಳವಣಿಗೆಯು ಸರಿಯಾಗಿ ಆಗುವದಿಲ್ಲ. ಪೂಯದುಷ್ಟ ರಕ್ತಜನ್ಯ ಜ್ವರವಿದ್ದರೆ ಕಾಲೀಮೂರ, ಕಾಲೀ ಫಾಸ ಮತ್ತು ಫೇರಂ ಫಾಸ ಇವುಗಳನ್ನು ಕೊಡಬೇಕಾಗುವದು. ಪ್ರಸೂತಿಕಾಲದ ಸೂಲಿಗಳು ಸಾಕಷ್ಟು ಹಾಗು ಭರದಿಂದ ಬರಬೇಕಾಗಿದ್ದರೆ ಕಾಲೀ ಫಾಸವನ್ನು ೧೦-೧೫ ಮಿನಿಟಿಗೊಮ್ಮೆ ಸರತಿಗೆ ೪-೫ ಗುಂಜಿಯಂತೆ ಒಣ ಪುಡಿಯನ್ನಾಗಲಿ ಬಿಸಿ ನೀರಿನಲ್ಲಿಯಾಗಲಿ ಕೊಡಬೇಕು. ಸಾಮಾನ್ಯ ವಾಗಿ ೩-೪ ಸಾರೆ ಕೊಟ್ಟರೆ ಕೆಲಸವಾಗುವದು. ಆದರೆ ಇಷ್ಟರಿಂದ ಕೆಲಸವಾಗದಿದ್ದರೆ ಇದರ ಸಂಗಡ ಕಲ್ಕೆ. ಫ್ಲೊ. ಕೊಡಬೇಕು. ರೋಗಿಯು ಅಶಕ್ತಳಾಗಿದ್ದರೆ ಕಲ್ಕೆ. ಫಾಸವನ್ನೂ ಕೊಡಬೇಕು. ಅವಶ್ಯವಿದ್ದರೆ ಒಂದಾವರ್ತಿ ಬಿಸಿನೀರಿನ ಬಸ್ತಿಯನ್ನೂ ಕೊಡಬೇಕು. ಪ್ರಸೂತಿಯಾದ ಕೂಡಲೆ ೬× ಶಕ್ತಿಯ ಫೇರಂ ಫಾಸವನ್ನು ಒಂದೆರಡು ಸಾರೆ ಅವಶ್ಯವಾಗಿ ಕೊಡಬೇಕು. ಮತ್ತು ३× ಶಕ್ತಿಯ ಫೇರಂ ಫಾಸವನ್ನು ನೀರಿನಲ್ಲಿ ಕಲಸಿ ಅದರಿಂದ ಗರ್ಭಾಶಯವನ್ನು ತೊಳೆದುಬಿಡಬೇಕು. ಅನಂತರ ಕಾಲೀ ಫಾಸ, ಫೇರಂ ಫಾಸ, ಮಗ್ನೆಶಿಯಾ ಫಾಸ, ಕಲ್ಕೆರಿಯಾ ಫಾಸ, ಕಲ್ಕೆರಿಯಾ ಫ್ಲೊರಿಕಂ ಈ ಔಷಧಗಳನ್ನು ಅದಲುಬದಲು ಮಾಡಿ ಪ್ರತಿಯೊಂದನ್ನು ದಿನಾಲು ಎರಡು ಸಾರೆ ಎರಡೆರಡು ತಾಸಿನ ಅಂತರದಿಂದ ಕೊಡುತ್ತ ಹೋಗಬೇಕು. ಅದರಿಂದ ಜ್ವರವು ಬರುವದಿಲ್ಲ; ರಕ್ತಸ್ರಾವವು ನಿಲ್ಲುವದು; ಮತ್ತು ಗರ್ಭಾಶಯದ ಆಕುಂಚನಕ್ಕೆ ಸಹಾಯವಾಗುವದು. ನಡು ನಡುವೆ ಕಲ್ಕೆ. ಫಾಸವನ್ನು ಕೊಟ್ಟರೆ ಮೈಯೊಳಗಿನ ಅಶಕ್ತತನವು ಕಡಿಮೆ ಯಾಗುವದು. ಹೊಟ್ಟೆಕಡಿಯುವದು ನಿಂತಕೂಡಲೆ ಮ್ಯಾ. ಫಾ. ಕೊಡುವ ದನ್ನು ಸಾಕುಮಾಡಬೇಕು. ಕಲ್ಕೆ. ಫ್ಲೊ. ಮತ್ತು ಕಾಲೀಫಾಸವನ್ನು ಮಾತ್ರ ಮುಂದೆ ೧೫–೨೦ ದಿವಸಗಳ ವರೆಗೆ ಕೊಡುತ್ತಿರಬೇಕು. ಪ್ರಸೂತಿ ಸ್ರಾವವು (ಪ್ರಸೂತಿಯಾದ ಬಳಿಕ ಗರ್ಭಾಶಯದಿಂದ ಮೊದಲಿನ ಮೂರು

ದಿವಸಗಳಲ್ಲಿ ಆಗುತ್ತಿರುವ ರಕ್ತಮಿಶ್ರಿತ ಸ್ರಾವವು. Lochia = ಲೋಚಿಯಾ) ನಿಂತಿದ್ದರೆ ಕಾಲೀ ಮೂರ ಕೊಡಬೇಕು. ಈ ಸ್ರಾವವು ಸುವ್ಯವಸ್ಥಿತವಾಗಿ ಹೋಗುತ್ತಿದ್ದರೆ ಗರ್ಭಾಶಯುವನ್ನು ತೊಳೆಯುವ ಕಾರಣವಿಲ್ಲ. ರೋಗಿಗೆ ತ್ರಾಸವಾಗದಂತೆ ಮಾಡಬೇಕು. ಸುತ್ತಲು ಶಾಂತತೆ ಇಡಬೇಕು. ಪೌಷ್ಟಿಕ ಅನ್ನವನ್ನು ಸ್ವಲ್ಪಸ್ವಲ್ಪ ಕೊಡಬೇಕು. ರೇಚಕ ಔಷಧಗಳನ್ನು ಕೊಡಬಾರದು. ವಿಶೇಷ ಚಿಂತೆಯ ಪ್ರಸಂಗವಿದ್ದರೆ ತಜ್ಞರಾದ ಡಾಕ್ಟರ ಜನರು ಹೇಳಿದಂತೆ ಔಷಧೋಪಚಾರವನ್ನು ಮಾಡಬೇಕು.

**ಪ್ರಸೂತಿಜ್ವರ. ದುಗ್ಧಜ್ವರ, ಪೂಯದುಷ್ಟರಕ್ತಜನ್ಯಜ್ವರ, ಗರ್ಭಪಾತ** ಮುಂತಾದ ಸದರುಗಳನ್ನು ನೋಡಿರಿ.

ಎಷ್ಟೋ ಜನ ಹೆಂಗಸರಿಗೆ ಬಸಿರಾದಾಗ ವಾಂತಿಯ ಉಪದ್ರವವು ಬಹಳಾಗುವದು. ಆ ಕಾಲಕ್ಕೆ ಅವರಿಗೆ ಜಡವಾದ ಆಹಾರವನ್ನು ತಿನ್ನಲಿಕ್ಕೆ ಕೊಡಬಾರದು. ಹಣ್ಣು, ಹಾಲು ಮುಂತಾದ ಪದಾರ್ಥಗಳನ್ನು ಕೊಡಬೇಕು. ಒಮ್ಮೆಲೆ ಬಹಳ ಕೊಡಬಾರದು; ಸರತಿಗೆ ಸ್ವಲ್ಪ ಸ್ವಲ್ಪ ಕೊಡಬೇಕು.

---

# ಕುರು

**Abscess.** **ಅಬ್‌ಸೆಸ್.**

ಶರೀರದ ಯಾವದಾದರೊಂದು ಭಾಗದಲ್ಲಿ ದಾಹಯುಕ್ತ ಬಾವು ಆಗಿ ಅಲ್ಲಿ ಕೀವು ತುಂಬಿದರೆ ಅದಕ್ಕೆ ಕುರು ಎನ್ನುತ್ತಾರೆ. ಕುರುಗಳಲ್ಲಿ ಎರಡು ಪ್ರಕಾರಗಳುಂಟು; ಶೀಘ್ರಪರಿಣಾಮಿ ಅಥವಾ ಉಷ್ಣಕುರು ಒಂದು, ಹಳೆಯ ಅಥವಾ ತಣ್ಣಗಿನ ಕುರು ಮತ್ತೊಂದು. ಮೊದಲನೆಯ ಪ್ರಕಾರದ ಕುರುವಿನಲ್ಲಿ ಕೆಂಪಾಗುವದು, ವೇದನೆಯಿರುವದು, ಮುಂತಾದ ದಾಹ ಯುಕ್ತ ಭಾವನೆಗಳು ಇರುತ್ತವೆ. ಆದರೆ ಎರಡನೆಯ ಪ್ರಕಾರದ ಕುರುವಿನಲ್ಲಿ ಅವು ಇರುವದೇ ಇಲ್ಲ; ಬಾವು ಮಾತ್ರ ಇರುತ್ತದೆ. ಅದು ಬಹಳ ದಿವಸಗಳ ವರೆಗೆ ಒಡೆಯುವದಿಲ್ಲ.

ಕುರುವಾಗುವ ಸ್ಥಳದಲ್ಲಿ ಮೊದಲು ರಕ್ತಸಂಚಯವಾಗಿ ಬಾವು ಬರುತ್ತದೆ. ಆ ಸ್ಥಳವು ಕೆಂಪಾಗುತ್ತದೆ; ಬಿಸಿಹತ್ತುತ್ತದೆ; ನೋಯುತ್ತದೆ; ಕೈಹಚ್ಚಿದರೆ ನೋವು ಹೆಚ್ಚಾಗುತ್ತದೆ. ಒತ್ತಿ ನೋಡಿದರೆ ತಗ್ಗುಬೀಳುತ್ತದೆ; ಮತ್ತು ಒಳಗೆ ನೀರು ಇರುವದೆಂದು ಸ್ಪಷ್ಟವಾಗಿ ಕಂಡುಬರುತ್ತದೆ. ಮುಂದೆ ಅದೇ ನೀರು ಕೀವಾಗುತ್ತದೆ. ಈ ಭಾವನೆಗಳು ಶೀಘ್ರ ಕುರುವಿನಲ್ಲಿ ಕಾಣುತ್ತವೆ. ಆದರೆ ದೀರ್ಘಕುರುವಿನಲ್ಲಿ ಬಹುತರವಾಗಿ ವೇದನೆ ಇರುವದಿಲ್ಲ; ಮತ್ತು ದಾಹದ ಬೇರೆ ಚಿನ್ಹಗಳೂ ಕಾಣಿಸುವದಿಲ್ಲ. ಇಂಥ ಕುರು ಒಡೆದರೂ ಬೇಗನೆ ತುಂಬಿಬರುವದಿಲ್ಲ. ಆದ್ದರಿಂದ ಸಣ್ಣಾಗಿ ಜ್ವರ ಬರುವದು ಮೊದಲಾದ ಭಾವನೆಗಳು ಉಂಟಾಗುತ್ತವೆ.

ಕುರುವಿನ ಭಾವನೆಗಳು ಕಂಡುಬಂದ ಕೂಡಲೆ ಕಾಲಕ್ಕೆ ಸರಿಯಾಗಿ ಜೀವನರಸಾಯನ ಔಷಧಗಳ ಚಿಕಿತ್ಸೆಯನ್ನು ಆರಂಭ ಮಾಡಿದರೆ ಕುರುವು ಒಳಗಿಂದೊಳಗೆ ಕರಗಿ ಹೋಗುತ್ತದೆ; ಕೀವು ಸೋರುವ ಪ್ರಸಂಗವೇ ಬರುವದಿಲ್ಲ.

ಪೆಟ್ಟು, ಧಕ್ಕೆ, ಅಪಘಾತ, ಮುಳ್ಳು, ಗುಂಡು ಮುಂತಾದ ವಿಜಾತೀಯ ಪದಾರ್ಥಗಳು ಶರೀರದಲ್ಲಿ ಸೇರುವವು, ಇವು ಬಾಹ್ಯಾಂಗದ ಮೇಲೆ ಕುರುವಾಗುವ ಕಾರಣಗಳು. ಬಾಯಿ, ಗಂಟಲ, ಮತ್ತು ಬೇರೆ ಕಡೆಗಿನ ಗ್ರಂಥಿಯಲ್ಲಿಯೂ ಕುರುವಾಗುವದುಂಟು. ಆದರೆ ಬಹುತರವಾಗಿ ಚಳಿಯೇ ಅದರ ಕಾರಣವಿರುತ್ತದೆ. ಗಂಡಮಾಲೆಯಂಥ ಕೆಲವು ಪ್ರಾಕೃತಿಕ ದೋಷಗಳಿಂದಲೂ ದೀರ್ಘಕುರು ಆಗುವದು.

**ಫೇ. ಫಾ:—** ಪ್ರಥಮಾವಸ್ಥೆಯಲ್ಲಿ ಜ್ವರ, ದಾಹ, ನೋವು, ರಕ್ತಸಂಚಯ ಮುಂತಾದವುಗಳು ಇರುವಾಗ ಕೀವು ಆಗಬಾರದೆಂತಲೂ ಕೀವಿನಿಂದಾಗುವ ಹಲವು ತರದ ತ್ರಾಸವನ್ನು ತಪ್ಪಿಸಬೇಕೆಂತಲೂ ತೀರ ಮೊದಲಿನಿಂದ ಈ ಔಷಧವನ್ನೂ ಕಾಲೀಮೂರವನ್ನೂ ಅದಲುಬದಲು ಮಾಡಿ ಕೊಡಬೇಕು.

**ಕಾ. ಮೂ:—** ದ್ವಿತೀಯಾವಸ್ಥೆಯಲ್ಲಿ. ಬಾವು ಬಂದ ಬಳಿಕ. ಕೀವು ಆಗುವದಕ್ಕಿಂತ ಮುಂಚೆ ಇದನ್ನೂ ಫೇರಂ ಫಾಸವನ್ನೂ ಅದಲು

ಬದಲು ಮಾಡಿ ಕೊಡಬೇಕು. ಧಾವನದ ಪಟ್ಟಿಯನ್ನು ಮೇಲಿನಿಂದ ಕಟ್ಟಬೇಕು.

**ಸಿ:—** ಕೀವು ಆಗಹತ್ತಿ ಒಳಗೆ ನೋಯಲಾರಂಭಿಸಿದರೆ ಕೀವು ಆಗಲಿಕ್ಕೆ ಸಹಾಯ ಮಾಡಿ ಅದನ್ನು ಹಣ್ಣು ಮಾಡುತ್ತದೆ; ಮತ್ತು ಶಸ್ತ್ರದ ಸಹಾಯವಿಲ್ಲದೆ ಅದನ್ನು ಒಡೆದು ಸೋರಿಸಿಬಿಡುತ್ತದೆ. ಕೀವಾಗುವ ಕ್ರಿಯೆಯು ಇನ್ನೂ ನಡೆದಿರುವಾಗಲೇ ಕಾಲೀಮೂರವನ್ನು ಕೊಟ್ಟು ಅದರಿಂದ ಉಪಯೋಗವಾಗದಿದ್ದರೆ ಈ ಔಷಧವನ್ನು ಕೊಡಬೇಕು. ಇದರಲ್ಲಿ ಕೀವು ಸೋರಿಸುವ ಶಕ್ತಿಯಿದೆ. ಗಾಯದೊಳಗಿಂದ ಬಹಳ ದಿವಸ ಒಂದೇಸವನೆ ಕೀವು ಸೋರುತ್ತಿದ್ದರೆ ಇದರ ಉಪಯೋಗವಾಗುವದು. ಅಲ್ಲಲ್ಲಿ ಒಂದೇಸವನೆ ಕುರುವಾಗುವದು (ಪೂಯದುಷ್ಟ ರಕ್ತವಿಕಾರ)

**ಕಲ್ಕೆ. ಸ:—** ಗಾಯವು ಬೇಗನೆ ಮಾಯದಿದ್ದರೆ ಹಾಗು ಕೀವು ಬಹು ದಿವಸ ಸೋರುತ್ತಿದ್ದರೆ ಈ ಔಷಧದ ಉಪಯೋಗವಾಗುವದು. ಯೋಗ್ಯ ಕಾಲಕ್ಕೆ ಕೀವಾಗುವದಕ್ಕಿಂತ ಮುಂಚೆ ೧೨× ಶಕ್ತಿಯ ಔಷಧ ವನ್ನು ತೆಗೆದುಕೊಂಡರೆ ಕೀವಾಗಗೊಡದೆ ಹುಣ್ಣನ್ನು ಒಳಗಿಂದೊಳಗೆ ಕರಗಿಸುವ ಶಕ್ತಿಯು ಈ ಔಷಧದಲ್ಲಿದೆ. ಕಲ್ಕೆ. ಸಲ್ಫ. ಮತ್ತು ಸಿಲಿಕಾ ಇವುಗಳಲ್ಲಿಯ ಭೇದವನ್ನು ಹಿಂದೆ ಹೇಳಿದ್ದೇವೆ; ಅದನ್ನೂ ಓದಿರಿ.

**ಕಲ್ಕೆ. ಫ್ಲೊ:—** ಗಾಯವು ಎಲುವಿನ ವರೆಗೆ ಹೋಗಿ ಮುಟ್ಟಿದರೆ; ಕುರುವಿನ ದಂಡೆಗಳು ಬಿರುಸಾಗಿಯೂ ಬಧಿರವಾಗಿಯೂ ಇದ್ದರೆ ಈ ಔಷಧವನ್ನು ಕೊಡಬೇಕು.

**ನೇ. ಸ:—** ಬಹಳ ದಿವಸದ ಹಳೆಯ ಕುರುವು. ಸ್ರಾವವು ನೀರಿನಂತೆ ತೆಳಗೆ ಹೋಗುತ್ತದೆ. ದಂಡೆಗಳು ಕಪ್ಪು, ನೀಲಿ ಇರುತ್ತವೆ. ಒಳಗೆ ಮೇಯುತ್ತ ಹೋಗುವ ಹುಣ್ಣು. ೩ × ಶಕ್ತಿಯ ಔಷಧದ ಉಪಯೋಗ ಮಾಡಬೇಕು.

**ಕಾ. ಫಾ:—** ರಕ್ತಮಿಶ್ರಿತ, ಕೊಳೆತ, ಹೊಲಸು ನಾರುವ ಕೀವು ಹೋಗುತ್ತದೆ. ಪೂಯದುಷ್ಟ ರಕ್ತಜನ್ಯ ಭಾವನೆಗಳು ಆರಂಭವಾದ ಕೂಡಲೆ ಇದನ್ನು ಕೊಡಬೇಕು.

**ಉಪಯುಕ್ತ ಸೂಚನೆ:—** ಕುರುವಿನಂಥ ರೋಗದ ಮೇಲೆ ಪೋಟೀಸದ ಉಪಯೋಗವು ಬಹಳ ಚನ್ನಾಗಿ ಆಗುತ್ತದೆ. ಆದರಿಂದ ನೋವು ಕಡಿಮೆಯಾಗುತ್ತದೆ. ಕೀವು ಆಗಹತ್ತಿದರೆ ಅದು ಬೇಗನೆ ಆಗಲಿಕ್ಕೆ ಸಹಾಯವಾಗುತ್ತದೆ; ಮತ್ತು ಆಗಿರುವ ಕೀವು ಸೋರಿ ಹೋಗಲಿಕ್ಕೂ ಇದರ ಉಪಯೋಗವಾಗುತ್ತದೆ. ಪೋಟೀಸ ಕಟ್ಟುತ್ತಿರುವಾಗಲೇ ಬಿಸಿ ನೀರಿನ ಕಾವು ಕೊಡುತ್ತಿರಬೇಕು. ಪೋಟೀಸಿನ ಮೇಲೆ ಸಿಲಿಕಾ ಇಲ್ಲವೆ ಬೇರೆ ಉಪಯುಕ್ತ ಔಷಧದ ಪುಡಿಯನ್ನು ಉದುರಿಸಿ ಬಳಿಕ ಅದನ್ನು ಕಟ್ಟಬೇಕು. ಸಿಲಿಕಾ ಎಂದರೆ ಗಾರಗಲ್ಲು. ಗಾರಗಲ್ಲಿನ ಪುಡಿಯನ್ನು ಅರಿವೆಯೊಳಗಿಂದ ಸೋಯಿಸಿ ಪೋಟೀಸಿನ ಮೇಲೆ ಹಾಕಿದರೂ ಕುರುವು ಬೇಗನೆ ಹಣ್ಣಾಗಿ ಒಡೆಯುವದು. ಮೇಲೆ ಹೇಳಿದ ಔಷಧಗಳನ್ನು ಹೊಟ್ಟೆಯೊಳಗೂ ತೆಗೆದುಕೊಳ್ಳಬೇಕು; ಹೊರಗಿನಿಂದಲೂ ಹಚ್ಚಬೇಕು. ಕುರುವು ಒಡೆದು ಕೀವು ಹೊರಬಿದ್ದ ನಂತರ ಆ ಗಾಯವನ್ನು "ಕಲೆಂಡುಲಾ" ದ ಧಾವನ ಜಲದಿಂದ ದಿನಾಲು ತೊಳೆಯಬೇಕು. ಒಂದು ಚಮಚೆಯ ತುಂಬ ಕಲೆಂಡುಲಾವನ್ನು ಮೂರು ಚಮಚೆಯ ತುಂಬ ಸ್ವಚ್ಛವಾದ ತಿಳಿನೀರಿನಲ್ಲಿ ಹಾಕಬೇಕು. ಈ ಧಾವನಜಲದಲ್ಲಿ ಸ್ವಚ್ಛವಾದ ಅರಿವೆಯ ಪಟ್ಟಿಯನ್ನು ತೋಯಿಸಿ ಅದನ್ನು ಹುಣ್ಣಿನ ಮೇಲೆ ಮೇಲಿಂದ ಮೇಲೆ ಇಡಬೇಕು. ಅದರಿಂದ ಹುಣ್ಣು ಬೇಗನೆ ತುಂಬಿಕೊಳ್ಳುವದು. ಹಗುರಾದ ಮತ್ತು ಪೌಷ್ಟಿಕವಾದ ಅನ್ನವನ್ನು ಎಷ್ಟು ಬೇಕಾದಷ್ಟು ಕೊಡಬೇಕು.

---

## ಗೃಧ್ರಸಿ

**Sciatica. ಸಾಯೆಟಿಕಾ.**

ಎಡಬಲದ ತಿಗಗಳ ಮೇಲ್ಭಾಗದಿಂದ, ತೊಡೆಗಳ ಮತ್ತು ಪಿಂಡರಿಗಳ ಹಿಂದಿನಿಂದ, ನೆಟ್ಟಗೆ ಅಂಗಾಲಿನ ವರೆಗೆ ಹೋಗುವ ನಾಡಿಗಳಲ್ಲಿ ಉರುವು, ಭಯಂಕರ ನೋವು ಆಗುವದೇ ಗೃಧ್ರಸಿ ಬೇನೆಯು. ಈ ಉರುವೂ ನೋವೂ ಒಮ್ಮೊಮ್ಮೆ ಇಡೀ ನಾಡಿಯ ತುಂಬ ಇರುತ್ತವೆ; ಒಮ್ಮೊಮ್ಮೆ

ಪಿಂಡರಿಯ ವರೆಗಿನ ಭಾಗವಷ್ಟೇ ನೋಯುತ್ತದೆ. ತಿಗದ ಭಾಗವು ಬಹಳ ನಾಜೂಕಾಗುತ್ತದೆ. ಬಹುತರವಾಗಿ ಯಾವದಾದರೊಂದು ತಿಗದಲ್ಲಿ, ತೊಡೆಯಲ್ಲಿ ಅಥವಾ ಪಿಂಡರಿಯಲ್ಲಿ ನೋಯುತ್ತದೆ. ವೇದನೆಯು ಮೊದಲು ಮಂದವಾಗಿದ್ದು ಮುಂದೆ ಮುಂದೆ ಬೆಳೆದು ಹೆಚ್ಚಾಗುವದು. ಸ್ಪರ್ಶದಿಂದ ವೇದನೆ ಹೆಚ್ಚಾಗುವದು. ಆದರೆ ಒತ್ತಿದರೆ ನೆಟ್ಟಗೆನಿಸುವದು; ನಡೆಯುವದರಿಂದಲೂ ಒಮ್ಮೊಮ್ಮೆ ಸುಖವಾಗುವದು. ಆದರೆ ಒಮ್ಮೊಮ್ಮೆ ನಡೆದರೆ, ತಿಣುಕಿದರೆ, ಅಥವಾ ಸೀತರೆ ವೇದನೆಯು ಹೆಚ್ಚಾಗುವದು. ತೇವು, ತಂಪು ಹವೆ, ಸಂಧಿವಾತ ಇವು ಈ ಬೇನೆಯ ಕಾರಣಗಳು.

**ಕಾ. ಫಾ:—** ಪ್ರಮುಖ ಔಷಧವು. ತಿಗದಿಂದ ಮೊಳಕಾಲ ವರೆಗಿನ ಭಾಗವಷ್ಟೇ ದೂಷಿತವಾಗಿರುತ್ತದೆ. ಆ ಭಾಗವು ಸುಂದಾಗಿಯೂ ಸೆಟೆದಂತೆಯೂ ಇದ್ದು ಜಗ್ಗಿದಂತೆ ವೇದನೆಯಾಗುತ್ತದೆ. ಮಾನಸಿಕ ದುರ್ಬಲತೆಯು ಬಹಳಾಗಿರುತ್ತದೆ. ಮೆಲ್ಲಮೆಲ್ಲಗೆ ನಡೆದರೆ ಸ್ವಲ್ಪ ಹೊತ್ತು ನೆಟ್ಟಗೆನಿಸುತ್ತದೆ.

**ಮ್ಯಾ. ಫಾ:—** ಪ್ರಾಣಸಂಕಟವಾಗುತ್ತದೆ. ಅದನ್ನು ತಾಳಲಿಕ್ಕಾಗುವದಿಲ್ಲ. ಮುಖ್ಯ ಔಷಧದ ಸಂಗಡ ಈ ಔಷಧವನ್ನೂ ಬಿಸಿನೀರಿನಲ್ಲಿ ಒಂದೇಸವನೆ ಕೊಡುತ್ತಿರಬೇಕು.

**ನೇ. ಸ:—** ಬೆರಳುಗಳಲ್ಲಿ ಸಂಧಿವಾತವಿದ್ದು ಗೃಧ್ರಸಿಯಾಗಿದ್ದರೆ ಕಾಲೀಫಾಸದ ಸಂಗಡ ಇದನ್ನು ಕೊಡಬೇಕು. ತಿಗದ ಭಾಗದಲ್ಲಿ ನೋಯುತ್ತದೆ. ಅದು ಏಳುವಾಗಲೂ ತಿರುಗಾಡುವಾಗಲೂ ಹೆಚ್ಚಾಗುತ್ತದೆ.

**ಫೇ. ಫಾ:—** ಜ್ವರದ ಭಾವನೆ ಇದ್ದರೆ ಇದನ್ನು ಮುಖ್ಯ ಔಷಧದ ಸಂಗಡ ಕೊಡಬೇಕು.

**ಕಲ್ಕೆ. ಫಾ:—** ಮ್ಯಾ. ಫಾ. ದಿಂದ ಗುಣವು ಬರದಿದ್ದರೆ ಇದನ್ನು ಕೊಡಬೇಕು; ಇದರಿಂದ ನೆಟ್ಟಗೆನಿಸುತ್ತದೆ. ಬೇರೆ ಔಷಧಗಳ ಸಂಗಡ ಇದನ್ನೂ ನಡುನಡುವೆ ಕೊಡಬೇಕು. ತೇವಿನಲ್ಲಿ ಹಾಗು ತಂಪು ಹವೆಯಲ್ಲಿ

ಬೇನೆಯು ಮರಕಳಿಸುವದು. ಕಡಿದಂತೆಯೂ ಬಾಣ ಬಡಿದಂತೆಯೂ ವೇದನೆಯಾಗುತ್ತದೆ. ನೋಯುತ್ತಿದ್ದ ಸ್ಥಳದಲ್ಲಿ ಉರುಪು ಇರುತ್ತದೆ; ಮತ್ತು ಇರಿವೆ ನಡೆದಂತೆ ಅನಿಸುತ್ತದೆ.

**ಸಿ:**— ಹಳೆಯ ಗೃಧ್ರಸಿ. ನಡೆಯುವಾಗ ವೇದನೆಯು ಹೆಚ್ಚಾಗುವದು. ತಿಗದಲ್ಲಿ ಕಳೆ ಏಳುವವು. ನಡೆಯುವಾಗ ಪಿಂಡರಿಗಳು ಬಿಗಿದಂತೆ ಅನಿಸುತ್ತದೆ.

**ನೇ. ಮ್ಯೂ:**— ಬಲಗಡೆಯ ತಿಗದಲ್ಲಿಯೂ ಮೊಳಕಾಲಿನಲ್ಲಿಯೂ ಜಗ್ಗಿದಂತೆಯೂ ಹಾರಿದಂತೆಯೂ ವೇದನೆಗಳು ನಡುನಡುವೆ ಬರುತ್ತವೆ. ಆ ಭಾಗವು ಸೊರಗಿದಂತೆ ಕಂಡುಬರುತ್ತದೆ. ಒತ್ತಿದರೆ ನೋಯುತ್ತದೆ. ಕಾವು ಕೊಟ್ಟರೆ ನೆಟ್ಟಗೆನಿಸುತ್ತದೆ. ವಿಶೇಷವಾಗಿ ಮಧ್ಯಾಹ್ನದಲ್ಲಿ ಮಗ್ಗಲಾಗಿ ಮಲಗಿದರೆ ಕಳೆಗಳು ಹೆಚ್ಚಾಗುವವು.

**ಉಪಯುಕ್ತ ಸೂಚನೆ:**— ಉಪ್ಪಿನ ಗಂಟಿನಿಂದ ಕಾವು ಕೊಟ್ಟರೆ ರೋಗಿಗೆ ಹಲವು ಸಾರೆ ಸಮಾಧಾನವಾಗುವದು; ನೋಯುತ್ತಿದ್ದ ಸ್ಥಳದಲ್ಲಿ ಕಬ್ಬಿಣಹಂಚಿನಿಂದ ಕಾವು ಕೊಟ್ಟರೂ ಬಹಳ ಸುಖವಾಗುವದು. ಕೆಲವರಿಗೆ ಉಷ್ಣೋಪಚಾರವು ತಾಳುವದಿಲ್ಲ. ಅಂಥ ಪ್ರಸಂಗದಲ್ಲಿ ಸೀತೋಪಚಾರ ಮಾಡುವದೇ ಅವಶ್ಯವಾಗಿರುತ್ತದೆ; ಮತ್ತು ಅದರಿಂದಲೇ ಸಮಾಧಾನವಾಗುತ್ತದೆ. ತಣ್ಣೀರಿನ ಪಟ್ಟಿಯನ್ನು ಇಲ್ಲವೆ ತಣ್ಣೀರಿನ ಚೀಲವನ್ನು ಇಡುವದರಿಂದಲೂ ಸ್ವಲ್ಪ ಹೊತ್ತು ಸಮಾಧಾನವಾಗುತ್ತದೆ. ರೋಗಿಯು ಕಾಲು ಚಾಚಿ ಮಲಗಿಕೊಂಡಿರಬೇಕು. ನೋಯುತ್ತಿರುವ ಎಲ್ಲ ಭಾಗವನ್ನು ಅರಿವೆಯಿಂದ ಗಟ್ಟಿಯಾಗಿ ಬಿಗಿಯಬೇಕು. ಮೊಳಕಾಲು ಮಡಿಚಿ ಕುಳಿತುಕೊಂಡರೆ ಈ ನಾಡಿಯ ಮೇಲೆ ಹೆಚ್ಚು ಭಾರವು ಬೀಳುತ್ತದೆ; ಅದಕ್ಕೆ ವಿಶ್ರಾಂತಿಯು ಸಿಗುವದಿಲ್ಲ. ಆದುದರಿಂದ ಕಾಲು ಚಾಚಿಕೊಂಡು ಮಲಗುವದು ಅವಶ್ಯವಿರುತ್ತದೆ. ಬಹಳ ಹಳೆಯ ರೋಗದಲ್ಲಿ ಮೊಳಕಾಲ ಕೆಳಗಿನ ಭಾಗವನ್ನು ಉದ್ದಕ್ಕೆ ಸೆಟೆಸಿ, ತೊಡೆಯನ್ನು ಹೊಟ್ಟೆಗೆ ಹಚ್ಚುವದರಿಂದ ಒಮ್ಮೊಮ್ಮೆ ನೆಟ್ಟಗೆನಿಸುವದು.

---

# ಗುಲ್ಮ

**Cancer, Tumor.** **ಕ್ಯಾನ್ಸರ, ಟ್ಯೂಮರ.**

ಶರೀರದಲ್ಲಿ ಯಾವದಾದರೊಂದು ಭಾಗವು ಬೆಳೆದು ಬಾವು ಬಂದಂತಾಗಿ ಕೊನೆಗೆ ಗಂಟಾಗುತ್ತದೆ. ದಾಹಜನ್ಯ ಬಾವು ಬೇರೆ; ಈ ಬಾವು ಬೇರೆ. ಇಂಥ ಗಂಟಿನಲ್ಲಿ ಹಣ್ಣಾಗುವ ಪ್ರವೃತ್ತಿಯೇ ಇರುವದಿಲ್ಲ. ಈ ಗಂಟಿನಲ್ಲಿ ಎರಡು ಪ್ರಕಾರಗಳುಂಟು. (೧) ಸಾದಾ ಗಂಟು. ಇದಕ್ಕೆ ಗುಲ್ಮವೆನ್ನುತ್ತಾರೆ. (೨) ದುಷ್ಟ ಗಂಟು. ಇದಕ್ಕೆ ದೋಷಿಕ ಗಂಟು ಎಂತಲೂ ಮಾಂಸಾರ್ಬುದವೆಂತಲೂ ಅನ್ನುತ್ತಾರೆ. ಸಾದಾ ಗಂಟು ಶರೀರದ ಯಾವದೇ ಭಾಗದಲ್ಲಿ ಆಗುವದು. ಅದು ಮೆಲ್ಲಮೆಲ್ಲಗೆ ಬೆಳೆಯುತ್ತದೆ. ಅದು ಚಲನಶೀಲವಿರುತ್ತದೆ. ಅದರಿಂದ ಶರೀರದ ಮೇಲೆ ಯಾವ ಅಪಾಯವೂ ಆಗುವದಿಲ್ಲ. ವೇದನೆಯೂ ಇರುವದಿಲ್ಲ; ದಾಹಜನ್ಯ ಭಾವನೆಯೂ ಇರುವದಿಲ್ಲ. ಅದನ್ನು ಕೊಯ್ದು ತೆಗೆದರೆ ಅದು ಮತ್ತೊಮ್ಮೆ ಆಗುವದಿಲ್ಲ. ಮಾಂಸಾರ್ಬುದವಾದರೂ ಶರೀರದ ಯಾವದೇ ಭಾಗದಲ್ಲಿ ಆಗುವದು. ಆದರೂ ಅದು ವಿಶೇಷವಾಗಿ ಕಣ್ಣು, ತುಟಿ, ಮೊಲೆ, ಗರ್ಭಾಶಯ ಮುಂತಾದ ಭಾಗಗಳಮೇಲೆ ಹೆಚ್ಚಾಗಿ ಕಂಡುಬರುವದು. ಅವುಗಳ ಬೆಳೆಗೆಯು ಬೇಗನೆ ಆಗುತ್ತದೆ. ಅವು ಹೆಚ್ಚು ಕಡಿಮೆ ಪ್ರಮಾಣದಲ್ಲಿ ಅಚಲವೂ ಸ್ಥಿರವೂ ಇರುತ್ತವೆ. ಈ ದುಷ್ಟ ಗ್ರಂಥಿಗಳು ಕೊಳೆಯುತ್ತವೆ. ಅಥವಾ ಅವುಗಳ ಸ್ಥಳದಲ್ಲಿ ದಾಹಜನ್ಯ ಭಾವನೆ ಉಂಟಾಗುತ್ತದೆ; ಮತ್ತು ಆದರಿಂದ ಅವು ಹಣ್ಣಾಗಿ ಒಡೆಯುತ್ತವೆ. ಒಳಗಿನಿಂದ ಹೊಲಸು ರಕ್ತವೂ ಕೀವೂ ಬರುತ್ತದೆ. ಅಲ್ಲಿ ಬಹಳ ವೇದನೆಯಾಗುತ್ತದೆ; ಮತ್ತು ಉರಿಯುತ್ತದೆ. ಈ ಗಂಟನ್ನು ಒಮ್ಮೆ ಕೊಯ್ದು ತೆಗೆದರೂ ಅದು ಮತ್ತೊಮ್ಮೆ ಅಲ್ಲಿಯೆ ಆಗಲೀ ಬೇರೆ ಕಡೆಗಾಗಲೀ ಆಗುತ್ತದೆ. ಶರೀರದ ಮೇಲೆ ಅದರ ಪರಿಣಾಮವು ಬಹು ಬೇಗ ಆಗುತ್ತದೆ. ಅದರಿಂದ ರೋಗಿಯು ನವೆಯುಹತ್ತುತ್ತಾನೆ. ಇದೇನು ಕ್ಷಯರೋಗವಾಗಿದೆಯೋ ಎಂದು ಒಮ್ಮೊಮ್ಮೆ ಭಾಸವಾಗುತ್ತದೆ. ಸಾಧಾರಣವಾಗಿ ಮನುಷ್ಯನಿಗೆ ೩೫ ವರ್ಷಗಳಾದ ಬಳಿಕ ಈ ರೋಗವಾಗುತ್ತದೆ. ಈ ಗಂಟಿನ ಘಟಕಾವಯವ

ಗಳಿಗೆ ಅನುಸಾರವಾಗಿ ಶಾಸ್ತ್ರಜ್ಞರು ಈ ಬೇನೆಯಲ್ಲಿ ಬೇರೆ ಬೇರೆ ಪ್ರಕಾರ ಗಳನ್ನು ಕಲ್ಪಿಸಿದ್ದಾರೆ. ಮೇಲೆ ಹೇಳಿದ ಎರಡು ಪ್ರಕಾರಗಳಲ್ಲದೆ ಮೂರನೆ ಯದೊಂದು ಪ್ರಕಾರವುಂಟು. ಅದಕ್ಕೆ ಜಲಯುಕ್ತ ಅಥವಾ ಪ್ರವಾಹಿ ಗ್ರಂಥಿ ಎಂದು ಹೆಸರು. ಇಂಗ್ಲಿಷ ಭಾಷೆಯಲ್ಲಿ ಅದಕ್ಕೆ ಸಿಸ್ಟ ಎನ್ನುತ್ತಾರೆ.

ಅಪಘಾತ ಅಥವಾ ಒಂದೇ ಸ್ಥಳದಲ್ಲಿ ಆಗುವ ಸ್ಥಾನಿಕ ಕ್ಷೋಭ ದಿಂದಲೂ, ಹೊಗೆಸೊಪ್ಪು ಸೇದುವುದರಿಂದಲೂ, ಅಡಿಕೆಯನ್ನು ತಿನ್ನುವ ದರಿಂದಲೂ, ತುಟಿಯನ್ನು ಹಲ್ಲಿನಿಂದ ಮೇಲಿಂದಮೇಲೆ ಕಚ್ಚುವದರಿಂದಲೂ ನಾಲಿಗೆಯ ಮೇಲಾಗಲಿ ತುಟಿಯ ಮೇಲಾಗಲಿ ಕ್ಷೋಭವುಂಟಾಗಿ ದೋಷಿಕ ಗುಲ್ಮವು ಆಗುವದು. ಮೇಲಿಂದಮೇಲೆ ಪ್ರಸೂತಿಯಾಗುವ ಸ್ತ್ರೀಯರಿಗೂ ಈ ರೋಗವು ಆಗುವದುಂಟು. ಈ ಬೇನೆಯು ಬಂಜೆಯಾದ ಹೆಂಗಸರಿಗೆ ಬಹುತರವಾಗಿ ಆಗುವದಿಲ್ಲ. ಇದು ಆನುವಂಶಿಕ ರೋಗವೂ ಇರುತ್ತದೆ. ಈ ರೋಗವು ಅಸಾಧ್ಯವೂ ಗಂಡಾಂತರವುಳ್ಳದ್ದೂ ಇದ್ದುದರಿಂದ ಇದರ ಚಿಕಿತ್ಸೆಯನ್ನು ಜಾಣರಾದ ವೈದ್ಯರಿಂದ ಮಾಡಿಸುವದೇ ಲೇಸು.

**ಕಾ. ಸ**:— ಮೂಗು, ತುಟಿ, ಗುದದ್ವಾರ ಮುಂತಾದ ಶ್ಲೇಷ್ಮಲ ತ್ವಚೆಯ ಸಮೀಪದ ತ್ವಚೆಯ ಮೇಲೆ ಮಾಂಸಾರ್ಬುದಗಳು ಏಳುತ್ತವೆ. ಆವುಗಳೊಳಗಿಂದ ತೆಳ್ಳಗೆ ಹಳದಿ ಕೀವವುಳ್ಳ ಸ್ರಾವವು ಹೋಗುತ್ತದೆ. ಅಂಥ ರೋಗಿಗಳಿಗೆ ಈ ಔಷಧವನ್ನು ಹೊಟ್ಟೆಯೊಳಗೂ ಕೊಡಬೇಕು; ಮೇಲಿನಿಂದಲೂ ಹಚ್ಚಬೇಕು.

**ಕಲ್ಕೆ. ಫ್ಲೊ**:— ಇದೇ ಈಗ ಹುಟ್ಟಿದ ಕೂಸಿನ ತಲೆಯ ಮೇಲೆ ರಕ್ತಗುಲ್ಮಗಳು ಏಳುತ್ತವೆ. ಮೊಲೆಯಲ್ಲಿ ಗಟ್ಟಿಯಾದ ಗಂಟುಗಳಾಗು ತ್ತವೆ. ಶರೀರದ ಯಾವದೇ ಭಾಗದ ಮೇಲೆ ಬಿರುಸಾದ ಬಾವು ಇರುತ್ತದೆ.

**ಕಾ. ಫಾ**:— ದೋಷಿಕ ಗುಲ್ಮ (ಕ್ಯಾನ್ಸರ). ಹೊಲಸು ಸ್ರಾವವು ಹೋಗುತ್ತದೆ. ಬಹಳ ವೇದನೆಯಿದ್ದರೆ ಈ ಔಷಧದಿಂದ ಸ್ವಲ್ಪ ನೆಟ್ಟಗೆನಿ ಸುತ್ತದೆ. ಗುಲ್ಮವಿದ್ದ ಸ್ಥಳದಲ್ಲಿ ಬಣ್ಣವು ಬದಲಾಗುತ್ತದೆ. ಶಸ್ತ್ರಕ್ರಿಯೆ ಯಿಂದ ಗಂಟನ್ನು ಕೊಯ್ದು ತೆಗೆದ ನಂತರ ಗಾಯವು ಮಾಯುತ್ತಿರುವಾಗ ಈ ಔಷಧದಿಂದ ಬಹಳ ಉಪಯೋಗವಾಗುತ್ತದೆ.

**ನೇ. ಮೂ:—** ನಾಲಿಗೆಯ ಕೆಳಭಾಗದಲ್ಲಿ ಗುಲ್ಮವಾಗುವದು. ಈ ಗುಲ್ಮವು ಮೆತ್ತಗಿದ್ದು ಅದರಲ್ಲಿ ನೀರು ತುಂಬಿರುವದು. (ಕಲ್ಕೆ. ಫಾಸ.)

**ಫೇ. ಫಾ:—** ಗುಲ್ಮದ ಮೇಲೆ ಇದು ರಾಮಬಾಣ ಔಷಧವು. ನಾಲಿಗೆಯ ಮೇಲೆ ಆಗುವ ಗುಲ್ಮವು ಈ ಔಷಧದಿಂದ ನೆಟ್ಟಗಾದ ಉದಾಹರಣಗಳಿವೆ. "ಲ್ಯಾನ್ಸೆ" ಎಂಬ ರೋಗದ ಮೇಲೆಯೂ ಇದರ ಉಪಯೋಗವಾಗುವದು.

**ಕಲ್ಕೆ. ಫಾ:—** (ಅಶಕ್ತ, ಕ್ಷಯಿ, ಮುಂತಾದ) ಗಂಡಮಾಲೆಯ ಪ್ರಕೃತಿಯುಳ್ಳ ರೋಗಿಗಳಿಗೆ ದೋಷಿಕಗುಲ್ಮವಾಗುವದು. ಗಲಗಂಡ, ಜಲಗುಲ್ಮ, ಮೊಳಕಾಲಮೇಲಿನ ಗುಲ್ಮ, ಅಸ್ಥಿಗಳ ಬೆಳೆವಣಿಗೆಯು ಸರಿಯಾಗಿ ಆಗದೆ ಇರುವ ಮಕ್ಕಳ ತಲೆ ಮೊದಲಾದ ಸ್ಥಳಗಳಲ್ಲಿ ಆಗುವ ಗುಲ್ಮ, ದೋಷಿಕಗುಲ್ಮ ಅಥವಾ ಪ್ರವಾಹಿಗುಲ್ಮ ಮುಂತಾದ ರೋಗಗಳಿಗೆ ಈ ಔಷಧದ ಉಪಯೋಗವಾಗುತ್ತದೆ. ಇದನ್ನು ಬೇರೆ ಔಷಧಗಳ ಸಂಗಡ ನಡುನಡುವೆ ಕೊಡುತ್ತಿರಬೇಕು.

**ಸಿ:—** ಗರ್ಭಾಶಯದಲ್ಲಿ ದೋಷಿಕ ಗುಲ್ಮವಾಗುವದು. ಮೇಲಿನ ತುಟಿಯ ಮೇಲೆಯೂ ಮುಖದ ಮೇಲೆಯೂ ಬಿರುಸಾದ ಗುಲ್ಮವಾಗುವದು. ಕುತ್ತಿಗೆಯಲ್ಲಿಯ ಗಂಟುಗಳು ಬಾಯುತ್ತವೆ ಮತ್ತು ಕುರು ಆಗುತ್ತದೆ. ಕೀವು ಆಗುವ ಹೆದರಿಕೆ ಇರುತ್ತದೆ.

**ನೇ. ಫಾ:—** ನಾಲಿಗೆಯ ಮೇಲಿನ ದೋಷಿಕ ಗುಲ್ಮವು ಇದರಿಂದ ನೆಟ್ಟಗಾಗುತ್ತದೆ.

**ಕಲ್ಕೆ. ಸ:—** ಜಲಗುಲ್ಮ. ಗುಲ್ಮದೊಳಗೆ ಗಾಯವಾಗಿ ಬಹಳ ಕೀವು ಸೋರುತ್ತಿದ್ದರೆ ಇದನ್ನು ಕೊಡಬೇಕು.

**ಉಪಯುಕ್ತ ಸೂಚನೆ:—** ಈ ರೋಗವು ಕಷ್ಟಸಾಧ್ಯವೆಂದು ಮೇಲೆ ಹೇಳಿದ್ದೇವೆ. ರೋಗವು ಕಂಡುಬಂಡ ಕೂಡಲೆ ಯೋಗ್ಯ ರೀತಿಯಿಂದ ಸುವ್ಯವಸ್ಥಿತವಾಗಿಯೂ ಭಾವನಾನುಸಾರವಾಗಿಯೂ ಮೇಲಿನ ಔಷಧಗಳ ಯೋಜನೆಯನ್ನು ಮಾಡಬೇಕು. ಈ ಔಷಧಗಳನ್ನು ಬಹಳ ದಿವಸಗಳ ವರೆಗೆ ಒಂದೇಸವನೆ ಬಿಟ್ಟುಬಿಡದೆ ತೆಗೆದುಕೊಳ್ಳಬೇಕು.

ರೋಗಿಯು ಸಂಪೂರ್ಣ ವಿಶ್ರಾಂತಿಯನ್ನು ತೆಗೆದುಕೊಳ್ಳಬೇಕು. ದಿನಾಲು ಶೌಚಕ್ಕೆ ಸರಿಯಾಗಿ ಆಗುವ ಬಗ್ಗೆ ಲಕ್ಷ್ಯವಿಡಬೇಕು. ರೋಗಿಯ ಪಚನ ಶಕ್ತಿಗೆ ಅನುಸಾರವಾಗಿ ಪೌಷ್ಟಿಕ ಹಾಗು ಪಚನಕ್ಕೆ ಸುಲಭವಾದ ಅನ್ನವನ್ನು ಕೊಡಬೇಕು.

---

# ಗ್ರಂಥಿರೋಗ

**Diseases of Glands.** ಡಿಸೀಜೆಸ್ ಅಫ್ ಗ್ಲ್ಯಾಂಡ್ಸ.

ಮನುಷ್ಯನ ಶರೀರದಲ್ಲಿ ಬೇರೆ ಇಂದ್ರಿಯಗಳಂತೆ ಲಸಿಕಾವಾಹಿನಿ (ರಸವಾಹಿನಿ=ಲಿಂಫ್ಯಾಟಿಕ್ಸ) ಮತ್ತು ಗ್ರಂಥಿ (ಲಸಿಕಾಗ್ರಂಥಿ ಅಥವಾ ರಸಗ್ರಂಥಿ) ಇವುಗಳ ಮಹತ್ವವಾದರೂ ಬಹಳ ಇರುತ್ತದೆ. ಶರೀರದ ವ್ಯಾಪಾರವು ಸುವ್ಯವಸ್ಥಿತವಾಗಿ ನಡೆಯಲಿಕ್ಕೆ ಇವುಗಳ ಉಪಯೋಗವು ಬಹಳಾಗುವದು. ಈ ಗ್ರಂಥಿಗಳು ಶರೀರದಲ್ಲಿ ಅಲ್ಲಲ್ಲಿ ಇರುತ್ತವೆ. ಇವುಗಳಿಂದ ಒಂದು ಪ್ರಕಾರದ ರಸವು ತಯಾರಾಗುತ್ತದೆ. ಅವುಗಳ ಕಾರ್ಯಕ್ಕೆ ಅನುಸರಿಸಿ ಅವುಗಳಲ್ಲಿ ಉತ್ಸರ್ಜಕ ಗ್ರಂಥಿಯೆಂತಲೂ (ಸಿಕ್ರೀಟರಿ) ವಿಸರ್ಜಕ ಗ್ರಂಥಿಯೆಂತಲೂ (ಎಕ್ಸಕ್ರೀಟರಿ) ಎರಡು ಭಾಗಗಳನ್ನು ಕಲ್ಪಿಸಿದ್ದಾರೆ. ಯಾವ ಗ್ರಂಥಿಗಳ ರಸವು ಆಹಾರವನ್ನು ಪಚನಮಾಡಿಯಾಗಲಿ ಅಥವಾ ಬೇರೆ ರೀತಿಯಿಂದಾಗಲಿ ಶರೀರಸಂವರ್ಧನದ ಕೆಲಸಕ್ಕೆ ಉಪಯೋಗವಾಗುವದೋ ಆ ಗ್ರಂಥಿಗಳು ಉತ್ಸರ್ಜಕ ಗ್ರಂಥಿಗಳು. ಧಾತುಗಳಲ್ಲಿಯ ವಿಸರ್ಜಕವಾದ (ಅಂದರೆ ತ್ಯಾಜ್ಯವಾದ) ದ್ರವ್ಯಗಳನ್ನು ಶರೀರದ ಹೊರಗೆ ಹಾಕುವ ಕೆಲಸವನ್ನು ಮಾಡುವ ಗ್ರಂಥಿಗಳೇ ವಿಸರ್ಜಕ ಗ್ರಂಥಿಗಳು. ಬಾಯಿಯೊಳಗಿನ ಲಾಲಾಗ್ರಂಥಿ, ಜಠರ, ಕರಳು ಮುಂತಾದ ಅಂತರಿಂದ್ರಿಯಗಳಲ್ಲಿ ಇರುವ ಎಷ್ಟೋ ಗ್ರಂಥಿಗಳು ಉತ್ಸರ್ಜಕ ಗ್ರಂಥಿಗಳು. ಮೂತ್ರಪಿಂಡವು ವಿಸರ್ಜಕ ಗ್ರಂಥಿಯು. ಯಕೃತವಾದರೂ ವಿಸರ್ಜಕ ಗ್ರಂಥಿಯೆಂದು ಹೇಳಲಿಕ್ಕೆ ಅಡ್ಡಿಯಿಲ್ಲ.

ಮಿದುಳಿನ ಕಾರ್ಯಕ್ಕೆ ಸಂಬಂಧವಿರುವ ಕೆಲವು ಗ್ರಂಥಿಗಳು ಕಂಡು ಬರುತ್ತವೆ. ಗದ್ದದ ಕೆಳಗೆ ಕೊರಳಿನ ಮುಂಭಾಗದಲ್ಲಿ ಎದ್ದು ಕಾಣಿಸುವ

ಉತ್ಸರ್ಜಕ ಗ್ರಂಥಿಯೆಂದರೆ ಗಲಗ್ರಂಥಿಯು. ಅದಕ್ಕೆ ಆಂಗ್ಲ ಭಾಷೆಯಲ್ಲಿ ಥಾಯರಾಯಿಟ ಎನ್ನುತ್ತಾರೆ. ಇದರ ಕಾರ್ಯಕ್ಕೆ ಅಡ್ಡಿಯಾದರೆ ಮಗುವು ಬೇನೆಕೊಳಕವೂ ಹುಚ್ಚನಂತೆಯೂ ಎಬಡನಂತೆಯೂ ಕಾಣಿಸುತ್ತದೆ. ಗಲಗಂಡವೆಂಬ ರೋಗದಲ್ಲಿ ಈ ಗಂಟು ದೊಡ್ಡದಾಗುತ್ತದೆ; ಕಣ್ಣುಗಳು ಮುಂದೆ ಬಂದಂತೆ ಕಾಣಿಸುತ್ತವೆ; ಮತ್ತು ಹೃದಯದ ಕ್ರಿಯೆಯು ಭರದಿಂದ ಸಾಗುತ್ತದೆ.

ಮುಖ, ಕಿವಿ, ಕುತ್ತಿಗೆ, ಗೆಜ್ಜಿ ಮುಂತಾದ ಶರೀರದ ಬಾಹ್ಯ ಭಾಗಗಳಲ್ಲಿ ನಡುನಡುವೆ ಗ್ರಂಥಿಗಳಾಗುವದು ಕಂಡುಬರುತ್ತದೆ. ಲಸಿಕಾ ವಾಹಿನಿಯ ಕಾರ್ಯದಲ್ಲಿ ಅಡ್ಡಿಯಾಗುವದರಿಂದಲೇ ಈ ಗ್ರಂಥಿಗಳು ಉಂಟಾಗುತ್ತವೆ. ಗ್ರಂಥಿಯ ಈ ರೋಗಗಳೇ ಮುಖ್ಯವಾಗಿ ನಮಗೆ ಕಾಣುತ್ತವೆ. ಬಾಯುವದು, ನೋಯುವದು, ಮತ್ತು ಕೊರಳಿನಲ್ಲಿ ಅವುಗಳ ರೂಪಾಂತರವಾಗುವದು, ಇವು ಈ ಗ್ರಂಥಿರೋಗದ ಸರ್ವ ಸಾಧಾರಣ ಸ್ವರೂಪಗಳು. ಗಂಡಮಾಲೆಯಾದರೂ ಗ್ರಂಥಿಗಳ ಸಾಂಸರ್ಗಿಕ ರೋಗವೇ ಅಹುದು. ಈ ರೋಗದಲ್ಲಿ ಕಿವಿಯ ಕೆಳಭಾಗದಲ್ಲಿ, ಕುತ್ತಿಗೆಯಲ್ಲಿ, ಕಿವಿಯ ಮುಂಭಾಗದಲ್ಲಿ, ಗಲ್ಲದ ಗ್ರಂಥಿಗಳಲ್ಲಿ, ಮತ್ತು ಲಾಲಾಗ್ರಂಥಿಯಲ್ಲಿ ಬಾವು ಬರುತ್ತದೆ. ಮೊದಲು ಗಲ್ಲವು ಒಂದು ಕಡೆಗೆ ಬಾಯುತ್ತದೆ; ಬಳಿಕ ಎರಡನೆಯ ಕಡೆಗೆ ಬಾಯುತ್ತದೆ; ಹಸಿವೆಯಾಗುವದಿಲ್ಲ; ನಾಲಿಗೆಯು ಬೂರಸಗಟ್ಟುತ್ತದೆ: ಬಾಯಿ ನಾರುತ್ತದೆ; ಮುಂತಾದ ಭಾವನೆಗಳು ಇರುತ್ತವೆ. ಜ್ವರವು ಅನಿಯಮಿತವಿದ್ದು ಸಾಧಾರಣವಾಗಿ ೫।೬ ದಿವಸ ಬರುತ್ತದೆ. ಕೆಲವು ರೋಗಿಗಳಿಗೆ ಗಂಡಮಾಲೆಯು ಮೇಲಿಂದ ಮೇಲೆ ಆಗುತ್ತದೆ. ಇಂಥವರಿಗೆ ಗಂಡಮಾಲಾ ಪ್ರಕೃತಿಯ ರೋಗಿಗಳೆನ್ನುತ್ತಾರೆ. ಇತ್ತೀಚೆಯ ಶೋಧದ ಮೇರೆಗೆ ಗಂಡಮಾಲೆಯಾದರೂ ಒಂದು ತರದ ಕ್ಷಯರೋಗವೆಂದೇ ಕಂಡುಬಂದಿದೆ. ಆದುದರಿಂದ ಗಂಡಮಾಲೆಯ ಪ್ರಕೃತಿಯ ರೋಗಿಗಳಿಗೆ ಕ್ಷಯರೋಗಿಗಳೆಂದು ಕರೆಯಲಿಕ್ಕೆ ಅಡ್ಡಿಯಿಲ್ಲ. ಕುತ್ತಿಗೆಯಲ್ಲಿ ಅಥವಾ ಬಗಲೊಳಗೆ ದೊಡ್ಡ ಗಂಟುಳ್ಳ ರೋಗಿಗಳಿಗೆ ಕ್ಷಯರೋಗವಾಗುವ ಸಂಭವ ಬಹಳ. ಕ್ಷಯದ ಬೀಜಗಳು ಲಸಿಕಾ ವಾಹಿನಿಗಳ ಮಾರ್ಗವಾಗಿ ಈ ಗ್ರಂಥಿಗಳಲ್ಲಿ ಬಂದಿರುತ್ತವೆ. ಯೋಗ್ಯ

ಸಮಯವು ಒದಗಿದ ಕೂಡಲೆ ಅವು ಮೇಲಿಂದ ಮೇಲೆ ಬಾಯುತ್ತವೆ. ಇಂಥ ರೋಗಿಗಳಿಗೆ ಮೇಲಿಂದ ಮೇಲೆ ಸಣ್ಣಾಗಿ ಜ್ವರವು ಬರುತ್ತದೆ; ಅಶಕ್ತತನವೂ ಇರುತ್ತದೆ. ಗ್ರಂಥಿಗಳು ಬಾತ ಬಳಿಕ ಒಳಗೆ ಕೀವಾಗುವ ಪ್ರವೃತ್ತಿಯಿರುತ್ತದೆ. ಒಮ್ಮೊಮ್ಮೆ ಅವು ಕೀವಾಗದೆ ಹಾಗೆಯೇ ಬಾತಿರುತ್ತವೆ. ಅನಂತರ ಅವು ದೊಡ್ಡವಾಗಿ ಗಟ್ಟಿಯಾಗುತ್ತವೆ. ಅವುಗಳಲ್ಲಿ ವ್ರಣವಾಗುವ ಸಂಭವವಿರುತ್ತದೆ. ಇಂಥ ವ್ರಣಗಳು ಬೇಗನೆ ತುಂಬುವದಿಲ್ಲ.

ನಾವು ಈ ಪುಸ್ತಕದಲ್ಲಿ ಅಲ್ಲಲ್ಲಿ ಗಂಡಮಾಲಾ ಪ್ರಕೃತಿಯ ಮನುಷ್ಯನೆಂಬ ಶಬ್ದಪ್ರಯೋಗವನ್ನು ಮಾಡಿದ್ದೇವೆ. ಮೇಲೆ ಹೇಳಿದ ಸಂಗತಿಯಿಂದ ಅದರ ಅರ್ಥವೇನೆಂಬದು ಸ್ಪಷ್ಟವಾಗುವದು. ಮೇಲಿಂದ ಮೇಲೆ ಗಂಡಮಾಲೆಯಿಂದ ತ್ರಾಸವಾಗುವದೇ ಇಂಥ ಪ್ರಕೃತಿಯ ರೋಗಿಯ ವಿಶೇಷ ಲಕ್ಷಣವಾಗಿದೆ. ಇದರ ಹೊರತಾಗಿ ಶರೀರದ ಮಾನದಿಂದ ತಲೆಯು ದೊಡ್ಡದಿರುವದು, ಮುಖಚರ್ಯೆಯು ದೊಡ್ಡದಾಗಿಯೂ ಬಿರುಸಾಗಿಯೂ ಇರುವದು, ಮೂಗೂ ಮೇಲಿನ ತುಟಿಯೂ ದಪ್ಪಾಗಿ ಬಾತಂತೆ ಇರುವದು, ಗಲ್ಲದ ಅಸ್ಥಿಗಳು ಅಗಲಾಗಿ ಕಾಣಿಸುವದು, ತುಟಿಗಳು ದೊಡ್ಡವಾಗಿರುವದು, ಸ್ನಾಯುಗಳು ಮೆತ್ತಗಿರುವದು, ಈ ಲಕ್ಷಣಗಳು ಇರುವವು. ಅಲ್ಲದೆ, ರೋಗಿಯು ಬುದ್ಧಿಯಿಂದ ಮಂದನಾಗಿರುವದು, ತ್ವಚೆಯು ಬೆಳ್ಳಗೆ ಕಳೆಗುಂದಿದಂತೆ ಕಾಣುವದು, ಆದರೂ ಅದು ಸ್ವಲ್ಪ ಕಾರಣದಿಂದ ಮತ್ತೆ ಕೆಂಪಾಗುವದು, ಒಳಗಿನ ರಕ್ತವಾಹಿನಿಗಳು ಸ್ಪಷ್ಟವಾಗಿ ಕಾಣಿಸುವದು, ತುಟಿಯೂ ಗಲ್ಲವೂ ಕೆಂಪಗೆ ಕಾಣುವದು, ಕಣ್ಣುಗಳಲ್ಲಿ ನೀಲೀ ಬಣ್ಣವು ಬರುವದು, ಶರೀರದ ಆಕಾರದ ಮಾನದಿಂದ ಅದರ ತೂಕವು ಕಡಿಮೆಯಾಗುವದು, ಕೂದಲು ಮೆತ್ತಗಾಗುವದು, ಹಲ್ಲುಗಳು ಉದ್ದಾಗಿರುವವು ಮತ್ತು ಹೊಳೆಯುವವು, ರೋಗಿಯು ಚುರುಕನೂ ಬುದ್ಧಿವಂತನೂ ಇರುವನು, ಈ ಲಕ್ಷಣಗಳೂ ಇರುವವು. ಈ ಎರಡೂ ಪ್ರಕಾರದ ಲಕ್ಷಣಗಳುಳ್ಳ ರೋಗಿಯು ಗಂಡಮಾಲಾ ಪ್ರಕೃತಿಯ ರೋಗಿಯೆಂದು ತಿಳಿಯಬೇಕು. ಈ ಎಲ್ಲ ತರದ ಪ್ರಕೃತಿಯ ರೋಗಿಗಳಿಗೆ ಈ ಪುಸ್ತಕದಲ್ಲಿ ಗಂಡಮಾಲಾ ಪ್ರಕೃತಿಯ ರೋಗಿಗಳೆಂದು

ಹೆಸರು ಕೊಟ್ಟಿದ್ದೇವೆ. ಯಾಕೆಂದರೆ ಬಹುತರವಾಗಿ ಈ ರೋಗಿಗಳ ಕುತ್ತಿಗೆಯಲ್ಲಿಯ ಮತ್ತು ಬಗಲಿನಲ್ಲಿಯ ಗ್ರಂಥಿಗಳು ದೊಡ್ಡವಾಗಿರುತ್ತವೆ.

**ಕಾ. ಮೂ:**— ಇದು ಬಾವಿನ ಮೇಲಿನ ಪ್ರಮುಖ ಔಷಧವು. ಗಂಟು ಕಲ್ಲಿನಂತೆ ಬಿರುಸಾಗಿರುವದಿಲ್ಲ. ಕುತ್ತಿಗೆಯಲ್ಲಿಯ ಹಾಗು ಕೊರಳಿನ ಕೆಳಗಡೆಯ ಗ್ರಂಥಿಗಳು ಬಾತು ದೊಡ್ಡವಾಗುತ್ತವೆ. ಗಂಡಮಾಲಾ ಪ್ರಕೃತಿಯ ರೋಗಿಗಳಿಗೂ ನಾಲಿಗೆಯು ಬೆಳ್ಳಗಾದವರಿಗೂ ಈ ಔಷಧ ವನ್ನೂ ಫೇರಂ ಫಾಸವನ್ನೂ ಅದಲುಬದಲು ಮಾಡಿ ಕೊಡಬೇಕು. ಫೇರಂ ಫಾಸ ಹಾಗು ಕಾಲೀಮೂರ ಇವುಗಳನ್ನು ವ್ಯವಸ್ಥೆಯಿಂದ ಕೊಟ್ಟರೆ ಗಂಡಮಾಲೆಯ ಬೇನೆಯು ನೆಟ್ಟಗಾಗುವದು.

**ಫೇ. ಫಾ:**— ಜ್ವರವು, ಬಾವು, ನೋವು, ಕೆಂಪಗಾಗುವದು ಮುಂತಾದವುಗಳಿಗೆ ಬೇರೆ ಶಕ್ತಿಯ ಔಷಧದಿಂದ ಗುಣವು ಬರದಿದ್ದರೆ ೧ × ಶಕ್ತಿಯ ಔಷಧವನ್ನು ಕೊಡಬೇಕು.

**ಕಲ್ಕೆ. ಫ್ಲೋ:**— ಗಂಟುಗಳು ಕಲ್ಲಿನಂತೆ ಬಿರುಸಾಗಿದ್ದು ಬಾತಿರುತ್ತವೆ. ಹಳೆಯ ಮತ್ತು ದಾಹಯುಕ್ತ ಸ್ಥಿತಿಯಲ್ಲಿರುವ ಬಿರುಸು ಗಂಟುಗಳು. ಹೆಂಗಸರ ಮೊಲೆಗಳೂ ಗಟ್ಟಿಯಾಗುತ್ತವೆ, ಕಾಲೀ ಮೂರವನ್ನೂ ಇದನ್ನೂ ಅದಲುಬದಲು ಮಾಡಿ ಕೊಡಬೇಕು.

**ನೇ. ಮು:**— ಗಂಟುಗಳು ಬಾಯುತ್ತವೆ. ಜೊಲ್ಲು ಬಹಳ ಸೋರುತ್ತದೆ. ಇದೇ ವಿಕಾರದಲ್ಲಿ ವೃಷಣವೂ ಬಾಯುತ್ತದೆ. ಶ್ಲೇಷ್ಮಲ ತ್ವಚೆಯು ಒಣಗಿ ನೀರಡಿಕೆಯಾಗುತ್ತದೆ. ಮೂತ್ರವು ತಿಳಿಯದೆ ಆಗುತ್ತದೆ. ಸಂಭೋಗೇಚ್ಛೆಯ ಕಲ್ಪನೆ ಕೂಡ ಬರುವದಿಲ್ಲ. ಇಂಥ ಭಾವನೆಗಳಿದ್ದರೆ ಗಲಗಂಡವು ನೇಟ್ರಂಮೂರದಿಂದ ನೆಟ್ಟಗಾಗುವದು. ಆದರೆ ಔಷಧವನ್ನು ಮಾತ್ರ ವರ್ಷಾರು ತಿಂಗಳ ವರೆಗೆ ತೆಗೆದುಕೊಳ್ಳಬೇಕು.

**ನೇ. ಫಾ:**— ಗಲಗಂಡ. ನಾಲಿಗೆಯ ಹಿಂದಿನ ಭಾಗವು ಅಚ್ಚ ಹಳದಿಯಾಗಿದ್ದು ಪಿತ್ತದ ಹುಳಿ ಭಾವನೆಗಳಿರುವವು.

**ಕಲ್ಕೆ. ಫಾ:**— ಬಹಳ ಹಳೆಯ ಗ್ರಂಥಿವೃದ್ಧಿ. ಗಂಟು ದೊಡ್ಡದಾಗಿ ಬಹಳ ದಿವಸವಾಗಿದ್ದರೆ ಇದು ಪ್ರಮುಖ ಔಷಧವು. ಗಂಟಲವಾಳ. ಗಂಡ

ಮಾಲೆಯ ಪ್ರಕೃತಿಯ ರೋಗಿಗಳಿಗೆ ಗಂಟುಗಳು ದೊಡ್ಡವಾಗಿರುತ್ತವೆ. ಗ್ರಂಥಿರೋಗದಲ್ಲಿ ಬೇರೆ ಔಷಧಗಳ ಸಂಗಡ ಇದನ್ನು ನಡುನಡುವೆ ಕೊಡಬೇಕು.

**ಸಿ:**— ಗಂಡಮಾಲೆ. ಕಲ್ಕೆ. ಫಾಸವನ್ನೂ ಇದನ್ನೂ ಅದಲುಬದಲು ಮಾಡಿ ಕೊಡಬೇಕು. ಗಂಟುಗಳಲ್ಲಿ ಕೀವಾಗುವ ಪ್ರವೃತ್ತಿಯಿದ್ದರೆ ಇದರಿಂದ ಅದು ಬೇಗನೆ ಆಗುವದು.

**ಕಲ್ಕೆ ಸ:**— ಕೀವು ನಿಲ್ಲಿಸುವದಕ್ಕೆ. ಗಂಟಿನಲ್ಲಿ ವ್ರಣವಾಗುವದು. ವ್ರಣದ ದಂಡೆಗಳು ಬಿರುಸಾಗಿದ್ದರೆ ಕಲ್ಕೆ. ಫ್ಲೂದ ಉಪಯೋಗವಾಗುವದು.

**ನೇ. ಸ:**—ಗಂಡಮಾಲೆಯ ಗ್ರಂಥಿಗಳ ಬಹಳ ದಿನದ ಬಾವಿನಮೇಲೆ. ಗ್ರಂಥಿಗಳ ಬಾವಿನಿಂದ ಇಡೀ ಕುತ್ತಿಗೆಯು ವ್ಯಾಪಿಸಿರುತ್ತದೆ.

**ಉಪಯುಕ್ತ ಸೂಚನೆ:**— ಕುಡಿಯುವ ನೀರಿನಲ್ಲಿ ಕಲ್ಕೆ. ಫಾಸ ಎಂಬ ಕ್ಷಾರದ ಪ್ರಮಾಣದಲ್ಲಿ ಹೆಚ್ಚುಕಡಿಮೆಯಾದರೆ ಗಂಡಮಾಲಾ (ಅಥವಾ ಗಂಟಲವಾಳ) ಎಂಬ ರೋಗವು ಆಗುತ್ತದೆ. ಆದುದರಿಂದ ಈ ವಿಕೃತಿಯನ್ನು ಹೋಗಲಾಡಿಸುವದಕ್ಕೆ ಕಲ್ಕೆ. ಫಾಸವೇ ಮುಖ್ಯ ಔಷಧವು. ಭಾವನೆಗಳಿಗೆ ಅನುಸಾರವಾಗಿ ಬೇರೆ ಔಷಧಗಳನ್ನೂ ಕೊಡಬೇಕಾಗುವದು. ಗಲಗಂಡ ರೋಗಕ್ಕೆ ನೇಟ್ರಂ ಫಾಸ ಔಷಧದಿಂದಲೂ ಬಹಳ ಉಪಯೋಗವಾಗುತ್ತದೆ. ರೋಗವು ಸೆಟ್ಟಗಾದ ಬಳಿಕಲೂ ನೇಟ್ರಂ ಫಾಸವನ್ನು ಬಹಳ ದಿವಸಗಳ ವರೆಗೆ ಕೊಡುತ್ತಿರಬೇಕು. ಪೌಷ್ಟಿಕವಾದ ಮತ್ತು ಪಚನಕ್ಕೆ ಸುಲಭವಾದ ಅನ್ನವು ತಿನ್ನಲಿಕ್ಕೆ ಸಾಕಷ್ಟು ಸಿಗದೆ ಇದ್ದ ರೋಗಿಗಳಿಗೇ ಗಂಡಮಾಲೆಯು ಮೇಲಿಂದಮೇಲೆ ಆಗುತ್ತದೆ. ಆದುದರಿಂದ ಅಂಥ ರೋಗಿಗಳಿಗೆ ಪೌಷ್ಟಿಕ ಅನ್ನವನ್ನು ಸಾಕಷ್ಟು ತಿನ್ನಲಿಕ್ಕೆ ಕೊಡಿಸುವ ವ್ಯವಸ್ಥೆಯಾಗಬೇಕು. ಶಕ್ಯವಿದ್ದಲ್ಲಿ ಹೊಟ್ಟೆಯೊಳಗೆ ಕೊಡತಕ್ಕ ಔಷಧವನ್ನು ಮೇಲಿನಿಂದಲೂ ವ್ಯಾಸಲಿನದೊಳಗೆ ಅರೆದು ಹಚ್ಚಬೇಕು; ಅಥವಾ ಅದನ್ನು ನೀರಿನಲ್ಲಿ ಹಾಕಿ ಅದರ ಪಟ್ಟಿಯನ್ನು ಕಟ್ಟಬೇಕು.

---

# ಗೊಬ್ಬರ

**Measles.** ಮೀಜಲ್ಸ.

ಗೊಬ್ಬರವು ಸಣ್ಣ ಹುಡುಗರಿಗೆ ಆಗುವ ವಿಸ್ಫೋಟಕ ಮತ್ತು ಸಾಂಸರ್ಗಿಕ ಜ್ವರವು. ಮೊದಲು ನೆಗಡಿಯಾಗುವದು; ಬಳಿಕ ಸ್ವಲ್ಪ ತ್ರಾಸದಾಯಕವಾದ ಒಣ ಕೆಮ್ಮು ಬರುವದು; ೧೦೨ ರಿಂದ ೧೦೪ ಅಂಶದ ವರೆಗೆ ಜ್ವರವು ಬರುವದು; ಈ ಲಕ್ಷಣಗಳು ಕಾಣಿಸುತ್ತವೆ. ಎರಡನೆಯ ದಿವಸ ಜ್ವರವು ಕಡಿಮೆಯಾಗುತ್ತದೆ. ತಲೆ ನೋಯುವದು, ಬೆಳಕಿನಕಡೆಗೆ ನೋಡಲಿಕ್ಕೆ ಬೇಡಾಗುವದು, ಮೂಗಿನೊಳಗಿಂದ ನೀರಾಗಲಿ ರಕ್ತವಾಗಲಿ ಸೋರುವದು, ಸೀನು ಬರುವದು, ದನಿ ಕೂಡುವದು, ಮುಂತಾದ ಲಕ್ಷಣ ಗಳೂ ಕಾಣಿಸುತ್ತವೆ. ಗಂಟಲು ಕೆಂಪಾಗುವದು. ಗಂಟಲಿನ ಗ್ರಂಥಿಗಳು ಉಬ್ಬುವವು ಹಾಗು ನೋಯುವವು. ತುಟಿಯ ಮೇಲೆ ಬಿಳಿಯ ಅಥವಾ ನೀಲಿ ಕಲೆಗಳು ಕಾಣುವದು ಗೊಬ್ಬರದ ಪ್ರಮುಖ ಲಕ್ಷಣವು. ಒಮ್ಮೊಮ್ಮೆ ಎರಡನೆಯ ಅಥವಾ ಮೂರನೆಯ ದಿವಸ, ಆದರೆ ಬಹುತರವಾಗಿ ನಾಲ್ಕನೆಯ ಅಥವಾ ಐದನೆಯ ದಿವಸ ಬೊಕ್ಕೆಗಳು ಏಳುತ್ತವೆ. ಮೊದಲು ಹಣೆಯ ಮೇಲೆ, ಕಿವಿಯ ಹಿಂಭಾಗದಲ್ಲಿ ಬೊಕ್ಕೆಗಳು ಎದ್ದು ಬಳಿಕ ಅವು ಮೈತುಂಬ ಹಬ್ಬುತ್ತವೆ. ಬೇಸಿಗೆ ಕಾಲದ ಬೆವರಸಾಲಿಯಂತೆ ಸಣ್ಣಗೆ ಕೆಂಪು ಬೊಕ್ಕೆ ಗಳಾಗುವವು. ಬರಬರುತ್ತ ಬೊಕ್ಕೆಗಳು ಒಂದಕ್ಕೊಂದು ಕೂಡಿಕೊಂಡು ಅರ್ಧಚಂದ್ರಾಕೃತಿ ಮಂಡಲಾಗುವದು. ನಾಲ್ಕು ದಿವಸಗಳ ನಂತರ ಬೊಕ್ಕೆಗಳು ಬಾಡಹತ್ತುತ್ತವೆ. ಜ್ವರವು ಕಡಿಮೆಯಾಗುತ್ತದೆ: ಮತ್ತು ಮೈ ತುರಿಸುತ್ತದೆ. ಮಳಮಳಿಸುವದು, ಓಕರಿಸುವದು, ಹೊಟ್ಟೆ ಜಾಡಿಸುವದು, ಇವೂ ಇರುತ್ತವೆ. ಬೊಕ್ಕೆಗಳು ಒಣಗಿದಬಳಿಕ ಸಹ ಕಿವಿ ಒಡೆಯುವದು, ಕಣ್ಣು ನೋಯುವದು, ಅದರಲ್ಲಿ ಹೂ ಬೀಳುವದು, ಗ್ರಂಥಿಗಳು ಬಾಯುವದು ಮುಂತಾದ ದೋಷಗಳು ಕಂಡುಬರುತ್ತವೆ. ಮೂರು ತಿಂಗಳ ಒಳಗಿನ ಕೂಸುಗಳಿಗೆ ಸಾಧಾರಣವಾಗಿ ಈ ಬೇನೆಯು ಆಗುವದಿಲ್ಲ. ಆರು ತಿಂಗಳಿಂದ ಒಂದು ವರ್ಷದ ಕೂಸಿಗೆ ಅದು ಆಗುವದು. ಒಮ್ಮೆ ಗೊಬ್ಬರವು ಬಂದು ಹೋಯಿತೆಂದರೆ ಅದು ಬಹಳಮಾಡಿ ಮತ್ತೊಮ್ಮೆ ಬರುವದಿಲ್ಲ.

**ಕಾ. ಮೂ:** — ಕಾಲೀ ಮೂರ ಅಥವಾ ಪೊಟ್ಯಾಶಿಯುಂ ಕ್ಲೋರಾಯಿಡ ಎಂಬ ಕ್ಷಾರವು ಕಡಿಮೆಯಾಗುವದರ ಮೂಲಕ ಈ ರೋಗವು ಉಂಟಾಗಿ ಕೆಂಪು ಬೊಕ್ಕೆಗಳು ಏಳುತ್ತವೆಯೆಂದು ಜೀವನ ರಸಾಯನ ಶಾಸ್ತ್ರಜ್ಞರ ಮತವಿದೆ.

**ಫೇ. ಫಾ:**— ವಿಶೇಷವಾಗಿ ಆರಂಭದಲ್ಲಿ ಜ್ವರ ಬರುವದು, ಉರುಪು ಬಿಡುವದು, ಮೋರೆ ಕೆಂಪಾಗುವದು, ಕಣ್ಣು ಕೆಂಪಾಗುವದು, ನೀರಡಿಕೆಯಾಗುವದು, ಮೈ ಕೈ ನೋಯುವದು ಮುಂತಾದ ಭಾವನೆಗಳಿದ್ದರೆ ಈ ಔಷಧವನ್ನು ಕೊಡಬೇಕು.

**ಕಾ. ಮೂ:**— ದ್ವಿತೀಯಾವಸ್ಥೆ. ಫೇರಂ ಫಾಸದನಂತರ ಇದನ್ನು ಕೊಡಬೇಕು. ಗಂಟಲಿನಲ್ಲಿ ಗಂಟುಗಳು ಬಾಯುತ್ತವೆ. ಗೊಗ್ಗರಾದ ಕೆಮ್ಮು ಬರುತ್ತದೆ. ನಾಲಿಗೆಯು ಮೇಲೆ ಬೂದೀಬಣ್ಣದ ಬೂರಸು ಕಟ್ಟುತ್ತದೆ. ಗೊಬ್ಬರದ ದುಷ್ಪರಿಣಾಮ, ಕಿವುಡತನ, ಗಂಟಲಿನಲ್ಲಿ ಬಾವು. ತೆಳ್ಳಗೆ ಮತ್ತು ಬೆಳ್ಳಗೆ ಜುಲಾಬು.

**ಕಾ. ಸ**:— ಬೊಕ್ಕೆಗಳು ಒಮ್ಮಿಂದೊಮ್ಮೆ ಅಡಗುತ್ತವೆ. ತ್ವಚೆಯು ಒಣಗಿ ಹುರಬರಕಾಗುತ್ತದೆ. ಬೆವರು ಬಿಡಲಿಕ್ಕೆ ಈ ಔಷಧವನ್ನು ಕೊಡಬೇಕು.

**ನೇ. ಮೂ**:— ಕಣ್ಣಿನೊಳಗಿಂದ ಒಂದೇಸವನೆ ಬಹಳ ನೀರು ಸೋರುತ್ತಿದ್ದರೆ ಇದನ್ನು ನಡುನಡುವೆ ಕೊಡಬೇಕು. ನಾಲಿಗೆಯು ಮೇಲೆ ಬುರುಗಿನ ಗುಳ್ಳೆಗಳು ಏಳುತ್ತವೆ.

**ಕಲ್ಕೆ. ಫಾ:** — ಗೊಬ್ಬರವು ಬಂದು ಹೋದಬಳಿಕ ಕ್ಷೀಣ ಧಾತುಗಳ ಪುನರುಜ್ಜೀವನ ಮಾಡಲಿಕ್ಕೆಂದು ಇದನ್ನು ಕೊಡಬೇಕು.

**ಉಪಯುಕ್ತ ಸೂಚನೆ:** — ಫೇರಂ ಫಾಸ ಮತ್ತು ಕಾಲೀ ಮೂರ ಇವುಗಳನ್ನು ವ್ಯವಸ್ಥಿತವಾಗಿ ಕೊಟ್ಟರೆ ಬಹಳಮಾಡಿ ಎಲ್ಲ ರೋಗಿಗಳು ನೆಟ್ಟಗಾಗುವರು; ಬೇನೆಯ ದುಷ್ಪರಿಣಾಮವೂ ಕಂಡುಬರುವದಿಲ್ಲ. ಬೊಕ್ಕೆಗಳು ಅಡಗಿಕೊಂಡಿದ್ದರೆ ಫೇರಂಫಾಸ ಮತ್ತು ಕಾಲೀ ಸಲ್ಫ ಇವುಗಳನ್ನು ಮೇಲಿಂದಮೇಲೆ ಕೊಡಬೇಕು. ಉಣ್ಣೆಯ ಬಟ್ಟೆಗಳನ್ನು ಹೊದ್ದು

ಕೊಳ್ಳಬೇಕು. ಅದರಿಂದ ಬೆವರು ಬಿಡುವದು; ಬೊಕ್ಕೆಗಳೂ ಮತ್ತೊಮ್ಮೆ ಹೊರಬೀಳುವವು. ಕುಡಿಯಲಿಕ್ಕೆ ಸಾವಿಯ ಅರಳಿನ ನೀರನ್ನಾಗಲಿ ಶುದ್ಧ ನೀರನ್ನಾಗಲಿ ಕೊಡಬೇಕು. ಯಾವ ಉತ್ತೇಜಕ ಪದಾರ್ಥವನ್ನೂ ಕೊಡಬಾರದು. ಜ್ವರವು ಇಳಿದ ಬಳಿಕ ಮೊದಲು ಹಾಲು ಅನಂತರ ಅನ್ನ ಕೊಡಬೇಕು. ರೋಗಿಯು ಮಲಗುವ ಕೋಣೆಯೊಳಗೆ ಗಾಳಿಯೂ ಬೆಳಕೂ ಸಾಕಷ್ಟು ಬರಗೊಡಬೇಕು. ಆದರೆ ರೋಗಿಯ ಕಣ್ಣಿನಮೇಲೆ ಬೆಳಕು ಪ್ರತ್ಯಕ್ಷವಾಗಿ ಬೀಳಗೊಡಬಾರದು. ಕೆಮ್ಮು, ಅಪಚನ, ಅತಿಸಾರ ಮುಂತಾದ ಉಪದ್ರವಗಳು ಆಗದಂತೆ ಎಚ್ಚರಪಡಬೇಕು. ಅಂಥ ಉಪದ್ರವಗಳಾದರೆ ಆಯಾ ಲಕ್ಷಣಗಳಿಗೆ ಅನುಸಾರವಾಗಿ ಔಷಧ ಯೋಜನೆಯನ್ನು ಮಾಡಬೇಕು.

ಗೊಬ್ಬರದ ಲಕ್ಷಣಗಳು ಕಾಣಿಸಿದ ಕೂಡಲೆ ಅವು ಬೇಗನೆ ತ್ರಾಸವಾಗದಂತೆ ಹೊರಬೀಳಲಿಕ್ಕೆಂದು ಬಾಳೆಯ ಹಣ್ಣು, ಹಪ್ಪಳ ಮುಂತಾದ ಪದಾರ್ಥಗಳನ್ನು ತಿನ್ನಲಿಕ್ಕೆ ಕೊಡಬೇಕೆಂದು ಕೆಲವು ಜನರ ಮತವಿದೆ. ಗೊಬ್ಬರವು ಹೊರಬಿದ್ದು ಬಾಡಹತ್ತಿದನಂತರ ಆಕಳ ಹಾಲಿನಲ್ಲಿ ತುಪ್ಪ ಮತ್ತು ಕಲ್ಲುಸಕ್ಕರೆ ಹಾಕಿ ಕುಡಿಯಲಿಕ್ಕೆ ಕೊಟ್ಟರೆ ಅದರಿಂದ ಹಿತವಾಗುವದು.

---

# ಘುಟಸರ್ಪ

**Diptheria.** **ಡಿಫ್ಥೆರಿಯಾ.**

ಘುಟಸರ್ಪವು ಒಂದು ಸಾಂಸರ್ಗಿಕ ರೋಗವು. ಅದು ಆದಾಗ ರೋಗಿಯ ಗಂಟಲಿನಲ್ಲಿ ಬಿಳೀ ಕಲೆಗಳು ಕಾಣಿಸುತ್ತವೆ. ಜ್ವರವೂ ಅಶಕ್ತತನವೂ ಬಹಳ ಇರುತ್ತದೆ. ಜ್ವರವು ಮೊದಲು ೧೦೧ ರಿಂದ ೧೦೫ ಅಂಶಗಳವರೆಗೆ ಏರುತ್ತದೆ. ಅದು ಸಾಯಂಕಾಲದಲ್ಲಿ ಏರುವದು. ಜ್ವರದ ಮಾನದಿಂದ ನಾಡಿಯ ಬಡತಗಳು ೧೨೦ ರಿಂದ ೧೫೦ ರ ವರೆಗೆ ಇರುತ್ತವೆ. ನಾಲ್ಕನೆಯ ಅಥವಾ ಆರನೆಯ ದಿವಸ ಜ್ವರವು ಮೆಲ್ಲಮೆಲ್ಲಗೆ ಕಡಿಮೆ.

ಯಾಗುತ್ತದೆ. ಜ್ವರವು ಬಂದಿರುವಾಗ ತಲೆಸೂಲಿ, ಟೊಂಕಸೂಲಿ, ಒಮ್ಮೊಮ್ಮೆ ಓಕರಿಕೆ ಈ ಲಕ್ಷಣಗಳು ಇರುತ್ತವೆ. ಗಂಟಲಿನಲ್ಲಿ ಒಂದು ತರದ ಪಡದೆಯು ತಯಾರಾಗಿ ಒಮ್ಮೊಮ್ಮೆ ರೋಗಿಯು ಈ ಬೇನೆಯಿಂದ ಸಾಯುವ ವರೆಗೆ ಪ್ರಸಂಗವು ಬರುತ್ತದೆ. ಗಂಟಲು ನೋಯುವದು, ನುಂಗುವಾಗ ಸ್ವಲ್ಪ ತೊಂದರೆಯಾಗುವದು, ಹಸಿವೆಯಾಗದಿರುವದು, ಸೋತಂತೆ ಅನಿಸುವದು, ಮೈಮೇಲೆ ಮುಳ್ಳು ಬರುವದು ಮುಂತಾದ ಭಾವನೆಗಳು ಇರುತ್ತವೆ. ಅದೇ ಮೇರೆಗೆ ಉಪಜಿವ್ಹಿಕೆಯೂ ಅಂಗಳವೂ ಕೆಂಪಾಗುತ್ತವೆ, ಬಾಯುತ್ತವೆ, ಮತ್ತು ನೋಯುತ್ತವೆ. ಬಳಿಕ ಅವುಗಳ ಮೇಲೆ ಬಿಳಿಯ ಕಲೆಗಳು ಕಾಣಿಸುತ್ತವೆ. ಸ್ವಲ್ಪ ಕಾಲದಲ್ಲಿಯೇ ಈ ಬಿಳಿಯ ಕಲೆಗಳಿಗೆ ಹಳದೀ ಬಣ್ಣವು ಬರುತ್ತದೆ. ಕಲೆಗಳು ಮೆಲ್ಲಮೆಲ್ಲಗೆ ಒಂದಕ್ಕೊಂದು ಕೂಡಿ ಒಂದು ಪಡದೆಯಂತೆ ಕಾಣುತ್ತವೆ. ಬಾಯಿಯು ಬಹಳ ಹೊಲಸು ನಾರುತ್ತದೆ; ಜೊಲ್ಲು ಸೋರುತ್ತದೆ. ಬೇನೆಯು ಸೌಮ್ಯವಾಗಿದ್ದರೆ ಪಡದೆಯು ಬೇಗನೆ ನಾಶವಾಗುತ್ತದೆ. ಮತ್ತು ರೋಗಿಯು ೫ ರಿಂದ ೧೫ ದಿವಸಗಳೊಳಗೆ ನೆಟ್ಟಗಾಗುತ್ತಾನೆ. ಬೇನೆಯು ಉಗ್ರವಾಗಿದ್ದರೆ ನಾಲ್ಕನೆಯ ಅಥವಾ ಆರನೆಯ ದಿವಸ ಜ್ವರವು ಒಮ್ಮಿಂದೊಮ್ಮೆ ಹೆಚ್ಚಾಗುತ್ತದೆ. ರೋಗಿಯು ತೀರ ಅಶಕ್ತನಾಗುತ್ತಾನೆ. ಕೈಕಾಲುಗಳು ತಣ್ಣಗಾಗಿ ಶಕ್ತಿಪಾತವಾಗುತ್ತದೆ ಮತ್ತು ರೋಗಿಯು ಮರಣ ಹೊಂದುತ್ತಾನೆ. ಕೆಲವು ಸಾರೆ ನೆತ್ತಿ, ಕಣ್ಣು, ಮೂಗು, ಕಿವಿ, ಕುತ್ತಿಗೆ, ಕೈಕಾಲು ಮುಂತಾದ ಬೇರೆ ಬೇರೆ ಅವಯವಗಳಲ್ಲಿ ಪಕ್ಷಘಾತವಾಗುತ್ತದೆ.

**ಫೇ. ಫಾ:**— ದಾಹಾವಸ್ಥೆಯಲ್ಲಿಯ ಜ್ವರ ಮೊದಲಾದ ಭಾವನೆಗಳಿಗೆ ಕಾಲೀಮೂರದ ಸಂಗಡ ಇದನ್ನೂ ಕೊಡಬೇಕು.

**ಕಾ. ಮೂ:**— ಇದು ಪ್ರಮುಖ ಔಷಧವು. ಫೇರಂ ಫಾಸದ ಸಂಗಡ ಕೊಡಬೇಕು. ನಾಲಿಗೆಯು ಬೆಳ್ಳಗಾಗುವದು. ನೆತ್ತಿ, ಕಿರಿ ನಾಲಿಗೆ, ಮತ್ತು ಉಪಜಿವ್ಹಿಕೆ ಇವು ಬಾಯುವವು. ನುಂಗುವಾಗ ಬಹಳ ನೋಯುವದು. ಈ ಔಷಧದಿಂದ ಬಿಳಿಯ ಕಲೆಗಳು ನಾಶವಾಗು

ತ್ತವೆ. ೩× ಅಥವಾ ೬× ಶಕ್ತಿಯ ಔಷಧವನ್ನು ೧೦।೧೫ ಗ್ರೇನ ನೀರಿನಲ್ಲಿ ಹಾಕಿ ಸರತಿಗೆ ಎರಡು ಚಮಚೆಯಂತೆ ಎರಡು ತಾಸಿಗೊಮ್ಮೆ ಕೊಡಬೇಕು.

**ನೇ. ಮೂ:**— ಮುಖವು ಬಾಯುವದು ಹಾಗು ಕಳೆಗುಂದುವದು. ಕಣ್ಣು ಮುಚ್ಚು ಹಾಕುತ್ತವೆ. ಜೊಲ್ಲು ಬಹಳ ಸೋರುತ್ತದೆ; ಅಥವಾ ನಾಲಿಗೆಯು ತೀರ ಒಣಗುತ್ತದೆ. ನೀರಿನಂತೆ ರೇಚವೂ ವಾಂತಿಯೂ ಆಗುತ್ತದೆ. ಉಸುರಾಡಿಸಲಿಕ್ಕೆ ಆಯಾಸವಾಗುತ್ತದೆ.

**ನೇ. ಸ:**— ಪಿತ್ತದ ಹಸರು ವಾಂತಿಯಾಗುವದು. ಬಾಯಿಯೂ ನಾಲಿಗೆಯೂ ಕಹಿಯಾಗುತ್ತದೆ. ಮುಖ್ಯ ಔಷಧದ ಸಂಗಡ ಇದನ್ನೂ ಕೊಡಬೇಕು.

**ಕಾ. ಫಾ:**— ಅಶಕ್ತತನ ಮತ್ತು ಶಕ್ತಿಪಾತದ ಮೇಲೆ ಇದನ್ನು ಕೊಡಬೇಕು. ದೋಷಿಕ ಭಾವನೆಗಳಾಗುವವು. ರೋಗವು ನೆಟ್ಟಗಾದ ಬಳಿಕ ಅದರ ದುಷ್ಪರಿಣಾಮಗಳಿಗೆ. ಉದಾಹರಣಾರ್ಥವಾಗಿ-ದೃಷ್ಟಿಮಾಂದ್ಯ, ಮೂಗಿನೊಳಗಿಂದ ಮಾತನಾಡುವದು, ಪಕ್ಷಾಂಗ ಇತ್ಯಾದಿ.

**ಕಲ್ಕೆ. ಫ್ಲೊ:**— ಚಿಕಿತ್ಸೆಯು ಸರಿಯಾಗಿ ಆಗದೆ ಇದ್ದುದರಿಂದ ಶ್ವಾಸನಲಿಕೆಯ ಮೇಲೆ ರೋಗದ ಪರಿಣಾಮವಾಗಿ ಉಸುರು ಕಟ್ಟಿದಂತೆ ಆಗುತ್ತಿದ್ದರೆ ಕಲ್ಕೆ. ಫಾಸದ ಜತೆಗೆ ಇದನ್ನೂ ಕೊಡಬೇಕು.

**ಕಲ್ಕೆ. ಫಾ:**— ರೋಗವು ಶ್ವಾಸನಲಿಕೆಯ ವರೆಗೆ ಹಬ್ಬಿದ್ದರೆ ಕಲ್ಕೆ. ಫ್ಲೊ. ದ ಜತೆಗೆ ಇದನ್ನು ಕೊಡಬೇಕು. ಬೇರೆ ಔಷಧಗಳ ಸಂಗಡ ನಡುನಡುವೆ ಕೊಡುತ್ತಿರಬೇಕು. ರೋಗವು ನೆಟ್ಟಗಾದ ಬಳಿಕ ಶಕ್ತಿಯು ಬೇಗನೆ ಬರಬೇಕೆಂದು ಇದರ ಉಪಯೋಗ ಮಾಡಬೇಕು.

**ನೇ. ಫಾ:**— ಅಂಗಳ, ನಾಲಿಗೆಯ ಹಿಂದಿನ ಭಾಗ, ಮತ್ತು ಉಪ ಜಿಹ್ವಿಕೆ ಇವುಗಳಲ್ಲಿ ಹಸಿಯಾದ ಕೆನೆಯಂಥ ಹಳದೀ ಬಣ್ಣದ ಪುಟವು ಬಂದಿದ್ದರೆ.

**ಉಪಯುಕ್ತ ಸೂಚನೆ:**— ಈ ರೋಗವು ಬಹುತರವಾಗಿ ಕಡಿಮೆ ಪ್ರಮಾಣದಲ್ಲಿ ಆಗುತ್ತದೆ. ಮೊದಲಿನಿಂದ ಫೇರಂ ಫಾಸ ಮತ್ತು ಕಾಲೀ ಮೂರ ಇವುಗಳನ್ನು ೧೦/೧೫ ಗ್ರೇನ ನೀರಿನಲ್ಲಿ ಹಾಕಿ ಮೇಲಿಂದ ಮೇಲೆ

ಅರ್ಧ ತಾಸಿಗೊಮ್ಮೆ ಅಥವಾ ಕಾಲು ತಾಸಿಗೊಮ್ಮೆ ಒಂದೇಸವನೆ ಕೊಡುತ್ತ ಹೋದರೆ, ಬೇನೆಯು ಬಲಿಯುವದರೊಳಗಾಗಿ ನೆಟ್ಟಗಾಗುವದು. ರೋಗವು ಶ್ವಾಸನಲಿಕೆಯುತನಕ ಹೋಗಿ ಮುಟ್ಟಿದ್ದರೆ ಕಲ್ಕೆ. ಫಾ. ಮತ್ತು ಕಲ್ಕೆ. ಫ್ಲೋ. ಇವುಗಳ ಉಪಯೋಗ ಮಾಡಬೇಕು. ೧ × ದಿಂದ ೩ × ದ ವರೆಗೆ ಶಕ್ತಿಯುಳ್ಳ ೧೫ ಗ್ರೇನ ಕಾಲೀಮೂರವನ್ನು ಅರ್ಧ ಬಟ್ಟಲ ಬಿಸಿನೀರಲ್ಲಿ ಹಾಕಿ ಅದರಿಂದ ಬಾಯಿ ಮುಕ್ಕಳಿಸಬೇಕು. ಸಾದಾ ಗ್ಲಿಸರಿನವನ್ನು ಸಹ ಕಲೆಗಳು ಬಿದ್ದಿರುವ ಸ್ಥಳದಲ್ಲಿ— ಅಂದರೆ ಪಡದೆಯಾಗಿದ್ದ ಸ್ಥಳದಲ್ಲಿ — ಹಚ್ಚುವದರಿಂದ ಬಹಳ ಉಪಯೋಗವಾಗುವದು. ತಿನ್ನಲಿಕ್ಕೆ ಪೌಷ್ಟಿಕವಾದ ಹಗುರು ಆಹಾರವನ್ನು ಕೊಡಬೇಕು. ಪಡದೆಯು ಬೆಳೆದದ್ದರಿಂದ ಬಾಯಿಯೊಳಗಿಂದ ಅನ್ನವು ಹೋಗದಂತಾದರೆ ಅದನ್ನು ವೈದ್ಯ ಜನರ ಸಹಾಯದಿಂದ ಗುದದ್ವಾರದಿಂದ ಹಾಕಬೇಕು. ಈ ಬೇನೆಯು ಸಾಂಸರ್ಗಿಕವಿದ್ದುದರಿಂದ ಮನೆಯೊಳಗಿನ ಬೇರೆ ಜನರಿಗೆ ಅದು ಆಗದಂತೆ ಕೈಲಾದ ಮಟ್ಟಿಗೆ ಎಚ್ಚರಪಡಬೇಕು.

---

# ಗಂಟಲು ನೋಯುವದು.

**Sore-Throat.** **ಸೋಅರ-ಥ್ರೋಟ.**

ಗಂಟಲು ಬಾಯುವದು, ನೋಯುವದು, ಕೆಂಪಾಗುವದು; ಗಂಟಲಿನಲ್ಲಿ ಕ್ಷತಗಳಾಗುವದು, ಹುಣ್ಣು ಆಗುವದು; ದನಿ ಕೂಡುವದು; ಉರಿಯುವದು ಮುಂತಾದ ಭಾವನೆಗಳು ಈ ರೋಗದಲ್ಲಿ ಕಂಡು ಬರುತ್ತವೆ. ಘಟಸರ್ಪ, ಉಪಜಿವ್ಹಿಕೆಯ ರೋಗ, ಕಿರಿನಾಲಿಗೆ ಬೀಳುವದು, ಅಂಗಳವು ಕೆಂಪಾಗುವದು ಮತ್ತು ನೋಯುವದು, ಕಂಠನಲಿಕೆಯ ರೋಗ, ಇವಾದರೂ ಗಂಟಲರೋಗಗಳೇ ಅಹುದು. ಇವುಗಳಲ್ಲಿ ಕೆಲವು ರೋಗಗಳ ಚಿಕಿತ್ಸೆಯನ್ನು ಆಯಾ ರೋಗಗಳ ಕೆಳಗೆ ಸ್ವತಂತ್ರರೀತಿಯಿಂದ ಮಾಡಿದ್ದೇವೆ. ಗಂಟಲಿನ ರೋಗದ ಬಗ್ಗೆ ಸರ್ವಸಾಧಾರಣವಾಗಿ ನಾಲ್ಕು ಮಾತುಗಳನ್ನು ಇಲ್ಲಿ ಹೇಳುತ್ತೇವೆ.

ಚಳಿ, ಹವೆಯಲ್ಲಿಯ ಬದಲಾವಣಿ, ಕೆಟ್ಟ ಹವೆ ಅಥವಾ ಧೂಳು ಗಂಟಲಿನಲ್ಲಿ ಹೋಗುವದು, ಉಷ್ಣ ಪದಾರ್ಥಗಳನ್ನು ತಿನ್ನುವದು, ಉಪದಂಶ, ಮಾತಾಡುವಾಗ ಆಯಾಸವಾಗುವದು, ಮುಂತಾದವು ಗಂಟಲರೋಗದ ಕಾರಣಗಳು.

**ಫೇ. ಫಾ:**— ಗಂಟಲು ಒಣಗಿದ್ದರೆ, ಕೆಂಪಾಗಿದ್ದರೆ, ಅಥವಾ ಬಾತಿದ್ದರೆ; ಜ್ವರ, ಕಾವು, ನೋವು ಇದ್ದರೆ: ಅದೇ ವೇಳೆಗೆ ಗಂಟಲಿನಲ್ಲಿ ಹುಣ್ಣಾಗಲಿ ವ್ರಣವಾಗಲಿ ಇದ್ದರೆ ಫೇರಂ ಫಾಸದಿಂದ ಬಹಳ ಉಪಯೋಗವಾಗುತ್ತದೆ. ಉರಿಯುವದು ಮತ್ತು ನೋಯುವದು. ಗಾಯಕರು, ಪುರಾಣಿಕರು, ಭಾಷಣಕಾರರು ಮುಂತಾದವರ ಗಂಟಲ ನೋಯುತ್ತದೆ. ವಿಶೇಷವಾಗಿ ಸಾಯಂಕಾಲದಲ್ಲಿ ದನಿ ಕೂಡುತ್ತದೆ. ಇದರ ಸಂಗಡ ಕಲ್ಕೆ-ಫಾಸವನ್ನು ನಡುನಡುವೆ ಕೊಡಬೇಕು.

**ಕಾ. ಮ್ಯೂ:**— ದಾಹದ ದ್ವಿತೀಯಾವಸ್ಥೆ. ಕುತ್ತಿಗೆಯಲ್ಲಿಯ ಗಂಟುಗಳೂ ಗಂಟಲಲ್ಲಿಯ ಗಂಟುಗಳೂ ( ಉಪಜಿವ್ಹಿಕೆ ) ಬಾಯುತ್ತವೆ. ಗಂಟಲಿನಲ್ಲಿ ವ್ರಣವಾಗುತ್ತವೆ; ಮತ್ತು ಅವುಗಳ ಮೇಲೆ ಬಿಳೇ ಬಣ್ಣದ ಹಾಗು ಬೂದೀ ಬಣ್ಣದ ಕಲೆಗಳು ಕಾಣಿಸುತ್ತವೆ. ನಾಲಿಗೆಯ ಮೇಲೆ ಬೆಳ್ಳಗೆ ದಟ್ಟಾದ ಪರಿ ಬರುತ್ತದೆ. ನುಂಗುವಾಗ ಗಂಟಲು ನೋಯುತ್ತದೆ. ಈ ಔಷಧವನ್ನು ಬಿಸಿ ನೀರಿನಲ್ಲಿ ಹಾಕಿ ಅದರಿಂದ ಬಾಯಿ ಮುಕ್ಕಳಿಸಬೇಕು. ಉಪದಂಶಜನ್ಯ ಗಂಟಲನೋವು ಆಗಿದ್ದರೆ ಇದರ ಉಪಯೋಗವು ಬಹಳ ಚನ್ನಾಗಿ ಆಗುವದು.

**ಕಲ್ಕೆ. ಫಾ:**— ಗಂಟಲಿನಲ್ಲಿ ಒಂದೇಸವನೆ ಕೆದರಿದಂತಾಗುತ್ತದೆ. ಕಫವು ಬೆಳ್ಳಗೆ, ಸ್ವಚ್ಛವಾಗಿ, ದಟ್ಟಾಗಿ ಬೀಳುತ್ತದೆ. ಗಾಯಕ, ಪುರಾಣಿಕ, ಮುಂತಾದವರ ಗಂಟಲು ನೋಯತ್ತದೆ.

**ನೇ. ಮ್ಯೂ:**— ಫೇರಂ ಫಾಸದಿಂದ ಗುಣವು ಬರದಿದ್ದರೆ ಇದನ್ನು ಕೊಡಬೇಕು. ಗಂಟಲಿನಲ್ಲಿ ಬಾವೂ ನೋವೂ ಇರುತ್ತದೆ. ಗಂಟಲು ಒಣಗುತ್ತದೆ. ನಾಲಿಗೆಯ ಮೇಲೆ ಜೊಲ್ಲಿನ ಬುರುಗು ಕಾಣಿಸುತ್ತದೆ. ಗಂಟಲಿ

ನಲ್ಲಿ ಸ್ವಚ್ಛವಾದ ಬುರುಗುಳ್ಳ ಪಾರದರ್ಶಕ ಪದಾರ್ಥವು ಕೂಡಿರುತ್ತದೆ. ಕಿರಿನಾಲಿಗೆ ಬೀಳುತ್ತದೆ.

**ಮ್ಯಾ. ಫಾ:—** ಗಂಟಲಿನಲ್ಲಿ ಒರಟಿ ಬರುತ್ತವೆ. ನುಂಗುವಾಗ ಉಸುರು ಕಟ್ಟಿದಂತೆ ಆಗುತ್ತದೆ.

**ನೇ. ಸ:—** ಗಂಟಲು ನೋಯುತ್ತದೆ. ನುಂಗುವಾಗ ಗಂಟಲಿನಲ್ಲಿ ಏನಾದರೂ ಸಿಕ್ಕಂತೆ ಅನಿಸುತ್ತದೆ.

**ಕಲ್ಕೆ. ಸ:—** ದಟ್ಟವಾದ ಹಳದೀ ಕೀವು; ಒಮ್ಮೊಮ್ಮೆ ರಕ್ತ ಮಿಶ್ರಿತ ವಿರುತ್ತದೆ. ಗಂಟಲಿನಲ್ಲಿಯೂ ಉಪಜಿವ್ಹಿಕೆಯಲ್ಲಿಯೂ ಕೀವಾಗುವ ಪ್ರವೃತ್ತಿ ಇದ್ದರೆ ಅದನ್ನು ನಿಲ್ಲಿಸುತ್ತದೆ. ವ್ರಣವಾಗಿರುತ್ತದೆ; ಮತ್ತು ಅದು ನೋಯುತ್ತದೆ.

**ಕಲ್ಕೆ. ಫ್ಲೊ:—** ಗಂಟಲದಲ್ಲಿ ತುರಿಸುತ್ತದೆ. ಕಿಲಿನಾಲಿಗೆ ಜೋತಾ ಡುತ್ತದೆ. ಮಲಗಿದನಂತರ ಒಂದೇಸವನೆ ಕೆಮ್ಮು ಬರುತ್ತದೆ.

**ಕಾ. ಫಾ:—** ಗಂಟಲು ಕೊಳೆತು ನೋಯುತ್ತದೆ. ಅದು ಒಣಗಿ ಹೋಗುತ್ತದೆ. ಒಂದೇಸವನೆ ನುಂಗಬೇಕೆಂದು ಅನಿಸುತ್ತದೆ. ಉಸುರು ಹೊಲಸು ನಾರುತ್ತದೆ. ಗಂಟಲದೊಳಗಿಂದ ಉಪ್ಪುಪ್ಪು ಜೊಲ್ಲು ಬರುತ್ತದೆ.

**ನೇ. ಫಾ:—** ಗಂಟಲು ಮತ್ತು ಉಪಜಿವ್ಹಿಕೆ ಇವುಗಳಲ್ಲಿ ದಾಹ. ಗಂಟಲಿನಲ್ಲಿಯೂ ಉಪಜಿವ್ಹಿಕೆಯ ಮೇಲೆಯೂ ಬಂಗಾರದಂತೆ ಅಚ್ಚ ಹಳದೀ ಬಣ್ಣದ, ದಟ್ಟವಾದ, ಕೆನೆಯಂಥ ಕಿಟ್ಟು ಕೂಡ್ರುತ್ತಿದ್ದರೆ ಇದರಿಂದ ವಿಶೇಷ ಉಪಯೋಗವಾಗುವದು. ತೆಳ್ಳನ್ನ ಪದಾರ್ಥವನ್ನು ನುಂಗು ವಾಗ ತ್ರಾಸವಾಗುತ್ತದೆ.

**ಉಪಯುಕ್ತ ಸೂಚನೆ:—** ಜೀವನ ರಸಾಯನ ಔಷಧಗಳ ಉಪಯೋಗವನ್ನು ವೇಳೆಗೆ ಸರಿಯಾಗಿ ಮಾಡಿದರೆ ಗಂಟಲನೋವು ಬೇಗನೆ ನಿಲ್ಲುವದು. ಹೊಟ್ಟೆಯಲ್ಲಿ ಕೊಡತಕ್ಕ ಔಷಧವನ್ನು ನೀರಿನಲ್ಲಿ ಹಾಕಿ ಅದರಿಂದ ಬಾಯಿ ಮುಕ್ಕಳಿಸಬೇಕು. ಚಳಿಯಾಗಿ ಗಂಟಲು ನೋಯು ತ್ತಿದ್ದರೆ ಬಿಸಿನೀರಿನಿಂದ ಬಾಯಿ ಮುಕ್ಕಳಿಸಬೇಕು. ಗಂಟಲನ್ನು ಖೇಕರಿಸಿ

ಸ್ವಚ್ಛ ಮಾಡುವದು, ಕೆರೆಯುವದು ಮುಂತಾದವುಗಳನ್ನು ಆದಷ್ಟು ಮಟ್ಟಿಗೆ ಮಾಡಬಾರದು. ಉಪಜಿಹ್ವಿಕೆಯು ಬಾತದ್ದರಿಂದ ನೋವು ಬಹಳ ಆಗುತ್ತಿದ್ದರೆ ಗಂಟಲಿಗೆ ಕಾವು ಕೊಡಬೇಕು; ಅದರಿಂದ ನೆಟ್ಟಗೆನಿಸುತ್ತದೆ.

"ಉಪಜಿಹ್ವಿಕೆಯು ರೋಗ" ವೆಂಬ ಸದರು ನೋಡಿರಿ.

---

# ಬೆವರು

**Sweat.** ಸ್ವೆಟ್.

ಬೆವರು ಸ್ವತಂತ್ರ ರೋಗವಲ್ಲ. ಜ್ವರದಲ್ಲಿಯೂ ಅಶಕ್ತತನದಲ್ಲಿಯೂ ಈ ಭಾವನೆಯು ಕಂಡುಬರುತ್ತದೆ. ಒಮ್ಮೊಮ್ಮೆ ಯಾವ ರೋಗವೂ ಕಣ್ಣಿಗೆ ಕಾಣದಿದ್ದರೂ ಬೆವರು ಬರುತ್ತದೆ. ಅದರಿಂದ ಅಶಕ್ತತನ ಮೊದಲಾದ ವಿಕಾರಗಳಾಗುವವು. ಕೆಲವು ಸಾರೆ ಮೈತುಂಬ ಬೆವರು ಬಿಡದೆ, ಅಂಗೈ, ಅಂಗಾಲು, ತಲೆ ಮತ್ತು ಬೇರೆ ಭಾಗಗಳಲ್ಲಿ ಅಷ್ಟರ ಮಟ್ಟಿಗೆ ಬೆವರು ಬಿಡುತ್ತದೆ. ಇಂಥ ಸಮಯದಲ್ಲಿ ಕೆಳಗಿನ ಸೂಚನೆಗಳ ಉಪಯೋಗ ಮಾಡಬೇಕು.

**ಸಿ:**— ಕ್ಷಯರೋಗದಲ್ಲಿ ರಾತ್ರಿಯಲ್ಲಿ ಬಹಳ ಬೆವರು ಹಾಗು ದಣುವಿಕೆ. ಚಿಕ್ಕ ಮಕ್ಕಳಿಗೆ ತಲೆಯ ಸುತ್ತಲು ಬೆವರು. ಕಾಲಿಗೂ ಬಗಲೊಳಗೂ ಬರುವ ಹೊಲಸು ಬೆವರು. ಯಾವದೇ ರೋಗವು ಕಾಣಿಸದಿದ್ದರೂ ಬಹಳ ಬೆವರು ಬಿಡುವದು.

**ನೇ. ಮೂ:**— ರಾತ್ರಿಯಲ್ಲಿ ಬಹಳ ಬೆವರು; ದಣಿಸುವಂಥ ಬೆವರು. ಬೆವರು ಹುಳಿ ನಾರುವದು. ಚಳಿಜ್ವರದಲ್ಲಿ ದಣಿಸುವಂಥ ಬೆವರು ಬಿಡುತ್ತದೆ.

**ಕಾ. ಫಾ:**— ಮಾನಸಿಕ ಅಶಕ್ತತೆಯನ್ನು ಅಥವಾ ಪ್ರಕೃತಿಗೆ ಕ್ಷೀಣತೆಯನ್ನು ತರುವಂಥ ರೋಗಗಳಲ್ಲಿ ಬೆವರು ಬಿಡುವದು.

**ಕಲ್ಕೆ. ಫಾ:**— ಕ್ಷಯರೋಗದಲ್ಲಿ ಬಹಳ ಬೆವರು ಬಿಡುತ್ತಿದ್ದರೆ ಸಿಲಿಕಾದ ಉಪಯೋಗವಾಗದಿದ್ದರೆ ಇದನ್ನು ಕೊಡಬೇಕು. ಮೈತುಂಬ, ವಿಶೇಷವಾಗಿ ಮುಖದ ಮೇಲೆ, ತಣ್ಣಗೆ ಜಿಗಟು ಬೆವರು.

**ಉಪಯುಕ್ತ ಸೂಚನೆ:—** ಯಾವದೇ ರೋಗದ ಚಿನ್ಹವಿರದೆ ಬರುವಂಥ ಬೆವರು ಮುಂದೆ ಬರತಕ್ಕ ಕ್ಷಯರೋಗದ ಲಕ್ಷಣವೆಂದು ತಿಳಿಯಬೇಕು. ಕಾಲಿಗೆ ಬಿಡುವ ಹೊಲಸು ಬೆವರು ಒಮ್ಮೊಂದೊಮ್ಮೆ ನಿಂತರೆ ಹೆಂಗಸರಿಗೆ ನಷ್ಟಾರ್ತವವಾಗುವದು; ಒಮ್ಮೊಮ್ಮೆ ಕ್ಷಯರೋಗವು ಸಹ ಆಗುವದು. ಇಂಥ ಪ್ರಸಂಗದಲ್ಲಿ ಸಿಲಿಕಾ ಮತ್ತು ಕಲ್ಕೆ. ಫಾಸ ಇವುಗಳ ಉಪಯೋಗವು ಚನ್ನಾಗಿ ಆಗುತ್ತದೆ. ಕೆಲವು ಸಣ್ಣ ಹುಡುಗರಿಗೆ ನಿದ್ದೆ ಹತ್ತಿದಾಗ ತಲೆಗೆ ಬೆವರು ಬಿಡುತ್ತದೆ. ಇದು ಒಂದು ಪ್ರಾಕೃತಿಕ ದೋಷವು. ಇಂಥ ಪ್ರಾಕೃತಿಕ ದೋಷವಿರುವ ಹುಡುಗರ ನೆತ್ತಿಯು ಬಹುತರವಾಗಿ ತುಂಬಿರುವದಿಲ್ಲ; ಮತ್ತು ಬೇರೆ ಕೆಲವು ತಕರಾರುಗಳೂ ಇರುತ್ತವೆ. ಪ್ರಾಕೃತಿಕ ಔಷಧಗಳ ಸಹಾಯವಿಲ್ಲದೆ ಬೇರೆ ಔಷಧಗಳಿಂದ ಆ ತಕರಾರುಗಳು ಬೇಗನೆ ದೂರಾಗುವದಿಲ್ಲ. ಪ್ರಾಕೃತಿಕ ರೋಗಗಳಿಗೆ ಪ್ರಾಕೃತಿಕ ಔಷಧಗಳ ಉಪಯೋಗವನ್ನೇ ಮಾಡಬೇಕಾಗುವದು.

---

## ಮೂಗು ಒಡೆಯುವದು

**Epistaxis.** **ಎಪಿಸ್ಟ್ಯಾಕ್ಸಿಸ್.**

ಮೂಗಿನಿಂದ ರಕ್ತವು ಸೋರಿದರೆ ಅದಕ್ಕೆ ಮೂಗು ಒಡೆಯಿತು ಅನ್ನುತ್ತಾರೆ. ಆ ರಕ್ತವು ಅಚ್ಚ ಕೆಂಪು ಇಲ್ಲವೆ ಕಪ್ಪು ಇರುತ್ತದೆ. ಅದು ಕೂಡಲೆ ಗಟ್ಟಿಯಾಗುತ್ತದೆ. ಆದರೆ ಅಳ್ಳಕಾಗಿದ್ದರೆ ಅದು ಹೆರೆಯುವದೂ ಇಲ್ಲ. ರಕ್ತವು ಬಹುತರವಾಗಿ ಮೂಗಿನ ಒಂದೇ ಹೊಳ್ಳೆಯಿಂದ ಸೋರುತ್ತದೆ.

ಅಪಘಾತ, ಮೂಗಿಗೆ ಪೆಟ್ಟು ತಾಕುವದು, ಕೆಮ್ಮುವಾಗ ಆಯಾಸ ವಾಗಿ ಆಗುವ ನಷ್ಟಾರ್ತವ, ಮುಟ್ಟಾಗುವದರಲ್ಲಿ ಅನಿಯಮಿತತನ, ಇವು ಇದರ ಕಾರಣಗಳು. ಪೀತ ಪಂಡುರೋಗಿಗಳಿಗೂ ಕ್ಷೀಣರಕ್ತ ರೋಗಿ ಗಳಿಗೂ ಇದರಿಂದ ಹೆಚ್ಚು ತ್ರಾಸವಾಗುತ್ತದೆ. ಇದರಿಂದ ತಲೆ ನೋಯು ವದು ಸ್ವಲ್ಪ ಹೊತ್ತು ನಿಲ್ಲುತ್ತದೆ. ಹೃದಯ, ಪುಪ್ಪುಸ, ಪ್ಲೀಹಾ ಇವುಗಳ ರೋಗಗಳಲ್ಲಿ ಇದು ಅನಿಷ್ಟ ಲಕ್ಷಣವು. ಮುಪ್ಪಿನತನದಲ್ಲಿ ಮೂಗಿನಿಂದ

ರಕ್ತವು ಸೋರಿದರೆ, ಅದು ಮುಂದೆ ಆಗಲಿರುವ ಸಂನ್ಯಾಸ ಅಥವಾ ರಕ್ತಜಮೂರ್ಛೆಯೆಂಬ ರೋಗದ ಪೂರ್ವಚಿಹ್ನವೆಂದು ತಿಳಿಯಬೇಕು.

**ಫೇ. ಫಾ:—** ವಿಶೇಷವಾಗಿ ಚಿಕ್ಕಮಕ್ಕಳ ಮೂಗಿನಿಂದ ತೀರ ಕೆಂಪು ರಕ್ತವು ಸೋರುತ್ತದೆ.

**ಕಾ. ಫಾ:—** ಕಾಫಿಯ ಬೀಜದಂತೆ ತೆಳ್ಳಗೆ ಕಪ್ಪು ರಕ್ತ; ಹೊಲಸು ರಕ್ತವು ಸೋರುತ್ತದೆ. ಯಾವಾಗಲೂ ಮೂಗು ಒಡೆಯುವಂಥ ಅಶಕ್ತ ಮನುಷ್ಯರಿಗೂ ಮುದುಕರಿಗೂ ಇದರಿಂದ ಬಹಳ ಉಪಯೋಗವಾಗುತ್ತದೆ.

"ರಕ್ತಸ್ರಾವ"ವೆಂಬ ಸದರು ನೋಡಿರಿ.

**ಉಪಯುಕ್ತ ಸೂಚನೆ:—** ರೋಗಿಗಳಿಗೆ ಬಾಯಿ ಮುಚ್ಚಿ ಮೂಗಿನಿಂದ ಉಸುರಾಡಿಸಲಿಕ್ಕೆ ಹೇಳಬೇಕು. ಅದರಿಂದ ರಕ್ತವು ಗಟ್ಟಿಯಾಗಲಿಕ್ಕೆ ಸಹಾಯವಾಗುತ್ತದೆ. ಎರಡೂ ಕೈಗಳನ್ನು ತಲೆಯ ಮೇಲೆ ಎತ್ತಿಹಿಡಿದು ಕುತ್ತಿಗೆಯನ್ನು ಸೆಟೆಯಿಸಿ ಕೆಲವು ಹೊತ್ತು ಹಾಗೆಯೆ ಕೂಡ್ರಬೇಕು. ಮೂಗಿನ ಕೆಳಗೂ ಕುತ್ತಿಗೆಯ ಮೇಲೆಯೂ ಬರ್ಫವನ್ನಾಗಲೀ ತಣ್ಣೀರಿನ ಒದ್ದೆಯ ಅರಿವೆಯನ್ನಾಗಲೀ ಇಡಬೇಕು. ಉರುಳುಗಡ್ಡೆಯನ್ನು ಮೂಸಿ ನೋಡಲಿಕ್ಕೆ ಕೊಡಬೇಕು; ಅದನ್ನು ನೆತ್ತಿಯ ಮೇಲೆಯೂ ಕಟ್ಟಬೇಕು.

---

# ಜಠರರೋಗ

**Diseases of Stomach.** ಡಿಸೀಜೆಸ್ ಆಫ ಸ್ಟಮಕ್.

ಜಠರ ವಿಕೃತಿಯಿಂದ ಅಗ್ನಿಮಾಂದ್ಯವಾಗುತ್ತದೆ. ಅದರ ಭಾವನೆಗಳನ್ನೂ ಬೇರೆ ಮಾಹಿತಿಯನ್ನೂ "ಅಗ್ನಿಮಾಂದ್ಯ"ವೆಂಬ ಸದರಿನ ಕೆಳಗೆ ನೋಡಿರಿ. ಜಠರದೊಳಗಿನ ಶ್ಲೇಷ್ಮಲ ತ್ವಚೆಯಲ್ಲಿ ಶೀಘ್ರ ಚಳಿ, ದೀರ್ಘ ಚಳಿ, ಅಥವಾ ದಾಹವಾಗುತ್ತದೆ; ನಾಡಿಯ ವೇದನೆಯಾಗುತ್ತದೆ; ಒರಟೆ ಬರುತ್ತವೆ; ವ್ರಣಗಳೂ ಕ್ಷತಗಳೂ ಆಗುತ್ತವೆ; ದುಷ್ಟ ಗುಲ್ಮವಾಗುತ್ತದೆ; ಜಠರದೊಳಗಿಂದ ರಕ್ತಸ್ರಾವವಾಗುತ್ತದೆ; ಮುಂತಾದ ಬೇರೆ ರೋಗಗಳೂ ಜಠರದಲ್ಲಿ ಆಗುವದುಂಟು.

ಚಳಿಯಾಗುವದು, ತೀರ ತಣ್ಣಗಿರುವ ಇಲ್ಲವೆ ತೀರ ಬಿಸಿಯಾದ ಅನ್ನಪಾನಗಳನ್ನು ಸೇವಿಸುವದು, ಜಡಾನ್ನ ಉಣ್ಣುವದು, ನೆಣಯುಕ್ತ ಅನ್ನವಾಗಲಿ ಮಾಂಸವಾಗಲಿ ತಿನ್ನುವದು, ಸೆರೆ ಕುಡಿಯುವದು, ಹಾಲಿನಲ್ಲಿ ಬರ್ಫ ಹಾಕಿ ಅದನ್ನು ಕುಡಿಯುವದು, ಇವು ಜಠರದಾಹದ ಕಾರಣಗಳು. ತಂಬಾಕ ತಿನ್ನುವದೂ ಸೇದುವದೂ, ವ್ಯಾಯಾಮ ಮಾಡದಿರುವದು, ಮಾನಸಿಕ ಶ್ರಮವೂ ತ್ರಾಸವೂ ಆಗುವದು, ಈ ಕಾರಣಗಳೂ ಇದ್ದರೆ ದೀರ್ಘದಾಹವು ಉಂಟಾಗುತ್ತದೆ. ಈ ಎರಡೂ ಪ್ರಕಾರಗಳಲ್ಲಿ ಅಗ್ನಿ ಮಾಂದ್ಯ ಅಪಚನ ಮುಂತಾದ ಲಕ್ಷಣಗಳು ಇರುತ್ತವೆ. ಹೊಟ್ಟೆಯು ಜಡವಾಗಿ ತುಂಬಿದಂತೆ ಇರುತ್ತದೆ; ಒತ್ತಿದರೆ ನೋಯುತ್ತದೆ. ನೀರಡಿಕೆಯು ಇರುತ್ತದೆ; ಜ್ವರವೂ ಬರುತ್ತದೆ. ಬಹಳ ಹಳೆಯ ಜಠರದಾಹವಿದ್ದರೆ ರೋಗಿಯು ಅಶಕ್ತನೂ, ಸಿಡುಕನೂ, ಕೆಟ್ಟ ಮೋರೆ ಮಾಡಿದವನೂ ಇರುತ್ತಾನೆ. ಮುಂಜಾವಿನಿಂದ ಸಂಜೆಯ ತನಕ ಕುಂಭಕರ್ಣನಂತೆ ನಿದ್ರೆಯನ್ನೇ ಮಾಡಬೇಕೆಂದು ಆತನಿಗೆ ಅನಿಸುತ್ತದೆ. ಬರಬರುತ್ತ ತ್ವಚೆಯು ಕಳೆಗುಂದುತ್ತದೆ; ಕ್ಷಯದ ಭಾವನೆಯೂ ಉಂಟಾಗುತ್ತದೆ. ಆದರೆ ಕ್ಷಯವು ಪ್ರತ್ಯಕ್ಷವಾಗಿ ಆಗಿರುವದಿಲ್ಲ.

ಜಠರದಲ್ಲಿ ನಡುನಡುವೆ ಬಹಳ ವೇದನೆಯಾಗುವದು ನಾಡಿಗತ ವಿಕೃತಿಯ ಲಕ್ಷಣವು. ಆಕಳಿಕೆ ಬರುವದು, ಕೈಕಾಲು ತಣ್ಣಗಾದಂತೆ ಅನಿಸುವದು, ಅಸ್ವಸ್ಥತೆಯ ಮೂಲಕ ಮೈ ಮುರಿಯುವ ಇಚ್ಛೆಯಾಗುವದು, ಇವು ಈ ಬೇನೆಯ ಪೂರ್ವಚಿನ್ಹಗಳು. ಹೊಟ್ಟೆಯೊಳಗಿನ ವೇದನೆಯು ಆ ಮೇಲೆ ಆರಂಭವಾಗುತ್ತದೆ. ಕಳೆಗಳು ಬರುತ್ತವೆ; ಒರಟಿಗಳು ಬರುತ್ತವೆ; ಮತ್ತು ಉಸುರುಕಟ್ಟಿದಂತೆ ಆಗುತ್ತದೆ. ಈ ಲಕ್ಷಣಗಳು ಪಂಡುರೋಗ, ಪೀತ ಪಂಡುರೋಗ ಮತ್ತು ಕ್ಷಯವಾಗಿದ್ದ ರೋಗಿಗಳಲ್ಲಿ ಕಂಡುಬರುತ್ತವೆ. ಅಗ್ನಿಮಾಂದ್ಯದ ಬೇರೆ ಲಕ್ಷಣಗಳೂ ಇರುತ್ತವೆ.

ಜಠರ ವ್ರಣದಲ್ಲಿಯೂ ಬಹಳ ವೇದನೆಯಾಗುತ್ತದೆ; ಮತ್ತು ಅದು ಬೆನ್ನಿನ ವರೆಗೆ ಹೋಗುತ್ತದೆ. ಇಂಥ ವೇದನೆಗಳು ಊಟವಾದ ಬಳಿಕ ಬರುತ್ತವೆ. ಜಿಗಟು, ಎಳೆಯುಳ್ಳ, ತಿಳಿನೀರಿನಂಥ, ರುಚಿಯಿಲ್ಲದ ಅಥವಾ

ಹುಳಿ ವಾಂತಿಯಾಗುವದು. ಅದರಲ್ಲಿ ಕಪ್ಪು ಅಥವಾ ಸಸುಗೆಂಪು ತುಣುಕು ಗಳು ಇರುವವು. ಒಮ್ಮೊಮ್ಮೆ ಕೆಂಪು ರಕ್ತದ ವಾಂತಿಯಾಗುವದು. ಕಾರಿಕೆಯಾದನಂತರ ವೇದನೆಯು ಕಡಿಮೆಯಾಗುವದು ಇಲ್ಲವೆ ನಿಲ್ಲುವದು. ಜಡಾನ್ನವು ಪಚನವಾಗುವದಿಲ್ಲ; ಹಾಲು ಪಚನವಾಗುತ್ತದೆ. ತೇಗು ಬರುವದು, ಬಾಯಿಗೆ ನೀರು ಬಿಡುವದು, ಮುಂತಾದ ಅಗ್ನಿಮಾಂದ್ಯದ ಬೇರೆ ಲಕ್ಷಣಗಳು ಕಂಡುಬರುತ್ತವೆ. ವ್ರಣದ ಕಾರಣವನ್ನು ನಿಶ್ಚಿತವಾಗಿ ಹೇಳಲಿಕ್ಕೆ ಆಗುವದಿಲ್ಲ.

ಜಠರಾರ್ಬುದದಲ್ಲಿಯೂ ಜಠರ ವ್ರಣದಂತೆಯೇ ಭಾವನೆಗಳು ಕಾಣಿ ಸುತ್ತವೆ. ಆದರೆ ಕೆಳಗೆ ಹೇಳಿದ ಮೂರು ಲಕ್ಷಣಗಳು ಮಾತ್ರ ಜಠರಾ ರ್ಬುದದ ವಿಶೇಷ ಲಕ್ಷಣಗಳು. ಅರ್ಬುದವು ಬಹುತರವಾಗಿ ನಾಲ್ವತ್ತ ಕ್ಕಿಂತ ಕಡಿಮೆ ವಯಸ್ಸಿನಲ್ಲಿ ಆಗುವದಿಲ್ಲ; ಅದರ ವೇದನೆಗಳು ಸ್ವಾಭಿಕ ವಿರುತ್ತವೆ; ಅವು ಜಠರ ವ್ರಣದಂತೆ ಬೆನ್ನಿನವರೆಗೆ ಹೋಗಿ ಮುಟ್ಟುವದಿಲ್ಲ. ಅರ್ಬುದದ ರೋಗಿಯು ಬಹುಬೇಗ ಅಶಕ್ತನಾಗುತ್ತಾನೆ.

ವ್ರಣ, ಅರ್ಬುದ, ಜಠರದಾಹ ಮುಂತಾದವುಗಳ ಮೂಲಕ ಜಠರ ದಿಂದ ರಕ್ತಸ್ರಾವವಾಗಬಹುದು. ಬಹಳ ರಕ್ತವು ಕಾರಿದ ಬಳಿಕ ರೋಗಿಯ ಮುಖವು ಕಳೆಗುಂದಿದಂತಾಗುವದು. ನಾಡಿಯು ಅಶಕ್ತವಾಗುವದು, ಕೈಕಾಲು ತಣ್ಣಗಾಗುವವು; ಕಿವಿಯಲ್ಲಿ ಸಪ್ಪಳಾಗುವದು, ಬವಳಿ ಬರುವದು ಮತ್ತು ಬೇರೆ ಅಶಕ್ತತನದ ಲಕ್ಷಣಗಳು ಕಾಣಿಸುತ್ತವೆ.

**ಅಗ್ನಿಮಾಂದ್ಯ, ಗುಲ್ಮ, ರಕ್ತಸ್ರಾವ** ಮುಂತಾದ ಸದರುಗಳನ್ನು ನೋಡಿರಿ. ಇಲ್ಲಿ ಜಠರದ ಸರ್ವಸಾಧಾರಣ ರೋಗಗಳಿಗೆ ಉಪಯೋಗ ವಾಗುವಂಥ ಔಷಧಗಳ ಬಗ್ಗೆ ಹೇಳಿದ್ದೇವೆ.

**ಫೇ. ಫಾ:** - ಜಠರದಾಹವಾಗಿ ಅದರಿಂದ ಹೊಟ್ಟೆಯೊಳಗೆ ನೋಯು ತ್ತದೆ; ಮತ್ತು ಬಾಯುತ್ತದೆ. ಸ್ಪರ್ಶವು ಸಹನವಾಗುವದಿಲ್ಲ. ಅನ್ನದ ವಾಂತಿಯಾಗುತ್ತದೆ. ಮುಖವು ಕೆಂಪಾಗುತ್ತದೆ. ನಾಲಿಗೆಯು ಕೆಂಪಗೆ ಸ್ವಚ್ಛವಾಗುತ್ತದೆ. ನೀರಡಿಕೆಯಾಗುತ್ತದೆ. ಹೊಟ್ಟೆ ಕಾಸಿದರೆ ನೆಟ್ಟಗೆನಿ ಸುತ್ತದೆ. ತಣ್ಣೀರು ಕುಡಿದರೆ ಹೆಚ್ಚಾಗುತ್ತದೆ. ತಿಂದ ಅನ್ನದ ತೇಗು

ಬರುತ್ತದೆ. ಹಸಿವೆಯಾಗುವದಿಲ್ಲ. ಹಾಲಿನ ಬೇಸರಿಕೆ ಬರುತ್ತದೆ. ಉಂಡ ನಂತರ ಮಳಮಳಿಸುತ್ತದೆ ಮತ್ತು ಅನ್ನದ ವಾಂತಿಯಾಗುತ್ತದೆ. ಹುಳಿ ಕಾರಿಕೆಯಾಗುತ್ತದೆ. ಜಠರ ವ್ರಣದಲ್ಲಿ ಕಾಫಿಯ ಬೀಜದಂತೆ ಕಪ್ಪು ಗಂಟಿನ ವಾಂತಿಯಾಗುತ್ತದೆ.

**ಕಾ. ಮೂ:—** ಪಿತ್ತದ ಲಕ್ಷಣಗಳು ಕಾಣುತ್ತವೆ. ವಿಶೇಷವಾಗಿ ಮುಂಜಾವಿನಲ್ಲಿ ನಾಲಿಗೆಯು ಬಿಳೀ ಬಣ್ಣದ್ದೂ ಬೂದೀ ಬಣ್ಣದ್ದೂ ಕಾಣಿಸುತ್ತದೆ. ಯಕೃತಭಾಗದಲ್ಲಿಯೂ ಬಲಭುಜದ ಕೆಳಗೂ ಜಡವೆನಿಸುತ್ತದೆ. ಮಲಾವರೋಧವಾಗುತ್ತದೆ. ಎಣ್ಣೆಯ ಹಾಗು ಕಮ್ಮಗಿನ ಪದಾರ್ಥಗಳನ್ನು ತಿಂದಬಳಿಕ ಹೊಟ್ಟೆಯೊಳಗೆ ಹೇಗೆಹೇಗೋ ಆಗುತ್ತದೆ. ಬಾಯಿ ಕಹಿಯಾಗುತ್ತದೆ. ಉಷ್ಣ ಪೇಯದಿಂದ ಜಠರದಾಹವಾಗುತ್ತದೆ. ಫೇರಂ ಫಾಸವನ್ನೂ ಇದನ್ನೂ ಆದಲುಬದಲು ಮಾಡಿ ಕೊಡಬೇಕು.

**ನೇ. ಫಾ:—** ಹುಳಿ ರುಚಿ. ಹುಳಿ ತೇಗು. ತಿಂದನಂತರ ಹೊಟ್ಟೆಯೊಳಗೆ ಕಳೆಯೂ ಉರುಪೂ. ಕ್ಷುಧಾನಾಶ. ಮುಂಜಾವಿನಲ್ಲಿ ನಿದ್ದೆಯಿಂದ ಎದ್ದ ಬಳಿಕ ನಾಲಿಗೆಯ ಮೇಲೆ ತೆಳ್ಳಗೆ, ಹಸಿಯಾದ, ಹಳದೀ ಬಣ್ಣದ ಕಿಟ್ಟು ಕೂಡುತ್ತದೆ. ಗಂಟಲಿನಲ್ಲಿ ಉರಿಯುತ್ತದೆ. ಮಲವು ಹಸರು ಆಗುತ್ತದೆ. ಆಮ್ಲಪಿತ್ತಜನ್ಯ ಹೊಟ್ಟೆಸೂಲಿಯ ಮೇಲಿನ ಮುಖ್ಯ ಔಷಧವಾದ ಫೇರಂ ಫಾಸವನ್ನೂ ಈ ಔಷಧವನ್ನೂ ಆದಲುಬದಲು ಮಾಡಿ ಬಹು ದಿವಸಗಳ ವರೆಗೆ ಕೊಟ್ಟರೆ ಹೊಟ್ಟೆಸೂಲಿಯು ಸಂಪೂರ್ಣವಾಗಿ ನಿಲ್ಲುವದೆಂದು ಅನುಭವವಿದೆ. ಜಠರವ್ರಣ. ಉಂಡಕೂಡಲೆ ಅಥವಾ ಎರಡು ತಾಸಿನ ನಂತರ ಹೊಟ್ಟೆಯೊಳಗೆ ಎಲ್ಲ ಕಡೆಗೆ ಇಲ್ಲವೆ ಒಂದು ಕಡೆಗೆ ತೀವ್ರ ವೇದನೆಯಾಗುತ್ತದೆ; ಮತ್ತು ಹುಳಿಯು ಎದೆಗೆ ಹಾಯುತ್ತದೆ. ಜಂತಿನಿಂದಲೂ ಹೊಟ್ಟೆ ಕಡಿಯುತ್ತದೆ; ಮತ್ತು ಎದೆಗೆ ಹಾಯುತ್ತದೆ. ಎದೆ ಸುಡುವದು, ಎದೆಗೆ ಹಾಯುವದು, ಬಾಯಿಗೆ ನೀರು ಬಿಡುವದು, ಕಾಫಿಯ ಬೀಜದಂತೆ ಕರ್‍ರಗೆ ವಾಂತಿಯಾಗುವದು ಮುಂತಾದ ಲಕ್ಷಣಗಳಿದ್ದರೆ ಈ ಔಷಧದ ಉಪಯೋಗವಾಗುವದು.

**ಕಲ್ಕೆ. ಫಾ:—** ಯಾವದೇ ಕಾರಣದಿಂದ ಉಂಟಾಗಿರುವ ಅಪಚನಕ್ಕೆ ನಡುನಡುವೆ ಊಟವಾದ ಕೂಡಲೆ ಕೊಟ್ಟರೆ ಉಪಯೋಗವಾಗು

ವದು. ಈ ಔಷಧದಲ್ಲಿ ಪಚನಕ್ರಿಯೆಗೆ ಸಹಾಯ ಮಾಡುವ ಶಕ್ತಿಯು ಬಹಳವಿರುತ್ತದೆ. ಉಂಡ ಅನ್ನವು ಮೈಗೆ ಹತ್ತದಿದ್ದರೆ, ೧× ಶಕ್ತಿಯ ಕಲ್ಕ. ಫಾಸಪನ್ನು ದಿನಾಲು ಊಟವಾದ ಕೂಡಲೆ ನೀರಿನಲ್ಲಿ ಕೊಟ್ಟರೆ ಬಹಳ ಉಪಯೋಗವಾಗುವದು. ತಣ್ಣೀರು ಕುಡಿದದ್ದರಿಂದಾಗಲೀ ಸ್ವಲ್ಪ ಅನ್ನ ಉಂಡದ್ದರಿಂದಾಗಲೀ ಹೊಟ್ಟೆಯು ಕಡಿಯುತ್ತಿದ್ದರೆ ಹಾಗು ಪೈತ್ತಿಕ ಭಾವನೆಯು ಇರದಿದ್ದರೆ. ನಳಗಳಲ್ಲಿ ಬಹಳ ವಾಯು ತುಂಬಿ ಕೊಂಡಿದ್ದರೆ, ಅದರ ಮೇಲೆ ಈ ಔಷಧವು ರಾಮಬಾಣವು. ಬೇರೆ ಔಷಧಗಳನ್ನು ಕೊಡುತ್ತಿರುವಾಗ ನಡುನಡುವೆ ಇದನ್ನೂ ಕೊಡಬೇಕು. ಜಠರದ ಬೇರೆ ತಕರಾರುಗಳು ದೂರಾದ ಬಳಿಕ ಆರೋಗ್ಯಸ್ಥಾಪನಾವಸ್ಥೆ ಯಲ್ಲಿ ಶಕ್ತಿಯು ಬೇಗನೆ ಬರುವದಕ್ಕೆ ಇದರ ಉಪಯೋಗವಾಗುತ್ತದೆ.

**ಕಾ. ಫಾ:** — ಹೊಟ್ಟೆಯೊಳಗೆ ಕಲಸಿದಂತೆ ಆಗುತ್ತದೆ. ಹಸಿವೆ ಬಹಳಾಗುತ್ತದೆ. ಊಟ ಮಾಡಿದರೂ ಹಸಿವೆಯು ಇದ್ದೇ ಇರುತ್ತದೆ. ಅಂಜಿಕೆಯಿಂದಾಗಲಿ ಬೇರೆ ತ್ರಾಸದಿಂದಾಗಲಿ ಹೊಟ್ಟೆ ಕಡಿಯುತ್ತದೆ. ರೋಗಿಯು ಅಶಕ್ತನೂ, ಅಸ್ವಸ್ಥನೂ, ಸಚಿಂತನೂ, ತ್ರಾಸಿಕನೂ ಆಗಿರು ತ್ತಾನೆ. ಸನ್ನಿಪಾತ ಜ್ವರಕ್ಕೆ, ಅಥವಾ ಬೇರೆ ಶಕ್ತಿಕ್ಷೀಣ ಮಾಡುವಂಥ ರೋಗದ ನಂತರ ಉಂಟಾಗುವ ಸುಳ್ಳು ಹಸಿವೆಗೆ, ಮತ್ತು ಭಸ್ಮಕವೆಂಬ ರೋಗಕ್ಕೆ ಈ ಔಷಧದಿಂದ ಬಹಳ ಉಪಯೋಗವಾಗುತ್ತದೆ. ಎಡಮಗ್ಗ ಲಲ್ಲಿ ವಾಯು ತುಂಬಿರುವದರಿಂದ ಒಂದೇಸವನೆ ನೋಯುತ್ತದೆ. ಹೃದಯದ ಸುತ್ತಲು ವಾಯು ತುಂಬಿಕೊಂಡು ಅದರಿಂದ ಅಸ್ವಸ್ಥವೆನಿಸುತ್ತದೆ. ಜಠರದಲ್ಲಿ ವ್ರಣವಾಗಲಿ ಮಾಂಸಾರ್ಬುದವಾಗಲಿ ಆಗುತ್ತದೆ. ಕಹಿ ಅಥವಾ ಹುಳಿ ತೇಗು ಬರುತ್ತವೆ.

**ಕಾ. ಸ:**— ಹೊಟ್ಟೆಯು ತುಂಬಿದಂತೆ ಜಡವೆನಿಸುವದು. ಮ್ಯಾ. ಫಾ. ದಿಂದ ಗುಣವು ಬರದಿದ್ದರೆ ಇದನ್ನು ಕೊಡಬೇಕು. ಹೊಟ್ಟೆಯು ಬಹಳ ಕಡಿಯುವದು. ಬಹಳ ಹಳೆಯ ರೋಗವಿದ್ದು ನಾಲಿಗೆಯು ಜಿಗಟು ಮತ್ತು ಹಳದಿಯಾಗುವದು. ಅಪಚನವಾಗುವದು. ಹೊಟ್ಟೆಯಲ್ಲಿ ನೋವಾಗಿ ಬಾಯಿಯಲ್ಲಿ ನೀರು ಬಿಡುತ್ತಿದ್ದು ಕಾಲೀಮೂರ ಮತ್ತು

ನೇಟ್ರಂವರ್ಮೂರ ಈ ಔಷಧಗಳಿಂದ ಗುಣವು ಬರದಂತಾದರೆ ಕಾಲೀಸಲ್ಫದು ಉಪಯೋಗವಾಗುವದು.

**ಮ್ಯಾ. ಫಾ:—** ನಿಂತು ನಿಂತು ಒಮ್ಮೆಲೆ ಬಿಕ್ಕು ಬರುತ್ತದೆ. ಹೊಟ್ಟೆಯೊಳಗೆ ಕಳೆ ಏಳುತ್ತವೆ, ಒರಟಿ ಬರುತ್ತವೆ. ಗಟ್ಟಿಯಾಗಿ ಜಗ್ಗಿದಂತೆಯೂ, ಬಿಗಿದಂತೆಯೂ, ಕಡಿದಂತೆಯೂ ಅನಿಸುತ್ತದೆ. ನಾಲಿಗೆಯು ಜಳಜಳವಿರುತ್ತದೆ. ತೇಗು ಬಂದು ನೋವು ಕಡಿಮೆಯಾಗುವದಿಲ್ಲ. ರೋಗಿಗೆ ಸಕ್ಕರೆ ತಿನ್ನುವ ಇಚ್ಛೆಯು ಬಹಳಾಗುತ್ತದೆ. ಉಷ್ಣೋಪಚಾರದಿಂದ ವೇದನೆಯು ಕಡಿಮೆಯಾಗುತ್ತದೆ.

**ನೇ. ಸ:—** ಬಾಹಿ ಕಹಿಯಾಗುವದು. ಪಿತ್ತದ ಕಹಿ ವಾಂತಿಯಾಗುವದು. ಮಲವು ಪೈತ್ತಿಕ, ಕರ್‍ರಗೆ ಅಥವಾ ಹಸರು. ತಲೆ ನೋಯುವದು; ಬವಳಿ ಬರುವದು; ಗ್ಲಾನಿ ಬರುವದು. ನಾಲಿಗೆಯು ಹಸರು, ಕಂದು, ಅಥವಾ ಬೆಳ್ಳಗಾಗುವದು. ಯಕೃತದಲ್ಲಿ ಚುಚ್ಚಿದಂತೆ ನೋಯುವದು. ಹುಳಿ ತೇಗು ಬರುವವು. ಗಂಟಲಿನಲ್ಲಿ ಉರಿಯುವದು. ವಾಯು ಬಹಳ ತುಂಬಿಕೊಳ್ಳುವದು. ಮಾಂಸಾಹಾರದಿಂದ ಅದು ಹೆಚ್ಚಾಗುವದು. ಬಲಗಡೆಯು ನಳದಲ್ಲಿಯೂ, ಎಡಗಡೆಗೆ ಹೊಕ್ಕಳ ಕೆಳಗಿನ ನಳದಲ್ಲಿಯೂ ಗಾಳಿಯು ತುಂಬಿಕೊಂಡು ಅದರಿಂದ ಹೊಟ್ಟೆಸೂಲಿ ಏಳುವದು. ಕಾಲು ಮಡಚಿ ಹೊಟ್ಟೆಗೆ ಹಚ್ಚಿಕೊಂಡು ಮಲಗಿದರೆ ನೆಟ್ಟಗೆನಿಸುತ್ತದೆ. ಧೋತರವನ್ನು ಉಡುವದು ಕೂಡ ಸಹನವಾಗುವದಿಲ್ಲ. ಉಂಡ ಅನ್ನವು ಮೈಗೆ ಹತ್ತುವದಿಲ್ಲ. ಇದರ ಸಂಗಡ ಕಾಲೀಫಾಸವನ್ನೂ ಕೊಡಬೇಕು.

**ನೇ. ಮೂ:—** ಅಪಚನ, ಬಾಯಿಗೆ ನೀರು ಬಿಡುವದು, ಹೊಟ್ಟೆ ಸೂಲಿ, ಬಾಯಿಯಲ್ಲಿ ನೀರು ತುಂಬುವದು, ಬುರುಗುಳ್ಳ ತಿಳಿನೀರಿನ ಅಥವಾ ಎಳೆಯುಳ್ಳ ಜೊಲ್ಲಿನ ವಾಂತಿಯಾಗುವದು, ಬಾಯಿ ಹೊಲಸು ನಾರುವದು, ಹಸಿವೆ ಬಹಳಾಗುವದು, ತಂಬಾಕ ಸೇದಲಿಕ್ಕೆ ಬೇಡಾಗುವದು, ನೀರಡಿಕೆ ಬಹಳಾಗುವದು, ರೊಟ್ಟಿಯ ಬೇಸರಿಕೆ ಬರುವದು, ಹುಳಿ ರುಚಿ, ಹುಳಿ ಅನ್ನ ಉಂಡರೆ ಚಳಿಯಾಗಿ ಜ್ವರವು ಬರುವದು, ಬೆವರು ಬಹಳ ಬರುವದು, ಈ ಭಾವನೆಗಳಿದ್ದರೆ ಈ ಔಷಧದ ಉಪಯೋಗವು ಖಂಡಿತವಾಗಿ ಆಗುವದು.

**ಕಲ್ಕಿ. ಸ:—** ಹಣ್ಣು ಹಂಪಲ, ಚಹ, ಹಚ್ಚಗಿನ ಹುಳಿಯಾದ ಪಲ್ಲೆ ತಿನ್ನುವ ಇಚ್ಛೆಯಾಗುವದು. ಹಸಿವೆಯೂ ನೀರಡಿಕೆಯೂ ಬಹಳಾಗುವದು. ಮಳಮಳಿಸುವದು. ಬವಳಿ ಬರುವದು. ತಿನ್ನುವಾಗ ಹೊಟ್ಟೆಯೊಳಗೆ ಉರಿಯುವದು.

**ಸಿ:—** ಬಹಳ ದಿನದ ಅಪಚನದ ವಿಕಾರವಿರುವದು. ಹುಳಿ ತೇಗು ಬರುವದು. ಗಂಟಲಿನಲ್ಲಿ ಉರಿಯುವದು. ಮಾಂಸಾಹಾರದ ಹಾಗು ಬಿಸಿ ಅನ್ನದ ಬೇಸರಿಕೆ ಬರುವದು. ಹಸಿವೆ ಬಹಳಾಗುವದು. ಸೆರೆ ಕುಡಿದರೆ ತಡೆಯುವದಿಲ್ಲ.

**ಉಪಯುಕ್ತ ಸೂಚನೆ:—** ದಾಹಯುಕ್ತ ಜಠರರೋಗದಲ್ಲಿ ಫೇರಂ ಫಾಸ ಮತ್ತು ಕಾಲೀಮೂರ ಇವುಗಳನ್ನು ಆರಂಭದಿಂದ ಎಚ್ಚರದಿಂದಲೂ ವ್ಯವಸ್ಥೆಯಿಂದಲೂ ಕೊಟ್ಟರೆ ಬೇರೆ ಯಾವ ಔಷಧವನ್ನೂ ಕೊಡುವ ಅವಶ್ಯಕತೆಯೇ ಉಳಿಯುವದಿಲ್ಲ. ಈ ಎರಡು ಔಷಧಗಳಿಂದಲೇ ಬೇನೆಯು ನೆಟ್ಟಗಾಗುತ್ತದೆ. ಅಫುವಿನಂಥ ಅಮಲಿನ ಔಷಧಗಳನ್ನು ಎಂದಿಗೂ ಕೊಡಬಾರದು. ಅದರಿಂದ ರೋಗವು ನೆಟ್ಟಗಾಗಲಿಕ್ಕೆ ಬಹಳ ತೊಂದರೆಯಾಗುತ್ತದೆ. ಬಲವಾದ ಕಳಿಗಳು ನಿಂತು ನಿಂತು ಬರುತ್ತಿದ್ದರೆ ಮ್ಯಾ. ಫಾ. ವನ್ನು ಬಿಸಿನೀರಿನಲ್ಲಿ ಒಂದೇಸವನೆ ಕೊಡಬೇಕು. ಹೊಟ್ಟೆಯನ್ನು ಕಾಸಬೇಕು. ಬಿಸಿನೀರಿನ ಬಸ್ತಿಯನ್ನು ಕೊಟ್ಟರೆ ಅದರಿಂದ ಉಪಯೋಗವಾಗುವದು. ರೋಗವು ನೆಟ್ಟಗಾಗಲಿಕ್ಕೆ ಆರಂಭವಾಗುವವರೆಗೆ ಅಳ್ಳಕಿನ ಅನ್ನವನ್ನೇ ಕೊಡಬೇಕು.

---

# ಜಲಶೋಥ

**Dropsy.** ಡ್ರಾಪ್ಸಿ.

ಹೊಟ್ಟೆಯಲ್ಲಿ, ಮಿದುಳಿನಲ್ಲಿ, ಎದೆಯಲ್ಲಿ, ತ್ವಚೆಯಲ್ಲಿ ಅಥವಾ ಬೇರೆ ಕಡೆಗೆ ನೀರು ತುಂಬಿಕೊಂಡರೆ ಅದಕ್ಕೆ ಜಲಶೋಥವೆನ್ನುತ್ತಾರೆ. ಹೊಟ್ಟೆಯೊಳಗೆ ನೀರು ತುಂಬಿಕೊಂಡಿದ್ದರೆ ಅದಕ್ಕೆ ಉದರವೆನ್ನುವ ರೂಢಿಯುಂಟು. ಜಲಶೋಥದ ಗಣನೆಯು ಸ್ವತಂತ್ರ ರೋಗಗಳಲ್ಲಿ ಆಗುವದಿಲ್ಲ, ಇದು

ಬೇರೆ ರೋಗಗಳಲ್ಲಿ ಉಂಟಾಗುವ ಒಂದು ಭಾವನೆಯೆಂದೇ ತಿಳಿಯಲ್ಪಡುತ್ತದೆ. ಮಸ್ತಿಷ್ಕದ ಆವರಣದಲ್ಲಿ (ಜಲಯುಕ್ತ ಮಿದುಳಿನಲ್ಲಿ), ಫುಪ್ಪುಸದಲ್ಲಿ, ಮತ್ತು ಹೃದಯ, ಉದರ, ಅಂಡಾಶಯ ಇವುಗಳ ಆವರಣದಲ್ಲಿ ನೀರು ತುಂಬಿಕೊಳ್ಳುತ್ತದೆ. ಮೋರೆ, ಕೈ, ಕಾಲು ಮುಂತಾದ ಸ್ಥಳಗಳಲ್ಲಿ ನೀರು ತುಂಬಿಕೊಂಡರೆ ಅದಕ್ಕೆ ಬಾವು ಅನ್ನುತ್ತಾರೆ. ಉದರವಾಗಲಿ ಶೋಥವಾಗಲಿ ನೀರು ತುಂಬಿದ ಬಾವೇ ಸರಿ. ಆದರೆ ಒಮ್ಮೊಮ್ಮೆ ನೀರು ತುಂಬದೆ ಬಾವು ಬರುವದುಂಟು. ಬಾವಿನ ಮೇಲೆ ಬೊಟ್ಟಿನಿಂದ ಒತ್ತಿದರೆ ಅಲ್ಲಿ ತಗ್ಗು ಬೀಳುವದೂ, ಮತ್ತು ಅದು ಮೆಲ್ಲಮೆಲ್ಲಗೆ ಮೊದಲಿನಂತೆ ಉಬ್ಬುವದೂ ಜಲಶೋಥದ ಲಕ್ಷಣವು. ಬೇರೆ ತರದ ಬಾವಿನಲ್ಲಿ ಹೀಗೆ ಆಗುವದಿಲ್ಲ. ಹೃದಯ, ಯಕೃತ, ಮೂತ್ರಪಿಂಡ, ಪ್ಲೀಹಾ, ಫುಪ್ಪುಸ, ರಕ್ತವಾಹಿನಿ ಇವುಗಳ ರೋಗದಲ್ಲಿಯೂ, ಅದೇ ಮೇರೆಗೆ ಗುಲ್ಮ ಅಥವಾ ಚಳಿಜ್ವರದಂಥ ರೋಗಗಳಲ್ಲಿಯೂ ಉದರದ ಆವರಣದಲ್ಲಿ ನೀರು ತುಂಬಿಕೊಳ್ಳುತ್ತದೆ ಹಾಗು ಉದರರೋಗವಾಗುತ್ತದೆ.

ಉದರ ರೋಗದಲ್ಲಿ ಹೊಟ್ಟೆಯು ಉಬ್ಬಿದಂತೆ ಕಾಣಿಸುತ್ತದೆ. ಹೊಟ್ಟೆಯ ಪರೀಕ್ಷೆಯನ್ನು ಮಾಡಲಾಗಿ ಒಳಗಿನ ನೀರು ತೆರೆಗಳ ಹಾಗೆ ತಾಕಲಾಡುವಂತೆ ಕಂಡುಬರುತ್ತದೆ. ಮಲವೂ ಮೂತ್ರವೂ ಕಡಿಮೆಯಾಗುತ್ತದೆ. ಬೆವರು ಕಡಿಮೆಯಾಗುತ್ತದೆ. ಎದೆಯ ಮಗ್ಗಲಿಗೆ ಒತ್ತಿದಂತಾಗಿ ಉಸುರಾಡಿಸಲಿಕ್ಕೆ ಸರಿಯಾಗಿ ಒರುವದಿಲ್ಲ. ಬಹಳ ಕಷ್ಟವಾಗುತ್ತದೆ. ಹೊಟ್ಟೆಯ ಮೇಲೆ ಬೊಟ್ಟಿನಿಂದ ಬಡೆದರೆ "ಬದ್ ಬದ್" ಎಂದು ಸಪ್ಪಳಾಗುತ್ತದೆ. ಎದೆಯಲ್ಲಿಯೂ ದಡದಡ ಸಪ್ಪಳಾಗುತ್ತದೆ. ಹೊಟ್ಟೆಯ ಮೇಲಿನ ಸಿರಗಳು ಸ್ಪಷ್ಟವಾಗಿ ಕಾಣಿಸುತ್ತವೆ. ಯಾವ ಯಾವ ಇಂದ್ರಿಯಗಳ ವ್ಯತ್ಯಾಸದಿಂದ ಜಲಶೋಥವಾಗಿರುವದೋ ಆಯಾ ಇಂದ್ರಿಯಗಳ ರೋಗಗಳಿಗೆ ಅನುಸಾರವಾಗಿ ಆಯಾ ಭಾವನೆಗಳಾಗುತ್ತವೆ.

ಎದೆಯೊಳಗಿನ ಜಲಶೋಥವನ್ನು ಡಾಕ್ಟರ ಜನರ ಸಹಾಯದಿಂದ ತಿಳಿದುಕೊಂಡು ಅದರ ಚಿಕಿತ್ಸೆಯನ್ನು ಮಾಡಬೇಕು. ಕಷ್ಟಶ್ವಾಸ, ಕುಳಿತುಕೊಂಡರೆ ಉಸುರಾಡಿಸಲಿಕ್ಕೆ ಸ್ವಲ್ಪ ಸುಲಭವಾಗುವದು, ಮಲಗಿಕೊಂಡರೆ ತ್ರಾಸವಾಗುವದು, ಉಸುರು ಕಟ್ಟಿದಂತೆ ಆಗುವದು, ಮತ್ತು

ಆದರಿಂದ ಕುಳಿತುಕೊಂಡಿರುವದೇ ಅವಶ್ಯವಾಗುವದು, ಇವು ಈ ರೋಗದ ಸ್ಥೂಲ ಲಕ್ಷಣಗಳು.

ಜಲಯುಕ್ತ ಮಿದುಳ ರೋಗವು ಸಾಮಾನ್ಯವಾಗಿ ಚಿಕ್ಕಮಕ್ಕಳಿಗೆ ಆಗುವದು. ಅದರಲ್ಲಿ ಕೆಲವು ಪ್ರಕಾರಗಳುಂಟು. ಕೂಸುಗಳಿಗೆ ತಮ್ಮ ಗೋಣು ನೆಟ್ಟಗೆ ಹಿಡಿಯಲಿಕ್ಕೆ ಬರುವದಿಲ್ಲ, ತಲೆಯು ಬೆಳಿಗೆಯಾಗುವದಿಲ್ಲ, ಅವುಗಳಿಗೆ ನಡೆಯಲಿಕ್ಕೂ ಮಾತಾಡಲಿಕ್ಕೂ ಬರುವದಿಲ್ಲ, ಮುಖದ ಮೇಲೆ ಹುಚ್ಚು ಕಳೆ ಸುರಿಯುವದು, ಬಾಯಿಯಿಂದ ನೀರು ಸೋರುವದು, ಬಾಯಿಯು ಅರ್ಧಮರ್ಧ ತೆರೆದಿರುವದು, ಕೂಳಬಾಕನಂತೆ ಗಪಗಪ ತಿನ್ನುವದು, ಒರಟೆ ಬರುವದು, ಮುಂತಾದ ಲಕ್ಷಣಗಳ ಮೇಲಿಂದ ಕೂಸಿಗೆ ಜಲಯುಕ್ತ ಮಿದುಳಿನ ರೋಗವು ಜನ್ಮತಃ ಆಗಿರುವದೆಂದು ಸಾಮಾನ್ಯವಾಗಿ ತಿಳಿಯಬೇಕು.

ಕಲ್ಕೆ. ಫಾಸ ಮತ್ತು ನೇಟ್ರಂಮೂರ ಈ ಕ್ಷಾರಗಳ ಪ್ರಮಾಣವು ರಕ್ತದಲ್ಲಿ ಕಡಿಮೆಯಾಗುವದೇ ಈ ರೋಗದ ಕಾರಣವಾಗಿದೆ. ಈ ಕ್ಷಾರಗಳು ಕಡಿಮೆಯಾಗಲು ಶರೀರದಲ್ಲಿ ಎಲ್ಲ ಕಡೆಗೆ ನೀರೂ ಅಲ್ಬ್ಯೂಮಿನವೂ ಮುಟ್ಟುವದಿಲ್ಲ; ಮತ್ತು ಅವು ಸಂಯೋಜಕ ಧಾತುವಿನಲ್ಲಿ ಕೂಡಿಕೊಳ್ಳುತ್ತವೆ. ರೋಗವು ಬಲಿಯುತ್ತ ಹೋದ ಹಾಗೆ ಬೇರೆ ಕ್ಷಾರಗಳೂ ಕಡಿಮೆಯಾಗುತ್ತವೆಯೆಂದು ಜೀವನ ರಸಾಯನ ಶಾಸ್ತ್ರಜ್ಞರ ಮತವಿದೆ.

**ಕಾ. ಮೂ:**— ಯಾವದಾದರೊಂದು ಕಾರಣದಿಂದ (ಹೃದಯ, ಯಕೃತ, ಮೂತ್ರಪಿಂಡ, ಇವುಗಳಲ್ಲಿ ಯಾವದಾದರೊಂದು ಇಂದ್ರಿಯದ ವಿಕಾರದ ಮೂಲಕವಾಗಿ) ಸಾರ್ವತ್ರಿಕ ಜಲಶೋಥವಾಗುವದು. ವಿಶೇಷವಾಗಿ ಒಳಗೆ ತುಂಬಿರುವ ನೀರು ಬೆಳ್ಳಗಿರುವದು. ಪಿತ್ತನಲಿಕಾಮಾರ್ಗವು ಮುಚ್ಚಿದ್ದರಿಂದ ಯಕೃತವು ಬೆಳೆದಿರುವದು. ನಾಲಿಗೆಯು ಬೆಳ್ಳಗಾಗುವದು. ಬಾವು ಮಿಂಚುವದು. ಎದೆಯು ದಡದಡಿಸುತ್ತಿದ್ದು ಹೃದಯರೋಗದ ಮೂಲಕ ಜಲಶೋಥವಾಗಿದ್ದರೆ ಇದರ ಸಂಗಡ ಕಾಲೀಫಾಸವನ್ನೂ ಕೊಡಬೇಕು. ಅಂಡಾಶಯದಲ್ಲಿ ನೀರು ತುಂಬಿಕೊಂಡಿರುವದು.

**ನೇ. ಸ:—** ಈ ರೋಗಕ್ಕೆ ಇದು ಪ್ರಮುಖ ಔಷಧವು. ತುಂಬಿ ಕೊಂಡಿರುವ ನೀರನ್ನು ಹೀರಿಕೊಳ್ಳುತ್ತದೆ. ಅಂಡಾಶಯದಲ್ಲಿ ನೀರು ಇರುತ್ತದೆ. ಇದನ್ನು ಬೇರೆ ಔಷಧಗಳ ಸಂಗಡ ಅದಲುಬದಲು ಮಾಡಿ ನಡುನಡುವೆ ಕೊಡಬೇಕು.

**ನೇ. ಮೂ:—** ಶರೀರದಲ್ಲಿ ನೀರು ಎಲ್ಲಕಡೆಗೆ ಸಮವಾಗಿ ಹಂಚಿ ಹೋಗಬೇಕೆಂದು ನೇಟ್ರಂ ಸಲ್ಫದ ಜತೆಗೆ ಇದನ್ನು ಅದಲುಬದಲು ಮಾಡಿ ಕೊಡಬೇಕು. ನಾಲಿಗೆಯ ಮೇಲೆ ಸ್ವಚ್ಛವಾದ, ತೆಳ್ಳನ್ನ, ಬುರುಗುಳ್ಳ ಕಿಟ್ಟು ಕೂಡುವದು. ಉದರದಲ್ಲಿಯೂ ಅಂಡಾಶಯದಲ್ಲಿಯೂ ನೀರು ಇರುತ್ತದೆ.

**ಕಲ್ಕೆ. ಫಾ:—** ಪಂಡುರೋಗ, ರಕ್ತನಾಶ, ಪಚನಶಕ್ತಿಯ ಅಭಾವ ಮುಂತಾದ ಕಾರಣಗಳ ಮೂಲಕ ಬೇನೆ ಬರುವದು. ಫೇರಂ ಫಾಸವನ್ನೂ ಇದನ್ನೂ ಅದಲುಬದಲು ಮಾಡಿ ಕೊಡಬೇಕು.

**ಕಲ್ಕೆ. ಫ್ಲೂ:—** ಹೃದಯವು ಅಶಕ್ತವಾಗಿರುವದು. ಧಾತುಗಳ ಆಕುಂಚನಶಕ್ತಿಯನ್ನು ಬೆಳೆಯಿಸುವದಕ್ಕೆ. ಅಂಡಾಶಯದಲ್ಲಿ ನೀರು ಇರುವದು.

**ಉಪಯುಕ್ತ ಸೂಚನೆ:—** ಜಲಶೋಥವು ಸ್ವತಂತ್ರ ರೋಗವಲ್ಲ. ಅದು ಒಂದು ಭಾವನೆಯೆಂದು ಮೇಲೆ ಹೇಳಿದ್ದೇವೆ. ಇದರಲ್ಲಿಯೇ ಬೇರೆ ಭಾವನೆಗಳೂ ಕಂಡುಬರುತ್ತವೆ. ಭಾವನೆಗಳಿಗೆ ಅನುಸರಿಸಿ ಔಷಧಗಳ ಯೋಜನೆಯನ್ನು ಮಾಡಬೇಕು. ಎದೆಯು ದಡದಡಿಸುತ್ತಿದ್ದರೆ ಕಾಲೀ ಫಾಸವನ್ನೂ, ಹೃದಯದಲ್ಲಿ ತೀವ್ರ ವೇದನೆಯಾಗುತ್ತಿದ್ದರೆ ಮ್ಯಾಗ್ನೆಸಿಯಾ ಫಾಸವನ್ನೂ, ಬಹಳ ಅಪಚನವಾಗುತ್ತಿದ್ದರೆ ಕಲ್ಕೆ. ಫಾಸ ಹಾಗು ನೇಟ್ರಂ ಫಾಸ ಇವುಗಳನ್ನೂ ಕೊಡಬೇಕು. ಯಾವ ರೋಗದ ಮೂಲಕ ಜಲ ಶೋಥವಾಗಿರುವದೋ ಆ ರೋಗದ ಬಗ್ಗೆ ವಿಚಾರಮಾಡಿ, ರೋಗಿಗೆ ಕೊಡತಕ್ಕ ಅನ್ನವನ್ನು ಗೊತ್ತುಪಡಿಸಬೇಕು; ಮತ್ತು ಅದಕ್ಕೆ ಅನುಸಾರ ವಾಗಿಯೇ ಔಷಧ ಯೋಜನೆಯನ್ನೂ ಮಾಡಬೇಕು.

---

# ನಾಲಿಗೆಯೂ ರುಚಿಯೂ

**Tongue and Taste.** ಟಂಗ ಆಂಡ ಟೇಸ್ಟ.

ಸರ್ವಸಾಧಾರಣವಾಗಿ ನಾಲಿಗೆಯ ಮೇಲೆ ಕೂತಿರುವ ಬೂರಸಿನ ಬಣ್ಣದ ಮೇಲಿಂದ ಯಾವ ಔಷಧವನ್ನು ಕೊಡಬೇಕೆಂಬದನ್ನು ಗೊತ್ತು ಪಡಿಸಬಹುದು. ಆದರೆ ಎಲ್ಲ ರೋಗಗಳಲ್ಲಿ ನಾಲಿಗೆಯ ಬಣ್ಣದ ಮೇಲಿಂದಲೂ ರುಚಿಯ ಮೇಲಿಂದಲೂ ಔಷಧವನ್ನು ಗೊತ್ತುಪಡಿಸುವದು ಸರಿಯಾಗಲಾರದು. ವಿಶೇಷವಾಗಿ ಹಳೆಯ ರೋಗದಲ್ಲಿ ಬೇರೆ ಯಾವ ವಿಶಿಷ್ಟ ಭಾವನೆಗಳೂ ಕಂಡುಬರದಿದ್ದರೆ ನಾಲಿಗೆಯ ಬಣ್ಣವನ್ನು ನೋಡಿ ಸರಿಯಾದ ಔಷಧವನ್ನು ಹುಡುಕಿ ತೆಗೆಯಬಹುದು. ಆದರೆ ಜಠರಕ್ಕೆ ಸಂಬಂಧಿಸಿದ ಹಳೆಯ ವಿಕಾರವು ಮೊದಲಿನಿಂದ ಇದ್ದು ಅದರಲ್ಲಿಯೆ ಬೇರೆ ಮತ್ತೊಂದು ಶೀಘ್ರ ರೋಗವು ಉಂಟಾದರೆ, ಅಂಥ ರೋಗವನ್ನು ನೆಟ್ಟಗೆ ಮಾಡಲಿಕ್ಕೆ ನಾಲಿಗೆಯ ಬಣ್ಣದ ಮೇಲೆ ಅವಲಂಬಿಸುವದು ತಪ್ಪಾಗುವದು. ಬಹುತರವಾಗಿ ಪ್ರತಿಯೊಂದು ರೋಗದಲ್ಲಿ ನಾಲಿಗೆಯ ಮೇಲೆ ಪರಿಣಾಮವಾಗಿ ಬೂರಸವು ಕೂತೇ ಇರುವದು. ಈ ಪುಸ್ತಕದಲ್ಲಿ ಅಲ್ಲಲ್ಲಿ ಬೇರೆ ಬೇರೆ ರೋಗಗಳ ಸದರುಗಳಲ್ಲಿ ಬೇರೆ ಬೇರೆ ಔಷಧಗಳಲ್ಲಿ ನಾಲಿಗೆಯ ಬಣ್ಣವು ಹೇಗಿರುತ್ತದೆಂಬ ಒಗ್ಗೆ ಹೇಳಿದ್ದೇವೆ. "ಹನ್ನೆರಡು ಕ್ಷಾರಗಳ ಗುಣಧರ್ಮ" ವೆಂಬ ಪ್ರಕರಣದಲ್ಲಿ ಈ ವರ್ಣನೆಯನ್ನು ಓದಬಹುದು. ಆದರೂ ಅದನ್ನು ಒತ್ತಟ್ಟಿಗೆ ಹೇಳುವದು ಅವಶ್ಯವಿದ್ದುದರಿಂದ ಕೆಳಗೆ ಹೇಳುತ್ತೇವೆ.

**ಕಾ. ಮ್ಯೂ:—** ನಾಲಿಗೆಯು ಬೆಳ್ಳಗೆ ಅಥವಾ ಬೂದೀಬಣ್ಣದ್ದು. ನಾಲಿಗೆಯು ಒಣಗಿರುತ್ತದೆ. ಬಹಳ ದಪ್ಪಾದ ಬೆಳ್ಳನ್ನ ಕಿಟ್ಟು ಕೂತಿರುತ್ತದೆ. ನಾಲಿಗೆಯು ಬಾಯುತ್ತದೆ. ಅದು ಉರಿಯುತ್ತದೆ. ವಿಶೇಷವಾಗಿ ಮುಖಪಾಕ ರೋಗವಾಗುತ್ತದೆ.

**ಫೇ. ಫಾ:—** ನಾಲಿಗೆಯು ಉರಿಯುತ್ತದೆ. ಅದು ಕರ್ರಗೆ ಮತ್ತು ಕೆಂಪಗೆ ಬಾಯುತ್ತದೆ. ಕಾಲೀ ಮೂರದ ಜತೆಗೆ ಅದಲುಬದಲು ಮಾಡಿ ಕೊಡಬೇಕು. ಶರೀರದಲ್ಲಿ ಎಲ್ಲಿಯಾದರೂ ಉರಿಯುತ್ತಿದ್ದರೆ ನಾಲಿಗೆಯು ಕೆಂಪಾಗುವದು. ನಾಲಿಗೆಯ ಮೇಲೆ ದುಷ್ಟ ಗುಲ್ಮವಾಗುವದು.

**ಕಾ. ಫಾ:—** ಸಾಸಿವೆಯಂತೆ ಕರ್‍ರಗೆ ಕೆಂಪಗೆ ಕಿಟ್ಟು. ಮುಂಜಾವಿನಲ್ಲಿ ನಾಲಿಗೆಯು ತೀರ ಒಣಗುತ್ತದೆ; ಬಾಯಿಗೆ ಕೆಟ್ಟ ರುಚಿಯಿರುತ್ತದೆ; ಮತ್ತು ಬಾಯಿ ಹೊಲಸು ನಾರುತ್ತದ. ನಾಲಿಗೆಯು ಉರಿಯುತ್ತದೆ. ನಾಲಿಗೆಯು ಒಣಗುತ್ತದೆ; ಮತ್ತು ದಣಿದಂತೆ ಅನಿಸುತ್ತದೆ. ನಾಲಿಗೆಯ ದಂಡೆಗಳು ಕೆಂಪಾಗುವವು ಹಾಗು ನೋಯುವವು.

**ನೇ. ಮೂ:—** ನಾಲಿಗೆಯ ಮೇಲೆ ಸ್ವಚ್ಛವಾದ, ಜಿಗಟಾದ, ಅಥವಾ ತೆಳ್ಳಗೆ ಬೂರಸವಿರುತ್ತದೆ. ನಾಲಿಗೆಯ ದಂಡೆಯ ಮೇಲೆಯೂ ತುದಿಯ ಮೇಲೆಯೂ ಬುರುಗುಳ್ಳ ಜೊಲ್ಲಿನ ಗುಳ್ಳೆಗಳು ಕೂಡುತ್ತವೆ. ನಾಲಿಗೆಯು ಸ್ವಚ್ಛವಾಗಿಯೂ ಹಸಿಯಾಗಿಯೂ ಇದ್ದು ಜೊಲ್ಲು ಬಹಳ ಸೋರುತ್ತದೆ. ನಾಲಿಗೆಗೆ ರುಚಿಯೇ ಇರುವದಿಲ್ಲ. ನಾಲಿಗೆಯು ಸೆಟೆದು ಬಧಿರವಾಗುತ್ತದೆ. ನಾಲಿಗೆಯಮೇಲೆ ಕೂದಲು ಇದ್ದಂತೆ ಭಾಸವಾಗುತ್ತದೆ ತಡವಮಾಡಿ ಮಾತು ಕಲಿತ ಮಕ್ಕಳಿಗೆ ವಿಶೇಷ ಉಪಯೋಗವಾಗುವದು.

**ಕಾ. ಸ:—** ಹಳದೀ ಜಿಗಟು ಬೂರಸ. ನಾಲಿಗೆಯ ದಂಡೆಗಳು ಒಮ್ಮೊಮ್ಮೆ ಬೆಳ್ಳಗಾಗುವವು. ಅದಕ್ಕೆ ರುಚಿಯಿರುವದಿಲ್ಲ.

**ನೇ. ಫಾ:—** ನಾಲಿಗೆಯ ಹಿಂಭಾಗದಲ್ಲಿಯೂ ಉಪಜಿಹ್ವಿಕೆಯ ಮೇಲೆಯೂ ಕೆನೆಯಂತೆ ದಟ್ಟಾದ, ಹಸಿಯಾದ, ಅಚ್ಚ ಹಳದೀ ಕಿಟ್ಟು ಕೂಡ್ರುವದು. ಹುಳಿ ರುಚಿ. ನಾಲಿಗೆಯ ತುದಿಯ ಮೇಲೆ ಕೂದಲೂ ಹುಣ್ಣೂ ಇದ್ದಂತೆ ಭಾಸವಾಗುವದು. ದುಷ್ಟ ಗುಲ್ಮವಾಗುವದು.

**ನೇ. ಸ:—** ನಾಲಿಗೆಯ ಮೇಲೆ, ಹಸರು, ಕೆಂಪು, ಹಳದಿ ಕಿಟ್ಟು ಕೂಡುವದು. ಕಹಿ ಅಥವಾ ಹುಳಿ ರುಚಿ ಇರುತ್ತದೆ. ನಾಲಿಗೆಯು ಜಿಗಟಾಗಿರುತ್ತದೆ. ಬಾಯಿಯು ಬಹಳ ಜಿಗಟಾಗಿದ್ದು ಎಳೆಯುಳ್ಳ ಜಿಗಟು ಜೊಲ್ಲು ಸೋರುತ್ತದೆ. ನಾಲಿಗೆಯ ತುದಿಯ ಮೇಲೆ ಹುಣ್ಣಾಗುತ್ತದೆ. ನಾಲಿಗೆಯು ಕೆಂಪಗೂ ಆಗುತ್ತದೆ.

**ಕಲ್ಕೆ. ಫಾ:—** ನಾಲಿಗೆಯು ಬೆಳ್ಳಗಾಗಿ ಬಾಯುತ್ತದೆ. ಅದು ಸೆಟೆದು ಬಧಿರವಾಗುತ್ತದೆ, ( ಕಾಲೀ, ಮೂರ ), ದುಷ್ಟ ಗುಲ್ಮವಾಗುತ್ತದೆ, ನಾಲಿಗೆಯ ಮೇಲೆ ಬೊಕ್ಕೆಗಳಾಗುತ್ತವೆ.

**ಕಲ್ಕೆ. ಫ್ಲೊ:—** ದಾಹಯುಕ್ತ ಭಾವನೆಗಳು ಇಲ್ಲದಂತಾಗಿ ನಾಲಿಗೆಯು ಬಿರುಸಾಗುತ್ತದೆ. ಅದು ಸೀಳುತ್ತದೆ. ವೇದನೆಯು ಒಮ್ಮೊಮ್ಮೆ ಇರುವದು; ಒಮ್ಮೊಮ್ಮೆ ಇರುವದಿಲ್ಲ.

**ಕಲ್ಕೆ. ಸಃ—** ನಾಲಿಗೆಯ ದಾಹದಲ್ಲಿ ಕೀವು ಆಗಹತ್ತುವದು. ನಾಲಿಗೆಯ ಕೆಳಭಾಗದಲ್ಲಿ ಹಳದೀ ಬಣ್ಣದ ಜಿಗಟು ಕಿಟ್ಟು ಕೂಡುವದು. ಹುಳಿ ಅಥವಾ ಕಾರ ರುಚಿ ಇರುತ್ತದೆ. ನಾಲಿಗೆಯು ಬಾತು ಮೆತ್ತಗಾಗುವದು.

**ಮ್ಯಾ. ಫಾಃ—** ಕರುಳಿನಲ್ಲಿ ನೋಯುತ್ತದೆ. ಹೊಟ್ಟೆಯು ತುಂಬಿದಂತೆ ಜಡವೆನಿಸುತ್ತದೆ. ನಾಲಿಗೆಯು ಹಳದಿ, ಕೆಂಪು ಅಥವಾ ಜಿಗಟಾಗಿರುತ್ತದೆ.

**ಸಿಃ—** ನಾಲಿಗೆಯು ಬಿರುಸಾಗುವದು. ದಾಹಾವಸ್ಥೆಯಲ್ಲಿ ಕೀವು ಆದನಂತರ ಇದನ್ನು ಕೊಡಬೇಕು.

**ಉಪಯುಕ್ತ ಸೂಚನೆಃ—** ರೋಗಿಯ ಬೇರೆ ಲಕ್ಷಣಗಳ ಕಡೆಗೆ ಲಕ್ಷಗೊಟ್ಟು ಔಷಧ ಯೋಜನೆಯನ್ನು ಮಾಡಬೇಕು. ರೋಗಿಯ ಅನ್ನಪಾನಗಳಲ್ಲಿ ಯೋಗ್ಯವಾದ ಹೆಚ್ಚು ಕಡಿಮೆಗಳನ್ನು ಮಾಡಬೇಕು.

---

## ಜಂತುಗಳು

**Worms.** ವರ್ಮ್ಸ.

ಈ ರೋಗವು ಚಿಕ್ಕ ಮಕ್ಕಳಲ್ಲಿ ಹೆಚ್ಚಾಗಿ ಕಂಡುಬರುತ್ತದೆ. ದೊಡ್ಡ ಮನುಷ್ಯರಿಗೂ ಅದು ಆಗುವದುಂಟು; ಸಣ್ಣ ದಾರದಂತೆ, ದುಂಡಗೆ, ಉದ್ದಾಗಿ ಇಲ್ಲವೆ ಚಪ್ಪಟೆಯಾಗಿ, ಹೀಗೆ ಕರುಳಿನಲ್ಲಿ ಮೂರು ಪ್ರಕಾರದ ಜಂತುಗಳಾಗುತ್ತವೆ. ದಾರದಂಥ ಸಣ್ಣ ಕೃಮಿಗಳಿಂದ ಗುದದ್ವಾರದಲ್ಲಿ ಬಹಳ ತಿಂಡಿ ಬಿಡುತ್ತದೆ. ಹೆಂಗಸರಿಗೆ ಈ ಜಂತುಗಳಾಗಲು ಅವು ಒಮ್ಮೊಮ್ಮೆ ಅವರ ಗರ್ಭಾಶಯ ಮಾರ್ಗವನ್ನು ಸೇರುತ್ತವೆ. ಆಗ ಅಲ್ಲಿ ಬಹಳ ತಿಂಡಿ ಬಿಡುತ್ತದೆ; ಮತ್ತು ಅದರಿಂದ ಸಂಭೋಗೇಚ್ಛೆಯೂ ಬಹಳಾಗುತ್ತದೆ.

ಮೂಗು ತುರಿಸುವದು, ಅದನ್ನು ಮೇಲಿಂದಮೇಲೆ ತುರಿಸಿಕೊಳ್ಳು ವದು, ಒಮ್ಮೊಮ್ಮೆ ಗುದದ್ವಾರವೂ ಜನನೇಂದ್ರಿಯವೂ ತುರಿಸುವದು, ಕಣ್ಣುಗುಡ್ಡೆಗಳು ಅಗಲಾಗುವದು, ಸೊಟ್ಟಾಗಿ ನೋಡುವದು, ಜೊಲ್ಲು ಸೋರುವದು, ನಿದ್ದೆಯು ಸರಿಯಾಗಿ ಆಗದಿರುವದು, ನಿದ್ದೆಯಲ್ಲಿ ಒಮ್ಮೊಮ್ಮೆ ಅಂಜುವದು ಮತ್ತು ಹಲ್ಲು ತಿನ್ನುವದು, ಹಸಿವೆಯು ಒಮ್ಮೆ ಹೆಚ್ಚಾಗು ವದು ಒಮ್ಮೆ ಕಡಿಮೆಯಾಗುವದು, ಹೊಟ್ಟೆ ಕಡಿಯುವದು, ವಾಂತಿ ಯಾಗುವದು, ಹೊಟ್ಟೆ ಜಾಡಿಸುವದು, ಶೌಚದೊಳಗೆ ಆಮವು ಬೀಳುವದು ಇವು ದುಂಡು ಜಂತುಗಳ ಪ್ರಮುಖ ಲಕ್ಷಣಗಳು. ಇವಲ್ಲದೆ ಜ್ವರ ಬರುವದು, ಒರಟೆ ಬರುವದು, ಹೊಟ್ಟೆಯು ದೊಡ್ಡದಾಗುವದು, ಮುಖವು ಕಳೆಗುಂದುವದು, ಕಣ್ಣಿನ ಕೆಳಗೆ ಕಪ್ಪು ನೀಲಿ ವಲಯಗಳು ಕಾಣಿಸುವದು, ಮತ್ತು ಸ್ವಭಾವವು ಸೀಡಕಾಗುವದು, ಮುಂತಾದ ಲಕ್ಷಣಗಳೂ ಕಾಣಿಸುತ್ತವೆ. ಜಂತುಗಳಾದಾಗ ಸನ್ನಿಪಾತದಂಥ ಜ್ವರವೂ ಆದರ ಬೇರೆ ಲಕ್ಷಣಗಳೂ ಇರುತ್ತವೆ. ಇಂಥ ರೋಗಿಗಳಿಗೆ ಸನ್ನಿಪಾತ ಜ್ವರದ ಚಿಕಿತ್ಸೆಯನ್ನು ಮಾಡಲಾಗಿ ಅದರಿಂದ ಅವರು ಮರಣ ಹೊಂದಿದ ಉದಾಹರಣಗಳಿವೆ. ಆದುದರಿಂದ ಇಂಥ ಪರಿಸ್ಥಿತಿಯಲ್ಲಿ ಬಹಳ ಎಚ್ಚರಿಕೆ ಯಿಂದ ನಡೆಯಬೇಕು.

ಚಪ್ಪಟೆಯಾದ ಕೃಮಿಗಳು ದೊಡ್ಡ ಮನುಷ್ಯರ ಹೊಟ್ಟೆಯೊಳಗೆ ಆಗುತ್ತವೆ. ಊಟವಾದ ಬಳಿಕ ಹೊಟ್ಟೆ ಕಡಿಯುವದು, ಮಳಮಳಿಸು ವದು, ಹಸಿವೆ ಹೆಚ್ಚುಕಡಿಮೆಯಾಗುವದು, ಒಮ್ಮೆ ಅವರೋಧವಾದರೆ ಒಮ್ಮೆ ಅತಿಸಾರವಾಗುವದು, ಮೂಗಿಗೆ ತಿಂಡಿ ಬಿಡುವದು, ತಲೆನೋಯು ವದು, ಕಣ್ಣಿಗೆ ಕತ್ತಲೆ ಬರುವದು, ಕಿವಿಯೊಳಗೆ ಸಪ್ಪಳಾಗುವದು, ಬವಳಿ ಬರುವದು, ಮುಂತಾದ ಲಕ್ಷಣಗಳಿರುತ್ತವೆ. ಇದರಲ್ಲಿ ಅಪಸ್ಮಾರದ ಭಾವನೆಗಳೂ ಇರುತ್ತವೆ. ಜೋರಿನ ಒರಟೆ ಬರುವದು, ದುರ್ಗೀಚಬೇನೆಯ ಭಾವನೆಗಳಾಗುವದು, ಇಂಥ ಪ್ರಕಾರಗಳೂ ಜಂತಿನಿಂದ ಉಂಟಾಗುತ್ತವೆ.

**ನೇ. ಘಾ:—** ( ನಾರು, ಕೃಮಿ ಮುಂತಾದ ) ಎಲ್ಲ ಪ್ರಕಾರದ ಜಂತುಗಳಿಗೆ ಈ ಔಷಧದ ಉಪಯೋಗವಾಗುತ್ತದೆ. ಕರುಳಿನಲ್ಲಿ ನೋಯು

ತ್ತದೆ. ಆಮ್ಲಪಿತ್ತವಾಗುತ್ತದೆ. ಸಣ್ಣ ಹುಡುಗರು ತಮ್ಮ ಗುದದ್ವಾರವನ್ನೂ ಮೂಗನ್ನೂ ತುರಿಸಿಕೊಳ್ಳುತ್ತಾರೆ. ಅರ್ಧಮರ್ಧ ನಿದ್ದೆ ಹತ್ತುತ್ತದೆ. ಹಲ್ಲು ಕಟಿಯುವದು. ಈ ಔಷಧವನ್ನು ಕೆಲವು ದಿವಸಗಳ ವರೆಗೆ ಒಂದೇಸವನೆ ಕೊಡಬೇಕು.

**ಕಾ. ಮೂ:**— ಬೆಳ್ಳಗೆ ದಾರದಂತೆ ಸಣ್ಣ ಜಂತುಗಳು ಆಗುವವು. ಗುದದ್ವಾರಕ್ಕೆ ತಿಂಡಿ ಬಿಡುವದು. ನಾಲಿಗೆ ಬೆಳ್ಳಗಾಗುವದು. ನೇಟ್ರಂ ಫಾಸವನ್ನೂ ಇದನ್ನೂ ಅದಲುಬದಲು ಮಾಡಿ ಕೊಡಬೇಕು.

**ಫೇ. ಫಾ:**— ಕರಳಿನೊಳಗಿನ ಜಂತುಗಳು ಅನ್ನದ ಕೂಡ ವಾಂತಿಯಾಗಿ ಬೀಳುತ್ತವೆ. ಅಪಕ್ವ ಅನ್ನದ ವಾಂತಿಯಾಗುತ್ತದೆ. ಜ್ವರಾಂಶವಿರುತ್ತದೆ. ದಾರದಂಥ ಜಂತುಗಳಾಗುತ್ತವೆ. ಈ ಔಷಧವನ್ನು ಬೇರೆ ಔಷಧಗಳ ಸಂಗಡ ಕೊಡಬೇಕು.

**ಉಪಯುಕ್ತ ಸೂಚನೆ:**— ರೇಚಕ ಔಷಧದಿಂದ ಜಂತುಗಳು ಹೊರಬೀಳುವವು. ಆದರಂತೆ ಜೀವನ ರಸಾಯನ ಔಷಧದಿಂದ ಅವು ಹೊರಬೀಳಲಾರವು. ಅವು ಹಾಗೆ ಹೊರಬೀಳುವ ಅವಶ್ಯಕತೆಯೂ ಇಲ್ಲ. ಅವು ಒಳಗಿಂದೊಳಗೆ ಕರಗಿ ನಾಶಹೊಂದುವವು. ೩× ಶಕ್ತಿಯ ನೇಟ್ರಂ ಫಾಸವು ಜಂತು ವಿಕಾರದ ಮೇಲಿನ ಪ್ರಮುಖ ಔಷಧವು, ಅದನ್ನು ಬಹಳ ದಿವಸಗಳ ವರೆಗೆ ಬಿಟ್ಟೂಬಿಡದೆ ದಿನಾಲು ಮೂರು ನಾಲ್ಕು ಸಾರೆ ಕೊಡಬೇಕು. ಹೊಟ್ಟೆಯೊಳಗೆ ಕೊಡುವ ಔಷಧವನ್ನು ಬಿಸಿನೀರಿನಲ್ಲಿ ಹಾಕಿ ( ಹತ್ತು ಔಂಸ ನೀರಿನಲ್ಲಿ ಅರ್ಧ ದ್ರಾಮ ಔಷಧವನ್ನು ಹಾಕಿ ) ಅದರ ಬಸ್ತಿಯನ್ನು ಕೊಡಬೇಕು. ಬೆಂಡು ಬತ್ತಾಸಿನಂಥ ಸಿಹಿ ಪದಾರ್ಥಗಳನ್ನು ಹುಡುಗರಿಗೆ ತಿನ್ನಲಿಕ್ಕೆ ಕೊಡಬಾರದು. ಗುದದ್ವಾರ, ಗರ್ಭಾಶಯ ಮಾರ್ಗ ಇವುಗಳನ್ನು ಸ್ವಚ್ಛವಾಗಿ ಇಡುವದರಿಂದಲೂ ಹಾಗು ಔಷಧ ಹಾಕಿದ ನೀರಿನಿಂದ ಬಸ್ತಿಯನ್ನು ಕೊಡುವದರಿಂದಲೂ ಕೃಮಿಗಳು ನಾಶವಾಗುತ್ತವೆ.

---

# ಜ್ವರ

**Fever.** ಫೀವರ.

ಮೊದಲು ಚಳಿಯಾಗುವದು, ಅಥವಾ ಮೈಮೇಲೆ ಮುಳ್ಳು ಬರುವದು ಬಳಿಕ ಜ್ವರ ತುಂಬುವದು, ನಾಡಿಯು ಬೇಗನೆ ಹಾರುವದು, ನೀರಡಿಕೆ, ಅಸ್ವಸ್ಥತೆ, ಸುಸ್ತಿ, ಗ್ಲಾನಿ ಮುಂತಾದ ಭಾವನೆಗಳು ಎಲ್ಲತರದ ಜ್ವರಗಳಲ್ಲಿ ಸಾಮಾನ್ಯವಾಗಿ ಇರುತ್ತವೆ. ಇವಲ್ಲದೆ ಬೇರೆ ಬೇರೆ ಪ್ರಕಾರದ ಜ್ವರಕ್ಕೆ ಅನುಸಾರವಾಗಿ ( ಸನ್ನಿಪಾತ ಜ್ವರ, ನ್ಯೂಮೋನಿಯಾ ಮುಂತಾದವು ) ಬೇರೆ ಬೇರೆ ಪ್ರಕಾರದ ವಿಶಿಷ್ಟ ಭಾವನೆಗಳು ಕಂಡುಬರುತ್ತವೆ. ಇಂಥ ವಿಶಿಷ್ಟ ಜ್ವರದ ವಿಚಾರವನ್ನು ಇದೇ ಪುಸ್ತಕದಲ್ಲಿ ಆಯಾ ಸದರುಗಳ ಕೆಳಗೆ ಬೇರೆ ಕಡೆಗೆ ಮಾಡಿದ್ದೇವೆ. ಮೇಲೆಹೇಳಿದ ಸರ್ವಸಾಧಾರಣ ಭಾವನೆಗಳಿಗೆ ಅನುಸರಿಸಿ ಸ್ವಲ್ಪ ವಿವೇಚನವನ್ನು ಕೆಳಗೆ ಮಾಡುತ್ತೇವೆ. ನಿದಾನ ಪ್ರಕರಣ ದಲ್ಲಿಯ ಜ್ವರವೆಂಬ ಸದರು, ಮತ್ತು ಫೇರಂ ಫಾಸದ ಗುಣಧರ್ಮವೆಂಬ ಸದರಿನ ಕೆಳಗೆ ಜೀವನ ರಸಾಯನ ಶಾಸ್ತ್ರದ ದೃಷ್ಟಿಯಿಂದ ಜ್ವರವೆಂಬ ಭಾವನೆಯು ಹೇಗೆ ಉಂಟಾಗುತ್ತದೆಂಬ ಬಗ್ಗೆ ಮಾಡಿರುವ ವಿವೇಚನವನ್ನು ನೋಡಿರಿ.

**ಫೇ. ಫಾ:**— ಎಲ್ಲ ಪ್ರಕಾರದ ಜ್ವರದಲ್ಲಿ ಇದು ಮುಖ್ಯ ಔಷಧವು. ಜ್ವರವು ಹೆಚ್ಚಾಗುವದು, ಮೈಯಲ್ಲಿ ಕಾವು ಇರುವದು, ನಾಡಿಯು ಬೇಗನೆ ಹಾರುವದು, ಚಳಿಯಾಗುವದು, ಈ ಲಕ್ಷಣಗಳಿರುವಾಗ— ಯಾವದೇ ತರದ ಜ್ವರವು ಯಾವದೇ ಅವಸ್ಥೆಯಲ್ಲಿ ಇದ್ದರೂ— ಈ ಔಷಧ ವನ್ನು ಅವಶ್ಯವಾಗಿ ಕೊಡಬೇಕು. ಚಳಿಜ್ವರದಲ್ಲಿ ದಿನಾಲು ಮಧ್ಯಾಹ್ನದ ಒಂದು ಗಂಟೆಗೆ ಚಳಿಯಾಗಿ ಜ್ವರವು ಬರುತ್ತದೆ. ಅಂಗೈ, ಅಂಗಾಲು, ಎದೆ, ಮೋರೆ ಮುಂತಾದವುಗಳು ಬಿಸಿಯಾಗಿರುತ್ತವೆ.

**ಕಾ. ಮೂ:**— ಫೇರಂ ಫಾಸದ ನಂತರ ಇದನ್ನು ಕೊಡಬೇಕು. ನಾಲಿಗೆ ಬೆಳ್ಳಗಾಗುವದು, ಅದರ ಮೇಲೆ ದಟ್ಟಗೆ ಬೂರಸು ಕೂಡುವದು. ಮಲಾವರೋಧ. ಫೇರಂ ಫಾಸದ ಜತೆಗೆ ಅದಲುಬದಲು ಮಾಡಿ ಕೊಟ್ಟರೆ ಬೆವರು ಬಿಡುತ್ತದೆ. ಚಳಿಯಾಗಿ ಜ್ವರ ಬರುತ್ತದೆ. ಸ್ವಲ್ಪ ತಂಪು ಹವೆ

ತಾಕಿದರೂ ಚಳಿಯಾಗುತ್ತದೆ. ಬೆಚ್ಚಗಿನ ಸ್ಥಳದಲ್ಲಿಯೂ ಅಗ್ಗಿಷ್ಟಿಗೆಯ ಹತ್ತಿರ ಕುಳಿತುಕೊಂಡರೂ ಚಳಿಯು ತಪ್ಪುವದಿಲ್ಲ. ಹೊದ್ದುಕೊಂಡು ಮಲಗಿದರೆ ನೆಟ್ಟಗೆನಿಸುತ್ತದೆ.

**ಕಾ. ಸ:—** ಯಾವ ತರದ ಜ್ವರವಿದ್ದರೂ, ಸಾಯಂಕಾಲದಲ್ಲಿ ಅದು ಹೆಚ್ಚಾಗುತ್ತಿದ್ದರೆ, ಈ ಔಷಧವನ್ನು ಅವಶ್ಯವಾಗಿ ಕೊಡಬೇಕು. ಬೆವರು ಬಿಡುವದಕ್ಕೆಂದು ಫೇರಂ ಫಾಸವನ್ನೂ ಇದನ್ನೂ ಅದಲುಬದಲು ಮಾಡಿ ಕೊಡಬೇಕು. ತೊಗಲು ಬಿಸಿಯಾಗಿಯೂ, ಹುರಬರಕಾಗಿಯೂ, ಒಣಗಿದಂತೆಯೂ ಇರುವದು. ಪೂಯದುಷ್ಟ ರಕ್ತಜನ್ಯ ಜ್ವರದಲ್ಲಿ ಇದರ ಉಪಯೋಗವಾಗುವದು.

**ಕಾ. ಫಾ:—** ಮಾನಸಿಕ ತ್ರಾಸದಿಂದ ಜ್ವರ ಬರುವದು. ಜ್ವರ ಬಹಳ ಬರುವದು. ನಾಡಿಯು ಅನಿಯಮಿತವಾಗಿ ಬೇಗನೆ ಹಾರುತ್ತದೆ. ದಣಿದಂತೆ ಅನಿಸುತ್ತದೆ. ಇದರ ಸಂಗಡ ಫೇರಂ ಫಾಸವನ್ನೂ ಕೊಡಬೇಕು. ಸನ್ನಿಪಾತ ಜ್ವರವಿದ್ದರೆ ಬಾಯಿ ಒಣಗುತ್ತದೆ. ಹಲ್ಲಿನ ಮೇಲೆ ಕಿಟ್ಟು ಕೂಡುತ್ತದೆ. ತುಟಿಯು ತೊಗಲು ಸುಲಿಯುತ್ತದೆ. ವಾತವೂ ಬಡಬಡಿಸುವದೂ ಇರುತ್ತವೆ.

**ನೇ. ಮೂ:—** ಮೂಗಿನಿಂದಲೂ ಕಣ್ಣಿನಿಂದಲೂ ನೀರು ಸೋರುತ್ತಿದ್ದರೆ ಅಥವಾ ಶ್ಲೇಷ್ಮಲ ತ್ವಚೆಯು ಬಹಳ ಒಣಗಿದ್ದರೆ. ಫೇರಂ ಫಾಸವನ್ನೂ ಇದನ್ನೂ ಅದಲುಬದಲು ಮಾಡಿ ಕೊಡಬೇಕು.

**ಕಲ್ಕೆ. ಫಾ:—** ಜ್ವರವು ಬಂದಾಗ ನಡುನಡುವೆ ಉಪಔಷಧವೆಂದು ಇದರ ಉಪಯೋಗ ಮಾಡಬೇಕು. ಎಲ್ಲ ತರದ ಜ್ವರವು ನಿಂತ ಬಳಿಕ ಪೌಷ್ಟಿಕವೆಂದು ಇದನ್ನು ಕೊಡಬೇಕು.

**ಉಪಯುಕ್ತ ಸೂಚನೆ:—** ಜ್ವರವು ಆರಂಭವಾದ ಕೂಡಲೆ ಫೇರಂ ಫಾಸವನ್ನು ಒಂದೇಸವನೆ ಕೊಡುತ್ತಿರಬೇಕು. ಆದಷ್ಟು ಬೇಗನೆ ಬೆವರು ಬರುವಂತೆ ಮಾಡುವದು ಒಳಿತು. ಅದಕ್ಕಾಗಿ ಫೇರಂ ಫಾಸವನ್ನೂ ಕಾಲೀ ಸಲ್ಫವನ್ನೂ ಅದಲುಬದಲು ಮಾಡಿ ಕೊಡಬೇಕು. ಸಾಸಿವೆ ಹಾಕಿದ ಬಿಸಿನೀರಿನಲ್ಲಿಯಾಗಲೀ ಬರೇ ಬಿಸಿನೀರಿನಲ್ಲಿಯಾಗಲೀ ಕಾಲು ಇಟ್ಟು

# ಜ್ವರ

**Fever.** ಫೀವರ.

ಮೊದಲು ಚಳಿಯಾಗುವದು, ಅಥವಾ ಮೈಮೇಲೆ ಮುಳ್ಳು ಬರುವದು. ಬಳಿಕ ಜ್ವರ ತುಂಬುವದು, ನಾಡಿಯು ಬೇಗನೆ ಹಾರುವದು, ನೀರಡಿಕೆ, ಅಸ್ವಸ್ಥತೆ, ಸುಸ್ತಿ, ಗ್ಲಾನಿ ಮುಂತಾದ ಭಾವನೆಗಳು ಎಲ್ಲತರದ ಜ್ವರಗಳಲ್ಲಿ ಸಾಮಾನ್ಯವಾಗಿ ಇರುತ್ತವೆ. ಇವಲ್ಲದೆ ಬೇರೆ ಬೇರೆ ಪ್ರಕಾರದ ಜ್ವರಕ್ಕೆ ಅನುಸಾರವಾಗಿ ( ಸನ್ನಿಪಾತ ಜ್ವರ, ನ್ಯೂಮೋನಿಯಾ ಮುಂತಾದವು ) ಬೇರೆ ಬೇರೆ ಪ್ರಕಾರದ ವಿಶಿಷ್ಟ ಭಾವನೆಗಳು ಕಂಡುಬರುತ್ತವೆ. ಇಂಥ ವಿಶಿಷ್ಟ ಜ್ವರದ ವಿಚಾರವನ್ನು ಇದೇ ಪುಸ್ತಕದಲ್ಲಿ ಆಯಾ ಸದರುಗಳ ಕೆಳಗೆ ಬೇರೆ ಕಡೆಗೆ ಮಾಡಿದ್ದೇವೆ. ಮೇಲೆಹೇಳಿದ ಸರ್ವಸಾಧಾರಣ ಭಾವನೆಗಳಿಗೆ ಅನುಸರಿಸಿ ಸ್ವಲ್ಪ ವಿವೇಚನವನ್ನು ಕೆಳಗೆ ಮಾಡುತ್ತೇವೆ. ನಿದಾನ ಪ್ರಕರಣದಲ್ಲಿಯ ಜ್ವರವೆಂಬ ಸದರು, ಮತ್ತು ಫೇರಂ ಫಾಸದ ಗುಣಧರ್ಮವೆಂಬ ಸದರಿನ ಕೆಳಗೆ ಜೀವನ ರಸಾಯನ ಶಾಸ್ತ್ರದ ದೃಷ್ಟಿಯಿಂದ ಜ್ವರವೆಂಬ ಭಾವನೆಯು ಹೇಗೆ ಉಂಟಾಗುತ್ತದೆಂಬ ಬಗ್ಗೆ ಮಾಡಿರುವ ವಿವೇಚನವನ್ನು ನೋಡಿರಿ.

**ಫೇ. ಫಾ:**— ಎಲ್ಲ ಪ್ರಕಾರದ ಜ್ವರದಲ್ಲಿ ಇದು ಮುಖ್ಯ ಔಷಧವು. ಜ್ವರವು ಹೆಚ್ಚಾಗುವದು, ಮೈಯಲ್ಲಿ ಕಾವು ಇರುವದು, ನಾಡಿಯು ಬೇಗನೆ ಹಾರುವದು, ಚಳಿಯಾಗುವದು, ಈ ಲಕ್ಷಣಗಳಿರುವಾಗ— ಯಾವದೇ ತರದ ಜ್ವರವು ಯಾವದೇ ಅವಸ್ಥೆಯಲ್ಲಿ ಇದ್ದರೂ— ಈ ಔಷಧವನ್ನು ಅವಶ್ಯವಾಗಿ ಕೊಡಬೇಕು. ಚಳಿಜ್ವರದಲ್ಲಿ ದಿನಾಲು ಮಧ್ಯಾಹ್ನದ ಒಂದು ಗಂಟೆಗೆ ಚಳಿಯಾಗಿ ಜ್ವರವು ಬರುತ್ತದೆ. ಅಂಗೈ, ಅಂಗಾಲು, ಎದೆ, ಮೋರೆ ಮುಂತಾದವುಗಳು ಬಿಸಿಯಾಗಿರುತ್ತವೆ.

**ಕಾ. ಮು:**— ಫೇರಂ ಫಾಸದ ನಂತರ ಇದನ್ನು ಕೊಡಬೇಕು. ನಾಲಿಗೆ ಬೆಳ್ಳಗಾಗುವದು, ಅದರ ಮೇಲೆ ದಟ್ಟಗೆ ಬೂರಸು ಕೂಡುವದು. ಮಲಾವರೋಧ. ಫೇರಂ ಫಾಸದ ಜತೆಗೆ ಅದಲುಬದಲು ಮಾಡಿ ಕೊಟ್ಟರೆ ಬೆವರು ಬಿಡುತ್ತದೆ. ಚಳಿಯಾಗಿ ಜ್ವರ ಬರುತ್ತದೆ. ಸ್ವಲ್ಪ ತಂಪು ಹವೆ

ತಾಕಿದರೂ ಚಳಿಯಾಗುತ್ತದೆ. ಬೆಚ್ಚಗಿನ ಸ್ಥಳದಲ್ಲಿಯೂ ಅಗ್ಗಿಷ್ಟಿಗೆಯ ಹತ್ತಿರ ಕುಳಿತುಕೊಂಡರೂ ಚಳಿಯು ತಪ್ಪುವದಿಲ್ಲ. ಹೊದ್ದುಕೊಂಡು ಮಲಗಿದರೆ ನೆಟ್ಟಗೆನಿಸುತ್ತದೆ.

**ಕಾ. ಸ:—** ಯಾವ ತರದ ಜ್ವರವಿದ್ದರೂ, ಸಾಯಂಕಾಲದಲ್ಲಿ ಅದು ಹೆಚ್ಚಾಗುತ್ತಿದ್ದರೆ, ಈ ಔಷಧವನ್ನು ಅವಶ್ಯವಾಗಿ ಕೊಡಬೇಕು. ಬೆವರು ಬಿಡುವದಕ್ಕೆಂದು ಫೇರಂ ಫಾಸವನ್ನೂ ಇದನ್ನೂ ಅದಲುಬದಲು ಮಾಡಿ ಕೊಡಬೇಕು. ತೊಗಲು ಬಿಸಿಯಾಗಿಯೂ, ಹುರಬರಕಾಗಿಯೂ, ಒಣಗಿದಂತೆಯೂ ಇರುವದು. ಪೂಯದುಷ್ಟ ರಕ್ತಜನ್ಯ ಜ್ವರದಲ್ಲಿ ಇದರ ಉಪಯೋಗವಾಗುವದು.

**ಕಾ. ಫಾ:—** ಮಾನಸಿಕ ತ್ರಾಸದಿಂದ ಜ್ವರ ಬರುವದು. ಜ್ವರ ಬಹಳ ಬರುವದು. ನಾಡಿಯು ಅನಿಯಮಿತವಾಗಿ ಬೇಗನೆ ಹಾರುತ್ತದೆ. ದಣಿದಂತೆ ಅನಿಸುತ್ತದೆ. ಇದರ ಸಂಗಡ ಫೇರಂ ಫಾಸವನ್ನೂ ಕೊಡಬೇಕು. ಸನ್ನಿಪಾತ ಜ್ವರವಿದ್ದರೆ ಬಾಯಿ ಒಣಗುತ್ತದೆ. ಹಲ್ಲಿನ ಮೇಲೆ ಕಿಟ್ಟು ಕೂಡುತ್ತದೆ. ತುಟಿಯು ತೊಗಲು ಸುಲಿಯುತ್ತದೆ. ವಾತವೂ ಬಡಬಡಿಸುವದೂ ಇರುತ್ತವೆ.

**ನೇ. ಮ್ಯೂ:—** ಮೂಗಿನಿಂದಲೂ ಕಣ್ಣಿನಿಂದಲೂ ನೀರು ಸೋರುತ್ತಿದ್ದರೆ ಅಥವಾ ಶ್ಲೇಷ್ಮಲ ತ್ವಚೆಯು ಬಹಳ ಒಣಗಿದ್ದರೆ. ಫೇರಂ ಫಾಸವನ್ನೂ ಇದನ್ನೂ ಅದಲುಬದಲು ಮಾಡಿ ಕೊಡಬೇಕು.

**ಕಲ್ಕೆ. ಫಾ:—** ಜ್ವರವು ಬಂದಾಗ ನಡುನಡುವೆ ಉಪಔಷಧವೆಂದು ಇದರ ಉಪಯೋಗ ಮಾಡಬೇಕು. ಎಲ್ಲ ತರದ ಜ್ವರವು ನಿಂತ ಬಳಿಕ ಪೌಷ್ಟಿಕವೆಂದು ಇದನ್ನು ಕೊಡಬೇಕು.

**ಉಪಯುಕ್ತ ಸೂಚನೆ:—** ಜ್ವರವು ಆರಂಭವಾದ ಕೂಡಲೆ ಫೇರಂ ಫಾಸವನ್ನು ಒಂದೇಸವನೆ ಕೊಡುತ್ತಿರಬೇಕು. ಆದಷ್ಟು ಬೇಗನೆ ಬೆವರು ಬರುವಂತೆ ಮಾಡುವದು ಒಳಿತು. ಅದಕ್ಕಾಗಿ ಫೇರಂ ಫಾಸವನ್ನೂ ಕಾಲೀ ಸಲ್ಫವನ್ನೂ ಅದಲುಬದಲು ಮಾಡಿ ಕೊಡಬೇಕು. ಸಾಸಿವೆ ಹಾಕಿದ ಬಿಸಿನೀರಿನಲ್ಲಿಯಾಗಲೀ ಬರೇ ಬಿಸಿನೀರಿನಲ್ಲಿಯಾಗಲೀ ಕಾಲು ಇಟ್ಟು

ಕುಳಿತುಕೊಂಡರೆ ಬೆವರು ಬಿಡಲಿಕ್ಕೆ ಸಹಾಯವಾಗುತ್ತದೆ. ಬೆವರು ಬಂದ ನಂತರ ಗಾಳಿ ಹತ್ತಗೊಡಬಾರದು. ರೋಗಿಗೆ ಸ್ವಸ್ಥವಾಗಿಯೂ ಶಾಂತ ವಾಗಿಯೂ ಮಲಗಗೊಡಬೇಕು. ಆತನ ಕೋಣೆಯೊಳಗೆ ಸಾಕಷ್ಟು ಹವೆಯೂ ಬಿಸಿಲೂ ಬರುವಂತೆ ಮಾಡಬೇಕು. ಆದರೆ ರೋಗಿಗೆ ಗಾಳಿಗೆ ಮೈಯೊಡ್ಡಿ ಮಲಗಗೊಡಬಾರದು. ಬಾಯಾರಿಕೆಯನ್ನು ಹೋಗಲಾಡಿಸ ಲಿಕ್ಕೆಂದು ಸಾದಾ ನೀರು ಕುಡಿಯಲಿಕ್ಕೆ ಕೊಡಬೇಕು. ಸೋಡಾವಾಟರ ಮತ್ತು ಬೇರೆ ಉತ್ತೇಜಕವಾದ ಪೇಯಗಳನ್ನು ಎಂದಿಗೂ ಕೊಡಬಾರದು. ಹಸಿವೆಯು ಬಹಳ ಮಾಡಿ ಇರುವದೇ ಇಲ್ಲ. ಹೊಟ್ಟೆಗೆ ವಿಶ್ರಾಂತಿಯು ಅವಶ್ಯಕತೆ ಇರುತ್ತದೆ. ಆದುದರಿಂದ ತಿನ್ನಲಿಕ್ಕೆ ಜಡವಾದ ಹಾಗು ಗಟ್ಟಿ ಯಾದ ಆಹಾರವನ್ನು ಕೊಡಬಾರದು. ಅನ್ನದ ಗಂಜಿ, ಪಾವಿನ ನೀರು, ಸಾವೆಯ ಅರಳಿನ ನೀರು, ತವಕೀಲ ಮುಂತಾದ ತೆಳ್ಳಗಿನ ಹಗುರಾದ ಆಹಾರ ಕೊಡಬೇಕು. ಮಾಂಸ ತಿನ್ನುವದನ್ನು ಬಿಡಬೇಕು. ಆರೋಗ್ಯ ಸ್ಥಾಪನಾವಸ್ಥೆಯಲ್ಲಿ ಆಹಾರದ ಬಗ್ಗೆ ಬಹಳ ಎಚ್ಚರಿಕೆಯಿಂದ ನಡೆಯ ಬೇಕು. ಇಲ್ಲದೆ ಹೋದರೆ ಜ್ವರವು ಮರಕಳಿಸಿ ಬರುವ ಸಂಭವವುಂಟು.

---

## ಕೋಡಗಕೆಮ್ಮು

**Whooping Cough.** **ಹೂಪಿಂಗ್ ಕಫ್.**

ಕೋಡಗಕೆಮ್ಮು ಸಾಂಸರ್ಗಿಕ ರೋಗವು. ಅದು ಬಹುತರವಾಗಿ ೧೦ ವರ್ಷ ವಯಸ್ಸಿನ ಒಳಗಿನ ಹುಡುಗರಿಗೇ ಬರುತ್ತದೆ. ದೊಡ್ಡವರಿಗೂ ಒಮ್ಮೊಮ್ಮೆ ಬರುವದುಂಟು. ಮೊದಲು ನೆಗಡಿ ಬಂದಂತಾಗಿ ಚಳಿ, ಜ್ವರ, ಮತ್ತು ತ್ರಾಸದಾಯಕವಾದ ಒಣಕೆಮ್ಮು ಬರುತ್ತದೆ. ಬರಬರುತ್ತ ಕೆಮ್ಮುವಾಗ ಉಬ್ಬಸದ ಮೇಲೆ ಉಬ್ಬಸವು ಬರುತ್ತದೆ. ಹದಿನೈದು ದಿವಸಗಳಾದ ಬಳಿಕ ಜೋರಿನಿಂದ ಕೆಮ್ಮೂ ಉಬ್ಬಸವೂ ಬರುತ್ತವೆ. ಮೋರೆ ಕೆಂಪಾಗುತ್ತದೆ. ಕುತ್ತಿಗೆಯ ಸಿರಗಳು ಉಬ್ಬುತ್ತವೆ. ಕಣ್ಣು ಬೆಳ್ಳಗಾಗು ತ್ತವೆ. ಕೆಮ್ಮಿ ಕೆಮ್ಮಿ ಕೂಸು ಸಾಯುವಂತೆ ಅನಿಸುತ್ತದೆ. ಕೆಮ್ಮುವದು ಮುಗಿದ ಬಳಿಕ ಸ್ವಲ್ಪ ಎಳೆಯುಳ್ಳ ಜಿಗಟು ಕಫವು ಬೀಳುತ್ತದೆ; ಹಾಗು

ಒಂದು ತರದ ದನಿಯಾಗುತ್ತದೆ. ಕೆಮ್ಮು ರಾತ್ರಿಯಲ್ಲಿ ಹೆಚ್ಚಾಗುತ್ತದೆ. ರಾತ್ರಿಯಲ್ಲಿ ಕೆಮ್ಮುವದು ಕಡಿಮೆಯಾದರೆ ರೋಗಿಗೆ ಗುಣವು ಬರಹತ್ತಿತೆಂದು ತಿಳಿಯುಬೇಕು. ಈ ಬೇನೆಯ ಅವಧಿಯು ಸಾಧಾರಣವಾಗಿ ಎರಡು ಮೂರು ತಿಂಗಳ ವರೆಗೆ ಇರುತ್ತದೆ. ಮೈಲಿಯನ್ನು ಚುಚ್ಚಿದ ಬಳಿಕ ಈ ರೋಗವು ಉಂಟಾಗುತ್ತದೆಂದು ಕೆಲವು ಜನರ ತಿಳುವಳಿಕೆಯಿದೆ. ಇದು ಒಮ್ಮೆ ಬಂದು ಹೋದನಂತರ ಮತ್ತೊಮ್ಮೆ ಬರುವದಿಲ್ಲ.

ಶ್ವಾಸನಲಿಕೆಯ ಸುತ್ತುಮುತ್ತಲಿನ ಸಂಯೋಜಕ ಧಾತುವಿನಲ್ಲಿ ಸೇಂದ್ರಿಯ ಪದಾರ್ಥವೂ ಫಿಬ್ರಿನವೂ ತುಂಬಿಕೊಳ್ಳುವದರಿಂದ ಈ ಬೇನೆಯು ಉತ್ಪನ್ನವಾಗುತ್ತದೆ. ಇದು ಕಾಲೀ ಮೂರವೆಂಬ ಕ್ಷಾರದ ಕೊರತೆಯ ಲಕ್ಷಣವು. ಮುಂದೆ ಮುಂದೆ ಮ್ಯಾ. ಫಾ. ಮತ್ತು ಕಲ್ಕೆ. ಫಾ. ಈ ಕ್ಷಾರಗಳೂ ಕಡಿಮೆಯಾಗುತ್ತವೆ. ಅದರಿಂದ ಸ್ನಾಯು ಧಾತುಗಳ ಅಕುಂಚನವಾಗಿ ಉಬ್ಬಸದ ಕೆಮ್ಮು ಆರಂಭವಾಗುತ್ತದೆಯೆಂದು ಜೀವನ ರಸಾಯನ ಶಾಸ್ತ್ರಜ್ಞರ ಅಭಿಪ್ರಾಯವಿದೆ.

**ಕಾ. ಮೂ:—** ಇದು ಮುಖ್ಯ ಔಷಧವು. ನಾಲಿಗೆಯು ಬೆಳ್ಳಗಾಗುವದು. ಬಿಳೀ ಕಫವು ದಟ್ಟಾಗಿ ಬೀಳುವದು. ಕೆಮ್ಮುವಾಗ ಮೇಲಿಂದಮೇಲೆ ಸ್ವಲ್ಪ ಉಬ್ಬಸವು ಬರುವದು.

**ಮ್ಯಾ. ಫಾ:—** ಇದಾದರೂ ಮುಖ್ಯ ಔಷಧವೇ. ರೋಗಿಯು ಬಹು ದಿವಸ ಕೆಮ್ಮಿ ಕೆಮ್ಮಿ ದಣಿದಿರುವನು. ಕೆಮ್ಮಿನ ತೆರೆಯ ಮೇಲೆ ತೆರೆ ಬರುತ್ತಿದ್ದಾಗ ಇದು ಒಳ್ಳೆಯ ಔಷಧವು. ಕಾಲೀ ಮೂರವನ್ನೂ ಇದನ್ನೂ ಅದಲುಬದಲು ಮಾಡಿ ಕೊಡಬೇಕು. ಕೆಮ್ಮಿನ ತೆರೆಗಳು ಜೋರಿನಿಂದ ಬರುತ್ತಿದ್ದರೆ ಈ ಔಷಧವನ್ನು ಬಹಳ ದಿನಗಳ ವರೆಗೆ ಬಿಟ್ಟೂ ಬಿಡದೆ ಬಿಸಿನೀರಿನಲ್ಲಿ ಕೊಡಬೇಕು.

**ಕಲ್ಕೆ. ಫಾ:—** ರೋಗವು ಮೈಯುಂಡಿರುವದು. ಮ್ಯಾ. ಫಾ. ದಿಂದ ಗುಣವು ಬರದಿದ್ದರೆ ಇದನ್ನು ಕೊಡಬೇಕು. ಲೋಳಸರದೊಳಗಿನ ಜಿಗಟಿನಂತೆ ಕಫವು ಬೀಳುತ್ತದೆ. ಪಂಡುರೋಗವಿದ್ದ ಹುಡುಗರಿಗೂ

ಎಲುವಿನ ಬೆಳಿಗೆಯು ಆಗದಿರುವ ಹುಡುಗರಿಗೂ ಆಗುವ ಕೋಡಗಕೆಮ್ಮಿಗೆ ಈ ಔಷಧವನ್ನು ಕೊಡಬೇಕು.

**ನೇ. ಮೂ:**— ತೆಳ್ಳಗೆ, ಬುರುಗುಳ್ಳ, ಎಳೆಯುಳ್ಳ, ಸ್ವಚ್ಛವಾದ ಕಫವು ಬೀಳುವದು. ಕಣ್ಣಿನಿಂದ ಒಂದೇಸವನೆ ನೀರು ಸೋರುತ್ತದೆ.

**ಕಾ. ಸ:**— ಕಫವು ತೆಳ್ಳಗೆ ಹಳದಿ ಇರುತ್ತದೆ. ಜಿಗಟು ಎಳೆ ಬರುತ್ತದೆ. ಕಫವು ಬೀಳುವದಿಲ್ಲ. ಅದು ತಿರುಗಿ ಹೋಗುವದರಿಂದ ನುಂಗ ಬೇಕಾಗುತ್ತದೆ.

**ಫೇ. ಫಾ:**— ಕೆಮ್ಮುವಾಗ ವಾಂತಿಯಾಗುವದು. ಕೆಮ್ಮಿನ ಸಂಗಡ ರಕ್ತವು ಬೀಳುತ್ತದೆ. ಜ್ವರ ಮೊದಲಾದ ವಿಕಾರಗಳು ಇರುತ್ತವೆ. ಬೇರ ಔಷಧಗಳ ಸಂಗಡ ಇದನ್ನು ಅದಲುಬದಲು ಮಾಡಿ ಕೊಡಬೇಕು.

**ಕಾ. ಫಾ:**— ಅಶಕ್ತತೆ ಹಾಗು ದುಣುವಿಕೆ ಇವುಗಳ ಮೇಲೆ. ತ್ರಾಸಿಕ ಸ್ವಭಾವದ ಅಳದಕ್ಕಿ ಹುಡುಗರಿಗೆ. ಬೇರೆ ಔಷಧಗಳ ಸಂಗಡ ಇದನ್ನೂ ನಡುನಡುವೆ ಕೊಡಬೇಕು.

**ಉಪಯುಕ್ತ ಸೂಚನೆ:**— ಮೊದಮೊದಲು ಕೋಡಗಕೆಮ್ಮಿನ ಭಾವನೆಗಳು ಚಳಿಯಾಗಿ ಬರುವ ಕೆಮ್ಮಿನ ಭಾವನೆಗಳಂತೆಯೇ ಇರುತ್ತವೆ. ಎಂಟು ಹತ್ತು ದಿವಸಗಳಾದ ಬಳಿಕ ಅದರ ನಿಜಸ್ವರೂಪವು ಕಂಡುಬರುತ್ತದೆ; ಮತ್ತು ಉಸುರು ಕಟ್ಟುವಂಥ ಕೋಡಗಕೆಮ್ಮಿಗೆ ಪ್ರಾರಂಭವಾಗುತ್ತದೆ. ಕಾಲೀಮೂರ ಹಾಗು ಮ್ಯಾಗ್ನೆಸಿಯಾ ಫಾಸ ಇವೆರಡು ಈ ರೋಗದ ಮೇಲಿನ ಪ್ರಮುಖ ಔಷಧಗಳು. ಅವುಗಳನ್ನು ಬಹಳ ದಿವಸಗಳ ವರೆಗೆ ತಪ್ಪದೆ ತೆಗೆದುಕೊಳ್ಳಬೇಕು. ಕೋಡಗಕೆಮ್ಮು ಬೇಗನೆ ನೆಟ್ಟಗಾಗುವ ರೋಗವಲ್ಲ. ಅದರ ಅವಧಿಯು ಮೂರು ಮೂರು ತಿಂಗಳ ವರೆಗೆ ಇರುತ್ತದೆ. ಆದುದರಿಂದ ಔಷಧವನ್ನು ಬಹಳ ದಿವಸಗಳ ವರೆಗೆ ತೆಗೆದುಕೊಳ್ಳಬೇಕಾಗುತ್ತದೆ. ಕೆಮ್ಮುವಾಗ ಉಬ್ಬಸವು ಬರಹತ್ತಿದರೆ ಮ್ಯಾ. ಫಾ. ವನ್ನು ಕೊಡಬೇಕು. ಈ ಔಷಧದಿಂದ ನೂರರಲ್ಲಿ ತೊಂಬತ್ತು ಜನ ರೋಗಿಗಳಿಗೆ ಗುಣವು ಬರುತ್ತದೆ. ಇದನ್ನು ನಾಲ್ಕು ತಾಸಿಗೊಮ್ಮೆ ಬಿಸಿನೀರಲ್ಲಿ ಕೊಡಬೇಕು. ಕೆಮ್ಮಿನ ಜೋರು ಬಹಳ ಇದ್ದರೆ ಮ್ಯಾ. ಫಾ.

ವನ್ನು ಬಿಸಿನೀರಿನಲ್ಲಿ ಮೇಲಿಂದ ಮೇಲೆ ಕೊಡಬೇಕು. ಕಲ್ಕಿ. ಫಾಸ ವನ್ನಾದರೂ ಮುಖ್ಯವಾಗಿ ಅಶಕ್ತತನದ ಮೇಲೆ ನಡುನಡುವೆ ಕೊಟ್ಟರೆ ಅದರಿಂದ ಬಹಳ ಉಪಯೋಗವಾಗುತ್ತದೆ. ಕಫದ ಪ್ರಕಾರವನ್ನೂ ಬೇರೆ ಭಾವನೆಗಳನ್ನೂ ನೋಡಿಕೊಂಡು ಬೇರೆ ಔಷಧಗಳ ಯೋಜನೆಯನ್ನು ಮಾಡಬೇಕು. ಪಚನವಾಗುವಂಥ ಹಗುರಾದ ಅನ್ನವನ್ನು ಕೊಡಬೇಕು. ಹುಡುಗರಿಗೆ ಚಳಿ ಹತ್ತದಂತೆ ವ್ಯವಸ್ಥೆ ಮಾಡಬೇಕು. ಅವರಿಗೆ ಉಣ್ಣೆಯು ಬಟ್ಟೆಗಳನ್ನು ತೊಡಿಸಬೇಕು. ಮುಂಜಾನೆ ಮತ್ತು ಸಂಜೆಗೆ ಹತ್ತು ಹದಿನೈದು ಮಿನಿಟುಗಳ ವರೆಗೆ ಎದೆಗೂ ಬೆನ್ನಿಗೂ "ಆಲಿವ್ಹ" ಎಣ್ಣೆಯನ್ನು ಹಚ್ಚಿ ತಿಕ್ಕಬೇಕು. ಈ ರೋಗದಲ್ಲಿ ನ್ಯುಮೋನಿಯಾ ಆಗುವ ಸಂಭವವು ಬಹಳ ಇರುತ್ತದೆ.

ಈ ರೋಗವು ಸಂಪೂರ್ಣವಾಗಿ ನಾಶವಾಗಿ ಮಕ್ಕಳು ಗಟ್ಟಿಮುಟ್ಟಾಗುವ ತನಕ ಭಾವನಾನುಸಾರವಾಗಿ ಔಷಧವನ್ನು ಕೊಡುತ್ತಿರಬೇಕು. ಹಾಗೆ ಕೊಡದಿದ್ದರೆ ಪ್ರಕೃತಿಯಲ್ಲಿ ದೋಷಗಳು ಉಳಿಯುತ್ತವೆ ಹಾಗು ಹುಡುಗರು ಮೈ ಹಿಡಿಯುವದಿಲ್ಲ. ಅವರು ಕಡೆತನಕ ಅಶಕ್ತರಾಗಿ ಉಳಿಯುವ ಸಂಭವವಿದೆ.

"ಕೆಮ್ಮು" ಎಂಬ ಸದರು ನೋಡಿರಿ.

---

## ತಲೆಸೂಲಿ

**Headache.** ಹೆಡ್–ಏಕ.

ತಲೆಸೂಲಿಯೆಂಬ ಭಾವನೆಯು ಕೆಲವು ಕಾರಣಗಳಿಂದ ಉಂಟಾಗುತ್ತದೆ. ರಕ್ತದ ಪ್ರವಾಹವು ತಲೆಯ ಕಡೆಗೆ ಹೆಚ್ಚಾಗುವದು ಅಥವಾ ಕಡಿಮೆಯಾಗುವದು, ಅಪಚನದ ತಕರಾರು, ಚಳಿ, ಅಂಗುಲಿವಾತ, ಸಂಧಿವಾತ, ಅವರೋಧ, ಮಾನಸಿಕ ಶ್ರಮ, ಮಾನಸಿಕ ತ್ರಾಸ ಮುಂತಾದ ಅನೇಕ ಕಾರಣಗಳ ಮೂಲಕ ತಲೆ ನೋಯುತ್ತದೆ. ಕೆಲವು ಮನೆತನಗಳಲ್ಲಿ ಈ ರೋಗವು ಆನುವಂಶಿಕವಾಗಿರುತ್ತದೆ. ಮಿದುಳು, ಕಣ್ಣು, ಶಿರೋಸ್ಥಿ ಇವುಗಳ ರೋಗಗಳೂ ತಲೆಸೂಲಿಯ ಕಾರಣವಿರಬಹುದು.

ತಲೆಯು ಸಣ್ಣಾಗಿ ನೋಯುವದು, ಜಜ್ಜಿದಂತೆ ನೋಯುವದು, ಸುತ್ತಿಗೆಯಿಂದ ಹೊಡೆದಂತೆ ನೋಯುವದು, ಅರ್ಧ ತಲೆ ನೋಯುವದು, ಒತ್ತಿದರೆ ನೆಟ್ಟಗೆನಿಸುವದು, ಕಣ್ಣಿನ ಸಿರಗಳು ಟಣಟಣ ಹಾರುವವು, ಇವೇ ಮುಂತಾದ ಅನೇಕ ಲಕ್ಷಣಗಳು ಕಾರಣಾನುಸಾರವಾಗಿ ಕಂಡು ಬರುವವು.

ಇಂಥ ಎಲ್ಲ ಲಕ್ಷಣಗಳ ಕಡೆಗೆ ಲಕ್ಷಗೊಟ್ಟು ತಲೆಸೂಲಿಯ ಔಷಧಗಳ ಬಗ್ಗೆ ಕೆಳಗೆ ಹೇಳುತ್ತೇವೆ.

**ಫೇ. ಫಾ:**— ಸಂತಾಪದಿಂದ ತಲೆ ನೋಯುವದು. ಮಸ್ತಕಸೂಲಿ. ಜಜ್ಜಿದಂತೆಯೂ ಚುಚ್ಚಿದಂತೆಯೂ ನೋಯುವದು. ನಡೆದಾಡಿದರೂ ಕೆಳಗೆ ಬಾಗಿದರೂ ಹೆಚ್ಚಾಗುವದು. ರಕ್ತಾಧಿಕ್ಯದಿಂದ ತಲೆ ನೋಯುವದು; ಆದರಿಂದ ಹುಬ್ಬುಗಳು ನೋಯುವವು. ಸೀತೋಪಚಾರ ಮಾಡಿದರೂ ಒತ್ತಿದಪೂ ನೆಟ್ಟಗೆನಿಸುವದು. ಅಪಚನದಿಂದ ಸಣ್ಣಾಗಿ ತಲೆ ನೋಯುವದು; ಮತ್ತು ಅಪಕ್ವ ಅನ್ನದ ವಾಂತಿಯಾಗುವದು. ತಲೆಯು ಬುರುಡೆಗೆ ಕೈ ಹಚ್ಚಿದರೂ ಸಹನವಾಗುವದಿಲ್ಲ. ಅತಿಶಯ ಚಳಿಯಿಂದಾಗಲಿ ಬಿಸಿಲಿನಿಂಧಾಗಲಿ ಬಲಗಡೆಯ ಅರತಲೆಸೂಲಿ ಏಳುವದು. ಹೆಂಗಸರಿಗೆ ಮುಟ್ಟಾಗುವ ಸಮಯಕ್ಕೆ ತಲೆ ನೋಯುವದು. ನೆತ್ತಿಗೆ ಕೈ ಹತ್ತಗೊಡುವದಿಲ್ಲ. ಪೆಟ್ಟು ತಾಕಿದ್ದರಿಂದಲೂ ಅಪಘಾತವಾದದ್ದರಿಂದಲೂ ಮೇಲಿಂದಮೇಲೆ ತಲೆ ನೋಯುವದು. ಅದು ಫೇರಂಫಾಸದಿಂದ ನೆಟ್ಟಗಾಗುವದು. ಔಷಧವನ್ನು ಮಾತ್ರ ಬಹಳ ದಿವಸಗಳ ವರೆಗೆ ಕೊಡುತ್ತಿರಬೇಕು.

**ಕಾ. ಫಾ:**— ಅತಿಶಯ ಮಾನಸಿಕ ಶ್ರಮದಿಂದ ವಿದ್ಯಾರ್ಥಿಗಳ ತಲೆ ನೋಯುವದು. ಅಪಚನದ ತಕರಾರು ಇರುವದಿಲ್ಲ. ಮನಸ್ಸು ದಣಿಯುವದು. ನಿದ್ರಾನಾಶವಾಗುವದು. ನಾಲಿಗೆಯ ಮೇಲೆ ಸಾಸಿವೆಯ ಲೇಪದಂತೆ ಹಳದೀ ಕಿಟ್ಟು ಕೂಡುವದು. ಬಾಯಿ ನಾರುವದು; ವಿಚಾರಶಕ್ತಿಯು ನಾಶವಾಗುವದು; ಮುಂತಾದ ಲಕ್ಷಣಗಳಿದ್ದು ತಲೆಯು ನೋಯುವದು. ಸ್ವಲ್ಪ ಚಲನವಲನದಿಂದಲೂ ಆಲ್ಹಾದಕರವಾದ ಆಟ

ನೋಟಗಳಿಂದಲೂ ಸಮಾಧಾನವಾಗುವದು. ತಲೆಯ ಹಿಂಭಾಗದಲ್ಲಿಯೂ ಹುಬ್ಬುಗಳಲ್ಲಿಯೂ ನೋಯುತ್ತದೆ. ಏನಾದರೂ ತಿಂದರೆ ನೆಟ್ಟಗೆನಿಸುತ್ತದೆ. ನಿದ್ದೆ ಹತ್ತಿದಾಗ ಕಿವಿಯಲ್ಲಿ ಸಪ್ಪಳಾಗುತ್ತದೆ.

**ಕಾ. ಮೂ:—** ಯಕೃತದ ಕ್ರಿಯೆಯು ಮಂದಾಗುವದು. ನಾಲಿಗೆಯ ಮೇಲೆ ಬಿಳೇ ಬಣ್ಣದ ಅಥವಾ ಬೂದೀ ಬಣ್ಣದ ಬೂರಸ ಕೂಡುತ್ತದೆ. ತಲೆಯು ನೋಯುತ್ತಿದ್ದು ಹಾಲಿಸಂತೆ ಬೆಳ್ಳಗೆ ವಾಂತಿಯಾಗುತ್ತದೆ. ಹಸಿವೆ ಇರುವದಿಲ್ಲ.

**ನೇ. ಮೂ:—** ತಲೆಯು ಸುಂದವಾಗಿ ಜಡವಾಗಿ ನೋಯುತ್ತದೆ. ಕಣ್ಣು ಮುಚ್ಚುತ್ತವೆ. ಮೂಗಿನಿಂದಲೂ ಕಣ್ಣಿನಿಂದಲೂ ಒಂದೇಸವನೆ ನೀರು ಸೋರುತ್ತದೆ. ಜೊಲ್ಲು ಬಹಳ ಸೋರುತ್ತದೆ. ಬದ್ಧಕೋಷ್ಠವಾಗುತ್ತದೆ. ಮಲಗಿ ಎದ್ದರೂ ಚಟುವಟಿಕೆ ಅನಿಸುವದಿಲ್ಲ. ಹುಡಿಗೆಯರಿಗೆ ಪ್ರಾಯವು ಬರುವಾಗ ತಲೆ ನೋಯುತ್ತದೆ. ಮುಟ್ಟು ಅನಿಯಮಿತವಿರುತ್ತದೆ. ಅರತಲೆಸೂಲಿ ಇರುತ್ತದೆ. ಮುಂಜಾವಿನಲ್ಲಿ ವೇದನೆ ಹೆಚ್ಚುತ್ತದೆ. ಸಾಯಂಕಾಲದಲ್ಲಿ ಅದು ನಿಲ್ಲುತ್ತದೆ. ಬಹಳ ಹಳೆಯ ತಲೆಸೂಲಿ. ಮುಟ್ಟಾಗುವದಕ್ಕಿಂತ ಮುಂಚೆ, ಮುಟ್ಟಾದಾಗ ಮತ್ತು ಮುಟ್ಟಾದ ಬಳಿಕ ತಲೆ ನೋಯುತ್ತದೆ. ಉಪದಂಶ ಪ್ರಕೃತಿಯ ರೋಗಿಗಳಿಗೆ ಮೇಲಿಂದಮೇಲೆ ತಲೆ ನೋಯುತ್ತದೆ.

**ಮ್ಯಾ. ಫಾ:—** ವಾತಜನ್ಯ ಮಸ್ತಕಸೂಲಿ. ಪ್ರಾಣಹಾರಕವಾದ, ಚೇಳು ಕಡಿದಂತೆ, ಇಲ್ಲವೆ ಬಾಣ ಬಡಿದಂತೆ, ನೋವು ಆಗುತ್ತದೆ. ನಿಂತು ನಿಂತು ಸೂಲಿ ಏಳುತ್ತದೆ. ಕಣ್ಣುಮುಂದೆ ಮಿಂಚಿದಂತಾಗುತ್ತದೆ. ಉಷ್ಣೋಪಚಾರದಿಂದ ನೆಟ್ಟಗೆನಿಸುತ್ತದೆ. ಸೀತೋಪಚಾರದಿಂದ ಬೇನೆ ಹೆಚ್ಚಾಗುತ್ತದೆ. ತಲೆಯ ಹಿಂಭಾಗದಲ್ಲಿ ವಿಶೇಷ ತ್ರಾಸವಾಗುತ್ತದೆ. ಮಾನಸಿಕ ಶ್ರಮ ಮಾಡುವಾಗ ತಲೆಯು ಒಂದೇಸವನೆ ನೋಯುತ್ತಿರುತ್ತದೆ.

**ನೇ. ಸ:—** ಪಿತ್ತಪ್ರಕೋಪದಿಂದ ತಲೆ ನೋಯುತ್ತದೆ. ಪಿತ್ತದ ವಾಂತಿಯಾಗುತ್ತದೆ. ಬಾಯಿ ಕಹಿಯಾಗುತ್ತದೆ. ನಾಲಿಗೆಯ ಮೇಲೆ

ಹಸರು ಬಣ್ಣದ ಇಲ್ಲವೆ ಬೂದಿ ಬಣ್ಣದ ಕಿಟ್ಟು ಕೂಡುತ್ತದೆ. ಬವಳಿ, ಜಾಡ್ಯ, ತಲೆ ತಿರುಗುವದು. ತಲೆಯ ಹಿಂದಿನ ಭಾಗವಾಗಲೀ ಮೇಲಿನ ಭಾಗವಾಗಲೀ ನೋಯುತ್ತದೆ. ಮುಟ್ಟಾಗುವ ಸಮಯದಲ್ಲಿ ಮೇಲಿಂದ ಮೇಲೆ ನೋಯುತ್ತದೆ. ಪ್ರತಿಯೊಂದು ವರುಷದ ಬೇಸಿಗೆಯ ಕಾಲದಲ್ಲಿ ಮಸ್ತಕಸೂಲಿಯಿಂದ ತ್ರಾಸವಾಗುತ್ತಿರುವ ರೋಗಿಗಳಿಗೆ ಈ ಔಷಧದ ವಿಶೇಷ ಉಪಯೋಗವಾಗುವದು. ಅರತಲೆಸೂಲಿ; ಮಲಗಿ ಎದ್ದನಂತರ ಆರಂಭವಾಗುವದು, ಮಧ್ಯಾನ್ಹದಲ್ಲಿ ಹೆಚ್ಚಾಗುವದು, ಮುಂದೆ ಕಡಿಮೆ ಆಗುತ್ತಾಗುತ್ತ ಪುತ್ತೆ ಮಲಗುವ ಹೊತ್ತಿಗೆ ನಿಲ್ಲುವದು. ಬೆಳಕೂ ಸಪ್ಪಳವೂ ಸಹಸವಾಗುವದಿಲ್ಲ. ಕತ್ತಲೆಯ ಕೋಣೆಯಲ್ಲಿಯೇ ಮಲಗ ಬೇಕೆನಿಸುತ್ತದೆ. ತಲೆಸೂಲಿಯು ಬಹಳ ಹಳೆಯದಿದ್ದರೆ ೨೦೦ × ಶಕ್ತಿಯ ಔಷಧವನ್ನು ಉಪಯೋಗಿಸಬೇಕು.

**ಕಲ್ಕೆ. ಫಾ:**— ತಲೆಯಲ್ಲಿ ಜುಮ್ಮು ಹಿಡಿದಂತೆ ಭಾಸವಾಗುತ್ತದೆ ಹಾಗು ಚಳಿಯೆನಿಸುತ್ತದೆ. ಹೊರಗಿನಿಂದ ಕೈ ಹಚ್ಚಿದರೂ ತಣ್ಣಗೆ ಹತ್ತುತ್ತದೆ. ಉಷ್ಣೋಪಚಾರದಿಂದಲೂ ಸೀತೋಪಚಾರದಿಂದಲೂ ಹೆಚ್ಚಾಗುತ್ತದೆ. ತ್ರಾಸಿಕ, ಸಿಡುಕ ಹುಡುಗರಿಗೂ ಸಾಲೆಗೆ ಹೋಗುವ ಹುಡುಗೆಯರಿಗೂ ತಲೆ ನೋಯುತ್ತಿದ್ದರೆ ಇದನ್ನು ಕೊಡಬೇಕು. ವಾತ ಜನ್ಯ ಮಸ್ತಕಸೂಲಿಗೆ ಮ್ಯಾ. ಫಾ. ದಿಂದ ಗುಣವು ಬರದಿದ್ದರೆ ಅದರ ಸಂಗಡ ಕಲ್ಕೆ. ಫಾಸವನ್ನು ಕೊಡಬೇಕು.

**ಕಾ. ಸ**— ಸಾಯಂಕಾಲದಲ್ಲಿಯೂ ಬೆಚ್ಚಗಿನ ಕೋಣೆಯಲ್ಲಿಯೂ ವಿಕಾರವೃದ್ಧಿಯಾಗುತ್ತದೆ. ಬಯಲೊಳಗಿನ ತಂಪು ಹವೆಯಲ್ಲಿ ನೆಟ್ಟಗೆನಿ ಸುತ್ತದೆ.

**ನೇ. ಫಾ:**— ಮುಂಜಾನೆ ಎದ್ದಕೂಡಲೆ ಗಂಟಲದಲ್ಲಿ ಹುಳಿ ಸುಡುತ್ತದೆ, ತಲೆ ಸೋಯುತ್ತದೆ, ಮತ್ತು ಹುಳಿ ವಾಂತಿಯಾಗುತ್ತದೆ. ನಾಲಿಗೆಯ ಬುಡದಲ್ಲಿಯೂ ಹಿಂಭಾಗದಲ್ಲಿಯೂ ಕೆನೆಯಂತೆ ಅಚ್ಚ ಹಳದೀ ಬಣ್ಣದ ಬೂರಸ ಕೂಡುತ್ತದೆ.

**ಉಪಯುಕ್ತ ಸೂಚನೆ:**— ಭಾವನೆಗಳ ಕಡೆಗೆ ಲಕ್ಷ್ಯಗೊಟ್ಟು ಔಷಧ ಯೋಜನೆ ಮಾಡಬೇಕು. ಅಂದಾಜಿನ ಮೇಲೆ ಕೆಲಸ ಮಾಡ

ಬಾರದು. ಒಮ್ಮೊಮ್ಮೆ ಎರಡು ಅಥವಾ ಮೂರು ಔಷಧಗಳನ್ನು ಕೊಡ ಬೇಕಾಗುತ್ತದೆ. ಬೇರೆ ಬೇರೆ ಕ್ಷಾರಗಳು ಕಡಿಮೆಯಾಗಿರುವದರಿಂದ ಆಯಾ ಕ್ಷಾರಗಳನ್ನು ಪೂರಯಿಸುವದು ಅವಶ್ಯವಿರುತ್ತದೆ. ಶಿರೋಭಾಗದಲ್ಲಿ ರಕ್ತಾಧಿಕ್ಯವಾಗಿ ಮೋರೆಯು ಕೆಂಪಾಗಿದ್ದರೆ, ಪಿತ್ತದ ಹುಳಿ ವಾಂತಿ ಯಾಗುತ್ತಿದ್ದರೆ, ಅಥವಾ ವಾಂತಿಯಾಗದೆ ನಾಲಿಗೆಯು ಬೆಳ್ಳಗಾಗಿದ್ದರೆ, ಅನುಕ್ರಮವಾಗಿ ಫೇರಂ. ಫಾಸ, ನೇಟ್ರಂ. ಫಾಸ, ಮತ್ತು ಕಾಲೀ ಮೂರ ಈ ಕ್ಷಾರಗಳು ಕಡಿಮೆಯಾಗಿವೆಯೆಂದು ತಿಳಿದು, ಭಾವನಾನುಸಾರವಾಗಿ ಫೇ. ಫಾ. ಮತ್ತು ನೇ. ಫಾ. ಅಥವಾ ಫೇ. ಫಾ. ಮತ್ತು ಕಾ. ಮೂ. ಈ ಔಷಧಗಳನ್ನು ಅದಲುಬದಲು ಮಾಡಿ ಕೊಡಬೇಕಾಗುವದು. ಆದುದ ರಿಂದ ಯಾವ ಕ್ಷಾರಗಳು ಕಡಿಮೆಯಾಗಿರುತ್ತವೆ ಎಂಬದನ್ನು ಲಕ್ಷ್ಯಗೊಟ್ಟು ನೋಡಬೇಕು. ವೈದ್ಯರ ತಪ್ಪಿಗಾಗಿ ರೋಗಿಗೆ ತ್ರಾಸವಾಗದಂತೆ ನಡೆಯ ಬೇಕು.

ಚಹಾ, ಕಾಫಿ ಇವುಗಳನ್ನು ಆದಷ್ಟು ಮಟ್ಟಿಗೆ ಕುಡಿಯಬಾರದು. ಆಹಾರವು ನಿಯಮಿತವಿರಬೇಕು. ಬಯಲು ಹವೆಯಲ್ಲಿ ಹೆಚ್ಚಿಗೆ ತಿರುಗಾಡ ಬೇಕು. ಮನಸ್ಸಿಗೆ ತ್ರಾಸವಾಗುವಂಥ ಕೆಲಸಗಳನ್ನು ಮಾಡಬಾರದು. ವಿಶ್ರಾಂತಿಯನ್ನು ತೆಗೆದುಕೊಳ್ಳಬೇಕು. ಈ ಉಪಚಾರಗಳಿಂದ ತಲೆನೋವು ಕಡಿಮೆಯಾಗುತ್ತದೆ. ತಲೆಯು ನೋಯುತ್ತಿರುವಾಗ ಏನೂ ತಿನ್ನಬಾರದು. ಅದು ಬಹಳ ಹೊತ್ತು ನೋಯುತ್ತಿದ್ದು ಹಸಿವೆಯಾಗಿದ್ದರೆ, ಹಾಲು, ಲಿಂಬಿಯ ಹಣ್ಣಿನ ಪಾನಕ ಮುಂತಾದವುಗಳನ್ನು ತೆಗೆದುಕೊಳ್ಳಬೇಕು. ಆರಂಭದಲ್ಲಿ ಸಾಕಷ್ಟು ಬಿಸಿನೀರು ಕುಡಿದರೆ ಅರತಲೆಸೂಲಿಯು ನಿಲ್ಲುತ್ತದೆ, ವೇದನೆಯೂ ಕಡಿಮೆಯಾಗುತ್ತದೆ.

---

# ತ್ವಗ್ರೋಗ

**Diseases of skin.** ಡಿಸೀಜೆಸ್ ಆಫ ಸ್ಕಿನ್.

ತ್ವಚೆಯ ಮೇಲೆ ಬೇರೆ ಬೇರೆ ತರದ ಹಣ್ಣುಗಳು ಏಳುವವು, ತ್ವಚೆಯು ತುರಿಸುವದು, ತುರಿಸಿದನಂತರ ಉರಿಯುವದು, ಬೇರೆ ಬೇರೆ ತರದ ಸ್ರಾವ

ವಾಗುವದು, ರಸಿಕೆ ತುಂಬುವದು, ಅದು ಸೋರುವದು, ತೊಗಲು ಸುಲಿಯುವದು, ತವಡು ಉದುರುವದು, ಅಲ್ಲಿ ನೋಯುವದು, ಅದರ ಮೇಲೆ ಕಲೆ ಬೀಳುವದು, ಬಣ್ಣವು ಬದಲಾಗುವದು, ತೊಗಲು ಸೀಳುವದು ದಪ್ಪಾಗುವದು (ಆನೆಯ ಕಾಲು), ಮುಂತಾದ ಅನೇಕ ಭಾವನೆಗಳು ತ್ವಗ್ರೋಗದಲ್ಲಿ ಕಂಡುಬರುವವು. ಹುಣ್ಣಿನ ಆಕಾರ, ಸ್ರಾವಗಳ ಸ್ವರೂಪ ಮತ್ತು ಬೇರೆ ಆನುಷಂಗಿಕ ಭಾವನೆಗಳ ವಿಚಾರ ಮಾಡಿ, ತ್ವಗ್ರೋಗಗಳಿಗೆ ಬೇರೆ ಬೇರೆ ಹೆಸರುಗಳನ್ನು ಕೊಟ್ಟಿದ್ದಾರೆ. ಒಣ ಹುರುಕು, ಹಸಿ ಕಜ್ಜಿ, ಇಸಬು, ಪೈಣ, ಗಜಕರ್ಣ, ತದ್ದು, ಪಿತ್ತದ ಗಾದರಿ, ಬೆವರಸಾಲಿ, ಸಿಡುಬು ಮುಂತಾದ ತ್ವಗ್ರೋಗಗಳು ಪ್ರಚಾರದಲ್ಲಿವೆ. ಕೆಳಗೆ ಹೇಳಿದ ಭಾವನೆಗಳ ಮೇಲಿಂದ ಇಂಥ ರೋಗಗಳು ನಾಶವಾಗಲಿಕ್ಕೆ ಅವಶ್ಯವಿರುವ ಮಾಹಿತಿಯು ದೊರೆಯುವದು.

ತ್ವಗ್ರೋಗಗಳಿಗೆ ಅನೇಕ ಕಾರಣಗಳಿರಬಹುದು. ಕೆಲವು ಸಾಂಸರ್ಗಿಕವಿರುತ್ತವೆ, ಕೆಲವು ಕೃಮಿಜನ್ಯವಿರುತ್ತವೆ, ಮತ್ತು ಬೇರೆ ಕೆಲವು ರಕ್ತದೋಷದಿಂದಲೂ ಪಚನದೋಷದಿಂದಲೂ ಆಗಿರುತ್ತವೆ. ಉಪದಂಶವೂ ತ್ವಗ್ರೋಗದ ಕಾರಣವಿರುವದು.

**ಫೇ. ಫಾ**:— ಜ್ವರ, ವೇದನೆ, ಮುಂತಾದ ದಾಹದ ಭಾವನೆಗಳಿರುತ್ತವೆ. ತ್ವಚೆಯು ಬೆಚ್ಚಗೂ ಕೆಂಪಗೂ ಆಗಿ ಅದರ ಮೇಲೆ ಬೊಕ್ಕೆಗಳು ಏಳುತ್ತವೆ.

**ಕಾ ಮೂ**:— ದ್ವಿತೀಯಾವಸ್ಥೆ. ಫೇರಂ ಫಾಸದ ನಂತರ ಇದನ್ನು ಕೊಡಬೇಕು. ತ್ವಚೆಯ ಮೇಲೆ ಎಲ್ಲಿಯಾದರೂ ಹುಣ್ಣು ಆಗುತ್ತವೆ. ಅವುಗಳಲ್ಲಿ ಬೆಳ್ಳಗೆ ದಟ್ಟಾದ ಕೀವು ಇರುತ್ತದೆ. ನಾಲಿಗೆಯು ಬೆಳ್ಳಗಿದ್ದು ಅಪಚನವಾಗಿದ್ದರೆ ಇದರ ವಿಶೇಷ ಉಪಯೋಗವಾಗುವದು. ವಿಶೇಷವಾಗಿ ಮುಖದಮೇಲೆ ಮಡಿಬೊಕ್ಕೆಗಳಾಗುವವು. ಅವು ಬೇಗನೆ ಹೋಗುವದಿಲ್ಲ. ಹೆಂಗಸರಿಗೆ ಬಹಳಮಾಡಿ ಜನನೇಂದ್ರಿಯದ ವಿಕಾರದಿಂದಲೂ ಅಥವಾ ಪಚನೇಂದ್ರಿಯದ ವಿಕಾರದಿಂದಲೂ ಮಡಿಬೊಕ್ಕೆಗಳು ಏಳುತ್ತವೆ. ಕಾಲೀ ಮೂರದಿಂದ ಕೀವು ತುಂಬದೆ ಹುಣ್ಣು ನೆಟ್ಟಗಾಗುವದಕ್ಕೆ ಸಹಾಯ

ವಾಗುತ್ತದೆ. ಇಸಬು; ಉರಿಪೈಣು. ಚಿಕ್ಕ ಮಕ್ಕಳ ತಲೆಯ ಮೇಲೆ ಬೊಕ್ಕೆಗಳೇಳುವವು. ಅವನ್ನು ತುರಿಸಿದರೆ ಬಹಳ ತವಡು ಉದುರುವದು. ಕೆಟ್ಟ ರಸಿಕೆಯಿಂದ ಮೈಲೀ ಚುಚ್ಚಿದರೆ ಆದರಿಂದ ಆಗುವ ದುಷ್ಪರಿಣಾಮದ ಮೇಲೆ ಇದರ ಉಪಯೋಗವು ಬಹಳಾಗುವದು. ಫೇರಂ ಫಾಸ ಮತ್ತು ಕಾಲೀ ಮೂರ ಇವುಗಳನ್ನು ಅದಲುಬದಲು ಮಾಡಿ ಕೊಡಬೇಕು. ಆಣಿ; ನರೋಲಿ; ಮೈಮೇಲೆ ಕೆಂಪು ಬೊಕ್ಕೆಗಳೇಳುವವು, ಅಲ್ಲಲ್ಲಿ ದುಂಡಗೆ ಅಗಲಾದ ಹುಣ್ಣು ಆಗುವದು; ಆ ಹುಣ್ಣು ಬಹಳ ತುರಿಸುವದು, ತುರಿಸಿ ಕೊಂಡನಂತರ ತವಡು ಉದುರುವದು ಮುಂತಾದ ಲಕ್ಷಣಗಳಿದ್ದರೆ ಈ ಔಷಧದ ಉಪಯೋಗವು ಬಹಳಾಗುವದು. ಜನನೇಂದ್ರಿಯದ ಹಾಗೂ ಅಪಚನದ ವಿಕಾರಗಳು ನಾಶವಾಗುವ ವರೆಗೆ ಅವುಗಳಿಂದ ಉಂಟಾಗುವ ತ್ವಗ್ರೋಗಗಳೂ ನೆಟ್ಟಗಾಗುವದಿಲ್ಲ. ಈ ಸಂಗತಿಯನ್ನು ನೆನಪಿನಲ್ಲಿಟ್ಟು ಅದರಂತೆ ಔಷಧಗಳ ಯೋಜನೆಯನ್ನು ಮಾಡಬೇಕು. ಔಷಧದ ಮುಲಮು ಮತ್ತು ಧಾವನ ಮಾಡಿ ಹೊರಗಿನಿಂದಲೂ ಹಚ್ಚಬೇಕು. ಜನನೇಂದ್ರಿಯದ ಬಗ್ಗೆ (ವಿಶೇಷವಾಗಿ ಸ್ತ್ರೀಯರ ಜನನೇಂದ್ರಿಯದ ಬಗ್ಗೆ) ಮತ್ತು ಅಪಚನದ ಬಗ್ಗೆ ತಕರಾರು ಇದ್ದು ನಾಲಿಗೆಯು ಬೆಳ್ಳಗಾಗಿದ್ದರೆ, ಹುಣ್ಣಿ ನೊಳಗಿಂದ ದಟ್ಟಾದ ಬಿಳೀ ಸ್ರಾವವು ಹೋಗುತ್ತಿದ್ದರೆ, ಅಥವಾ ಹಿಟ್ಟಿನಂತೆ ತವಡು ಉದುರುತ್ತಿದ್ದರೆ, ಯಾವದೇ ತರದ ತ್ವಗ್ರೋಗವಿದ್ದರೂ ಈ ಔಷಧದ ಉಪಯೋಗವಾಗುವದು.

**ಕಾ. ಸ:—** ಬೊಕ್ಕೆ, ಇಸಬು, ಪೈಣು. ಇಸಬಿನಿಂದ ನೀರಿನಂತೆ ತೆಳ್ಳಗೆ ಹಳದೀ ಹೊಲಸು ರಸಿಕೆ ಹೋಗುವದು. ಬೊಕ್ಕೆಯಾಗಲಿ ಇಸಬಾಗಲಿ ಒಮ್ಮಿಂದೊಮ್ಮೆ ಅಡಗಿ ಮೇಲಿನ ತೊಗಲು ಸುಲಿಯುತ್ತದೆ. ತವಡು ಬಹಳ ಉದುರುವದು. ರಸಿಕೆ ಜಿಗಟಾಗುವದು. ತುಸು ಹಳದಿ ತುಸು ಬಿಳೀ ಹಕಳಿಗಟ್ಟುವದು. ಪಿತ್ತದ ಗಾದರಿಗಳು ಏಳುವವು. ತುರುಸಿದ ನಂತರ ಉರುವು ಬಿಡುವದು. ಧಾವನ ಜಲವನ್ನು ಮಾಡಿ ಹೊರಗಿನಿಂದಲೂ ಹಚ್ಚಬೇಕು. ತ್ವಗ್ರೋಗದಲ್ಲಿ ಔಷಧವನ್ನು ಆರಿಸುವಾಗ ನಾಲಿಗೆಯ ಮೇಲಿನ ಕಿಟ್ಟಿನ ಕಡೆಗೆ ಲಕ್ಷ್ಯವಿಡಬೇಕು.

**ನೇ. ಮೂ:** – ತ್ವಚೆಯ ಮೇಲೆ ಬೊಕ್ಕೆ; ಹುಣ್ಣು. ಅದರೊಳಗಿಂದ ಸ್ವಚ್ಛವಾದ ತಿಳಿನೀರು ಸೋರುವದು. ಇಸಬು ಆಗುವದು. ಬಿಳೇ ಹಕಳಿಗಳು ಹಿಡಿಯುವವು; ಮತ್ತು ಅವುಗಳೊಳಗಿಂದ ತೆಳ್ಳಗೆ ರಸಿಕೆ ಸೋರುವದು. ಉಪ್ಪು ಹೆಚ್ಚು ತಿನ್ನುವದರಿಂದ ಇಸಬು ಆಗುವದು. ಚಿಕ್ಕ ಮಕ್ಕಳಿಗೆ ಕಜ್ಜಿಯಾಗುವವು; ತೊಗಲು ನೋಯುವದು. ನೀರಿನಂತೆ ಅಳ್ಳಕಿನ ಸ್ರಾವವಾಗುವದು. ಒಣ ಹುರುಕು ಆಗುವದು. ತುರಿಸಿಕೊಂಡರೆ ತವಡು ಬಹಳ ಹೋಗುವದು. ಕಾಲೀ ಸಲ್ಫದಿಂದ ಗುಣವು ಬರದಿದ್ದರೆ ಈ ಔಷಧವನ್ನು ಕೊಡಬೇಕು. ವಿಷವುಳ್ಳ ಪ್ರಾಣಿಗಳ ದಂಶ. ಔಷಧವನ್ನು ಹೊಟ್ಟೆಯೊಳಗೂ ಹೊರಗೂ ಆದಷ್ಟುವಟ್ಟಿಗೆ ಬೇಗನೆ ಕೊಟ್ಟರೆ ವೇದನೆ ನಿಲ್ಲುವದು. ವಿಷಮುಜ್ವರದಲ್ಲಿ ಏಳುವಂಥ ಬೊಕ್ಕೆಗಳು. ಪಿತ್ತದ ಗಾದರಿಗಳು. ಕೈ ತೊಗಲು, ವಿಶೇಷವಾಗಿ ಉಗುರಿನ ಹತ್ತರ, ಒಣಗಿರುತ್ತದೆ ಹಾಗು ಸೀಳಿರುತ್ತದೆ. ತಿಳಿನೀರಿನಂತೆ ಸ್ರಾವವು ಹೋಗುವದು, ಹುಣ್ಣಿನ ಮೇಲಿನ ಹಕಳಿಯು ಬೇಗನೆ ಉಚ್ಚುವದು, ಮತ್ತೆ ಮೇಲಿಂದಮೇಲೆ ಹಕಳಿಗಟ್ಟುವದು, ಇವು ಈ ಔಷಧದ ಪ್ರಮುಖ ಲಕ್ಷಣಗಳು.

**ನೇ. ಫಾ:**— ಸಣ್ಣ ಹುಡುಗರ ಮೈ ಉರಿಯುವದು. ಇಸಬು ಆಗುವದು. ಅದರೊಳಗಿಂದ ಕೆನೆಯಂಥ ದಟ್ಟಾದ, ಜೇನುತುಪ್ಪದ ಬಣ್ಣದ ಅಥವಾ ಬಂಗಾರದಂತೆ ಅಚ್ಚ ಹಳದೀ ಬಣ್ಣದ ಸ್ರಾವವು ಹೋಗುವದು; ಹಕಳಿಯಾದರೂ ಅದೇ ಬಣ್ಣದ್ದಿರುವದು. ತಲೆಹುಣ್ಣು, ಗಜಕರ್ಣ, ಕಜ್ಜಿ ಮುಂತಾದವುಗಳು ಆಗುವವು. ಕ್ರಿಮಿದಂಶದಂತೆ ಗುಲಾಬೀ ಬಣ್ಣದ ಬೊಕ್ಕೆಗಳು ಏಳುವವು. ಅದರಿಂದ ಮೈಯೆಲ್ಲ ತುರಿಸುತ್ತದೆ, ನಾಲಿಗೆಯು ಕೆಳಗೆ ಕೆನೆಯಂತೆ ಹಳದೀ ಬಣ್ಣದ ಕಿಟ್ಟು ಕೂಡುವದು; ಮತ್ತು ಬೇರೆ ಪೈತ್ತಿಕ ಭಾವನೆಗಳು ಇರುವವು, ಎಲ್ಲ ತರದ ತ್ವಗ್ರೋಗಗಳಿಗೂ ಈ ಔಷಧದ ಉಪಯೋಗವಾಗುವದು.

**ಕಾ. ಫಾ:**— ಇಸಬು; ಆ ಇಸಬಿನ ಮೇಲೆ ಒಂದು ಹುಣ್ಣು. ಮಾನಸಿಕ ಅಸ್ವಸ್ಥತೆ ಹಾಗು ತ್ರಾಸ. ಇಸಬಿನಿಂದ ಹರಿಯುವ ಸ್ರಾವವು

ಹೊಲಸು ನಾರುವಂಥದೂ, ಉರಿಯುವಂಥದೂ, ತುರಿಸುವಂಥದೂ ಇದ್ದರೆ ಈ ಔಷಧದಿಂದ ವಿಶೇಷ ಉಪಯೋಗವಾಗುವದು. ಹಕಳಿಯು ಎಣ್ಣೆಗವುಟಾಗಿಯೂ ಹೊಲಸಾಗಿಯೂ ಇರುತ್ತದೆ, ತೊಗಲಿಗೆ ಕಟ್ಟಾಡಿಸಿದಂತೆ ಆಗುತ್ತದೆ, ಮತ್ತು ಆ ಮೇಲೆ ತಿಂಡಿ ಬಿಡುತ್ತದೆ. ಮೆಲ್ಲಗೆ ತುರಿಸಿದರೆ ಸುಖವೆನಿಸುತ್ತದೆ. ಆದರೆ ಜೋರಿನಿಂದ ತುರಿಸಿದರೆ ಉರಿಯುತ್ತದೆ, ಜಜ್ಜಿದಂತಾಗುತ್ತದೆ, ಮತ್ತು ರಕ್ತದಂಥ ಕೀವು ಸೋರುತ್ತದೆ. ರಾಜಗುರು ಆಗುತ್ತದೆ, ಕೈ, ಹೆಬ್ಬೊಟ್ಟು ಮತ್ತು ಕಿವಿ ಇವು ಸೀಳುತ್ತವೆ. ಅಲ್ಲಿ ಬಹಳ ಉರಿಯುತ್ತದೆ; ಮತ್ತು ತುರಿಸುವಂತಾಗುತ್ತದೆ. ಇಂಥ ಭಾವನೆಗಳಿದ್ದರೆ ಕಾಲೀಮೂರವನ್ನೂ ಕಾಲೀಫಾಸವನ್ನೂ ಅದಲು ಬದಲುಮಾಡಿ ಕೊಡಬೇಕು.

**ಕಲ್ಕೆ. ಫಾ:—** ತ್ವಚೆಯ ಮೇಲೆ ಹುಣ್ಣಾಗುವದು. ಬಿಳೀ ಹಳದೀ ಹಕಳಿಗಟ್ಟುವದು. ಅದರಿಂದ ದಟ್ಟಾದ ತಿಳಿಯಾದ ರಸಿಕೆ ಸೋರುವದು. ಪಾಂಡುರೋಗಿಗಳಿಗೂ ಶಕ್ತಿ ಕ್ಷೀಣವಾದ ರೋಗಿಗಳಿಗೂ ಇಸಬು ಆಗುವದು. ಹವೆಯಲ್ಲಿ ಅಲ್ಪಸ್ವಲ್ಪ ಬಡಲಾವಣಿಯಾದರೂ ಇಸಬು ಹೆಚ್ಚಾಗುವದು. ತೊಗಲಿನಮೇಲೆ ಬೀಳುವ ಸಣ್ಣ ಸಣ್ಣ ಕಲೆಗಳು ಈ ಔಷಧದಿಂದ ಕಡಿಮೆಯಾಗುವವು. ಪಾಂಡುರೋಗಿಗಳಿಗೂ ತರುಣ ಜನರಿಗೂ ಮುಡಿಬಕ್ಕೆಗಳಾಗುವವು. ವಿಶೇಷವಾಗಿ ಮುಪ್ಪಿನಲ್ಲಿ ತ್ವಚೆಗೆ ಬಹಳ ತಿಂಡಿ ಬಿಡುತ್ತಿದ್ದರೆ, ಮತ್ತು ಅದರಿಂದ ಬಹಳ ತ್ರಾಸವಾಗುತ್ತಿದ್ದರೆ, ಕಾಲೀಫಾಸವನ್ನೂ ( ೬× ಶಕ್ತಿಯ ) ಕಲ್ಕೆ ಫಾಸವನ್ನೂ ಅದಲುಬದಲುಮಾಡಿ ಕೊಡಬೇಕು. ಭಾವನೆಗಳಿಗೆ ಅನುಸಾರವಾಗಿ ಬೇರೆ ಔಷಧಗಳ ಸಂಗಡ ಕೊಟ್ಟರೆ ನೆಟ್ಟಗಾಗಲಿಕ್ಕೆ ಸಹಾಯ ಮಾಡುವದು.

**ಕಲ್ಕೆ. ಸ:—** ದಟ್ಟಾದ ಹಳದೀ ರಸಿಕೆ ಸೋರುವಂಥ ಅಥವಾ ಹಕಳಿಗಟ್ಟುವಂಥ ಯಾವದೇ ತ್ವಗ್ರೋಗದ ಮೇಲೆಯೂ ಕಾಲೀಮೂರದ ನಂತರ ಇದರ ಉಪಯೋಗವಾಗುವದು. ಚಿಕ್ಕಮಕ್ಕಳ ತಲೆಯ ಮೇಲಿನ ಕೂದಲುಗಳು ಹಾರಿಹೋಗಿದ್ದರೆ ಇದರಿಂದ ಗುಣವು ಬರುವದು.

**ಸಿ:—** ಮೈಮೇಲೆ ಅಲ್ಲಲ್ಲಿ ಸಣ್ಣ ಸಣ್ಣ ಕೂದಲುಗುರುಗಳು ಒಂದೇ ಸವನೆ ಏಳುತ್ತವೆ. ಸಣ್ಣ ಸಣ್ಣ ಹುಣ್ಣುಗಳಾಗಿ ಅವುಗಳೊಳಗಿಂದ ರಸಿಕೆ

ಸೋರುತ್ತದೆ. ರಕ್ತಪಿತ್ತಕ್ಕೂ ಮಹಾ ರೋಗಕ್ಕೂ ಈ ಔಷಧದ ಉಪಯೋಗವಾಗುತ್ತದೆ.

**ನೇ. ಸ:**-- ಹಸಿ ಕಜ್ಜಿ; ಇಸಬು; ಅದರೊಳಗಿಂದ ತೆಳ್ಳಗೆ ಹಳದೀ ಸ್ರಾವವು ಹೋಗುವದು. ಹಕಳಿಯಾದರೂ ಹಳದೀ ಬಣ್ಣದ್ದೇ ಇರುವದು. ತೊಗಲಿಗೆ ತಿಂಡಿ ಬಿಡುವದು. ಶೋಥಯುಕ್ತ ದಾಹವಿದ್ದು ಪೈತ್ತಿಕ ಭಾವನೆಗಳೂ ಇರುವವು.

**ಕಲ್ಕೆ. ಫ್ಲೊ:**— ವಿಶೇಷವಾಗಿ ಕೈ ಹಾಗು ಗುದದ್ವಾರಗಳು ಸೀಳುತ್ತವೆ. ತೊಗಲು ದಪ್ಪಾಗುತ್ತದೆ, ಹುರಬರಕಾಗುತ್ತದೆ, ಮತ್ತು ನೋಯುತ್ತದೆ. ಇಸಬು ಆಗುತ್ತದೆ. ರಾತ್ರಿಯಲ್ಲಿ ನೆಟ್ಟಗಿರುತ್ತದೆ. ಆದರೆ ತಂಪು ಹವೆಯಲ್ಲಿ ಹೆಚ್ಚಾಗುತ್ತದೆ. ಇಸಬಿನ ಸ್ಥಳವು ಕೆಂಪಗೆ ಅಥವಾ ಕರ್ರಗೆ ಇರುತ್ತದೆ. ಮೂಲವ್ಯಾಧಿಯಿಂದ ಗುದದ್ವಾರದಲ್ಲಿ ಬಹಳ ತಿಂಡಿಯಿಡುತ್ತದೆ. ಈ ಔಷಧವನ್ನು ವ್ಯಾಸೆಲಿನದಲ್ಲಿ ಅರೆದು ಹೊರಗಿನಿಂದ ಹಚ್ಚಬೇಕು.

**ಉಪಯುಕ್ತ ಸೂಚನೆ:**— ಹೊಟ್ಟೆಯಲ್ಲಿ ಕೊಡತಕ್ಕ (೨× ಅಥವಾ ೩ × ಶಕ್ತಿಯ ) ಔಷಧವನ್ನು ಬೆಣ್ಣೆಯಲ್ಲಿಯಾಗಲಿ ವ್ಯಾಸೆಲಿನದಲ್ಲಿಯಾಗಲಿ ಅರೆದು ಅದನ್ನು ಕಜ್ಜಿ, ಇಸಬು ಮುಂತಾದವುಗಳಿಗೆ ಹಚ್ಚಬೇಕು. ಅದರಿಂದ ತೊಗಲು ಮೆತ್ತಗಾಗುವದು; ತಿಂಡಿಯೂ ಕಡಿಮೆಯಾಗುವದು. ಬರೇ ನೀರಿನಿಂದಾಗಲಿ ಅರಿವೆಗೆ ಹಚ್ಚುವ ಸಬಕಾರದಿಂದಾಗಲಿ ಕಜ್ಜಿಯನ್ನು ಸ್ವಚ್ಛವಾಗಿ ತೊಳೆಯಬೇಕು. ಕ್ಯಾರಬಾಲಿಕ್ ಸೋಪದಂಥ ಕ್ಷೋಭಕಾರಕ ಪದಾರ್ಥಗಳ ಉಪಯೋಗ ಮಾಡಬಾರದು. ಮೇಲೆ ಹೇಳಿದ ಮೇರೆಗೆ ಔಷಧಗಳ ಯೋಜನೆಯನ್ನು ಸರಿಯಾಗಿ ಮಾಡಿದರೆ ಎಲ್ಲ ತರದ ತ್ವಗ್ರೋಗಗಳು ನೆಟ್ಟಗಾಗುವವು.

“ಸ್ರಾವ” ವೆಂಬ ವಿವರ ನೋಡಿರಿ.

---

# ದಮ್ಮು

**Asthma.** ಅಸ್ಥಮಾ.

ದಮ್ಮು ಶ್ವಸನೇಂದ್ರಿಯದ ರೋಗವು. ಉಸುರಾಡಿಸುವ ಕೆಲಸವು ಉಗುಬಗೆಯಿಂದಲೂ ಆಯಾಸದಿಂದಲೂ ನಡೆಯುವದೇ ದಮ್ಮು. ಉಸುರನ್ನು ಒಳಗೆ ಎಳೆಯುವದು ಮತ್ತು ಅದನ್ನು ಹೊರಗೆ ಬಿಡುವದು ಹೀಗೆ ಶ್ವಸನಕ್ರಿಯೆಯ ಎರಡು ಅಂಗಗಳಿವೆ. ದಮ್ಮಿನಲ್ಲಿ ಉಸುರನ್ನು ಹೊರಗೆ ಬಿಡುವ ಕೆಲಸವು ಬಹಳ ಹೊತ್ತು ಸಾಗುವದು; ಆದರೆ ಅದನ್ನು ಒಳಗೆ ಎಳೆಯುವ ಕೆಲಸವು ಮಾತ್ರ ಬೇಗನೆ ಮುಗಿಯುವದು. ಹೀಗಾಗಿ ಮೇಲಿಂದ ಮೇಲೆ ಉಬ್ಬಸ ಬರುವದೇ ದಮ್ಮು. ಹೃದಯದ ರೋಗದಲ್ಲಿಯೂ ಶ್ವಸನೇಂದ್ರಿಯದ ರೋಗದಲ್ಲಿಯೂ ಈ ಭಾವನೆಯು ಕಂಡುಬರುವದು. ಕೆಲವು ಜನರಲ್ಲಿ ದಮ್ಮಿನ ರೋಗವು ಆನುವಂಶಿಕವಾಗಿರುವದು. ಎಲ್ಲ ವಯಸ್ಸಿನ ಸ್ತ್ರೀಪುರುಷರಿಗೂ ಅದು ಬರುವದು. ತರುಣ ವಯಸ್ಸಿಗಿಂತ ಮುಪ್ಪಿನಲ್ಲಿ ಅದು ಹೆಚ್ಚಾಗಿ ಕಂಡುಬರುವದು. ದಮ್ಮಿನ ಉಬ್ಬಸವು ಒಮ್ಮಿಂದೊಮ್ಮೆ ಬರುವದು. ರಾತ್ರಿಯಲ್ಲಿ ಅದು ಹೆಚ್ಚಾಗುವದು. ಆಗ ಉಸುರು ಕಟ್ಟಿದಂತೆ ಆಗುವದು. ಉಸುರನ್ನು ಒಳತನಕ ಎಳೆಯಬೇಕೆಂದು ಅನಿಸುವದು. ಉಸುರಾಡಿಸುವ ಕಾಲಕ್ಕೆ ಉಪಯೋಗವಾಗುವಂಥ ಎಲ್ಲ ಸ್ನಾಯುಗಳಿಗೆ ಒಮ್ಮೆಲೆ ಜೋರಿನಿಂದ ಕೆಲಸ ಮಾಡಬೇಕಾಗುವದು. ಮಲಗಲಿಕ್ಕೆ ಆಗುವದಿಲ್ಲ. ರೋಗಿಯು ಕುಳಿತುಕೊಂಡೇ ಇರುವನು. ಆತನು ತನ್ನ ತಲೆಯನ್ನು ಹಿಂದಕ್ಕೆ ಚೆಲ್ಲುವನು; ಇಲ್ಲವೆ ಮುಂದೆ ಲೋಡಿನ ಮೇಲೆ ಇಡುವನು. ಆತನ ಶ್ವಾಸೋಚ್ಛ್ವಾಸವು ಆಯಾಸದಿಂದಲೂ ಜೋರಿನಿಂದಲೂ ನಡೆಯುತ್ತದೆ. ಎದೆಯು ಬಿಗಿದು ಕಟ್ಟಿದಂತೆ ಅನಿಸುತ್ತದೆ. ಎದೆಯಲ್ಲಿ ಸೂಂ ಸೂಂ ಎಂದಾಗಲೀ ಘುರ್ ಘುರ್ ಎಂದಾಗಲಿ ಸಪ್ಪಳಾಗುವದು. ಕಿಡಿಕಿ ಬಾಗಿಲುಗಳನ್ನೆಲ್ಲ ತೆರೆದಿಟ್ಟು ಗಾಳಿಯ ಕಡೆಗೆ ಮೋರೆ ಮಾಡಿ ಕೂಡಬೇಕೆನಿಸುವದು. ಮುಖವು ಕಳೆಗುಂದಿ ಕಪ್ಪು ಅಥವಾ ನೀಲಿಯಾಗುವದು. ರೋಗಿಯು ಹೆದರಿದವನಂತೆಯೂ ಚಿಂತೆಯಲ್ಲಿ ಮುಳುಗಿದವನಂತೆಯೂ ಕಾಣುವನು.

ಶ್ರಮದಿಂದ ಹಣೆಯ ಮೇಲೆ ತಣ್ಣಗೆ ಬೆವರು ಬರುವದು. ಕೈಕಾಲು ತಣ್ಣಗಾಗುವವು; ನಾಡಿಯು ಬೇಗನೆ ಹಾರುವದು; ಬಾಯಿ ತೆರೆದಿರುವದು; ಕೆಮ್ಮು ಬರುವದು; ಮತ್ತು ಕಫವೂ ಬೀಳುವದು.

ಉಗ್ರ ವಾಸವಿರುವ ಪದಾರ್ಥ, ತಂಬಾಕ ತಿನ್ನುವದು ಅಥವಾ ಸೇದುವದು, ಧೂಳಿ ಹಾರುವದು, ಊಟದಲ್ಲಿ ಅನಿಯಮಿತತನ, ಅಪಚನ ವಾಗುವದು, ಹೆಚ್ಚು ಶ್ರಮ ಮಾಡುವದು, ಮನಸ್ಸಿಗೆ ತ್ರಾಸವಾಗುವದು, ಮುಟ್ಟು ಮೊದಲಾದ ನಿಯಮಿತ ಕ್ರಮವು ಒಮ್ಮಿಂದೊಮ್ಮೆ ನಿಲ್ಲುವದು, ಹವೆಯಲ್ಲಿ ಹೆಚ್ಚು ಕಡಿಮೆಯಾಗುವದು ಮುಂತಾದ ಕಾರಣಗಳಿಂದ ದಮ್ಮಿನ ಉಬ್ಬಸವು ಬರುವದುಂಟು. ದಮ್ಮು ಯಾವದೇ ಋತುವಿನಲ್ಲಿ ಉಂಟಾಗಬಹುದು. ದಮ್ಮಿನ ಬೇನೆಯಲ್ಲಿ ಶ್ವಾಸನಲಿಕೆಯು ಸಣ್ಣಾಗುವದು; ಆದುದರಿಂದಲೇ ಉಸುರು ಒಳಗೆ ಹೋಗುವಾಗ ಒಂದು ತರದ ಸಪ್ಪಳಾಗುವದು.

ಶರೀರದಲ್ಲಿ ಕೆಲವು ಕ್ಷಾರಗಳು ಕಡಿಮೆಯಾಗಿ, ನಿಷ್ಕ್ರಿಯವೂ ತ್ಯಾಜ್ಯವೂ ಆದ ಸೇಂದ್ರಿಯ ಪದಾರ್ಥಗಳು ಹೊರಗೆ ಹೋಗದೆ ಶ್ವಾಸನಲಿಕೆಯಲ್ಲಿಯೇ ಉಳಿಯುತ್ತವೆ; ಮತ್ತು ಅಲ್ಲಿಯ ಸ್ನಾಯುಗಳಲ್ಲಿ ಒರಟಿಗಳನ್ನು ಉತ್ಪನ್ನ ಮಾಡುತ್ತವೆ. ಈ ಸ್ನಾಯುಗಳಲ್ಲಿ ಸ್ಥಿತಿಸ್ಥಾಪಕತೆಯ ಗುಣವುಳ್ಳ ತಂತುಗಳು ಕಡಿಮೆಯಾಗಿರುವವು; ಆದ್ದರಿಂದ ಶ್ವಾಸನಲಿಕೆಯು ಪ್ರಸರಣವಾಗುವದಿಲ್ಲ ( ಅದು ಹಿಗ್ಗುವದಿಲ್ಲ ); ಅಂತೆಯೇ ಸಲಿಕೆಗಳ ಬಾಯಿಗಳು ಸಣ್ಣವಾಗಿ ಉಸುರಾಡಿಸಲಿಕ್ಕೆ ತೊಂದರೆಯಾಗುತ್ತದೆ ಎಂದು ಜೀವನ ರಸಾಯನ ಶಾಸ್ತ್ರಕಾರರ ಮತವಿದೆ.

**ಕಾ. ಫಾ:**— ಶ್ವಾಸದ ಮುಖ್ಯ ಔಷಧವು. ೩ × ಅಥವಾ ೨ × ಶಕ್ತಿಯ ಔಷಧವನ್ನು ಮೇಲಿಂದ ಮೇಲೆ ಹೆಚ್ಚು ಪ್ರಮಾಣದಲ್ಲಿ ಕೊಡಬೇಕು. ಸ್ವಲ್ಪ ಊಟ ಮಾಡಿದರೂ ರೋಗವು ಹೆಚ್ಚಾಗುವದು. ಶಾರೀರಿಕ ಹಾಗು ಮಾನಸಿಕ ದುರ್ಬಲತೆ ಇರುವದು. ಬೇನೆಯ ಜೋರು ಹೆಚ್ಚಾದಾಗ ಐದೈದು ಇಲ್ಲವೆ ಹತ್ತು ಹತ್ತು ಮಿನಿಟಿಗೊಮ್ಮೆ ಈ ಔಷಧವನ್ನು ದೊಡ್ಡ ಪ್ರಮಾಣದಲ್ಲಿ ಒಂದೇಸವನೆ ಕೊಡುತ್ತಿರಬೇಕು.

**ಕಾ. ಮೂ:**— ಪಚನಶಕ್ತಿಯು ಕೆಟ್ಟಿರುವದು; ನಾಲಿಗೆಯು ಬೆಳ್ಳಗಿರುವದು; ಯಕೃತ ಶೈಥಿಲ್ಯವಾಗುವದು; ಹೊಟ್ಟೆಯು ಜಡವಾಗುವದು. ಕಫವು ದಟ್ಟಾಗಿಯೂ ಬೆಳ್ಳಗಾಗಿಯೂ ಜಿಗಟಾಗಿಯೂ ಬೀಳುವದು; ಅದು ಸಡಿಲಾಗಲಿಕ್ಕೆ ತ್ರಾಸವಾಗುವದು. ಎದೆಯಲ್ಲಿಯೂ ಪುಪ್ಪುಸದಲ್ಲಿಯೂ ಬಿಗಿದಂತಾಗುವದು. ಶ್ವಾಸಕ್ಕಾಗಿ ಇದನ್ನೂ ಕಾಲೀಫಾಸವನ್ನೂ ಅದಲುಬದಲು ಮಾಡಿ ಕೊಡಬೇಕು.

**ಮ್ಯಾ. ಫಾ:**— ಹೊಟ್ಟೆಯೊಳಗೆ ವಾಯು ತುಂಬುವದು; ಅದರಿಂದ ಬಹಳ ತ್ರಾಸವಾಗುವದು. ಎದೆಯು ಬಿಗಿದಂತೆ ಭಾಸವಾಗುತ್ತದೆ. ಗಂಟಲಿನಲ್ಲಿ ತುರಿಸಿದಂತಾಗಿ ಒಂದೇಸವನೆ ನಿಂತು ನಿಂತು ಕೆಮ್ಮು ಬರುವದು. ಮಲಗಿಕೊಂಡರೆ ಹೆಚ್ಚು ತ್ರಾಸವಾಗುವದು.

**ನೇ. ಮೂ:**— ಸ್ವಚ್ಛವಾದ ಬುರುಗುಳ್ಳ ಶ್ಲೇಷ್ಮಲ ಕಫವು ಬೀಳುವದು. ಕೆಮ್ಮುವಾಗ ಕಣ್ಣಿನಿಂದಲೂ ಮೂಗಿನಿಂದಲೂ ಒಂದೇಸವನೆ ನೀರು ಸೋರುವದು. ಪ್ರತಿಯೊಂದು ಸಾರೆ ಉಸಿರನ್ನು ಒಳಗೆ ಎಳೆಯುವಾಗ ಒಮ್ಮೆಲೆ ತಟ್ಟಿಸುವದು. ಈ ಔಷಧವನ್ನೂ ಕಾಲೀಫಾಸವನ್ನೂ ಅದಲುಬದಲು ಮಾಡಿ ಕೊಡಬೇಕು.

**ನೇ. ಸ:**— ಪಿತ್ತಪ್ರಕೃತಿಯ ತರುಣ ರೋಗಿಗಳಿಗೆ ತಂಪು ಹವೆಯಿಂದಲೂ ಅಪಚನದಿಂದಲೂ ದಮ್ಮಿನ ಬೇನೆಯು ಹೆಚ್ಚಾಗುವದು. ನಾಲಿಗೆಯ ಹಿಂಭಾಗದಲ್ಲಿ ಹಸರು, ಹಳದೀ ಅಥವಾ ಕೆಂಪು ಬಣ್ಣದ ಹೊಲಸು ಬೂರಸವು ಕೂಡುತ್ತದೆ. ಕಫವು ಬಹಳ ಬೀಳುತ್ತದೆ; ಅದು ಹಸರು ಬಣ್ಣದ ಕೀವಿನಂತೆ ಇರುತ್ತದೆ. ಬಾಯಿ ಕಹಿಯಾಗುತ್ತದೆ. ಮುಂಜಾವಿನಲ್ಲಿ ಹೊಟ್ಟೆ ಜಾಡಿಸುತ್ತದೆ. ನಸುಕಿನಲ್ಲಿ ನಾಲ್ಕರಿಂದ ಐದರವರೆಗೆ ದಮ್ಮಿನ ಉಬ್ಬಸಗಳು ಬರುತ್ತವೆ. ಚಿಕ್ಕ ಮಕ್ಕಳಿಗೆ ದಮ್ಮು ಬರುತ್ತದೆ. ೩ × ಮತ್ತು ೨೦೦ × ಶಕ್ತಿಯ ಔಷಧವನ್ನು ಕೊಡಬೇಕು.

**ಕಾ. ಸ:**— ಕಫವು ಸುಲಭವಾಗಿ ಸಡಿಲಾಗುವದು; ಹಳದೀ ಬಣ್ಣದ ಲೊಟ್ಟೆಗಳು ಬೀಳುವವು. ಕೋಣೆಯೊಳಗೂ, ಸಾಯಂಕಾಲದಲ್ಲಿಯೂ, ಉಷ್ಣಹವೆಯಲ್ಲಿಯೂ ಮತ್ತು ಬೇಸಿಗೆ ಕಾಲದಲ್ಲಿಯೂ ಬೇನೆಯು ಹೆಚ್ಚಾ

ಗುವದು. ತಂಪು ಹವೆಯಲ್ಲಿ ನೆಟ್ಟಗೆನಿಸುತ್ತದೆ. ಗಂಟಲಿನಲ್ಲಿ ಘುರ್‌ಘುರ್ ಸಪ್ಪಳಾಗುವದು. ಊಟವಾದ ನಂತರ ದಮ್ಮಿನ ಉಬ್ಬಸವು ಬರುತ್ತಿದ್ದರೆ ಮತ್ತು ರೋಗಿಯು ದಿನದಿನಕ್ಕೆ ಅಶಕ್ತನಾಗುತ್ತ ನಡೆದಿದ್ದರೆ ಇದರಿಂದ ವಿಶೇಷ ಉಪಯೋಗವಾಗುವದು. ಕಣ್ಣುಗಳು ಒಳಸೆಟ್ಟಂತೆ ಆಗುವವು. ೩ × ಶಕ್ತಿಯ ಔಷಧವನ್ನು ಕೊಡಬೇಕು.

**ಕಲ್ಕೆ. ಫಾ:—** ಕೂಸುಗಳಿಗೆ ದಮ್ಮು ಬರುವದು. ಕಫವು ತೆಳ್ಳಗೆ, ಜಿಗಟು, ಹಳದೀ ಮತ್ತು ಸ್ವಚ್ಛವಾಗಿ ಬೀಳುತ್ತದೆ. ತೊಟ್ಟಿಲಿನೊಳಗಿಂದ ಎತ್ತಿಕೊಳ್ಳುವಾಗ ಕೂಸುಗಳಿಗೆ ಉಸುರುಕಟ್ಟಿದಂತೆ ಆಗುತ್ತದೆ. ಬೇರೆ ಔಷಧವನ್ನು ಕೊಡುತ್ತಿರುವಾಗ ಇದನ್ನು ನಡುನಡುವೆ ಕೊಡಬೇಕು.

**ಸಿ:—** ಉಸುರಾಡಿಸಲಿಕ್ಕೆ ಬಹಳೇ ಆಯಾಸವಾಗುತ್ತದೆ. ದಮ್ಮು ಬಹಳ ಬರುತ್ತದೆ. ಯಾವಾಗಲೂ ಬಯಲು ಹವೆಯಲ್ಲಿಯೇ ಇರಬೇಕು. ಶ್ವಾಸದ ಸಲುವಾಗಿ ಇದರ ಸಂಗಡ ಕಾಲೀಫಾಸವನ್ನು ಕೊಡಬೇಕು. ರೋಗವನ್ನು ನಿರ್ಮೂಲಮಾಡುವ ಪ್ರಾಕೃತಿಕ ಉಪಾಯವೆಂದು ಈ ಔಷಧವನ್ನು ನೇಟ್ರಂ ಸಲ್ಫದ ಕೂಡ ಕೊಡಬೇಕು.

**ಕಲ್ಕೆ. ಫ್ಲೋ:—** ಕಫದ ಹಳದೀ ಬಣ್ಣದ ಲೊಟ್ಟೆಗಳು ಬಹು ಆಯಾಸದಿಂದ ಹೊರಬೀಳುವವು. ಉಸಿರಾಡಿಸಲಿಕ್ಕೂ ತ್ರಾಸವಾಗುವದು. ಕಾಲೀ ಫಾಸವನ್ನೂ ಇದನ್ನೂ ಅದಲುಬದಲು ಮಾಡಿ ಕೊಡಬೇಕು.

**ಉಪಯುಕ್ತ ಸೂಚನೆ:—** ದಮ್ಮಿನ ವಿಕಾರವು ಜೋರಿನಲ್ಲಿರುವಾಗ ಕೈಕಾಲುಗಳನ್ನು ಬಿಸಿನೀರಿನಲ್ಲಿ ಇಟ್ಟುಕೊಂಡು ಕುಳಿತರೆ ಬಹಳ ಸಮಾಧಾನವಾಗುವದು. ಸಕ್ಕರೆ ಅಥವಾ ಹಾಲು ಹಾಕದೆ ಮಾಡಿದ ಬಿಸಿಬಿಸಿ ಕಾಫಿಯನ್ನು ತೆಗೆದುಕೊಂಡರೂ ದಮ್ಮಿನ ವಿಕಾರವು ಕಡಿಮೆಯಾಗುವದು. ಸೋರುಪ್ಪಿನ ಧಾವನ ಜಲದಲ್ಲಿ ಎದ್ದಿ ತೆಗೆದಂಥ ಮೊಳವುದ್ದ ಒತ್ತುಕಾಗದವನ್ನು (ಬ್ಲಾಟಿಂಗ ಪೇಪರ) ದೀಪದ ಮೇಲೆ ಹಿಡಿದು ಅದನ್ನು ಸುಡಬೇಕು; ಆ ಮೇಲೆ ಅದನ್ನು ಮೂಸಿ ನೋಡಬೇಕು. ಇದರಿಂದಲೂ ಒಮ್ಮೊಮ್ಮೆ ನೆಟ್ಟಗೆನಿಸುವದು. ಕಾಲು ಯಾವಾಗಲೂ ಬೆಚ್ಚಗಿರಬೇಕು. ತಣ್ಣಗಿನ ಅಥವಾ ಒದ್ದೆಯಾದ ಬಟ್ಟೆಗಳ ಉಪಯೋಗ ಮಾಡಬಾರದು.

ಹವೆಯಲ್ಲಿ ಒಮ್ಮಿಂದೊಮ್ಮೆ ಬದಲಾವಣೆಯಾಗುವ ಕಾಲಕ್ಕೆ ಹೊರಗೆ ಹೋಗಬಾರದು. ಉಣ್ಣೆಯ ಬಟ್ಟೆಗಳನ್ನು ಹಾಕಬೇಕು; ಮನೆಯೊಳಗೇ ಇರಬೇಕು. ಗಡಿಬಿಡಿಯಿಂದ ನಡೆಯುವದು, ಪಾವಟಿಗೆಗಳನ್ನು ಏರುವದು, ಇವುಗಳನ್ನು ಆದಷ್ಟು ಮಟ್ಟಿಗೆ ಮಾಡಬಾರದು. ಜಡಾನ್ನವನ್ನು ತಿನ್ನುವದೂ ಮಾದಕ ಪದಾರ್ಥಗಳನ್ನು ಸೇವಿಸುವದೂ ಬಿಟ್ಟುಬಿಡಬೇಕು. ಊಟದ ವೇಳೆಗಳನ್ನು ಗೊತ್ತುಪಡಿಸಬೇಕು; ಅವುಗಳನ್ನು ಎಂದಿಗೂ ತಪ್ಪಿಸಬಾರದು. ಹೊಟ್ಟೆಗೆ ತಾಳಲಾರದಷ್ಟು ತಿನ್ನಬಾರದು. ಹಸಿವೆಗಿಂತ ಸ್ವಲ್ಪ ಕಡಿಮೆ ತಿನ್ನಬೇಕು.

---

# ದಾಹ

**Inflamation.** ಇನ್‌ಫ್ಲೆಮೇಶನ್.

ಯಾವ ರೋಗಕ್ಕೆ ಇಂಗ್ಲಿಷ ಭಾಷೆಯಲ್ಲಿ ಇನ್‌ಫ್ಲೆಮೇಶನ್ ಎಂದು ಅನ್ನುವರೋ ಅಂಥ ರೋಗಕ್ಕೆ ನಾವು ದಾಹವೆಂದು ಹೆಸರು ಕೊಟ್ಟಿದ್ದೇವೆ. ಶರೀರದ ಯಾವದೇ ಭಾಗದಲ್ಲಿ ರಕ್ತಸಂಚಯುವಾಗಿ ಅಲ್ಲಿ ಕೆಲವು ಬದಲಾವಣೆಗಳಾಗುತ್ತವೆ. ಅಂಥ ಬದಲಾವಣೆಗೆ ದಾಹವೆನ್ನುತ್ತಾರೆ. ಮೊದಲು ಆ ಭಾಗದ ರಕ್ತವಾಹಿನಿಗಳು ಹಿಗ್ಗುತ್ತವೆ; ಅವುಗಳಲ್ಲಿ ಹೆಚ್ಚು ರಕ್ತವು ಬರುತ್ತದೆ. ಮತ್ತು ಅದು ಜೋರಿನಿಂದ ಹರಿಯತೊಡಗುತ್ತದೆ. ಸ್ವಲ್ಪ ಹೊತ್ತಿನಲ್ಲಿ ಈ ರಕ್ತಪ್ರವಾಹವು ಮಂದವಾಗಿ ಬರಬರುತ್ತ ಅಲ್ಲಿ ರಕ್ತವು ಹರಿಯುವದೇ ನಿಲ್ಲುತ್ತದೆ. ಆ ಮೇಲೆ ಅಲ್ಲಿ ನಿಂತಿರುವ ರಕ್ತವು ಸುತ್ತುಮುತ್ತಲಿನ ಸಿರಗಳೊಳಗಿಂದ ವಿಕೃತಸ್ಥಿತಿಯಲ್ಲಿ ಸೋರಹತ್ತುತ್ತದೆ. ಮೊದಲು ರಕ್ತಸಂಚಯುವಾಗಿ ಅನಂತರ ಸ್ರಾವವು ಹೆಚ್ಚಾಗುವದೇ ದಾಹ ಅಥವಾ ಉರಿ.

ತ್ವಚೆ, ಅಸ್ಥಿ, (ಮಸ್ತಿಷ್ಕ, ಪುಪ್ಪುಸ, ಹೃದಯ, ಜಠರ, ಯಕೃತ, ಕರುಳು, ಮೂತ್ರಪಿಂಡ ಮುಂತಾದ) ಇಂದ್ರಿಯುಗಳು, ಕಲೆಗಳು, ಆವರಣಗಳು, ಮತ್ತು ಬೇರೆ ಅವಯುವಗಳು, ಮುಂತಾದ ಸ್ಥಳಗಳಲ್ಲಿ ಅದು

ಆಗುವದು. ಪೆಟ್ಟುಹತ್ತುವದು, ಸುಡುವದು, ವಿಷಪದಾರ್ಥವನ್ನು ಮುಟ್ಟುವದರಿಂದಲೂ ಅದನ್ನು ತಿನ್ನುವದರಿಂದಲೂ, ಅಥವಾ ದುಷ್ಟ ಜಂತುಗಳ ಕ್ಷೋಭಕಾರಕ ಕೃತಿಯಿಂದಲೂ ಈ ಕೃತಿಯು ಉಂಟಾಗುವದು. ಈ ಜಂತುಗಳನ್ನು ಮೈಯೊಳಗಿಂದ ಹೊರಗೆ ತೆಗೆಯಲಿಕ್ಕೆ ದಾಹವೆಂಬುದು ಪ್ರಕೃತಿಯ ನೈಸರ್ಗಿಕ ಪ್ರಯತ್ನವಿರುತ್ತದೆ. ಅದು ಕೆಲವೊಂದು ದೃಷ್ಟಿಯಿಂದ ಹಿತಕಾರವೂ ಆಹುದು. ದಾಹದ ಸ್ಥಳದಲ್ಲಿ ರಕ್ತಸಂಚಯವಾಗುವದು ಅವಶ್ಯವೇ ಸರಿ. ದಾಹವಾಗುವ ಸ್ಥಳದಲ್ಲಿ ಊಷ್ಣತೆ, ಕೆಂಪಾಗುವದು, ನೋವು, ಬಾವು ಇವು ಮುಖ್ಯ ಲಕ್ಷಣಗಳು. ದಾಹವಿದ್ದ ಭಾಗದಲ್ಲಿ ಈ ಹೊಸ ಪರಿಸ್ಥಿತಿಯಿಂದ ಅಲ್ಲಿಯ ಸ್ವಾಭಾವಿಕ ಕಾರ್ಯಕ್ಕೆ ವ್ಯತ್ಯಯ ಉಂಟಾಗುತ್ತದೆ; ಹಾಗು ಸ್ವಾಸಪರತ್ವದಿಂಡ ಬೇರೆಬೇರೆ ಭಾವನೆಗಳು ಕಂಡುಬರುತ್ತವೆ. ಆದರೆ ಮೇಲೆ ಹೇಳಿದ ನಾಲ್ಕು ಭಾವನೆಗಳು (ಉಷ್ಣತೆ, ಕೆಂಪಾಗುವದು, ನೋವು, ಬಾವು) ಹೆಚ್ಚುಕಡಿಮೆ ಪ್ರಮಾಣದಲ್ಲಿ ಇದ್ದೇ ಇರುತ್ತವೆ. ಜ್ವರವು ಮತ್ತು ಅದರ ಆನುಷಂಗಿಕವಾದ ಬೇರೆ ಭಾವನೆಗಳೂ (ಕ್ಷುಧಾನಾಶ, ಮೂತ್ರವು ಕೆಂಪಾಗುವದು, ನೀರಡಿಕೆ ಮುಂತಾದವುಗಳೂ) ಕಂಡುಬರುತ್ತವೆ. ದಾಹದಲ್ಲಿ ಮೂರು ಅವಸ್ಥೆಗಳು ಇರುತ್ತವೆ. ಮೊದಲನೆಯ ಅವಸ್ಥೆಯಲ್ಲಿ ರಕ್ತಸಂಚಯವೂ ಮತ್ತು ಮೇಲೆ ಹೇಳಿದ ನಾಲ್ಕು ಭಾವನೆಗಳೂ ಮುಖ್ಯವಾಗಿರುತ್ತವೆ. ಸರಿಯಾದ ಕಾಲಕ್ಕೆ ಉಪಚಾರಮಾಡಿ ಅದು ನೆಟ್ಟಗಾಗದಿದ್ದರೆ, ಅಲ್ಲಿ ಕೂಡಿರುವ ರಕ್ತವೇ ಮುಂದೆ ವಿಕೃತಸ್ಥಿತಿಯಲ್ಲಿ ಸೋರಹತ್ತುತ್ತದೆ. ಇಂಥ ಪರಿಸ್ಥಿತಿಗೆ ದ್ವಿತೀಯಾವಸ್ಥೆಯೆಂತಲೂ ಸ್ರಾವಾವಸ್ಥೆಯೆಂತಲೂ ಅನ್ನುತ್ತಾರೆ. ಈ ಅವಸ್ಥೆಯಲ್ಲಿ ಯೋಗ್ಯ ಉಪಚಾರಮಾಡಿದರೆ ಸ್ರಾವವು ಹೀರಲ್ಪಟ್ಟು ಬೇನೆಯು ನೆಟ್ಟಗಾಗುತ್ತದೆ. ಇಲ್ಲದಿದ್ದರೆ ಇದೇ ಸ್ರಾವವು ಗಟ್ಟಿಯಾಗಿ, ಅದಕ್ಕೆ ಹಳದೀ ಒಣ್ಣವು ಬಂದು, ಕೊನೆಗೆ ಕೀವು ಆಗುತ್ತದೆ. ಇದೇ ತೃತೀಯಾವಸ್ಥೆ; ಅಥವಾ ಪೂಯಾವಸ್ಥೆ.

ಸಾಧಾರಣವಾಗಿ ವೇದನೆಯ ಸ್ವರೂಪದ ಮೇಲಿಂದಲೇ ಯಾವ ಭಾಗದಲ್ಲಿ ದಾಹವಿರುವದೆಂಬದನ್ನು ತಿಳಿದುಕೊಳ್ಳಲಿಕ್ಕೆ ಬರುತ್ತದೆ. ಶ್ಲೇಷ್ಮಲ

ತ್ವಚೆಯ ದಾಹದಲ್ಲಿ ಉರುವೂ ವೇದನೆಯೂ ಇರುತ್ತದೆ. ಪೊಳ್ಳಿನ ಮೇಲಿನ ಆವರಣದ ದಾಹದಲ್ಲಿ ಚುಚ್ಚಿದಂತೆಯೂ ಇರಿದಂತೆಯೂ ವೇದನೆ ಯಾಗುತ್ತದೆ. ವೇದನೆಯು ರಾತ್ರಿಯಲ್ಲಿ ಹೆಚ್ಚಾಗುವದು. ಅದು ಒಂದೇ ಸವನೆ ಆಗುವದು, ಮತ್ತು ಒಳತನಕ ಹೋಗುವಂತೆ ಅನಿಸುವದು, ಇವು ಅಸ್ಥಿದಾಹದ ಲಕ್ಷಣಗಳು. ಒಂದೇಸವನೆ ನೋಯುತ್ತಿದ್ದು ಹಾರುವಂತೆ ಭಾವನೆಯಾಗುತ್ತಿದ್ದರೆ, ಅದು ಕೀವಾಗುವ ಲಕ್ಷಣವು. ದಾಹದ ಸ್ಥಳದಲ್ಲಿ ಮಾತ್ರ ವೇದನೆಯಾಗುತ್ತದಂತಲ್ಲ. ಆ ಸ್ಥಳದಲ್ಲಿಯ ನಾಡಿಗಳಿಗೂ ಬೇರೆ ನಾಡಿಗಳಿಗೂ ಇರುವ ಸಂಬಂಧಕ್ಕೆ ಅನುಸಾರವಾಗಿ ದೂರದೂರದ ಭಾಗದಲ್ಲಿಯೂ ವೇದನೆಗಳು ಕಂಡುಬರುತ್ತವೆ.

ದಾಹವು ಯಾವ ಭಾಗದಲ್ಲಿದ್ದರೂ ಅದರಿಂದ ಹನ್ನೆರಡು ಕ್ಷಾರ ಔಷಧಗಳ ಚಿಕಿತ್ಸೆಯಲ್ಲಿ ವಿಶೇಷ ಹೆಚ್ಚುಕಡಿಮೆಯಾಗುವದಿಲ್ಲ.

**ಫೇ. ಫಾ:—** ದಾಹದ ಪ್ರಥಮಾವಸ್ಥೆಯಲ್ಲಿ ಇದು ಮುಖ್ಯ ಔಷಧವು. ದಾಹವು ಯಾವ ಭಾಗದಲ್ಲಿ ಇದ್ದರೂ ಈ ಔಷಧದ ಉಪಯೋಗವಾಗುವದು. ಸ್ರಾವವು ಆರಂಭವಾಗುವದಕ್ಕಿಂತ ಮುಂಚೆ ಇದರ ಉಪಯೋಗ ಮಾಡಬೇಕು. ಊಷ್ಣತೆ, ಕೆಂಪಾಗುವದು, ಜ್ವರ, ವೇದನೆ ಮುಂತಾದವು ಈ ಔಷಧದ ಭಾವನೆಗಳು. ಇದನ್ನು ಹೊಟ್ಟೆ ಯೊಳಗೂ ಕೊಡಬೇಕು; ಹೊರಗಿನಿಂದಲೂ ಹಚ್ಚಬೇಕು.

**ಕಾ. ಮೂ:—** ದ್ವಿತೀಯಾವಸ್ಥೆ ಅಥವಾ ಸ್ರಾವಾವಸ್ಥೆ. ಫೇರಂ ಫಾಸದ ಸಂಗಡ ಅಥವಾ ಅದರ ನಂತರ ಕೊಡಬೇಕು. ಬಾವು ಇರುವದು. ಬಿಳೇ ಬಣ್ಣದ ಅಪಾರದರ್ಶಕ ಸ್ರಾವವಿರುವದು.

**ಕಾ. ಸ:—** ತೃತೀಯಾವಸ್ಥೆ. ಜಿಗಟು, ಹಳದೀ, ಸ್ರಾವವಿರುವದು. ದಾಹಜನ್ಯ ಜ್ವರದಲ್ಲಿ ಬೆವರು ಬರಲಿಕ್ಕೆಂದು ಫೇರಂಫಾಸದ ಸಂಗಡ ಕೊಡಬೇಕು.

**ಕಲ್ಕೆ. ಸ:—** ತೃತೀಯಾವಸ್ಥೆ. ದಟ್ಟಾದ ಹಳದೀ ಕೀವು ಸೋರುತ್ತದೆ. ಅದು ಒಮ್ಮೊಮ್ಮೆ ರಕ್ತಮಿಶ್ರಿತವಿರುತ್ತದೆ.

**ಸಿ:—** ಕೀವು ಆಗಹತ್ತಿದ ಬಳಿಕ ಇದನ್ನು ಕೊಡಬೇಕು. ಅಶಕ್ತ ಪ್ರಕೃತಿಯ ರೋಗಿಗಳಿಗೆ ಇದರಿಂದ ವಿಶೇಷ ಉಪಯೋಗವಾಗುವದು..

**ನೇ. ಮೂ:—** ಪ್ರಥಮಾವಸ್ಥೆಯಲ್ಲಿ ಫೇರಂ ಫಾಸದಿಂದ ಗುಣವು ಬರದಿದ್ದರೆ ಇದನ್ನು ಕೊಡಬೇಕು. ಈ ಔಷಧವನ್ನು ಫೇರಂ ಫಾಸದ ಸಂಗಡ ಕೊಡಬೇಕು.

**ಉಪಯುಕ್ತ ಸೂಚನೆ:—** ದಾಹವು ಆರಂಭವಾದ ಕೂಡಲೆ ಫೇರಂ ಫಾಸವನ್ನು ಒಂದೇಸವನೆ ಮೇಲಿಂದ ಮೇಲೆ ಕೊಡಬೇಕು. ಬಾಯುಲಿಕ್ಕೂ ಸೋರಲಿಕ್ಕೂ ಆರಂಭವಾಗಿದ್ದರೆ ಫೇರಂ ಫಾಸದ ಸಂಗಡ ಕಾಲೀಮ್ಯೂರವನ್ನೂ ಕೊಡಬೇಕು. ಹೊಟ್ಟೆಯೊಳಗೆ ಕೊಡತಕ್ಕ ಔಷಧಗಳನ್ನೇ ಬಿಸಿನೀರಿನಲ್ಲಿ ಅಥವಾ ತಣ್ಣೀರಿನಲ್ಲಿ ಹಾಕಿ ಹೊರಗಿನಿಂದಲೂ ಹಚ್ಚಬೇಕು. ಫೇರಂ ಫಾಸವನ್ನು ಎಲ್ಲ ಅವಸ್ಥೆಗಳಲ್ಲಿಯೂ ಮುಖ್ಯ ಔಷಧಗಳ ಸಂಗಡ ಕೊಡಲಿಕ್ಕೆ ಅಡ್ಡಿಯಿಲ್ಲ. ಜ್ವರದ ಮನುಷ್ಯನಿಗೆ ಕೊಡತಕ್ಕ ಆಹಾರವನ್ನು ದಾಹದ ಮನುಷ್ಯನಿಗೂ ಕೊಡಬೇಕು. ಬೇರೆ ಬೇರೆ ಇಂದ್ರಿಯುಗಳ ದಾಹದ ಬಗ್ಗೆ ಆಯಾ ಸ್ಥಳಗಳಲ್ಲಿ ಹೇಳಿದ್ದೇವೆ.

---

## ಮೈಲೀಬೇನೆ

**Small-Pox.** ಸ್ಮಾಲ-ಪಾಕ್ಸ.

ಮೈಲಿಯು ಸಾಂಸರ್ಗಿಕ, ಸಂಕ್ರಾಮಿಕ, ಹಾಗು ವಿಸ್ಫೋಟಕ ಜ್ವರವು. ಮಕ್ಕಳಿಗೆ ಆಗುವ ವಿಸ್ಫೋಟಕ ಜ್ವರಗಳಲ್ಲಿ ಇದು ಭಯಂಕರವಾದದ್ದು. ಮೈಲಿಯು ಒಮ್ಮೆ ಬಂದಿತೆಂದರೆ ಅದು ಮತ್ತೊಮ್ಮೆ ಬರುವದಿಲ್ಲ. ಮೈಲಿಯ ರಸವನ್ನು ಮೈಯಲ್ಲಿ ಚುಚ್ಚಿದರೆ ಮೈಲಿಯ ಜ್ವರವು ಬರುವದಿಲ್ಲ. ಮೊದಲು ಜೋರಿನಿಂದ ಚಳಿಯಾಗುತ್ತದೆ ಮತ್ತು ಭರದಿಂದ ಜ್ವರವು ಬರುತ್ತದೆ. ಜ್ವರವು ೧೦೩°-೧೦೪° ಅಂಶದ ವರೆಗೆ ಇರುತ್ತದೆ. ಎರಡನೆಯ ಅಥವಾ ಮೂರನೆಯ ದಿವಸ ಅದು ಮೊದಲಿಗಿಂತ ಹೆಚ್ಚಿಗೆ ಏರುತ್ತ ಏರುತ್ತ ಹೋಗುತ್ತದೆ. ಇದೇ ಕಾಲಕ್ಕೆ ತಲೆ, ಗಂಟಲು

ಮತ್ತು ಮೈಯೆಲ್ಲ ನೋಯುತ್ತದೆ. ಟೊಂಕವು ಅತಿಶಯ ನೋಯುವದೇ ಈ ರೋಗದ ವಿಶೇಷ ಲಕ್ಷಣವಾಗಿದೆ. ಜ್ವರವು ಬಂದಿರುವಾಗ ಒಮ್ಮೊಮ್ಮೆ ಭ್ರಮವಾಗುವದು, ಒರಟೆಗಳೂ ಬರುವವು. ಮೂರು ದಿವಸಗಳಾದ ಬಳಿಕ ತೀರ ಕೆಂಪಾದ ಹುಣ್ಣುಗಳು ಕಾಣಹತ್ತುತ್ತವೆ. ಅವು ಮೊದಲು ಮೋರೆಯ ಮೇಲೆ. ಬಳಿಕ ಎದೆ, ಹೊಟ್ಟೆ ಮತ್ತು ಬೇರೆ ಅವಯವಗಳ ಮೇಲೆ ಏಳಹತ್ತುತ್ತವೆ. ಒಮ್ಮೊಮ್ಮೆ ಜ್ವರವು ಬಾರದೆ ಮೈಲಿಯ ಹುಣ್ಣುಗಳು ಕಾಣಿಸುವವು. ಅವು ಹೆಚ್ಚುಕಡಿಮೆ ಇದ್ದಂತೆ ಬೇನೆಯ ಜೋರು ಹೆಚ್ಚುಕಡಿಮೆ ಇರುವದೆಂದು ತಿಳಿಯಬೇಕು. ಸಾಮ್ಯ ಪ್ರಕಾರದಲ್ಲಿ ಮೈಲಿಯ ಬೊಕ್ಕೆಗಳು ದೂರದೂರಾಗಿ ಏಳುತ್ತವೆ. ಅವು ಒಂದಕ್ಕೊಂದು ಸಮೀಪದಲ್ಲಿ ಇದ್ದರೆ, ಹೊಂದಿ ಇದ್ದರೆ, ಅಥವಾ ಕೂಡಿ ಇದ್ದರೆ, ರೋಗದ ಸ್ವರೂಪವು ಉಗ್ರವಾಗಿದೆಯೆಂದು ತಿಳಿಯಬೇಕು. ಬೊಕ್ಕೆಗಳು ಆದ ಮರುದಿವಸ ಅವುಗಳ ಮೇಲೆ ಬಿಳೇ ಹುಣ್ಣು ಆಗುತ್ತವೆ. ಅವಕ್ಕೆ ತಿಂಡಿ ಬಿಡುತ್ತದೆ; ತುರಿಸಿಕೊಂಡರೆ ರಕ್ತವು ಬರುತ್ತದೆ. ಸ್ವಲ್ಪ ಹೊತ್ತಿನಲ್ಲಿಯೆ ಆ ರಕ್ತದಲ್ಲಿ ಹಾಲಿನಂಥ ಬಿಳಿಯ ನೀರು ಇರುವದೆಂದು ಕಾಣಬರುವದು. ಹುಣ್ಣುಗಳ ನಡುವೆ ತಗ್ಗುಗಳು ಬೀಳುತ್ತವೆ. ಒಂದೆರಡು ದಿವಸಗಳ ನಂತರ ಹುಣ್ಣಿನೊಳಗಿನ ನೀರು ಕೀವಾಗುತ್ತದೆ. ಮತ್ತೆ ಎರಡು ದಿವಸಗಳಾದ ಬಳಿಕ ಕೆಂಪು ಭಾಗವು ಕಪ್ಪಾಗುತ್ತದೆ. ಮೈಲಿಯ ಹುಣ್ಣುಗಳು ಒಣಗುತ್ತವೆ ಅಥವಾ ಒಡೆಯುತ್ತವೆ. ನಾಲ್ಕೈದು ದಿವಸಗಳಲ್ಲಿ ಅವಕ್ಕೆ ಹಕಳಿಗಟ್ಟುತ್ತದೆ. ಕೀವು ಆದನಂತರ ರೋಗಿಯ ಮೈಗೆ ವಿಲಕ್ಷಣವಾದ ಹೊಲಸು ನಾತವು ಬರುತ್ತದೆ. ಹಕಳಿ ಕಟ್ಟಿದ ಸ್ಥಳದಲ್ಲಿ ಕಲೆ ಬೀಳುತ್ತವೆ. ಅದರಿಂದ ಮುಖವು ಚಂದ ಕಾಣಿಸುವದಿಲ್ಲ. ಮೈಲೀಬೇನೆಯು ಬಂದದ್ದರಿಂದ ಕೂಸುಗಳ ಕಣ್ಣುಗಳೇ ಕುರುಡಾಗುತ್ತವೆ, ಇಲ್ಲವೆ ಕಣ್ಣಲ್ಲಿ ಹೂ ಬೀಳುತ್ತದೆ. ಹುಣ್ಣುಗಳಾಗಿ ಹಕಳಿಗಟ್ಟಲಿಕ್ಕೆ ಸಾಧಾರಣವಾಗಿ ಒಂಬತ್ತು ದಿವಸಗಳು ಬೇಕಾಗುತ್ತವೆ. ಬಕ್ಕೆಗಳು ಒಂದಕ್ಕೊಂದು ಹತ್ತಿ ಇಲ್ಲವೆ ಒಂದರ ಮೇಲೊಂದು ಆಗುವದು ಉಗ್ರ ಪ್ರಕಾರವೆಂದು ಮೇಲೆ ಹೇಳಿದ್ದೇವೆ. ಗಂಟಲಿನಲ್ಲಿಯೂ ನಾಲಿಗೆಯ ಮೇಲೆಯೂ ಬೊಕ್ಕೆಗಳಾಗಿ ಅನ್ನ ನುಂಗುವದು ಕೂಡ ಕಠಿಣವಾಗುತ್ತದೆ. ಬೊಕ್ಕೆಗಳು ಏಳುವಾಗ

ಜ್ವರವು ಕಡಿಮೆಯಾಗುತ್ತದೆ. ಕೀವು ಆಗುವಾಗ ಅದು ಮತ್ತೆ ಹೆಚ್ಚಾಗುತ್ತದೆ. ಮೈಲಿಯು ಉಗ್ರ ಸ್ವರೂಪದ್ದಿದ್ದರೆ ರೋಗಿಯು ಸಾಯುವ ಹೆದರಿಕೆ ಇರುತ್ತದೆ. ರೋಗಿಗಳು ಸಾಮಾನ್ಯವಾಗಿ ೮ ರಿಂದ ೧೧ ದಿವಸಗಳಲ್ಲಿ ಸಾಯುತ್ತಾರೆ. ಸಂಯುಕ್ತ ಮೈಲಿಯ ರೋಗಿಯು ನೆಟ್ಟಗಾದರೂ ಆತನು ಕಡೆತನಕ ಕುರುಡನಾಗಿಯೂ ಕಿವುಡನಾಗಿಯೂ ಉಳಿಯುವನು.

ಸಣ್ಣ ಹುಡುಗರಿಗೆ ಆಗತಕ್ಕ ವಿಸ್ಫೋಟಕ ಜ್ವರವೆಂದರೆ ಮೈಲಿ. ಗೊಬ್ಬರ, ಗಣಜಲಿ ಇವೇ ಅಹುದು. ಈ ಮೂರೂ ರೋಗಗಳ ಲಕ್ಷಣಗಳನ್ನು ಆಯಾ ವಿವರಗಳ ಕೆಳಗೆ ಹೇಳಿದ್ದೇವೆ. ಅವುಗಳ ವಿಶಿಷ್ಟ ಲಕ್ಷಣಗಳನ್ನು ಇಲ್ಲಿ ಹೇಳುವದು ಅವಶ್ಯವಾಗಿ ಕಾಣುತ್ತದೆ. ಮೂರೂ ರೋಗಗಳೂ ಹುಡುಗರಿಗೇ ಆಗುತ್ತಿದ್ದರೂ ಅವು ಒಮ್ಮೊಮ್ಮೆ ದೊಡ್ಡವರಿಗೂ ಆಗುವವು. ಮನುಷ್ಯನಿಗೆ ಈ ಬೇನೆಗಳು ಒಂದು ಸಾರೆ ಬಂದು ಹೋದರೆ ಆತನಿಗೆ ಅವು ಮತ್ತೊಮ್ಮೆ ಆಗುವದಿಲ್ಲ. ಮೂರೂ ರೋಗಗಳು ಸ್ಪರ್ಶಜನ್ಯವಿರುತ್ತವೆ. ಮೂರೂ ಬೇನೆಗಳಲ್ಲಿ ಮೊದಲು ಜ್ವರ ಬರುತ್ತದೆ ಅನಂತರ ತ್ವಚೆಯ ಮೇಲೆ ಬೊಕ್ಕೆಗಳು ಏಳುತ್ತವೆ. ಜ್ವರವೂ ಬೊಕ್ಕೆಗಳೂ ನಿಶ್ಚಿತವಾದ ಅವಧಿಯ ನಂತರ ನಾಶವಾಗುತ್ತವೆ. ಇವು ಸಾಮ್ಯ ಹೇಳುವ ಲಕ್ಷಣಗಳು. ಇನ್ನು ಭೇದ ಹೇಳುವ ಲಕ್ಷಣಗಳನ್ನು ಕೊಡುತ್ತೇವೆ. ಗೊಬ್ಬರದಲ್ಲಿ ಜ್ವರವು ಬಂದ ಬಳಿಕ ೭೨ ತಾಸುಗಳ ನಂತರ, ಅಂದರೆ ನಾಲ್ಕನೆಯ ದಿವಸ, ಮತ್ತೊಮ್ಮೆ ಜ್ವರವು ಬಂದು ಬಕ್ಕೆಗಳು ಕಾಣಹತ್ತುತ್ತವೆ. ಮುಂದೆ ನಾಲ್ಕನೆಯ ದಿವಸ, ಅಂದರೆ ಆರಂಭದಿಂದ ಏಳನೆಯ ದಿವಸ, ಅವು ನೆಟ್ಟಗಾಗಲಿಕ್ಕೆ ಹತ್ತುತ್ತವೆ. ಮೈಲಿಯಲ್ಲಿ ಜ್ವರವು ಬಂದಬಳಿಕ ೪೮ ತಾಸುಗಳ ನಂತರ, ಅಂದರೆ ಮೂರನೆಯ ದಿವಸ, ಬಕ್ಕೆಗಳು ಕಾಣಹತ್ತುತ್ತವೆ; ಒಂಬತ್ತನೆಯ ಅಥವಾ ಹತ್ತನೆಯ ದಿವಸ ಅವು ಬಾಡಹತ್ತುತ್ತವೆ; ಮತ್ತು ಹದಿನಾಲ್ಕನೆಯ ಅಥವಾ ಹದಿನೈದನೆಯ ದಿವಸ ಹಕಳಿಗಟ್ಟುತ್ತವೆ. ಗಣಜಲಿಯಲ್ಲಿ ೨೪ ತಾಸುಗಳ ನಂತರ, ಅಂದರೆ ಎರಡನೆಯ ದಿವಸ, ಬಕ್ಕೆಗಳು ಕಾಣುತ್ತವೆ; ಮತ್ತು ಅವು ನಾಲ್ಕನೆಯ ದಿವಸ ಬಾಡುತ್ತವೆ. ಟೊಂಕವು ಬಹಳ ನೋಯುವದು ದೇವಿಯ ಲಕ್ಷಣವು. ನೆಗಡಿ ಬರುವದು,

ಮೂಗು ಸೋರುವದು ಗೊಬ್ಬರದ ಲಕ್ಷಣವು. ಇನ್ನುಳಿದ ಎರಡು ಪ್ರಕಾರದ ಜ್ವರಗಳಲ್ಲಿ ಈ ಲಕ್ಷಣಗಳು ಇರುವದಿಲ್ಲ.

**ಫೇ. ಫಾ:**—ಜ್ವರವು ಬರುವದು, ನಾಡಿಯು ಬೇಗನೆ ಹಾರುವದು, ನೀರಡಿಕೆಯಾಗುವದು. ಹೊಟ್ಟೆಯೊಳಗೂ ಬೆನ್ನಿನೊಳಗೂ ಟೊಂಕದೊಳಗೂ ಕಳೆ ಏಳುವದು. ತಲೆ ನೋಯುವದು. ಎದೆಯಮೇಲೆ ಭಾರ ಹೇರಿದಂತಾಗುವದು. ಇದರ ಸಂಗಡ ಕಾಲೀ ಮೂರವನ್ನೂ ಕೊಡಬೇಕು.

**ಕಾ. ಮೂ:**— ಇದು ಮುಖ್ಯ ಔಷಧವು. ಗಂಟುಗಳು ಏಳುವವು ಹಾಗು ಬಾಯುವವು. ಈ ಔಷಧವು ಮೈಲಿಯಲ್ಲಿ ಕೀವು ಆಗಗೊಡುವದಿಲ್ಲ. ಇದನ್ನೂ ಫೇರಂ ಫಾಸವನ್ನೂ ಆದಲುಬದಲು ಮಾಡಿಕೊಡಬೇಕು. ಮೈಲಿಗೆ ಪ್ರತಿಬಂಧವೆಂದು ೩ × ಶಕ್ತಿಯ ಕಾಲೀ ಮೂರವನ್ನು ಕೊಡಬೇಕು. ಮೈಲೀ ಬೇನೆಯ ಪಿಡುಗಿನಲ್ಲಿ ಯಾವ ಯಾವ ಹುಡುಗರಿಗೆ ಕಾಲೀ ಮೂರ ಔಷಧವನ್ನು ಪ್ರತಿಭಂದಕವೆಂದು ಕೊಡಲ್ಪಟ್ಟಿತ್ತೋ ಆಯಾ ಹುಡುಗರಿಗೆ ಮೈಲಿಯ ರೋಗವು ಬರಲಿಲ್ಲವೆಂದು ಲಂಡನದಲ್ಲಿಯ ಡಾಕ್ಟರ ಸಾವುಂಡರ ಸಾಹೇಬರು ಜಾಹೀರ ಮಾಡಿದ್ದಾರೆ.

**ನೇ. ಸ:**— ಪಿತ್ತಪ್ರಕೋಪವಿದ್ದರೆ,

**ಕಾ. ಸ:**— ಹಕಳೆಗಟ್ಟಲಿಕ್ಕೂ ಹೊಸ ತೊಗಲು ಬರಲಿಕ್ಕೂ ಕಾಲೀ ಮೂರದ ನಂತರ ಇದನ್ನು ಕೊಡಬೇಕು.

**ನೇ. ಫಾ:**— ಮೈಲಿಯಲ್ಲಿ ಕೀವಾದ ಬಳಿಕ ಇದನ್ನು ಕೊಡಬೇಕು. ನಾಲಿಗೆಯು ಹಳದಿಯಾಗಿದ್ದು ಬೇರೆ ಪೈತ್ತಿಕ ಭಾವನೆಗಳಿದ್ದರೂ ಇದನ್ನು ಕೊಡಬೇಕು.

**ಕಲ್ಕೆ. ಸ:**— ಬಕ್ಕೆಗಳು ಹಣ್ಣಾದ ಬಳಿಕ ಮತ್ತು ಕೀವು ಸೋರ ಹತ್ತಿದನಂತರ ಇದನ್ನು ಕೊಡಬೇಕು.

**ನೇ. ಮೂ:**— ವಿಕಾರದ ಜೋರು ಕಡಿಮೆಯಿರುವದು. ಕಣ್ಣು ಮುಚ್ಚಿ ಹಾಕುವವು. ಮಾಂದ್ಯವಿರುವದು. ಜೊಲ್ಲು ಸೋರುವದು. ಮೈಲಿಯ ಬಕ್ಕೆಗಳು ಒಂದಕ್ಕೊಂದು ಕೂಡಹತ್ತಿದನಂತರ ನಾಲಿಗೆಯೂ ಬಾಯಿಯೂ ಒಣಗುವದು.

**೫೦. ಫಾ:—** ಮಾನಸಿಕ ಅಸ್ವಸ್ಥತೆ. ಕಣ್ಣು ಮುಚ್ಚಿ ಹಾಕುವದು. ದಣಿವಿಕೆ ಅನಿಸುವದು. ಬಾಯಿ ಹೊಲಸು ನಾರುವದು. ಎಲ್ಲವೂ ಹೊಲಸಾಗುವದು.

**ಕಲ್ಕೆ. ಫಾ:**—ಬೇನೆ ಬಂದಾಗ ಇದನ್ನು ನಡುನಡುವೆ ಕೊಡಬೇಕು. ಆರೋಗ್ಯ ಸ್ಥಾಪನಾವಸ್ಥೆಯಲ್ಲಿ ದಿನಾಲು ಒಂದೇಸವನೆ ಕೊಡುತ್ತಿರಬೇಕು.

## ಮೈಲಿಯನ್ನು ಚುಚ್ಚುವದರಿಂದ ಆಗುವ ದುಷ್ಪರಿಣಾಮಗಳು.

**೫೦. ಮೂ:—** ಮೈಲಿಯನ್ನು ಚುಚ್ಚುವ ಕೆಲಸಕ್ಕೆ ಉಪಯೋಗಿಸುವ ರಸಿಕೆಯು ಕೆಟ್ಟಿದ್ದರೆ ಇಸಬೂ ಬೇರೆ ರೋಗಗಳೂ ಆಗುತ್ತವ. ಅವುಗಳ ದುಷ್ಪರಿಣಾಮದ ಮೇಲೆ ಈ ಔಷಧವನ್ನು ಬಹಳ ದಿವಸಗಳವರೆಗೆ ಕೊಡಬೇಕಾಗುವದು. ಬಾವು ಬಹಳ ಬರುತ್ತದೆ. ಜ್ವರವು ಬರುತ್ತಿದ್ದರೆ ಫೇರಂ ಫಾಸನನ್ನೂ ಇದನ್ನೂ ಅದಲುಬದಲು ಮಾಡಿ ಕೊಡಬೇಕು.

**ಉಪಯುಕ್ತ ಸೂಚನೆ:—** ತಂಪಾದ, ಸ್ವಚ್ಛವಾದ, ಬಯಲು ಹವೆ ಮತ್ತು ಸ್ವಚ್ಛತೆ ಇವುಗಳ ಅವಶ್ಯಕತೆಯು ಬಹಳ ಇರುತ್ತದೆ. ಹುಣ್ಣುಗಳಲ್ಲಿ ಕೀವಾಗುವ ಕಾಲಕ್ಕೆ ಕೋಣೆಯೊಳಗೆ ಆದಷ್ಟು ಮಟ್ಟಿಗೆ ಕತ್ತಲೆ ಇರುವದು ಒಳಿತು. ಅದರಿಂದ ಮೈಲಿಯ ಕಲೆಗಳು ಉಳಿಯುವದಿಲ್ಲವೆಂತಲೂ ಕುರೂಪತನವು ಬರುವದಿಲ್ಲವೆಂತಲೂ ಹೇಳುತ್ತಾರೆ. ಆಹಾರವು ಅಳ್ಳಕಿಸದೂ ಹಗುರಾದದ್ದೂ ಇರಬೇಕು; ಮತ್ತು ಅದು ತಣ್ಣಗೂ ಇರಬೇಕು. ಬೊಕ್ಕೆಗಳನ್ನು ತುರಿಸಬಾರದೆಂದು ಕೈಗಳನ್ನು ಕಟ್ಟಿಬಿಡಬೇಕು. ಮೈಲಿಗೆ ಪ್ರತಿಬಂಧಕವೆಂದು ಮೈಲಿಯನ್ನು ಚುಚ್ಚಿಸಿಕೊಳ್ಳಬೇಕೆಂತಲೂ ಚುಚ್ಚಿಸಿಕೊಳ್ಳಬಾರದೆಂತಲೂ ಹೀಗೆ ಪರಸ್ಪರ ವಿರುದ್ಧವಾದ ಎರಡು ಭಿನ್ನ ಮತಗಳಿವೆ. ಚುಚ್ಚಿಸಿಕೊಳ್ಳುವದು ತೀರ ಅವಶ್ಯವೆಂದು ಕೆಲವರು ಹೇಳುತ್ತಾರೆ. ಅದು ತೀರ ಅಪಾಯಕರವೆಂದು ಬೇರೆ ಕೆಲವರು ಮತ್ತಷ್ಟು ಜೋರಿನಿಂದ ಹೇಳುತ್ತಾರೆ. ಈ ವಿಷಯದಲ್ಲಿ ನಾವು ನಮ್ಮ ಮತವನ್ನು ಅನುಕೂಲವಾಗಿಯೇ ಆಗಲಿ ಪ್ರತಿಕೂಲವಾಗಿಯೇ ಆಗಲಿ ಕೊಡಲು ಇಚ್ಛಿಸುವದಿಲ್ಲ. ಚುಚ್ಚಿಸಿಕೊಳ್ಳುವ ಇಚ್ಛೆಯುಳ್ಳವರು ಕೆಳಗಿನ ಸೂಚನೆಗಳನ್ನು ಲಕ್ಷದಲ್ಲಿಡಬೇಕು. ಮೈಲಿಯನ್ನು ಇಂತಿಷ್ಟು ವಯಸ್ಸಿನಲ್ಲಿಯೇ

ಚುಚ್ಚಿಸಿಕೊಳ್ಳಬೇಕೆಂಬ ನಿಯಮವಿಲ್ಲ. ಹುಟ್ಟಿದ ಕೂಡಲೆ ಅರ್ಧತಾಸಿನ ಒಳಗೆ ವ್ಯೈಲೀ ಚುಚ್ಚಿದ ಉದಾಹರಣಗಳಿವೆ. ಆದರೂ ಸಾಮಾನ್ಯವಾಗಿ ಆರು ತಿಂಗಳಿಂದ ಒಂದು ವರ್ಷದ ಒಳಗೆ ಅದನ್ನು ಚುಚ್ಚಿಸಿಕೊಳ್ಳಬೇಕು. ಮೇ ಅಥವಾ ಜೂನ ತಿಂಗಳಲ್ಲಿ ಚುಚ್ಚುವದು ನೆಟ್ಟಗೆ. ಚುಚ್ಚುವಾಗ ತಾಜಾ ರಸಿಕೆಯನ್ನೇ ಉಪಯೋಗಿಸಬೇಕು. ರಸಿಕೆಯು ಒಳ್ಳೆಯದಿದ್ದ ಬಗ್ಗೆ ಖಾತ್ರಿಮಾಡಿಕೊಳ್ಳಬೇಕು. ಒಮ್ಮೆ ವ್ಯೈಲಿಯನ್ನು ಚುಚ್ಚಿದರೆ ಅದರಿಂದ ಕಡೆತನಕ ಪ್ರತಿಬಂಧವಾಗುತ್ತದೆಂತಲ್ಲ. ೧೫-೨೦ ವರ್ಷಗಳ ನಂತರ ಮತ್ತೊಮ್ಮೆ ವ್ಯೈಲಿಯನ್ನು ಚುಚ್ಚಿಸಿಕೊಳ್ಳಬೇಕೆಂದು ಕೆಲವರು ಹೇಳುತ್ತಾರೆ. ಇತ್ತೀಚೆಯಲ್ಲಿ ಪ್ರಚಲಿತವಾದ ಪದ್ಧತಿಯ ಮೇರೆಗೆ ವ್ಯೈಲಿಯನ್ನು ಚುಚ್ಚಿದರೆ ಅದರಿಂದ ಹುಡುಗರಿಗೆ ತ್ರಾಸವಾಗುವದಿಲ್ಲ. ಚುಚ್ಚಿದ ಬಳಿಕ ೧೦-೧೫ ಮಿನಿಟುಗಳಲ್ಲಿಯೇ ಹುಡುಗರು ಮೊದಲಿನಂತೆ ಆಡಹತ್ತುತ್ತಾರೆ. ಚುಚ್ಚಿದನಂತರ ಒಂದೆರಡು ದಿವಸ ಜಳಕ ಮಾಡಬಾರದು. ನಾಲ್ಕೈದು ದಿವಸಗಳಾದ ಮೇಲೆ ಒಮ್ಮೆ ಜ್ವರವು ಬರುತ್ತದೆ. ಆದರೂ ಅದರಿಂದ ಬಹಳ ತ್ರಾಸವಾಗುವದಿಲ್ಲ. ಸಾಧಾರಣವಾಗಿ ಎಂಟನೆಯ ದಿವಸ ಹಕಳಿಗಟ್ಟಲಿಕ್ಕೆ ಆರಂಭವಾಗುತ್ತದೆ. ಹುಣ್ಣುಗಳು ಉಬ್ಬಲಿಕ್ಕೆ ಹತ್ತಲು ಅವಕ್ಕೆ ತಿಂಡಿ ಬಿಡುತ್ತದೆ. ಆಗ ಚುಚ್ಚಿದ ಸ್ಥಳದಲ್ಲಿ ತುರಿಸಗೊಡಬಾರದು. ವ್ಯೈಲಿಯನ್ನು ಚುಚ್ಚಿದ ಸ್ಥಳದಲ್ಲಿ ದುಂಡಗೆ ಒಳತನಕ ಕಲೆಗಳು ಬಿದ್ದರೆ ಅದು ಸರಿಯಾಯಿತೆಂದು ತಿಳಿಯಬೇಕು. ವ್ಯೈಲಿಯನ್ನು ಚುಚ್ಚಿಸದವರು ಸಿಡುಗಿನ ಕಾಲಕ್ಕೆ ೩ × ಶಕ್ತಿಯ ಕಾಲೀ ಮೂರವನ್ನಾಗಲೀ ಹೋಮಿಯೊಪಥಿಯಲ್ಲಿಯ "ವ್ಯಾರಿಓಲಿನಂ" ಎಂಬ ಔಷಧವನ್ನಾಗಲೀ ಮಕ್ಕಳಿಗೆ ಕೊಡುತ್ತಿರಬೇಕು.

---

# ದುಗ್ಧಜ್ವರ

**Milk-Fever.** ಮಿಲ್ಕ-ಫೀವ್ಹರ.

ಈ ಜ್ವರವು ಬಹುತರವಾಗಿ ತಾಯಿಯ ಮೊಲೆಯಲ್ಲಿ ಸಿದ್ಧವಾಗಿರುವ ಹಾಲು ಮೇಲಿಂದ ಮೇಲೆ ಬೇಗಬೇಗನೆ ಕೂಸುಗಳಿಗೆ ಕುಡಿಸದಿದ್ದರೆ

ಬರುವದು. ದುಗ್ಧಜ್ವರ ಮತ್ತು ಪ್ರಸೂತಿಜ್ವರ ಇವುಗಳ ನಡುವಿನ ಭೇದು ವನ್ನು "ಪ್ರಸೂತಿಜ್ವರ"ವೆಂಬ ವಿವರದ ಕೆಳಗೆ ನೋಡಿರಿ.

**ಫೇ. ಫಾ:—** ಚಳಿಯಾಗುವದು, ಜ್ವರ ಬರುವದು, ನಾಡಿಯು ಬೇಗನೆ ಹಾರುವದು ಮುಂತಾದ ದಾಹಯುಕ್ತ ಭಾವನೆಗಳಿದ್ದರೆ ಇದನ್ನು ಕೊಡಬೇಕು.

**ಕಾ. ಮೂ:—** ಮೊಲೆಗಳು ಉಬ್ಬಿ ನೋಯುವವು. ಹಾಲು ಗಟ್ಟಿಯಾಗಬಾರದೆಂದು ಇದನ್ನೂ ಫೇರಂ ಫಾಸವನ್ನೂ ಅದಲು ಬದಲು ಮಾಡಿ ಕೊಡಬೇಕು.

**ಉಪಯುಕ್ತ ಸೂಚನೆ:—** ಸ್ತನಗಳಿಂದ ಹಾಲು ಬರುವ ಸುಮಾರಕ್ಕೆ ಕಾಲೀಮೂರ ಹಾಗೂ ಫೇರಂಫಾಸ ಇವುಗಳನ್ನು ಕೊಟ್ಟರೆ ದುಗ್ಧಜ್ವರವು ಬಹಳಮಾಡಿ ಬರುವದಿಲ್ಲ. ಸ್ತನಗಳಲ್ಲಿ ಬಹಳ ಹಾಲು ಉಳಿಯುಗೊಡಬಾರದು. ಮೊಲೆಯೊಳಗಿದ್ದ ಹಾಲು ಕೂಸಿಗೆ ಸಾಕಾಗಿ ಹೆಚ್ಚಾಗುತ್ತಿದ್ದರೆ ಅದನ್ನು ಹಿಂಡಿ ತೆಗೆಯಬೇಕು. ಆದರೆ ವಿನಾಕಾರಣ ಸ್ತನಗಳಲ್ಲಿ ಹೆಚ್ಚು ಸಂಚಯವಾಗಗೊಡಬಾರದು. ಜ್ವರವು ಬರುವದರಿಂದ ಹಾಲು ಕಡಿಮೆಯಾಗಿದೆಯೆಂದಾಗಲಿ ನಿಂತುಹೋಗಿದೆಯೆಂದಾಗಲಿ ಅನಿಸಿದರೆ ಕಲ್ಕೆ. ಫಾ, ಮತ್ತು ಕಲ್ಕೆ. ಫ್ಲೂ. ಈ ಔಷಧಗಳನ್ನು ಕೊಟ್ಟರೆ ದುಗ್ಧಸ್ರಾವವು ಮತ್ತೆ ಆರಂಭವಾಗುವದು. ಅನ್ನಪಾನಾದಿಗಳನ್ನು ಬೇರೆ ಜ್ವರಗದಂತೆಯೇ ಕೊಡಬೇಕು.

"ಗರ್ಭಧಾರಣ ಮತ್ತು ಪ್ರಸೂತಿ" ಯೆಂಬ ವಿವರ ನೋಡಿರಿ.

---

# ಹಲ್ಲುಬೇನೆ

**Diseases of Teeth.** **ಡಿಸೀಜಿಸ್ ಆಫ ಟೀಥ.**

ಹಲ್ಲು ನೋಯುವದು, ಹಲ್ಲಿಗೆ ಕಳೆ ಹಿಡಿಯುವದು, ಹುಳ ಹತ್ತುವದು, ಕೀವು ಸೋರುವದು, ಹಲ್ಲು ಅಗಲಾಡುವದು, ತಗ್ಗು ಬೀಳುವದು ಇವು ಹಲ್ಲಿನ ರೋಗಗಳು.

ಹಲ್ಲಿಗೆ ಹುಳ ಹತ್ತುವದು, ಚಳಿಯಾಗುವದು, ಸೀತ ಪೇಯಗಳನ್ನು ಕುಡಿಯುವದು, ಇವು ಹಲ್ಲುಸೂಲಿಯ ಕಾರಣಗಳು. ಕಾಫೀ ಕುಡಿಯು ವದರಿಂದಲೂ ತಂಬಾಕ ಸೇದುವದರಿಂದಲೂ ಹಲ್ಲುಸೂಲಿ ಏಳುವದು. ಹಲ್ಲಿನ ಸಂಧುಗಳಲ್ಲಿ ಅನ್ನದ ಕಣಗಳು ಉಳಿದರೂ ಹಲ್ಲು ನೋಯುವವು. ಹಲ್ಲಿನ ವೇದನೆಯು ಕಣ್ಣು, ಕಿವಿ, ಗಲ್ಲಗಳ ವರೆಗೆ ಹೋಗುವದು. ಹಲ್ಲಿನ ಬೇರಿನಲ್ಲಿ ಏನಾದರೂ ಕ್ಷೋಭವಾದರೆ ಅಲ್ಲಿ ದಾಹವುಂಟಾಗಿ ಕುರುವು ಸಹ ಆಗುವದು. ಮೇಲಿಂದ ಮೇಲೆ ಹಲ್ಲುಗಳು ನೋಯುತ್ತಿದ್ದು ಒಸಡಿಗಳು ಉಬ್ಬುತ್ತವೆ; ಇದು ಸರ್ವಸಾಧಾರಣ ಅಶಕ್ತತೆಯ ಲಕ್ಷಣವು.

ಹುಳಹತ್ತುವದು ಹಲ್ಲಿನ ಎರಡನೆಯ ರೋಗವು. ಹಲ್ಲಿನ ಸಂರಕ್ಷಣ ವನ್ನು ಸರಿಯಾಗಿ ಮಾಡದೆ ಇದ್ದುದರಿಂದಲೂ ಪೋಷಕ ಅನ್ನವು ಸಾಕಷ್ಟು ಸಿಗದೆ ಇದ್ದುದರಿಂದಲೂ ಈ ವಿಕೃತಿಯು ಆಗುವದುಂಟು. ಕೆಲವು ರೋಗಿಗಳ ಹಲ್ಲುಗಳೇ ಹುಟ್ಟಾ ಕೆಟ್ಟಿರುತ್ತವೆ.

ಹಲ್ಲಿನೊಳಗಿಂದ ಕೀವು ಸೋರುವದಾದರೂ ಚಿಂತಾಜನಕ ರೋಗ ವಾಗಿದೆ. ನಿಜವಾಗಿ ನೋಡಿದರೆ ಕೀವು ಹಲ್ಲಿನೊಳಗಿಂದ ಹೋಗುವದಿಲ್ಲ. ಹಲ್ಲು ಒಸಡಿಯೊಳಗೆ ಕೂತಿರುವ ಸ್ಥಾನದಲ್ಲಿ ವ್ರಣವಾಗಿ ಅದರೊಳಗಿಂದ ಕೀವು ಸೋರುವದು. ಅದರಿಂದ ಬಾಯಿಗೆ ಹೊಲಸು ನಾತವು ಬರುವದು. ಈ ಕೀವನ್ನು ನುಂಗಿದರೆ ಅದು ಶರೀರದಲ್ಲಿ ಹೀರಲ್ಪಡುತ್ತದೆ ಮತ್ತು ಅದರಿಂದ ಅನೇಕ ತರದ ತಾಪದಾಯಕ ರೋಗಗಳು ಉಂಟಾಗುತ್ತವೆ. ಅಗ್ನಿಮಾಂದ್ಯ, ತಲೆಶೂಲಿ, ಕಣ್ಣಿಗೆ ಕತ್ತಲೆ ಬರುವದು, ಮೈ ನೋಯು ವದು, ಅಶಕ್ತತೆ, ಮುಂಗೈಯಲ್ಲಿಯೂ ಹರಡಿಯಲ್ಲಿಯೂ ಜಲಯುಕ್ತ ಬಾವು, ಸಂಧಿವಾತ, ನಿರುತ್ಸಾಹ, ಖಿನ್ನತೆ, ರಕ್ತಕ್ಷೀಣತೆ ಮುಂತಾದ ಅನೇಕ ಲಕ್ಷಣಗಳು ಕಾಣಿಸುವವು. ಜ್ವರವು ಸಣ್ಣಾಗಿ ಬರುವದು. ಕ್ಷಯದ ಭಾವನೆಯಾದಂತೆಯೂ ಅನಿಸುವದು.

ಹಲ್ಲುಗಳು ಅಗಲಾಡುತ್ತಿದ್ದರೆ ಅಥವಾ ತಗ್ಗುಬಿದ್ದಿದ್ದರೆ ದಂತವೈದ್ಯರ ಕಡೆಗೆ ಹೋಗಿ ಚಿಕಿತ್ಸೆಯನ್ನು ಮಾಡಿಸಬೇಕು. ಅವಶ್ಯವಿದ್ದರೆ ಅಗಲಾಡುವ ಹಲ್ಲನ್ನು ಕಿತ್ತಿ ತೆಗೆಯಿಸಬೇಕು; ಮತ್ತು ಬೇರೆ ಹಲ್ಲು ಕೂಡಿಸಬೇಕು.

ತಗ್ಗುಗಳನ್ನು ತುಂಬಿಸಬೇಕು. ಹಲ್ಲುಬೇನೆಗೆ ಉಪಯೋಗವಾಗುವಂಥ ಔಷಧಗಳ ಭಾವನೆಗಳನ್ನು ಕೆಳಗೆ ಹೇಳಿದ್ದೇವೆ.

**ಫೇ. ಫಾ:—** ಒಸಡು ಉಬ್ಬಿ ಹಲ್ಲು ಸೋಯುತ್ತದೆ. ಬಯಲಿನ ತಂಪು ಹವೆಯಿಂದಲೂ ಸೀತ ಪೇಯದಿಂದಲೂ ನೆಟ್ಟಗೆನಿಸುತ್ತದೆ. ಉಷ್ಣೋಪಚಾರದಿಂದ ಕಳೆಗಳು ಹೆಚ್ಚಾಗುತ್ತವೆ. ಒಸಡಿಗಳು ಉಬ್ಬುತ್ತವೆ, ಕೆಂಪಾಗುತ್ತವೆ, ಮತ್ತು ಸೋಯುತ್ತವೆ.

**ಕ್ಯಾ. ಮೂ:—**ಹಲ್ಲುಸೂಲಿಯ ಸಂಗಡ ಒಸಡಿಗಳೂ ಬಾಯುತ್ತವೆ. ಫೇರಂ ಫಾಸವನ್ನೂ ಇದನ್ನೂ ಅದಲುಬದಲು ಮಾಡಿ ಕೊಡಬೇಕು.

**ಮ್ಯಾ. ಫಾ:—** ವಾತಜನ್ಯ ಹಲ್ಲುಸೂಲಿ. ಉಷ್ಣೋಪಚಾರದಿಂದಲೂ ಒತ್ತುವದರಿಂದಲೂ ನೆಟ್ಟಗೆನಿಸುತ್ತದೆ. ಸೀತೋಪಚಾರದಿಂದ ಹೆಚ್ಚಾಗುತ್ತದೆ. ( ಫೇರಂ ಫಾಸದ ವಿರುದ್ಧ ) ಅತ್ಯಂತ ಅಸಹ್ಯ ಬಾಣ ಹೊಡೆದಂತೆ ವೇದನೆಯಾಗುತ್ತದೆ. ಒತ್ತಿದರೆ ನೆಟ್ಟಗೆನಿಸುತ್ತದೆ. ಅಲ್ಲಾಡಿದರೆ ಹೆಚ್ಚಾಗುತ್ತದೆ. ದಾಹರಹಿತ ಹಲ್ಲುಸೂಲಿ.

**ಕಾ. ಫಾ:—** ಅಶಕ್ತ ಮನಸ್ಸಿನ, ದುರ್ಬಲ, ನಿಃಸತ್ವ, ರಕ್ತಹೀನ ರೋಗಿಗಳಿಗೆ ಉತ್ತೇಜಕ ಮತ್ತು ಉತ್ಸಾಹಕ ಆಟನೋಟಗಳಿಂದ ಸಮಾಧಾನವಾಗುತ್ತದೆ. ಸ್ವಲ್ಪ ಒತ್ತಿದ ಕೂಡಲೆ ಒಸಡಿಯೊಳಗಿಂದ ರಕ್ತವು ಬರುತ್ತದೆ. ಹುಳಹತ್ತಿದ ಅಥವಾ ಕೃತ್ರಿಮ ಉಪಾಯದಿಂದ ತುಂಬಿದಂಥ ಹಲ್ಲುಗಳಲ್ಲಿ ಜೋರಿನ ವೇದನೆಯಾಗುತ್ತದೆ.

**ಕಲ್ಕೆ. ಫಾ:—** ಹುಳತ ಹಲ್ಲಿನಲ್ಲಿ ವೇದನೆಯಾಗುತ್ತದೆ. ಬೇನೆಯು ರಾತ್ರಿಯಲ್ಲಿ ಹೆಚ್ಚಾಗುತ್ತದೆ. ಮ್ಯಾ. ಫಾ. ದಿಂದ ಗುಣವು ಬರದಿದ್ದರೆ ಇದನ್ನು ಕೊಡಬೇಕು. ಹಲ್ಲುಗಳು ಬಹಳ ಬೇಗನೆ ಹುಳಕಾಗುತ್ತವೆ.

**ಕಾ. ಸ:—** ಸಾಯಂಕಾಲದಲ್ಲಿಯೂ ಬೆಚ್ಚಗಿನ ಕೋಣೆಯಲ್ಲಿಯೂ ಹಲ್ಲುಸೂಲಿ ಹೆಚ್ಚಾಗುವದು. ಬಯಲೊಳಗಿನ ಸೀತ ಹವೆಯಲ್ಲಿ ನೆಟ್ಟಗೆನಿಸುವದು.

**ನೇ. ಮೂ:—** ಹಲ್ಲುಸೂಲಿ ಎದ್ದಾಗ ಕಣ್ಣಿನಿಂದ ನೀರು ಸೋರುವದು ಹಾಗು ಬಾಯಿಯಿಂದ ಜೊಲ್ಲು ಸೋರುವದು.

**ಕಲ್ಕೆ. ಫ್ಲೋ**:— ಹಲ್ಲು ಅಗಲಾಡುವವು. ಹಲ್ಲಿಗೆ ಅನ್ನ ಹತ್ತಗೊಡುವದಿಲ್ಲ. ಈ ಔಷಧವನ್ನು ಸುಮ್ಮಸುಮ್ಮನೆ ಬಹಳ ದಿವಸಗಳ ವರೆಗೆ ತೆಗೆದುಕೊಂಡರೆ ಅದರಿಂದ ಅಪಾಯುವಾಗುವದು.

**ಸಿ**:— ವೇದನೆಯು ಒಳತನಕ ಇರುವದು. ಕುರುವು ಆಗುವದು. ಒತ್ತಿದರೆ ನೆಟ್ಟಗೆನಿಸುವದು. ಒಮ್ಮೊಂದೊಮ್ಮೆ ಚಳಿಯಾದರೆ ಅಥವಾ ಕಾಲಿನ ಬೆವರು ಮೈಯೊಳಗೆ ಇಂಗಿದರೆ ಹಲ್ಲು ನೋಯುವದು. ರಾತ್ರಿಯಲ್ಲಿ ಕಳೆಗಳು ಬಹಳ ಬರುತ್ತವೆ. ಉಷ್ಣೋಪಚಾರದಿಂದಾಗಲಿ ಸೀತೋಪಚಾರದಿಂದಾಗಲಿ ಸಮಾಧಾನವಾಗುವದಿಲ್ಲ.

**ಉಪಯುಕ್ತ ಸೂಚನೆ**:— ಯಾರ ಹಲ್ಲುಗಳು ಯಾವಾಗಲೂ ನೋಯುತ್ತಿವೆಯೋ ಅಂಥವರು ಉತ್ತೇಜಕ ಪದಾರ್ಥಗಳನ್ನೂ, ಉಷ್ಣ ಅಥವಾ ಸೀತ ಪೇಯಗಳನ್ನೂ, ಮತ್ತು ಸಿಹಿ ಅಥವಾ ಹುಳಿ ಪದಾರ್ಥಗಳನ್ನೂ ಬಹಳ ತೆಗೆದುಕೊಳ್ಳಬಾರದು. ಊಟವಾದ ಬಳಿಕ ಹಲ್ಲುಗಳನ್ನು ನಿಯಮದಿಂದ ತಿಕ್ಕಿ ತೊಳೆಯಬೇಕು. ಹಲ್ಲಿಗೆ ಹುಳ ಹತ್ತಿ ಅದು ಅಲ್ಲಾಡುತ್ತದೆ ಎಂದು ಕಂಡುಬಂದರೆ, ಮತ್ತು ಜೀವನ ರಸಾಯನ ಔಷಧದಿಂದ ಗುಣವು ಬರದಿದ್ದರೆ, ಜಾಣರಾದ ದಂತವೈದ್ಯರ ಸಲಹೆಯನ್ನು ಕೇಳಬೇಕು. ಹುಡುಗರ ಹಲ್ಲಿಗೆ ಹುಳ ಹತ್ತಿದರೆ, ಕಲ್ಕೆ. ಫಾ. ದ ಸಂಗಡ ಕಲ್ಕೆ. ಫ್ಲೋ. ದ ಉಪಯೋಗವು ಚನ್ನಾಗಿ ಆಗುವದು. ಔಷಧವನ್ನು ಮಾತ್ರ ಬಹು ದಿವಸದ ವರೆಗೆ ಬಿಟ್ಟೂಬಿಡದೆ ತೆಗೆದುಕೊಳ್ಳಬೇಕು.

ಮುಂದೆ ಹುಟ್ಟತಕ್ಕ ಹುಡುಗರ ಹಲ್ಲುಗಳು ಸರಿಯಾಗಿ ಇರುವದಕ್ಕೋಸ್ಕರವಾಗಿ ಹಲ್ಲು ಹುಳಿತಿದ್ದ ತಾಯಂದಿರು ಹಲ್ಲುಗಳಿಗೆ ಪೋಷಕವಾಗುವಂಥ ಪದಾರ್ಥಗಳನ್ನು ( ಸುಣ್ಣವಿದ್ದ ಕ್ಷಾರ ಪದಾರ್ಥಗಳನ್ನು ) ಹೆಚ್ಚಾಗಿ ತಿನ್ನಬೇಕು. ಹೊಟ್ಟೆಯೊಳಗೆ ಕಲ್ಕೆ. ಫಾ. ದಂಥ ಅಸ್ಥಿಸಂವರ್ಧನದ ಔಷಧಗಳನ್ನು ತೆಗೆದುಕೊಳ್ಳಬೇಕು. ಹಲ್ಲುಗಳನ್ನು ಸ್ವಚ್ಛವಾಗಿ ತಿಕ್ಕಿ ತೊಳೆಯಬೇಕು. ಅನ್ನದ ಕಣಗಳು ಹಲ್ಲಿನ ಸಂದಿಸಲ್ಲಿ ಉಳಿಯಬಾರದೆಂದು ತಿಂದಕೂಡಲೆ ಹಲ್ಲುಗಳನ್ನು ತೊಳೆಯುತ್ತಿರಬೇಕು. ಈ ಕೆಲಸಕ್ಕೆ ತಾತ್ಸಾರ ಮಾಡಬಾರದು. ತಿಂದ ಪದಾರ್ಥದ ಕಣಗಳು

ಅಲ್ಲಿಯೇ ಉಳಿದರೆ ಅವು ಕೊಳೆತು ಹಲ್ಲಿಗೆ ಅಪಾಯ ಮಾಡುವವು. ಸಿಹಿ ಪದಾರ್ಥಗಳನ್ನು ಬಹಳ ತಿಂದರೆ ಹಲ್ಲಿನ ನಾಶಕ್ಕೆ ಕಾರಣವಾಗುತ್ತದೆ. ಹಲ್ಲುಗಳ ರಕ್ಷಣೆಗಾಗಿ ಸಾದಾ ಅನ್ನವನ್ನು ಉಣ್ಣಬೇಕು. ಸಿಹಿ ಪದಾರ್ಥವನ್ನಾಗಲೀ ಮಾಂಸವನ್ನಾಗಲೀ ಬಹಳ ತಿನ್ನಬಾರದು. ಅದರಿಂದ ಹಲ್ಲುಗಳು ಕೆಡುವ ಸಂಭವವು ಬಹಳ ಇರುತ್ತದೆ. ಶಾಕಾಹಾರಿಗಳಿಗೆ ತಮ್ಮ ಹಲ್ಲುಗಳನ್ನು ಸ್ವಚ್ಛವಿಡಲಿಕ್ಕೆ ಸುಲಭವಾಗುತ್ತದೆ. ಆದರೆ ಅವರು ಕೂಡ ನಿಯಮದಿಂದ ಅವುಗಳನ್ನು ಸ್ವಚ್ಛವಾಗಿ ತೊಳೆಯುತ್ತಿರಬೇಕು. ಕಾಕುಳ್ಳಿನ ಬೂದಿಯಲ್ಲಿ ಉಪ್ಪು ಹಾಕಿ ಅದರಿಂದ ಹಲ್ಲು ತಿಕ್ಕಬೇಕು. ಪೇಟೆಯಲ್ಲಿ ದೊರೆಯುವ ದಂತಧಾವನ ಚೂರ್ಣದಿಂದ ಹಲ್ಲು ತಿಕ್ಕುವ ಆವಶ್ಯಕತೆಯಿಲ್ಲ. ಬದಾಮಿನ ಸೊಟ್ಟೆಯ ಬೂದಿಯು ಹಲ್ಲು ತಿಕ್ಕಲಿಕ್ಕೆ ಬಹಳ ಒಳ್ಳೆಯದು. ಆದರೆ ಅದು ಎಲ್ಲರಿಗೂ ದೊರಕಲಾರದು. ಆದುದರಿಂದ ಮೇಲೆ ಹೇಳಿದಂತೆ ಕಾಕುಳ್ಳಿನ ಬೂದಿಯನ್ನೇ ಉಪಯೋಗಿಸಬೇಕು. ಹಲ್ಲು ತಿಕ್ಕಲಿಕ್ಕೆ ಬ್ರಶ್‌ದ ಉಪಯೋಗ ಮಾಡಬಹುದು. ಆದರೆ ಒಬ್ಬರ ಬ್ರಶ್‌ನ್ನು ಮತ್ತೊಬ್ಬರು ತೆಗೆದುಕೊಳ್ಳಬಾರದು. ಹಾಗೆ ಮಾಡುವದು ಸುರಕ್ಷಿತವಲ್ಲ. ಹಲ್ಲುಗಳೊಳಗಿಂದ ಕೀವು ಸೋರುವದು ಕಂಡು ಬಂದರೆ ಸಿ; ಕಲ್ಕೆ. ಸ. ಮುಂತಾದ ಔಷಧಗಳನ್ನು ಭಾವನಾನುಸಾರವಾಗಿ ಕೊಡಬೇಕು. ಜಡಾನ್ನವನ್ನು ಬಿಟ್ಟು ಬಿಡಬೇಕು. ಗಟ್ಟಿಯಾದ ಆಹಾರವನ್ನು ಬಿಟ್ಟು ಹಾಲಿನಂಥ ಅಳ್ಳಕಿನ ಪೌಷ್ಟಿಕ ಆಹಾರವನ್ನು ಕೊಡಬೇಕು. ಅದರಿಂದ ಹಲ್ಲುಗಳಿಗೆ ವಿಶ್ರಾಂತಿ ದೊರಕುವದು; ಅನ್ನದ ಕಣಗಳು ಹಲ್ಲಿನ ಸಂದಿಯಲ್ಲಿ ಸಿಗಲಾರವು; ಮತ್ತು ಬೇಗನೆ ನೆಟ್ಟಗೆನಿಸುವದು. ಇದರಿಂದಲೂ ಸಮಾಧಾನವಾಗದಿದ್ದರೆ ದಂತವೈದ್ಯರ ಅನುಮತಿಯ ಮೇರೆಗೆ ಹುಳ ಹತ್ತಿದ ಹಲ್ಲನ್ನು ಕಿತ್ತಿಸಿ ತೆಗೆಯುವದೇ ಲೇಸು. ಹೀಗೆ ಹಲ್ಲನ್ನು ಕಿತ್ತಿ ತೆಗೆಯದೆ ರಸಿಕೆಯನ್ನು ಚುಚ್ಚಿ ಬೇನೆಯನ್ನು ನೆಟ್ಟಗೆ ಮಾಡುವ ಪ್ರಯೋಗವನ್ನು ಅಲ್ಲಲ್ಲಿ ಮಾಡಹತ್ತಿದ್ದಾರೆ. ಆದರೆ ಅದು ಖಾತ್ರಿಯ ಉಪಾಯವಲ್ಲ. ಹಲ್ಲು ತೆಗೆಯುವದೇ ಒಳಿತು.

---

# ದಂತೋದ್ಭವ

**Dentition.** **ಡೆಂಟಿಶನ್.**

ಕೂಸುಗಳಿಗೆ ಹಲ್ಲುಬರುವಾಗ ವಾಂತಿ, ಅತಿಸಾರ ಮುಂತಾದವು ಆರಂಭವಾಗುತ್ತವೆ. ಕೂಸಿಗೆ ಅಸ್ವಸ್ಥವೆನಿಸುತ್ತದೆ. ಅವಕ್ಕೆ ಸೊಗಸು ಅನಿಸುವದಿಲ್ಲ. ಬೆಳ್ಳಗೆ, ಹಚ್ಚಗೆ ಅಥವಾ ಹಳದೀ ರೇಚಗಳಾಗುತ್ತವೆ. ಅದಕ್ಕೆ ಹೊಲಸು ನಾತ ಬರುತ್ತದೆ. ಹಾಲು ಕುಡಿದಂತೆಯೇ ಅಥವಾ ಮೊಸರಿನಂತೆ ಗಂಟು ಗಂಟಾಗಿ ಬೀಳುತ್ತದೆ. ಜ್ವರವು ಬರುತ್ತದೆ; ಒರಟಿಗಳೂ ಬರುತ್ತವೆ. ಕೂಸಿಗೆ ಸುಮಾರು ಏಳೆಂಟು ತಿಂಗಳಾದ ಬಳಿಕ ಇಂಥ ವಿಕಾರಗಳಾಗುತ್ತವೆ. ಅಶಕ್ತ ಹುಡುಗರಿಗೆ ಹಲ್ಲು ಬರುವಾಗ ಬಹಳ ಕಷ್ಟವಾಗುತ್ತದೆ. ಆದರೆ ಕೆಲವರಿಗೆ ಅದರಿಂದ ವಿಶೇಷ ತ್ರಾಸವೆನಿಸುವದಿಲ್ಲ. ಈ ವಿಕೃತಿಗೆ ಕೆಳಗೆ ಹೇಳಿದ ಔಷಧಗಳಿಂದ ಉಪಯೋಗವಾಗುತ್ತದೆ.

**ಕಲ್ಕೆ. ಫಾ:—** ಈ ರೋಗದಲ್ಲಿ ಇದೇ ಪ್ರಮುಖ ಔಷಧವು. ಹಲ್ಲುಗಳು ತಡಮಾಡಿ ಒಡೆಯುತ್ತವೆ; ಮತ್ತು ಒಡೆದ ಮೇಲೂ ತಡಮಾಡಿ ಬೆಳೆಯುತ್ತವೆ. ನೆತ್ತಿಯು ತುಂಬುವದಿಲ್ಲ. ಶೌಚಕ್ಕೆ ಬೇಗನೆ ಆಗುವದಿಲ್ಲ. ಹಲ್ಲು ಬರುವಾಗ ಒರಟಿ ಬರುವವು ಅಥವಾ ಬೇರೆ ವಿಕಾರಗಳಾಗುವವು. ರೇಚವು ಸಪ್ಪಳ ಮಾಡಿ ಜೋರಿನಿಂದ ಆಗುತ್ತದೆ. ಕಾರಿಕೆಯೂ ಆಗುತ್ತದೆ.

**ಮ್ಯಾ. ಫಾ:—** ಹಲ್ಲು ಬರುವಾಗ ಒರಟಿ ಬರಹತ್ತಿದರೆ ಇದನ್ನೂ ಕಲ್ಕೆ. ಫಾ. ವನ್ನೂ ಅದಲುಬದಲು ಮಾಡಿ ಕೊಡಬೇಕು. ಜ್ವರವು ಬರುತ್ತಿದ್ದರೆ ಫೇರಂಫಾಸದ ಸಂಗಡ ಕೊಡಬೇಕು. ಇದನ್ನು ಮೇಲಿಂದ ಮೇಲೆ ಬಿಸಿನೀರಿನಲ್ಲಿ ಕೊಡಬೇಕು.

**ಫೇ. ಫಾ:—** ಜ್ವರ ಬರುವದು, ಒಸಡಿ ಉಬ್ಬಿ ಕೆಂಪಾಗುವದು, ಕಣ್ಣು ಗೊಂಬೆಗಳು ಅಗಲಾಗುವವು, ರೋಗಿಯು ತೀರ ಅಸ್ವಸ್ಥನಾಗುವನು ಮುಂತಾದ ಭಾವನೆಗಳಿಗೆ ಈ ಔಷಧವನ್ನು ಕೊಡಬೇಕು.

**ಸಿ:—** ತಲೆಗೆ ಮಾತ್ರ ಬಹಳ ಬೆವರು ಬಿಡುತ್ತದೆ. ಈ ಔಷಧದ ಕೂಡ ಕಲ್ಕೆ. ಫಾ. ವನ್ನೂ ಕೊಡಬೇಕು. ಬಹಳ ದಿವಸದ ಮಲಾವ

ರೋಧ ತಲೆಯೂ ಹೊಟ್ಟೆಯೂ ದೊಡ್ಡವಾದ ಹುಡುಗರಿಗೆ ಇದರ ಉಪಯೋಗವಾಗುವದು.

**ನೇ. ಮೂ:**— ನಿದ್ದೆಯಲ್ಲಿಯೂ ಎಚ್ಚರಿಕೆಯಲ್ಲಿಯೂ ಬಾಯಿಯಿಂದ ಒಂದೇಸವನೆ ಜೊಲ್ಲು ಸೋರುತ್ತದೆ.

**ಕಲ್ಕೆ. ಫೊ:**— ಈ ಔಷಧವು ಹಲ್ಲು ಬರಲಿಕ್ಕೆ ಬಹಳ ಸಹಾಯ ಮಾಡುತ್ತದೆ. ಹಲ್ಲು ಬರುವಾಗ ವಾಂತಿಯಾಗುತ್ತದೆ. ಹಲ್ಲ ಮೇಲಿನ ಒಸಡಿಯು ಸಾಕಷ್ಟು ಬೆಳೆಯುವದಿಲ್ಲ. ಹಲ್ಲು ಹುರಬರಕ ಹತ್ತುತ್ತವೆ. ಸ್ವಲ್ಪ ಒತ್ತಿದರೆ ಮುರಿದುಹೋಗುತ್ತವೆ. ಹಲ್ಲುಗಳಿಗೆ ಬೇಗನೆ ಹುಳ ಹತ್ತುತ್ತವೆ.

**ಉಪಯುಕ್ತ ಸೂಚನೆ:**— ಯಾವ ಹೆಂಗಸಿನ ಮಕ್ಕಳಿಗೆ ಹಲ್ಲು ಬರುವ ಕಾಲಕ್ಕೆ ಬಹಳ ಕಷ್ಟವಾಗುವದೋ ಅಂಥ ಹೆಂಗಸು ಬಸಿರಾದಾಗಲೇ ಕಲ್ಕೆ. ಫಾ. ಔಷಧವನ್ನು ತೆಗೆದುಕೊಳ್ಳಬೇಕು. ಅದೇ ಮೇರೆಗೆ, ಹಲ್ಲು ಬರುವದಕ್ಕಿಂತ ಮುಂಚಿತವಾಗಿ ಸ್ವಲ್ಪ ದಿವಸಗಳವರೆಗೆ ಕೂಸುಗಳಿಗೆ ಕಲ್ಕೆ. ಫಾ. ವನ್ನು ಕೊಟ್ಟರೆ ಅದರಿಂದ ಅವಕ್ಕೆ ಹಲ್ಲು ಬರುವಾಗ ತ್ರಾಸವಾಗುವದಿಲ್ಲ. ಹಲ್ಲು ಬರುವಾಗ ಒರಟಿಗಳು ಬರಹತ್ತಿದರೆ ಮ್ಯಾ. ಫಾ. ವನ್ನು ಬಿಸಿನೀರಿನಲ್ಲಿ ಮೇಲಿಂದಮೇಲೆ ಕೊಡಬೇಕು. ಮ್ಯಾ. ಫಾ. ಹಾಕಿದ ಬಿಸಿನೀರಿನಲ್ಲಿ ಮೊಳಕಾಲಿನವರೆಗೆ ಕಾಲು ಮುಳುಗಿಸಬೇಕು; ಮತ್ತು ತಲೆಯಮೇಲೆ ತಣ್ಣೀರಿನ ಪಟ್ಟಿಯನ್ನು ಇಡಬೇಕು.

"**ಬಾಲಗ್ರಹ**" "**ಒರಟಿ**" ಇವೆರಡು ವಿವರಗಳನ್ನು ನೋಡಿರಿ.

---

## ದಂಶ

**Bites of Insects.** **ಬಾಯಿಟ್ಸ ಆಫ ಇನ್‌ಸೆಕ್ಟ್ಸ.**

**ನೇ. ಮೂ:**— ಹೊಟ್ಟೆಯೊಳಗೂ ಕೊಡಬೇಕು; ಹೊರಗಿನಿಂದಲೂ ಹಚ್ಚಬೇಕು. ಆದಷ್ಟು ಬೇಗನೆ ೬ × ಶಕ್ತಿಯ ಔಷಧವನ್ನು ನೀರಿನಲ್ಲಿ

ಹಾಕಿ ಅದರಲ್ಲಿ ತೋಯಿಸಿದ ಒಸ್ತ್ರೆಯು ಅರಿವೆಯನ್ನು ಕಡಿದ ಸ್ಥಳದ ಮೇಲೆ ಬಹಳ ಹೊತ್ತಿನವರೆಗೆ ಇಡಬೇಕು. ಇಲ್ಲವೆ ಔಷಧದ ಒಣ ಪುಡಿಯನ್ನು ಆ ಸ್ಥಳದಲ್ಲಿ ಹಚ್ಚಿ ತಿಕ್ಕಬೇಕು. ಇದರಿಂದ ನೋವು ಕಡಿಮೆಯಾಗುವದು.

---

# ಧನುರ್ವಾತ

**Tetanus.** **ಟಿಟಾನಸ್.**

ಈ ರೋಗದಲ್ಲಿ ಬಾಯಿ, ಕೈ, ಕಾಲು ಮತ್ತು ಬೇರೆ ಕಡೆಯ ಸ್ನಾಯುಗಳು ಒರಟಿ ಬಂದು ಸೆಟೆಯುತ್ತವೆ; ಅದರಿಂದ ವೇದನೆಯಾಗುತ್ತದೆ; ಒಮ್ಮೊಮ್ಮೆ ರೋಗಿಯು ಮರಣಹೊಂದುತ್ತಾನೆ. ಮೊದಲು ಗೋಣಿನಲ್ಲಿ ಜಗ್ಗಿದಂತಾಗಿ ನೋಯುತ್ತದೆ. ಅದು ಸೆಟಯುತ್ತದೆ. ತುತ್ತು ನುಂಗುವಾಗ ಸ್ವಲ್ಪ ಕಷ್ಟವಾಗುತ್ತದೆ. ಅನಂತರ ತಲೆ ಅಲ್ಲಾಡಿಸಲಿಕ್ಕೆ ಬರುವದಿಲ್ಲ. ಅದು ಹಿಂದಕ್ಕೆ ಎಳೆಯಲ್ಪಡುತ್ತದೆ. ಹಲ್ಲು ಕಡಿಯೂರುತ್ತವೆ. ತರುವಾಯ ಎದೆ, ಬೆನ್ನು, ಉದರ ಇವುಗಳಲ್ಲಿಯ ಸ್ನಾಯುಗಳು ಸೆಟೆಯುತ್ತವೆ; ಮತ್ತು ಶರೀರಯಷ್ಟಿಯು ಕಟ್ಟಿಗೆಯಂತೆ ಉದ್ದಕ್ಕೆ ಸೆಟೆಯುತ್ತದೆ. ಒಮ್ಮೊಮ್ಮೆ ಕೈ ಕಾಲುಗಳ ಸ್ನಾಯುಗಳಿಗೆ ತ್ರಾಸವಾಗುವದಿಲ್ಲ. ಕಣ್ಣೊಳಗಿನ ಗೊಂಬೆಗಳು ಒಳಗೆ ಹೋಗುತ್ತವೆ. ರೋಗಿಯು ತನ್ನ ಹಲ್ಲಿನಿಂದ ತನ್ನ ನಾಲಿಗೆಯನ್ನೇ ಕಚ್ಚಿಕೊಳ್ಳುತ್ತಾನೆ. ಆರಂಭದಲ್ಲಿ ಗದ್ದದ ಸ್ನಾಯುಗಳು ಸೆಟೆಯುವದೇ ಈ ಬೇನೆಯ ವಿಶೇಷ ಲಕ್ಷಣವು. ಜೋರಿನ ಧನುರ್ವಾತದಲ್ಲಿ ಎಲ್ಲ ಸ್ನಾಯುಗಳು ಸೆಟೆದು ನೋಯುತ್ತವೆ. ಶರೀರಕ್ಕೆ ಬಿಲ್ಲಿನ ಅಂದರೆ ಧನುಷ್ಯದ ಆಕಾರವು ಬರುತ್ತದೆ. ಆದುದರಿಂದಲೇ ಈ ರೋಗಕ್ಕೆ ಧನುರ್ವಾತವೆಂದು ಹೆಸರು ಬಂದಿದೆ. ನಡುನಡುವೆ ಸ್ನಾಯುಗಳು ಸಡಿಲಾಗಿ ಮತ್ತೆ ಆಕುಂಚಿತವಾಗುತ್ತವೆ. ವೇದನೆಯು ಅಸಹ್ಯವಾಗುತ್ತದೆ. ರೋಗಿಯು ದಣಿದು ಹೋಗುತ್ತಾನೆ. ಬೆವರು ಒಂದೇಸವನೆ ಹರಿಯಹತ್ತುತ್ತದೆ. ಉಸುರಾಡಿಸಲಿಕ್ಕೆ ಕಷ್ಟವಾಗುತ್ತದೆ. ರೋಗಿಯು ಹುಬ್ಬುಗಂಟು ಹಾಕುತ್ತಾನೆ. ಹಲ್ಲು ಕಡಿಯೂರುತ್ತವೆ. ಮಾತನಾಡಲಿಕ್ಕೆ ಬರುವದಿಲ್ಲ. ಕುತ್ತಿಗೆ ಸರಿದಾಡುವದಿಲ್ಲ.

ನೀರು ನುಂಗಲಿಕ್ಕೆ ಸಹ ತೊಂದರೆಯಾಗುತ್ತದೆ. ಎದೆ ಜಬ್ಬಿದಂತಾಗುತ್ತದೆ. ನೀರಡಿಕೆ ಬಹಳಾಗುತ್ತದೆ. ಶೌಚಕ್ಕೆ ಆಗುವದೇ ಇಲ್ಲ. ವೇದನೆಯು ಅಸಹ್ಯವಿದ್ದುದರಿಂದ ನಿದ್ರೆಯೇ ಹತ್ತುವದಿಲ್ಲ. ಮತ್ತು ಕೊನೆಗೆ ರೋಗಿಯು ಬಹಳ ಕಷ್ಟದಿಂದ ಪ್ರಾಣ ಬಿಡುತ್ತಾನೆ. ರೋಗಿಗೆ ಕಡೆತನಕ ಎಚ್ಚರಿಕೆ ಇರುವದು. ಒಮ್ಮೊಮ್ಮೆ ಜ್ವರವೂ ಬರುವದು. ರೋಗದ ಸ್ವರೂಪವು ಉಗ್ರವಾಗಿದ್ದು ಸ್ನಾಯುಗಳ ಆಕುಂಚನವು ಭರದಿಂದ ಸಾಗಿದರೆ ರೋಗಿಯು ಸ್ವಲ್ಪ ಹೊತ್ತಿನಲ್ಲಿಯೇ ಸಾಯುವನು. ಸೆಟಿಬೇನೆಯು ಸೌಮ್ಯವಾಗಿ ನಿಂತು ನಿಂತು ಬರುತ್ತಿದ್ದರೆ ಆತನು ಬದುಕುವ ಸಂಭವವಿದೆ.

ಈ ರೋಗವು ಗಾಯವಾಗಿ ಇಲ್ಲವೆ ಚಳಿಯಾಗಿ ಬರುವದು. ಪ್ರಸೂತಿ ಕಾಲದಲ್ಲಿ ಗರ್ಭಾಶಯ ಮಾರ್ಗದಲ್ಲಿ ಆಗುವ ಗಾಯ, ಹುಟ್ಟಿದ ಕೂಸಿನ ಹೊಕ್ಕಳ ಹುರಿಯನ್ನು ಕೊಯ್ಯುವಾಗ ಆಗುವ ಗಾಯ, ಮತ್ತು ಎಡವಿದ್ದರಿಂದ ಕಾಲೊಳಗೆ ಮುಳ್ಳು ಮೊಳೆಗಳು ಚುಚ್ಚಿ ಆಗುವ ಗಾಯ, ಮುಂತಾದ ಕಾರಣಗಳಿಂದಲೂ ಈ ರೋಗವು ಆಗುವದುಂಟು. ಧನುರ್ವಾತದಲ್ಲಿ ಸ್ನಾಯುಗಳು ಯಾವಾಗಲೂ ಆಕುಂಚನ ಸ್ಥಿತಿಯಲ್ಲಿ ಸೆಟೆದಿರುತ್ತವೆ. ಸೆಟಿಬೇನೆಯಲ್ಲಿ ಅವು ಮೊದಲು ಆಕುಂಚನವಾಗಿ ಮತ್ತೆ ತೀರ ಸಡಿಲಾಗುತ್ತವೆ. ಆದರೆ ಧನುರ್ವಾತದಲ್ಲಿ ಅವು ಸಡಿಲಾಗುವದೇ ಇಲ್ಲ. ಸ್ವಲ್ಪ ಸಡಿಲಾಗಿ ಮತ್ತೆ ಹೆಚ್ಚಿಗೆ ಸೆಟೆಯುತ್ತವೆ.

**ಉಪಯುಕ್ತ ಸೂಚನೆ :—** ಬಾಲಗ್ರಹ, ಸೆಟಿಬೇನೆ ಮುಂತಾದ ವಿವರಗಳಲ್ಲಿ ಹೇಳಿದ ಔಷಧಗಳ ಉಪಯೋಗವು ಈ ಬೇನೆಯಲ್ಲಿಯೂ ಆಗುವದು. ಆದ್ದರಿಂದ ಆಯಾ ವಿವರಗಳನ್ನು ನೋಡಿರಿ. ಗಾಯವನ್ನು ಜಂತುಘ್ನ ಔಷಧದಿಂದ ಸ್ವಚ್ಛವಾಗಿ ತೊಳೆದು ಕಟ್ಟುವದು ಅವಶ್ಯವದೆ. ಗಾಯದೊಳಗೆ ಮಣ್ಣೂ ಧೂಳೂ ಹೋಗಗೊಡಬಾರದು.

---

# ವಿಸರ್ಪ

**Erysipelas.** **ಇರಿಸಿಪೇಲಸ್.**

ವಿಸರ್ಪವು ಸಾಂಸರ್ಗಿಕ ರೋಗವು. ಶೀಘ್ರಪ್ರಸರಣ ಶೀಲವಾದ ತ್ವಚೆಯ ದಾಹವೇ ವಿಸರ್ಪವು. ಗಾಯದಿಂದಲೂ ವ್ರಣದಿಂದಲೂ ಅಥವಾ ಆಕಸ್ಮಿಕ ಕಾರಣದಿಂದಲೂ ಅದು ಆಗುವದು. ಮೊದಲು ಚಳಿಯಾಗಿ ಸ್ವಲ್ಪ ಜ್ವರವು ಬರುತ್ತದೆ. ಕ್ಷುಧಾನಾಶವೂ ಅಸ್ವಸ್ಥತೆಯೂ ಆನಿಸುತ್ತದೆ. ಅನಂತರ ದೂಷಿತ ಭಾಗವು ಬಿಸಿಯಾಗುವದು; ಮತ್ತು ಬಿಗಿಯುವದು. ಅದು ಕೆಂಪಾಗುವದು; ಮತ್ತು ಬಾಯುವದು; ಅದಕ್ಕೆ ಕೈಹಚ್ಚಗೊಡುವದಿಲ್ಲ. ಜ್ವರವು ೧೦೪° ಅಂಶದ ವರೆಗೆ ಬರುವದು. ಆ ಭಾಗದಲ್ಲಿಯ ಲಸಿಕಾಗ್ರಂಥಿಗಳು ಬಾಯುವವು. ಮಿಂಚುವಂಥ ಪುತ್ತಗಿನ ಕೆಂಪು ಗುಳ್ಳೆಗಳು ಎದ್ದು ಎಲ್ಲ ಕಡೆಗೆ ಹಬ್ಬುವವು. ಅಲ್ಲಿ ನೋವು ಬಹಳಿರುವದು. ತಲೆಸೂಲಿ, ಮಳಮಳಿಸುವದು, ವಾಂತಿ ಮುಂತಾದ ಭಾವನೆಗಳಿರುವವು. ವಿಸರ್ಪದ ಹುಣ್ಣು ವಿಶೇಷವಾಗಿ ಮೋರೆಯ ಮೇಲೆ ಕಂಡುಬರುವದು. ಗಂಟಲ, ತಲೆ, ಕಾಲು, ಟೊಂಕ, ಹೊಟ್ಟೆ, ಮುಂತಾದ ಭಾಗಗಳ ಮೇಲೆಯೂ ಅದು ಆಗುವದುಂಟು. ಅದರಲ್ಲಿ ನೀರು ಇರುವದು. ಅದು ಒಡೆಯುವದು. ಮುಖವು ಬಹಳ ಬಾಯುತ್ತದೆ. ಮೂತ್ರವು ಕೆಂಪಾಗುತ್ತದೆ. ನಾಡಿಯು ವೇಗದಿಂದ ಹಾರುತ್ತದೆ. ರೋಗಿಯು ಅಶಕ್ತನಾಗುತ್ತಾನೆ. ವೇದನೆಯ ಮೂಲಕ ಸಮಾಧಾನವೆನಿಸುವದಿಲ್ಲ.

ಯಾವ ವಯಸ್ಸಿನ ಮನುಷ್ಯರಿದ್ದರೂ ಅವರಿಗೆ ಈ ಬೇನೆಯು ಬರಬಹುದು. ವಿಸರ್ಪವು ಒಮ್ಮೆ ಆದರೆ ಅದು ಮತ್ತೊಮ್ಮೆ ಆಗುವ ಸಂಭವವಿದೆ. ರೋಗದ ಸ್ವರೂಪವು ತೀವ್ರವಾಗಿದ್ದರೆ ಮಸ್ತಿಷ್ಕದಾಹ, ನ್ಯುಮೋನಿಯಾ, ಫುಪ್ಫುಸಾವರಣ ದಾಹ ಮುಂತಾದ ಉಪದ್ರವಗಳೂ ಆಗಬಹುದು.

**ಫೇ. ಫಾ:—** ಇದು ಪ್ರಮುಖ ಔಷಧವು. ಕೆಂಪಾಗುವದು, ಜ್ವರ ಬರುವದು, ಬಾಯುವದು ಮುಂತಾದ ಭಾವನೆಗಳಿರುವವು. ಇದನ್ನು ಹೊಟ್ಟೆಯೊಳಗೂ ಕೊಡಬೇಕು, ಹೊರಗಿನಿಂದಲೂ ಹಚ್ಚಬೇಕು. ಪೈತ್ತಿಕ

ಭಾವನೆಯಿದ್ದರೆ ಇದನ್ನೂ ನೇಟ್ರಂ ಸಲ್ಫವನ್ನೂ ಅದಲುಬದಲು ಮಾಡಿ ಕೊಡಬೇಕು.

**ನೇ. ಸ:**— ತೊಗಲು ಬಾಯುವದು; ಮೆತ್ತಗೂ ಕೆಂಪಗೂ ಆಗಿ ಮಿಂಚುವದು. ಸೋಯುತ್ತದೆ ಹಾಗು ವಾಂತಿಯಾಗುತ್ತದೆ.

**ಕಾ. ಮೂ:**— ಬಕ್ಕೆಯುಳ್ಳ ವಿಸರ್ಪ. ಫೇರಂಫಾಸವನ್ನೂ ಇದನ್ನೂ ಅದಲುಬದಲು ಮಾಡಿ ಕೊಡಬೇಕು.

**ಕಾ. ಸ:**— ಗುಳ್ಳೆಯುಳ್ಳ ವಿಸರ್ಪ. ಹಕಳಿ ಉದುರಿ ಹೋಗಲಿಕ್ಕೆಂದು ಇದನ್ನು ಕೊಡಬೇಕು.

**ಉಪಯುಕ್ತ ಸೂಚನೆ:**— ತ್ವಚೆಯು ಕ್ಷೋಭದಾಯಕವೂ ಉಷ್ಣವೂ ಇದ್ದರೆ, ಆರಿವೆಯಲ್ಲಿ ಸೋಯಿಸಿದ ಒಣ ಪುಡಿಯನ್ನಾಗಲೀ ಸಕ್ಕರೆಯನ್ನಾಗಲೀ ಅದರ ಮೇಲೆ ಉದುರಿಸಿದರೆ ಸಹ ಬಹಳ ಸಮಾಧಾನವಾಗುವದು. ಕೀವಾಗುವ ಲಕ್ಷಣವಿದ್ದರೆ ಪೋಟೀಸಿನಿಂದ ಕಾವು ಕೊಡಬೇಕು. ವಿಸರ್ಪವು ಬೆಳೆಯಬಾರದೆಂದು ಒಂಟೆಯ ಕೂದಲಿನ ಕುಂಚಿನಿಂದ ಆಯೊಡಾಯಿನದ ಪಟ್ಟಿಯನ್ನು ನೋವಿನ ಸ್ಥಳದ ಕೆಳಗೆ ಎಳೆಯಬೇಕು. ಬಯಲು ಹವೆಯು ತೀರ ಅವಶ್ಯವಾಗಿದೆ. ಈ ರೋಗದಲ್ಲಿ ೨× ಅಥವಾ ೩× ಶಕ್ತಿಯ ಫೇರಂಫಾಸವನ್ನು ಹೊರಗಿನಿಂದ ಲೇಪ ಮಾಡಿದರೆ ಬಹಳ ಉಪಯೋಗವಾಗುವದು. ಮೇಲೆ ಹೇಳಿದ ಔಷಧಗಳ ಹೊರತಾಗಿ ಭಾವನಾನುಸಾರವಾಗಿ ಬೇರೆ ಔಷಧಗಳನ್ನೂ ಕೊಡಬೇಕಾಗುವದು. ರೋಗದ ಸ್ವರೂಪವು ಉಗ್ರವಾಗಿದ್ದರೆ, ಭ್ರಮು ವಾತಮುಂತಾದ ಸನ್ನಿಪಾತದ ಭಾವನೆಗಳಿಗೆ ಕಾಲೀ ಫಾಸ ಹಾಗು ನೇಟ್ರಂ ಮೂರ ಇವುಗಳ ಉಪಯೋಗ ಮಾಡಬೇಕು.

---

# ಪ್ರದರ

**Leucorrhoea.** **ಲ್ಯುಕೊರಿಯಾ.**

ಗರ್ಭಾಶಯದಿಂದ ಹೋಗುವ ಬಿಳೇ ಸ್ರಾವಕ್ಕೆ ಪ್ರದರವೆನ್ನುತ್ತಾರೆ. ಈ ಸ್ರಾವವು ಯಾವಾಗಲೂ ಬಿಳಿಯದೇ ಇರುತ್ತದೆಂತಲ್ಲ. ಅದು ಬೇರೆ

ಬೇರೆ ಬಣ್ಣವಿದ್ದಿರಬಹುದು. ಗರ್ಭಾಶಯದಲ್ಲಿ ಅಥವಾ ಗರ್ಭಾಶಯ ಮಾರ್ಗದ ಅಂತಸ್ತ್ವಚೆಯಲ್ಲಿ ವ್ಯತ್ಯಾಸವುಂಟಾಗಿ (ವಿಶೇಷವಾಗಿ ಚಳಿಯಾಗಿ) ಈ ರೋಗವು ಉತ್ಪನ್ನವಾಗುತ್ತದೆ. ಗರ್ಭಾವಸ್ಥೆಯಲ್ಲಿಯೂ, ಗರ್ಭಾಶಯದಲ್ಲಿ ಅರ್ಬುದ, ಗ್ರಂಥಿ ಮುಂತಾದವುಗಳು ಉಂಟಾದಾಗಲೂ ತಿಳಿನೀರಿನಂಥ ಸ್ರಾವವಾಗುತ್ತದೆ. ಮುಟ್ಟೂ ಬಹಳ ಹೋಗುತ್ತದೆ. ಪ್ರದರದಲ್ಲಿ ತಿಳಿಸ್ರಾವವೂ ಹೋಗುತ್ತದೆ. ಅದೇ ಮೇರೆಗೆ ಜಿಗಟು, ಶ್ಲೇಷ್ಮಲ, ಕೀವಿನಂಥ, ಅಪಾರದರ್ಶಕ, ಕೆನೆಯಂಥ ದಟ್ಟಾದ ಸ್ರಾವವೂ ಹೋಗುವದು. ಗರ್ಭಾಶಯದಲ್ಲಿಯಾಗಲಿ ಗರ್ಭಾಶಯ ಮಾರ್ಗದಲ್ಲಿಯಾಗಲಿ ವ್ಯತ್ಯಾಸವು ಉಂಟಾದರೆ ಇಂಥ ಸ್ರಾವವು ಹೋಗುವದು. ಜಿಗಟು, ಕೆನೆಯಂಥ ದಪ್ಪಾದ ಸ್ರಾವವು ಬಹಳ ಹೋಗುವದು, ಅಥವಾ ಮಿಂಚುವಂಥ ಹೆಡಸುಳ್ಳ ಗಂಟುಳ್ಳ ಸ್ರಾವವು ಹೋಗುವದು, ಇದು ಬಹುತರವಾಗಿ ಗರ್ಭಾಶಯದೊಳಗಿನ ವ್ಯತ್ಯಾಸದ ಲಕ್ಷಣವೆಂದು ತಿಳಿಯಬೇಕು. ಗರ್ಭಾಶಯ ಮಾರ್ಗದಲ್ಲಿ ವ್ಯತ್ಯಾಸವಾದರೆ ಮಿಂಚುವಂಥ ಹೆಡಸುಳ್ಳ ಗಂಟುಳ್ಳ ಸ್ರಾವವು ಹೋಗುವದಿಲ್ಲ. ಹಳದಿ, ಹಸರು, ರಕ್ತಮಿಶ್ರಿತ, ಹೊಲಸು, ಉರುಪುಳ್ಳ, ತಿಂಡಿಯುಳ್ಳ, ಬಕ್ಕೆ ಉತ್ಪನ್ನಮಾಡುವ, ಉಷ್ಣ ಅಥವಾ ತಣ್ಣನ್ನ ಸ್ರಾವವು ಪ್ರದರದಲ್ಲಿ ಹೋಗುವದು.

ಚಳಿ, ಗರ್ಭಾಶಯದ ದಾಹಯುಕ್ತ ರೋಗ, ಅರ್ಬುದ, ಯೋನಿಕಂದ, ಗರ್ಭಾಶಯಭ್ರಂಶ, ಯೋನಿ ಮಾರ್ಗದಲ್ಲಿ ಕಂಕಣಕಾರವಿಡುವದು, ಅತಿಶಯ ಸಂಭೋಗ ಮಾಡುವದು, ಇವು ಪ್ರದರದ ಕಾರಣಗಳು.

**ಕಲ್ಕೆ. ಫಾ:**— ಸ್ವಚ್ಛ, ದಪ್ಪ, ಪಾರದರ್ಶಕ, ತತ್ತಿಯೊಳಗಿನ ಬಿಳೀ ಲೋಳೆಯಂಥ ಸ್ರಾವವು. ಜನನೇಂದ್ರಿಯದ ಸರ್ವಸಾಧಾರಣ ಅಶಕ್ತತೆ ಮುಟ್ಟಾದ ಬಳಿಕ ಅದು ಹೆಚ್ಚಾಗುವದು. ಪ್ರದರದ ಎಲ್ಲ ರೋಗಿಗಳಿಗೆ ಪೌಷ್ಟಿಕವೆಂದು ಈ ಔಷಧದ ಉಪಯೋಗವಾಗುವದು. ರೋಗಿಗೆ ಬೇಗನೆ ಚಳಿಯಾಗುವದು. ಆಗ ಇದನ್ನು ಅವಶ್ಯವಾಗಿ ಕೊಡಬೇಕು.

**ಕಾ. ಮೂ:**— ಹಾಲಿನಂತೆ ಬೆಳ್ಳಗೆ ದಪ್ಪ ಸ್ರಾವವು ಹೋಗುತ್ತದೆ. ಅದು ಉರಿಯುವದಿಲ್ಲ. ಬಹುದಿವಸದಿಂದ ಮೈಯೊಳಗೆ ಭೇದಿಸಿದ ರೋಗಗಳಿಗೆ ಈ ಔಷಧದಿಂದ ವಿಶೇಷ ಉಪಯೋಗವಾಗುವದು.

**ನೇ. ಮೂ:**— ನೀರಿನಂತೆ ತೆಳ್ಳಗೆ, ಉರುಪುಳ್ಳ, ತೊಗಲು ಸುಲಿಯುವ, ತಿಂಡಿಬಿಡುವ ಸ್ರಾವವಾಗುವದು. ರೋಗಿಯು ಮೆತ್ತಗೂ, ಅಳದಕ್ಕಿಯೂ, ಉದಾಸೀನನೂ ಇರುತ್ತಾನೆ. ಗರ್ಭಾಶಯವು ತಿಂಡಿಯಿಡುತ್ತದೆ. ಮುಂಜಾವಿನಲ್ಲಿ ಜಾಡ್ಯವಿದ್ದು ತಲೆ ನೋಯುತ್ತದೆ.

**ನೇ. ಫಾ:**— ಸ್ರಾವವು ಹಳದಿ, ಜೇನುತುಪ್ಪದಂತೆ ಸಸುಗೆಂಪು ಅಥವಾ ನೀರಿನಂತೆ ಸ್ವಚ್ಛವಿರುತ್ತದೆ. ಅದು ಉರಿಯುತ್ತದೆ; ಮತ್ತು ಹೊಲಸು ನಾರುತ್ತದೆ.

**ಸಿ:**— ಸ್ರಾವವು ಬಹಳಾಗುತ್ತದೆ. ಮುಟ್ಟು ಆಗದೆ ಬರೇ ಸೆರಗು ಹೋಗುತ್ತದೆ. ಯೋಗ್ಯ ಪೋಷಣವಾಗದೆ ಇದ್ದ ಹೆಂಗಸರಿಗೆ ವಿಶೇಷ ಉಪಯೋಗವಾಗುವದು.

**ಕಾ. ಫಾ:**— ಉರುಪುಳ್ಳ ಹಳದೀ ಅಥವಾ ಕಿತ್ತಳೇ ಬಣ್ಣದ ಸ್ರಾವವಾಗುವದು. ಇದನ್ನೂ ನೇಟ್ರಂ ಮೂರವನ್ನೂ ಅದಲುಬದಲುಮಾಡಿ ಕೊಡಬೇಕು.

**ಕಾ. ಸ:**— ಜಿಗಟು, ತೆಳ್ಳಗೆ, ಹಳದೀ ಸ್ರಾವವಾಗುವದು. ಅದಕ್ಕೆ ಒಮ್ಮೊಮ್ಮೆ ಹಸರು ಬಣ್ಣವೂ ಬರುವದು.

**ಉಪಯುಕ್ತ ಸೂಚನೆ:**— ರೋಗವು ಬೇಗನೆ ನೆಟ್ಟಗಾಗಬೇಕಾದರೆ ಬಹಳ ಸ್ವಚ್ಛವಿರುವದು ತೀರ ಅವಶ್ಯವಾಗಿದೆ. ಅರ್ಧ ಬಟ್ಟಲ ಸ್ವಚ್ಛವಾದ ಬಿಸಿನೀರಿನಲ್ಲಿ ಹೊಟ್ಟೆಯೊಳಗೆ ಕೊಡತಕ್ಕ ಔಷಧವನ್ನು ೨೦ ಗ್ರೇನದಷ್ಟು ಹಾಕಿ ಅದರಿಂದ ಗರ್ಭಾಶಯವನ್ನು ತೊಳೆಯಬೇಕು. ಇಪ್ಪತ್ತು ಔಂಸ ಬಿಸಿನೀರಿನಲ್ಲಿ ಒಂದು ಚಮಚೆಯ ತುಂಬ ಕಲೆಂಡುಲಾ ಹಾಕಿ ಅದರಿಂದಲೂ ಗರ್ಭಾಶಯವನ್ನು ತೊಳೆಯಬಹುದು. ಸ್ರಾವದಿಂದ ನೋಯುತ್ತಿದ್ದರೆ ಇಲ್ಲವೆ ಉರಿಯುತ್ತಿದ್ದರೆ, ಹಾಯಡ್ರಾಸ್ಟಿಸವೆಂಬ ಔಷಧದ ಧಾವನದಿಂದ ತೊಳೆಯುವದೂ ಹಿತಕರವು. ಮೇಲೆ ಹೇಳಿದ ಔಷಧಗಳನ್ನು ಹೊಟ್ಟೆಯೊಳಗೆ ತೆಗೆದುಕೊಂಡರೆ ಅದರಿಂದ ರೋಗವು ಹಿಮ್ಮೆಟ್ಟುವದು.

# ಉಗುರು ಸುತ್ತು

**Whitlow-Felon.** ವ್ಹಿಟ್‍ಲೊ–ಫೇಲನ್.

ಹೆಬ್ಬೊಟ್ಟಿನಲ್ಲಿಯಾಗಲಿ ಬೇರೆ ಬೊಟ್ಟುಗಳಲ್ಲಿಯಾಗಲಿ, ಅವುಗಳ ಉಗುರಿನ ಭಾಗದಲ್ಲಿ ದಾಹವು ಉಂಟಾಗುವದೇ ಉಗುರುಸುತ್ತು. ಬಾಯುವದು, ಕೆಂಪಾಗುವದು, ಭಯಂಕರ ನೋಯುವದು ಮುಂತಾದ ದಾಹದ ಭಾವನೆಗಳಿರುತ್ತವೆ; ಕೀವೂ ಆಗುತ್ತದೆ. ಬೇನೆಯು ಭರದಲ್ಲಿ ಇರುವಾಗ ಬೊಟ್ಟುಗಳ ಅಸ್ಥಿಯಲ್ಲಿಯೂ ಈ ವಿಕೃತಿಯು ಸೇರಿ ಬಹಳ ತ್ರಾಸ ಕೊಡುತ್ತದೆ. ಇದಕ್ಕೆ ಕಲ್ಲೊತ್ತು ಅನ್ನುತ್ತಾರೆ. ವಿಶೇಷ ವೇದನೆಯಾಗುತ್ತದೆ; ಮತ್ತು ಅದರ ಪರಿಣಾಮವನ್ನು ಬಹಳ ದಿವಸ ಅನುಭವಿಸಬೇಕಾಗುತ್ತದೆ. ಅಸ್ಥಿನಾಶವೂ ಆಗುತ್ತದೆ.

ಉಗುರುಸುತ್ತು ಆಗುವ ಸಂಶಯವು ಬಂದಕೂಡಲೆ ಉಪ್ಪುಹಾಕಿದ ಬಿಸಿ ನೀರಿನಲ್ಲಿ ಬೊಟ್ಟು ಇಡಬೇಕು. ಕೈಯನ್ನು ಮೇಲಕ್ಕೆ ಎತ್ತಿ ಹಿಡಿಯಬೇಕು. ಕೀವು ಆಗ ಹತ್ತಿದರೆ ಕಣಕಿನ ಪೋಟೀಸ ಕಟ್ಟಬೇಕು. ಬೊಟ್ಟು ಬೇವಿನಲ್ಲಿ ಇಟ್ಟರೂ ಅದರಿಂದ ನೆಟ್ಟಗೆನಿಸುತ್ತದೆ. ಫೇರಂ ಫಾಸ ಮತ್ತು ಸಿಲಿಕಾ ಇವುಗಳಿಂದಲೇ ೧೦೦ ರಲ್ಲಿ ೯೦ ಜನರಿಗೆ ನೆಟ್ಟಗಾಗುತ್ತದೆ. ಶಸ್ತ್ರ ಕ್ರಿಯೆಯ ಅವಶ್ಯಕತೆ ಉಳಿಯುವದಿಲ್ಲ. ಭಾವನಾನುಸಾರವಾಗಿ ಕುರುವಿನ ಔಷಧಗಳನ್ನು ಕೊಡಬೇಕು. ಉಗುರು ತಿರುಗಿ ಬೇಗನೆ ಒರಲಿಕ್ಕೆಂದು ಸಿಲಿಸಿಯಾವನ್ನು ಬಹುದಿವಸ ಹೊಟ್ಟೆಯೊಳಗೆ ಕೊಡಬೇಕು.

---

# ಕಟ್ಟಿನ ಜ್ವರ

**Remittant Fever.** ರೆಮಿಟಂಟ ಫೀವರ.

ಆಯುರ್ವೇದದಲ್ಲಿ "ತರುಣಜ್ವರ," ಅಥವಾ "ಸಾಮಜ್ವರ"ವೆಂದು ಹೇಳುವ ಮತ್ತು ೯ ದಿವಸ ಆದನಂತರ ನಿಂತುಹೋಗುವಂಥ ಸನ್ನಿಪಾತ ಜ್ವರಕ್ಕೆ "ನವಜ್ವರ"ವೆನ್ನುವ ವಾಡಿಕೆಯುಂಟು. ಪ್ರಚಾರದಲ್ಲಿ

"ನವಜ್ವರ"ವೆಂದರೆ ೯ ದಿವಸದ ದೋಷಿಕ ಅಥವಾ "ವಿಷಮಜ್ವರ"ವೆಂಬ ಅರ್ಥವು ರೂಢವಾಗಿದೆ. ಆಯುರ್ವೇದ ಪದ್ಧತಿಯಲ್ಲಿ ಹೊಸದಾಗಿ ಬಂದ ಜ್ವರಕ್ಕೆ ಅಂದರೆ ತರುಣ ಜ್ವರಕ್ಕೆ ಔಷಧ ಕೊಡುವದಿಲ್ಲ. ಕಾರಣ ವೇನಂದರೆ, ನವಜ್ವರದ ಪ್ರಾರಂಭದಲ್ಲಿ ದೋಷವು ಆಮಾವಸ್ಥೆಯಲ್ಲಿ ಇದ್ದು ಔಷಧಕೊಟ್ಟಲ್ಲಿ, ದೋಷದ ಶಮನವಾಗದೆ ಬೇನೆಯು ಬೆಳೆಯುವದು ಎಂಬ ಕಲ್ಪನೆಯುಂಟು. ಇಂಗ್ಲಿಷ ವೈದ್ಯಕ ಪದ್ಧತಿಯಲ್ಲಿ ಈ ಕಲ್ಪನೆಯು ರೂಢವಿರುವದಿಲ್ಲವಾದಕಾರಣ ಪ್ರಕೃತಿಯಲ್ಲಿಯ ವ್ಯತ್ಯಾಸವು ಕಂಡಬಂದ ಕೂಡಲೆ ಪ್ರಾರಂಭದಿಂದ ಅದರ ಚಿಕಿತ್ಸೆ ಮಾಡಲಾಗುವದು.

ವಾಂತಿಯಾಗುವಂತೆ ಭಾಸವಾವಾಗುವದು, ಜೊಲ್ಲುಸೋರುವದು, ಎದೆಯಲ್ಲಿ ಬಿಗಿದಂತೆ ಎನಿಸುವದು, ಮಾಂದ್ಯವೂ, ಕಣ್ಣು ಮುಚ್ಚಿ ಹಾಕು ವದೂ, ಜಾಡ್ಯವೂ, ಅರುಚಿಯೂ, ಬಾಯಿಕೆಡುವದೂ, ಹಸಿವೆಯಾಗ ದಿರುವದೂ, ಜ್ವರದ ಪ್ರಾಬಲ್ಯವೂ, ಮೂತ್ರಾತಿರೇಕವೂ ಮುಂತಾದವು ಗಳು ತರುಣ ಅಥವಾ ಸಾಮಜ್ವರದ ಲಕ್ಷಣಗಳು. ಈ ಲಕ್ಷಣಗಳನ್ನು ಲಕ್ಷಿಸಿ, ಫೇ. ಫಾ; ನೇ. ಮೂ; ಕಾ. ಮೂ. ಮುಂತಾದ ಔಷಧಗಳ ಯೋಜನೆಯನ್ನು ಲಕ್ಷಣಾನುಸಾರ ಮಾಡಬೇಕು.

ಆಯುರ್ವೇದ ಪದ್ಧತಿಯ ಪ್ರಕಾರ ಸನ್ನಿಪಾತಜ್ವರದ ಅವಧಿಯು ೭, ೯, ಇಲ್ಲವೆ ೧೧ ದಿವಸ ಇರುವದು; ಇಲ್ಲವೆ ಇದರ ಎರಡುಪಟ್ಟು ಅಂದರೆ ೧೪, ೧೮, ಇಲ್ಲವೆ ೨೨ ದಿವಸ ಇರುವದು. ಈ ಅವಧಿಯಲ್ಲಿ ರೋಗಿಯು ನೆಟ್ಟಗಾಗುವನು ಇಲ್ಲವೆ ಮರಣಹೊಂದುವನು. ಇವುಗಳಲ್ಲಿ ೯ ದಿವಸದ ಅವಧಿಯಲ್ಲಿ ನಿಂತುಹೋಗುವ ಸನ್ನಿಪಾತ ಜ್ವರಕ್ಕೆ ನವಜ್ವರ ವೆನ್ನುವರು. ಇದನ್ನು ಮೇಲೆ ಹೇಳಿದೆ. ಇಂಗ್ಲಿಷ ಭಾಷೆಯಲ್ಲಿ ಈ ಜ್ವರಕ್ಕೆ ರೆಮಿಟೆಂಟ ಫೀವ್ಹರ ಅಂದರೆ ಕಟ್ಟಿನಜ್ವರವೆನ್ನುವರು. ಅಥವಾ ೯ ದಿವಸದ ಟಾಯಿಫಾಯಿಡ ಜ್ವರ (ಸನ್ನಿಪಾತಜ್ವರ) ವೆಂದು ಸಹ ಅನ್ನಬಹುದು.

ಒಂದು ಕ್ಷಣದಲ್ಲಿ ಶರೀರದಲ್ಲಿ ದಾಹವಾಗೋಣ, ಮತ್ತೊಂದು ಕ್ಷಣದಲ್ಲಿ ಚಳಿಸೇರೋಣ, ತಲೆ ಹಾಗೂ ಸರ್ವಾಂಗವು ನೋಯೋಣ,

ಕಣ್ಣುಗಳು ಕೆಂಪಾಗಿ ಪರಟಾದಂತೆ ಇರೋಣ, ಕಣ್ಣು ಮುಚ್ಚಿಹಾಕೋಣ, ಅಶುದ್ಧಿ, ಬಡಬಡಿಸೋಣ, ಕೆಮ್ಮು, ಶ್ವಾಸ, ಅರುಚಿ, ನಾಲಿಗೆಯು ಕರ್‍ರಗೂ ಹುರಬರಕೂ ಇರೋಣ, ಉಗುಳಿನೊಳಗಿಂದ ರಕ್ತಬೀಳೋಣ, ತಲೆ ಅಲ್ಲಾಡುವದು, ನಿದ್ರಾಭಂಗ, ನೀರಡಿಕೆ, ನಿತ್ರಾಣವಾಗೋಣ, ಗಂಟಲದಲ್ಲಿ ಗುರಗುರಿಸೋಣ, ಮಾತಾಡಲಿಕ್ಕೆ ಬರದಿರೋಣ, ಮುಂತಾದ ಲಕ್ಷಣಗಳು ಈ ಜ್ವರದಲ್ಲಿರುವವು.

ಈ ಬೇನೆಯಲ್ಲಿ ವಿಷಮಜ್ವರವೆಂಬ ಹೆಸರಿನ ಕೆಳಗೆ ಹೇಳಿದ ಔಷಧಗಳು ಉಪಯೋಗವಾಗುವವು. ಅದರ ಕೆಳಗಿನ ಉಪಯುಕ್ತ ಸೂಚನೆಗಳೆಂಬ ವಿವರವನ್ನು ಸಹ ನೋಡಿರಿ.

---

# ನಷ್ಟಾರ್ತವ

**Amennorrhoea.** **ಅಮೆನೋರ್‍ಹ್ರಿಯಾ.**

ಮುಟ್ಟು ಆಗದಿರೋಣ, ರಜೋದರ್ಶನ ಆಗದೇ ಇರೋಣ, ಅಂದರೇನೇ ನಷ್ಟಾರ್ತವವು. ಸಾಧಾರಣವಾಗಿ ವಯಸ್ಸಿನ ೧೩-೧೪ ವರ್ಷದೊಳಗಾಗಿ ಹಾಗೂ ವಯಸ್ಸಿನ ೪೫-೪೭ ವರ್ಷಗಳ ನಂತರ, ಮತ್ತು ಗರ್ಭಿಣಿ ಸ್ಥಿತಿಯಲ್ಲಿ, ಸ್ತ್ರೀಯರು ಮುಟ್ಟಾಗುವದಿಲ್ಲ. ಈ ವಯಸ್ಸಿನ ಮರ್ಯಾದೆಹೊರ್ತಾಗಿ ಸ್ತ್ರಿಯರು ತಿಂಗಳಿಗೊಮ್ಮೆ ಮುಟ್ಟಾಗುವದು ಅವಶ್ಯಕವಿರುವದು. ಹೀಗೆ ಮುಟ್ಟಾಗದಿದ್ದರೆ ಏನಾದರೂ ವಿಕೃತಿಯಿದೆ ಎಂದು ತಿಳಿಯಬಹುದು. ನಷ್ಟಾರ್ತವವಿದ್ದ ಸ್ತ್ರಿಯರಲ್ಲಿ ಸಾಧಾರಣವಾಗಿ ಕೆಳಗೆ ಹೇಳಿದ ಲಕ್ಷಣಗಳಿರುವವು.

ತಲೆನೋವು, ವಿಶೇಷತಃ ನೆತ್ತಿಯ ಮೇಲ್ಭಾಗದಲ್ಲಿ ನೋವು, ಅರ್ಧತಲೆಶೂಲಿ ಕಾಲು ಜಡವಾಗುವದು, ಕಷ್ಟಶ್ವಾಸ, ಅಪಚನ, ನಿರುತ್ಸಾಹ, ಗಲಿತಸ್ಥಿತಿ, ನಿದ್ರಾಲುತೆ ಇವೇ ಮುಂತಾದ ಲಕ್ಷಣಗಳು ನಷ್ಟಾರ್ತವದಲ್ಲಿರುವವು. ಮುಟ್ಟಾಗುವ ಸಮಯದಲ್ಲಿ ರಜೋದರ್ಶನವಾಗದೇ, ಮೂಗು, ಕಣ್ಣು, ಗುದದ್ವಾರ, ಕಿವಿ, ಎದೆ ಮುಂತಾದ ಸ್ಥಳಗಳಲ್ಲಿಯ

ಶ್ಲೇಷ್ಮಲ ತ್ವಚೆಯೊಳಗಿಂದ ರಕ್ತಸ್ರಾವವಾಗುವ ಭಾವನೆಯು ಎಷ್ಟೋ ಸಾರೆ ಕಂಡುಬರುವದು.

ಹಿಂದೆ ನಿದಾನ ಪ್ರಕರಣದಲ್ಲಿಯ ನಷ್ಟಾರ್ತವವೆಂಬ ವಿವರ ನೋಡಿರಿ.

**ಕಲ್ಕೆ. ಫಾ**:— ಅನ್ನದೋಷದಿಂದ ಉದ್ಭವಿಸುವ ಪಾಂಡುರೋಗ ದಿಂದ ಕ್ರಮಕ್ರಮದಿಂದ ಮುಟ್ಟು ಆಗದಿದ್ದರೆ ನಿರುತ್ಸಾಹ ಹಾಗೂ ನಿಸ್ತೇಜ ಮುಖಮುದ್ರೆಯಾಗಿರುವಾಗ್ಗೆ ಇದನ್ನು ಕೊಡುವದು.

**ಕಾ. ಫಾ**:— ಮಾನಸಿಕಶ್ರಮಾಧಿಕ್ಯ, ಉತ್ಸಾಹಭಂಗ, ಬೇಸರ ಬರುವಂಥ ವ್ಯವಸಾಯ; ಸರ್ವಸಾಧಾರಣ ಅಶಕ್ತತೆ, ಇವುಗಳ ಮೂಲಕ ಬರುವ ನಷ್ಟಾರ್ತವ. ನಾಲಿಗೆಯ ಮೇಲೆ ಸಾಸಿವೆ ಅರೆದು ಮಾಡಿದ ಲೇಪದಂತೆ ಕಾಣುವ ಅಶುದ್ಧತೆ, ಬಾಯಿಗೆ ಹೊಲಸು ನಾತ, ನಾಲಗೆಗೆ ಅರುಚಿ ಇದ್ದರೆ, ಸ್ವಭಾವ ತ್ರಾಸಿಕವಿದ್ದಲ್ಲಿ, ಇಂಥ ಲಕ್ಷಣಗಳು ಇದ್ದರೆ.

**ಕಾ. ಮ್ಯೂ**:— ಶೀತದಿಂದಲೂ ಶೀತ ಸ್ಥಳದಲ್ಲಿ ಅಥವಾ ಶೀತ ಹವೆ ಯಲ್ಲಿ ಕೆಲಸ (ಒಗೆಯುವದು ಮುಂತಾದ್ದು) ಮಾಡುವದರಿಂದಲೂ ನಾಲಿ ಗೆಯು ಬೆಳ್ಳಗಾಗಿದ್ದರೆ.

**ನೇ. ಮ್ಯೂ**:— ರಕ್ತಾಭಾವದಿಂದಾಗುವ ನಷ್ಟಾರ್ತವ, ತಲೆಶೂಲಿ, ಮಾಂದ್ಯ, ಮ್ಲಾನತೆ ಮುಂತಾದ ಲಕ್ಷಣಗಳು ಇದ್ದರೆ.

**ಕಾ. ಸ**:— ಮುಟ್ಟು ಸ್ವಲ್ಪ ಅಥವಾ ತೀರ ಇಲ್ಲದಂತಾದರೆ. ಹೊಟ್ಟೆಯು ತುಂಬಿ ಜಡವಾದಂತಿದ್ದರೆ.

**ಉಪಯುಕ್ತ ಸೂಚನೆ**:— ಈ ರೋಗದಲ್ಲಿ ಮುಟ್ಟು ನಿಲ್ಲುವದರ ಹೊರ್ತಾಗಿ ಒಟ್ಟೆಬರೋಣ, ಮುಖಮುದ್ರೆ ಕೆಂಪಾಗೋಣ, ತಲೆನೋವು, ಕಾಲು ತಣ್ಣಗಾಗೋಣ, ಮುಂತಾದ ಲಕ್ಷಣಗಳು ಸಹ ಒಮ್ಮೊಮ್ಮೆ ಇರುವವು. ಇಂಥ ಪ್ರಸಂಗದಲ್ಲಿ ನಷ್ಟಾರ್ತವದಲ್ಲಿ ಉಪಯೋಗವಾಗು ವಂಥ ಔಷಧಗಳ ಜೊತೆಗೆ, ಈ ಭಾವನೆಗಳಿಗೆ ಸರಿಯಾಗುವ ಔಷಧಗಳನ್ನು ಕೊಡಬೇಕು. ಒಟ್ಟೆಗಳಿಗೆ ಮ್ಯಾ. ಫಾ. ಕೆಂಪು ಮುಖಮುದ್ರೆ ಆಗಿದ್ದಲ್ಲಿ ಫೇ. ಫಾ. ಮುಂತಾದ ಔಷಧಗಳನ್ನು ಲಕ್ಷಣಾನುಸಾರ ಕೊಡುವದು.

---

# ಮೂಗಿನ ರೋಗಗಳು

**Diseases of the Nose.** ಡಿಸೀಜಿಸ್ ಆಫ್ ದಿ ನೋಜ.

ಮೂಗು ದಪ್ಪಾಗಿಯೂ ಬಾತದ್ದಾಗಿಯೂ ಇರುವದೇ ನಾಸಿಕಾ ದಾಹ, ಅಸ್ಥಿಮಾರ್ದವತೆ, ಹಾಗೂ ಗಂಡಮಾಲೆಯು ಪ್ರಕೃತಿಜನ್ಯರೋಗಗಳ ಲಕ್ಷಣವು. ಮುಟ್ಟು ದೋಷದಲ್ಲಿ ಮೂಗಿನ ತುದಿಯು ಮುಂದೆ ಬಂದಂತಾಗಿರುತ್ತದೆ. ಸೆಟೆಬೇನೆ ಬರುವ ಪೂರ್ವದಲ್ಲಿ ಸಣ್ಣ ಮಕ್ಕಳ ಮೂಗು ಒಮ್ಮಿಂದೊಮ್ಮೆ ಮುಂದೆ ಬಂದಂತೆ ಕಾಣುತ್ತದೆ. ಪ್ರಸೂತಿಯ ಕಾಲದಲ್ಲಿ ಮೂಗು ಚೂಪಾಗುವದು ( ಮುಂದೆ ಬಂದಂತೆ ) ಇದ್ದರೆ ಗರ್ಭಾಶಯದಲ್ಲಿ ರಕ್ತಸ್ರಾವವಾದ ಹಾಗೂ ಮುಂದೆ ಸೆಟೆಬೇನೆ ಬರುವ ಪೂರ್ವ ಲಕ್ಷಣವೆಂದು ತಿಳಿಯಬೇಕು. ಶಕ್ತಿಪಾತವಾಗುವ ಕಾಲಕ್ಕೆ ಸಹ ಈ ಲಕ್ಷಣವು ಕಂಡುಬರುವದು. ಉಗ್ರಸ್ವರೂಪದ ರೋಗದಲ್ಲಿ ಈ ಲಕ್ಷಣವು ಉದ್ಭವಿಸಿದರೆ ಅನಿಷ್ಟವೆಂದು ತಿಳಕೊಳ್ಳಬೇಕು. ಮೂಗಿನ ತಳದಲ್ಲಿ ತಾಮ್ರಬಣ್ಣದ ಹೊಳಪು ಕಂಡುಬಂದರೆ, ಮೂಗಿನಲ್ಲಿ ಉಪದಂಶ ಜನ್ಯ ವ್ರಣವಾಗಿರುವವೆಂದು ತಿಳಿಯಬೇಕು. ಮುಟ್ಟಾದ ಕಾಲಕ್ಕೆ, ಪ್ರದರವು ಬಹಳ ಹೋಗುತ್ತಿದ್ದ ಪ್ರಸಂಗದಲ್ಲಿಯೂ, ಪೀತಪಾಂಡುರೋಗ ದಲ್ಲಿಯೂ ಮೂಗು ನಿಸ್ತೇಜವಾಗಿ ಕಾಣುವದು. ಗರ್ಭಿಣಿ ಸ್ತ್ರೀಯರಲ್ಲಿ ಮೂಗು ನಿಸ್ತೇಜವಾಗಿ ಕಂಡುಬಂದರೆ ಬಹುತರವಾಗಿ ಗರ್ಭವು ಮೃತವಾಗಿ ದೆಂದು ತಿಳಿಯಬಹುದು. ಮೂಗಿನ ಮೇಲೆ ನಸುಗೆಂಪಾದ ಕಲೆ ಕಂಡು ಬಂದಲ್ಲಿ ಯಕೃತ ರೋಗವೂ ಬಹು ದಿವಸದ ಪ್ರದರರೋಗವೂ ಆಗಿವೆ ಎಂದು ತಿಳಿಯುವದು. ಸೆಟೆಬೇನೆ, ತಂಡಿಯಾಗೋಣ, ಓಕರಿಕೆ, ಮೂಗು ಬಿಚ್ಚುವದು, ಶಕ್ತಿಪಾತ, ಕರಳುಗಳಲ್ಲಿ ದಾಹ— ಈ ವಿಕೃತಿಗಳಲ್ಲಿ ಮೂಗು ತಣ್ಣಗಾಗಿರುವದು ತಿಳಿದುಬರುತ್ತದೆ. ನೆಗಡಿ, ರಕ್ತಜನ್ಯ ಮೂರ್ಛೆ ಮಾಂದ್ಯ, ಭ್ರಮೆ ಮುಂತಾದವುಗಳಲ್ಲಿಯೂ ಮೂಗುಬಿಚ್ಚುವ ಪೂರ್ವ ದಲ್ಲಿಯೂ ಮೂಗು ಬಿಸಿಯಾಗಿರುವದು. ಮೂಗು ತುರಿಸೋಣ, ಕೆರೆಯೋಣ– ಈ ಲಕ್ಷಣವು ಹೊಟ್ಟೆಯಲ್ಲಿ ಜಂತುಗಳು ಆಗಿದ್ದ ಲಕ್ಷಣವು. ಸನ್ನಿಪಾತ ಜ್ವರದಲ್ಲಿಯೂ, ಕೆಲವು ಮೆದುಳಿನ ರೋಗಗಳಲ್ಲಿಯೂ ಈ ಲಕ್ಷಣವು ಕಂಡುಬರುದು.

ನೆಗಡಿ ( ಶೀಘ್ರ ಹಾಗೂ ಬಹು ದಿವಸದ್ದು ), ಪಿನಸಿ, ಮೂಗು ಬಿಚ್ಚೋಣ, ಮೂಗಿನಲ್ಲಿ ಬಕ್ಕಿಯಾಗೋಣ, ದೇಟಿನ ಆಕಾರದ ಗ್ರಂಥಿ ಏಳೋಣ (Polypus) ಅಸ್ಥಿಕೊಳೆಯೋಣ, ಮೂಗುಸೋರೋಣ ಮುಂತಾದವು ಮೂಗಿನ ರೋಗಗಳಿರುವವು.

ಪಿನಸಿಯೆಂದರೆ ಒಂದು ಪ್ರಕಾರದ ಮೂಗಿನಲ್ಲಿಯ ಶೀತವೇ ಸರಿ. ಶೀಘ್ರಶೀತದ ಕಾಲಕ್ಕೆ ಮೂಗಿನೊಳಗಿಂದ ಕೀವಿನಂಥ ಸಿಂಬಳು ಸೋರುವ ಶೀತದ ಯೋಗ್ಯ ಚಿಕಿತ್ಸೆ ಮಾಡಿದ್ದರಿಂದ ಇಲ್ಲವೆ ಈ ಬೇನೆಯ ತಾತ್ಸಾರ ಮಾಡಿದ್ದರಿಂದಲೂ ಈ ರೋಗವು ಉದ್ಭವಿಸುತ್ತದೆ. ಗಂಡುಮಾಲೆಯ ಪ್ರಕೃತಿಯುಳ್ಳ ಹಾಗೂ ಉಪದಂಶಜನ್ಯ ಪ್ರಕೃತಿಯುಳ್ಳ ರೋಗಿಗಳಲ್ಲಿ ಈ ರೋಗವು ಸಹಜ ಅಗತ್ಯ ಕಂಡುಬರುವದು. ಈ ರೋಗದಲ್ಲಿ ಮೂಗಿನ ಶ್ಲೈಷ್ಮಲ ತ್ವಚೆಯು ದಪ್ಪಾಗಿಯೂ ನಸುಗೆಂಪಾಗಿಯೂ ಕಂಡುಬರುವದು. ನಂತರ ಅದು ತೆಳ್ಳಗೂ ನಿಸ್ತೇಜಕವೂ ಕಾಣಹತ್ತುವದು. ಮೂಗಿನಿಂದ ಸೋರುವ ಸಿಂಬಳು ಕೀವಿನ ಉಪಾದೆಯಲ್ಲಿರುವದು. ಒಮ್ಮೊಮ್ಮೆ ಬಹಳಿರುವದು. ಒಮ್ಮೊಮ್ಮೆ ಕಡಿಮೆ ಇರುವದು. ಸಿಂಬಳು ಹಕ್ಕಳಿಗಟ್ಟುವದು ಮತ್ತು ಮೂಗಿಗೆ ಅಂಟಿಕೊಂಡಿರುವದು. ಬಹಳವಾಗಿ ಅವು ಹಸರು ಇರುವವು. ಒಮ್ಮೊಮ್ಮೆ ಅವುಗಳಲ್ಲಿ ರಕ್ತವೂ ಕೂಡಿದ್ದಿರುತ್ತದೆ. ಸ್ವಲ್ಪ ದಿವಸಕ್ಕೆ ಮೂಗಿಗೆ ದುರ್ಗಂಧವುಂಟಾಗುವದು. ರೋಗಿಯ ಹತ್ತರ ಕೂಡಲಾಗುವದಿಲ್ಲ. ರೋಗಿಗೆ ಸಹ ದುರ್ಗಂಧವೆನಿಸುತ್ತದೆ. ಮತ್ತು ಒಮ್ಮೊಮ್ಮೆ ಮೂಗಿಗೆ ವಾಸನೆಯು ತಿಳಿಯುವದಿಲ್ಲ. ಈ ರೋಗದಲ್ಲಿ ನಾಸಿಕಾಸ್ಥಿಯ ಮೇಲೆ ಪರಿಣಾಮವಾಗಿ ಅದು ಹುಳಿಯಹತ್ತುತ್ತದೆ. ಹುಣ್ಣುಗಳೂ ಆಗಹತ್ತುತ್ತವೆ. ಮೂಗಿನಿಂದ ಕೀವೂ ಸೋರಹತ್ತುವದು. ಶ್ವಾಸೋಚ್ಛ್ವಾಸವು ಚನ್ನಾಗಿ ನಡೆಯುವದಿಲ್ಲ. ಎಲುಬು ಕೊಳತದ್ದರಿಂದ ಮೂಗಿನ ತುದಿಯು ಒಮ್ಮೊಮ್ಮೆ ಕಡೆದು ಸಹ ಬೀಳುವದು. ತಾಲುವಿನಲ್ಲಿಯೂ ಮುಂತಾದವುಗಳಲ್ಲಿ ಛಿದ್ರಗಳು ಬೀಳುವವು. ಮೂಗಿನಲ್ಲಿ ಹುಳಗಳೂ ಬೀಳುವದುಂಟು. ಈ ರೋಗದ ಮೇಲೆ ಕ. ಫ್ಲೂ. ಕಾ. ಫಾ. ಕಾ. ಸ. ನೇ. ಸ. ಮತ್ತು ಸಿ. ಈ ಔಷಧಗಳ ಉಪಯೋಗವಾಗುವದು. "ನೆಗಡಿ" ಎಂಬ ವಿವರದ ಕೆಳಗೆ ಹೇಳಿದ ಔಷಧಗಳ ಉಪಯೋಗವಾಗುವದು.

"ನೆಗಡಿ," "ಮೂಗು ಬಿಚ್ಚುವದು" ಈ ವಿವರಗಳನ್ನು ನೋಡಿರಿ.

**ಉಪಯುಕ್ತ ಸೂಚನೆ:—** ಪಿನಸಿಯು ಬಹುತರವಾಗಿ ಉಪದಂಶ ಜನ್ಯ ಪ್ರಕೃತಿಯಲ್ಲಿ ಇರುವದು. ಅದರ ಚಿಕಿತ್ಸೆ ಪಥ್ಯ ಮುಂತಾದವುಗಳ ಕಡೆಗೆ ಲಕ್ಷ್ಯಕೊಡಬೇಕು. ನಾಸಿಕಾಸ್ಥಿಯು ಕೊಳೆತಿದ್ದರೆ ಹಾಗೂ ಅದರಿಂದ ಕೀವು ಬರುತ್ತಿದ್ದರೆ ಸಿ. ಕೊಡಬೇಕು. ಮೂಗಿಗೆ ಹೊಲಸು ನಾತ ಬರುತ್ತಿದ್ದರೆ ಸಿ. ಮತ್ತು ಕಾ. ಫಾ. ಇದರುಪಯೋಗವಾಗುವದು. ಸಿಂಬಳು ಗಂಟುಗಂಟಾಗಿ ಹೋಗುತ್ತಿದ್ದರೆ ಕಲ್ಕೆ. ಫ್ಲೂ. ಕೊಡಬೇಕು. ಉಪದಂಶಜನ್ಯವಿದ್ದರೆ ನೇಟ್ರ. ಸ. ಅವಶ್ಯ ಕೊಡತಕ್ಕದ್ದು.

---

# ಮೂತ್ರಪಿಂಡದಾಹ

**Brights' Disease.** ಬ್ರಾಯಿಟ್ಸ ಡಿಸೀಜ.

ಮೂತ್ರಪಿಂಡ ( ವೃಕ್ಕ )ದ ದಾಹವೆಂಬ ಬೇನೆಗೆ ಮಹಾರಾಷ್ಟ್ರ ಭಾಷೆಯಲ್ಲಿ ನಾಲಗುದವೆನ್ನುವರು. ಇಂಗ್ಲಿಷ ಭಾಷೆಯಲ್ಲಿ Brights' Disease ವೆನ್ನುವರು. ಈ ಬೇನೆಯು ಶೀಘ್ರ ಮತ್ತು ದೀರ್ಘ ದಾಹವೆಂದು ಎರಡು ತರದ್ದು ಇರುವದು. ಶೀಘ್ರ ದಾಹದಲ್ಲಿ ಸಾಧಾರಣವಾಗಿ ಕೆಳಗೆ ಹೇಳಿದ ಪ್ರಕಾರ ಲಕ್ಷಣಗಳು ಕಂಡುಬರುವವು.

ಜ್ವರವಿರುವದು. ಶೀತದಿಂದ ಈ ರೋಗವಾಗದಿದ್ದರೆ ಜ್ವರವು ೧೦೪°–೧೦೫° ರ ವರೆಗೆ ಏರುವದು. ಟೊಂಕದಲ್ಲಿ ಒಮ್ಮೊಮ್ಮೆ ನೋಯುತ್ತದೆ. ಒಮ್ಮೊಮ್ಮೆ ನೋಯುವದಿಲ್ಲ. ಆದರೂ ವೃಕ್ಕ ಪ್ರಾಂತದಲ್ಲಿ ಜೋರಿನಿಂದ ನೋಯುತ್ತದೆ. ಮೇಲಿಂದ ಮೇಲೆ ಮೂತ್ರಹೋಗುವ ಇಚ್ಛೆಯಾಗುವದು ಮತ್ತು ಸ್ವಲ್ಪೇ ಹನಿಗಳು ಉದರುವವು. ಒಮ್ಮೊಮ್ಮೆ ರಕ್ತಸಹ ಬೀಳುವದು. ಮೂತ್ರದ ಸಂಗಡ ಅಲ್ಬ್ಯುಮಿನ್ನವು ಅವಶ್ಯವಾಗಿ ಹೋಗುವದು.

ಮೂತ್ರದ ಪ್ರಮಾಣವು ಬಹಳ ಮೇಲೆ ಕಡಿಮೆ ಇರುವದು. ಒಮ್ಮೊಮ್ಮೆ ಮೂತ್ರ ಸ್ತಬ್ಧವೂ ಇರುವುದು. ಮೊದಲು ಮೂತ್ರವು ಮಣ್ಣು

ಕಲಸಿದಂತೆ ಇರುವದು. ಕೆಂಪು ಬಣ್ಣದಿದ್ದರೆ ಅದು ರಕ್ತಮಿಶ್ರಿತವೆಂದು ತಿಳಿಯಬೇಕು. ರೋಗದ ಸ್ವರೂಪವು ಉಗ್ರವಿದ್ದರೆ, ಕೈಕಾಲು, ಕಣ್ಣುಗಳಲ್ಲಿಯೂ ಇತರ ಭಾಗದಲ್ಲಿಯೂ ಬಾವು (ಜಲಶೋಥ) ಇರುವದು. ಸಣ್ಣ ಹುಡುಗರಿಗೆ ವಟಿಗಳೂ ಇರುತ್ತವೆ. ಅವು ಬಹುತರವಾಗಿ ಮೂತ್ರ ಸ್ತಬ್ಧತೆಯ ಮೂಲಕ ಉತ್ಪನ್ನವಾದವು ಇರುವವು. ವಾಂತಿಯ ಭಾವನೆಯೂ ಎಷ್ಟೋಸಾರೆ ಕಂಡುಬರುವದು. ಮೂತ್ರವು ಹೆಚ್ಚಾಗಲಿಕ್ಕೆ ಹತ್ತಿದರೆ ರೋಗವು ಹಿಮ್ಮೆಟ್ಟಿತೆಂದು ತಿಳಿಯಲು ಅಡ್ಡಿ ಇಲ್ಲ. ದೀರ್ಘದಾಹದಲ್ಲಿ ಕೆಳಗೆ ಹೇಳಿದ ಭಾವನೆಗಳು ಇರುವವು. ಅವಾವವೆಂದರೆ—

ರೋಗಿಯು ಕಳೆಗುಂದಿ ಪಾಂಡುರೋಗಿಯುವಸಂತೆ ಕಾಣುವನು. ಶಕ್ತಿಯು ಕಡಿಮೆಯಾದಂತೆ ಗುಣಗುಟ್ಟುತ್ತಾನೆ. ಮೂತ್ರವು ಕಡಿಮೆಯಾಗುತ್ತದೆ. ಅದು ಮಣ್ಣು ಕೂಡಿದಂತೆಯೂ, ಹಳದಿ, ಹೊಗೆಯಂತೆ ಕಪ್ಪು ಕಾಣುವದು. ಜಲಶೋಥವು ಅದರ ಪ್ರಮುಖ ಭಾವನೆಯು. ಮೊದಲು ಕಾಲು, ಮುಖಚರ್ಯೆ, ಇವುಗಳಲ್ಲಿ ಬಾವು ಬರುವದು ಮುಂದೆ ಅದು ಸರ್ವತ್ರ ಹಬ್ಬುವದು. ಮೂತ್ರದಲ್ಲಿ ಅಲ್ಬ್ಯುಮಿನ್ ಇರುವದೇ ನಿಃಸಂದೇಹ; ಇತರ ಕ್ಷಾರಗಳೂ ಇರುವವು. ಮೊದಲು ಮೊದಲು ನಾಡಿಯು ತುಂಬಿದಂತೆಯೂ ಬಹು ಮಂದವೂ ಇರುವದು. ಮುಂದೆ ಅದು ತೀವ್ರವಾಗುತ್ತದೆ ಮತ್ತು ನಿಃಶಕ್ತವಿರುವದು. ವಾಂತಿ, ರೇಚ, ಮುಂತಾದ ಭಾವನೆಗಳು ಸಹ ಇರುವವು. ಆದರೆ ಅಗ್ನಿಮಾಂದ್ಯದ ಇತರ ಭಾವನೆಗಳು ಇರುವವೇ ಎಂದು ಹೇಳಕೂಡದು.

ಶೀತ ತಂಪು ಸ್ಥಳದ ಹವೆ, ಗೊಬ್ಬರ, ಸನ್ನಿಪಾತದಂಥ ಜ್ವರ, ಉಪದಂಶ, ಕ್ಷಯ, ಮುಂತಾದವುಗಳೇ ಈ ರೋಗದ ಕಾರಣಗಳು. ಗರೋದರ ಸ್ಥಿತಿಯಲ್ಲಿ ಸ್ತ್ರೀಯರಿಗೆ ಈ ರೋಗವಾಗುವದು ಕಂಡುಬರುವದು. ಶರೀರದಿಂದ ಬಹುಕಾಲ ಕೀವು ಹರಿಯುತ್ತಿರುವದೂ ಈ ರೋಗಕ್ಕೆ ಕಾರಣವಾಗುವದುಂಟು. ಚಿಕ್ಕಮಕ್ಕಳಲ್ಲಿಯೂ ತರುಣರಲ್ಲಿಯೂ ಈ ರೋಗವು ವಿಶೇಷತಃ ಕಂಡುಬರುವುದು.

**ಕಲ್ಕೆ ಫಾ:** — ಈ ಕ್ಷಾರದ ಕೊರತೆಯಿಂದ ಈ ರೋಗವಾಗುವದುಂಟು. ಹಿಂದೆ ಕಂಡುಬರುವ ಕಲ್ಕೆ. ಫಾ. ಎಂಬ ವಿವರ ನೋಡಿರಿ.

**ಕಲ್ಕೆ. ಫಾ:**— ಈ ರೋಗದ ಮೇಲಿನ ಪ್ರಮುಖ ಔಷಧವಿದು. ರೋಗಿಯು ಅಶಕ್ತನಿದ್ದು ಸವೆಯುತ್ತಿರುತ್ತಾನೆ. ಹಸಿವೆ ಇರುವದಿಲ್ಲ. ಮೂತ್ರದಲ್ಲಿ ಆಲ್ಬ್ಯುಮಿನದ ಪ್ರಮಾಣ ಹೆಚ್ಚಾಗಿರುವದು. ಗರೋದರ ಸ್ತ್ರೀಯರಲ್ಲಿ ಆಗುವ ಆಲ್ಬ್ಯುಮಿನ್ಯೂರಿಯಾ. ( ನಾಳಗುಡ ಕಾಲಿನಲ್ಲಿ ಬಾವು ಇರುವದು ಹಾಗೂ ಮೂತ್ರದಲ್ಲಿ ಆಲ್ಬ್ಯುಮಿನ ಪದಾರ್ಥ ದೊರೆ ಯುವದು ) ಇದ್ದರೆ,

**ಕಾ. ಫಾ:**— ಮಾನಸಿಕ ತಾಪದಿಂದುದ್ಭವಿಸುವ ಭಾವನೆಗಳನ್ನು ಕಳೆಯುವದಕ್ಕೋಸ್ಕರ ಇದರ ಉಪಯೋಗ ಮಾಡಬೇಕು. ನಿದ್ರಾನಾಶ, ಗಲಿತಸ್ಥಿತಿ, ಉತಾವಳಿಸ್ವಭಾವವು. ಚಿಡಚಿಡೀ ಸ್ವಭಾವವು. ಅಸ್ವಸ್ಥತೆ ಮುಂತಾದವು.

**ಫೇರಂ. ಫಾ:**— ಜ್ವರ ಮುಂತಾದ ದಾಹಯುಕ್ತ ಭಾವನೆ ಇದ್ದರೆ ಇದರ ಹೊರ್ತಾಗಿ ನೇಟ್ರಂ ಮೂ. ಮತ್ತು ನೇಟ್ರಂ ಫಾ. — ಈ ಔಷಧ ಗಳು ಅವುಗಳ ವಿಶಿಷ್ಟ ಭಾವನೆಗಳು ಇದ್ದಲ್ಲಿ ಉಪಯೋಗವಾಗುವವು.

**ಉಪಯುಕ್ತ ಸೂಚನೆ:**— ಮಾನಸಿಕ ಹಾಗೂ ಶಾರೀರಿಕ ವಿಶ್ರಾಂತಿಯ ಅವಶ್ಯಕತೆಯು ಬಹಳೇ ಇರುವದು. ಕೆಟ್ಟ ಹವೆಯಲ್ಲಿ ಹೊರಗೆ ಹೋಗಬಾರದು. ಮಾದಕ ಪದಾರ್ಥ ತಿನ್ನುವದು ತೀರ ವರ್ಜ್ಯ ಮಾಡಬೇಕು. ಬೆಚ್ಚನ ನೀರಿನಿಂದ ಸ್ನಾನಮಾಡೋಣ, ರಕ್ತಾಭಿಸರಣ ಕ್ರಿಯೆಗೆ ಸಹಾಯವಾಗುವಂತೆ ಮೈಯನ್ನು ಮೆಲ್ಲಮೆಲ್ಲಗೆ ತಿಕ್ಕೋಣ, ಮೈಯಲ್ಲಿ ಉಣ್ಣೆಯ ಬಟ್ಟೆಗಳನ್ನು ಹಾಕಿಕೊಳ್ಳೋಣ ಮುಂತಾದವು ಗಳನ್ನು ಮಾಡುವದರಲ್ಲಿ ದಕ್ಷತೆ ಇಡಬೇಕು. ಹವೆಯು ಚೆನ್ನಾಗಿದ್ದರೆ ರೋಗಿಯು ಶಕ್ತ್ಯಾನುಸಾರವಾಗಿ ಹೊರಗೆ ತಿರುಗಾಡಲು ಹೋಗಬೇಕು. ಹಾಲು, ಕಾಶಿ ಮೇಲಿನ ಕೆನೆ ತೆಗೆದು, ಬೆಂಣೆತೆಗೆದ ಮಜ್ಜಿಗೆ ಇವುಗಳ ಹೊರ್ತು ಬೇರೆ ತಿಂಡಿಯನ್ನು ಕೊಡಬಾರದು. ಆರಂಭದಲ್ಲಿ ಕುಡಿಯಲು ಕೊಡಲು ಹಾಲಿನ ಪ್ರಮಾಣ ಕಡಿಮೆ ಇರಬೇಕು. ಮುಂದೆ ಪ್ರಮಾಣ ವನ್ನು ಬೆಳಸುತ್ತ ಹೋಗುವದು. ಹಾಲುಸಹ ಕೊಡದೇ ಮಜ್ಜಿಗೆ ಅಷ್ಟೇ ಕೊಟ್ಟಲ್ಲಿ ಹೆಚ್ಚಿಗೆ ಹಿತಕರ. ಉಪ್ಪು ಅಂತೂ ಕೊಡಲೇಬಾರದು. ಈ

ರೋಗದಲ್ಲಿ ಉಪ್ಪು ಬರ್ಜಣವು. ಅದರಿಂದ ಅಪಾಯವೇ ಆಗುವದು. "ಮೂತ್ರಪಿಂಡಗಳ ರೋಗ" "ಮೂತ್ರಪಿಂಡದಾಹ" ಈ ವಿವರಗಳನ್ನು ನೋಡಿರಿ.

## ನಿದ್ರಾಭಂಗ

**Sleeplessness.** **ಸ್ಲೀಪಲೆಸ್‌ನೆಸ್.**

ರಾತ್ರಿಯಲ್ಲಿ ಸಾಕಷ್ಟಕ್ಕಿಂತ ಹೆಚ್ಚು ತಿನ್ನೋಣ, ಸಾಕಷ್ಟು ತಿನ್ನದಿರೋಣ, ಪಚನಾಗದಂಥದ್ದನ್ನು ತಿನ್ನೋಣ, ಚಹ, ಕಾಫಿ ಇವುಗಳನ್ನು ಮಿತಿಮೀರಿ ಕುಡಿಯೋಣ, ಮನಸ್ಸಿಗೆ ತಾಪವಾಗುವಂಥ ಸಂಗತಿಗಳಾಗೋಣ, ಮನಸ್ಸಿಗೆ ಧಕ್ಕೆ ತಗಲೋಣ, ಮಾನಸಿಕ ಶ್ರಮಾತಿರೇಕ, ಪ್ರಬಲಕಾಮೇಚ್ಛೆ, ಇವೇ ಮುಂತಾದವು ನಿದ್ರಾನಾಶಕ್ಕೆ ಕಾರಣಗಳು. ಶರೀರಕ್ಕುಂಟಾದ ಇತರ ವಿಕೃತಿಗಳಿಂದ ಸಹ ನಿದ್ರಾನಾಶದ ಭಾವನೆ ಉಂಟಾಗುವದು. ಸಾಧಾರಣತಃ ಯಾವತ್ತು ಜ್ವರಗಳಲ್ಲಿ ನಿದ್ದೆ ಇರುವದಿಲ್ಲ. ನಿದ್ದೆ ಹತ್ತಬೇಕಾದರೆ ಮೆದುಳಿನ ಪ್ರಾಂತದಲ್ಲಿ ರಕ್ತವು ಹೆಚ್ಚಾಗಿ ಅಭಿಸರಣ ಮಾಡುವದು ಅವಶ್ಯವಿದೆ.

**ಕಾ. ಫಾ:—** ತ್ರಾಸಿಕ ಹಾಗೂ ನಿರುತ್ಸಾಹೀ ರೋಗಿಗಳಿಗೆ, ನಿದ್ರೆಯ ಸಂಬಂಧದ ಎಲ್ಲ ರೋಗಗಳಲ್ಲಿ ಇದು ಮುಖ್ಯ ಔಷಧವು. ಅತ್ಯಂತ ಮಾನಸಿಕ ಶ್ರಮ, ಉದ್ಯಮದಲ್ಲಿಯ ಅಡಚಣಿಯ ಮೂಲಕ ಚಿತ್ತದ ಅಸ್ವಾಸ್ಥ್ಯವು ಆಪ್ತ ಇಷ್ಟರ ಮೃತ್ಯುವಿನ ಮೂಲಕ ಬಂದ ಉದ್ವಿಗ್ನತೆ; ಅಥವಾ ಇತರ ಮಾನಸಿಕ ತಾಪದಿಂದುಂಟಾಗುವ ನಿದ್ರಾನಾಶ; ಆಕಳಿಕೆಗಳೂ ಆಲಸ್ಯವೂ ಬರುವವು. ನಿದ್ದಿಯಲ್ಲಿ ಹುಡುಗರು ಅಂಜಿ ಏಳೋಣ; ಚೀರೋಣ; ದೆವ್ವದ ಅಂಜಿಕೆ, ತುಡುಗರು ಬರುವ ಅಂಜಿಕೆ, ಮುಂತಾದ ಅಂಜಿಕೆ ಹುಟ್ಟಿಸುವಂಥ ಸ್ವಪ್ನಗಳು. ಕಾಮೋದ್ದೀಪಕ ಸ್ವಪ್ನ; ನಿದ್ದಿಯಲ್ಲಿಯೇ ತಿರುಗಾಡೋಣ, ಮುಂತಾದ ವ್ಯವಹಾರ ನಡಿಯೋಣ, (Somnambulism); ನಿದ್ರಾಭ್ರಮ.

**ಫೇ. ಫಾ:**— ತಲೆಯಲ್ಲಿ ರಕ್ತಾಧಿಕ್ಯದಿಂದ ಆಗುವ ನಿದ್ರಾನಾಶ; ರಾತ್ರಿಯಲ್ಲಿ ಅಸ್ವಸ್ಥತೆ, ಚಿಂತೆ ಹುಟ್ಟಿಸುವಂಥ ಸ್ವಪ್ನ. ಮಧ್ಯಾಹ್ನದ ನಂತರ ಆಲಸ್ಯ. ಕಾ. ಫಾ. ಮತ್ತು ಇದು ಸರ್ತಿಯ ಮೇಲೆ ಕೊಡಬೇಕು. ನಿದ್ದೆ ತರತಕ್ಕ ಉತ್ತಮ ಔಷಧವು. ಸಹಸಾ ನಿದ್ರಾಭಂಗವಾಗದಂಥವರು ಇದನ್ನು ತೆಗೆದುಕೊಂಡಲ್ಲಿ ನಿದ್ರಾಭಂಗವಾಗುವದು. ೧೨ × ಅಥವಾ ಅದಕ್ಕೂ ಹೆಚ್ಚಿನ ಶಕ್ತಿಯನ್ನು ಕೊಡಬೇಕು.

**ಮ್ಯಾ. ಫಾ:**— ಮಾನಸಿಕ ತಾಪದಿಂದ ಮೆದುಳಿನ ಆಕುಂಚನವಾದಂತೆ ಅನಸೋಣವೂ ಅದರಿಂದಾಗುವ ನಿದ್ರಾಭಂಗವೂ ಇದ್ದಲ್ಲಿ.

**ನೇಟ್ರಂ. ಮ್ಯೂ:**— ನಿದ್ರೆಯ ಬಗ್ಗೆ ಪ್ರಬಲ ಇಚ್ಛೆ. ಯಾವಾಗಲೂ ಬಹಳ ನಿದ್ರೆ ಬಂದಾಗ್ಯೂ ಮೈಯಲ್ಲಿ ಉತ್ಸಾಹವಿರದಿರೋಣ. ಒಂದೇ ಸವನೆ ನಿದ್ದೆ ಮಾಡುವ ಇಚ್ಛೆ. ನಿದ್ದೆಯಲ್ಲಿ ಜೊಲ್ಲು ಬಹಳ ಸೋರುವದೂ ನಿದ್ರೆಯಲ್ಲಿ ಮೇಲಿಂದ ಮೇಲೆ ಅಂಜಿ ಏಳೋಣವು.

**ನೇಟ್ರಂ. ಸ:**— ಕಂಣು ಮುಚ್ಚಿ ಹಾಕೋಣ; ಜಾಡ್ಯ ಇದ್ದು ನಾಲಗೆಯ ಮೇಲೆ ಬೂದಿ ಬಂಣದ, ಅಥವಾ ಬಿಳೀ, ಹಸರು ಕಿಟ್ಟ ನಾಲಗೆಯು ಕಹಿಯಾಗಿದ್ದು; ಪೈತ್ತಿಕ ಭಾವನೆಗಳು ಇದ್ದಲ್ಲಿ ಕಾಮಣಿ ಆಗುವ ಪೂರ್ವ ಲಕ್ಷಣಗಳೆಂದು ತಿಳಿಯಬೇಕು.

**ಕಲ್ಕೆ. ಫಾ:**— ವೃದ್ಧರಿಗೆ ಆಗುವ ಜಾಡ್ಯ. ಖಿನ್ನ ವಿಚಾರಗಳು ಪ್ರಾತಃಕಾಲದಲ್ಲಿ ತೀವ್ರ ಏಳೋಣಾಗುವದಿಲ್ಲ. ಸಂಣ ಮಕ್ಕಳು ನಿದ್ದೆಯಲ್ಲಿ ಬಡಬಡಿಸುತ್ತವೆ. ಆಕಳಿಕೆ ಮುಂತಾದವುಗಳು ಇದ್ದಲ್ಲಿ.

**ಕಲ್ಕೆ. ಫ್ಲೂ:**— ಸುಸ್ವಪ್ನ ಬೀಳುವವು. ಆದರೂ ಸಮಾಧಾನವಾಗುವದಿಲ್ಲ. ಮರಣದ ಅಥವಾ ಇತರ ಸಂಕಟದ ಅಂಜಿಕೆಯ ಮೂಲಕ ನಿದ್ದೆಯ ಅಭಾವ–ಸ್ಥಳ ಬದಲಿಸಿದರೂ ನಿದ್ದೆ ಹತ್ತದಿರೋಣ.

**ಉಪಯುಕ್ತ ಸೂಚನೆ:**— ರಾತ್ರಿಯಲ್ಲಿ ತಡ ಮಾಡಿ ಊಟ ಮಾಡಬಾರದು. ಮಲಗುವಾಗ ಒಂದು ಬಟ್ಟಲ ತುಂಬ ನೀರು ಕುಡಿದಲ್ಲಿ ಬಹಳ ಉಪಯೋಗವಾಗುವದು. ಯೋಚಿಸಿದ ಔಷಧ ಬಹಳ ದಿವಸ ತೆಗೆದುಕೊಳ್ಳಬೇಕು.

---

# ನೇತ್ರರೋಗ

**Diseases of the eye.** **ಡಿಸೀಜಿಸ್ ಆಫ್ ದಿ ಆಯ್.**

ಕಣ್ಣಿನ ರೋಗಗಳು ಬಹಳು ಇದ್ದು ಅವೆಲ್ಲವುಗಳ ಸಮಾಚಾರ ಈ ಪುಸ್ತಕದಲ್ಲಿ ಹೇಳುವದು ಶಕ್ಯವಿಲ್ಲ. ಕಣ್ಣಿನ ರೋಗಗಳ ಚಿಕಿತ್ಸೆ ನೇತ್ರ ರೋಗ ವಿಶಾರದರ ಕಡಿಂದಲೇ ಮಾಡಿಸಿಕೊಳ್ಳುವದು ಅವಶ್ಯವೂ ಹಿತಕರವೂ ಇರುವದು. ಕಣ್ಣುಗಳಲ್ಲಿ ನೋಯುವದು, ಚುಚ್ಚುವದು, ಬೆಳಕಿನ ಕಡೆಗೆ ನೋಡಗೊಡದಿರೋಣ, ಕಣ್ಣುಬರೋಣ. ಅವು ಕೆಂಪಾಗೋಣ, ಅವು ಮುಚ್ಚಿಹಾಕೋಣ. ಅವುಗಳಿಂದ ನೀರೂ ಕೀವೂ ಸೋರೋಣ, ಆರಿ ಬರೋಣ, ಕಣ್ಣುಚಿಟ್ಲಿ ಆಗೋಣ, ನೇತ್ರೇಂದ್ರಿಯದಲ್ಲಿ ದಾಹವಾಗೋಣ. ಕಣ್ಣಿನಲ್ಲಿ ಕಳೆಹಿಡಿಬರೋಣ, ದೃಷ್ಟಿ ಡೊಂಕಾಗೋಣ, ಕಣ್ಣಿನಲ್ಲಿ ವ್ರಣ ವಾಗೋಣ, ಕಲೆಬೀಳೋಣ. ಕಣ್ಣಿನ ಮೇಲೆ ಪರಿಬರೋಣ, ದೃಷ್ಟಿಮಾಂದ್ಯ ವಾಗೋಣ, ಮೋತಿಬಿಂದು ಬರುವದು, ಮುಂತಾದವುಗಳು ಕಣ್ಣಿನ ರೋಗಗಳಿರುವವು. ಇವುಗಳಲ್ಲಿ ಕಣ್ಣುಬೇನೆ ಮುಂತಾದ ರೋಗಗಳು ಸಾಂಸರ್ಗಿಕ ರೋಗಗಳು. ಅರಿಬರೋಣ ಮುಂತಾದವು ಆನುವಂಶಿಕ ಹಾಗೂ ಪ್ರಾಕೃತಿಕ (ಔತ್ಪತ್ತಿಕ) ಇರುವವು. ಬಿಸಲಿನಲ್ಲಿ ತಿರುಗಾಡೋಣ, ಗಾಳಿ ಬಹಳ ಹತ್ತೋಣ, ಹೊಗೆ ಹತ್ತೋಣ, ಬಹಳ ಓದೋಣ, ಹೊಲೆಯುವ ಕೆಲಸ ಹೆಚ್ಚಾಗಿ ಮಾಡೋಣ, ಉಷ್ಣ ಪದಾರ್ಥಗಳನ್ನು ಸೇವಿಸೋಣ ಮುಂತಾದವು ಕಣ್ಣು ಕೆಡಲಿಕ್ಕೆ ಕಾರಣಗಳು. ಉಪದಂಶವು ಎಷ್ಟೋ ಕಣ್ಣುರೋಗಗಳಿಗೆ ಕಾರಣೀಭೂತವಾಗುವದು.

ಕಣ್ಣು ಬರುವುದು, ನೇತ್ರಾಭಿಷ್ಯಂದ ( ಮೋತಿ ಬಿಂದು ) ಮುಂತಾದ ರೋಗಗಳ ಬಗ್ಗೆ ಗ್ರಂಥದಲ್ಲಿ ವಿವೇಚನ ಸ್ವತಂತ್ರವಾಗಿ ಇರುವದು. ಇಲ್ಲಿ ಈ ಎರಡೂ ರೋಗಗಳಲ್ಲಿಯೂ ಇತರ ರೋಗಗಳಲ್ಲಿಯೂ ಉಪಯೋಗ ವಾಗುವಂಥ ಔಷಧಗಳ ಮಾಹಿತಿ ಒತ್ತಟ್ಟಿಗೆ ಕೊಟ್ಟಿದೆ.

**ಫೇ. ಫಾ:—** ರೋಗದ ಪ್ರಾರಂಭದಲ್ಲಿ ಕಂಣುಗಳೂ ಗುಡ್ಡಿಗಳೂ ಕೆಂಪಾಗುವವು, ವೇದನೆ ಮತ್ತು ಉರುಪು, ಅರಿ ಚುಚ್ಚುತ್ತಿದ್ದರೆ, ಹಾಗೂ ನೋಯುತ್ತಿದ್ದರೆ ಕಣ್ಣುಗಳು ನಸುಗೆಂಪು ಆಗುವವು. ಬೆಳಕಿಗೆ ಕಣ್ಣು

ಕುಕ್ಕುವವು. ಕಂಣುಗಳಿಂದ ಸ್ರಾವ ಹೊರಡುವ ಪೂರ್ವದಲ್ಲಿ ಕಂಣೊಳಗಿನ ವೇದನೆ. ಅಲ್ಲಾಡಿದ್ದರಿಂದಲೂ ಹೆಚ್ಚಾಗುವವು. ಶೀತೋಪಚಾರದಿಂದ ಸಮಾಧಾನವಾಗುವದು.

**ಕಾ. ಮೂ**:— ದ್ವಿತೀಯಾವಸ್ಥೆ, ಬಿಳೇಬಂಣದ, ಬೂದಿಬಂಣದ, ಹಳದೀ ಬಂಣದ ಅಥವಾ ಹಸರು ಬಂಣದ ಸ್ರಾವ ಕಾಲೀ ಫಾ. ಜತೆಗೆ ಕೊಡಬೇಕು. ಕಂಣು ನೋಯುವವು. ಕಂಣು ರೆಪ್ಪೆಯಲ್ಲಿ ಬಿಳೇ ಇಲ್ಲವೆ ಹಳದಿ ಕಲೆ ಅರಿಗಳು ಉಸುಕು ತುಂಬಿದಂತೆ ಚುಚ್ಚುವದು. ಫೇರಂಫಾ. ಜತೆಗೆ ಕೊಡಬೇಕು. ಹುಂಣು ಆಗಿ ಹಬ್ಬಿದಂಥ ವ್ರಣ ಉಳಿದಿದ್ದರೆ.

**ಕಾ. ಸ**:— ತ್ರಿತೀಯಾವಸ್ಥೆ; ಹಳದೀ, ಹಸರು ಸ್ರಾವವು ಅಥವಾ, ಜಿಗಟು ಹಳದೀ ತೆಳ್ಳನ ಸ್ರಾವ ಪಿಚ್ಚು ಕಣ್ಣು ಬರುವವು. ಮೋತೀ ಬಿಂದು ಇದ್ದರೆ ಇದು ಮತ್ತು ನೇಟ್ರಂಮೂರ ಸರ್ತಿಮೇಲೆ ಕೊಡಬೇಕು. ೩ × ಶಕ್ತಿಯುಳ್ಳದ್ದು ಕೊಡುವದು. ಗುಡ್ಡಿಯು ಮೇಲೆ ಹಳಟೀ, ಹರಕ ಹರಕ ಹಕಳಿ.

**ಕಲ್ಕೆ. ಸ**:— ಕಂಣು ಕೆಂಪು; ದಟ್ಟ ಹಳದೀ ಕೀವು ಕಂಣು ಗೊಂಬೆಯ ಮೇಲಿನ ಕುರು ( ಹುಂಣು ) ಕಂಣು ಗೊಂಬೆಯಮೇಲೆ ಆದ ಹುಂಣು ಒಳತನಕ ಹೋದದ್ದು. ಅದರಿಂದ ಹಳದೀ ರಸಿಕಿ ( ಪಿಚ್ಚು ) ಹರಿಯುವದು. ಕಂಣಿನಲ್ಲಿ ಏನಾದರೂ ಸಿಕ್ಕಂತೆ ಭಾವನೆ.

**ಸಿ**: — ದಟ್ಟ, ಹಳದಿ ಕೀವು ( ಪಿಚ್ಚು ) ಕಂಣ ರೆಪ್ಪೆಯಲ್ಲಿ **ಚಿಟ್ಲೆ**. ಕಂಣ ಸುತ್ತಮುತ್ತಲು ಸಂಣ ಸಂಣ ಕುರುಗಳು ಕಂಣುಗಳೊಳಗಿನ ವ್ರಣ ಒಳತನಕ ಹೋದದ್ದು. ಚಿಟ್ಲೆ ಆಗಿದ್ದರೆ ಸಿಲಿಕಾದ ಧಾವನ ಪಟ್ಟಿಮಾಡಿ ಕಂಣಿನಮೇಲೆ ಇಡಬೇಕು. ದೃಷ್ಟಿಮಾಂದ್ಯ.

**ನೇ. ಫಾ**:— ಕೆನೆಯಂಥ ಹಳದೀ ಬಂಣದ ಕೀವು ಪ್ರಾತಃಕಾಲದಲ್ಲಿ ಕಂಣು ಮೆತ್ತು ಹಾಕುತ್ತವೆ. ನಾಲಿಗೆಯ ಮೇಲೆ ಅದರ ಬುಡದಲ್ಲಿ ಹಳದೀ ಕಿಟ್ಟವಿರುವದು. ಜಂತುಗಳ ಮೂಲಕ ವಕ್ರ ದೃಷ್ಟಿಯು. ಕಂಣು ಬಂದಿದ್ದರೆ ಕಂಣು ಕೆಂಪಾಗಿದ್ದರೆ ಉರಿಯುವಂಥ ಸ್ರಾವವು. ಕಂಣಿನ ಮುಂದೆ ಕಿಡಿ

ಹಾರಿದಂತಾಗುವದು, ಕಣ್ಣು ಬಂದಿದ್ದರೆ ಇದರ ಧಾವನಜಲದಿಂದ ತೊಳೆಯಬೇಕು.

**ನೇ. ಮೂ:—** ಕಣ್ಣಿನಿಂದ ನೀರು ಸೋರುವದು; ಕಣ್ಣಿನಿಂದ ಜಿಗಟು ತೆಳ್ಳನ ಸ್ರಾವ (ಪಿಚ್ಚು) ಹೋಗುವಂಥ ಯಾವದೇ ಕಣ್ಣು ಬೇನೆ ಇದ್ದರೆ ಫೇರಂಫಾಸದ ಜತೆಗೆ ಇದನ್ನು ಕೊಡಬೇಕು. ಸ್ರಾವವು ಉರಿಯುವದು ಅದರಿಂದ ಬಕ್ಕೆಗಳು ಏಳುವವು. ಅರಿಬರುವವು. ಕಣ್ಣುಗೊಂಬಿಯು ಮೇಲೆ ಬಿಳೀ ಕಲೆಗಳೂ ಬಕ್ಕೆಗಳೂ ತೀವ್ರ ವೇದನೆ ಇದ್ದು ನೀರು ಸೋರುವದು. ಅರಿ ಬಂದಲ್ಲಿ ನಡುನಡುವೆ ಇದನ್ನು ಕೊಡುಡದು. ಮೋತಿ ಬಿಂದು ( ಕಣ್ಣು ಪರಿ ) ಪಕ್ವ ಆಗುವ ಪೂರ್ವದಲ್ಲಿ ಈ ಔಷಧದ ಧಾವನ ಮಾಡಿ ಅದರಿಂದ ಕಣ್ಣು ತೊಳೆದುಕೊಳ್ಳುವದು. ದೃಷ್ಟಿ ಕ್ಷೀಣತೆ.

**ಕಾ. ಫಾ:—** ಶಕ್ತಿಯನ್ನು ಕ್ಷೀಣಮಾಡುವ ರೋಗದನಂತರ ದೃಷ್ಟಿ ಮಾಂದ್ಯ ನೇತ್ರನಾಡಿಯ ರೋಗದ ಮೂಲಕ ಕಣ್ಣು ಹೋಗೋಣ; ಕಣ್ಣು ಗುಡ್ಡಿಗಳು ವಿಸ್ತಾರಹೊಂದಿದ್ದು ರೆಪ್ಪೆ ಮುಚ್ಚಿದ್ದು ಕಣ್ಣು ಹಾರುವವು.

**ಮ್ಯಾ. ಫಾ:—** ಕಣ್ಣಿನಮೇಲೆ ರೆಪ್ಪೆಗಳು ಬೀಳೋಣ; ಕಾಲಿಫಾ. ಮತ್ತು ಇದನ್ನು ಸರ್ತಿ ಮೇಲೆ ಕೊಡಬೇಕು. ಕಣ್ಣು ಗೊಂಬೆಗಳು ಸಂಕುಚಿತವಾದರೆ, ಬೆಳಕಿನ ಕಡೆಗೆ ನೋಡುವದಾಗದಿದ್ದರೆ; ದೃಷ್ಟಿಕೆಟ್ಟದ್ದು; ಅದರಿಂದ ಕಣ್ಣಿನ ಮುಂದೆ ಕಿಡಿ ಹಾರಿದಂತಾಗುತ್ತಿದ್ದರೆ; ಬೇರೆ ಬೇರೆ ಬಣ್ಣಗಳು ಕಾಣುತ್ತಿದ್ದರೆ; ನೇತ್ರನಾಡಿಯು ಅಶಕ್ತತೆಯ ಮೂಲಕ ದೃಷ್ಟಿ ಮಾಂದ್ಯವು; ನೇತ್ರಶೂಲೆ; ಉಷ್ಣೋಪಚಾರದಿಂದ ಸಮಾಧಾನವಾಗುವದು. ಶೀತೋಪಚಾರದಿಂದ ಹೆಚ್ಚಾಗುವದು. ಒಂದಕ್ಕೆ ಎರಡು ಕಾಣಿಸುವದು. ನಡುನಡುವೆ ದೃಷ್ಟಿಯು ಡೊಂಕವಾಗುವದು ರೆಪ್ಪೆಗಳು ಹಾರುತ್ತವೆ.

**ಕಲ್ಕೆ. ಫಾ:—** ಮ್ಯಾ. ಫಾ. ದಿಂದ ಉಪಯೋಗವಾಗದಿದ್ದರೆ ಇದನ್ನು ಕೊಡುವದು. ದೃಷ್ಟಿಯು ಮುಸುಕಾಗಿದ್ದರೆ ಮೋತಿಬಿಂದುವಿನ ಬೆಳಿಗೆಯನ್ನು ನಿಲ್ಲಿಸುವದು. ಕಣ್ಣುಗೊಂಬಿಯ ದಾಹ. ಬಿಳೀ ಸ್ರಾವವು ಹೋಗುವದಾದರೆ.

**ನೇ. ಸ:**—ಯಕೃತ ವಿಕಾರದಿಂದ ಕಂಣು ಹಚ್ಚಗಾಗುವವು. ಕಂಣಿಸಲ್ಲಿ ವೇದನೆ, ಕಂಣು ಬರುವವು. ಅರಿ ಬರುವವು. ಗಂಡಮಾಲೆಯ ಪ್ರಕೃತಿಯವರಿಗೆ ಕಂಣುಬಂದರೆ, ಕಂಣು ಕುಕ್ಕುವವು. ಕಂಣು ರೆಪ್ಪೆಯ ಕೊನೆಗೆ ಉರುಪು. ದೊಡ್ಡ ಹುಂಣಿಸಂಥ ಅರಿ (ಅರಿಗಳೇ ಹುಂಣಿನಂತೆ ದೊಡ್ಡವಿರುವವು.)

**ಕಲ್ಕೆ. ಫೂ**:— ಕಂಣ ಮುಂದೆ ಕಿಡಿ ಹಾರಿದಂತೆ ಕಾಣುವದು. ಕಂಣು ಗೊಂಬೆಯಮೇಲೆ ಚಿಕ್ಕಿಗಳು ಕಂಡು ಬಂದಿದ್ದಗೆ ಮೋತಿಬಿಂದು ವಿಶೇಷತಃ ವಾರ್ಧಕ್ಯದಲ್ಲಾಗುವಂಥಾದ್ದು. ಕಂಣು ಚಿಟ್ಲಿಗಳು. ಕಂಣು ರೆಪ್ಪೆಯ ಮೇಲೆ ಬಿರಸು ಗಂಟು, ಬಕ್ಕೆಗಳು ಬಹಳ ಶ್ರಮವಾದ್ದರಿಂದ ದೃಷ್ಟಿಯು ಮಸಕು ಆಗುವದು.

**ಉಪಯುಕ್ತ ಸೂಚನೆ:**— ಹೊಟ್ಟೆಯಲ್ಲಿ ಕೊಡಲು ಯೋಚಿಸಿದ ಔಷಧವನ್ನೇ ಕಡಿಮೆ ಶಕ್ತಿಯುಳ್ಳದ್ದನ್ನು ನೀರಿನಲ್ಲಿ ಹಾಕಿ ಅದರಿಂದ ಕಂಣು ತೊಳಕೊಳ್ಳಬೇಕು.

---

# ನೇತ್ರಾಭಿಷ್ಯಂದ

**Opthalmia.** **ಅಪ್ಥಾಲ್ಮಿಯಾ.**

ಕಂಣು ಕೆಂಪಾಗುವದು, ರೆಪ್ಪೆ ಬಾಯುವದು, ಹರಳು ಕಂಣಲ್ಲಿ ಸೇರಿದಂತೆ ಚುಚ್ಚುವದು, ಬೆಳಕಿನ ಕಡೆಗೆ ನೋಡಗೊಡದಿರೋಣ, ರೆಪ್ಪೆಗಳು ಮೆತ್ತು ಹಾಕೋಣ. ಕಂಣು ಸೋರೋಣ, ಹೆಚ್ಚು ಕಡಿಮೆ ವೇದನೆ ಇರೋಣ, ಈ ಲಕ್ಷಣಗಳು ಇದ್ದಲ್ಲಿ ಕಂಣು ಬಂದವೆ ಎಂದೆನ್ನುವದು. ಮೊದಲು ತೆಳ್ಳನ್ನ ನೀರು ಸೋರುವದು, ನಂತರ ಕಂಣೊಳಗಿಂದ ಬಿಳೇ ಕೀವು ಹರಿಯುತ್ತದೆ. ಕಂಣು ಅಂಟಿಕೊಂಡಿರುತ್ತವೆ. ಗಟ್ಟಿ ಕೀವು (ಪಿಚ್ಚು) ಬರುತ್ತದೆ. ಕಂಣು ತೆಗೆಯಲು ಬಾರದು. ಕಂಣು ತೆರೆದಲ್ಲಿ ನೀರಿನ ಧಾರಿಯು ಹರಿಯಹತ್ತುತ್ತದೆ. ಉಗ್ರ ಸ್ವರೂಪದ ಬೇನೆಯಲ್ಲಿ ವೇದನೆ ಬಹಳಿರುವವು. ಇದು ಸಾಂಸರ್ಗಿಕ ರೋಗವು. ಶೀತ, ಗಾಳಿ, ಬಿಸಿಲು, ಕಂಣಿನಲ್ಲಿ ಧೂಳಿಯ ಕಣಗಳು ಸೋರೋಣ, ಮುಂತಾದ ಕಾರಣಗಳ

ಮೂಲಕ ಈ ರೋಗವು ಉತ್ಪನ್ನವಾಗುವದು. ಗೊಬ್ಬರ, ಮೈಲಿ ಇವು ಗಳಲ್ಲಿ ಕಂಣು ಬರುವದು ಕಂಡುಬರುತ್ತದೆ. ಗಂಡಮಾಲೆಯು ಪ್ರಕೃತಿಯು ರೋಗಿಗಳಿಗೆ ಈ ವಿಕಾರದ ಉಪದ್ರವ ಮೇಲಿಂದಮೇಲೆ ಉದ್ಭವಿಸುವದು.

**ಫೇ. ಫಾ**:— ದಾಹ ಯುಕ್ತ ಭಾವನೆಗಳಿಗೆ ಅರಿಗಳ ಮೂಲಕ ಕಂಣು ಕೆಂಪಾಗುವವು ಬಾವು ಬಂದದ್ದು ಇದ್ದು ನೋವೂ ಇದ್ದರೆ.

**ನೇ. ಫಾ**:— ತೀರ ಆಗಲೇ ಹುಟ್ಟಿದ ಕೂಸುಗಳಿಗೆ ಆಗುವ ನೇತ್ರ ರೋಗದ ಮೇಲೆ ಕಂಣಿನಿಂದ ಕೀವಿನಂಥ ಸ್ರಾವವಿದ್ದರೆ ಸಣ್ಣ ಮಕ್ಕಳ ನೇತ್ರಾಭಿಷ್ಯಂದ ಮೇಲಿನ ಮುಖ್ಯ ಔಷಧವಿದು. ಬಂಗಾರದಂಥ ಹಳದಿ ಸ್ರಾವವಿರುವದು.

**ಕಾ. ಸಿ**:— ಕಂಣೊಳಗಿಂದ ಕೀವಿನದೂ ಹಸರ ನೀರಿನದೂ ಸ್ರಾವ ವಿದ್ದಲ್ಲಿ.

**ಕಲ್ಕೆ. ಸ**:— ದಟ್ಟ ಕೀವುಯುಕ್ತ ಸ್ರಾವವು. ಒಮ್ಮೊಮ್ಮೆ ಸ್ರಾವ ದಲ್ಲಿ ರಕ್ತಸಹ ಕೂಡಿರುವದು.

**ನೇ. ಮು**:— ಕಂಣಿನಿಂದ ಒಂದೇಸವನೆ ನೀರು ಸೋರುವದು, ಅರಿ ಲಗಿರುವದಾದರೆ.

**ಕಾ. ಮು**:— ಕಂಣು ಸೋಯುವವು. ಸ್ರಾವವು ದಪ್ಪ ಹಳ ದಿಯೂ ಇರುವದು. ಅರಿ. ಕಂಣಿನಲ್ಲಿ ಸಣ್ಣ ಕಣಗಳು ಸೇರಿಕೊಂಡಿದ್ದಂತೆ ಅನಿಸುವದು.

**ಉಪಯುಕ್ತ ಸೂಚನೆ**:— ಹೊಟ್ಟೆಯಲ್ಲಿ ಕೊಡತಕ್ಕ ಔಷಧ ವನ್ನು ಬಿಸಿನೀರಿನಲ್ಲಿ ಹಾಕಿ ಅದರಿಂದ ಕಂಣು ಕಾಸಬೇಕು. ಮತ್ತು ಅವೇ ನೀರು ಆರಿದ ನಂತರ ಅದರಿಂದ ಕಂಣು ತೊಳೆಯಬೇಕು. ಈ ರೋಗವು ಸಾಂಸರ್ಗಿಕವಿದೆ. ಇದನ್ನು ಧ್ಯಾನದಲ್ಲಿಟ್ಟುಕೊಂಡು ಮನೆಯಲ್ಲಿಯ ಇತರ ಮಕ್ಕಳುಗಳಿಗೆ ಅದರಿಂದ ಉಪಸರ್ಗವಾಗದಂತೆ ಎಚ್ಚರವಿಡಬೇಕು. "ನೇತ್ರ ರೋಗ"ವೆಂಬ ವಿವರ ನೋಡಿರಿ.

---

# ನೆಗಡಿ, ಶೈತ್ಯ, ಜಲದೋಷ

**Cold, Catarrh, Coryza.** ಕೋಲ್ಡ, ಕಟಾರ, ಕೊರಾಯ್ಝಾ.

ಮೂಗಿನಲ್ಲಿಯ ಶ್ಲೇಷ್ಮಲ ತ್ವಚೆಯ ಶೈತ್ಯವೆಂದರೇ ನೆಗಡಿ. ಶ್ಲೇಷ್ಮಲ ತ್ವಚೆಯ ದಾಹವೆಂದರೇ ಜಲದೋಷ. ಇಂಥ ತರದ ನೆಗಡಿ ಅಥವಾ ಶೈತ್ಯವು ಮೂಗಿನ ಶ್ಲೇಷ್ಮಲ ತ್ವಚೆಯಲ್ಲಿಯೇ ಆಗುತ್ತದೆ ಹೀಗಲ್ಲ. ಶರೀರದಲ್ಲಿ ಇತರ ಸ್ಥಳದಲ್ಲಿಯೂ ಆದದ್ದು ಕಂಡುಬರುವದು. ಬೇರೆ ಬೇರೆ ಕಡೆಯಲ್ಲಿಯ ಶ್ಲೇಷ್ಮಲ ತ್ವಚೆಯಲ್ಲಿ ಶೈತ್ಯವಾದ್ದರಿಂದ ಬೇರೆ ಬೇರೆ ಭಾವನೆಗಳುಂಟಾಗುವವು. ಜಠರದಾಹ, ಆಂತ್ರದಾಹ, ಪುಪ್ಪುಸಾವರಣದಾಹ.

ಮಸ್ತಿಷ್ಕದಾಹ ಇವೆಲ್ಲವು ಆಯಾ ಸ್ಥಳಗಳಲ್ಲಿಯ ಶ್ಲೇಷ್ಮಲ ತ್ವಚೆಯ ಶೈತ್ಯವೇ ಸರಿ. ಉದರ, ಮೇಹ–ಇವು ಆಯಾ ಸ್ಥಾನದಲ್ಲಿಯ ಶ್ಲೇಷ್ಮಲ ತ್ವಚೆಯ ಶೈತ್ಯದ ಲಕ್ಷಣಗಳೇ ಸರಿ. ಶೈತ್ಯದ ಭರವು ಹೆಚ್ಚು ಕಡಿಮೆ ಇದ್ದ ಮಾನದಿಂದ ಭಾವನೆಗಳು ಹೆಚ್ಚು ಕಡಿಮೆ ಪ್ರಮಾಣದಲ್ಲಿ ಕಂಡುಬರುವವು. "ನೆಗಡಿ" ಎಂಬ ವಿವರದ ಕೆಳಗೆ ಮೂಗಿನಲ್ಲಿ ಆದ ಶೈತ್ಯವನ್ನುದ್ದೇಶ್ಯವಾಗಿಯೇ ಆ ರೋಗಕ್ಕೆ ಉಪಯೋಗಿಸಲ್ಪಡುವ ಜೀವನ ರಸಾಯನದ ಔಷಧಗಳನ್ನು ವಿವರಿಸಿದ್ದೇವೆ. ಆದರೂ ಎರಡನೆಯ ಕಡೆಗಿನ ಶೈತ್ಯದಲ್ಲಿಯೂ ಆ ಭಾವನೆಗಳು ಕಂಡುಬಂದಲ್ಲಿ ಆ ಔಷಧಗಳು ಸರಿಯಾಗುವವು ಎಂಬದನ್ನು ಮರೆಯಕೂಡದು. ಈ ರೋಗವು ಸಾಮಾನ್ಯವಿದ್ದು ಎಲ್ಲರ ಪರಿಚಯದ್ದೇ ಇರುವದು. ತಲೆನೋವು, ಶೀನು, ಮೂಗಿನಿಂದಲೂ ಕಣ್ಣುಗಳಿಂದಲೂ ನೀರು ಸೋರೋಣ, ಸ್ವಲ್ಪ ಜ್ವರ ಸಹ ಇರೋಣ,— ಈ ಭಾವನೆಗಳು ಸ್ವಲ್ಪ ಕಾಲ ಇರುವವು. ಮೂಗು ದಟ್ಟಿಸುವದು, ಒಂದು ಹೊಳ್ಳೆ ಒಣಗಿರೋಣ, ಎರಡನೇದರೊಳಗಿಂದ ನೀರು ಹರಿಯೋಣ, ಮುಂದೆ ಜಿಗಟು ಬಿಳೇ ಅಥವಾ ಹಳದೀ ಸಿಂಬಳು ಸುರಿಯುವದು ಮುಂತಾದ ಲಕ್ಷಣಗಳು ಕಂಡುಬರುವವು. ಸಾಧಾರಣ ನೆಗಡಿಯು ೨–೩ ದಿವಸ ಇರುವದು. ವೇಳೈಕ್ಕೆ ಸರಿಯಾಗಿ ಉಪಾಯ ಮಾಡದೆ ತಾತ್ಸರ ಮಾಡಿದಲ್ಲಿ ಅದು ಎಷ್ಟೋ ದಿವಸ ತಡೆಯುವದು. ಈ ಬೇನೆಯು ಚಿಂತೆಯುಂಟುಮಾಡುವಂಥಾದ್ದಲ್ಲ. ಇದು ನಿಜವಾದರೂ

ಅದನ್ನು ಮೇಲಿಂದ ಮೇಲೆ ಬರಗೊಟ್ಟರೆ ಶೈತ್ಯವು ಎದೆಯಲ್ಲಿಳಿದು ಲಘು ಶ್ವಾಸನಲಿಕಾ ದಾಹ ( ಬ್ರಾಂಕಾಯಿಟಿಸ್ ) ಉತ್ಪನ್ನವಾಗುವದು. ಬಹಳ ದಿವಸದ ನೆಗಡಿಯಲ್ಲಿ ಜಿಗಟ, ಕೀವಿನಂಥ ಸಿಂಬಳು ಬರುತ್ತಿರುವದು. ಮೂಗು ದಟ್ಟಿಸಿದಂತಾಗುವದು ಮತ್ತು ಧ್ವನಿಯೂ ಬದಲಾಗಿರುವದು. ನಿದ್ರಿಯಲ್ಲಿ ಗುರುಕೆ ಹಾಕಿದಂತೆ ಸಪ್ಪಳು.

ಬಹುತರವಾಗಿ ಥಂಡಿಯಿಂದಲೂ ತಂಪು ಸ್ಥಳದ ಹವೆಯಿಂದಲೂ ನೆಗಡಿ ಬರುವುದು. ಹೃದಯದ ರೋಗ, ಪುಪ್ಪುಸದ ರೋಗ ಇರುವವರಿಗೂ ಗಂಡಮಾಲೆಯ ಪ್ರಕೃತಿ ಇದ್ದವರಿಗೂ, ಸರಾಯಿ ಕುಡಿಯುವ ಚಟ ಇದ್ದವರಿಗೂ ನೆಗಡಿ ಆಗುವ ಸಂಭವವು ಬಹಳ. ಕಿರಿನಾಲಗೆಯು ಇಳದ ವರಿಗೂ ನೆಗಡಿಯ ತಾಪವು ಮೇಲಿಂದ ಮೇಲೆ ಆಗುವದು. ಗೊಬ್ಬರ, ಇನಫ್ಲುಎಂಜಾ, ನ್ಯುಮೋನಿಯಾ, ಸನ್ನಿಪಾತಜ್ವರ ಮುಂತಾದ ರೋಗ ಗಳಲ್ಲಿ ಮೊದಲು ನೆಗಡಿ ಬರುವದು ಕಂಡುಬರುತ್ತದೆ.

ನೆಗಡಿಯು ಮತ್ತು ಮೂಗಿನ ಇತರ ರೋಗಗಳ ವಿಚಾರಮಾಡಿ ಅವುಗಳಲ್ಲಿ ಉಪಯೋಗ ಬೀಳುವಂಥ ಔಷಧಗಳ ವಿವೇಚನವನ್ನು ಕೆಳಗೆ ಮಾಡಿದೆ.

**ಫೇ. ಫಾ:**— ಪ್ರಥಮಾವಸ್ಥೆಯಲ್ಲಿ ಪ್ರತಿಬಂಧಕವೆಂದು ಕಲ್ಕೆ. ಫಾ. ದ ಜತೆಗೆ ಶೈತ್ಯದ ಮೇಲೆ ಇದರ ಉಪಯೋಗವಾಗುವದು. ಮೂಗು ದಟ್ಟಿಸುವದು. ತಲೆನೋವು ಮೈಯಲ್ಲಿಯೂ ನೋವು ಉಸುರು ಎಳೆಯು ವಾಗ ಕಷ್ಟವಾಗುವದು. ೩ × ಶಕ್ತಿಯನ್ನು ಉಪಯೋಗಿಸಬೇಕು. ಕಫ ಪ್ರಕೃತಿಯ ರೋಗಿಗಳಿಗೂ ಇದನ್ನು ಉಪಯೋಗಿಸಬಹುದು.

**ಕಾ. ಮೂ:**— ನೆಗಡಿಯು ಹಂಣಾದಮೇಲೆ, ಬಿಳೆ, ದಪ್ಪ ಜಿಗಟು ಸಿಂಬಳು. ಕಂಣುಗಳು ಸುಂದ ಇರುವವು. ಮೂಗು ದಟ್ಟಿಸುವದು ಮೂಗು ತೀರ ತುಂಬಿದಂತೆ ಇರುವದು. ನಾಲಿಗೆಯಮೇಲೆ ಬಿಳೇ ಇಲ್ಲವೆ ಬೂದಿ ಬಂಣದ ಅಗ್ರವಿದ್ದರೆ. ಯಾವದೇ ಅಂತಸ್ತ್ವಚೆಯ ಶೈತ್ಯವಿರಲಿ ಬಿಳೇಬಂಣದ ಹಾಗೂ ಉರಿಯದಂಥ ಸ್ರಾವವು ಇದ್ದರೆ ಇದು ಹಿತಕರ ಪಿನಸಿಗೂ ಇದರಿಂದುಪಯೋಗ.

**ನೇ. ಮೂ:—** ನೀರಿನಂಥ ಸ್ವಚ್ಛ ತೆಳ್ಳನ್ನ ಸ್ರಾವ ನೊರೆಯಂತಿರುವ ಹಾಗೂ ಉಪ್ಪುಪ್ಪ ಇರುವ ಸ್ರಾವವು. ಕೆಮ್ಮುವಾಗಲೂ ಕೆಳಗೆ ಬೊಗ್ಗಿದಾಗೆಯೂ ಮೂಗಿನಿಂದ ರಕ್ತ ಹರಿಯುವದು. ಒಂದೇಸವನೆ ಸೋರುವದು ಶೀಸುಗಳು ಮುಂಜಾನೆ, ರಾತ್ರಿಯಲ್ಲಿ ವಿಶೇಷತಃ ಹೊರಗಿನಿಂದ ಬಂದ ಕೂಡ್ಲೆ ಬಟ್ಟೆಗಳನ್ನು ತೆಗೆಯುವ ಸುಮಾರಕ್ಕೆ ಹೆಚ್ಚು ಬರುವವು. ಪಾಂಡು ರೋಗಿಗಳಿಗೆ ಶೈತ್ಯವಾದಲ್ಲಿ ವಾಸನೆಯು ಬರುವದೇ ಇಲ್ಲ. ೩೦ × ಅಥವಾ ೧ × ಶಕ್ತಿಯು ಔಷಧ ಕೊಡಬೇಕು.

**ಕಲ್ಕೆ. ಫಾ:—** ಬಹುದಿವಸದ ನೆಗಡಿ, ಪಂಡು ರೋಗಿಗಳಿಗೆ ಆಗಿಪ್ಪಲ್ಲಿ ಸಿಂಬಳು ತತ್ತಾಯಲ್ಲಿಯ ಬಿಳೇ ಲೋಳಿಯಂತೆ ಸ್ವಚ್ಛವಿರುವದು. ಇತರ ಔಷದ ಕೊಡುತ್ತಿದ್ದಾಗ ನಡು ನಡುವೆ ಕೊಡಬೇಕು. ಮೂಗಿನಲ್ಲಿಯ ಗುಲ್ಮ ( ಬಾವು ) ಅಥವಾ ಅರ್ಶವಿದ್ದಲ್ಲಿ ಮೂಗಿನ ತುದಿಯು ಬಹಳೇ ತಂಣಗಾಗಿರುವದು ಇದ್ದರೆ.

**ಕಾಲೀಸ:—** ನೆಗಡಿಯು ಹಂಶಾಗಿದ್ದು ಹಳದೀ, ತೆಳ್ಳನ ಜಿಗಟು ಸ್ರಾವ (ಶಿಂಬಳು)ದಲ್ಲಿ ಕಾಲೀಮೂರದ ನಂತರ ಕೊಡುವದು. ಶೈತ್ಯ ಜ್ವರ, ತ್ವಚೆ ಒಣಗಿದಂತೆಯೂ ಬಿಸಿಯಾಗಿಯೂ ಇದ್ದರೆ ಫೇರಂಫಾ. ದ ಜತೆಗೆ ಕೊಟ್ಟಲ್ಲಿ ಬೆವರು ಬಿಡುವದು. ಬೆಚ್ಚನ ಸ್ಥಳದಲ್ಲಿಯೂ ಸಾಯಂಕಾಲದಲ್ಲಿಯೂ ರೋಗವು ಬೆಳೆಯುವದು. ಪಿನಸಿಯಲ್ಲಿಯೂ ನಾಸಿಕಾಸ್ಥಿಯು ಹುಳತಿದ್ದಲ್ಲಿಯೂ ದುರ್ಗಂಧ, ಹಳದಿ ಸ್ರಾವವಿದ್ದರೆ.

**ಮ್ಯಾ. ಫಾ:—** ಮೂಗಿಗೆ ವಾಸನೆ ತಿಳಿಯುವದಿಲ್ಲ. ಹೊಳ್ಳೆಗಳು ಒಮ್ಮೊಮ್ಮೆ ಹಸಿ ಒಮ್ಮೊಮ್ಮೆ ಒಣಗಿರೋಣವು. ಮೂಗಿನಿಂದ ಒಮ್ಮೆಲೆ ಬಹಳ ಸಿಂಬಳು ಬರುವುದು.

**ನೇಟ್ರಂ. ಸ:—** ತಂಪಿನ ಸ್ಥಳದಲ್ಲಿ ಇದ್ದದರಿಂದ ನೆಗಡಿ ಬೆಳೆಯುವದು. ಹಸರು ಸಿಂಬಳು ಹರಿಯುವದು. ಉಪದಂಶಜನ್ಯ ರೋಗದಲ್ಲಿ ಪಿನಸಿ; ಹವೆಯಲ್ಲಿ ಸ್ವಲ್ಪ ಶೀತವಾದಲ್ಲಿ ಸಹ ನೆಗಡಿ ಹೆಚ್ಚಾಗುವದು.

**ಕಲ್ಕೇ. ಫ್ಲೂ:** ಮೂಗು ತುಂಬಿದ್ದು ಮೂಗು ದಟ್ಟಿಸಿದ್ದು ಒಣ ನೆಗಡಿ ಮೂಗಿನಲ್ಲಿಯ ಎಲುಬುಗಳಿಗೆ ರೋಗವಾಗಿದ್ದು ಆದರಿಂದ ಬರುವ

ದುರ್ಗಂಧಿ, ಶೀನುಬಂದಂತೆ ಅನಸುವದು. ಆದರೆ ಶೀನು ಬರುವದಿಲ್ಲ-ಪಿಸಸಿ.

**ಕಲ್ಕೆ. ಸ:—** ದಪ್ಪ ಹಳದೀ ಬಣ್ಣದ ಸಿಂಬಳು ಒಮ್ಮೊಮ್ಮೆ ರಕ್ತ-ಮಿಶ್ರಿತವೂ ಇರುವುದು.

**ಸಿ:—** ಬಹು ದಿವಸದ ನೆಗಡಿ, ಸ್ರಾವವು, ಹೊಲಸು ನಾತವುಳ್ಳದ್ದಾದರೆ ಮೂಗಿನ ಹೊಳ್ಳೆಗಳು ಒಣಗಿದ್ದು ಇರುವವು. ಹಾಗೂ ತಿಂಡೆಯುಳ್ಳವೂ ಇರುವವು.

**ಕಾಲಿ. ಫಾ:—**ಬಹು ದಿವಸದ ನೆಗಡಿ, ದುರ್ಗಂಧ ಇದ್ದ ಸ್ರಾವವು ಹಾಗೂ ಶ್ವಾಸೋಚ್ಛ್ವಾಸವೂ ದುರ್ಗಂಧಿಯುಕ್ತ ಇದ್ದರೆ ಮೂಗು ಒಡೆಯುವದು. (ಬಿಚ್ಚುವದು) ಮೂಗಿನಿಂದ ಹಳದೀ ಸಿಂಬಳು ಶೀನು ಬಹಳ ಬರುವವು.

**ಉಪಯುಕ್ತ ಸೂಚನೆ:—** "ಇನ್‌ಫ್ಲುಎಂಜಾ" ಬೇನೆಯು ಪ್ರಾರಂಭದಲ್ಲಿ ನೆಗಡಿಯಂತೆಯೇ ಇರುವುದು. ಬಹಳೇಕೆ ಭರದ ನೆಗಡಿ ಅಂದರೇ ಇನ್‌ಫ್ಲುಎಂಜಾ ಬೇನೆಯು. ಇನ್‌ಫ್ಲುಎಂಜಾ ೧।೨ ದಿವಸದಲ್ಲಿ ನೆಟ್ಟಗಾಗದಿದ್ದರೆ ಮುಂದೆ ಬೆಳೆಯುತ್ತ ಹೋಗಿ ಅದಕ್ಕೆ ನ್ಯುಮೋನಿಯಾದ ಸ್ವರೂಪವು ಬರುವುದು. ಆದರೆ ನೆಗಡಿಯಲ್ಲಿ ಹೀಗಾಗುವದಿಲ್ಲ. ಬಿಸಿ ನೀರಿನಿಂದ ಸ್ನಾನ, ಬಿಸಿನೀರು ಕುಡಿಯುವದು ಇಂಥ ಉಪಚಾರ ಮಾಡಬೇಕು. ಊಟ ಹಗುರ ಇರಬೇಕು. ಶೀತ ಹವೆಯಲ್ಲಿ ಹೊರಗೆ ಹೋಗಬಾರದು. ಬಿಸಿನೀರಿನಲ್ಲಿ ಕಾಲು ಸ್ವಲ್ಪ ಕಾಲ ಇಟ್ಟುಕೊಂಡಿರಬೇಕು. ನಂತರ ಹೊದ್ದಿಕೆಯನ್ನು ಹೊದ್ದುಕೊಂಡು ಸ್ವಸ್ಥ ಮಲಗಬೇಕು. ಫೇರಂಫಾ ಹಾಗೂ ಕಾಲೀಸ ಇವುಗಳನ್ನು ಬಿಸನೀರಿನೊಳಗಿಂದ ಮೇಲಿಂದ ಮೇಲೆ ತೆಗೆದುಕೊಳ್ಳಬೇಕು. ಅದರಿಂದ ಬೆವರು ಬಿಡುವದು. ಮೇಲಿಂದ ಮೇಲೆ ಶೀತವಾಗುವಂಥ ರೋಗಿಗಳು ಮತ್ತು ಅಶಕ್ತರೂ ಕಲ್ಕೆ. ಫಾ. ಮತ್ತು ಫೇರಂ ಫಾ. ಇವುಗಳನ್ನು ಶೈತ್ಯ ಪ್ರತಿಬಂಧಕಗಳೆಂದು ಮೇಲಿಂದ ಮೇಲೆ ತೆಗೆದುಕೊಳ್ಳಬೇಕು.

ನೆಗಡಿಯಲ್ಲಿ ಸ್ರಾವದ ಮೇಲಿಂದ ಯಾವ ಕ್ಷಾರಗಳು ಕಡಿಮೆಯಾಗಿವೆಂಬದನ್ನು ಹೇಳಬಹುದು. ಶರೀರದಲ್ಲಿ ನೀರಿನ ಪ್ರಮಾಣವನ್ನು ಕಡಿಮೆ ಮಾಡುವ ಕಾರ್ಯವನ್ನು ನೇಟ್ರಂ ಮು. ಎಂಬ ಕ್ಷಾರವು ಮಾಡುವದು. ಮೂಗಿನಿಂದ ನೀರಿನಂಥ ಸ್ರಾವವು ಹೋಗಹತ್ತಿದರೆ ನೇಟ್ರಂ ಮೂರ ಕಡಿಮೆಯಾಗಿದೆಂದು ತಿಳಿಯುವದು. ತುಸು ಬೆಳ್ಳಗೆ, ಜಿಗಟು ತಂತುಯುಕ್ತ (ದಾರ ಅಥವಾ ಎಳೆ ಇದ್ದ) ಸ್ರಾವವು ಹೋದರೆ ಕಾಲೀ ಮೂರದ ಕೊರತೆಯಾಗಿದೆಂದು ತಿಳಿಯಬೇಕು. ಅಲ್ಬ್ಯುಮಿನಯುಕ್ತ ಸ್ವಚ್ಛ ಬಿಳೀ ದಟ್ಟ ಸ್ರಾವ ಹೋದರೆ ಕಲ್ಕ. ಸ. ದ ಕೊರತೆಯೆಂದು ತಿಳಿಯುವದು. ಹಳದೀ ಸ್ರಾವವು ಕಾಲಿ. ಸ. ದ ಕೊರತೆಯ ಲಕ್ಷಣವು. ಸ್ರಾವವೆಂಬ ವಿವರ ನೋಡಿರಿ. ಸ್ರಾವದ ಮೇಲಿಂದ ಯಾವ ಕ್ಷಾರಗಳು ಕಡಿಮೆ ಇರುವವು ಇದನ್ನು ನಿಶ್ಚಿತಮಾಡಿ ಆ ಕ್ಷಾರವನ್ನು ಹೊಟ್ಟೆಯಲ್ಲಿ ಕೊಡಬೇಕು.

---

# ಪ್ರಮೇಹ

**Gonorrhea.** ಗೊನೋರಿಯಾ.

ಪ್ರಮೇಹವು ಸಾಂಸರ್ಗಿಕ ರೋಗವು. ಪ್ರಮೇಹವಿದ್ದ ಸ್ತ್ರೀ ಅಥವಾ ಪುರುಷನ ಸಂಗಡ ಸಂಭೋಗ ಮಾಡಿದಲ್ಲಿ ಈ ರೋಗವಾಗುವದು. ಜನನೇಂದ್ರಿಯದ ಶ್ಲೇಷ್ಮಲ ತ್ವಚೆಯಲ್ಲಿ ದಾಹದ ಭಾವನೆಗಳುಂಟಾಗುವವು. ರೋಗದ ಬೀಜವು ಮೈಯಲ್ಲಿ ಸೇರಿದ ೧–೨–೪–೮ ದಿವಸಗಳಲ್ಲಿ ಮುಂದೆ ಹೇಳುವ ಭಾವನೆಗಳು ಕಂಡುಬರುವವು. ಮೂತ್ರ ಮಾರ್ಗದ ಮುಂದಿನ ಭಾಗದಲ್ಲಿ ತಿಂಡಿ ಬಂದಂತಾಗುವದು. ಮುಂದೆ ಸ್ವಲ್ಪೇ ದಿವಸದಲ್ಲಿ ಶ್ಲೇಷ್ಮಲ ತ್ವಚೆಯೊಳಗಿಂದ ಸ್ರಾವವು ಹರಿಯಹತ್ತುತ್ತದೆ. ಮುಂದೆ ಉರುಪೂ ಆಗಹತ್ತುವದು. ಸ್ರಾವವು ದಪ್ಪ, ಪಾರದರ್ಶಕ, ಬಿಳಿ, ಹಳದಿ, ಹಸರು, ಒಮ್ಮೊಮ್ಮೆ ರಕ್ತಕೂಡಿದ್ದೂ ಇರುವದು ಮತ್ತು ಅದು ಹೆಚ್ಚುಕಡಿಮೆ ಪ್ರಮಾಣದಲ್ಲಿ ಹರಿಯಹತ್ತುವದು. ಮೂತ್ರಮಾರ್ಗದಲ್ಲಿ ಬಾವು ಬರುವದು. ಅಲ್ಲಿ ವೇದನೆ ಬರಹತ್ತುವವು. ವೇದನೆ ವೃಷಣದಲ್ಲಿಯೂ ಗೆಜ್ಜೆಯಲ್ಲಿಯೂ

ಆಗಹತ್ತುತ್ತದೆ. ಮೂತ್ರವು ಮೇಲಿಂದ ಮೇಲೆ ಆಗುವದು. ಮೂತ್ರದ ಕಾಲಕ್ಕೆ ನೋಯುವದು. ಇಂದ್ರಿಯವು ಶಿಟದದ್ದು ಇರುವದು. ಮೂತ್ರವಾಗುವ ಕಾಲಕ್ಕೆ ಮೇಲಿಂದ ಮೇಲೆ ಉಗಳಬೇಕಾಗುತ್ತದೆ. ಮೂತ್ರವು ಹಸಿ ಹಸಿ ಸೋರುವದು. ಇಂದ್ರಿಯದ ಮೇಲಿನ ತ್ವಚೆ ಹಿಂದೆ ಮುಂದೆ ಸರಪಾಡಲಾರದು. ಮೇಲಿಂದ ಮೇಲೆ ಪ್ರಮೇಹವಾಗುವವರಿಗೆ ವೇದನೆ ಬಹಳಾಗುವದಿಲ್ಲ. ಆದರೆ ಸ್ರಾವ ಮಾತ್ರ ಬಹಳ ಇರುವದು. ಸೌಮ್ಯ ಸ್ವರೂಪದ ಪ್ರಮೇಹವು ೫-೬ ವಾರಗಳಲ್ಲಿ ನೆಟ್ಟಗಾಗುವದು. ಪ್ರಮೇಹವು ಮೈಯಲ್ಲಿ ಭೇದಿಸಿದ್ದರೆ ಅದು ಹಳೇ ಸ್ವರೂಪ ಹೊಂದುತ್ತದೆ. ಹಳೇ ಸ್ವರೂಪದ ಪ್ರಮೇಹದಲ್ಲಿ ವೇದನೆ ಇರುವದಿಲ್ಲ. ಒಮ್ಮೊಮ್ಮೆ ಸ್ರಾವವು ತೆಳ್ಳಗಿರುವದು ಮತ್ತೊಮ್ಮೆ ಗಟ್ಟಿ ಹಳದಿ ಇರುವದು. ಒಮ್ಮೊಮ್ಮೆ ಸ್ರಾವದ ಹಸಿಯೇ ಬರುವದು. ಹೆಚ್ಚಿನ ಕಾರಣವಾದಲ್ಲಿ ಸ್ರಾವವು ಹೆಚ್ಚುಕಡಿಮೆಯಾಗುವದು. ಈ ಸ್ಥಿತಿಯೂ ಎಷ್ಟೋ ತಿಂಗಳ ಅಥವಾ ವರ್ಷವೂ ನಡೆಯುವದು. ಹಳೇ ಪ್ರಮೇಹದಲ್ಲಿ ಸಂಧಿವಾತದಂಥ ತಾಪದಾಯಕ ರೋಗಗಳೂ ಉತ್ಪನ್ನವಾಗುವವು. ಜನನೇಂದ್ರಿಯದ ಶ್ಲೇಷ್ಮಲ ತ್ವಚೆಯ ದಾಹವು ಪ್ರಮೇಹದಿಂದಲೇ ಆಗುವದಂತಲ್ಲ, ಸಂಭೋಗಾತಿರೇಕದಿಂದಲೂ, ಮುಟ್ಟಾದ ಸ್ತ್ರೀಯಳ ಸಂಗಡ ಸಂಭೋಗಮಾಡಿದ್ದರಿಂದಲೂ, ತೀಕ್ಷ್ಣವಾಗೂ ಉರುಪು ಹುಟ್ಟಿಸುವಂಥ ಪ್ರದರವಿದ್ದ ಸ್ತ್ರೀಸಂಭೋಗದಿಂದಲೂ ಕೃತ್ರಿಮವಾಗಿ ಪ್ರಮೇಹದಂಥ ಸ್ರಾವವು ಆಗುವದುಂಟು; ಆದರೆ ಇಂಥ ರೋಗವು ಸೌಮ್ಯ ಸ್ವರೂಪದಿದ್ದುದರಿಂದ ಅದು ಸ್ವಲ್ಪೇ ಕಾಲದಲ್ಲಿ ತನ್ನಷ್ಟಕ್ಕೆ ತಾನೇ ನೆಟ್ಟಗಾಗುವದು.

**ಕಾ. ಮೂ:—** ಇದು ಮುಖ್ಯ ಔಷಧವು. ಬಿಳೇ, ದಟ್ಟ, ಹಳದಿ, ಸ್ರಾವವು. ಬಹುದಿವಸದ ಪ್ರಮೇಹವು. ಇಸಬು ಇದ್ದಲ್ಲಿ ಉಪಯೋಗವಾಗುವದು.

**ಫೇ. ಫಾ:—** ದಾಹಯುಕ್ತ ಅವಸ್ಥೆಯಲ್ಲಿ ಕಾ. ಮೂ. ದ ಸಂಗಡ ಕೊಡಬೇಕು.

**ಕಾ. ಫಾ:—** ರಕ್ತಸ್ರಾವಯುಕ್ತ ಪ್ರಮೇಹ.

**ಕಲ್ಕೆ. ಸ:—** ಕೀವೂ, ರಕ್ತವೂ, ಇವುಗಳಿಂದ ಮಿಶ್ರಿತವಾದ ಪ್ರಮೇಹ.

**ನೇ. ಮೂ:—** ಬಹುದಿವಸದ ಪ್ರಮೇಹ, ನೀರಿನಂತೆ ಸ್ವಚ್ಛ, ಪಾರದರ್ಶಕ, ಉರಿಯುವಂಥ ಸ್ರಾವವು. ಬಹಳ ದಿವಸದ ಪ್ರಮೇಹದಲ್ಲಿ ಕ. ಫಾ. ಮತ್ತು ಇದನ್ನು ಸರ್ತಿಯ ಮೇಲೆ ಕೊಡುವದು.

**ಕಲ್ಕೆ. ಫಾ:—** ಜಿಗಟುಳ್ಳ ಸ್ವಚ್ಛ ತತ್ತಿಯಲ್ಲಿಯ ಬಿಳೇ ಲೋಳಿ ಯಂತಿರುವ ಕೀವು. ಬಹಳ ದಿವಸದ ಪ್ರಮೇಹ. ನೇಟ್ರಂ. ಮೂ. ಮತ್ತು ಇದನ್ನು ಸರ್ತಿಯ ಮೇಲೆ ಕೊಡುವದು.

**ಕಾ. ಸ:—** ಜಿಗಟು, ಹಳದಿ, ಹಸರು ಕೀವು. ಹಳೇ ಪ್ರಮೇಹ ದಲ್ಲಿ ಹಳದೀ ಸ್ರಾವವು.

**ನೇ. ಸ:—** ಹಳೇ ಪ್ರಮೇಹ, ದಟ್ಟ, ಹಳದಿ, ಹಸರು ಸ್ರಾವ. ವೇದನೆ ಬಹಳ ಕಡಿಮೆ ಇರುವವು. ೩ × ಶಕ್ತಿಯ ಔಷಧ ಎರಡು ತಾಸಿಗೊಮ್ಮೆಯಂತೆ ನೀರಿನೊಳಗಿಂದ ಕೊಡುವದು.

**ಸಿ:—** ತೀವ್ರವಾಗಿ ನೆಟ್ಟಗಾಗದ ರೋಗದಲ್ಲಿ ದಟ್ಟ, ದುರ್ಗಂಧ ಕೀವು. ಶಾರೀರಿಕ ಶ್ರಮವಾಗುತ್ತಿದ್ದ ಕಾಲಕ್ಕೆ ಸಹ ಮೈಮೇಲೆ ಮುಳ್ಳು ಬರುವದು. ಹಳೇ ಪ್ರಮೇಹದಲ್ಲಿ ಅವರೋಧವಿದ್ದರೆ ತಪ್ಪದೇ ಗುಣ ಬರುವದು.

**ಮ್ಯಾ. ಫಾ:—** ಬಾಣಚುಚ್ಚಿದಂತೆ ವೇದನೆ. ಮೂತ್ರಮಾರ್ಗ ಸಂಕೋಚನ. (Stristuse) ಸ್ರಾವಕ್ಕನುಸರಿಸಿ ಕೊಡಲು ಯೋಚಿಸಿದ ಔಷಧದ ಜತೆಗೆ ಇದನ್ನು ಕೊಡತಕ್ಕದ್ದು.

**ಉಪಯುಕ್ತ ಸೂಚನೆ:—** ಇಂದ್ರಿಯವನ್ನು ಒತ್ತಿ ಕೀವು ತೆಗೆದುಹಾಕುವ ಯತ್ನ ಮಾಡಬಾರದು. ಹಾಗೆ ಮಾಡಿದಲ್ಲಿ ಮೂತ್ರ ಮಾರ್ಗದಲ್ಲಿ ಬಾವು ಬಂದು ರೋಗವು ನೆಟ್ಟಗಾಗುವದಕ್ಕೆ ಪ್ರತಿಬಂಧ ವಾಗುತ್ತದೆ. ನಡೆಯುವ ವ್ಯಾಯಾಮದಹೊರ್ತು ಇತರ ವ್ಯಾಯಾಮ ಬಿಡಬೇಕು. ಚಹ, ಕಾಫಿ, ಸರಾಯಿ ಮುಂತಾದ ಪೇಯಗಳನ್ನು ಬಿಡ

ಬೇಕು. ಹಾಲು, ಅನ್ನ, ಸಿಹಿ, ಹಣ್ಣು, ಭಕ್ಕರಿ ಮುಂತಾದವುಗಳನ್ನು ತಿನ್ನಬಹುದು. ನೀರು ಬೇಕಾದಷ್ಟು ಕುಡಿಯುಬೇಕು. ಹೊಟ್ಟೆಯಲ್ಲಿ ಕೊಡಲು ಯೋಚಿಸಿದ ಔಷಧವನ್ನು ಬಿಸಿನೀರಿನಲ್ಲಿ ಹಾಕಿ ಅದರಿಂದ ಮೂತ್ರಮಾರ್ಗವನ್ನು ತೊಳೆಯುಬೇಕು.

---

## ಪರಿವರ್ತನ ಜ್ವರ (ಮರಕಳಿಸಿಬಂದ ಜ್ವರ)

**Relapsing Fever.** **ರಿಲ್ಯಾಪ್ಸಿಂಗ ಫೀವರ.**

ಈ ಜ್ವರವು ಸಾಂಸರ್ಗಿಕವಿದ್ದು ಬಹುತರವಾಗಿ ದುಷ್ಕಾಳದಲ್ಲಿ ಕಂಡುಬರುವದು. ಇದು ಒಮ್ಮೊಂದೊಮ್ಮೆ ೫ನೇ, ೬ನೇ, ೭ನೇ, ದಿವಸ ಇಳಿಯುತ್ತದೆ. ಒಂದು ಸಪ್ತಕದ ನಂತರ ಪುನಃ ಉದ್ಭವಿಸುವದು. ಪ್ರಾರಂಭದಲ್ಲಿ ಜ್ವರ ಒಮ್ಮೊಂದೊಮ್ಮೆ ಬರುವದು. ಆಗ್ಗೆ, ತಲೆ, ಟೊಂಕ ಮುಂತಾದವುಗಳಲ್ಲಿ ಶೂಲೆ ಇರುವದು. ಮುಂಜಾವಿನಲ್ಲಿ ಜ್ವರವು ೧೦೨° ಅಂಶದ ವರೆಗೆ ಇರುವದು. ಸಾಯಂಕಾಲದಲ್ಲಿ ಏರುವದು. ಮುಂದೆ ಮುಂದೆ ಪ್ರಾತಃಕಾಲದಲ್ಲಿ ೧೦೫°-೧೦೬° ಅಂಶದ ವರೆಗೆ ಏರುವದು. ಮತ್ತು ಸಾಯಂಕಾಲದಲ್ಲಿ ಇಳಿಯುವದು. ನಾಡಿಯು ಬಡೆತಗಳು ಮುಂಜಾನೆ ೧೧೨ ರ ವರೆಗೆ, ಸಾಯಂಕಾಲದಲ್ಲಿ ೧೨೦ ರ ಕಿಂತ ಹೆಚ್ಚು ಇರುವವು. ಅಸ್ವಸ್ಥತೆ, ನಿದ್ರಾನಾಶ, ಮಳಮಳ ಅನ್ನೋಣ, ವಾಂತಿ, ತೆಳ್ಳನ ಭೇದಿ (ಜುಲಾಬು) ಮುಂತಾದ ಭಾವನೆಗಳಿರುವವು. ಹೊಟ್ಟೆಯಲ್ಲಿ ಭಾರವೆನಿಸುವದು, ನೋವೂ ಇರುವದು. ಪ್ಲೀಹ, ಯಕೃತ ಬೆಳೆಯುತ್ತವೆ. ವಾತ, ಭ್ರಮ, ಮುಂತಾದ ಭಾವನೆಗಳು ಬಹುತರವಾಗಿ ಇರುವದಿಲ್ಲ. ಜ್ವರ ಹೆಚ್ಚಿಗಿದ್ದು ತ್ವಚೆಯು ರುಕ್ಷವಿರದಿರುವದು, ಈ ರೋಗದ ವಿಶೇಷ ಲಕ್ಷಣವು. ಅಶಕ್ತತೆ ಬಹಳಿರುತ್ತದೆ. ಬೆವರು ಬಹಳಬಿಟ್ಟು ಜ್ವರ ಇಳಿಯು ಪತ್ತುತ್ತದೆ. ಜ್ವರವಿಲ್ಲದ ದಿವಸ ರೋಗಿಯು ಬಹಳ ಸೋತವನಂತೆ ಇರುವನು. ನಾಡಿಯು ಬಹು ಮಂದ ನಡೆಯುವದು. ೩।೪ ದಿವಸ ಜ್ವರ ತುಂಬಿ ಮುಂದೆ ಪುನಃ ಇಳಿಯುವದು. ಬಹುಶಃ ೨।೩ ಸಾರೆಯಾದರೂ

ಹೀಗೆ ಆಗುವದು. ಕಾಮಣಿ, ಮೂಗುಬಿಚ್ಚುವದು, ರಕ್ತಕಾರಿಕೆ ಮುಂತಾದ ಭಾವನೆಗಳಿರುವವು. "ಜ್ವರ, ಚಳಿಜ್ವರ,"ಗಳಿಗೆ ಉಪಯೋಗ ವಾಗುವ ಔಷಧಗಳು ಈ ಬೇನೆಗಾದರೂ ಸರಿಯಾಗುವವು. ಆ ವಿವರ ಗಳನ್ನು ನೋಡಿರಿ.

---

# ಪಾಂಡುರೋಗ

**Anemia.** **ಎನಿಮಿಯಾ.**

ಶರೀರದಲ್ಲಿ ರಕ್ತದ ಪ್ರಮಾಣವು ಕಡಿಮೆಯಾದಲ್ಲಿಯೂ, ರಕ್ತದ ಘಟಕಾವಯವಗಳಲ್ಲಿ ವ್ಯತ್ಯಾಸವಾದಲ್ಲಿಯೂ ಪಾಂಡುರೋಗವಾಗುವದು. ರಕ್ತದ ಪ್ರಮಾಣವು ಇರತಕ್ಕಷ್ಟು ಇದ್ದು ರಕ್ತದ ಘಟಕದ್ರವ್ಯಗಳಲ್ಲಿ ರಕ್ತರಂಜಕದ್ರವ್ಯ ಕಡಿಮೆಯಾದಲ್ಲಿಯೂ, ರಕ್ತಕಣದ ಸಂಖ್ಯೆ ಕಡಿಮೆ ಯಾದಲ್ಲಿಯೂ, ಶ್ವೇತಕಣದ ಸಂಖ್ಯೆ ಬೆಳೆದಲ್ಲಿಯೂ, ಆಲ್ಬ್ಯುಮಿನ ಫಿಬ್ರಿನ ಇವುಗಳ ಪ್ರಮಾಣದಲ್ಲಿ ಹೆಚ್ಚುಕಡಿಮೆಯಾದಲ್ಲಿಯೂ— ಈ ಮುಂತಾದ ಕಾರಣಗಳಿಂದ ತ್ವಚೆಯು ಪಾಂಡುರ ಹಾಗು ಕಳೆಗುಂದಿದ್ದು ಇರುವದು. ಮೇಲೆ ಹೇಳಿದ ಕಾರಣ ಮೂಲಕ ಈ ಬೇನೆಗೆ ಕಾರಣಾನು ಸಾರವಾಗಿ ಪಂಡುರೋಗ ಶ್ವೇತಪಂಡುರೋಗ ಪೀತಪಂಡುರೋಗ ಮುಂತಾದ ಹೆಸರುಗಳು ಇರುವವು. ರಕ್ತಕಣದಲ್ಲಯು ರಕ್ತರಂಜಕ ದ್ರವ್ಯಗಳೂ ಕಡಿಮೆಯಾದರೆ ಪೀತಪಂಡುರೋಗವಾಗುವದು. ಶ್ವೇತ ಪಂಡುರೋಗದಲ್ಲಿ ಶ್ವೇತಕಣಗಳ ಸಂಖ್ಯೆಯು ಮಿತಿಮೀರುವದು. ಕೇವಲ ಪಂಡುರೋಗದಲ್ಲಿ ಸ್ಥೂಲಮಾನದಿಂದ ನೋಡಲಾಗಿ ರಕ್ತಕ್ಷೀಣತೆ ಇರುವದು ಅಂದರೆ ರಕ್ತದ ಪ್ರಮಾಣವೇ ಕಡಿಮೆ ಇರುವದು. ಪೀತ ಪಂಡುರೋಗವು ವಯಸ್ಸಿಗೆ ಬಂದ ಸ್ತ್ರೀಯರಿಗೆ ಆಗುವದು. ಮುಖ ಚರ್ಯೆಯು ಕಳೆಗುಂದಿದ್ದೂ ಹಳದಿ ಬಣ್ಣದ್ದೂ ಇರುವದು. ಹಸರು ಛಾಯೆಯೂ ಇರುವದು. ತುಟಿ, ಒಸಡಿ, ಕಣ್ಣು ಮುಂತಾದವು ನಿಸ್ತೇಜ ವಾಗಿಯೂ ಅವುಗಳಿಗೆ ನೀಲ ಛಾಯೆಯೂ ಇರುವದು. ಹೃದಯದ ಉಪದ್ರವವೂ ಇದ್ದು ಕಷ್ಟಶ್ವಾಸ, ಎದೆಯಲ್ಲಿ ಧಡಧಡಿಸುವದೂ ಕಂಡು

ಬರುವವು. ಅಗ್ನಿಮಾಂದ್ಯ, ಅವರೋಧ ಇವುಗಳ ಲಕ್ಷಣಗಳೂ ಇರುವವು. ತಲೆನೋವು, ಭ್ರಮಣ, ನಿರುತ್ಸಾಹ, ಗಾಬರಿಕೆ ಮುಂತಾದ ಭಾವನೆಗಳೂ ಇರುವವು. ಹಾಗೂ ನಷ್ಟಾರ್ತವ, ಸಪೀಡಾರ್ತವಗಳೂ ಇರುವವು. ನಡುಸಡುವೆ ಜ್ವರವೂ ಬರುವದು.

ಶ್ವೇತ ಪಂಡುರೋಗದಲ್ಲಿ ಅಶಕ್ತತೆಯು ಬಹಳಿದ್ದು ರೋಗಿಯು ಸೊರಗುತ್ತಿರುವನು. ಮುಖಚರ್ಯೆಯು ಬೆಳ್ಳಗೆ ಕಳೆ ಇಲ್ಲದ್ದು ಇರುವದು. ಕಷ್ಟ ಶ್ವಾಸ ಮುಂತಾದ ಹೃದಯದ ವಿಕಾರಗಳೂ ಇರುವವು. ಕಾಲು, ಮುಖಚರ್ಯೆ ಮುಂತಾದವುಗಳಲ್ಲಿ ಬಾವು ಸಹ ಕಂಡುಬರುವದು. ಜ್ವರವೂ ಇರುವದು. ಪ್ಲೀಹೆಯು ಬೆಳೆದದ್ದು ಇರುವದು.

ಕಷ್ಟಶ್ವಾಸ, ಹೃದಯ ಕ್ರಿಯೆ ತೀವ್ರವಾಗಿರುವದು, ತಲೆ ತಿರುಗುವದು, ಶ್ಲೇಷ್ಮ ತ್ವಚೆ ನಿಃಸತ್ವ ಕಾಣಿಸೋಣ, ನಿರುತ್ಸಾಹವು, ತೀವ್ರ ದಣಿಯುವಿಕೆ, ಅಪಚನದ ವಿಕಾರಗಳು, ಕಾಲುಬಾವು ಮುಂತಾದ ಪಂಡುರೋಗದ ಲಕ್ಷಣಗಳು ಇರುವವು.

ಮಿತಿಮೀರಿ ಮಾನಸಿಕ ಶ್ರಮ, ಕದನ್ನ ತಿನ್ನುವದು, ಪೌಷ್ಟಿಕ ಹಾಗೂ ಸಾಕಷ್ಟು ಅನ್ನ ತಿನ್ನದಿರೋಣ, ತಿಂದನ್ನ ಮೈಗೆ ಹತ್ತದಿರೋಣ, ಅಪಚನ, ಸನ್ನಿಪಾತಜ್ವರ, ಚಳಿಜ್ವರ, ದುರ್ಗಿ ಬೇನೆ ಮುಂತಾದ ಶಕ್ತಿ ಕ್ಷೀಣ ಮಾಡುವ ರೋಗಗಳು, ಸಂಭೋಗಾತಿರೇಕ, ಉಪದಂಶ, ಅತ್ಯಾರ್ತವ ಅಥವಾ ಇತರ ಕಾರಣಗಳಿಂದ ರಕ್ತ ಸ್ರಾವವಾಗೋಣ, ಬಹುದಿವಸ ಮೈಯಲ್ಲಿಂದ ಕೀವು ಸೋರೋಣ ಹಾಗೂ ನಷ್ಟಾರ್ತವ— ಇವು ಈ ರೋಗದ ಕಾರಣಗಳು.

ಜಠರ ರಸ, ಹಾಗೂ ಪಿತ್ತ ಇವುಗಳಲ್ಲಿಯ ಕಲ್ಕೆ. ಫಾ. ಮತ್ತು ನೇಟ್ರಂ ಫಾ. ಇವುಗಳ ಪ್ರಮಾಣ ಕಡಿಮೆಯಾದ ಕಾರಣ, ರಕ್ತ ಕ್ಷೀಣತೆ ಅಥವಾ ಪಂಡುರೋಗ ಉತ್ಪನ್ನವಾಗುವದು. ಕಡಿಮೆಯಾದ ಕ್ಷಾರಗಳನ್ನೇ ಹೊಟ್ಟೆಯಲ್ಲಿ ಔಷಧ ರೂಪದಿಂದ ಸೂಕ್ಷ್ಮ ಪ್ರಮಾಣದಿಂದ ಕೊಟ್ಟರೆ ರೋಗವು ನೆಟ್ಟಗಾಗುವದು. ಇದರಿಂದ ಅನ್ನವು ಚನ್ನಾಗಿ ಪಚನವಾಗಿ ಅದು ಶರೀರದಲ್ಲಿ ಶೋಷಣ ಮಾಡಲ್ಪಡುತ್ತದೆ. ಹೀಗಾಗಿ ಶುದ್ಧ ರಕ್ತದ

ವೃದ್ಧಿಯಾಗಿ ಕ್ಷೀಣವಾದ ಇಂದ್ರಿಯುಗಳು ಸಶಕ್ತವಾಗುವವು, ರೋಗವಿಲ್ಲ ದಂತಾಗುವದು, ಹೀಗೆ ಜೀವನ ರಸಾಯನ ಶಾಸ್ತ್ರಜ್ಞರು ತಿಳಿಯುವರು.

**ಕಲ್ಕೆ. ಫಾ:—** ಪೌಷ್ಟಿಕ ಅನ್ನವು ಸಾಕಷ್ಟು ತಿನ್ನಲಿಕ್ಕೆ ಸಿಗದ್ದ ರಿಂದಲೂ, ಶಕ್ತಿ ಕ್ಷೀಣಮಾಡುವ ರೋಗಗಳ ಮೂಲಕ ( ಪಟಿಕಿ, ಹಿಮಜ್ವರ, ಧಾತುಕ್ಷಯ ಮುಂತಾದವು ) ಆಗುವ ಪಂಡುರೋಗ ದಲ್ಲಿಯು ಮುಖ್ಯ ಔಷಧವಿದು. ರಕ್ತದಲ್ಲಿಯು ಶ್ವೇತಕಣದ ವೃದ್ಧಿ ಯಾದ್ದರಿಂದಾಗುವ ಪಂಡುರೋಗದ ಮೇಲೆ ಇದನ್ನು ಕೊಡುವದು. ಸ್ವಲ್ಪ ಹಸರು, ಹಳದಿ. ಬಿಳೀ, ಸಿಸ್ತೇಜ ಮುಖಚರ್ಯೆ ಇರುವದು, ಅಪಚನವಾಗುವದು, ಸೊರಗಿದ ಸಣ ನಾಜೂಕ ಮಕ್ಕಳ ಕೈಕಾಲುಗಳು ತಣ್ಣಗಾಗಿರುವದು ಮುಂತಾದ ಭಾವನೆಗಳು ಇದ್ದರೆ ಆಯಾ ಭಾವನೆಗಳಿಗೆ ಸರಿಯಾದ ಔಷಧಗಳ ಜತೆಗೆ ಇದನ್ನು ಕೊಟ್ಟಲ್ಲಿ ಉಪಯೋಗವಾಗುವದು. ರಕ್ತ ಬೆಳೆಸುವದು. ೬ × ಅಥವಾ ೧೨ × ಶಕ್ತಿಯನ್ನು ಕೊಡುವದು.

**ಫೇ. ಫಾ:—** ಈ ಔಷಧದಲ್ಲಿ ಪ್ರಾಣವಾಯುವನ್ನು ಎಳಕೊಂಡು ರಕ್ತಶುದ್ಧ ಮಾಡುವ ಹಾಗೂ ರಕ್ತದ ಕಣಗಳನ್ನು ಬೆಳೆಯಿಸುವ ಶಕ್ತಿ ಯಿರುವದು. ಕಲ್ಕೆ. ಫಾ. ದಿಂದ ರಕ್ತ ಬೆಳೆಯದಿದ್ದರೆ ಇದನ್ನು ಕೊಡ ಬೇಕು. ೧೨× ಶಕ್ತಿಯನ್ನು ಕೊಡುವದು. ಮುಟ್ಟು ಅನಿಯಮಿತ ಹಾಗೂ ಕಡಿಮೆ ಆಗುವ ಮೂಲಕ ಉತ್ಪನ್ನವಾಗುವ ಪಂಡುರೋಗದ ಮೇಲೆ ಕೊಡುವದು.

**ನೇ. ಮೂ:—** ಹೆಂಣು ಹುಡುಗಿಯರು ವಯಸ್ಸಿನಲ್ಲಿ ಬರುವ ಸುಮಾರಕ್ಕೆ ಆಗುವ ಪಂಡುರೋಗ: ರಕ್ತವು ತಿಳಿಯಾಗಿದ್ದು ಸಾಕಷ್ಟು ಕೆಂಪಾಗಿರುವದಿಲ್ಲ. ಮುಟ್ಟು ಅನಿಯಮಿತ. ಆಗುವಷ್ಟರಕಿಂತ ಕಡಿಮೆ, ಬಿಳೀವರ್ಣದಮೇಲೆ, ಒಮ್ಮೊಮ್ಮೆ ಆಗದಿರುವದು ಇವುಗಳಿಂದಾಗುವ ಮಲಾವರೋಧ, ಕಳೆಹೀನ ತ್ವಚೆ, ಉದಾಸೀನತೆ, ಹೃದಯದಲ್ಲಿ ಧಡ ಧಡಿಸೋಣ, ಮುಂತಾದ ಪಂಡುರೋಗದ ಭಾವನೆಗಳ ಮೇಲೆ ಇದರ ಜತೆಗೆ ಕಾಲೀ. ಫಾ. ಕೊಡಬೇಕು. ನೆಟ್ರಂ ಮೂ. ೨೦೦ × ಶಕ್ತಿಯನ್ನು ಕೊಡಬೇಕು.

**ಕಾ. ಘಾ:**— ಬಹಳ ಮತ್ತು ಬಹುಕಾಲ ನಡೆದ ಮಾನಸಿಕ ಶ್ರಮ ದಿಂದಾಗುವ ಪಂಡುರೋಗ, ನಿರುತ್ಸಾಹ; ಬೆನ್ನುಹುರಿಯು ನೋಯುತ್ತಿರುವದು.

**ಕಾ. ಮೂ:**— ತ್ವಗ್ರೋಗವಿದ್ದಲ್ಲಿ.

**ನೇ. ಘಾ:**— ಅಪಚನ, ಎದೆಗೆ ಹುಳಿ ಬಂದು ಹಾಯ್ಗೋಣ, ನಾಲಿಗೆಯು ತೀರ ಪಳದೀ ವರ್ಣವಾಗೋಣ ಮುಂತಾದ ಲಕ್ಷಣಗಳು ಇದ್ದರೆ ಸರ್ವಸಾಧಾರಣ ಅಶಕ್ತತೆ ಕಾಲಿನಲ್ಲಿ ಬಹಳ ಅಶಕ್ತತೆ ಇದ್ದು ಸ್ವಲ್ಪ ನಡೆದಾಗಲೂ ಕಾಲು ಸೋಲುವವು. ಮುಂದೆ ನಡೆಯುವದು ಅಶಕ್ಯ ವಾಗುವದು.

**ಸಿ:**— ಯೋಗ್ಯ ಸಂಗೋಪನ ಆಗದೇ ಇದ್ದ **ಮೂಲಕ ಸಣ** ಮಕ್ಕಳಿಗೆ ಆಗುವ ಪಂಡು ರೋಗದಮೇಲೆ ಸೊರಗಿದ ನಾಜೂಕ, ಅಶಕ್ತ, ಬೆಳಿಗೆ ನಿಂತಂಥ ಹುಡುಗರಿಗೂ ಮುಟ್ಟು ಆಗದೆ ಅದರ ಬದಲು ಬಿಳೇ ಸ್ರಾವವು ಹೋಗುತ್ತಿದ್ದವರಿಗೂ ಮುಖ್ಯ ಔಷಧದ ಜತೆಗೆ ನಡುನಡುವೆ ಇದನ್ನು ಕೊಡಬೇಕು.

**ಉಪಯುಕ್ತ ಸೂಚನೆ:**— ತೀರ ಬೈಲಹವೆಯಲ್ಲಿಯೂ ಬಿಸಿಲೂ ಬೆಳಕೂ ಇದ್ದ ಹವೆಯಲ್ಲಿಯೂ ತಿರುಗಾಡುವದು ಅವಶ್ಯ. ಪೌಷ್ಟಿಕ ಅನ್ನ ಸೇವನಮಾಡಬೇಕು. ಶಾಕಾಹಾರಿಗಳು ಹಾಲೂ, ಹಾಲಿನಿಂದ ಮಾಡಲ್ಪಟ್ಟ ಪದಾರ್ಥಗಳನ್ನು ಅಂದರೆ ಸಜ್ಜಿಗೆ, ಗೋದಿರೊಟ್ಟಿ ಮುಂತಾದ ಪದಾರ್ಥಗಳನ್ನು ಹೆಚ್ಚು ಪ್ರಮಾಣದಲ್ಲಿ ತಿನ್ನಬೇಕು. ಮಾಂಸಾಹಾರಿಗಳು ಮೇಲೆ ಹೇಳಿದ ಪದಾರ್ಥಗಳನ್ನೂ ಮೀನ, ರಸಾ, ಸುರಾ ಮುಂತಾದವುಗಳನ್ನು ಸಹ ತಿನ್ನಬೇಕು. ತೀರ ಬೆಚ್ಚನ— ನೀರಿನಿಂದ— ಅದಕ್ಕೂ ಹಿತಕರವೆಂದರೆ— ತಣ್ಣನ ನೀರಿನಿಂದಲೇ ಸ್ನಾನಮಾಡುವದು ಬಹಳೇ ಹಿತಕರ. ಇಂಥ ನೀರಿನಿಂದ ಉತ್ಸಾಹವುಂಟಾಗುವದು.

---

# ಪಿತ್ತಾಶ್ಮರಿ

**Gallstone.** ಗಾಲ್‌ಸ್ಟೋನ್.

ಪಿತ್ತಾಶಯದಲ್ಲಿ ಪಿತ್ತದ ಹರಳು ಅಥವಾ ಬೆಸಕ ಆಗೋಣವೆಂದರೇ ಪಿತ್ತಾಶ್ಮರಿ ಎಂಬ ರೋಗವು. ಪಿತ್ತನಲಿಕೆಯಿಂದ ಪಿತ್ತಾಶಯದಲ್ಲಿ ಪಿತ್ತದ ಹರಳುಗಳು ಇಳಿಯುವಾಗ ಬಹಳೇ ವೇದನೆಯಾಗುವದು. ಸಾಧಾರಣ ವಾಗಿ ಊಟವಾದನಂತರ ಸ್ವಲ್ಪೇ ಅವಧಿಯಲ್ಲಿ ಅಥವಾ ಏನಾದರೂ ಜಡ ಪದಾರ್ಥ ಎತ್ತಿದರೆ ಕಳೆಬರಹತ್ತುತ್ತವೆ. ಜಠರ ಭಾಗದಲ್ಲಿಯೂ ಯಕೃತ್ ಭಾಗದಲ್ಲಿಯೂ ಕಳೆ ಬರುತ್ತವೆ. ಮತ್ತು ಆ ವೇದನೆ ಕೆಳಹೊಕ್ಕಳ ವರೆಗೂ, ಬೆನ್ನಿನ ಹುರಿಯ ವರೆಗೂ, ಎದೆಯಲ್ಲಿಯೂ, ಬೆನ್ನಿನಲ್ಲಿಯೂ, ಹೆಗಲು ವರೆಗೊ ಹಬ್ಬುತ್ತದೆ. ಒಮ್ಮೊಮ್ಮೆ ಕೈಬಟ್ಟಿನ ವರೆಗೂ ವೇದನೆ ಹಬ್ಬುವದು. ವಾಂತಿ, ಅಸ್ವಸ್ಥತೆ, ನಿಡತ ಮುಂತಾತ ಲಕ್ಷಣಗಳು ಸಹ ಇರುವವು. ಕಾಮಣಿ ಸಹ ಒಮ್ಮೊಮ್ಮೆ ಇರುವದು. ಈ ಪಿತ್ತಶೂಲಿ ಸ್ವಲ್ಪೇ ಕಾಲದಲ್ಲಿ ಇಲ್ಲದಂತಾಗುವದು. ಒಮ್ಮೊಮ್ಮೆ ಹೆಚ್ಚು ದಿವಸ ಸಹ ತಾಳುವದು. ಪಿತ್ತದ ಹರಳು ಮೂತ್ರದೊಳಗಿಂದ ಹೊರಬಿದ್ದು ಹೋಗುವ ವರೆಗೆ ಈ ಶೂಲೆ ಮೇಲಿಂದಮೇಲೆ ಉದ್ಭವಿಸುವದು. ವ್ಯಾಯಾಮ ತೆಗೆದುಕೊಳ್ಳದಿರೋಣ, ಯಾವಾಗಲೂ ಅಜೀರ್ಣವಾದರೂ ಸಹ ಕೂತುಕೊಂಡೇ ಇರೋಣ, ಅವರೋಧ ಮುಂತಾದವುಗಳೂ ಪಿತ್ತಾಶ್ಮರಿಯ ಕಾರಣಗಳು. ನಿದಾನ ಪ್ರಕರಣದಲ್ಲಿಯ "ಯಕೃತಶೂಳ" ವೆಂಬ ಪ್ರಕರಣ ನೋಡಿರಿ.

ಮೊದಲು "ನೇಟ್ರಂ. ಸ." ಕ್ಷಾರದ ಕೊರತೆಯಾದ ಮೂಲಕ ಪಿತ್ತವು ಗಟ್ಟಿಯಾಗಿ ಅದರಿಂದ ಹರಳುಗಳಾಗುವವು. ಜೀವನ ರಸಾಯನ ಶಾಸ್ತ್ರದ ದೃಷ್ಟಿಯಿಂದ ಇದೇ ಈ ರೋಗದ ಮುಖ್ಯ ಕಾರಣವು.

**ಮ್ಯಾ. ಫಾ:**— ವೇದನೆ ಬಹಳ ತೀವ್ರ. ಶಿಡಿತವೂ ಇರುವದು.

**ಕಲ್ಕೆ. ಫಾ:**— ಪಿತ್ತದ ಹರಳಾಗುವದನ್ನು ನಿಲ್ಲಿಸುವದಕ್ಕೆ ಇದರ ಉಪಯೋಗವಾಗುವದು.

**ನೇ. ಸ:—** ಪಿತ್ತದ ಭಾವನೆಗಳು ಇದ್ದರೆ— ಅವು ಬಹುತರವಾಗಿ ಇರುವವು— ಟೊಂಕಕ್ಕೆ ಸುತ್ತಿದ್ದ ಧೋತರ ಸಹ ಸಹನವಾಗುವದಿಲ್ಲ. ಬೊಟ್ಟುಗಳಲ್ಲಿಯ ಸಂಧಿವಾತ (ಅಂಗುಲಿವಾತ)ವಿದ್ದರೆ ಇದು ಉಪಯೋಗ ವಾಗುವದು. ಕಲ್ಕೆ. ಫಾ. ಮತ್ತು ಇದು ಒಂದರ ಜತೆಗೆ ಮತ್ತೊಂದು ಹೀಗೆ ಕೊಡಬೇಕು.

**ಫೇ. ಫಾ:—** ಜ್ವರ ಮುಂತಾದ ದಾಹದ ಭಾವನೆಗಳು ಇದ್ದಲ್ಲಿ "ಯಕೃತ ವಿಕೃತಿ," "ಕಾಮಣಿ," "ಹೊಟ್ಟೆಶೂಲೆ" ಸದರ ನೋಡಿರಿ.

## ಪಿತ್ತಪ್ರಕೋಪ

**Biliousnes.** **ಬಿಲಿಯಸ್‌ನೆಸ್.**

ಕೆಲವರಿಗೆ ಮೇಲಿಂದಮೇಲೆ ಪಿತ್ತದ ವಾಂತಿಯಾಗುವ ಚಟವೇ ಇರುವದು. ಅಪಚನ, ತಲೆ ಜಡವಾಗುವದು, ಗ್ಲಾನಿ, ಮ್ಲಾನತೆ, ಮುಂತಾದ ಲಕ್ಷಣಗಳಿರುವವು. ಒಮ್ಮೊಮ್ಮೆ ತಲೆಶೂಲೆ ಅಸಹ್ಯವಾಗು ವದು. ಯಕೃತವಿಕೃತಿಯ ಮೂಲಕ ಈ ಬೇನೆ ಉದ್ಭವಿಸುವದು. ವ್ಯಾಯಾಮ, ನಿಯಮಿತ ಆಚಾರ, ಹಗುರ ಹಾಗೂ ಪಚನವಾಗುವಂಥ ಅನ್ನ ತಿನ್ನೋಣ, ಇವುಗಳು ಇದ್ದಲ್ಲಿ ಪಿತ್ತಪ್ರಕೋಪವಾಗುವದಿಲ್ಲ. ಅದರ ತಾಪವೂ ಆಗಲಾರದು. ಈ ರೀತಿಯಿಂದ ನಡೆಯದೇ ಇದ್ದರೆ ಒಳಗೆ ನಡೆದ ಚೇಷ್ಟೆಯು ವಾಂತಿರೂಪದಿಂದ ಹೊರಬೀಳುವದು; ಮತ್ತು ರೋಗಿಗೆ ಬಹಳೇ ಕಷ್ಟವಾಗುವದು.

**ಫೇ. ಫಾ:—** ದಾಹದ ಲಕ್ಷಣಗಳು ಆಗಹತ್ತಿದ ಕೂಡಲೆ ಇದನ್ನು ಮೊದಲು ಕೊಡುವದು. ಮುಖಚರ್ಯೆ, ವೇದನೆ, ಜ್ವರ ಮುಂತಾದವು.

**ಕಾ. ಮೂ:—** ಮಲಾವರೋಧ. ನಾಲಿಗೆಯು ಬೆಳ್ಳಗೆ ಅಥವಾ ಬೂದಿಬಣ್ಣದ್ದು. ಬೂದಿ ಬಣ್ಣದ್ದ ಮಲವು. ಹೆಗಲಿನ ಕೆಳಭಾಗದಲ್ಲಿ ನೋವು. ಇವುಗಳಿಗೂ ಕಾಮಣಿ ಮೇಲೆಯೂ ಫೇ. ಫಾ. ಮತ್ತು ಇದನ್ನು ಸರ್ತಿಮೇಲೆ ಕೊಡುವದು.

**ನೇ ಸ:—** ಅಭ್ಯಾಸ ಅತಿಶಯಮಾಡಿದ್ದರಿಂದಲೂ ಮಾಸಿಕ ಶ್ರಮಾತಿರೇಕದಿಂದಲೂ ಮೇಲಿಂದಮೇಲೆ ಪಿತ್ತಪ್ರಕೋಪದ ಕಷ್ಟ ವಾಗುವದು. ಬಾಯಿಗೆ ಕಹಿರುಚಿ. ಕಹಿ ಪಿತ್ತದ ವಾಂತಿ, ಕಣ್ಣು ಗುಡ್ಡಿಗಳೂ ಮುಖಚರ್ಯೆಯೂ ಹಳದಿ. ಪಿತ್ತದಿಂದ ರೇಚವು ಹಸರು ಬಣ್ಣವಾಗಿ ಯಕೃತಭಾಗದಲ್ಲಿ ಚುಚ್ಚಿದಂತೆ ವೇದನೆ. ಪಿತ್ತಶೂಲೆ.

**ನೇ. ಮೂ:—** ಜಠರದಲ್ಲಿ ಶೈತ್ಯಮೂಲಕವಾಗುವ ಕಾಮಣಿ, ಹೊಟ್ಟೆಯಲ್ಲಿ ಥಂಡಿಯಾದ ಮೂಲಕ ಆಗುವ ರೇಚ, ಮಾಂದ್ಯ; ಮೂಗಿನಿಂದಲೂ ಕಣ್ಣಿನಿಂದಲೂ ನೀರು ಸೋರುವದು. ನಾಲಿಗೆಯಮೇಲೆ ತೆಳ್ಳನ ಬಿಳೀ ಲೇಪವು ಇಂಥ ಭಾವನೆಗಳ ಮೇಲೆ ಇದರ ಉಪಯೋಗ.

**ಉಪಯುಕ್ತ ಸೂಚನೆ:** — ಶೌಚಕ್ಕೆ ಸ್ಪಷ್ಟವಾಗುವದಕ್ಕೋಸ್ಕರ ಬಿಸಿನೀರಿನ ಬಸ್ತಿ ತೆಗೆದುಕೊಳ್ಳಬೇಕು; ವೇದನೆ ಬಹಳಿದ್ದಲ್ಲಿ ಕಾಸಿಕೊಳ್ಳಬೇಕು. ಬಿಸಿನೀರು ಬಹಳ ಕುಡಿದಲ್ಲಿ ಬಹಳ ಉಪಯೋಗವಾಗುವದು. ಊಟಕ್ಕೆ ತಡಮಾಡಬಾರದು. ವಾತುಲ ಪಿತ್ತಕರ ಪದಾರ್ಥಗಳನ್ನು ಸೇವಿಸಬಾರದು.

---

# ಪೂಯದುಷ್ಟ ರಕ್ತವಿಕಾರ

**Septicemia Pyaemia.** **ಸೆಪ್ಟಿಸೆಮಿಯಾ ಪಿಮಿಯಾ.**

ಇಂಗ್ಲಿಷ ಭಾಷೆಯಲ್ಲಿ ಸೆಪ್ಟಿಸೆಮಿಯಾ ಅಂಬುವ ಬೇನೆಗೆ ಪೂಯದುಷ್ಟ ರಕ್ತವಿಕಾರ ಅಥವಾ ಪೂಯ ದುಷ್ಟ ರಕ್ತಜನ್ಯ ಜ್ವರವೆಂದು ನಾವು ಅನ್ನುತ್ತೇವೆ. ಗಾಯದೊಳಗಿಂದ ಕೀವಾಗಲಿ ಇತರ ವಿಷಪದಾರ್ಥವಾಗಲಿ ಶೋಷಿತವಾಗಿದ್ದಲ್ಲಿ ರಕ್ತವು ಕೆಟ್ಟು ಅಥವಾ ದೂಷಿತವಾಗಿ ಈ ರೋಗ ಉತ್ಪನ್ನವಾಗುತ್ತದೆ. ಮೇಲಿಂದಮೇಲೆ ಥಂಡಿ ತುಂಬಿ ಜ್ವರ ಬರುತ್ತದೆ. ಮತ್ತು ಬೆವರು ಬಹಳ ಬಿಡುತ್ತದೆ. ಜ್ವರವು ಅತಿಶಯ ಅನಿಯಮಿತವಿರುತ್ತದೆ. ಒಮ್ಮೊಮ್ಮೆ ಜ್ವರ ೧೦೫-೧೦೬ ದ ವರೆಗೆ ಸಹ ಏರುತ್ತದೆ. ಇಳಿಯಲಿಕ್ಕೆ ಹತ್ತಿದನಂತರ ೯೬ ಅಂಶದ ಕೆಳಗೆ ಇಳಿಯುತ್ತದೆ. ಈ ತರದ

ಹೆಚ್ಚು ಕಡಿಮೆಯಾಗುವದು ದಿನಾಲು ೧-೨ ಸಾರೆಯೂ ಹೆಚ್ಚು ಸಾರೆಯೂ ಆಗುವದು. ಜ್ವರವಿದ್ದಕಾಲಕ್ಕೆ ಸಹ ಥಂಡಿ ತುಂಬುವದು ಮತ್ತು ಜ್ವರ ಬಹಳ ಏರಿ ತಾತ್ಕಾಲಕ್ಕೆ ಬೆವರು ಬಹಳಬಿಟ್ಟು ಜ್ವರ ಇಳಿಯುವದು. ಜ್ವರದ ಮಾನದಿಂದ ನಾಡಿಯು ಬಹಳ ತೀವ್ರ ಹಾರುವದು. ದಣುವಿಕೆಯೂ ಗ್ಲಾನಿಯೂ, ಬಹಳೇ ಇರುವವು, ಮೊದಲು ಅರುವು ಇರುವದು, ಮುಂದೆ ಜಾಡ್ಯವು ಬೆಳೆಯುತ್ತ ಹೋಗಿ ಕಣ್ಣು ಮುಚ್ಚುಹಾಕುವವು, ಭ್ರಮು ವಾಗುವದು. ವಾತ ಬೆಳೆಯುವದು, ಮಳಮಳಿ, ವಾಂತಿ ರೇಚ ಮುಂತಾದವು ಇರುವವು. ಒಮ್ಮೊಮ್ಮೆ ಕಾಮಣಿ ಸಹ ಇರುವದು. ಭರದಿಂದ ಬಂದ ಜ್ವರದಲ್ಲಿ ರೋಗಿಯು ಒಮ್ಮೊಮ್ಮೆ ೧-೨ ದಿವಸದಲ್ಲಿಯೇ ಮರಣಹೊಂದುತ್ತಾನೆ.

ಗಾಯವು ಹೊಲಸು ಇರೋಣ, ಶಸ್ತ್ರಕ್ರಿಯೆಯ ಕಾಲಕ್ಕೆ ಇಡ ತಕ್ಕಷ್ಟು ಸ್ವಚ್ಛತೆ ಇರದಿರೋಣ, ಅಸ್ಥಿ ಕೊಳೆಯುವದು, ಅಂತರಿಂದ್ರಿಯ ಗಳಲ್ಲಿ ಹುಣ್ಣು ಉತ್ಪನ್ನವಾಗಿ ಕೀವಾಗುವದು, ಇವೇ ಮುಂತಾದವು ಈ ರೋಗದ ಕಾರಣಗಳಿವೆ. ೧೦೪-೧೦೫ ಅಂಶಕ್ಕೂ ಹೆಚ್ಚು ಜ್ವರ ಬರೋಣ, ಭ್ರಮು, ವಾತ, ಮುಂತಾದವು ಆಗೋಣ ಇವು ಅಶುಭ ಲಕ್ಷಣಗಳು. ಈ ರೋಗದಲ್ಲಿ, ನ್ಯುಮೋನಿಯಾ, ಪ್ಲುರಿಸಿ, ಮುಂತಾದವು ಆಗುವ ಹೆದರಿಕೆ ಇರುವದು.

"ಪ್ರಸೂತಿ ಜ್ವರ"ವೆಂಬುವ ವಿವರದ ಕೆಳಗೆ ಹೇಳಿದ ಔಷಧಗಳೆಲ್ಲ ಈ ರೋಗದಲ್ಲಿ ಕೊಡಬಹುದು.

---

## ಹೊಟ್ಟೆ ಶೂಲಿ

**Colic.** **ಕೋಲಿಕ್.**

ಆಂತ್ರಶೂಲೆ, ಯಕೃತಶೂಲೆ, ಮೂತ್ರಶೂಲೆ ಎಂದು ಮೂರು ವಿಧದ ಶೂಲೆ ಇರುವದುಂಟು; "ನಿದಾನ"ಪ್ರಕರಣದಲ್ಲಿ ಈ ಮೂರೂ ವಿಧದ ಶೂಲೆ ಗಳಲ್ಲಿಯ ಭೇದವನ್ನು ಹೇಳಿದೆ. ಅದನ್ನು ನೋಡಿರಿ. ಹೊಟ್ಟೆ ಶೂಲೆಯಲ್ಲಿ ಮೂರು ಭಾವನೆಗಳಿರುವದುಂಟು. ಹೊಕ್ಕಳದ ಪ್ರಾಂತದಲ್ಲಿ ನಿಂತುನಿಂತು

ಬಹು ಕಷ್ಟಕರ ವೇದನೆ ಒಮ್ಮಿಂದೊಮ್ಮೆ ಹೊಟ್ಟೆ ಮುರಿದಂತೆ ಆಗ ಪ್ರಾರಂಭವಾಗುವದು. ಒತ್ತಿದ್ದರಿಂದ ಒಮ್ಮೊಮ್ಮೆ ಸಮಾಧಾನವೆನಿಸುವದು ಒಮ್ಮೊಮ್ಮೆ ಸಮಾಧಾನವಾಗದು. ಉಷ್ಣೋಪಚಾರದಿಂದ ಸಮಾಧಾನ ವಾಗುವದು ಶೀತೋಪಚಾರದಿಂದ ಹೆಚ್ಚಾಗುವದು. ಹೊಟ್ಟೆಯಲ್ಲಿ ಗುರ ಗುರಿಸುತ್ತದೆ. ಹೊಟ್ಟೆಯು ಉಬ್ಬಿದ್ದು ಇರುತ್ತದೆ. ಡಮ ಡಮ ಸಪ್ಪಳಾ ಗುತ್ತದೆ. ಅವರೋಧವಿರುವದು. ಮಳಮಳಿಸುತ್ತದೆ. ವಾಂತಿಯೂ ಆಗುವದು. ತಂಣನ ಬೆವರು ಬಿಡುವದು. ಕೈಕಾಲುಗಳು ತಂಣಗಾಗುವವು. ನಾಡಿಯೂ ಮಂದ ನಡೆಯುವದು. ಕಂಣುಗಳು ಎಳದದ್ದು ಮುಖಚರ್ಯೆಯು ಚಿಂತೆಯುಳ್ಳದ್ದು. ಅಸ್ವಸ್ಥತೆ ಬಹಳ. ರೋಗಿಯು ಸಮಾಧಾನವಾಗುವ ದಕ್ಕೋಸ್ಕರ ಕೂಡುವನು, ನಿಲ್ಲುವನು, ನಡೆಯುವನು. ವಾತಜನ್ಯ ಶೂಲೆ ಇದ್ದರೆ, ವಾಯುವು ಸರಿದನಂತರ ಸಮಾಧಾನವಾಗುವದು. ಅಪಚನ ಮೂಲಕ ಶೂಲೆ ಇದ್ದರೆ ವಾಂತಿ ಅಥವಾ ರೇಚವಾದಲ್ಲಿ ನಿಲ್ಲುವದು. ಪೈತ್ಯ ಜನ್ಯ ಶೂಲೆ ಇದ್ದರೆ, ಮೈಯಲ್ಲಿ ಬೆವರು ಬಿಟ್ಟು ಹೋದನಂತರ, ನಿಲ್ಲುವದು. ಮಲವು ಹೊಟ್ಟೆಯಲ್ಲಿ ಕೂಡಿಕೊಂಡಿದ್ದರಿಂದಾಗಿದ್ದರೆ ಬಸ್ತಿಯನ್ನು ಕೊಟ್ಟ ನಂತರ ಸಮಾಧಾನವಾಗುವದು. ಹೊತ್ತಿದ ಅನ್ನ, ಪಚನಕ್ಕೆ ಕಠಿಣವಿದ್ದ ಅನ್ನ, ಅಜೀರ್ಣವಾಗುವಂಥ ಅನ್ನ, ಇವುಗಳನ್ನು ತಿನ್ನುವದೇ ಈ ರೋಗದ ಕಾರಣ. ಸಣ್ಣ ಮಕ್ಕಳಲ್ಲಿ ಈ ರೋಗವು ಹೆಚ್ಚಾಗಿರುವದು. ಸ್ನಾಯು ತಂತುಗಳಲ್ಲಿಯೂ ನಾಡಿಗಳ ಶ್ವೇತ ತಂತುಗಳಲ್ಲಿಯೂ ವ್ಯಾ. ಫಾ. ದ ಪ್ರಮಾಣವು ಕಡಿಮೆಯಾದಲ್ಲಿ ಶೂಲಿ ಉತ್ಪನ್ನವಾಗುವದು ಎಂದು ಜೀವನ ರಸಾಯನ ಶಾಸ್ತ್ರಜ್ಞರ ಮತ.

**ಫೇ. ಫಾ:**— ಮುಟ್ಟಾಗುವ ಕಾಲಕ್ಕೆ ಕಳೆ ( ಶೂಲೆ ) ಬರುವವು. ನಾಡಿಯು ತೀವ್ರ ಹಾರುವದು. ಮೈಯಲ್ಲಿ ಸ್ವಲ್ಪ ಜ್ವರವೂ ಇರುವದು.

**ವ್ಯಾ. ಫಾ:**— ಮುಖ್ಯ ಔಷಧವು. ಹೊಟ್ಟೆಗೆ ಕಾಲು ಹಚ್ಚಿ ಕೊಂಡು ಮಲಗಿದರೆ ಸಮಾಧಾನ. ವಾತಜನ್ಯ ಹಾಗೂ ಪಿತ್ತಜನ್ಯ ಹೊಟ್ಟೆ ಶೂಲೆ. ಸಿಡಿಲುಬಡಿದಂತೆ ಶೂಲೆ ( ಕಳೆ ) ಹೊಟ್ಟೆ ಕಡಿಯುವ ಮಕ್ಕಳಿಗೆ ಆಗುವ ಹೊಟ್ಟೆ ಶೂಲೆ ಅಪಚನದಿಂದ ಹೊಟ್ಟೆಯಲ್ಲಿ ಬರುವ ವಟ್ಟೆಗಳು

ಕಾಸೋಣ, ತಿಕ್ಕೋಣ, ವಾಯುವು ಸರಿಯೋಣ ಇವುಗಳಿಂದ ಸಮಾಧಾನ. ೩ × ಅಥವಾ ೩೦ × ಶಕ್ತಿಯನ್ನು ಉಪಯೋಗಿಸಬೇಕು.

**ಕಲ್ಕೆ. ಫಾ:—**ಮ್ಯಾಗ್ನೆ. ಫಾ.ದ ಲಕ್ಷಣಗಳು ಸ್ಪಷ್ಟವಾಗಿ ಇದ್ದೂ ಅದರಿಂದ ಸಮಾಧಾನವಾಗದಿದ್ದರೆ ಇದನ್ನು ಕೊಡುವದು. ಅಪಚನದಿಂದ ಸಣ್ಣ ಮಕ್ಕಳಿಗೆ ಆಗುವ ಹೊಟ್ಟೆಶೂಲೆ ಹಲ್ಲು ಬರುವ ಕಾಲಕ್ಕೆ ಆಗುವ ಹಸರು ರೇಚವಿದ್ದಲ್ಲಿ.

**ನೇಟ್ರಂ. ಫಾ:—** ಸಣ್ಣ ಮಕ್ಕಳಿಗೆ ಜಂತು ಆದ್ದರಿಂದ ಇಲ್ಲವೆ ಆಮ್ಲ ಪಿತ್ತದಿಂದಾಗುವ ಹೊಟ್ಟೆ ಶೂಲೆಯ ಮೇಲೆ- ಹಸರು, ಹುಳಿ ವಾಸನೆ ಇದ್ದ ಮಲವು ಇದ್ದರೆ- ವಾಂತಿಯು ಮೊಸರಿನಂತೆ ವಡವಡಕು ಇದ್ದಲ್ಲಿ.

**ನೇ. ಸ:—** ಪಿತ್ತಜನ್ಯ ಹೊಟ್ಟೆಶೂಲೆ- ಬಾಯಿಗೆ ಕಹಿ ರುಚಿ, ಪಿತ್ತದ ವಾಂತಿ, ನಾಲಿಗೆಯ ಬುಡದಲ್ಲಿ ಹಸರು ಬೂದಿ ಬಣ್ಣದ ಅಗ್ರ ವಿದ್ದರೆ ವಾತಜನ್ಯ ಶೂಲೆ ಇದ್ದರೆ ಬಲಭಾಗದಲ್ಲಿ ನೋವು ಇರುವದು. ೧× ಅಥವಾ ೨× ಶಕ್ತಿಯನ್ನು ತೆಗೆದುಕೊಳ್ಳುವದು. ಮುದ್ರಣಾಲಯ ದಲ್ಲಿ ಮೊಳೆ ಜೋಡಿಸುವವರು ಮೇಲಿಂದ ಮೇಲೆ ಮೊಳೆಗಳನ್ನು ಬಾಯಿ ಯಲ್ಲಿ ಇಟ್ಟುಕೊಂಡಿದ್ದರಿಂದ ಉಂಟಾಗುವ ಹೊಟ್ಟೆಶೂಲೆ, (Lead colic) ಬಲ ಭಾಗದ ಗೆಜ್ಜೆಯಲ್ಲಿ ವೇದನೆ ಹುಟ್ಟಿ ಎಲ್ಲ ಉದರಭಾಗದಲ್ಲಿ ಹಬ್ಬುವದು. ಇದು ನೇಟ್ರಂ ಸಲ್ಫದ ಭಾವನೆ ಎಂಬದು ಧ್ಯಾನದಲ್ಲಿಡತಕ್ಕದ್ದು.

**ಕಾಲೀ. ಸ:—** ಹೊಟ್ಟೆಯಲ್ಲಿ ತಣ್ಣಗಾಗುವದು. ಅಪಾನ ವಾಯುವು ಗಂಧಕದಂತೆ ದುರ್ಗಂಧವಿರುವದು. ಮ್ಯಾ. ಫಾ. ದ ನಂತರ ಇದರ ಉಪಯೋಗವಾಗುವದು.

**ಕಾಲೀ. ಫಾ:—** ಶೌಚಕ್ಕೆ ಹೋಗಬೇಕೆಂದು ಅನಸುವದು ಆದರೆ ಆಗುವದಿಲ್ಲ. ಹೊಟ್ಟೆಯಲ್ಲಿ ಕಾಲು, ಮತ್ತು ಕಾಲುಗಳ ನಡುವೆ ತಲೆ ಹಾಕಿಕೊಂಡು ಕೂತಲ್ಲಿ ಸಮಾಧಾನವಾಗುವದು. ಹೊಟ್ಟೆಯಲ್ಲಿ ವಾಯು ತುಂಬಿಕೊಂಡಿರುವದು. ವಾತದಿಂದ ಹೊಟ್ಟೆ ಉಬ್ಬಿದ್ದಿರುವದು.

**ಉಪಯುಕ್ತ ಸೂಚನೆ:—** ತಡೆಯುದಂಥ ಅನ್ನ, ವಾತುಲ ಪದಾರ್ಥ, ಹಂಣುಹಂಪಲ, ಪಲ್ಲೆಕಾಯಿಗಳನ್ನು ವರ್ಜಿಸಬೇಕು. ಶೀತದಿಂದ ಕಾಲುಗಳನ್ನು ಕಾದುಕೊಂಡಲ್ಲಿ ಹಾಗೂ ಹೊಟ್ಟೆಯ ಸುತ್ತುಮುತ್ತಲು ಉಂಣೆಯ ಬಟ್ಟೆಯನ್ನು ಸುತ್ತಿಕೊಂಡಿದ್ದಲ್ಲಿ ಮೇಲಿಂದ ಮೇಲೆ ಆಗುವ ಹೊಟ್ಟೆಶೂಲೆ ಕಡಿಮೆಯಾಗುವದು. ರೋಗಿಗೆ ಬಿಸಿನೀರು ಕುಡಿಯಲಿಕ್ಕೆ ಕೊಡಬೇಕು. ಬಿಸಿನೀರಿನ ಬಸ್ತಿಯನ್ನು ಕೊಟ್ಟಲ್ಲಿ ಬಹಳ ಉಪಯೋಗ ವಾಗುವದು. ಅಪಚನದಿಂದ ಹೊಟ್ಟೆ ಶೂಲಿ ಇದ್ದಂತೆ ಅನಿಸಿದರೆ ಬಿಸಿಬಿಸಿ ಕಾಫಿ ( ಹಾಲು, ಸಕ್ಕರೆ ಹಾಕದೆ ) ಕುಡಿಯಲು ಕೊಡಬೇಕು. ಒಂದು ಪಂಚಪಾತ್ರಿಯ ತುಂಬ ಬಿಸಿನೀರಿನಲ್ಲಿ ೩೦–೪೦ ಗ್ರೇನಿನಷ್ಟು ಮ್ಯಾ. ಫಾ. ಹಾಕಿ ಆ ನೀರನ್ನು ಒಂದೆರಡು ಚಮಚೆದ ಪ್ರಮಾಣದಷ್ಟು ೫–೧೦ ಮಿನಿಟಿ ಗೊಮ್ಮೆಯಂತೆ ಸಮಾಧಾನವಾಗುವ ವರೆಗೆ ಕೊಡುತ್ತಿರಬೇಕು.

---

# ಪ್ರಸೂತಿಜ್ವರ

**Puerperal Fever.** **ಪ್ಯೂಅರಪೇರಲ್ ಫೀವರ.**

ಪ್ರಸೂತಿ ಜ್ವರವು ಸಹ ಒಂದು ತರಹದ ಪೂಯದುಷ್ಟ ರಕ್ತ ಜ್ವರವೇ ಸರಿ. ಪ್ರಸೂತವಾಗುವ ಕಾಲಕ್ಕೆ ಗರ್ಭೇಂದ್ರಿಯದಲ್ಲಿ ಗಾಯವಾಗಿ ಅಲ್ಲಿ ಹುಟ್ಟಿದ ಕೀವು ಆಗಲಿ ಕೊಳತ ಪದಾರ್ಥವಾಗಲಿ ಶರೀರದಲ್ಲಿ ಶೋಷಣ ವಾದ ಮೂಲಕ ರಕ್ತವು ದೂಷಿತ (ಕೆಟ್ಟದ್ದರಿಂದ) ವಾದ್ದರಿಂದ ಈ ಜ್ವರ ಉತ್ಪನ್ನವಾಗುವದು. ಸಾಧಾರಣತಃ ಹಡೆದ ೨।೩ ನೇ ದಿವಸ ಈ ಜ್ವರವು ಬರಲಾರಂಭವಾಗುವದು. ಅತಿಶಯ ಭರದಿಂದ ಥಂಡಿಯಾಗಿ ಜ್ವರ ತುಂಬುವದು. ಒಮ್ಮೊಮ್ಮೆ ಮೈಮುಳ್ಳು ಹಿಡಿಯುವದು. ಥಂಡಿ ಯಾಗುವದು ತಿಳಿಯುವದೂ ಇಲ್ಲ. ನಾಡಿಯು ಬಹು ತೀವ್ರ ಹಾಗೂ ಮೃದು ಇದ್ದು ೧೨೫ ರಿಂದ ೧೬೦ ವರೆಗೆ ಬಡಿತಗಳು ಇರುವವು. ಜ್ವರದ ಮಾನದಿಂದ ನಾಡಿಯು ಬಹು ತೀವ್ರ ಹಾರುವದು. ಪೂಯದುಷ್ಟ ರಕ್ತ ಜನ್ಯ ಜ್ವರದಲ್ಲಿ ಬಹಳವಾಗಿ ಈ ಲಕ್ಷಣವು ಇರುವದು. ಒಮ್ಮೊಮ್ಮೆ ಜ್ವರಕ್ಕೆ

ಸರಿಯಾಗಿ ಹೊಟ್ಟೆಯಲ್ಲಿ ನೋವು ಇರುವದಿಲ್ಲ. ಹೊಟ್ಟೆ ಉಬ್ಬುವದೂ ಇಲ್ಲ. ಎಷ್ಟೋ ಸಲ ಹೊಟ್ಟೆಯಲ್ಲಿ ತೀಕ್ಷ್ಣ ವೇದನೆ ಇದ್ದೂ ಹೊಟ್ಟೆಯು ಉಬ್ಬಿದ್ದು ಇರುವದು. ಕೈ ಸ್ಪರ್ಶವೂ ಸಹನವಾಗುವದಿಲ್ಲ. ವಾಂತಿಯೂ ಮಳಮಳಿಯೂ ಇರುವದು. ಬೆವರು ಬಹಳ ಬಿಡುವದು, ಈ ರೋಗದ ಲಕ್ಷಣವೇ ಸರಿ. ಬೆವರಿಗೂ ಶ್ವಾಸೋಚ್ಛ್ವಾಸಕ್ಕೂ ಮಿಠಾಯಿಯಂತೆ ಸಿಹಿ ವಾಸನೆ ಇರುವದು. ಪ್ರಸೂತಿ ಸ್ರಾವವೂ, ಹಾಲೂ ನಿಂತು ಹೋಗುತ್ತದೆ. ಜ್ವರವು ಬಹಳಿದ್ದರೂ ಮೂತ್ರವು ಕಡಿಮೆಯಾಗುವದಿಲ್ಲ, ನೀರಡಿಕೆ ಬಹಳಿರುವದು, ರೋಗಿಯು ನೀರು ಬಹಳ ಕುಡಿಯುವನು. ಮುಖಚರ್ಯೆಯು ಸಪ್ಪಗೆ, ಚಿಂತೆಯುಕ್ತ ಹಾಗೂ ನಿಃಶಕ್ತ ಕಾಣಿಸುವದು. ನಾಲಿಗೆಯ ಮೇಲೆ ಅಗ್ರವಿರುವದು. ಮುಂದೆ ಮುಂದೆ ಬಡಬಡಿಸುವದೂ ಭ್ರಮವೂ– ಈ ಭಾವನೆಗಳು– ಕಂಡುಬರುವವು. ರೇಚವೂ ಆಗುವದು. ಶ್ವಾಸೋಚ್ಛ್ವಾಸವು ತೀವ್ರವಿದ್ದು ಬಹು ಕಷ್ಟದಿಂದ ಸಾಗುವದು. ಹೊಟ್ಟೆಯು ಉಬ್ಬಿದ್ದು ಶ್ವಾಸವು ತೀವ್ರವೂ ಮೇಲಿಂದ ಮೇಲೆ ನಡೆದದ್ದೂ ಇದ್ದರೆ ಅದು ದುಷ್ಟ ಚಿನ್ಹವೆಂದು ತಿಳಿಯಬೇಕು. ರೋಗದ ಸ್ವರೂಪವು ಭಯಂಕರವಿದ್ದು ಚಿಂತಾಜನಕವಿರುವದು. ಅಶಕ್ತ ಸ್ತ್ರೀಯರಲ್ಲಂತೂ ಹೃದಯದ ಶಕ್ತಿಪಾತವಾಗಿ ಸಾಯುವ ಹೆದರಿಕೆ ಬಹಳಿರುವದು.

**ಫೇ. ಫಾ:—** ಜ್ವರ, ಉಷ್ಣತೆ, ವೇದನೆ, ಗರ್ಭಾಶಯ ಭಾಗದಲ್ಲಿ ಸ್ಪರ್ಶಾಸಹಿಷ್ಣುತೆ, ನಾಡಿಯು ತೀವ್ರವಾಗಿ ಹೊಡೆಯೋಣ, ನೀರಡಿಕೆ ಮುಂತಾದ ದಾಹವುಳ್ಳಂಥ ಭಾವನೆಗಳು ಇದ್ದರೆ. ಪೂಯದಾಷ್ಟ ರಕ್ತಜನ್ಯ ಜ್ವರದಲ್ಲಿ ಇದು ಪ್ರಮುಖ ಔಷಧವು. ಕಾ. ಫಾ. ಮತ್ತು ಇದನ್ನು ಸರ್ತಿಮೇಲೆ ಕೊಡಬೇಕು. ಪ್ರಸೂತಿಯಾದನಂತರ ದಿನಾಲು ಫೇ. ಫಾ. ಕೊಡುತ್ತಹೋದಲ್ಲಿ ಬಹುಶಃ ಯಾವದೂ ಜ್ವರ ಮುಂತಾದ ಬೇನೆಗಳ ತಾಪವಾಗಲಾರದು.

**ಕಾ. ಮೂ:—** ಪ್ರಮುಖ ಔಷಧವು. ರೋಗದ ಆರಂಭದಿಂದಲೇ ಇದನ್ನು ಕೊಡುವದು. ಪ್ರಸೂತಿಸ್ರಾವ ನಿಂತ ನಂತರ ಇಲ್ಲವೆ ಹಾಲು

ಬರುವದು ನಿಂತಿದ್ದರೆ ಫೇರಂ. ಫಾ. ದ ನಂತರ ಇಲ್ಲವೆ ಪ್ರಾರಂಭದಿಂದ ಅದರ ಜತೆಗೆ ಇದನ್ನು ಕೊಡಬೇಕು. ನಾಲಿಗೆಯು ಬೆಳ್ಳಗಿದ್ದು ಹಾಗೂ ಹೊಟ್ಟೆ ಉಬ್ಬಿದ್ದರೆ.

**ಕಾ. ಫಾ:—** ಪೂಯ ದುಷ್ಟರಕ್ತರಜನ್ಯ ಜ್ವರದ ಮೇಲಿನ ಪ್ರಮುಖ ಔಷಧವಿದು. ಭ್ರಮು, ಭರದವಾತ ಮತ್ತು ಇತರ ವಾತಯುಕ್ತ ಭಾಪನೆ ಇದ್ದರೆ, ಸ್ರಾವಕ್ಕೆ ದುರ್ಗಂಧಿ ಇದ್ದರೆ, ಬಾಯಿಗೆ ಹೊಲಸು ನಾತವಿದ್ದರೆ, ನಾಲಿಗೆಯ ಮೇಲೆ ಸಾಸಿವಿ ಬಣ್ಣದ ಅಗ್ರವಿದ್ದರೆ, ರಕ್ತವು ದೂಷಿತವಾಗಿ ವಿಷದಂತಾಗಿದ್ದರೆ.

**ಕಾಲಿ. ಸ:—** ಬೆವರು ತೀರ ಬರದಿದ್ದು ಎಲ್ಲ ಶರೀರವು ದೂಷಿತ ರಕ್ತದಿಂದ ದೂಷಿತವಾಗಿದ್ದರೆ, ಇದು ಬಹಳೇ ಗುಣಕರವು.

**ನೇಟ್ರಂ. ಮೂ:—** ಜಾಡ್ಯ, ಬಾಯಿಯಲ್ಲಿ ಬಡಬಡಿಸುತ್ತಿದ್ದು ನಾಲಿಗೆಯು ಕರ್ರಗೆ, ಸುಟ್ಟಂತೆ ಇದ್ದರೆ ಹಾಗೂ ಸೆಟೆಬೇನೆ ಮುಂತಾದ ಭಾವನೆಗಳ ಮೇಲೆ ಇತರ ಔಷಧದ ಸಂಗಡ ಇದನ್ನು ನಡುನಡುವೆ ಕೊಡತಕ್ಕದ್ದು.

**ಉಪಯುಕ್ತ ಸೂಚನೆ:—** ಔಷಧವನ್ನು ಆರಿಸುವದರಲ್ಲಿ ನಿಶ್ಚಯವಾಗದೇ ಇದ್ದಲ್ಲಿ ಫೇ. ಫಾ. ಕಾ. ಮೂ. ಮತ್ತು ಕಾ. ಫಾ. ಇವುಗಳನ್ನು ಸರ್ತಿಮೇಲೆ ಕೊಡುತ್ತಿರಬೇಕು. ಗರ್ಭಮಾರ್ಗದಲ್ಲಿ ಹೊಲಸು ನಾತವಿದ್ದಲ್ಲಿ ಕಾ. ಫಾ. ೨ × ಶಕ್ತಿಯ ನೀರಿನಿಂದ ತೊಳೆಯು ಬೇಕು. ಅನ್ನವನ್ನು ಸೇವಿಸಲೇಬಾರದು. ಕೇವಲ ಸಾವಿಯ (ಸಾಳಿ) ಅರಳಿನ ನೀರನ್ನಷ್ಟೇ ಕೊಡಬೇಕು. ನೀರಡಿಕೆಯ ನಲುವಾಗಿ ನೀರು ಮಾತ್ರ ಮೇಲಿಂದಮೇಲೆ ಕೊಡುತ್ತಿರಬೇಕು. ಜ್ವರ ನಿಲ್ಲುವ ವರೆಗೆ ತಾಯಿಯ ಹಾಲು ತಡೆಯಬೇಕು. ಫೇ. ಫಾ. ೩ × ಶಕ್ತಿಯ ನೀರಿನಿಂದ ಗರ್ಭಾಶಯವನ್ನು ತೊಳೆಯಬೇಕು.

ಸುಖಪ್ರಸೂತಿಯಾದರೆ ಪ್ರಸೂತಿಜ್ವರದ ಹೆದರಿಕೆ ಇರುವದಿಲ್ಲ. ಪ್ರಸೂತಿಯ ಕಾಲದಲ್ಲಿ ಕೂಸು ಹೊರಗೆ ಬರುವಾಗ್ಗೆ ಏನಾದರೂ ತೊಂದರೆ ಉಂಟಾಗಿ ಇಲ್ಲವೆ ಸೂಲಗಿತ್ತಿಯ ನಿಷ್ಕಾಳಜಿಯ ಮೂಲಕ

ಗರ್ಭಾಶಯದಲ್ಲಿ ಗಾಯವಾಗಿ ಈ ಜ್ವರ ಬರುವ ಸಂಭವವಿರುವದು. ಸುಖಪ್ರಸೂತಿಯ ಸಲುವಾಗಿ ಗರ್ಭಿಣಿ ಸ್ತ್ರೀಯರಿಗೆ ಕಾ. ಫಾ. ಇಲ್ಲವೆ ನಮ್ಮ "ಗರ್ಭಿಣಿ ಮಿತ್ರ"ವೆಂಬ ಔಷಧವನ್ನು ಪ್ರಸೂತಿಯ ಪೂರ್ವದಲ್ಲಿ ಬಹು ದಿವಸ ಕೊಡುತ್ತಿರಬೇಕು. ಅದರಿಂದ ಸುಖ ಪ್ರಸೂತಿಗೆ ಸಹಾಯವಾಗುವದು. ಒಳ್ಳೆ ಜಾಣ ಅನುಭವವುಳ್ಳ ಸೂಲಗಿತ್ತಿಯನ್ನು ಕರೆಯಬೇಕು. ಕೂಸು ಹೊರಗೆ ಬರುವಾಗ್ಗೆ ಏನಾದರೂ ದುರ್ಲಕ್ಷ್ಯವಾದಲ್ಲಿ ಗರ್ಭಾಶಯದಲ್ಲಿ ಗಾಯವಾಗಿ ಜ್ವರ ಬರುವ ಸಂಭವವಿರುತ್ತದೆ. ಪ್ರಸೂತಿಯಾದಕೂಡಲೆ ಶಕ್ಯವಿದ್ದಷ್ಟು ತೀವ್ರವಾಗಿ ಫೇ. ಫಾ. ೬ × ವನ್ನು ೧-೨ ಸಾರೆ ಅವಶ್ಯ ಕೊಡಬೇಕು. ಮತ್ತು ಫೇ. ಫಾ. (೩×) ದಿಂದ ಗರ್ಭಾಶಯವನ್ನು ತೊಳೆಯಬೇಕು. ಕಾ. ಫಾ; ಕಲ್ಕೆ. ಫ್ಲೊ; ಕಲ್ಕೆ. ಫಾ; ಮ್ಯಾ. ಫಾ. ಇವುಗಳನ್ನು ಒಂದರ ನಂತರ ಮತ್ತೊಂದು ಹೀಗೆ ಕೊಡಬೇಕು. ಪ್ರತಿಯೊಂದು ಔಷಧವನ್ನು ದಿನಾಲು ೨ ಸಲವಾದರೂ ಕೊಡುವಂತೆ ವ್ಯವಸ್ಥೆ ಇಡಬೇಕು. ಇದರಿಂದ ಪ್ರಸೂತಿಜ್ವರವಾಗಲಿ ಇತರ ಯಾವದೇ ಕಷ್ಟವಾಗಲಿ ಆಗಲಾರದು. "ಗರ್ಭಿಣಿ ಅವಸ್ಥೆ" ಮತ್ತು "ಪ್ರಸೂತಿ" ಈ ವಿವರಗಳನ್ನು ನೋಡಿರಿ.

---

## ಪ್ಲೀಹೆಯ ರೋಗಗಳು

**Diseases of the Spleen.** ಡಿಸೀಜಿಸ್ ಆಫ್ ದಿ ಸ್ಪ್ಲೀನ್.

ಶರೀರದಲ್ಲಿ ಪ್ಲೀಹೇಂದ್ರಿಯದ ಕಾರ್ಯವೇನೆಂಬದು ಶಾಸ್ತ್ರಜ್ಞರಿಗೆ ಇನ್ನೂ ನಿಶ್ಚಿತವಾಗಿ ತಿಳಿಯಬಂದಿಲ್ಲ. ಆದರೂ ರಕ್ತದ ಘಟಕಗಳಿರುವಂಥ ರಕ್ತ (ಕೆಂಪು) ಕಣಗಳನ್ನು ಕಡಿಮೆಮಾಡಿ ಶ್ವೇತಕಣದ ಸಂಖ್ಯೆಯನ್ನು ಬೆಳೆಯಿಸುವ ಕಾರ್ಯಕ್ಕೂ ಪ್ಲೀಹೆಗೂ ನಿಕಟಸಂಬಂಧವಿರುವದೆಂಬದು ಮಾತ್ರ ಸ್ಪಷ್ಟವಾಗಿ ಕಂಡುಬರುವದು. ಪ್ಲೀಹೆಯ ಎಲ್ಲ ರೋಗಗಳಲ್ಲಿ ಪ್ಲೀಹೆಯು ಬೆಳದಿರುವ ಲಕ್ಷಣವು ಮಾತ್ರ ಕಂಡುಬರುತ್ತದೆ. ಪ್ಲೀಹೆಯ ಸ್ಥಾನವು ಎಡಗಡೆಯ ಪಕ್ಕೆಲಬುಗಳ ಒಳಭಾಗಕ್ಕೆ ಇರುವದು.

ಪ್ಲೀಹೆಯು ಬೆಳೆದರೆ ಪಕ್ಕೆಲಬುಗಳ ಕೆಳಭಾಗದ ವರೆಗೆ ಹಬ್ಬುವದು. ಒಮ್ಮೊಮ್ಮೆ ಅದು ಹೊಟ್ಟೆಯಲ್ಲಿ ಹಬ್ಬುವದು. ಉದರಪ್ರಾಂತದ ಎಡ ಭಾಗದಲ್ಲಿ ಕೈಯಿಂದ ಒತ್ತಿ ನೋಡಿದಲ್ಲಿ ಬೆಳೆದಿದ್ದರೆ ಅದು ಸಹಜವೇ ಕೈಗೆಹತ್ತುವದು. ಪ್ಲೀಹೆಯು ಬಹಳವಾಗಿ ಬೆಳೆದಿದ್ದರೆ ಹೊಟ್ಟೆ ಸಹ ದೊಡ್ಡದಾಗಿ ಕಾಣುವದು. ಶ್ವಾಸ ಎಳಕೊಳ್ಳುವದು ಕಷ್ಟಮಯವಾಗುವದು. ಜಠರ ಹಾಗೂ ಕರಳುಗಳಿಗೆ ಸಂಬಂಧಿಸಿದ ರೋಗಗಳು ಸಹ ಕಂಡುಬರುವವು. ಪ್ಲೀಹ ಪ್ರಾಂತದಲ್ಲಿ ನೋವೂ ಒಮ್ಮೊಮ್ಮೆ ಇರುವದು. ಜ್ವರವೂ ಇರುವದು. ವಾಂತಿ ರೇಚ ಮುಂತಾದ ಲಕ್ಷಣಗಳೂ ಇರುವವು. ರಕ್ತದಲ್ಲಿಯ ರಕ್ತ (ಕೆಂಪು) ಕಣಗಳ ಸಂಖ್ಯೆಯು ಕಡಿಮೆಯಾಗಿ ಶ್ವೇತಕಣಗಳ ಸಂಖ್ಯೆಯು ಬೆಳೆದದ್ದರಿಂದ ರೋಗಿಯು ಬೆಳ್ಳಗೆ ಕಾಣುತ್ತಾನೆ.

ಶೀತಜ್ವರ, ಸನ್ನಿಪಾತಜ್ವರ, ನ್ಯುಮೋನಿಯಾ, ಈ ಶೀಘ್ರಬೆಳೆಯುವ ರೋಗಗಳಲ್ಲಿಯೂ ಕ್ಷಯ, ಉಪದಂಶ, ಯಕೃತ ಸಂಕೋಚ, ಪಾಂಡು ರೋಗ ಮುಂತಾದ ಹಳೇ ರೋಗಗಳಲ್ಲಿಯೂ, ಪ್ರಾಕೃತಿಕರೋಗಗಳಲ್ಲಿಯೂ ಪ್ಲೀಹೆಯು ಬೆಳೆದದ್ದು ಇರುವದು. ಆನುವಂಶಿಕ ಉಪದಂಶ ಅಥವಾ ಆನುವಂಶಿಕ ಕ್ಷಯವಿದ್ದ ಹುಡುಗರಲ್ಲಿ ಬಹುತರವಾಗಿ ಪ್ಲೀಹೆಯೂ ಯಕೃತವೂ ಬೆಳೆದದ್ದು ಇರುವವು. ಜವಳು ಸ್ಥಳಗಗಳಲ್ಲಿ ವಾಸಮಾಡುವ ಜನರ ಪ್ಲೀಹೆಯು ಬೆಳೆಯುವದುಂಟು. ಎಷ್ಟೋ ವರ್ಷ ಪ್ಲೀಹೆಯು ಬೆಳೆದಿದ್ದರೂ ಸಹ ರೋಗಿಯು ತನ್ನ ವ್ಯವಸಾಯವನ್ನು ನಿತ್ಯದಂತೆ ಮಾಡುತ್ತಿರುವನು. ಆದರೂ ಇಂಥ ರೋಗಿಯು ಕಳೆಗುಂದಿದವನೂ ಅಶಕ್ತನೂ ಇರುವನು. ಅವನ ಮೂಗಿನೊಳಗಿಂದ ರಕ್ತಬೀಳುವದು. ಮೈಮೇಲೆ ಬಾವು ಇರುವದು ಮತ್ತು ಅವನಿಗೆ ಜಲೋದರ ಸಹ ಆಗುವ ಸಂಭವವಿರುವದು.

**ಉಪಯುಕ್ತ ಸೂಚನೆ:—** ಪ್ಲೀಹೆಯು ಬೆಳೆದ ರೋಗಗಳಲ್ಲಿ ಆ ರೋಗಕ್ಕೆ ಅನುಸರಿಸಿ ಚಿಕಿತ್ಸೆ ನಿಶ್ಚಯಿಸಬೇಕು. ದಾಹಯುಕ್ತ ಭಾವನೆ ಗಳಿದ್ದರೆ ಫೇರಂ ಫಾ. ಮತ್ತು ಕಾಲಿ ಮೂ. ಇವುಗಳನ್ನು ಕೊಡಬೇಕು.

ನಡುನಡುವೆ ಕಲ್ಕೆ. ಫಾ. ವನ್ನು ಸಹಾಯಕರವೆಂದು ಕೊಡಬೇಕು. ಪ್ಲೀಹೆಯ ಭಾಗದಲ್ಲಿ ವೇದನೆ ಕಂಡುಬಂದಲ್ಲಿ ನೇ. ಮೂ. ಮತ್ತು ಕಾಲೀ ಫಾ. ಗಳ ಉಪಯೋಗವಾಗುವದು. ಪಾಂಡುರೋಗದಲ್ಲಿ ಪ್ಲೀಹೆಯು ಬೆಳೆದದ್ದು ಇದ್ದರೆ, ಕಲ್ಕೆ. ಫಾ, ಫೇರಂ. ಫಾ, ನೇಟ್ರಂ ಮೂ. ಈ ಔಷಧ ಗಳು ಗುಣಕೊಡುವವು. ಇತರ ಭಾವನೆಗಳು ಇದ್ದಲ್ಲಿ ಅವುಗಳಿಗೆ ಅನುಸರಿಸಿ ಇತರ ಔಷಧಗಳನ್ನು ಈ ಮುಖ್ಯ ಔಷಧಗಳ ಜತೆಗೆ ಕೊಡಬೇಕು. ಬೈಲು, ಹೊರಗಿನ ಹವೆ, ಪಚನಕ್ಕೆ ಸುಲಭವಿದ್ದ ಅನ್ನ, ಪೌಷ್ಟಿಕ ಅನ್ನ, ಹಾಗೂ ವಿಶ್ರಾಂತಿ ಇವು ರೋಗಿಗೆ ಲಭಿಸುವಂತೆ ವ್ಯವಸ್ಥೆ ಇಡಬೇಕು.

---

## ಪ್ರಾತರ್ವಾಂತಿ

**Morning Sickness.** **ಮಾರ್ನಿಂಗ ಸಿಕ್‌ನೆಸ್.**

ಗರ್ಭಿಣಿ ಅವಸ್ಥೆಯಲ್ಲಿ ಮೊದಲಿನ ೧।೨ ತಿಂಗಳಗಳಲ್ಲಿ ಸ್ತ್ರೀಯರಿಗೆ ವಾಂತಿಯೂ ಮಳಮಳಿಯೂ ಆಗುತ್ತಿರುವದು. ಒಮ್ಮೊಮ್ಮೆ ೪।೫ ತಿಂಗಳ ಪರ್ಯಂತರ ಸಹ ಈ ಭಾವನೆಗಳು ಇರುವವು. ಮುಟ್ಟು ಆಗುವದು ನಿಂತು ಮಳಮಳಿಯೂ ವಾಂತಿಯೂ ಆಗಲಾರಂಭವಾದರೆ ಗರ್ಭಧಾರಣ ವಾಗಿದೆಂದು ತಿಳಿಯಲು ಅಡ್ಡಿ ಇಲ್ಲ. ಸಾಧಾರಣವಾಗಿ ನಿದ್ರೆಯಿಂದ ಎದ್ದ ನಂತರ ಸ್ವಲ್ಪು ವೇಳೆ ಈ ಭಾವನೆ ಕಂಡುಬರುವದು. ಒಮ್ಮೊಮ್ಮೆ ಈ ಭಾವನೆ ಹಗಲೂ ಇತರ ವೇಳೆಯಲ್ಲಿಯೂ ಇರುವವು. ಜಿಗಟು ದಾರದಂತೆ ಎಳೆ ಇದ್ದ ವಾಂತಿ ಇರುವದು. ವಾಂತಿಯು ನಿಂತು ನಿಂತು ಭರದಿಂದ ಬರುವದು. ಹೊಟ್ಟೆ ನೋಯುವದು. ಕೆಲ ಹೆಂಗಸರಿಗೆ ಏನು ತಿಂದರೂ ತಾತ್ಕಾಲ ವಾಂತಿಯಾಗಿ ಬಿದ್ದುಹೋಗುವದು. ಊಟದ ನೆನಪು ಆಗಲಿ ಅನ್ನದ ವಾಸನೆಯಾಗಲಿ ಬಂದ ಕೂಡಲೆ ತಾತ್ಕಾಲ ವಾಂತಿಯಾಗು ವದು. ವಾಂತಿಯಲ್ಲಿ ರಕ್ತ ಸಹ ಬೀಳುವದು. ಜಠರ ಸ್ಥಳವು ನಾಜೂಕ ವಿದ್ದು ಅಲ್ಲಿ ಒತ್ತಿದರೆ ನೋಯುವದು. ಅದರಿಂದ ರೋಗಿಗೆ ಅಶಕ್ತತೆ ಯುಂಟಾಗುವದು.

**ನೇ. ಮೂ:—** ಬಾಯಿಗೆ ಸ್ವಚ್ಛ ಜಿಗಟು ನೀರು ಬಿಡುವದು. ಬುರುಗಿನಂಥ ನೀರು ವಾಂತಿಯು. ಅನ್ನದ ಅಪೇಕ್ಷೆ ಬಹಳ, ಅನ್ನ ಹೋಗುವದಿಲ್ಲ.

**ನೇಟ್ರಂ. ಫಾ:—** ಮುಂಜಾನೆ ವಾಂತಿಯಾಗುವದು. ಹುಳಿ ವಾಂತಿಯಾಗುವದು.

**ಕಾ. ಮೂ:—** ನಾಲಿಗೆ ಬಿಳಿದು. ಮುಂಜಾನೆ ಬಿಳೀ ಜಿಗಟು ಕಫ ವಾಂತಿಯಾಗಿ ಬೀಳುವದು.

**ಫೇ. ಫಾ:—** ಅನ್ನವೇ ವಾಂತಿಯಾಗಿ ಬೀಳುವದು.

**ನೇಟ್ರಂ. ಸ:—** ಪಿತ್ತದ ವಾಂತಿಯು. ಬಾಯಿ ಕಹಿ. "ವಾಂತಿ" ಎಂಬ ವಿವರ ನೋಡಿರಿ.

**ಉಪಯುಕ್ತ ಸೂಚನೆ:—** ಪಚನವಾಗುವಂಥ ಹಣ್ಣು ಹಂಪಲ, ಹಾಲು ಮುಂತಾದ ಹಗುರ ಅನ್ನ ತಿನ್ನಲು ಕೊಡಬೇಕು. ಯೋಜಿಸಿದ ಔಷಧವನ್ನು ಬಿಟ್ಟುಬಿಡದೆ ಬಹುದಿವಸ ಕೊಡಬೇಕು.

---

# ಪ್ಲೇಗ ಅಥವಾ ಗ್ರಂಥಿ ಸನ್ನಿಪಾತ

**Plague.** **ಪ್ಲೇಗ.**

ಇದೊಂದು ಸಾಂಸರ್ಗಿಕ ರೋಗವಿರುವದು. ಈ ರೋಗದಲ್ಲಿ ಗೆಜ್ಜೆ ಬಗಲು ಕುತ್ತಿಗೆಗಳಲ್ಲಿಯು ಗ್ರಂಥಿಗಳು (ಗಂಟುಗಳು) ಬಾಯುತ್ತವೆ. ಬಹಳೇ ಭರದ ಜ್ವರವಿದ್ದು ಸಂನಿಪಾತದಲ್ಲಿ ಆಗುವ ಇತರ ಭಾವನೆಗಳು ಸಹ ಇರುವವು. ಥಂಡಿ ಬಹಳ ಬಂದು ಜ್ವರವು ತುಂಬುವದು. ನಾಡಿಯೂ ಶ್ವಾಸೋಚ್ಛ್ವಾಸವೂ ವೇಗದಿಂದ ನಡೆಯುವವು. ಮಾಂದ್ಯವೂ ಕಣ್ಣು ಮುಚ್ಚಿ ಹಾಕುವದೂ, ಇರುವವು. ಕಣ್ಣು ಕೆಂಪಾಗಿರುವವು. ತೀವ್ರವೇ ಭ್ರಮವೂ, ವಾತಮೂಲಕ ಬಡಬಡಿಸುವದೂ ಹೆಚ್ಚು ಕಡಿಮೆ ಪ್ರಮಾಣ ದಲ್ಲಾರಂಭವಾಗುವದು. ತುಟಿಯ ಮೇಲೆ ಜ್ವರವು ಕಾಣಹತ್ತುವದು. ಈ ಸ್ಥಿತಿಯು ಹೆಚ್ಚಾಗುತ್ತ ಹೋಗಿ ಹೃದಯವೂ ನಾಡಿಯೂ ಅಶಕ್ತ

ವಾಗುವವು. ತುಟಿ ಕರ್ರಗೂ ನೀಲಿವರ್ಣದ್ದೂ ಆಗುವದು. ಕೊಂಕಳದಲ್ಲಿಯೂ ಗೆಜ್ಜೆಯಲ್ಲಿಯೂ ಸೋಯುವದು. ಗಂಟು ಏಳುವದು. ಈ ಗಂಟು ಒಮ್ಮೊಮ್ಮೆ ಜ್ವರದ ನಂತರವೂ ಒಮ್ಮೊಮ್ಮೆ ಜ್ವರದ ಪೂರ್ವದಲ್ಲಿಯೂ ಏಳುವದು. ಜ್ವರ ಬಂದ ನಂತರ ಗಂಟು ಎದ್ದಲ್ಲಿ ಜ್ವರ ಕಡಿಮೆಯಾಗುವದು. ಗಂಟಿನಲ್ಲಿ ಕೀವು ಆಗಹತ್ತಿದರೆ ರೋಗಿಯು ನೆಟ್ಟಗಾಗುವ ಸಂಭವ ಹೆಚ್ಚು. ಉಗ್ರವಾಸನೆಯುಳ್ಳ ಬೆವರು ಬಿಡುವದು. ನೀರಡಿಕೆ, ಅಸ್ವಸ್ಥತೆ, ನಾಲಿಗೆಯ ಮೇಲೆ ಅಗ್ರ, ಶಕ್ತಿಪಾತ, ಮುಂತಾದ ಭಾವನೆಗಳು ಇರುವವು. ಸಾಧಾರಣವಾಗಿ ರೋಗಿಯು ೪।೫ ದಿವಸ ಉಳಿದರೆ, ನೆಟ್ಟಗಾಗುವ ಸಂಭವ ವಿರುವದು. ೬ ರಿಂದ ೧೦ ದಿವಸದ ಒಳಗಾಗಿ ರೋಗಿಗೆ ನೆಟ್ಟಗಾಗಲಾರಂಭವಾಗುವದು. ಗಂಟಿನಲ್ಲಿ ಕೀವು ಆಗಿ ಅದು ಒಡೆದು ಗಾಯವಾಗುವದು. ಅಶಕ್ತತೆಯ ಮೂಲಕ ಗಾಯವು ತೀವ್ರವಾಗಿ ಮಾಯುವದಿಲ್ಲ. ಪ್ಲೇಗಬೇನೆಯಲ್ಲಿ ನ್ಯುಮೋನಿಯಾ ಆಗುವ ಹೆದರಿಕೆ ಬಹಳ ಇರುವದು. ರೋಗಿಯು ನೆಟ್ಟಗಾದ ನಂತರ ಸಹ ರೋಗದ ಭರದ ಮಾನದಿಂದ ಹೃದಯದ ಅಶಕ್ತತೆ, ಮಾನಸಿಕ ದೋಷ ಮುಂತಾದವು ಸ್ಥಿರವಾಗಿ ಉಳಿದದ್ದು ಕಂಡುಬರುವದು. ಇದು ಬಹಳೇ ಕೆಟ್ಟ ರೋಗವಿದ್ದು ಇತರ ಸಾಂಸರ್ಗಿಕ ರೋಗಕ್ಕಿಂತಲೂ ಈ ರೋಗದಲ್ಲಿ ಬದಕುವ ಸಂಭವ ಕಡಿಮೆ ಇರುವದು.

**ಫೇ. ಫಾ:**— ತಲೆನೋವು, ಜ್ವರ, ನೀರಡಿಕೆ, ಮೈ ನೋವು ಮುಂತಾದವುಗಳ ಮೇಲೆ.

**ಕಾ. ಮೂ:**— ಗಂಟು ಬರುವದು, ಬಾವು ಇವುಗಳ ಮೇಲೆ ಫೇ. ಫಾ ಮತ್ತು ಇದನ್ನು ಸರ್ತಿ ಮೇಲೆ ಕೊಡಬೇಕು.

**ನೇ. ಸ:**— ಪಿತ್ತ ಪ್ರಕೋಪವಿದ್ದಲ್ಲಿ.

**ಕಾ. ಫಾ:**— ತೀರ ಸೋತಂತೆ ಕಾಣುವದು. ಶಕ್ತಿಪಾತವೂ ವಾತವೂ ಇದ್ದಲ್ಲಿ ಮೇಲಿಂದ ಮೇಲೆ ಕೊಡತಕ್ಕದ್ದು.

**ಸಿ:**— ಕೀವು ಆಗಿ ಸೋರಿ ಹೋಗುವದಕ್ಕೋಸ್ಕರ ಇದನ್ನು ಕೊಡುವದು.

**ಕಲ್ಕಿ. ಘಾ:—** ನಡುನಡುವೆ ಕೊಡಬೇಕು. ಮುಖ್ಯವಾಗಿ ಜ್ವರ ನಿಂತ ನಂತರ ಆರೋಗ್ಯ ಸ್ಥಾಪನಾವಸ್ಥೆಯಲ್ಲಿ ಕೊಡತಕ್ಕದ್ದು.

**ಉಪಯುಕ್ತ ಸೂಚನೆ:—** ಈ ಬೇನೆಯಾದವರಿಗೆ ಸಾಬೀಯು ಅರಳಿನ ನೀರಿನ ಹೊರ್ತು ಮತ್ತೇನೂ ಅನ್ನ ಕೊಡಕೂಡದು. ಕುಡಿಯುವುದಕ್ಕೆ ನೀರು ಬೇಕಾದಷ್ಟು ಕೊಡಲು ಅಡ್ಡಿ ಇಲ್ಲ. ಗ್ಲಿಸರೀನದ ಪಿಚಕಾರಿ ಆಗಲಿ ನೀರಿನ ಬಸ್ತಿಯಾಗಲಿ ದಿನಾಲು ಕೊಡಬೇಕು. ಜ್ವರ ಹೆಚ್ಚಾಗಿದ್ದರೆ ಅಥವಾ ವಾತವಾಗಿದ್ದರೆ ಬರ್ಫು ತಲೆಯ ಮೇಲೆ ಇಡಬೇಕು. ರೋಗಿಯ ಎಲ್ಲ ವ್ಯವಹಾರಗಳು ಹಾಸಿಗೆಯ ಮೇಲೇ ಆಗತಕ್ಕದ್ದು. ಏಳಗೊಡಬಾರದು. ಹೃದಯ ಶಕ್ತಿಪಾತದ ಹೆದರಿಕೆ ಬಹಳ ಇದ್ದದರಿಂದ ಜ್ವರ ನಿಂತ ನಂತರ ಸಹ ಎಷ್ಟೋ ದಿವಸ ರೋಗಿಯನ್ನು ಹಾಸಿಗೆಯ ಮೇಲಿಂದ ಏಳಗೊಡಬಾರದು. ಜ್ವರ ನಿಲ್ಲುವ ವರೆಗೆ ಗಂಟಿನ ಬಗ್ಗೆ ಸ್ವತಂತ್ರ ಉಪಚಾರ ಮಾಡುವ ಅವಶ್ಯಕತೆ ಇಲ್ಲ. ಜ್ವರವಿದ್ದ ಕಾಲಕ್ಕೆ ಗಂಟು ಕೊಯ್ಸುವ ಗೋಜಿಗೆ ಹೋಗಬಾರದು. ಜ್ವರ ಇಳಿದ ನಂತರ ಗಂಟಿನ ಹೆದರಿಕೆ ಇರುವದಿಲ್ಲ. ಅದು ಸಾಧಾರಣ ಗಂಟೆಂದು ತಿಳಿದು ಆ ಮೇರೆಗೆ ಉಪಚಾರ ಮಾಡಬೇಕು.

---

# ಮಲರೋಗ

**Epilepsy.** ಎಪಿಲೆಪ್ಸಿ.

ಒಮ್ಮೆಂದೊಮ್ಮೆ ಅರಿವು ತಪ್ಪಿ ಬೀಳುವದೂ ಕೈಕಾಲುಗಳು ಹೆಚ್ಚು ಕಡಿಮೆ ಶೆಟಿಸುವದೂ ಇದ್ದರೆ ಅದು ಅಪಸ್ಮಾರವೆಂಬ ಬೇನೆಯು. ಮೊದಲು ಮೊದಲು ಈ ಶೆಟಿ ರೋಗವು ಅನಿಯಮಿತ ಅವಧಿಯಿಂದ ಬರುವದು. ಬೇನೆಯ ಭರತೀರಿ ಹೋದನಂತರ ಶರೀರದಲ್ಲಿ ಮತ್ತೇನೂ ವಿಕೃತಿಯಾದದ್ದು ಕಂಡುಬರುವದಿಲ್ಲ. ಮುಂದೆ ಮುಂದೆ ಬೇನೆಯು ಮೇಲಿಂದಮೇಲೆ ಭರದಿಂದ ಬರಹತ್ತಿ ಶರೀರದ ಮೇಲೆ ಅದರ ಪರಿಣಾಮವಾಗಿ ಬೇರೆ ಬೇರೆ ವ್ಯತ್ಯಾಸಗಳು ಕಂಡುಬರುವವು. ಈ ಬೇನೆಯ ಎರಡು ವಿಧಗಳು; ಸೌಮ್ಯ ಮತ್ತು

ಉಗ್ರ. ಸೌಮ್ಯ ಬೇನೆಯಲ್ಲಿ ಸ್ವಲ್ಪಕಾಲ ಅರುವು ತಪ್ಪಿದ್ದಿರುವದು. ಸೆಟೆಯುವದು ಇರುವದಿಲ್ಲ. ಶುದ್ಧಿಯು (ಅರುವು) ಸ್ವಲ್ಪೇಕಾಲದಲ್ಲಿ ತಿರಿಗಿ ಬರುವದು. ಎದ್ದು ನಿಂತಿರುವಾಗಲೇ ಅರುವು ತಪ್ಪಿದಂತಾಗುವದು. ಸ್ವಲ್ಪೇಕಾಲದಲ್ಲಿ ಅರುವು ತಿರಗುವದು. ರೋಗದ ಉಗ್ರ ಸ್ವರೂಪದಲ್ಲಿ ಅರುವು ಬಹಳ ವೇಳೆ ತಪ್ಪಿದ್ದಿರುವದು. ಬಾಯಿಯಲ್ಲಿ ಬುರುಗು ಬರುವದು. ಕೈಕಾಲುಗಳು ಸೆಟೆಯುವವು. ಕೈ ಮುಷ್ಟಿಯು ಗಟ್ಟಿಯಾಗಿ ಮುಚ್ಚಿದ್ದು, ಹಲ್ಲು ಗಟಗರಿಸಿದ್ದು ಇರುವವು. ಒಮ್ಮೊಮ್ಮೆ ಶ್ವಾಸೋಚ್ಛ್ವಾಸವೂ ಗಟ್ಟಿಯಾಗಿರುವದು ಹಾಗೂ ಗುರ ಗುರ ಸಪ್ಪಳ ಸಹ ಆಗುವದು. ಅರುವು ಒಮ್ಮೆಂದೊಮ್ಮೆ ತಪ್ಪುತ್ತಿರುವದರಿಂದ ರೋಗಿಯು ಬಿದ್ದು ಆಯದ ಸ್ಥಳಕ್ಕೆ ಪೆಟ್ಟುಹತ್ತಿ ಗಾಯವಾಗುವ ಹೆದರಿಕೆ ಬಹಳಿರುವದು. ಸೆಟೆಯುವದು ಬಹಳ ತರಹದ್ದು ಇರುವದು. ಒಮ್ಮೊಮ್ಮೆ ತಲೆ ನೆಲಕ್ಕೆ ಊರಿ ಬೆನ್ನು ಎತ್ತಿ ಹಿಡಿದು ತಲೆ ಮತ್ತು ಕಾಲು ಇವುಗಳ ಸಹಾಯದಿಂದ ಬೇಕುದ್ದಸ್ಥಿತಿಯಲ್ಲಿಯೇ ರೋಗಿಯೂ ಧನುಷ್ಯಾಕೃತಿಯಾಗಿ ತಿರುಗುತ್ತಿರುವ ಭಾವನೆ ಸಹ ಕಂಡು ಬರುವದು. ಫಿಟ್ಸಬರುವ ಪೂರ್ವದಲ್ಲಿ ಅದು ಬರುವದೆಂದು ಸಾಧಾರಣವಾಗಿ ತಿಳಿಯಬಹುದು. ಇದಕ್ಕೆ ಸೂಚಕ ಚಿನ್ಹವೆನ್ನುವರು. ತನ್ನ ಶರೀರದಲ್ಲಿ ಒಂದು ಸೆಳತ ಅಥವಾ ತೆರೆ ಬಂದು ಹೋದಂತೆ ಆಗೋಣ, ಸರ್ವಾಂಗ ಕಂಪ ಬಿಡೋಣ, ಸ್ನಾಯುಗಳು ಸ್ಫುರಣ ಹೊಂದೋಣ, ಮನಸ್ಸಿನಲ್ಲಿ ಚಮತ್ಕಾರ ಕಲ್ಪನೆ ಬರೋಣ, ಆಭಾಸವಾಗೋಣ, ಅಪಚನದ ಭಾವನೆಗಳು, ಮಳಮಳಿಸೋಣ, ತಲೆನೋವು, ಭ್ರಮಣ, ಖಿನ್ನತೆ, ಮುಂತಾದ ಭಾವನೆಗಳು ಅಪಸ್ಮಾರದ ಸೆಳತದ ಪೂರ್ವದಲ್ಲಿ ಆಗುವದು ರೋಗಿಗೆ ತಿಳಿಯುತ್ತದೆ. ಅರುವು ಬಂದನಂತರ ರೋಗಿಯು ಸ್ವಲ್ಪಕಾಲ ಬೆರಗಾಗಿರುವನು. ಮುಂದೆ ತನ್ನ ವಾಡಿಕೆಯ ವ್ಯವಹಾರಗಳನ್ನು ಮಾಡಲು ಹತ್ತುವನು. ರೋಗಿಗೆ ಅರವು ತಪ್ಪದೆ ಸಿಡತ ಬರೋಣ, ಮುಂದೆ ಎಷ್ಟೋ ಅವಧಿಯನಂತರ ಅರವು ತಪ್ಪೋಣ,– ಇಂಥ ಅಪಸ್ಮಾರವೂ ಇರುವದು. ಮೇಲಿಂದಮೇಲೆ ಅನಿಯಮಿತತನದಿಂದ ಸಿಡತ ಬರೋಣ, ಸಿಡತವು ಬಹು ವೇಳೆ ತಡೆಯೋಣ, ವಾಂತಿಯಾಗೋಣ, ಅರುವು ಬಂದನಂತರ ಹುಚ್ಚುತನದ ಲಕ್ಷಣಗಳು ಇರೋಣ, ಒಂದೇ ಭಾಗಕ್ಕೆ ಸಿಡತಬರೋಣ– ಇವು

ಅನಿಷ್ಟ ಲಕ್ಷಣಗಳು. ಬಹುದಿವಸದನಂತರ ಸಿಡತ ಬರೋಣ, ಅವು ಸ್ವಲ್ಪ ವೇಳೆ ತಡಿಯೋಣ, ಸಿಡತ ಸೌಮ್ಯವಿರೋಣ, ಪೂರ್ಣ ಬೇಶುದ್ಧಿ ಇಲ್ಲ ದಿರೋಣ,- ಇವು ಶುಭಲಕ್ಷಣಗಳೆಂದು ತಿಳಿಯಬೇಕು. ಸಿಡತ ಮೇಲಿಂದ ಮೇಲೆ ಸ್ವಲ್ಪೇ ಅವಧಿಯ ನಂತರ ಬರುತ್ತಿದ್ದರೂ ಸ್ವಲ್ಪ ವೇಳೆ ತಡೆಯುವದು ಮತ್ತು ತ್ವಚೆಯಮೇಲೆ ಹುಣ್ಣು ಏಳುವದು- ಇದ್ದರೆ ಇವು ಶುಭ ಲಕ್ಷಣ ಗಳೆಂದು ತಿಳಿಯುವದು. ರೋಗವು ಆನುವಂಶಿಕವಿದ್ದರೆ ಅಸಾಧ್ಯವೆಂದು ತಿಳಿಯಬೇಕು. ಮುಷ್ಟಿಮೈಥುನದಂಥ ಅಪಾಯಕಾರಕ ಚಟ, ಮದಾತಿ ರೇಖ, ಉಪದಂಶ- ಇವು ಈ ಬೇನೆಯ ಮುಖ್ಯ ಕಾರಣಗಳು. ಸಣ್ಣ ಮಕ್ಕಳಿಗೆ ದಂತೋದ್ಭವದಕಾಲಕ್ಕೂ ಜಂತುಗಳಾದಲ್ಲಿಯೂ ಅಪಸ್ಮಾರ ದಂಥ ಸಿಡತಗಳು ಬರುವವು.

**ಕಾ. ಮೂ:**— ಅಪಸ್ಮಾರದಮೇಲಿನ ಪ್ರಮುಖ ಔಷಧವು. ಬಾಹ್ಯೋಪಚಾರದಿಂದ ಇಸಬುನಂಥ ತ್ವಗ್ರೋಗಗಳನ್ನು ದಬ್ಬಿ ಹಿಡಿಯಲ್ಪ ಟ್ಟಿದ್ದರಿಂದ ಸಿಡತಗಳು ಬರುತ್ತಿದ್ದರೆ, ನಾಲಿಗೆಯ ಮೇಲೆ ಬಿಳೇ ಬೂದಿಬಣ್ಣದ ಅಗ್ರ ಇದ್ದರೆ ಯಾವದಾದರೊಂದು ಹೆದರಿಕೆಯುಂಟಾಗೋಣವೇ ಸೂಚಕ ಚಿನ್ಹವಿದ್ದರೆ ಇದರ ಉಪಯೋಗ.

**ಕ್ಯಲ್ಕೆ. ಫಾ:**— ಮುಷ್ಟಿಮೈಥುನದಂಥ ಅಪಾಯಕಾರಕ ಚಟ ವಿರುವದರಿಂದ ಪಾಂಡುರೋಗದಲ್ಲಿ ಈ ರೋಗವು ಇದ್ದರೆ ಇತರ ಔಷಧದ ಜತೆಗೆ ಇದನ್ನು ಕೊಡಬೇಕು,

**ಫೇ. ಫಾ:**— ಸಿಡಿತವಿದ್ದಕಾಲಕ್ಕೆ ಮುಖಚರ್ಯೆಯು ಕೆಂಪಾಗಿದ್ದರೆ ಕಾಲೀ ಮೂರದ ಜತೆಗೆ ಇದನ್ನು ಸರ್ತಿಮೇಲೆ ಕೊಡಬೇಕು.

**ಮ್ಯಾ. ಫಾ:**— ಸಿಡತ ಮತ್ತು ಅಂಗವೈಕಲ್ಯವಾಗಿದ್ದರೆ ಕೈಕಾಲು ಗಳು ಸೆಟದದ್ದು, ತಲೆ ಹಿಂಭಾಗಕ್ಕೆ ಬಿದ್ದದ್ದು, ಕೈಮುಷ್ಟಿ ಗಟ್ಟಿಯಾಗಿ ಮುಚ್ಚಿದ್ದು, ಹಲ್ಲು ಗಿಟಕರಿಸಿದ್ದು, ಸ್ನಾಯುಗಳ ಹಾರೋಣ, ಮುಂತಾದ ಭಾವನೆಗಳಮೇಲೆ ಸಿಡತ ನಿಲ್ಲುವವರೆಗೆ ಮಾ. ಫಾ. ವನ್ನು ಬಿಸಿ ನೀರಿನೊಳ ಗಿಂದ ಕೊಡಬೇಕು. ಮುಷ್ಟಿಮೈಥುನದಂಥ ಅಪಾಯಕಾರಕ ಚಟದ ಮೂಲಕ ಬಂದ ಸಿಡತದಮೇಲೆ ಈ ಚಟ ನಿಲ್ಲದ ಹೊರ್ತು ಗುಣಬರಲಾರದು.

**ಕಾ. ಫಾ:—** ಅಪಸ್ಮಾರ ಬಂದು ಹೋದನಂತರ ಸರ್ವಾಂಗವು ತಂಣಗಾಗುವದು ಮತ್ತು ಎದೆಯಲ್ಲಿ ಧಡ ಧಡಿಸುವದು ಇದ್ದರೆ ಕಾಲೀ ಮೂ. ದ ಜತೆಗೆ ಸರ್ತಿಮೇಲೆ ಕೊಡಬೇಕು.

**ನೇ. ಫಾ:—** ಜಂತಿನ ಮೂಲಕ ಬಂದ ಬೇನೆಯುಮೇಲೆ ಕಾಲೀ ಮೂರದ ಜತೆಗೆ ಸರ್ತಿ ಮೇಲೆ.

**ಸಿ:—** ರಾತ್ರಿಯಲ್ಲಿ ಬರತಕ್ಕ ಅಪಸ್ಮಾರದ ಮೇಲೆ ಶುದ್ಧ ಪಕ್ಷದಲ್ಲಿ ವಿಶೇಷತಃ ಹುಣ್ಣಿವೆಯ ದಿವಸ ಇದರ ಭರ ಹೆಚ್ಚಾಗಿರುವದು. ಅಪಸ್ಮಾರ (Fits) ಬರುವ ಪೂರ್ವದಲ್ಲಿ ಮೈಯೆಲ್ಲ ತಂಣಗಾಗಿರುವದು.

**ನೇ. ಸ:—** ತಲೆಯುಮೇಲೆ ಆದ ಅಪಘಾತದ ಮೂಲಕ ಆದ ಅಪಸ್ಮಾರದ ಮೇಲೆ.

**ಉಪಯುಕ್ತ ಸೂಚನೆ:—** ಅಪಾಯಕಾರಕ ಚಟಗಳನ್ನು ಬಿಟ್ಟು ಬಿಡಬೇಕು. ಅಪಸ್ಮಾರದ ಕಾಲಕ್ಕೆ ಗಾಯವಾಗುವಸಂಭವ ಬಹಳಿರುವದು. ಅದರ ಬಗ್ಗೆ ಜಾಗರೂಕರಾಗಿರಬೇಕು. ಅಪಸ್ಮಾರದ ರೋಗಿಯನ್ನು ಒಬ್ಬ ನನ್ನೇ ಹೊರಗೆ ಕಳುಹಿಸಬಾರದು. ಜತೆಗೆ ಯಾರನ್ನಾದರೂ ಕಳಿಸಬೇಕು. ಶ್ವಾಸೋಚ್ಛ್ವಾಸವು ಕಠಿಣವಾಗುತ್ತಿದ್ದಲ್ಲಿ ಮೋರೆಯುಮೇಲೆ ನೀರು ಚಿಮುಕಿಸಬೇಕು (ಉಗ್ಗಬೇಕು). ಬಿಸಿನೀರಲ್ಲಿ ಮ್ಯಾ. ಫಾ. (೩ ×) ವನ್ನು ಹಾಕಿ ಆ ನೀರನ್ನು ಹಲ್ಲು ಗಿಟಗರಿಸಿದ್ದರೂ ಸಹ ಏನಾದರೂ ಯತ್ನಮಾಡಿ ಬಾಯಿಯಲ್ಲಿ ಮೇಲಿಂದಮೇಲೆ ಸೇರಿಸಬೇಕು. ಹವೆ ಬದಲಿಸಿ ದಲ್ಲಿ ವಿಶೇಷ ಉಪಯೋಗವಾಗುವದು. ವಿಶ್ರಾಂತಿಯು ಅವಶ್ಯಕವು. ಮಾನಸಿಕ ಶ್ರಮಮಾಡಬಾರದು. ಈ ರೋಗನಿವಾರಣೆ ಆಗಬೇಕಾದರೆ ಎಷ್ಟೋ ದಿವಸ ತಿಂಗಳ ಇಷ್ಟೇ ಅಲ್ಲ, ಎಷ್ಟೋವರುಷ ಔಷಧವನ್ನು ಕೊಡಬೇಕಾಗುವದು. ಸ್ವಲ್ಪದಿವಸ ಔಷಧಕೊಟ್ಟು ಬೇನೆ ನಿಲ್ಲದಿದ್ದರೆ ನಿರಾಶೆಹೊಂದದೆ ಹಾಗೇ ಔಷಧ ಕೊಡುತ್ತಿರಬೇಕು. ಹೆಚ್ಚಿನಶಕ್ತಿಯ ಔಷಧವನ್ನು ಅಂದರೆ ೧೨ × ಕಿಂತ ಹೆಚ್ಚಿನ ಶಕ್ತಿಯ ಔಷಧವನ್ನು ಕೊಡಬೇಕು. ಮೇಲಿಂದಮೇಲೆ ಯಾವ ಕ್ಷಾರದ ಕೊರತೆಯಾಗಿದೆಂಬದನ್ನು ನೋಡುತ್ತಿರಬೇಕು. ಅದರಂತೆ ಔಷಧ ಬದಲಿಸಬೇಕು. ಔಷಧ ಯೋಜನೆ

ಮಾಡುವಕಾಲಕ್ಕೆ ರೋಗಿಯು ಇತರ ಭಾವನೆಗಳನ್ನು ಸಹ ಲಕ್ಷ್ಯದಲ್ಲಿಡಬೇಕು. ( ಪಚನದ ಸಂಬಂಧದ ತಕರಾರುಗಳಿದ್ದರೆ ಅವುಗಳನ್ನು ಲಕ್ಷ್ಯದಲ್ಲಿತರಬೇಕು ).

---

# ಪುಪ್ಪುಸಾವರಣದಾಹ

**Pleurisy.** **ಪ್ಲ್ಯೂರಿಸಿ.**

ಪುಪ್ಪುಸದ ಮೇಲಿನ ಆವರಣಕ್ಕೆ ( ಪರದೆ=ಪಡದೆ=ಹೊದಿಕೆ ) ಪಕ್ಕೆ ನೋವು ಇಂಗ್ಲಿಷ ಭಾಷೆಯಲ್ಲಿ "ಪ್ಲೂರಾ" ಎನ್ನುವರು. ಈ ಆವರಣದ ( ಹೊದಿಕೆ ) ಪೃಷ್ಠಭಾಗವು ಮೆತ್ತಗಾಗಿದ್ದು, ನಿರೋಗಿ ಸ್ಥಿತಿಯಲ್ಲಿ ತ್ವಚೆಯನ್ನು ಒದ್ದೆಯಾಗಿಡುವದಕ್ಕೋಸ್ಕರ ಅದರೊಳಗಿಂದ ಒಂದುತರದ ಸ್ರಾವವು ಹೋಗುತ್ತಿರುವದು. ಗಾಡಿಗೆ ಹೆರೆ ಹೇಗೋ ಅದೇತರದ ಉಪಯೋಗವು ಈ ಸ್ರಾವದಿಂದಾಗುವದು. ಅದರಿಂದ ಶ್ವಾಸೋಚ್ಛ್ವಾಸದ ಕ್ರಿಯೆಯು ಸುಲಭವಾಗುವದು. ಈ ಆವರಣ ಅಥವಾ ಹೊದಿಕೆಯ ದಾಹವೆಂದರೇ ಪ್ಲೂರಿಸಿ. ಆ ಕಾಲಕ್ಕೆ ಚಳಿಯಾಗುವದು. ಆವರಣವು ಒಣಗಿದ್ದಿರುವದು. ಉಸುರು ಎಳೆದುಕೊಳ್ಳುವಾಗ ಚುಚ್ಚಿದಂತೆ ತೀವ್ರ ವೇದನೆ ಆಗುವದು. ದೀರ್ಘಶ್ವಾಸ ತೆಗೆದುಕೊಳ್ಳುವಾಗ, ಕೆಮ್ಮುವಾಗ, ಒತ್ತಿದ್ದರಿಂದ, ನೋವು ಇದ್ದ ಪಕ್ಕೆಯುಮೇಲೆ ಮಲಗಿದಾಗ ವೇದನೆ ಹೆಚ್ಚಾಗುವದು. ಸೂಜಿ ಚುಚ್ಚಿದಂತೆಯೂ, ಭಾಲೆ ಚುಚ್ಚಿದಂತೆಯೂ ವೇದನೆ ಆಗುವದು. ನೋಯುವ ಪಾರ್ಶ್ವದಲ್ಲಿ ಕಿವಿ ಹಚ್ಚಿ ಕೇಳಿದಲ್ಲಿಯಾಗಲಿ ಶ್ರವಣನಲಿಕೆಯನ್ನು ಹಚ್ಚಿ ನೋಡಿದಲ್ಲಾಗಲಿ ತಿಕ್ಕಿದಂಥ ಸಪ್ಪಳ ಕೇಳಬರುವದು. ಶ್ವಾಸೋಚ್ಛ್ವಾಸವೂ ನಾಡಿಯೂ ತೀವ್ರವಾಗಿ ನಡೆಯುವವು. ಕಷ್ಟಶ್ವಾಸವು. ರೋಗಿಯು ಚಿಂತಾತುರನಾಗಿರುವನು ಮತ್ತು ಅವನಿಗೆ ಶಾಂತಿಯು ಇರುವದಿಲ್ಲ. ಮೂತ್ರ ಸ್ವಲ್ಪ ಸ್ವಲ್ಪ ಆಗುವದು ಮತ್ತು ಕೆಂಪು ಬಣ್ಣದ್ದಿರುವದು. ದಾಹದ ದ್ವಿತೀಯಾವಸ್ಥೆಯಲ್ಲಿ ಆವರಣದಲ್ಲಿ ಸ್ರಾವವು ಆರಂಭವಾಗಿ ಅದು ಅಲ್ಲಿ ತುಂಬಿಕೊಂಡಿರುವದು. ಘರ್ಷಣದ ಧ್ವನಿಯು ನಿಲ್ಲುವದು.

ಕಳೆಯೂ ನಿಲ್ಲುವದು. ಆ ಮಗ್ಗಲಿನ ಎದೆಯು ಭಾಗವು ಮೇಲೆ ಬಂದಂತೆ ಕಾಣು ವದು. ಅಲ್ಲಿ ಶ್ವಾಸೋಚ್ಛ್ವಾಸದ ಸಪ್ಪಳ ಕೇಳುವದಿಲ್ಲ. ಈ ಸ್ರಾವವು ಶೋಷಿತ ವಾದಲ್ಲಿ ಪುನಃ ಶ್ವಾಸೋಚ್ಛ್ವಾಸಕ್ಕೆ ಮೊದಲಿನಂತೆ ಆರಂಭವಾಗಿ ರೋಗಿಗೆ ಆರಾಮುವಾಗುತ್ತದೆ. ಸ್ರಾವದ ಶೋಷಣವಾಗದೇ ಇದ್ದಲ್ಲಿ ಫುಪ್ಫುಸದ ಮೇಲೆಯೂ ಎದೆಯು ಮೇಲೆಯೂ ಅದರ ಒತ್ತಾಯವಾಗಿ ಶ್ವಾಸಾವರೋಧ ವಾಗಿ ರೋಗಿಯು ಮೃತ್ಯುಪಂಥಕ್ಕೆ ಹತ್ತುವನು. ಇದರ ಭಾವನೆಗಳೂ ನ್ಯುಮೋನಿಯಾದ ಭಾವನೆಗಳು ಸರಿಯಾಗಿರುವವು. ಇದರಲ್ಲಿ ಮೇಲಿಂದ ಮೇಲೆ ಚಳಿಯಾಗುವದು. ನ್ಯುಮೋನಿಯಾದಲ್ಲಿ ಒಂದೇ ಸಲ ಚಳಿ ಬಹಳ ಬರುವದು. ನ್ಯುಮೋನಿಯಾದಂತೆ ಇದರಲ್ಲಿ ಕೆಂಪುಬಂಣದ ಕಫವು ಬೀಳುವ ದಿಲ್ಲ. ನ್ಯುಮೋನಿಯಾದಲ್ಲಿ ಇದರಲ್ಲಿದ್ದಂಥ ಚುಚ್ಚುವ ವೇದನೆಯೂ ಘರ್ಷಣ ಧ್ವನಿಯೂ ಇರುವದಿಲ್ಲ. ಪ್ಲುರಿಸಿಯಲ್ಲಿ ಸಾಧಾರಣವಾಗಿ ೭-೮ ದಿವಸದ ನಂತರ ಜ್ವರವೂ ಇತರ ಭಾವನೆಗಳೂ ಕಡಿಮೆಯಾಗಹತ್ತುವವು.

ಈ ರೋಗದನಂತರ ಕ್ಷಯದ ಭಾವನೆಯುಂಟಾಗುವ ಹೆದರಿಕೆ ಬಹಳ ವೆಂದು ಇತ್ತೀಚಿಗೆ ಕಂಡುಬಂದಿದೆ. ಒಂದೇಸವನೆ ಜ್ವರ ಬಹಳಿರೋಣ, ಫುಪ್ಫುಸಾವರಣದಲ್ಲಿ ತೀವ್ರವಾಗಿ ನೀರುತುಂಬೋಣ, ಇವು ಅನಿಷ್ಟ ಲಕ್ಷಣ ಗಳು. ನೀರು ಬಹುದಿವಸ ತುಂಬಿಕೊಂಡಿದ್ದರೆ ರೋಗಕ್ಕೆ ಕ್ಷಯದ ಸ್ವರೂಪವುಂಟಾಗಿದೆ ಎಂದು ತಿಳಿಯಬೇಕು.

ಚಳಿ, ಶೀತ, ಮೈಮೇಲೆ ಬಟ್ಟೆ ಇಲ್ಲದೆ ಮಲಗೋಣ- ಇವು ಈ ಬೇನೆಯ ಮುಖ್ಯ ಕಾರಣಗಳು. ಗೊಬ್ಬರ, ಮೈಲಿ ಮುಂತಾದ ರೋಗಗಳು, ಎದೆಗೆ ಪೆಟ್ಟು ಹತ್ತೋಣ, ಗಾಯವಾಗೋಣ, ಇವುಗಳಿಂದ ಸಹ ಈ ರೋಗವುಂಟಾಗುವದು.

**ಫೇ. ಫಾ:**— ಮುಖ್ಯ ಔಷಧವು. ಬಹುತರವಾಗಿ ಇದನ್ನು ಕಾಲಕ್ಕೆ ಸರಿಯಾಗಿ ಮೇಲಿಂದ ಮೇಲೆ ಕೊಟ್ಟಲ್ಲಿ ರೋಗಿಯು ನೆಟ್ಟಗಾಗು ವನು. ಜ್ವರ, ವೇದನೆ, ಮೈಮೇಲೆ ಮುಳ್ಳುಬರುವದು, ನಾಡಿಯು ತೀವ್ರವಾದದ್ದು, ತುಂಬಿದಂಥಾದ್ದು, ಎದೆಯಲ್ಲಿ ಚುಚ್ಚುವಂಥ ವೇದನೆ, ಶೀಘ್ರ ಪರಿಣಾಮವುಳ್ಳ ಕೆಮ್ಮು, ತಾಪ ಮಾಡತಕ್ಕಂಥ ಲಘು

ಶ್ವಾಸ ಮುಂತಾದ ಭಾವನೆಗಳು ಇರುವವು. ಹೊಟ್ಟೆಯಲ್ಲಿಯೂ ಔಷಧ ಕೊಡಬೇಕು ಮತ್ತು ಬಾಹ್ಯಲೇಪವನ್ನೂ ಮಾಡಬೇಕು.

**ಕಾ. ಮೂ:—** ದ್ವಿತೀಯಾವಸ್ಥೆಯಲ್ಲಿ ಸ್ರಾವವು ಆರಂಭವಾದನಂತರ ನಾಲಿಗೆಯು ಬೆಳ್ಳಗಾದರೆ ಇದರ ಜತೆಗೆ ಫೇರಂ. ಫಾ. ಕೊಡಬೇಕು.

**ಕಲ್ಕೆ. ಸ:—** ತೃತೀಯಾವಸ್ಥೆಯಲ್ಲಿ; ಫುಪ್ಫುಸದ ಆವರಣದಲ್ಲಿ ನೀರು ತುಂಬಿಕೊಂಡಿದ್ದರೆ ನೀರು ತುಂಬಿಕೊಂಡಿದ್ದ ಸ್ಥಳದಲ್ಲಿ ಫುಪ್ಫುಸದಲ್ಲಿ ಘುರ ಘುರ ಸಪ್ಪಳಾಗುವದು.

**ಕಲ್ಕೆ. ಫಾ:—** ಬಹಳ ದಿವಸದ ರೋಗವು. ಶ್ವಾಸ ಬಿಡುವಷ್ಟು ಸಲ ನೋಯುವದು. ರಾತ್ರಿಯಲ್ಲಿ ಕೆಮ್ಮು ಹೆಚ್ಚಾಗುವದು. ಜ್ವರ ಸ್ವಲ್ಪ ಅಥವಾ ಇರುವದೇ ಇಲ್ಲ. ವೇದನೆ ಕಠಿಣವಿರುವದಿಲ್ಲ. ಹವೆಯಲ್ಲಿ ಬದಲಾವಲ್ಲಿ ತಾಪ; ಶೀಘ್ರಗಾಮಿ ರೋಗಗಳಲ್ಲಿ ಇದರ ಔಷಧದ ಜತೆಗೂ ಜ್ವರದ ನಂತರ ಸಹ ಶಕ್ತಿಗಾಗಿ ಇದನ್ನು ಕೊಡುವದು.

**ಉಪಯುಕ್ತ ಸೂಚನೆ:—** ಪೂರ್ಣ ನೆಟ್ಟಗಾಗುವವರೆಗೆ ರೋಗಿಯು ಮಲಗಿಕೊಂಡೇ ಇರಬೇಕು. ಹುರಿದ ನುಚ್ಚಿನ ಗಂಜಿ, ಸಾಬಿಯ ಅಕ್ಕಿಯ ನೀರು ಇವುಗಳ ಹೊರತು ಮತ್ತೇನೂ ಕೊಡಬಾರದು. ನೀರಡಿಕೆ ಇದ್ದಲ್ಲಿ ಕಾದಾರಿಸಿದ ನೀರು ಕುಡಿಯಲಿಕ್ಕೆ ಕೊಡಬೇಕು. ಬಿಸಿ ಪೋಟೀಶಿನಿಂದ ಎದೆ ಕಾಸಬೇಕು. ಫೇ. ಫಾ. ನೀರಿನಲ್ಲಿ ಹಾಕಿ ಅದರಲ್ಲಿ ಉಣ್ಣೆಯ ಬಟ್ಟೆಯನ್ನು ತೋಯಿಸಿ ಹಿಂಡಿ ಅದರಿಂದ ನೋಯುವ ಸ್ಥಳದಲ್ಲಿ ಕಾಯಿಸಬೇಕು. ದಿನಾಲು ಬಸ್ತಿ ಕೊಡಬೇಕು. ಫೇರಂ. ಫಾ. ಮೇಲಿಂದಮೇಲೆ ಕೊಟ್ಟಲ್ಲಿ ರೋಗಿಯು ನೆಟ್ಟಗಾಗುವನು. ಸ್ರಾವವಾಗಗೊಡಬಾರದೆಂದು ಫೇರಂ. ಫಾ. ದ ಜತೆಗೆ ಕಾಲಿಮೂರ ಕೊಟ್ಟಲ್ಲಿ ಗುಣವಾಗುವದು.

---

# ಬಹುಮೂತ್ರ

**Diabetes Insipidus.** ಡಾಯಿಬಿಟಿಸ್ ಇನ್ಸಿಪಿಡಸ್.

ಮೂತ್ರವು ಸ್ವಚ್ಛ ನೀರಿನಂತೆಯೂ ಬಹಳವಾಗಿಯೂ ಆಗುವದು. ಆದರೆ ಮೂತ್ರದೊಳಗಿಂದ ಶರ್ಕರೆ (ಸಕ್ಕರೆ)ಹೋಗುವದಿಲ್ಲ. ನೀರಡಿಕೆ ಇರುವದು. ಇದರ ಉಗ್ರ ಸ್ವರೂಪದಲ್ಲಿ ಮಧುಮೇಹದ ಭಾವನೆಗಳು ಇರುವವು. ನಡು ನಡುವೆ ಜ್ವರವಿರುವದು. ನಿದ್ದೆ ಅಸ್ವಸ್ಥವಿರುವದು. ಶೀರ್ಷ ಪೃಷ್ಠ ಭಾಗದಲ್ಲಿ ನೋವು, ಸ್ನಾಯುಗಳ ಹಾರೋಣ, ಮುಂತಾದ ಭಾವನೆಗಳು ಇರುವವು. ಸಣ್ಣ ಹುಡುಗರಲ್ಲಿ ಈ ರೋಗವು ಹೆಚ್ಚಾಗಿ ಕಂಡುಬರುವದು. ತಲೆಗೆ ಪೆಟ್ಟು ಹತ್ತೋಣ, ಮೆದುಳಿನ ಪ್ರಾಂತ್ರದಲ್ಲಿ ಅರ್ಬುದ ಏಳೋಣ, ಮದಾತ್ಯಯ, ಶೀತ, ಗಾಳಿ ತಗಲುವದು, ವ್ಯಾಯ್ಯಾಮ ಹೆಚ್ಚು ಮಾಡೋಣ ಮುಂತಾದ ಕಾರಣಗಳಿಂದ ಈ ರೋಗವು ಉದ್ಭವಿಸುವದು.

"ಮಧುಮೇಹ"ವೆಂಬ ವಿವರ ನೋಡಿರಿ.

---

# ಬಾಲಗ್ರಹ

**Convulsions.** ಕನ್‌ವಲ್ಶನ್ಸ್.

ಶರೀರದಲ್ಲಿ ಸ್ನಾಯುಗಳು ಒಮ್ಮಿದೊಮ್ಮೆ ಭರದಿಂದ ಹಾಗೂ ಒಂದೇ ಸವನೆ ಆಕುಂಚನ ಆಗುತ್ತಿರೋಣ, ಹಾರುತ್ತಿರೋಣ ಇಲ್ಲವೆ ಸ್ಫುರಣ ಹೊಂದೋಣ- ಇದಕ್ಕೇ ಬಾಲಗ್ರಹವೆನ್ನುವರು. ಸೆಟೆಯುವದು ಎಷ್ಟೋ ರೋಗಗಳಲ್ಲಿ ಕಂಡುಬರುವದು. ಹೊರ್ತಾಗಿ ಅದರಲ್ಲಿಯ ವಿಶಿಷ್ಟಭಾವನೆಗಳ ಮೇರೆಗೆ ಬೇರೆ ಬೇರೆ ಹೆಸರು ಅದಕ್ಕೆ ಪ್ರಾಪ್ತವಾಗಿರುವವು. ಚಿಕ್ಕ ಮಕ್ಕಳಲ್ಲಿ ಈ ಭಾವನೆ ಹೆಚ್ಚಾಗಿ ಕಂಡುಬರುವದು. ಆದ್ದರಿಂದಲೇ ಅದಕ್ಕೆ ಬಾಲಗ್ರಹವೆನ್ನುವರು. ಮೈಯ್ಯು ಸೆಟೆಯುವದು; ಮುಷ್ಟಿಯು ಗಟ್ಟಿ ಮುಚ್ಚಿರುವದು; ಹಲ್ಲು ಗಿಟಗರಿಸೋಣ, ಕಣ್ಣು ಹಿಗ್ಗಿಸೋಣ, ಕಣ್ಣು ಗೊಂಬೆಗಳನ್ನು ಅಗಲಾಗಿ ತೆರದಿರೋಣ, ಅರುವು ತಪ್ಪೋಣ, ಕೈಕಾಲು ಅಂಕಡೊಂಕ ಆಗೋಣ, ಮುಂತಾದ ಭಾವನೆಗಳು ರೋಗಕ್ಕನುಸರಿಸಿ

ಹೆಚ್ಚುಕಡಿಮೆ **ಇರುವವು.** ಹುಡುಗರ ಹಲ್ಲು ಒಡೆಯೋಣ, ಜಂತು ಆಗೋಣ, ಅನ್ನಪಚನ ಆಗದಿರೋಣ, ಮುಂತಾದ ಕಾರಣಗಳಿಂದ ಸೆಟೆಬೇನೆ ಬರುವದು. ಭೀತಿ, ಸಿಟ್ಟು, ಮನಸ್ತಾಪ, ಮನಸ್ಸು ನೋಯುವಂಥ ಸಂಗತಿಯಾಗೋಣ, ಶೀಘ್ರಗಾಮೀ ರೋಗವಾಗೋಣ, ಪೆಟ್ಟುಹತ್ತೋಣ ಮುಂತಾದ ಕಾರಣಗಳಿಂದ ಸಹ ಸೆಟೆಬೇನೆ ಆಗುವದು. ಎಷ್ಟೋ ಮಕ್ಕಳಿಗೆ ತಾಯಿಗಳ ಪ್ರಾಕೃತಿಕ ದೋಷದ ಮೂಲಕ ವಯಸ್ಸಿನ ಒಂದೆರಡು ವರ್ಷಗಳಲ್ಲಿಯೇ ಬಾಲಗ್ರಹವು ಆಗುವದು. ಅದರ ಸ್ವರೂಪವು ಭಯಂಕರವಿದ್ದು ಚಿಂತೆ ಉತ್ಪನ್ನ ಮಾಡುವಂತಹದು ಇರುವದು.

ಶ್ವೇತ ಬಂಣದ ಜ್ಞಾನತಂತು ಮತ್ತು ಸ್ನಾಯು ಇವುಗಳ ಕಾರ್ಯವು ವ್ಯವಸ್ಥಿತ ನಡೆಯಬೇಕಾದರೆ ಅವಶ್ಯವಿದ್ದ ಕ್ಷಾರದ ಕೊರತೆಯೇ ಈ ರೋಗದ ಕಾರಣವುಂಟು. ಪ್ರಬುದ್ಧರಿಗೆ ಮುಷ್ಟಿಮೈಥುನ ಮುಂತಾದ ಕೆಟ್ಟ ಚಟಗಳ ಮೂಲಕ ಆಗುವ ಸೆಟೆಬೇನೆಗೆ ಮುಂದೆ ಅಪಸ್ಮಾರದ ಸ್ವರೂಪವುಂಟಾಗುವದು.

**ಮ್ಯಾ. ಫಾ:**— ಶರೀರದ ಯಾವದೇ ಭಾಗದಲ್ಲಿ ಆಗತಕ್ಕ ಸೆಟೆಬೇನೆಯಲ್ಲಿಯ ಪ್ರಮುಖ ಔಷಧವಿದು. ಸೆಳತ, ಉಳುಕು, ಸ್ನಾಯುಗಳು ಹಾರೋಣ, ಅವು ಆಕುಂಚಿತವಾಗೋಣ, ಒಟ್ಟಿ, ಹಲ್ಲುಗಿಟಗರಸೋಣ, ಹಸ್ತಕಂಪ, ಮುಖಸ್ನಾಯುಗಳು ಹಾರೋಣ, ಮಾತಾಡುವಾಗ ಉಗ್ಗೋಣ, ಡೊಂಕ ದೃಷ್ಟಿ, ಕುಡಿಯುವಾಗ ಬಿಕ್ಕು, ಮುಂತಾದ ಲಕ್ಷಣಗಳಲ್ಲಿ ಇದರ ಉಪಯೋಗ ಬಹಳಾಗುವದು. ಬಿಸಿನೀರಿನೊಳಗಿಂದ ಇದನ್ನು ಮೇಲಿಂದ ಮೇಲೆ ಕೊಡತಕ್ಕದ್ದು.

**ಕಲ್ಕೆ. ಫಾ:** — ಮ್ಯಾ. ಫಾ. ನಂತರ ಇಲ್ಲವೆ ಅದರ ಜತೆಗೆ ಕೊಡಬೇಕು. ದಂತೋದ್ಭವದ ಕಾಲಕ್ಕೆ ಆಗುವ ಸೆಳತಕ್ಕೂ ಪಾಂಡುರೋಗದಿಂದ ಪೀಡಿತರಾದ ಮಕ್ಕಳಿಗೂ, ಅಸ್ಥಿಬೆಳವಣಿಗೆ ನೆಟ್ಟಗಾಗದಿರುವ ಮಕ್ಕಳಿಗೂ ಇದನ್ನು ಕೊಡಬೇಕು.

**ಕಾ. ಫಾ:**— ಅಂಜಿಕೆಯ ಮೂಲಕ ಸೆಟೆಯೋಣ; ಚರ್ಯೆ ಬಾಡಿದ್ದೂ ನಿಸ್ತೇಜವಿದ್ದದ್ದೂ ಇದ್ದರೆ ಮ್ಯಾ. ಫಾ. ದ ಜತೆಗೆ ಕೊಡಬೇಕು. ಅರುವು ತಪ್ಪುತ್ತಿದ್ದು ಮೆಲ್ಲಮೆಲ್ಲನೆ ಕನಕರಿಸುವದಕ್ಕೂ ಕೊಡಬಹುದು.

**ಕಾ. ಮೂ:**— ಅಪಸ್ಮಾರ, ಸೆಳೆಯುವದು ಇದ್ದಲ್ಲಿ ಮ್ಯಾ. ಫಾ. ದ ಜತೆಗೆ ಕೊಡಬೇಕು.

**ಫೇ. ಫಾ:**— ದಂತೋದ್ಭವದ ಕಾಲಕ್ಕೆ ಜ್ವರವಿದ್ದಲ್ಲಿ ಸಣ್ಣ ಮಕ್ಕಳಿಗೆ ಕೊಡುವದು.

**ಉಪಯುಕ್ತ ಸೂಚನೆ:**— ಮ್ಯಾ. ಫಾ. ಮತ್ತು ಕಲ್ಕೆ. ಫಾ. ಕೊಟ್ಟಲ್ಲಿ ಬಹುಶಃ ರೋಗಿಯು ನೆಟ್ಟಗಾಗುವನು. ಹಲ್ಲು ಒಡೆಯುವ ಕಾಲಕ್ಕೆ ಬರುವ ಸೆಟೆಬೇನೆಯಲ್ಲಿ, ಸೆಟೆಯೋಣವು ನಿಂತ ನಂತರ ಸಹ ಕಲ್ಕೆ ಫಾ. ವನ್ನು ಕೊಡಬೇಕು. ಮ್ಯಾ. ಫಾ. ಮೇಲಿಂದ ಮೇಲೆ ಬಿಸಿನೀರಿನಲ್ಲಿ ಹಾಕಿ ಕೊಡಬೇಕು. ಹಲ್ಲು ಗಿಟಗರಿಸಿದರೆ ಮ್ಯಾ. ಫಾ. ವನ್ನು ಹಲ್ಲಿನ ಮೇಲೆ ತಿಕ್ಕಬೇಕು. ಸೆಟೆಯುವ ಕಾಲದಲ್ಲಿ ಬಿಸಿನೀರಿನಲ್ಲಿ ಕಾಲುಗಳನ್ನು ಸ್ವಲ್ಪ ವೇಳೆ ಇಟ್ಟು ನಂತರ ಅವುಗಳನ್ನು ಒರಿಸಿ ತೆಗೆದು ಉಣ್ಣೆಯ ಬಟ್ಟೆಗಳಲ್ಲಿ ಮುಚ್ಚಬೇಕು. ಅವಶ್ಯವಿದ್ದಲ್ಲಿ ಹೀಗೆ ಮೇಲಿಂದ ಮೇಲೆ ಮಾಡಬೇಕು. ಅದರಿಂದ ಉಪಯೋಗವಾಗುವದು. ತಲೆಯ ಮೇಲೆ ತಣ್ಣನ ನೀರಿನ ಪಟ್ಟಿ ಇಡಬೇಕು. ಮತ್ತು ಅದನ್ನು ಒಣಗಗೊಡ ಬಾರದು. "ಅಪಸ್ಮಾರ"ವೆಂಬ ವಿವರ ನೋಡಿರಿ.

---

# ಭಗಂದರ

**Fistula in Ano.** **ಫಿಶ್ಚುಲಾ ಇನ್ ಆನೊ.**

ಗುದದ್ವಾರದಲ್ಲಿ ಕುರುಹು ಉಂಟಾಗಿ ಅದು ಒಡೆಯುವದು. ಆದರೆ ಹುಣ್ಣು ಮಾಯುವದಿಲ್ಲ. ಒಳಗಿಂದೊಳಗೆ ಮೇಯುತ್ತ ಹೋಗಿ ಹಬ್ಬುತ್ತದೆ. ಒಳಹೊರ ತೂತು ಬೀಳುತ್ತದೆ. ಮತ್ತು ಹೆಚ್ಚು ಕಡಿಮೆ ಸೋರಹತ್ತುತ್ತದೆ. ಇದಕ್ಕೆ ಭಗಂದರವೆನ್ನುತ್ತಾರೆ. ಆದರೆ ಇದು ಗುದದ್ವಾರದಲ್ಲಿಯೇ ಆಗುವದೆಂತಲ್ಲಾ. ಇತರ ಸ್ಥಳಗಳಲ್ಲಿ ಸಹ ಆಗುವದು. ತೂತು ಒಳ ಹೊರಗೆ ಇರದೆ ಒಂದು ಕಡೆ ಮುಚ್ಚಿದ್ದು ಎರಡನೇ ಕಡೆಗೆ ಬಾಯಿ ತೆರದದ್ದು ಇರುವದು. ಇದೊಂದು ಭಗಂದರದ ಪ್ರಕಾರವೇ

ಸರಿ. ಇದಕ್ಕೆ ನಾಡಿ ವ್ರಣ ಅನ್ನುವರು. ಆದರೆ ನಾವು ಈ ಪುಸ್ತಕದಲ್ಲಿ ಎರಡೂ ಪ್ರಕಾರಕ್ಕೆ ನಾಡಿ ವ್ರಣವೆಂದೇ ಅಂದಿದ್ದೇವೆ. ಅಸ್ಥಿ ಕೊಳೆತದ್ದ ರಿಂದಲೂ, ಗುಂಡು ಮೈಯಲ್ಲಿ ಸೇರಿದ್ದರಿಂದಲೂ ಒಂದುಕಡೆಗೆ ಮುಚ್ಚಿದ್ದು ಇರುವದರಿಂದ ನಾಡಿ ವ್ರಣ ಹುಟ್ಟುವವು. ವ್ರಣವು ಒಳಗಿಂದೊಳಗೆ ಮೇಯುತ್ತ ಹೋಗಿ ಕೀವು ಸೋರುತ್ತ ಇರುವದು. ಇದೇ ಈ ಬೇನೆಯ ಮುಖ್ಯ ಪ್ರಕಾರವು. ನಾಡಿ ವ್ರಣ ಅಥವಾ ಭಗಂದರ ಇವುಗಳಿಗೆ ಕೆಳಗೆ ಬರೆದ ಔಷಧಗಳ ಉಪಯೋಗವಾಗುವದು.

**ಕಲ್ಕೆ. ಫಾ:—** ಭಗಂದರದಲ್ಲಿ ಶಸ್ತ್ರಕ್ರಿಯೆ ಮಾಡಿದಾಗ್ಯೂ ನೆಟ್ಟ ಗಾಗದೇ ಇದ್ದಲ್ಲಿ ಇದು ಗುಣಕೊಡುವದು. ಹವೆ ತಣ್ಣಗೆ ಆದಲ್ಲಿಯೂ, ಹವೆ ಬದಲಾದ್ದರಿಂದಲೂ ಸಂದುಗಳು ನೋಯುವವು ಅಂಥ ಉದ್ದ, ಬಡಕಾದ ರೋಗಿಗಳಿಗೆ ಇದರ ಉಪಯೋಗವಾಗುವದು. ಗುದದ್ವಾರದಲ್ಲಿ ಉರುವು ಬಿಡುವದು. ಮುಂಜಾನೆ ಏಳುವಾಗ ಗುದದ್ವಾರದಲ್ಲಿ ನೋಯು ತ್ತದೆ. ಗುದದ್ವಾರದಿಂದ ಏನಾದರೂ ಹೊರಬೀಳುತ್ತದೆಂಬ ಭಾವನೆ ಇರುವದು.

**ಸಿ:—** ನಡೆಯುವಾಗ ಗುದದ್ವಾರದಲ್ಲಿ ಭಾಲೆಚುಚ್ಚಿದಂತೆ ವೇದನೆ. ಹೊಟ್ಟೆಯಲ್ಲಿಯೂ ವೇದನೆ ಇರುವದು. ಕಾವು ಕೊಟ್ಟಲ್ಲಿ ಸಮಾಧಾನ ವಾಗುವದು. ಗುದದ್ವಾರದಲ್ಲಿ ಆದ ಕುರುವಿನಲ್ಲಿ ಕೀವಾಗುತ್ತಿದ್ದರೆ, ಕೆಮ್ಮಿನ ಬೇನೆ ಇದ್ದವರಿಗೆ ಭಗಂದರವಿದ್ದಲ್ಲಿ ಕೆಮ್ಮುವಾಗ ಕೀವು ಸಹಿತ ಕಫ ಬೀಳುವದಾದರೆ.

**ಕಲ್ಕೆ. ಸ:—** ಗುದದ್ವಾರದ ಸುತ್ತುಮುತ್ತಲು ಕುರುವುಗಳಿದ್ದು ವೇದನೆ ಇದ್ದರೆ ಶೌಚದೊಳಗಿಂದ ಕೀವಿನಂಥ ಸ್ರಾವವು ಹೋಗುತ್ತಿದ್ದರೆ.

**ಉಪಯುಕ್ತ ಸೂಚನೆ:—** ಶಸ್ತ್ರಕ್ರಿಯೆಯಿಂದಲೇ ಈ ರೋಗ ವನ್ನು ನೆಟ್ಟಗೆ ಮಾಡುವ ಪ್ರವೃತ್ತಿಯದೆ. ಆದರೆ ಅದರಿಂದ ಎಲ್ಲ ರೋಗಿಗಳು ನೆಟ್ಟಗಾಗುವರೆಂದು ಹೇಳಕೂಡದು. ವಿಶೇಷತಃ ಕ್ಷೀಣ ಪ್ರಕೃತಿಯ ರೋಗಿಗಳಿಗೆ ಶಸ್ತ್ರಕ್ರಿಯೆಯಿಂದ ಉಪಯೋಗವಾಗುವದಿಲ್ಲ. ದಿನಾಲು ಮೂರು ಸರ್ತೆ ಕಲ್ಕೆ. ಫಾ. ೧× ಶಕ್ತಿಯನ್ನು ಒಂದು ವಾರ

ಕೊಡಬೇಕು. ೨ನೇ ವಾರದಲ್ಲಿ ಸಿಲಿಕಾ ೩× ಶಕ್ತಿಯನ್ನು ಕೊಡಬೇಕು. ಅಂದರೆ ರೋಗವು ಇಲ್ಲದಂತಾಗುವದು. ಹೀಗೆ ಎಷ್ಟೋ ಡಾಕ್ಟರರ ಮತವಿದೆ. ವ್ರಣವನ್ನು ತೊಳೆದು ಸ್ವಚ್ಛ ಇಡತಕ್ಕದ್ದು.

---

## ದಗ್ಧವ್ರಣ

**Burns and Scalds.** ಬರ್ನ್ಸ್ ಆ್ಯಂಡ ಸ್ಕಾಲ್ಡ್ಸ.

ಬೆಂಕಿಯಿಂದಾಗಲಿ, ಸುಡುವ ನೀರಿನಿಂದಾಗಲಿ, ಸುಡುವ ಎಣ್ಣೆಯಿಂದಾಗಲಿ, ವಿಷಾರಿ ಪದಾರ್ಥಗಳು ಮೈಮೇಲೆ ಬಿದ್ದದ್ದರಿಂದಾಗಲಿ, ಸುಡುವಿಕೆಯು ತೀವ್ರತೆಗನುಸರಿಸಿ ಹೆಚ್ಚು ಕಡಿಮೆ ಗಾಯವಾಗುವದುಂಟು. ತೊಗಲು ಕೆಂಪಾಗುವದು. ತೊಗಲಿನ ಮೇಲೆ ಹುಣ್ಣು ಏಳೋಣ, ತ್ವಚೆ ಸುಟ್ಟುಹೊಗೋಣ, ಸ್ನಾಯುಗಳು ಸುಟ್ಟುಹೋಗೋಣ, ಇಲ್ಲವೆ ಯಾವದಾದರೊಂದವಯುವವು ತೀರ ಸುಟ್ಟುಹೋಗೋಣ- ಇವು ಸುಡುವದರಲ್ಲಿಯ ಪ್ರಕಾರಗಳು. ಒಂದು ಕಡೆಗೆ ಸ್ವಲ್ಪ ಸುಟ್ಟಿದ್ದಲ್ಲಿ ಎರಡನೇ ಕಡೆಗೆ ಹೆಚ್ಚು ಸುಟ್ಟಲ್ಲಿಯೂ, ಪ್ರಕೃತಿಯ ಮೇಲೆ ಅದರ ಅನಿಷ್ಟ ಪರಿಣಾಮಗಳು ಕಂಡುಬರುವದಿಲ್ಲ. ಆದರೆ ಎದೆ, ಹೊಟ್ಟೆ, ತಲೆ, ಕುತ್ತಿಗೆ ಮುಂತಾದವುಗಳ ಮೇಲೆ ಬೆಂಕಿಯಿಂದ ಸುಟ್ಟ ಸ್ಥಳ ವಿಸ್ತೃತವಿದ್ದರೆ, ಅದರ ಅನಿಷ್ಟ ಪರಿಣಾಮಗಳು ಶರೀರದ ಮೇಲೆ ಕಂಡುಬರುವವು. ಚಿಕ್ಕಮಕ್ಕಳಲ್ಲಿ ಹೆಚ್ಚಿಗೆ ಕಂಡುಬರುವವು. ಮಾನಸಿಕ ಧಕ್ಕೆ, ಅದರಿಂದ ಕಂಪ ಉತ್ಪನ್ನವಾಗೋಣ, ಮೆದುಳು ಮುಂತಾದವುಗಳಲ್ಲಿ ರಕ್ತಸಂಚಯವಾಗೋಣ, ದಾಹದ ಭಾವನೆಗಳು ಕಂಡುಬರೋಣ, ಕಾಲಕ್ಕೆ ಸರಿಯಾಗಿ ಉಪಚಾರ ಮಾಡದಿದ್ದರೆ, ಕೀವು ಆಗೋಣ ಮುಂತಾದ ಪ್ರಕಾರಗಳು ಕಂಡುಬರುವವು. ಒಮ್ಮೊಮ್ಮೆ ಶಕ್ತಿಪಾತವಾಗಿ ರೋಗಿಯು ಮರಣ ಸಹ ಹೊಂದುವನು.

**ಫೇ. ಫಾ:**— ಉಷ್ಣತೆ, ವೇದನೆ, ಕೆಂಪಾಗಿರುವದು. ಇವುಗಳನ್ನು ಕಡಿಮೆ ಮಾಡುವದರ ಸಲುವಾಗಿ ೩× ಫೇರಂ ಫಾ. ವನ್ನು ನೀರಿನಲ್ಲಿ

ಹಾಕಿ ಅದರಲ್ಲಿ ಬಟ್ಟೆ ತೊಯಿಸಿ ಅದನ್ನು ಇಡಬೇಕು. ಇಲ್ಲವೆ ಪುಡಿಯನ್ನು ಸುಟ್ಟ ಸ್ಥಳದಲ್ಲಿ ( ಒಣಪುಡಿ ) ಉದರಿಸಬೇಕು. ವೇದನೆ ಕಡಿಮೆಯಾದ ಕೂಡಲೆ ಕಾಲೀಮೂರ ಕೊಡಲಾರಂಭಿಸಬೇಕು.

**ಕಾ. ಮ ೩:—** ದಗ್ಧವ್ರಣ ತುಂಬಿ ಬರುವದಕ್ಕೋಸ್ಕರ ಇದು ಉತ್ತಮ ಔಷಧವು. ಇದನ್ನು ವೇದನೆ ನಿಂತ ಕೂಡಲೆ ಹೊಟ್ಟೆಯಲ್ಲಿ ಕೊಡುವದು ಮತ್ತು ಹೊರಗಿನಿಂದ ಸಹ ಹಚ್ಚಬೇಕು. ಸ್ವಲ್ಪ ನೀರಿನಲ್ಲಿ ಪುಡಿಯನ್ನು (ಹೆಚ್ಚು ಪ್ರಮಾಣದಲ್ಲಿ) ಹಾಕಿ ಅದರಲ್ಲಿ ಬಟ್ಟೆಯನ್ನು ತೊಯಿಸಿ ಅದನ್ನು ಸುಟ್ಟ ಗಾಯಾದ ಸ್ಥಳದ ಮೇಲೆ ಇಟ್ಟು ಮೇಲಿಂದ ಮೇಲೆ ಅದನ್ನು ನೀರಿನಲ್ಲಿ ತೊಯಿಸುತ್ತ ಇರಬೇಕು.

**ಕಲ್ಕೆ. ಸ:** — ಕಾಲೀ ಮೂ. ದಿಂದ ಉಪಯೋಗವಾಗದೇ ಇದ್ದಲ್ಲಿ ಕೀವು ಆದಾಗ್ಗೆ ಇದನ್ನು ಕೊಡಬೇಕು. ಕೆಸೆಯಂಥ ದಟ್ಟ ಹಾಗೂ ಹಳದೀ ಬಣ್ಣದ ಕೀವು ಇದ್ದಲ್ಲಿ ನೇ. ಫಾ ಕೊಡಬೇಕು.

**ಉಪಯುಕ್ತ ಸೂಚನೆ:—** ಸಾಧಾರಣ ಸುಟ್ಟಿದ್ದರೆ ಸುಟ್ಟ ಭಾಗವನ್ನು ಕೆಲ ಮಿನಿಟುಗಳ ವರೆಗೆ ಬೆಂಕಿಯ ಹತ್ತರ ಹಿಡಿಯಬೇಕು. ಅಂದರೆ ಉರಿಯುವ ವೇದನೆಯೂ ಕಡಿಮೆ ಆಗುವದು. ಬಹಳ ಸುಟ್ಟಿದ್ದರೆ ಔಷಧದಲ್ಲಿ ಬಟ್ಟೆಯನ್ನು ತೋಯಿಸಿ ಇಡಬೇಕು. ಸುಟ್ಟ ನಂತರ ಶಕ್ಯ ವಿದ್ದಷ್ಟು ತೀವ್ರ ಒಳಗೆ ಹವೆ ಸೇರದಂತೆ ವ್ಯವಸ್ಥೆ ಇಡಬೇಕು. ಆದ್ದರಿಂದ ತೀವ್ರವಾಗಿ ತಾಗಿನ ಬಟ್ಟೆಯಾಗಲಿ ( lint ಲಿಂಟ ) ಹತ್ತಿಯ ಬಟ್ಟೆಯಾಗಲಿ ಔಷಧದ ನೀರಿನಲ್ಲಿ ಎದ್ದಿ ಗಾಯದ ಮೇಲೆ ಇಡಬೇಕು. ಬಟ್ಟೆ ಒಣಗದಂತೆ ಮೇಲಿಂದ ಮೇಲೆ ಔಷಧದ ನೀರನ್ನು ಅದರ ಮೇಲೆ ಸಿಡಿಸಬೇಕು. ಇತರ ತೀವ್ರ ರೋಗವಿದ್ದಲ್ಲಿ ಪ್ರಕೃತಿಯ ಮಾನ ನೋಡಿಕೊಂಡು ಔಷಧ ಯೋಚನೆ ಮಾಡಬೇಕು. ಜ್ವರ ಮುಂತಾದ ದಾಹದ ರೋಗಗಳಲ್ಲಿಯಂತೆ ಹಗುರ ಅನ್ನ ಕೊಡತಕ್ಕದ್ದು.

---

## ಶಿರೋಭ್ರಮಣ ( ತಲೆತಿರುಗುವದು )

**Vertigo.** **ವ್ಹರ್ಟಿಗೊ.**

ಮೆದುಳಿನಲ್ಲಿ ರಕ್ತಸಂಚಯು ಹೆಚ್ಚಾದ್ದರಿಂದಲೂ ಕಡಿಮೆಯಾದ್ದರಿಂದಲೂ ಶಿರೋಭ್ರಮಣದ ಭಾವನೆ ಉತ್ಪನ್ನವಾಗುವದು. ಮೆದುಳಿನ ಕವಚದಲ್ಲಿ ರಕ್ತದ ಗಲಿಬಿಲಿಯಾಗೋಣವೇ ಶಿರೋಭ್ರಮಣ, ಬವಳಿಯು; ಮೆದುಳು, ಶ್ರೋತ್ರೇಂದ್ರಿಯು, ಜಠರ ಇವುಗಳ ರೋಗಗಳಲ್ಲಿ ಬವಳಿ ಅಥವಾ ಶಿರೋಭ್ರಮಣವು ಕಂಡುಬರುವದು. ಪಿತ್ತಪ್ರಕೃತಿಯು ಜನರಲ್ಲಿ ಈ ಭಾವನೆಯು ಹೆಚ್ಚಾಗಿ ಕಂಡುಬರುವದು.

**ಫೇರಂ. ಫಾ:**— ತಲೆಯು ಕಡೆಗೆ ಭರದಿಂದ ರಕ್ತವು ಹೋಗಹತ್ತಿದ್ದರಿಂದ ಆಗುವ ಶಿರೋಭ್ರಮಣ; ಗಂಡಸ್ಥಲ ಪ್ರಾಂತದಲ್ಲಿಯ ನಾಡಿಗಳು ತಟತಟ ಹಾರುವವು. ಮುಖಚರ್ಯೆಯು ಕೆಂಪಾಗಿರುವದು; ತಲೆಯಲ್ಲಿ ವೇದನೆ; ಎದ್ದು ಕೂಡುವ ಕಾಲಕ್ಕೆ, ಉಂಡ ನಂತರ, ವಾಂತಿಯಾದ ನಂತರ ಸಹ ಬವಳಿ ಬರುವದು.

**ಕಾಲಿ. ಫಾ:**— ಅಶಕ್ತತೆಯಿಂದಲೂ ಮಾನಸಿಕ ವ್ಯಥೆಯಿಂದಲೂ ಶಿರೋಭ್ರಮಣವಾಗುವದು. ಏಳುವಾಗ, ಮೇಲೆ ನೋಡುವಾಗ ಇದರ ಭರವು ಹೆಚ್ಚಾಗುವದು. ಫೇ. ಫಾ. ದ ಜತೆಗೆ ಕೊಡಬೇಕು.

**ನೇಟ್ರಂ ಸ:**— ಪಿತ್ತಮೂಲಕ ಬವಳಿ (ಶಿರೋಭ್ರಮಣ). ಬಾಯಿ ಕಹಿ, ನಾಲಗೆ ಹಳದಿ; ಬವಳಿ ಬಂದು ಬಲಗಡೆಯ ಮಗ್ಗಲಿಗೆ ಬೀಳುವ ಅಂಜಿಕೆ ಇರುವದು. ಪಿತ್ತಾಧಿಕ್ಯ, ಅದರಿಂದ ಪಚನ ಶಕ್ತಿಯಲ್ಲಿ ವ್ಯತ್ಯಾಸ.

**ನೇ. ಫಾ:**— ನಿದ್ದೆ ಇರುವದಿಲ್ಲ. ನಾಲಗೆಯ ಮೇಲೆ ಅರಷಣ ಬಣ್ಣದ ಅಗ್ರ. ಆಮ್ಲಪಿತ್ತದ ಮೂಲಕ ಪಚನದ ಬಗ್ಗೆ ಇರುವ ಬೇನೆಗಳೂ ಅವುಗಳಿಂದಾಗುವ ಬವಳಿ.

**ಕಲ್ಕೆ. ಫಾ:**— ಪಚನದ ಬಗ್ಗೆ ಬಹಳ ರೋಗಗಳು ಪ್ರತ್ಯಕ್ಷವಿರುವದಿಲ್ಲ. ಆದರೂ ಅನ್ನ ಮೈಗೆ ಹತ್ತುವದಿಲ್ಲ. ಅದರಿಂದ ಆಗುವ ಅಶಕ್ತತೆ ಹಾಗೂ ಬವಳಿ ಇದ್ದಲ್ಲಿ ೧ × ಶಕ್ತಿಯ ಕಲ್ಕೆ. ಫಾ. ಕೊಟ್ಟಲ್ಲಿ ಉಪಯೋಗವಾಗುವದು.

**ಉಪಯುಕ್ತ ಸೂಚನೆ**:—ರಕ್ತಾಧಿಕ್ಯದಿಂದ ಬವಳಿ ಬರುವದಾದರೆ ತಲೆಯ ಮೇಲೆ ತಣ್ಣನ ನೀರಿನ ಬಟ್ಟೆ ಇಡಬೇಕು. ಹಾಗೂ ತಲೆ ಗಟ್ಟಿ ಬಿಗಿಯಬೇಕು. ಅಪಚನದ ಕಾಟ ದೂರಮಾಡಿಕೊಳ್ಳಬೇಕು. ಹಗುರ, ಪೋಷಕ ಅನ್ನ ಕೊಡಬೇಕು.

---

# ಮಧುಮೇಹ

**Diabetis.** **ಡಾಯಿಬಿಟಸ್.**

ಬಹುಮೂತ್ರ ಅಥವಾ ಮಧುಮೇಹವೆಂಬುವದೊಂದು ಪ್ರಾಕೃತಿಕ ರೋಗವು. ಇದರಲ್ಲಿ ಮೂತ್ರದೊಳಗಿಂದ ಸಕ್ಕರೆಹೋಗೋಣ, ಮೂತ್ರವು ಹೆಚ್ಚು ಆಗೋಣ, ರೋಗಿಯು ದಿನದಿನಕ್ಕೆ ಸೊರಗುತ್ತಹೋಗೋಣ, ಹಸಿವೆ ಬಹಳಾಗೋಣ ಮುಂತಾದ ಭಾವನೆಗಳು ಮುಖ್ಯವಾಗಿ ಇರುವವು. ಮೇಲಿಂದಮೇಲೆ ಮೂತ್ರಕ್ಕೆಹೋಗುವ ಪ್ರವೃತ್ತಿ. ಮೂತ್ರವು ಸ್ವಚ್ಛ ಬಿಳೇ ಬಣ್ಣದ್ದು ಇದ್ದು ಅದಕ್ಕೆ ಮಧುರ ವಾಸನೆ ಸಹ ಇರುವದು. ಮೂತ್ರಮಾಡಿದ ಸ್ಥಳದಲ್ಲಿ ಇರಿವೆಗಳು ಸಹ ಬರುವವು. ಮೂತ್ರವು ಬಹಳಾಗುವದು ಅಂದರೆ ( ೨೪ ತಾಸಿನಲ್ಲಿ ೧೨ ರಿಂದ ೪೦ ಸೇರಿನ ವರೆಗೆ ಆಗುವದು. ) ಒಂದು ಔಂಸ ( ೨॥ ತೊಲೆ ) ಮೂತ್ರದಲ್ಲಿ ೧೦ ರಿಂದ ೨೦ ಗುಂಜಿಯ ವರೆಗೆ ಸಕ್ಕರೆ ಇರುವದು. ೨೪ ತಾಸಿನ ಅವಧಿಯಲ್ಲಿ ಅರ್ಧ ಪೌಂಡಿನಿಂದ ೨ ಪೌಂಡಿನಷ್ಟು ಸಕ್ಕರೆ ಮೂತ್ರದಲ್ಲಿ ಇರುವದು. ಒಮ್ಮೊಮ್ಮೆ ಸಕ್ಕರೆ ಹೋಗುವದೂ ಇಲ್ಲ. ಆದರೆ ಬಹುತರವಾಗಿ ಅದು ಇದ್ದೇ ಇರುವದು. ಮೂತ್ರದಿಂದ ಹೋಗತಕ್ಕ ಇತರ ಕ್ಷಾರಗಳ (ಯೂರಿಯಾ, ಫಾಸ್ಫೇರಿ ಮುಂತಾದವುಗಳ ಸಂಖ್ಯೆಯೂ ಬೆಳದಿರುವದು.) ಮೊದಲು ಈ ರೋಗವಾದದ್ದು ಲಕ್ಷದಲ್ಲಿ ಸಹ ಬರುವದಿಲ್ಲ. ಮೆಲ್ಲಮೆಲ್ಲನೆ ಅಶಕ್ತವಾಗೋಣ, ಸೊರಗೋಣ, ನವಿಯೋಣ, ಈ ಭಾವನೆಗಳು ಕಂಡು ಬರುವವು. ಎಷ್ಟೋ ಸಾರೆ ಬಹಳ ನೀರಡಿಕೆ, ಹಸಿವೆ ಮತ್ತು ನಾಲಗೆಯೂ ತ್ವಚೆಯೂ ಒಣಗಿದ್ದಿರೋಣ— ಈ ಭಾವನೆಗಳು ಕಂಡುಬರುವವು. ಮೂತ್ರದಲ್ಲಿ ಬುರುಗು ಇರೋಣ, ಕೆಲಕಾಲ ಇಟ್ಟಲ್ಲಿ ಅದರಲ್ಲಿ ಕ್ರಿಮಿ

ಹುಟ್ಟೋಣವೂ ಇವು ಸಾಧಾರಣವಾಗಿ ಮಧುಮೇಹದ ಲಕ್ಷಣಗಳು. ಈ ಬೇನೆಯ ಪ್ರಕಾರಗಳು ಎರಡು. ಸೌಮ್ಯ ಮತ್ತು ಉಗ್ರ. ಮಧ್ಯಮ ವಯಸ್ಸಿನ ಸ್ಥೂಲಪ್ರಕೃತಿಯ ರೋಗಿಗಳಲ್ಲಿ ಸೌಮ್ಯಪ್ರಕಾರವಿರುವದು. ಇದರಲ್ಲಿ ಭಾವನೆಗಳ ಸ್ವರೂಪವೂ ಸೌಮ್ಯವೇ ಇರುವದು. ಉಣ್ಣು ತಿನ್ನುವದರಲ್ಲಿ ಪಥ್ಯ ಕಾಯ್ದುಕೊಂಡಿದ್ದಲ್ಲಿ ಸಹ ಮೂತ್ರದಲ್ಲಿಯ ಸಕ್ಕರೆಯ ಪ್ರಮಾಣವು ಇಲ್ಲದಂತಾಗಿ ರೋಗಿಗೆ ಆರಾಮವಾಗುವದು. ಇದಕ್ಕೆ ತಾತ್ಕಾಲಿಕ (ಸ್ವಲ್ಪ ಕಾಲದ) ಮಧುಮೇಹವೆನ್ನುವರು. (Transient glycozuria) ಉಗ್ರಸ್ವರೂಪದಲ್ಲಿ ಸಹ ಶೀಘ್ರ ಹಾಗೂ ದೀರ್ಘವೆಂಬ ಎರಡು ಪ್ರಕಾರಗಳಿರುವವು. ಶೀಘ್ರ ಮಧುಮೇಹ ಬಹುತರವಾಗಿ ತಲೆಗೆ ಅಪಘಾತವಾದ್ದರಿಂದಲೂ ಯಕೃತದ ವ್ಯತ್ಯಾಸದಿಂದಲೂ ತರುಣವಯಸ್ಸಿನಲ್ಲಿಯೂ ಸಣ್ಣಹುಡುಗರಲ್ಲಿಯೂ ಕಂಡುಬರುವದು. ದೀರ್ಘ ಮಧುಮೇಹವು ವಯಸ್ಸಾದವರಲ್ಲಿ ಕಂಡುಬರುವದು. ಮಾನಸಿಕಶ್ರಮ, ಚಿಂತೆ ಇವೇ ಮುಖ್ಯ ಕಾರಣಗಳು.

ತಿಸಸಿಸಲ್ಲಿಯ ದೋಷ, ಅಪಸ್ಮಾರದ ರೋಗ ಬಂದುಹೋದನಂತರ, ಆಗುವ ಅಶಕ್ತತೆ, ದುರ್ಗಿಬೇನೆಯಿಂದ ಬರುವ ಅಶಕ್ತತೆ, ಒಮ್ಮೊಮ್ಮೆ ಹಿಮ (ಚಳಿ) ಜ್ವರ, ಬಹಳ ದಿವಸದ ವೃಕ್ಕದಾಹ, ಯಕೃತಕ್ಕೆ ಆದ ಅಪಘಾತ, ಕರಳುಗಳಲ್ಲಿ ಆಗುವ ಕ್ಷೋಭ, ಮಸ್ತಿಷ್ಕಾಘಾತ, ಗರೋದರ ಸ್ಥಿತಿ ಮುಂತಾದವುಗಳು ಸ್ವಲ್ಪ ಕಾಲದ ಮಧುಮೇಹದ ಕಾರಣಗಳಿರುವವು.

ಸ್ತ್ರೀಯರಿಗಿಂತ ಗಂಡಸರಿಗೆ ಈ ರೋಗವು ಹೆಚ್ಚಾಗಿ ಆಗುವದು. ಇದು ಆನುವಂಶಿಕ ಸಹ ಇರುವದು. ಮೆದುಳು, ಪ್ಯಾಂಕ್ರಿಯಾ (ಅಗ್ನ್ಯಾಶಯ), ಯಕೃತ, ಕರುಳು, ಇವುಗಳ ರೋಗದಿಂದ ಈ ವಿಕೃತಿಯು ಉತ್ಪನ್ನವಾಗುವದು. ಇದರಲ್ಲಿ ಕ್ಷಯದ ಉಪದ್ರವವಾಗಿ ರೋಗಿಯು ಮರಣಹೊಂದುವನು. ಕುರು, ರಾಜಕುರು, ಪೈಣ ಮುಂತಾದ ತ್ವಗ್ರೋಗಗಳು ಸಹ ಆಗುವವು. ಮೋತಿಬಿಂದು, ಇತರ ಕಣ್ಣಿನ ರೋಗಗಳು ಸಹ ಆಗುವವು. ಅಶಕ್ತತೆ ಬೆಳೆಯುತ್ತಹೋಗುವದು. ಶರೀರಕ್ಕೆ ಬಾವು ಬರುವದು. ರಾಜಕುರುವಿನಲ್ಲಿ ರೋಗಿಗೆ ಬಹಳೇ ತಾಪವಾಗುವದು.

ರೋಗಿಯು ಬೇಶುದ್ಧ (ಅರಿವು ತಪ್ಪಿದವನು) ನಾಗುವನು. ಅದಕ್ಕೂ ಪೂರ್ವದಲ್ಲಿ ಮೂತ್ರವೂ ಸಕ್ಕರೆಯೂ ಕಡಿಮೆ ಆಗುವವು. ಅವರೋಧ ಏರುವದು, ಘುರಘುರಿಸುವದು, ಶ್ವಾಸವು ಸಾವಕಾಶವಾಗಿ ನಡೆಯೋಣ, ಮುಂತಾದ ತ್ರಿದೋಷದ ಭಾವನೆಗಳಾಗಿ ರೋಗಿಯು ಮರಣಹೊಂದುವನು. ಮಧುಮೇಹವಾದ ರೋಗಿಯ ಕುರು, ವ್ರಣ ಮುಂತಾದವು ತೀವ್ರ ಮಾಯುವದಿಲ್ಲ.

ಶರೀರದಲ್ಲಿ ಸಿದ್ಧವಾದ ಕಾರ್ಬಾನಿಕ ಆಸಿಡ (ಕರ್ಬಾಮ್ಲ) ವನ್ನು ಶರೀರದಿಂದ ಪುಪ್ಪುಸದ್ವಾರದಿಂದ ಹೊರಗೆ ದಬ್ಬುವದು ಅವಶ್ಯಕವಿರುವದು. ಕಾರ್ಬಾಮ್ಲವು ದುಗ್ಧಾಮ್ಲದ (Lactic acid) ಘಟಕವಿದ್ದು ದುಗ್ಧಾಮ್ಲದ ಪೃಥಕ್ಕರಣವಾಗಿ ಕಾರ್ಬಾಮ್ಲ ಮತ್ತು ನೀರು ಸಿದ್ಧವಾಗುವವು. ನೇ. ಘಾ. ದ ಯೋಗವಾಹಿ ಕ್ರಿಯೆಯಿಂದ ರಕ್ತದಲ್ಲಿ ಪೃಥಕ್ಕರಣವಾಗಿ ಕಾರ್ಬಾಮ್ಲವು ಬೇರೆಯಾಗುವದು. ನೇ. ಘಾ. ದ ಪ್ರಮಾಣವು ಕಡಿಮೆ ಇದ್ದಲ್ಲಿ ದುಗ್ಧಾಮ್ಲವು ಹೆಚ್ಚು ಪ್ರಮಾಣದಲ್ಲಿ ಸಂಚಿತವಾಗಿ ಉಳಿದು ಅದನ್ನು ಮೂತ್ರದ್ವಾರದಿಂದ ಹೊರಚಲ್ಲುವ ಪ್ರಯತ್ನ ನಡೆಯುತ್ತದೆ. ಆದ್ದರಿಂದ ಮೂತ್ರವು ಹೆಚ್ಚಿಗೆ ಆಗಿ ಮಧುಮೇಹ ಅಥವಾ ಬಹುಮೂತ್ರ ರೋಗ ಉಂಟಾಗುವದು ಎಂದು ಜೀವನ ರಸಾಯನ ಶಾಸ್ತ್ರಜ್ಞರ ಮತವು.

**ನೇ. ಸ:—** ಇದು ಉತ್ತಮ ಉಪಾಯವು. ಮೂತ್ರದಲ್ಲಿಯ ಸಕ್ಕರೆಯ ಪ್ರಮಾಣವನ್ನೂ ಕೃಶತೆಯನ್ನೂ ಕಡಿಮೆಮಾಡಲು ಇತರ ಔಷಧಗಳ ಸಂಗಡ ಸರ್ತಿಬದಲಿಸಿ ಕೊಡಬೇಕು.

**ಕಾ. ಘಾ:—** ನಿದ್ರೆಗೇಡು. ಮಾನಸಿಕ ದುರ್ಬಲತೆ; ಬಾಯಿ ಒಣಗುವದು; ಪ್ರಬಲ ಕ್ಷುಧೆಯು; ದುರ್ಗಂಧ ರೇಚವು ಇದ್ದಲ್ಲಿ.

**ಕಲ್ಕೆ. ಘಾ:—** ನೀರಡಿಕೆ, ಅಶಕ್ತತೆ, ಬಾಯಿ ಒಣಗುವದು, ಹೊಟ್ಟೆ ಜೊಳಜೊಳ ಇರುವದು. ಮೂತ್ರದ ಪ್ರಮಾಣವು ಹೆಚ್ಚು, ಉಪ್ಪುತಿನ್ನುವ ಇಚ್ಛೆ ಬಹಳ.

**ಕಾ. ಮ್ಯಾ:—** ಬಹಳೇ ಸೋತಂತೆ ಇರುವದು, ಮಾಂದ್ಯವು, ನಾಲಿಗೆಯು ಬಿಳೇದು ಇಲ್ಲವೇ ಬೂದಿಬಣ್ಣದ್ದು. ಶರ್ಕರೆಯುಕ್ತ ಮೂತ್ರವು ಬಹಳಾಗುವದು.

**ನೇ. ಮ್ಯೂ:—** ನೀರಡಿಕೆ ಬಹಳ; ಕೃಶತೆ, ಬಹುಮೂತ್ರ, ನಿದ್ದೆಗೇಡು; ಹಸಿವೆಯ ಅಭಾವವು; ಅತ್ಯಂತ ದಣಿವಿಕೆ, ಔದಾಸೀನ್ಯ ಮುಂತಾದ ಲಕ್ಷಣಗಳ ಮೇಲೆ. ದಿನಬಿಟ್ಟು ದಿನ ಹೆಚ್ಚಾಗುವದು. ತಲೆಯಲ್ಲಿ ಕಂಬಾರರು ಕಬ್ಬಿಣಬಡಿದಂತೆ ಶೂಲೆ.

**ಉಪಯುಕ್ತ ಸೂಚನೆ:—** ನೇ. ಫಾ. ದ ಪ್ರಮಾಣ ಕಡಿಮೆ ಯಾಗುವದು ಈ ರೋಗದ ಪ್ರಮುಖ ಕಾರಣವಿದ್ದರೂ ನೇ. ಸ. ವು ಈ ರೋಗದಲ್ಲಿಯ ಮುಖ್ಯ ಔಷಧವು. ಅದಕ್ಕೆ ಕಾರಣವೇನೆಂದರೆ— ನೇಟ್ರಂ. ಸ. ದಲ್ಲಿ ಶರೀರದಲ್ಲಿಯ ನೀರಿನ ಪ್ರಮಾಣವನ್ನು ನಿಯಮಿತ ಗೊಳಿಸುವ ಶಕ್ತಿಯು ಇದೆ. ಇದರಹೊರ್ತಾಗಿ ನೇ. ಸಲ್ಫದ ಅಸ್ತಿತ್ವದ ಮೂಲಕ ಪಿತ್ತವು ಗಟ್ಟಿಯಾಗುವದಿಲ್ಲ. ಮತ್ತು ಪ್ರಾಣವಾಯುವು ಶರೀರದಲ್ಲಿ ವೈಯಲ್ಪಟ್ಟಿದ್ದರಿಂದ ಶರ್ಕರೆಯ ವಿಘಟನವಾಗಿ ನೇ. ಸಲ್ಫದ ಪ್ರಮಾಣ ಕಡಿಮೆಯಾದಲ್ಲಿ ಶರ್ಕರೆಯು ಮೂತ್ರದ್ವಾರದಿಂದ ಹೊರಬೀಳು ವದು. ದುಗ್ಧಾಮ್ಲವೂ ಸಕ್ಕರೆಯೂ ಮೂತ್ರದಿಂದ ಹೊರಗೆ ಹೋಗು ತ್ತಿರುವದರಿಂದ ರಕ್ತದಲ್ಲಿಯ ರಕ್ತಕಣಗಳ ಮೇಲೆ ಪರಿಣಾಮವಾಗುವದು. ಆದರಿಂದ ಫೇ. ಫಾ. ಕ್ಷಾರವು ಕಡಿಮೆಯಾಗುವದು; ಅದನ್ನು ಪೂರೈಸಿ ಕೊಡಬೇಕಾದಲ್ಲಿ ಜ್ಞಾನತಂತುಗಳ ಮೇಲೆ ಒತ್ತಾಯವಾಗಿ ಕಾ. ಫಾ. ದ ಪ್ರಮಾಣವು ಕಡಿಮೆಯಾಗುವದು; ಅದರಿಂದ ರೋಗಿಗೆ ಮಾನಸಿಕ ದಣುವಿಕೆ ಬಹಳಾಗುವದು. ಆದ್ದರಿಂದ ಮಧುಮೇಹದ ಮೇಲೆ ನೇ. ಫಾ. ಫೇ. ಫಾ. ಕಾ. ಫಾ. ನೇ. ಸ. ಇವು ಮುಖ್ಯ ಔಷಧಗಳು. ನಿದ್ರೆಗೇಡಿನ ಮೇಲೆಯೂ ಹಸಿವೆ ಬಹಳಾಗುವದರ ಮೇಲೆಯೂ ಕಾ. ಫಾ ಇದೇ ಔಷಧವು. ನಿರುತ್ಸಾಹ, ನೈರಾಶ್ಯ ಇವುಗಳ ಮೇಲೆ ನೇ. ಮ್ಯೂ. ವನ್ನೇ ಕೊಡಬೇಕು. ಫೇ. ಫಾ. ನೇ. ಫಾ. ಹಾಗೂ ಕಾ. ಫಾ. ಈ ಮೂರೂ ಔಷಧಗಳನ್ನು ಕೂಡಿಸಿ ಕೊಡಲು ಅಡ್ಡಿಯಿಲ್ಲ. ಆದರೂ ನೇ. ಸ. ಮತ್ತು

ಸೇ. ಮೂ. ಇವುಗಳನ್ನು ಬೇರೆಬೇರೆ ಕೊಡುವದು ಹೆಚ್ಚು ವಿಹಿತ. ಮೇಲೆ ಹೇಳಿದ ಔಷಧಗಳ ಹೊರ್ತಾಗಿ ಕಲ್ಕೆ. ಸ. ಮತ್ತು ಕಾ. ಸ. ಇವು ಸಹ ಗುಣ ಕೊಡುವವು. ಹಾಗೂ ಜ್ವರದ ಭಾವನೆಗಳು ಇದ್ದು ನಾಡಿಯು ತೀವ್ರ ಹಾರುತ್ತಿದ್ದಲ್ಲಿ ಫೇ. ಫಾ. ಸಹ ಗುಣ ಕೊಡುವದು. ತೀವ್ರ ಸೊರಗುವದು, ಬಹಳ ಅಶಕ್ತತೆ, ಹಸಿವೆ ಕಡಿಮೆ ಆಗುವದು ಈ ಲಕ್ಷಣಗಳ ಮೇಲೆ ಕಲ್ಕೆ. ಫಾ. ವನ್ನು ಊಟವಾದ ಸರ್ತಿಗೊಮ್ಮೆ ಕೊಡಬೇಕು. ಅನ್ನವನ್ನು ಉಣಬಾರದು. ಜವೆಗೋದಿಯ (ಸಾತು) ಹಿಟ್ಟಿನ ಮೇಲೆಯೇ ಇರುವದು ವಿಹಿತ. ಈ ಬೇನೆಯಲ್ಲಿ ನೀರಲಹಣ್ಣಿನ ಉಪಯೋಗ ಬಹಳಾಗುವದು. ತಾಜಾ ನೀರಲ ಹಣ್ಣು ತೆಗೆದುಕೊಳ್ಳುವದರಿಂದಲೂ, ನೀರಲಹಣ್ಣಿನ ಆಸವ ಮುಂತಾದವುಗಳಿಂದಲೂ ಸಕ್ಕರೆಯ ಪ್ರಮಾಣವನ್ನು ಕಡಿಮೆಮಾಡಲಿಕ್ಕೆ ಬಹಳ ಉಪಯೋಗವಾಗುವದು. ನೀರಲಹಣ್ಣಿನ ಬೀಜದ ಚೂರ್ಣದ ಉಪಯೋಗವಾಗುವದು.

---

## ಕುತ್ತಿಗೆಸೆಟೆತ ಬೇನೆ

**Stiffness of neck.** ಸ್ಟಿಫ್‌ನೆಸ್ ಆಫ್‌ನೆಕ್.

ಕುತ್ತಿಗೆಯಲ್ಲಿಯ ಸ್ನಾಯುಗಳು ಸೆಟೆಯುತ್ತವೆ. ಅದರಿಂದ ಕುತ್ತಿಗೆಯನ್ನು ಅಲ್ಲಾಡಿಸಲಾಗದು. ಎಷ್ಟೋ ಸಾರೆ ಕುತ್ತಿಗೆಯು ಒತ್ತಟ್ಟಿಗೆ ತಿರಿವಿದಂತಾಗಿರುವದು. ಅದು ಆಸ್ಥಿತಿಯಲ್ಲಿ ಎಷ್ಟೋ ದಿವಸ ಇರುವದು. ಅತ್ತಕಡಿಯ ಸ್ನಾಯುಗಳ ಆಕುಂಚನವೇ ಅದರ ಕಾರಣ. ಇದೊಂದು ಸಂಧಿವಾತಜನ್ಯ ರೋಗವು.

ಥಂಡಿ ಮತ್ತು ಕುತ್ತಿಗೆ ಒಳೆಯುವದು ಇದರ ಕಾರಣಗಳು. ಈ ರೋಗದ ಮೇಲೆ ಫೇರಂಫಾಸವೇ ಮುಖ್ಯ ಔಷಧವು. ಬ್ಲಾವು, ನೋವು, ಮುಂತಾದವುಗಳಮೇಲೆ ಇದರ ಉಪಯೋಗವಾಗುವದು. ಮ್ಯಾ. ಫಾ. ವನ್ನು ಸಹ ಇದರ ಜತೆಗೆ ಕೊಡಬೇಕು. ತಿಕ್ಕುವದು, ಕಾಸುವದು, ಮುಂತಾದ ಯಾವಾಗಲೂ ಮಾಡತಕ್ಕ ಉಪಚಾರಗಳನ್ನು ಮಾಡಬೇಕು.

---

# ಮಲಬದ್ಧತೆ

**Constipation.** **ಕಾನ್‌ಸ್ಟಿಪೇಶನ್.**

ಶೌಚಕ್ಕೆ ಚನ್ನಾಗಿ ಆಗದಿರೋಣ, ಕಡಿಮೆ ಆಗೋಣ, ತೀರ ಆಗದಿರೋಣ, ಗಟ್ಟಿಯಾಗೋಣ ಮುಂತಾದ ಎಲ್ಲ ಪ್ರಕಾರಗಳು ಮಲಾವರೋಧಗಳೇ ಸರಿ. ಮಲಾವರೋಧದಿಂದ ತಲೆಭ್ರಮಣ, ತಲೆನೋವು, ಎದೆಯಲ್ಲಿ ಧಡ ಧಡಿಸುವದು, ವಾಯುವು ಹೋಗದಿರೋಣ, ರಕ್ತಮೂಲವ್ಯಾಧಿಯು ಆಗೋಣ, ನಿರುತ್ಸಾಹ, ಮ್ಲಾನತೆ, ಮುಂತಾದ ಬೇನೆಗಳೂ ಆಗುವವು. ಶೌಚಕ್ಕೆ ಆಗದ್ದರಿಂದ ಶರೀರದಲ್ಲಿ ಇತರ ರೋಗಗಳು ಹುಟ್ಟುತ್ತವೆ ಅದರಿಂದ ಬಹಳ ಕಷ್ಟವಾಗುವದು.

ಪಚನಕ್ಕೆ ಕಠಿಣವಾದ ಪದಾರ್ಥಗಳನ್ನು ಹೆಚ್ಚಿಗೆ ತಿಂದದ್ದರಿಂದ ಮಲವು ಗಟ್ಟಿಯಾಗುವದು. ಅದು ಬಹುಕಷ್ಟದಿಂದ ಹೊರಬೀಳುವದು. ಶ್ಲೇಷ್ಮಲ ತ್ವಚೆಯ ದೀರ್ಘದಾಹ ಮೂಲಕ ಅಲ್ಲಿಯ ಸ್ನಾಯುಗಳ ಪರಿವರ್ತನ ಕ್ರಿಯೆಯಲ್ಲಿ ದೋಷ ಉತ್ಪನ್ನವಾಗಿ ಶೌಚಕ್ಕೆ ಮೇಲಿಂದಮೇಲೆ ಹೋಗುವ ಪ್ರವೃತ್ತಿಯಾಗುವದು; ಮಾತ್ರ ಹೋದಲ್ಲಿ ಆಗುವದೇ ಇಲ್ಲ. ಬಹುದಿವಸ ಪರ್ಯಂತರ ಆದ ಅತಿಸಾರ, ರೇಚ, ಔಷಧ ಸೇವನೆ, ಶೌಚವನ್ನು ಬಹಳ ವೇಳೆ ತಡೆದು ಹಿಡಿಯೋಣ, ಪಾಂಡುರೋಗ, ಅಫುವಿನಂಥ ಸ್ತಂಭಕ ಪದಾರ್ಥಸೇವನೆ ಈ ಮುಂತಾದ ಕಾರಣಗಳ ಮೂಲಕ ಅವರೋಧವಾಗುವದು. ನೀರು ಸಾಕಷ್ಟು ಕುಡಿಯದಿರೋಣ, ಮೂತ್ರವೂ ಬೆವರೂ ಬಹಳ ಬರೋಣ, ರೋಗದನಂತರ ಬಂದ ಅಶಕ್ತತೆ, ವ್ಯಾಯಾಮದ ಅಭಾವವು, ಯಾವಾಗಲೂ ಕೂತುಕೊಂಡಿರೋಣ, ಮುಂತಾದವು ಸಹ ಅವರೋಧಕ್ಕೆ ಕಾರಣಗಳಾಗುವವು. ಪುರುಷರಕಿಂತ ಸ್ತ್ರೀಯರಲ್ಲಿ ಈ ರೋಗವು ಹೆಚ್ಚಾಗಿರುವದು.

**ನೇ. ಸ—ನೇ. ಫಾ:—** ಈ ಕ್ಷಾರಗಳು ಕಡಿಮೆಯಾದಲ್ಲಿ ಪಿತ್ತವು ಗಟ್ಟಿಯಾಗುತ್ತದೆ. ಇಲ್ಲವೆ ನೇಟ್ರಂಮೂರ ಕಡಿಮೆಯಾದಲ್ಲಿ, ಅದು ಶರೀರದಲ್ಲಿ ಸರಿಯಾಗಿ ಹಂಚಲ್ಪಡುವದಿಲ್ಲ. ಮೂತ್ರದ ಕರುಳುಗಳಲ್ಲಿಯ ಸ್ನಾಯುಗಳು ಸಡಿಲಾದ್ದರಿಂದ ಅಂದರೆ ಕಲ್ಕೆ. ಫ್ಲೊ. ಎಂಬ ಕ್ಷಾರ ಕಡಿಮೆ

ಯಾದ್ದರಿಂದ ಅವರೋಧವಾಗುವದು ಎಂದು ಜೀವನ ರಸಾಯನ ಶಾಸ್ತ್ರಜ್ಞರು ತಿಳಿಯುವರು.

**ಫೇ. ಫಾ:—** ಹೊಟ್ಟೆಯಲ್ಲಿ ಉಷ್ಣತೆ ಬೆಳೆದಿದ್ದರೆ ಮಲವು ಗಟ್ಟಿಯೂ ಒಣಗಿದಂತೆಯೂ ಆಗುವದು. ಮೂಲವ್ಯಾಧಿ, ವೈ ಹೊರಬೀಳುವದು ಮುಂತಾದ ರೋಗಗಳಲ್ಲಿ, ವಿಶೇಷತಃ ಪಾಂಡುರೋಗದಲ್ಲಿ ಮುಖ-ಚರ್ಯೆಯು ಕಳೆಗುಂದಿದಂತೆಯೂ ತೀವ್ರವಾಗಿ ಕೆಂಪಾಗುವಂಥಾದ್ದೂ, ಕೈಕಾಲುಗಳು ತಣ್ಣಗಾಗಿರುವದು, ಎದೆಯಲ್ಲಿ ಧಡ ಧಡಿಸುವದೂ ಇದ್ದರೆ.

**ಕಾ. ಮೂ:—** ಯಕೃತ ಮಾಂದ್ಯಮೂಲಕ ಪಿತ್ತಾಭಾವವಾದ್ದರಿಂದ ಮಲವು ಬಿಳೀ ಬಣ್ಣದ್ದಿರುವದು. ನಾಲಗೆಯು ಬೂದಿಬಣ್ಣದ್ದು ಇಲ್ಲವೆ **ಬಿಳೀ ಬಣ್ಣದ್ದು**. ಸ್ನಿಗ್ಧ ಪದಾರ್ಥಗಳು ಪಚನವಾಗುವದಿಲ್ಲ. ಕಣ್ಣಿನ ಗುಡ್ಡೆಗಳು ಮುಂದೆ ಬಂದಂತೆ ಕಾಣುವವು. ವ್ಯಾಯಾಮದ ಅಭಾವದಿಂದಲೂ ಕೂತುಕೊಂಡು ಇರುವದರಿಂದಲೂ ಆಗುವ ಅವರೋಧ.

**ನೇ. ಮೂ:—** ಕರಳುಗಳಲ್ಲಿ ಒದ್ದೆಯ ಅಭಾವದಿಂದಾಗುವ ಮಲಾವರೋಧವು. ಅನ್ನದ ಚೀಲವು ಶುಷ್ಕವಿರುವದು. ಇತರ ಎಲ್ಲ ದ್ವಾರಗಳಿಂದ (ಮೂಗು, ಬಾಯಿ, ಕಣ್ಣು ಮುಂತಾದವು) ಒಂದೇಸವನೇ ಸೋರುವವು. ತಲೆ ಜಡ, ಮಂದ ಹಾಗೂ ನೋಯುವದು. ಮಲವು ಕಪ್ಪು ಬಣ್ಣದ್ದು, ಒಣಗಿದ್ದು ಗಟ್ಟಿಯಾದದ್ದೂ ಇರುವದು. ಶೌಚದಕಾಲಕ್ಕೆ ಕಷ್ಟ. ಮಲವು ಬಿದ್ದನಂತರ ಗುದದ್ವಾರದಲ್ಲಿ ಕೊರೆದಂತೆ ವೇದನೆ. ನೀರಿನಲ್ಲಿ ಉಪ್ಪು ಹಾಕಿ ಆ ನೀರನ್ನು ಬಿಸಿದು ಕೊಡಬೇಕು. ಆನುವಂಶಿಕ, ಬಹು ಕಾಲದ, ಹಾಗೂ ಮೇಲಿಂದಮೇಲೆ ರೇಚಕ ಔಷಧದಿಂದ ಆಗುವ ಅವರೋಧವು.

**ನೇ. ಸ:—** ಪಿತ್ತದ ಲಕ್ಷಣಗಳು. ಗಟ್ಟಿ ಗಂಟುಳ್ಳ ಮಲ. ಗಟ್ಟಿ ಇಲ್ಲದ ಮಲ ಬೀಳ ಬೇಕಾದರೂ ಕಷ್ಟವಾಗುವದು. ಅದರಿಂದ ಒಮ್ಮೊಮ್ಮೆ ರಕ್ತ ಸಹ ಬೀಳುವದು. ನಂತರ ಸ್ವಲ್ಪ ಉರಿಯುವದು. ದುರ್ಗಂಧ ವಾಯುವು ಸರಿಯುವದು. ನೇ. ಸ. ವನ್ನು ಹೆಚ್ಚು ಪ್ರಮಾಣದಲ್ಲಿ ಕೊಟ್ಟಲ್ಲಿ ರೇಚಕದಂತೆ ಉಪಯೋಗವಾಗುವದು.

**ಕಲ್ಕೆ. ಫ್ಲೊ**:— ಮಲವಿಸರ್ಜನ ಶಕ್ತಿಯ ಅಭಾವವು. ಒಮ್ಮೊಮ್ಮೆ ಅದು ಕೂಡಿಕೊಂಡಿದ್ದಿರುವದು. ಒಮ್ಮೊಮ್ಮೆ ಬಾಹ್ಯೋಪಚಾರದಿಂದ ಮಲ ತೆಗೆದು ಹಾಕುವ ಪ್ರಸಂಗ ಸಹ ಬರುವದು. ಬಾಣಂತಿಯರಿಗೆ ಇದರಿಂದ ಹೆಚ್ಚು ಉಪಯೋಗವಾಗುವದು.

**ನೇ. ಫಾ**:— ಒಮ್ಮೆ ಅವರೋಧ ಒಮ್ಮೆ ಅತಿಸಾರ; ಚಿಕ್ಕಮಕ್ಕಳಿಗೆ ಅವರು ತಿನ್ನುವ ಅನ್ನದಲ್ಲಿ ಕೂಡಿಸಿ ಕೊಟ್ಟಲ್ಲಿ ಸೌಮ್ಯ ರೇಚದಂತೆ ಉಪಯೋಗವಾಗುವದು. ಆರು ತಿಂಗಳಿಗಿಂತ ಹೆಚ್ಚಿನ ವಯುಸ್ಸಿನ ಮಕ್ಕಳಿಗೆ ದಿನಾಲು ೫–೧೦ ಗ್ರೇನದಂತೆ ೩ ಸಾರೆ ಕೊಡುತ್ತಿರಬೇಕು.

**ಸಿ**:— ವಿಸರ್ಜನ ಶಕ್ತಿಯ ಅಭಾವ. ಹೊರಗೆ ಬಂದ ಮಲ ಸಹ ತಿರಿಗಿ ಒಳಗೆ ಹೋಗುವದು. ಪೌಷ್ಟಿಕ ಅನ್ನ ತಿನ್ನಲಿಕ್ಕೆ ಶಿಗದ್ದರಿಂದ ಸಣ ಮಕ್ಕಳಿಗೆ ಆಗುವ ಅವರೋಧ ಗರೋದರ ಸ್ಥಿತಿಯಲ್ಲಿ ಆಗುವಂಥಾದ್ದೂ ಪ್ರಸೂತಿನಂತರವೂ ಆಗುವ ಮಲಾವರೋಧ.

**ಕಾ. ಫಾ**:— ಬದ್ಧಕೋಷ್ಠ. ಮಲವು ಗಟ್ಟಿಯಾಗಿದ್ದು ಅದು ರಕ್ತ ಮಿಶ್ರಿತವೂ ಇರುವದು. ವಿಶೇಷವಾಗಿ ವೃದ್ಧರಿಗೆ ಇದರ ಉಪಯೋಗ ಬಹಳ. ಬವಳಿ, ತಲೆನೋವು, ಉದಾಸೀನತೆ ಈ ಭಾವನೆಗಳು ಇದ್ದಲ್ಲಿ ಇದರ ಉಪಯೋಗವಾಗುವದು.

**ಉಪಯುಕ್ತ ಸೂಚನೆ**:— ಹಣ್ಣುಹಂಪಲ ಹಾಗೂ ತೊಪ್ಪಲ ಪಲ್ಲೆ ಹೆಚ್ಚಾಗಿ ತಿನ್ನಬೇಕು. ಮಾಂಸಾಹಾರಿಗಳು ಮಾಂಸ ಬಿಡಬೇಕು. ಮಾದಕ ಪದಾರ್ಥ, ಹೋಳಿಗೆಯಂಥ ಜಡಾನ್ನ, ತಡಮಾಡಿ ಉಣ್ಣುವದು ಬಿಡಬೇಕು. ಅನ್ನವನ್ನು ಹಲ್ಲಿನಿಂದ ನುರಿಸಿ ನುರಿಸಿ ತಿನ್ನಬೇಕು. ಪ್ರಾತಃ ಕಾಲದಲ್ಲಿ ಸೂರ್ಯೋದಯದಕಿಂತ ಮೊದಲು ತಿರುಗಾಡಿ ಬರಬೇಕು. ಅದು ಬಹಳ ಹಿತಕರ. ಹೊಟ್ಟೆ ತಿಕ್ಕುವದೂ ಮರ್ದನಮಾಡುವದೂ, ಬದ್ಧಕೋಷ್ಠತೆಯನ್ನು ಕಳೆಯಲು ಸಹಾಯಕರವಾಗುವವು. ಶೌಚಕ್ಕೆ ತಪ್ಪದೆ ನಿಯಮಿತ ಕಾಲಕ್ಕೆ ಹೋಗಬೇಕು. ಮಲವು ಕೂಡಿಕೊಂಡಿದ್ದು ಬಹಳ ತ್ರಾಸವಾಗುತ್ತಿದ್ದರೆ ರೇಚಕ ಔಷಧದಕಿಂತ ಬಸ್ತಿಯನ್ನು ಕೊಡುವದೇ ವಿಹಿತ. ಅದರಿಂದ ತಾತ್ಕಾಳ ಸಮಾಧಾನವಾಗುವದು. ರೇಚಕ

ಔಷಧ ತೆಗೆದುಕೊಳ್ಳಲೇಬಾರದು. ಅದರಿಂದ ಕರಳುಗಳಲ್ಲಿ ಕ್ಷೋಭವು ಉತ್ಪನ್ನವಾಗಿ ಮೊದಲಿಗಿಂತ ಹೆಚ್ಚಿಗೆ ತಾಪವಾಗುವದು. ಕ್ಷಾರ ಔಷಧಗಳನ್ನು ಹೊಟ್ಟೆಯಲ್ಲಿ ಕೊಟ್ಟು ಅವಶ್ಯಕಂಡಲ್ಲಿ ಬಸ್ತಿಯನ್ನು ಕೊಟ್ಟು ರೋಗವನ್ನು ಕಳಕೊಳ್ಳಬೇಕು. ರಾತ್ರಿಯಲ್ಲಿ ಮಲಗುವಾಗ ಬಿಸಿನೀರು ಕುಡಿಯುವದರಿಂದ ಹಿತಾವಹವಿರುವದು. ಊಟಕ್ಕಿಂತ ಮೊದಲು ಒಂದು ಪಂಚಪಾತ್ರಿಯಷ್ಟು ಬಿಸಿನೀರು ಮತ್ತು ೨೪ ತಾಸಿನ ಅವಧಿಯಲ್ಲಿ ಬಹಳಷ್ಟು ತಂಣೀರು ಕುಡಿದದ್ದರಿಂದ ಅವರೋಧದ ತಾಪವಾಗಲಾರದು. ಬಹು ದಿವಸದ ಅವರೋಧವಿದ್ದಲ್ಲಿ ಔಷಧದ ಕ್ರಿಯೆಯು ಪ್ರಾರಂಭವಾಗಿ ಅದರ ಪರಿಣಾಮ ಆಗಲಿಕ್ಕೆ ಹತ್ತುವ ಪೂರ್ವದಲ್ಲಿ ಅವರೋಧದ ತಾಪ ತಪ್ಪಿಸುವದರ ಸಲುವಾಗಿಯೂ, ರೇಚಕ ಔಷಧ ತೆಗೆದುಕೊಳ್ಳುವ ಪ್ರಸಂಗ ತಪ್ಪಿಸುವದರಸಲುವಾಗಿಯೂ ಉಗುರುಬೆಚ್ಚಗಾಗಿರುವ ನೀರಿನಲ್ಲಿ ಉಪ್ಪು ಹಾಕಿ ಅದರ ಬಸ್ತಿ ಕೊಟ್ಟಲ್ಲಿ ಮುಂದಿನ ತಾಪವು ಆಗುವದಿಲ್ಲ.

---

## ಮಹಾಮಾರಿ ( ದುರ್ಗೀಬೇನೆ )

**Cholera.** ಕಾಲೆರಾ.

ದುರ್ಗೀಬೇನೆಯು ಭಯಂಕರ ಸಾಂಸರ್ಗಿಕ ಪಿಡುಗು. ಭಯಂಕರ ರೇಚಗಳೂ ಭಯಂಕರ ವಾಂತಿಗಳೂ, ಸೆಟೆಯುವದೂ, ಶಕ್ತಿಪಾತವೂ ಮೂತ್ರಕ್ಕೆ ಕಡಿಮೆಯಾಗುವದೂ ಒಮ್ಮೊಮ್ಮೆ ಆಗದಿರೋಣವೂ - ಇವೇ ಮುಂತಾದವು ಇದರ ಪ್ರಮುಖ ಲಕ್ಷಣಗಳು. ಬಹುತರವಾಗಿ ಬೇನೆಯ ಪ್ರಾರಂಭವು ಬಹು ಭರದಿಂದಾಗುವ ರೇಚದಿಂದಲೇ ಆಗುವದು. ಒಮ್ಮೊಮ್ಮೆ ಒಮ್ಮಿಂದೊಮ್ಮೆ ಮಳಮಳಿಸಲಿಕ್ಕೆಹತ್ತಿ ಹೊಟ್ಟೆಮುರಿಯುವ ಲಕ್ಷಣಗಳೂ ಇರುವವು. ರೇಚಗಳು ಭರದಿಂದಾಗುವವು. ಅದರಿಂದ ರೋಗಿಯು ತೀರ ಸೋತು ಹೋಗುವನು. ರೇಚಗಳು ನೀರಿನಂತೆ ತೆಳ್ಳಗಾಗಿರುವವು. ಮುಂದೆ ಅವು ಅಕ್ಕೀಕಚ್ಚಿನಂತೆ ಬೆಳ್ಳಗಾಗುವವು. ಒಮ್ಮೊಮ್ಮೆ ದುರ್ಗಂಧ, ಹಸರು ಹಳದೀ ಒಣ್ಣದ್ದು ಸಹ ಇರುವವು. ನೀರಿನಂತೆ ತೆಳ್ಳನ ವಾಂತಿಗಳೂ ಆಗುವವು. ತಿಂದದ್ದೆಲ್ಲ ತಿರಿಗಿ ಬೀಳುವದು.

ಕೈಕಾಲುಗಳು ತಂಣಗಾಗುವವು. ಪಿಂಡರಿಗಳಲ್ಲಿಯೂ ಕೈಕಾಲುಗಳಲ್ಲಿಯೂ ವಟ್ಟಿಗಳು ಬರುವವು. ಮೂತ್ರವು ಸ್ವಲ್ಪಾಗುವದು ಒಮ್ಮೊಮ್ಮೆ ತೀರ ಆಗುವದೇ ಇಲ್ಲ. ನೀರಡಿಕೆ ಬಹಳ. ಒಮ್ಮಿಂದೊಮ್ಮೆ ಅಶಕ್ತತೆಯು ಬಹಳಾಗುವದು. ಅದರಿಂದ ಧ್ವನಿಯು ಒಳಗೆ ಎಳೆದಂತೆ ಆಗುವದೂ ಅಸ್ಪಷ್ಟವೂ ಆಗುವದು. ರೋಗಿಗೆ ಸಾಯುವ ವರೆಗೆ ಅರಿವು ಇರುವದು. ಕೈಕಾಲುಗಳು ತಣ್ಣಗಾಗುವವು. ತುಟಿ, ಉಗುರು ಮುಂತಾದವುಗಳು ಕಪ್ಪಾಗುವವು. ದಣಿಕೆ ತರುವಂಥ ಜಿಗಟು, ತಂಪು ಬೆವರು ಬಹಳ ಬರುವದು. ಕೈಕಾಲು ಉರಿಯುವವು. ನಾಡಿಯು ಬಹಳ ಮಂದ ವಾಗುವದು. ಕೈಗೆ ಸಹ ಹತ್ತುವದಿಲ್ಲ. ಶ್ವಾಸೋಚ್ಛ್ವಾಸವು ಭರ ದಿಂದಾಗಲಾರಂಭಿಸುತ್ತದೆ. ಕಣ್ಣುಗಳು ಒಳಗೆ ನಟ್ಟಂತೆ ಆಗುವವು. ಗಲ್ಲಗಳು ಕೂತು ಹೋಗುವವು. ತ್ವಚೆಯು ನಿರಿಗಿಗಟ್ಟಿದ್ದು—ಮುಂತಾದ ಲಕ್ಷಣಗಳು ಇರುವವು. ರೋಗಿಯನ್ನು ನೋಡಿದ ಕೂಡಲೆ ಅವನು ಮೃತ್ಯು ದವಡಿಯಲ್ಲಿ ಸಿಕ್ಕಂತೆ ಅವನ ಬಗ್ಗೆ ನಿರಾಶೆಯು ಕಾಣುವದು. ಒಮ್ಮೊಮ್ಮೆ ರೋಗವು ಬಹಳೇ ಭಯಂಕರ ಸ್ವರೂಪದ್ದು ೨।೩ ರೇಚಗಳಾದ ಕೂಡಲೆ ಅವನು ಮೃತ್ಯುಪಥಕ್ಕೆ ಹತ್ತಿದಂತೆ ಕಾಣುವನು. ರೋಗಿಯು ಹೆಚ್ಚು ಹೆಚ್ಚು ಕಾಲ ಬದಕಿದರೆ ಅವನು ಬದಕುವ ಆಶೆ ಹೆಚ್ಚೆಂದು ತಿಳಿಯುವದು. ಮೂತ್ರವಾಗೋಣ, ಶರೀರದಲ್ಲಿ ಉಷ್ಣತೆ ಬರೋಣ, ನಾಡಿಯು ಕೈಗೆ ಹತ್ತೋಣ,— ಇವು ಶುಭಚಿನ್ಹಗಳೆಂದು ತಿಳಿಯುವದು. ಮೊಳಕಾಲು ಮಡಿಚಿ ಕಾಲು ಊರಿ ಆದರ ಮೇಲೆ ಎರಡನೇ ಕಾಲು ಇಟ್ಟುಕೊಂಡು ಮಲಗೋಣ,— ಈ ಲಕ್ಷಣವು ಈ ರೋಗದಲ್ಲಿ ಕಂಡು ಬಂದರೆ ರೋಗಿಯು ಬದಕುವದಿಲ್ಲವೆಂದು ತಿಳಿಯಬೇಕು. ಕರೇ ಬಣ್ಣದ ವಾಂತಿಯೂ, ಕೆಂಪು ಬಣ್ಣದ ರೇಚವೂ— ಅಶುಭ ಚಿನ್ಹಗಳೆಂದು ತಿಳಿಯಬೇಕು.

ಮಹಾಮಾರಿಯ ಜಂತುಗಳು ಇದ್ದಂಥ ಅನ್ನವಾಗಲಿ ನೀರಾಗಲಿ ಉಪಯೋಗಮಾಡಿದಲ್ಲಿ ರೋಗವು ಆಗುವದು.

**ಫೇ ಘಾ**:— ಮಹಾಮಾರಿಯಲ್ಲಿ ಜ್ವರವಿದ್ದರೆ ಮೇಲಿಂದ ಮೇಲೆ ನೀರಿನಂಥ ತೆಳ್ಳನ ಹಾಗೂ ಅನ್ನಮಿಶ್ರಿತ ರೇಚವಾಗುತ್ತಿದ್ದರೆ ಒಮ್ಮೊಮ್ಮೆ

ರಕ್ತದಂಥ ಕೆಂಪು ರೇಚಗಳು ಸಹ ಆಗುವವು. ಸಂಣ ಮಕ್ಕಳ ಪಟಕಿ, ಜ್ವರ, ನೀರಡಿಕೆ, ಅನ್ನದ ವಾಂತಿಗಳು, ರೇಚ, ಕಣ್ಣುಮುಚ್ಚಿಹಾಕುವದು, ಕನಕರಿಸುವದು, ಭ್ರಮ, ಬಡಬಡಿಸುವದು, ಒಂದು ಮಗ್ಗಲ ಮೇಲಿಂದ ಮತ್ತೊಂದು ಮಗ್ಗಲ ಮೇಲೆ ಉಳ್ಳಾಡುವದು, ಮುಂತಾದ ಭಾವನೆಗಳು ಇದ್ದರೆ ಎರಡನೇ ಔಷಧಗಳ ಜತೆಗೆ ಇದನ್ನು ಕೊಡುವದು.

**ಕಾ. ಫಾ:—** ಹೊಲಸು ದುರ್ಗಂಧ ರೇಚ, ನೀರಿನ ಕಚ್ಚಿನಂತೆ ಬಿಳೇ ರೇಚ, ಒಮ್ಮೊಮ್ಮೆ ರಕ್ತದಂತೆ ಕೆಂಪು ರೇಚಗಳಿರುವವು. ಒಮ್ಮೊಮ್ಮೆ ಕರೇ ರೇಚವಿರುವವು. ಮತ್ತು ಅದರ ಸಂಗಡ ಹಳದಿ ಹಸರು ಜಿಗಟು ಸಹ ಬೀಳುವದು. ರೇಚಗಳು ಬಹಳ ಭರದಿಂದಲೂ ಆಗುವವು. ನೀಲಿ ಬಣ್ಣದ್ದೂ, ಹಸರೂ, ಹಳದಿ, ದುರ್ಗಂಧ ವಾಂತಿಯೂ ಆಗುವದು. ಹೊಟ್ಟೆಯಲ್ಲಿ ವೇದನೆ, ಭರದಿಂದ ಜ್ವರ ಬಂದು ಕಣ್ಣುಮುಚ್ಚುಬಡೆಯು ವವು. ಶಕ್ತಿಪಾತ; ಮುಖಚರ್ಯೆಯು ಕರೇದು, ನೀಲವರ್ಣದ್ದು. ಮುಖದ ಮೇಲೆ ಪ್ರೇತಕಳೆ, ನಾಡಿಯು ಮಂದವೂ ನಿಃಶಕ್ತವೂ ಇರುವದು. ನಾಡಿಯು ಕೈಗೆ ಹತ್ತವದೇ ಇಲ್ಲ.

**ನೇಟ್ರಂ. ಸ:** — ಪ್ರತಿಬಂಧಕವೆಂದು ಇದರ ಉಪಯೋಗವಾಗು ವದು. ರಕ್ತದಲ್ಲಿ ಹೆಚ್ಚಾದ ನೀರಿನ ಪ್ರಮಾಣವನ್ನು ಶೋಷಣಮಾಡಿ ಕೊಳ್ಳುವದಕ್ಕೋಸ್ಕರ ರೋಗಪ್ರತಿಹಾರಕವೆಂದು ಕೊಡಬೇಕು. ನಾಲಗೆಯ ಕೆಳಭಾಗದಲ್ಲಿ ಮಣ್ಣಿನಂಥ, ಹಸರು, ನಸುಗೆಂಪು ಅಗ್ರವಿದ್ದಲ್ಲಿ ಬಾಯಿಗೆ ಕಹಿ ರುಚಿ, ಹುಳಿ, ಹಸರು, ತಿಳಿ, ಕರೇ, ಹಳದಿ ರೇಚಗಳು. ಹುಳಿ ಪಿತ್ತದ ವಾಂತಿಯು. ಜಂತಿನ ಮೂಲಕ ಆಗುವ ಪಟಕಿ.

**ಮ್ಯಾ. ಫಾ:—** ಹೊಟ್ಟೆಯು ಬಹಳೇ ಮುರಿಯುವದು. ಜೋರಿ ನಿಂದಲೂ ಒಮ್ಮಿಂದೊಮ್ಮೆ ಆಗುವ ರೇಚ; ಒಂದೇಸವನೆ ಹಗಲಿರಳು ವಾಂತಿಯಾಗುವವು. ಬಿಕ್ಕು. ನೀರಿನಂತೆ ತಿಳಿ ರೇಚ ಹೊಟ್ಟೆಶೂಲೆ, ಮೈ ಎಲ್ಲ ವಟ್ಟೆಗಳು ( ಹೊಟ್ಟೆಯಲ್ಲಿ ಪಿಂಡರಿಗಳಲ್ಲಿ )

**ನೇ. ಫಾ:—** ಹುಳಿ, ಹಸರು ರೇಚ; ಜಂತುಗಳಿದ್ದಲ್ಲಿ; ಆಮ್ಲ ಪಿತ್ತ. ಪಚನಶಕ್ತಿಯು ಕ್ಷೀಣವಾದದ್ದು. ಕಸಕು ಹಂಣು ತಿಂದದ್ದ

ರಿಂದಾಗುವ ಪಟಿಕಿಯಂಥ ರೇಚ ನಾಲಿಗೆಯು ಹಳದಿ; ಹುಳಿ ವಾಂತಿಯೂ ಮತ್ತು ಇತರ ಆಮ್ಲಪಿತ್ತದ ಲಕ್ಷಣಗಳು ಇದ್ದಲ್ಲಿ.

**ಕಲ್ಕೆ. ಫಾ:**— ಹಲ್ಲುಬರುವಾಗ ಶೋಷಣಕ್ರಿಯೆಯು ಚೆನ್ನಾಗಿ ಇಲ್ಲದ ಹಾಗೂ ಬೆಳಿಗೆ ನಿಂತ ಅಶಕ್ತ ಮಕ್ಕಳಿಗೆ ಆಗುವ ಪಟಕಿಯಂಥ ರೇಚದಮೇಲೆ. ರೇಚವು ಸಪ್ಪಳದಿಂದಲೂ, ಜೋರಿನಿಂದಲೂ, ದುರ್ಗಂಧ ಯುಕ್ತವೂ, ಬಿಸಿಯೂ, ನೀರಿನಂತೆ ತಿಳಿಯೂ ಇದ್ದಲ್ಲಿ ರೇಚವು ಒಮ್ಮೊಮ್ಮೆ ಹಸರು ಹಳದಿ ಅಪಕ್ವ ಅನ್ನಮಿಶ್ರಿತವೂ ಇರುವದಾದರೆ ತಂಣೀರು ಕುಡಿದಲ್ಲಿ ಕಾರಿಹೋಗುತ್ತಿದ್ದರೆ.

**ಕಾ. ಸ:**— ಹಳದಿ, ತಿಳಿ ರೇಚವು ಕರಳುಗಳಲ್ಲಿ ವಟ್ಟೆಗಳು ಜ್ವರವಿದ್ದು ಬೆವರು ಬಾರದಿದ್ದರೆ ಮೂಲಾರಂಭದಿಂದ ಇದರ ಜತೆಗೆ ಕಾಲೀ ಫಾಸನ್ನು ಕೊಡಬೇಕು.

**ನೇ. ಮೂ:**— ಭ್ರಮ. ತುಟಿಯಲ್ಲಿಯೇ ವಟವಟಿಸುವದು, ಕಂಣು ಮುಚ್ಚುಹಾಕುವದು ಮುಂತಾದ ವಾತದ ಭಾವನೆಗಳು ಇದ್ದಲ್ಲಿ.

**ಉಪಯುಕ್ತ ಸೂಚನೆ:**— ಫೇರಂ. ಫಾ. ಕಾಲೀ ಫಾ; ಮ್ಯಾ ಫಾ. ಇವೇ ಈ ರೋಗದಲ್ಲಿಯ ಪ್ರಮುಖ ಔಷಧಗಳು. ಅವು ೫-೧೫ ಮಿನಿಟಿ ಗೊಮ್ಮೆಯಂತೆಯೂ ಅವಶ್ಯವಿದ್ದಲ್ಲಿ ಅದಕ್ಕೂ ತೀವ್ರವಾಗಿ ಕೂಡಿಸಿ ಆಗಲಿ ಬೇರೆಬೇರೆಯಾಗಲಿ ಒಂದರಸಂತರ ಮತ್ತೊಂದು ಹೀಗೆ ಒಂದೇಸವನೆ ಕೊಡಬೇಕು. ನೇಟ್ರಂ ಸ. ವನ್ನು ಪ್ರತಿಬಂಧಕವೆಂದು ಕೊಡಬೇಕು. ರೋಗವು ಆದಕೂಡಲೆ, ಫೇ. ಫಾ, ಕಾ. ಸ; ಮತ್ತು ವಟ್ಟೆಗಳ ಸಲುವಾಗಿ ಮ್ಯಾ. ಫಾ. ಕೊಡಬೇಕು. ೨೪ ತಾಸಗಳಾದ ಸಂತರ ಫೆ. ಫಾ. ಕಾ. ಫಾ. ಮತ್ತು ಮ್ಯಾ. ಫಾ. ಇವುಗಳನ್ನು ಕೂಡಿಸಿ ಮತ್ತು ನೇ. ಮೂ. ವನ್ನೂ ಸ್ವತಂತ್ರದಿಂದ ಸರ್ತೆ ಮೇಲೆ ಕೊಡಬೇಕು. ರೋಗಿಯು ಬೇಡಿದಷ್ಟು ನೀರು ಕೊಡಬೇಕು. ಹೊಟ್ಟೆಯಲ್ಲಿ ನೀರು ಹೆಚ್ಚು ಹೋದ್ದರಿಂದ ಅಪಾಯವಾಗುವದೆಂದು ಹೆದರುವ ಕಾರಣವಿಲ್ಲ. ನೀರಿನ ಹೊರತು ಇತರ ಯಾವದೇ ಅನ್ನ ಯಾವದೇ ಕಾರಣದಿಂದ ಕೊಡಬಾರದು. ಇಂಥ ಪ್ರಸಂಗ ದಲ್ಲಿ ನೀರೇ ಅನ್ನವು. ರೇಚ, ವಾಂತಿಗಳು ನಿಂತ ಸಂತರ ಜವೆಗೋಧಿ

(ಸಾತು) ಯ ನೀರು ಇಲ್ಲವೆ ಸಾವಿಯ ಅರಳಿನ ನೀರು, ತೆಳ್ಳನ ಸಾಬುದಾಣೆ ಇವುಗಳನ್ನು ಕೊಡಲಾರಂಭಿಸಬೇಕು. ಅದೂ ಪಚನವಾಗುವದೆಂದು ತಿಳಿದ ನಂತರ ಮಜ್ಜಿಗೆ, ಹಾಲು, ಹಣ್ಣುಹಂಪಲ ಮುಂತಾದವುಗಳನ್ನು ಕೊಡಬೇಕು. ಮುಂದೆ ಶಕ್ತಿಯು ಬೆಳೆಯುತ್ತ ಹೋದಂತೆ ಪಚನಶಕ್ತಿಗನುಸರಿಸಿ ಮೆಲ್ಲಮೆಲ್ಲನೆ ಅನ್ನ ಮತ್ತು ಯಾವಾಗಲು (ವಾಡಿಕೆಯಾಗಿ) ತಿನ್ನುವ ಇತರ ಊಟವನ್ನು ಕೊಡಲಿಕ್ಕೆ ಅಡ್ಡಿ ಇಲ್ಲ. ಈ ರೋಗದಲ್ಲಿ ಊಟದ ಬಗ್ಗೆ ದುರ್ಲಕ್ಷ ಮಾಡಿ ಅನ್ನ ಮುಂತಾದ್ದನ್ನೂ ತಿನ್ನಲಿಕ್ಕೆ ಕೊಟ್ಟರೆ ರೋಗವು ಮರಕಳಿಸಿ ಬರುವ ಸಂಭವವಿರುವದು. ಶಕ್ತಿಯು ಚನ್ನಾಗಿ ಬರುವವರೆಗೆ ರೋಗಿಗೆ ಹಾಸಿಗೆಯಮೇಲಿಂದ ಏಳಗೊಡಬಾರದು.

---

# ಮಸ್ತಿಷ್ಕ ಘಾತ

**Concussion of the Brain.** ಕಂಕಶನ್ ಆಫ್ ದಿ ಬ್ರೇನ.

ತಲೆಗೆ ಪೆಟ್ಟು, ಗಾಯ, ಇಲ್ಲವೆ ಏನಾದರು ಜಡ ( ಭಾರವುಳ್ಳ ) ಪದಾರ್ಥ ಹತ್ತಿದಲ್ಲಿ, ಗಿಡದ ಮೇಲಿಂದಾಗಲಿ ಮತ್ತೇನಾದರೂ ಎತ್ತರದ ಮೇಲಿಂದಾದರೂ ಬಿದ್ದದ್ದರಿಂದ ಮೆದುಳಿಗೆ ಧಕ್ಕೆ ತಗಲಿ ಇಲ್ಲವೆ ರಕ್ತನಲಿಕೆಯು ಒಡೆದು ಅಥವಾ ಎಲುಬು ಒಳಗೆ ಸಿಲುಕಿ ಮೆದುಳಿನ ಮೇಲೆ ಒತ್ತಾಯವಾಗುವದು. ಅದರಿಂದ ರೋಗಿಯು ಅರಿವುತಪ್ಪಿ ಬೀಳುತ್ತಾನೆ. ಧಕ್ಕೆ ತಗಲಿದರೆ ಅರಿವು ತಪ್ಪಿದ ಸ್ಥಿತಿಯಿಂದ ಜಾಗೃತಗೊಳಿಸಲು ಒಮ್ಮೊಮ್ಮೆ ಶಕ್ಯವಿದೆ. ಒತ್ತಾಯವಾಗಿದ್ದಲ್ಲಿ ರೋಗಿಯು ಜಾಗೃತಾವಸ್ಥೆ ಹೊಂದುವದಿಲ್ಲ. ಧಕ್ಕೆ ಹತ್ತಿದ ಸ್ಥಿತಿಯಲ್ಲಿ ಒಮ್ಮೊಮ್ಮೆ ಮೂತ್ರವಾಗುವದು. ಒತ್ತಾಯವಾದ ಕಾಲಕ್ಕೆ ಮೂತ್ರವು ಆಗುವದೇ ಇಲ್ಲ.

ಒಮ್ಮೊಮ್ಮೆ ರೋಗಿಯು ಎರಡೆರಡು, ಮೂರುಮೂರು ದಿವಸ ಅರಿವು ತಪ್ಪಿದ ಸ್ಥಿತಿಯಲ್ಲಿ ಇರುವನು. ಶುದ್ಧಿಯ ಮೇಲೆ ಬಂದನಂತರ ಕೈಕಾಲು ಅಲ್ಲಾಡಿಸಹತ್ತುವನು. ವಾಂತಿಯಾಗುವದು ಪುನಃ ಅರಿವು ತಪ್ಪುವದು. ಪುನಃ ಶುದ್ಧಿಯ ಮೇಲೆ ಬರುವನು. ಹೀಗೆ ನಡೆಯುವದು.

ಗೊಂಬೆಗಳು ಆಕುಂಚನಹೊಂದುತ್ತವೆ. ನಿದ್ದೆಹತ್ತುವದಿಲ್ಲ. ಸ್ವಭಾವವೂ ಚಿರಡಿಖೋರವಾಗುವದು. ಅವರೋಧವಿರುವದು. ರೋಗಿಯು ಹೆದರಿಕೆ ಯಿಂದ ಚೀರಾಡುವನು. ರೋಗವು ಹೆಚ್ಚಾದ ಸ್ಥಿತಿಯಲ್ಲಿ ಮಲವೂ ಮೂತ್ರವೂ ತಾವಾಗಿಯೇ ಆಗುತ್ತವೆ. ತಲೆನೋವು ನಿಲ್ಲುವದು ಶುಭ ಲಕ್ಷಣವೆಂದು ತಿಳಿಯಬೇಕು. ನಾಡಿಯು ಒಂದೇಸವನೆ ತೀವ್ರ ಹಾರು ವದು ಅನಿಷ್ಟ ಲಕ್ಷಣವು. ಸಣ್ಣ ಮಕ್ಕಳಲ್ಲಿ ಈ ರೋಗವು ಹೆಚ್ಚಾಗಿ ಕಂಡುಬರುವುದು. ರೋಗಿಯು ನೆಟ್ಟಗಾದನಂತರ ಕರ್ಣಬಧಿರತೆಯೂ ದೃಷ್ಟಿಮಾಂದ್ಯವೂ ಮುಂತಾದ ಲಕ್ಷಣಗಳು ಉಳಿಯುವವು. ಉಗ್ರಸ್ವರೂ ಪದ ಬೇನೆಯಲ್ಲಿ ರೋಗಿಯು ಒಂದೆರಡು ದಿವಸದಲ್ಲಿಯೇ ಮರಣ ಹೊಂದುವನು. ಸಾಮ್ಯ ಸ್ವರೂಪದ ಬೇನೆಯಲ್ಲಿ ನೆಟ್ಟಗಾಗಲಿಕ್ಕೆ ಒಂದೆರಡು ವಾರಗಳು ಹತ್ತುವವು. ಸಣ್ಣ ಮಕ್ಕಳಿಗೆ ಈ ರೋಗವಾದಲ್ಲಿ ಮಗುವೂ ಹಲ್ಲುಗಟಗರಿಸುವದು, ಚೀರಾಡುವದು. ಹಾಗೂ ಕುತ್ತಿಗೆಯನ್ನು ಒಂದೇ ಸವನೆ ಅಲ್ಲಾಡಿಸುವದು.

ಅಪಘಾತ, ಬಿಸಲಿನಲ್ಲಿ ತಿರುಗಾಡುವದು, ಮಾನಸಿಕಶ್ರಮ, ಶೀತ, ಉಪದಂಶ, ಸಂಧಿವಾತ, ಕ್ಷಯ, ಮುಂತಾದವುಗಳು ಈ ರೋಗದ ಕಾರಣ ಗಳು ಇರುವವು.

**ಫೇ. ಫಾ:**— ರೋಗದ ಪ್ರಥಮಾವಸ್ಥೆಯಲ್ಲಿ ದಾಹಯುಕ್ತ ಭಾವನೆ ಗಳ ಮೇಲೆ ಜ್ವರವು ಭರಬಂದ ಬಂದಿದ್ದರೆ ನಾಡಿಯು ತೀವ್ರ ಹಾರುವದು. ಭ್ರಮ, ಮುಖ ಚರ್ಯೆಯು ಕೆಂಪದು, ಸೀರಡಿಕೆ, ಕುತ್ತಿಗೆಯ ಹಾಗೂ ಗಂಡಸ್ಥಲದ ನಾಡಿಗಳು ಟಣ ಟಣ ಹಾರುತ್ತವೆ.

**ಕಾ. ಮ್ಯೂ:**— ದ್ವಿತೀಯಾವಸ್ಥೆ ಫೇ. ಫಾ. ನಂತರ ಇಲ್ಲವೆ ಅದರ ಬತ್ತಗ ಕೊಡಬೇಕು.

**ಕಾ. ಫಾ:**— ಮಾನಸಿಕ ಭಾವನೆಗಳಿದ್ದಲ್ಲಿ; ಕಣ್ಣು ಗುಡ್ಡಿಗಳು ಹಿಗ್ಗಿದಂತಿರುವವು. ನಿದ್ರೆಗೇಡು. ಜಾಡ್ಯ. ನಿದ್ದೆಯಿಂದ ಗಾಬರಿಯಾಗಿ ಏಳುವದು. ರೋಗಿಯು ಚಿರಡಿಖೋರ ಹಾಗು ಹೆದರುವಂಥವ.

**ನೇ. ಮ್ಯೂ:**— ರೋಗಿಯು ಸ್ವಲ್ಪ ಆಲಸ್ಯವುಳ್ಳವ. ತುಟಿಯಲ್ಲಿಯೆ

ಪುಟಪುಟಿಸುವನು. ರೋಗಿಯು ನರಳುತ್ತಿರುವನು. ಬಾಯಿಯು ತೀರ ಒಣಗಿದ್ದು, ನೇಟ್ರಂ. ಮೂ. ದ ಇತರ ಭಾವನೆಗಳೂ ಇರುವವು.

**ನೇ. ಸ**:— ತಲೆಯ ಹಿಂದಿನ ಭಾಗದಲ್ಲಿ ಅತಿಶಯ ತೀವ್ರ ವೇದನೆ. ಮೆದುಳು ಜಜ್ಜಿದಂತೆ ವೇದನೆಗಳಿರುವವು. ( ಕಾ. ಫಾ. ಫೇರಂ. ಫಾ. ) ತಲೆಗೆ ಗಾಯವಾದನಂತರ ಆಗುವಂಥ ರೋಗದಮೇಲೆ ಮಸ್ತಿಷ್ಕದಾಹದ ಮೇಲೆ ನೇ. ಸ. ವೇ ಮುಖ್ಯ ಔಷಧವು. ಇತರ ಯಾವದೂ ಔಷಧವು ಸಮೀಪದಲ್ಲಿಲ್ಲದಿದ್ದರೆ ಇದರ ಉಪಯೋಗವು ಬಹಳೇ ಆಗುವದು. ರೋಗದ ತೀವ್ರತೆಯನ್ನು ಕಡಿಮೆಮಾಡುವದರಲ್ಲಿ ಇದರ ಉಪಯೋಗವಾಗುವದು. ಇದೇ ಔಷಧದ ಭಾವನೆಗಳಿದ್ದು ಇದನ್ನು ಕೊಟ್ಟಲ್ಲಿ ಬಹಳ ತೀವ್ರವಾಗಿ ರೋಗವು ನೆಟ್ಟಗೆ ಆಗುವದು.

**ಕಲ್ಕೆ. ಫಾ**:— ಮಸ್ತಿಷ್ಕ ಶೋಧವು ( ಮೆದುಳಿನಲ್ಲಿ ನೀರು ತುಂಬಿ ರೋಣವು ) ನೆತ್ತಿಯು ತುಂಬಿರುವದಿಲ್ಲ. ೨ × ಶಕ್ತಿಯ ಔಷಧವನ್ನು ಮುಂಜಾನೆಯೂ ಸಾಯಂಕಾಲದಲ್ಲಿಯೂ ಕೊಟ್ಟರೆ ಪ್ರಕೃತಿಗೆ ಸಮಾಧಾನ ವಾಗುವದು. ಮಸ್ತಿಷ್ಕದಾಹದಲ್ಲಿ ಇತರ ಔಷಧಗಳ ಸಂಗಡ ನಡುನಡುವೆ ಕೊಡಬೇಕು.

**ಉಪಯುಕ್ತ ಸೂಚನೆ**:— ಈ ರೋಗವು ಯಾವಾಗಲೂ ಚಿಂತಾ ಜನಕವಿರುವದು. ಫೇರಂ. ಫಾ. ಮತ್ತು ಕಾಲೀಮೂರ ಇವುಗಳನ್ನು ಆರಂಭದಿಂದ ಕೊಟ್ಟಲ್ಲಿ ಹೆದರುವ ಕಾರಣವಿಲ್ಲ. ರೋಗಿಯು ಶಾಂತ ಮತ್ತು ಬೆಳಕು ಇಲ್ಲದಂಥ ಠಾವಿನಲ್ಲಿ ಇರತಕ್ಕದ್ದು. ಕೂದಲು ಬಹಳ ಉದ್ದ ಹಾಗೂ ತ್ರಾಸದಾಯಕವಿದ್ದಲ್ಲಿ ಅವನ್ನು ತೆಗೆದು ಹಾಕಬೇಕು. ಜ್ವರ ಬಹಳಿದ್ದು ರೋಗಿಯು ಬಡಬಡಿಸುತ್ತಿದ್ದರೆ ತಲೆಯಮೇಲೆ ಬರ್ಫು ಅಥವಾ ತಂಣೀರಿನ ಪಟ್ಟಿಯನ್ನು ಇಡಬೇಕು. ಮತ್ತು ಮೇಲಿಂದಮೇಲೆ ಬದಲಿಸಬೇಕು. ಫೇರಂ. ಫಾ ಮತ್ತು ನೇಟ್ರಂಮೂರ ಇವುಗಳನ್ನು ಲಕ್ಷಣ ಗಳಿಗನುಸರಿಸಿ ಕೊಡಬೇಕು. ತಲೆಯ ಕೆಳಗೆ ( ತಲೆಗಿಂಬಿನಂತೆ ) ತಂಣೀರಿನ ಚೀಲವನ್ನು ಇಟ್ಟರೆ ರೋಗಿಗೆ ಸಮಾಧಾನವಾಗುವದು. ಶೌಚವು ಸ್ವಚ್ಛ ವಾಗುವದಕ್ಕೋಸ್ಕರ ದಿನಾಲು ಬಸ್ತಿಯನ್ನು ಕೊಡಬೇಕು. ಜ್ವರವಿದ್ದಲ್ಲಿ ಕೊಡತಕ್ಕಂಥ ಅನ್ನ ಮುಂತಾದವುಗಳನ್ನು ಕೊಡತಕ್ಕದ್ದು.

---

# ಮಾನಸಿಕ ರೋಗಗಳು

**Mental Diseases.** **ಮೆಂಟಲ್ ಡಿಸೀಜಿಸ್.**

ಮಾನಸಿಕ ರೋಗಗಳು ಅನೇಕವಿರುವವು. ಸ್ಮರಣಶಕ್ತಿಯ ಹ್ರಾಸ, ನಿರುತ್ಸಾಹ, ಕಾರ್ಯಮಾಡಲು ಬೇಡೆನಿಸುವದು, ವಿಚಾರಶಕ್ತಿಯ ಅಭಾವ, ಬುದ್ಧಿಮಾಂದ್ಯ. ವೈರಾಶ್ಯ ರೋಗ ಭ್ರಮ, ( Hypochindria ) , ಜ್ಞಾನ ತಂತುಗಳ ಕ್ಷೀಣ ಕರ್ತೃತ್ವವು. ( ಸುರಾಸ್ಥೆನಿಯಾ ), ಮನೋದೌರ್ಬಲ್ಯ, ಮನಸ್ಸಿನ ಅನಿಶ್ಚಿತತೆ, ಕಾಲ್ಪನಿಕ ಆಭಾಸ, ಉದಾಸೀನತೆ, ಖಿನ್ನತೆ, ಮರಣದ ಹೆದರಿಕೆ, ಆತ್ಮಹತ್ಯೆಯ ಪ್ರವೃತ್ತಿ ಮುಂತಾದವುಗಳೆಲ್ಲ ಮನಸ್ಸಿನ ವ್ಯಾಪಾರದ ರೋಗಗಳೇ ಸರಿ.

ಶ್ರಮಾತಿರೇಕ, ಪ್ರಾಪಂಚಿಕ ಅಥವಾ ವ್ಯವಸಾಯದ ಸಂಬಂಧದಲ್ಲಿಯ ಸಂಕಟಗಳೂ ಚಿಂತೆಯೂ, ಮಾನಸಿಕ ಪೆಟ್ಟು (Shock), ಪ್ರಿಯ ವಸ್ತುಗಳ ವಿಯೋಗ, ಮುಷ್ಟಿ ಮೈಥುನ, ಸಂಭೋಗಾತಿರೇಕ, ಉತ್ಕಟ ಇಚ್ಛೆಯು ಪೂರ್ಣವಾಗದಿರೋಣ, ಇವು ಮೇಲೆ ಹೇಳಿದ ಲಕ್ಷಣಗಳ ಉತ್ಪತ್ತಿಗೆ ಕಾರಣಗಳಾಗುವವು. ಇವೆಲ್ಲವುಗಳ ಚಿಕಿತ್ಸೆಯನ್ನು ಕೆಳಗೆ ಸಂಕ್ಷೇಪದಿಂದ ಹೇಳಿದೆ.

**ಕಾ. ಫಾ:—** ಮಾನಸಿಕ ರೋಗದ ಮೇಲಿನ ಪ್ರಮುಖ ಔಷಧವು. ನಿರುತ್ಸಾಹ, ಸ್ವಭಾವವು ತ್ರಾಸಿಕ ಮತ್ತು ಉತಾವಳಿ; ನಿದ್ದೆಗೇಡು; ಸ್ಮರಣ ಶಕ್ತಿಯ ಹ್ರಾಸ; ಬಹಳ ಅಭ್ಯಾಸದಿಂದಾಗಲಿ ಇತರ ಮಾನಸಿಕ ಶ್ರಮದ ಅತಿರೇಕದಿಂದಾಗಲಿ ಆದ ದಣಿವಿಕೆ; ವಿಚಾರಶಕ್ತಿಯ ಅಭಾವ. ತನ್ನ ಪರಿಸ್ಥಿತಿಯ ಬಗ್ಗೆ ನಿರಾಶ. ಪ್ರಿಯ ಮನುಷ್ಯನ ಮೃತ್ಯುವಿನಿಂದಾಗಲಿ ಇತರ ಕಾರಣದಿಂದಾಗಲಿ ಆಗುವ ದುಷ್ಪರಿಣಾಮದ ಮೇಲಿನ ಪ್ರಮುಖ ಔಷಧವಿದು. ಉದಾಸೀನತೆ; ಕಾಲ್ಪನಿಕ ಆಭಾಸ; ತಾನಾತರಹದ ಆಭಾಸಾತ್ಮಕ ಕಲ್ಪನಾತರಂಗ; ಚಿತ್ತಾಲ್ಹಾದಕ ವ್ಯವಸಾಯದಿಂದ ಸಮಾಧಾನವಾಗುವದು; ಏಕಾಂತ ಪ್ರಿಯತೆ; ಹುಚ್ಚು; ಮುಷ್ಟಿಮೈಥುನದಿಂದ ರೋಗಿಯು ಚಿರಡಿ ಖೋರನೂ ಜಗಳಗಂಟನೂ, ಹುಚ್ಚನೂ ಆಗಿದ್ದರೆ ಈ ಔಷಧದ ಉಪಯೋಗ ಬಹಳಾಗುವದು. ಭ್ರಮ, ವಾತದಭರ, ( ಛಟಕೆ )

**ಫೇ. ಫಾ:**— ರೋಗದ ದುಷ್ಪರಿಣಾಮ; ಮೆದುಳಿನಲ್ಲಿ ರಕ್ತ ಸಂಚಯ ಹೆಚ್ಚಾದಲ್ಲಿ ಹುಚ್ಚು ಹಿಡಿಯುವದು, ಉನ್ಮಾದವಾಯು; ರೋಗಿಯು ಅಂಜುಬುರುಕನೂ ನಿರಾಶನೂ ಆಗುವನು.

**ನೇ. ಮ್ಯೂ:**—ಖಿನ್ನತೆ, ಭವಿಷ್ಯತ್ಕಾಲದ ಬಗ್ಗೆ ನಿಷ್ಕಾರಣ ಹೆದರಿಕೆ, ನಾಲ್ಕು ಜನರಲ್ಲಿ ಕೂಡುವದು ತಪ್ಪಿಸುವನು. ಎದೆಯು ಹಾರುವದು. ತಿಳುವಳಿಕೆಯನ್ನುಂಟುಮಾಡುವ ಯತ್ನಮಾಡಿದರೆ ರೋಗವೃದ್ಧಿಯಾಗುವದು. ಅಶಕ್ಯ ಹಾಗೂ ಕೈಲಾಗದಂಥ ರೋಗಿಗಳ ಭ್ರಮ, ವಾತ.

**ನೇ. ಸ:**— ಆತ್ಮಹತ್ಯೆಯ ಪ್ರವೃತ್ತಿ ಬಿದ್ದುದರಿಂದ ತನಗೆ ಆದ ಅಪಘಾತದಿಂದ ಆಗುವ ಮನಸ್ತಾಪ. ಹಾಡೂ ಸಂಗೀತವೂ ಸಹನವಾಗದಿರೋಣ; ಅದರಿಂದ ತಾಪವಾಗುವದು. ಔದಾಸೀನ್ಯ ಉಂಟಾಗುವದು. ಪಿತ್ತದ ಭರವು ಹೆಚ್ಚು ಇರುವದು.

**ಕಲ್ಕೆ. ಫಾ:**— ಜನ್ಮತಃ ಹುಡುಗರು ಹುಚ್ಚಾಗಿರೋಣ. ಚಿರಡಿ ಖೋರ ಹಾಗೂ ತ್ರಾಸಮಾಡಿಕೊಳ್ಳುವಂಥವು ಸ್ಮರಣಶಕ್ತಿಯು ಕಡಿಮೆ ಇರುವದು. ಮನಸ್ಸಿನ ಏಕಾಗ್ರತೆ ಆಗದಿರೋಣ. ಮನಸ್ಸು ಒಂದು ವಿಷಯದಿಂದ ಮತ್ತೊಂದು ವಿಷಯದಮೇಲೆ ಒಂದೇಸವನೆ ಹಾರಾಡುವದು. ಮುಷ್ಟಿಮೈಥುನದಿಂದುಂಟಾಗುವ ಮನೋದೌರ್ಬಲ್ಯ (ಕಾಲಿ ಫಾ. ಉದಾಸೀನ; ಮುಂದಿನ ಕಾಲದಬಗ್ಗೆ ಕಾಳಜಿ; ಎರಡನೇ ಔಷಧಗಳ ಜತೆಗೆ ಕೊಡಬೇಕು. ಹುಚ್ಚು, ಹೆಡ್ಡ, ಜಾತಮೂರ್ಖ, ಹುಡುಗರಿಗಾಗಲಿ ಹಿರಿಯರಿಗಾಗಲಿ, ಮ್ಯಾ. ಫಾ. ದ ಜತೆಗೆ ಈ ಔಷಧವನ್ನು ಬಹಳ ದಿವಸ ಕೊಟ್ಟಲ್ಲಿ, ಉಪಯೋಗವಾಗುವದು.

**ಮ್ಯಾ. ಫಾ:**— ಮಾನಸಿಕ ಶ್ರಮಮಾಡಲು ಅನಿಚ್ಛೆ; ವಿಸ್ಮರಣವು ಬಹಳ. ಮೆದುಳು ಮಂದವಿದ್ದು ವಿಚಾರಶಕ್ತಿಯೂ ಕಡಿಮೆ ಆಗುವದು. ಆಭಾಸವು.

**ಸಿ:**— ಒಂದೇಕಾಲಕ್ಕೆ ಎರಡು ಸ್ಥಳದಲ್ಲಿದ್ದಂತೆ ಆಭಾಸವು. ಮನೆಯಲ್ಲಿಯೂ ಆಪ್ತೇಷ್ಟರ ಮಧ್ಯದಲ್ಲಿಯೂ ಇರುವ ಇಚ್ಛೆ. ರೋಗಿಯು ಹಟವಾರಿಯು; ಚಿಂತಾತುರನೂ ಶೀಘ್ರಕೋಪಿಯೂ; ಮಾನಸಿಕ ದುರ್ಬ

ಂತೆ ನಿದ್ದೆಯು ಸ್ವಪ್ನಗಳಿಂದ ಯುಕ್ತ ಇರುವದು. ಹುಣ್ಣಿವೆಯ ದಿವಸದಲ್ಲಿಯೂ ಇತರ ದಿವಸಗಳಲ್ಲಿಯೂ ಹವೆಯಲ್ಲಿ ಬದಲಾದರೆ ಎಲ್ಲ ಭಾವನೆಗಳ ವೃದ್ಧಿಯಾಗುವದು. ರೋಗಿಯು ಉದಾಸೀನನಿರುವನು, ಯಾವದಾದರೊಂದು ಸಾಂಪತ್ತಿಕ ಕಷ್ಟವು ಒದಗುವದೆಂಬ ನಿಷ್ಕಾರಣ ಹೆದರಿಕೆ. ಮನಸ್ಸಿನ ಅನಿಶ್ಚಯ.

**ಉಪಯುಕ್ತ ಸೂಚನೆ** — ಶಾರೀರಿಕ ಹಾಗೂ ಮಾನಸಿಕ ವಿಶ್ರಾಂತಿಯ ಬಗ್ಗೆಯೂ ಹವೆ ಬದಲು ಮಾಡುವದಕ್ಕೋಸ್ಕರವೂ ರೋಗಿಯು ಒಳ್ಳೇ ಹವೆ ಇದ್ದ ಸ್ಥಳದಲ್ಲಿರಬೇಕು. ಮಾನಸಿಕ ಶ್ರಮವಾಗದಂಥ ಹಾಗೂ ಆಲ್ಹಾದವಾಗುವಂಥ ಆಟ, ವಾಚನ ಮುಂತಾದವುಗಳಲ್ಲಿ ರೋಗಿಯು ಕಾಲಕಳೆಯಬೇಕು. ನಿತ್ಯದ ವ್ಯವಸಾಯಗಳಲ್ಲಿ ಮನಸ್ಸು ಹಾಕಬಾರದು.

---

## ಮುಖಪಾಕ

**Apthae.** ಆ್ಯಪ್ಥಿ.

ಮುಖಭಾಗದಲ್ಲಿಯ ಶ್ಲೇಷ್ಮಲ ತ್ವಚೆಯು ನೋಯುವಂಥಾದ್ದೂ, ಒಣಗಿದ್ದೂ ದಾಹಯುಕ್ತವೂ ಆಗುವದು. ಕ್ಷತಗಳೂ ವ್ರಣಗಳೂ ಏಳುವವು. ಒಸಡಗಳು ಬಾಯುತ್ತವೆ. ಅವುಗಳೊಳಗಿಂದ ರಕ್ತವೂ ಹೋಗುವದು. ನೆತ್ತಿ, ನಾಲಗೆ ಮುಂತಾದ ಭಾಗಗಳು ತುಸು ಕೆಂಪು ಇರುವವು. ಬಾವು ಇರುವದು. ಸಣ ಹುಣ್ಣುಗಳು (ಚಟ್ಟಿ) ನೋಯುತ್ತವೆ. ಕೈ ಹತ್ತಗೊಡುವದಿಲ್ಲ. ಮಾತಾಡಲಿಕ್ಕೂ ತಿನ್ನಲಿಕ್ಕೂ ಕಷ್ಟವಾಗುವದು. ಕ್ಷತ ಹಾಗೂ ಚಟ್ಟಿಗಳಾದ ಸ್ಥಳವು ತುಸು ಬೆಳ್ಳಗೂ ಹಳದಿಯೂ ಇರುವದು. ಅವುಗಳ ತುದಿಗಳು ಸ್ವಲ್ಪ ಕೆಂಪಾಗಿರುವವು. ಚಟ್ಟಿಗಳು ನೋಯುವವು. ಜೊಲ್ಲು ಸೋರುವದು. ಬಾಯಿಗೆ ಹೊಲಸು ದುರ್ಗಂಧ ಇರುವದು. ಈ ರೋಗವು ಸಣ ಮಕ್ಕಳಿಗೆ ಹಲ್ಲು ಬಂದನಂತರ ಕೆಟ್ಟ ಹಾಲು ಕುಡಿಯೋಣ ಮುಂತಾದ ಕಾರಣ ಮೂಲಕ ಆಗುವದು.

ಅಜೀರ್ಣ, ಅಸ್ವಚ್ಛತೆ, ಪೋಷಕ ಅನ್ನದ ಅಭಾವ, ಸಾರಜದಂಥ ಔಷಧ ಸೇವನ, ಬಿಸಿಪದಾರ್ಥಗಳನ್ನು ತಿನ್ನುವದು, ಹಲ್ಲು ಸ್ವಚ್ಛ ಇಡದಿ

ರೋಗ, ಇವು ಇದರ ಕಾರಣಗಳುಂಟು. ಹೊಗೆ ಸೊಪ್ಪು ಬಹಳ ತಿನ್ನು ವದು, ಸಕ್ಕರೆ ಬಹಳ ತಿನ್ನುವದು, ಕಾಯಿಪಲ್ಲೆ ತಿನ್ನದಿರೋಣ, ಈ ಕಾರಣ ಗಳ ಮೇಲಿಂದ ಸಹ ಹಿರಿಯರಿಗೆ ಈ ರೋಗವಾಗುವದು.

**ಫೇ. ಫಾ:**— ಹೊಟ್ಟೆತಿನ್ನವ ಕೂಸುಗಳಿಗೂ ಅಂಥ ಮಕ್ಕಳ ತಾಯಂದರಿಗೂ ಬಾಯಿಗೆ ಹುಣ್ಣು ಆಗಿದ್ದರೆ ಅಥವಾ ಬಾಯಿ ಬಂದಿದ್ದರೆ ದಾಹದ ಪ್ರಥಮಾವಸ್ಥೆಯಲ್ಲಿ ಒಸಡಿಗಳು ಕೆಂಪಾಗಿದ್ದು, ದಾಹವೂ ನೋವೂ ಇದ್ದರೆ.

**ಕಾ. ಮೂ:**— ಸಣ್ಣಮಕ್ಕಳ ಬಾಯಿಯಲ್ಲಿ ಹುಣ್ಣುಗಳಾದ್ದರಿಂದ ಅವುಗಳಿಗೆ ಹಾಲುಕುಡಿಯುವದು ಆಗದಂಥ ರೋಗಗಳ ಮೇಲೆ ಇದು ಮುಖ್ಯ ಔಷಧವು. ಬಾಯಿ ಮುಕ್ಕಳಿಸಬೇಕು. ಹೊಟ್ಟೆಯಲ್ಲಿ ಇದನ್ನು ಕೊಡಬೇಕು. ಬಾಯಿಗೆ ಹೊಲಸು ದುರ್ಗಂಧವಿರುವದು. ಸಣ್ಣ ಹುಡು ಗರ ಬಾಯಿ ಬರುವದು. ಹೊಟ್ಟೆಕುಡಿಯುವ ಮಕ್ಕಳಿದ್ದ ಸ್ತ್ರೀಯರ ಬಾಯಿ ಬರುವದಾದರೆ ಜೊಲ್ಲು ಬಹಳ ಸೋರುವದು. ಒಸಡಿಗಳು ಉಬ್ಬಿದ್ದು ನೋವು ಇದ್ದರೆ ನಾಲಿಗೆಯು ಬಿಳೇದಾಗಿ ಬಾಯಿಯಿಂದ ದಟ್ಟ ಬಿಳೀ ಸ್ರಾವವಿದ್ದರೆ.

**ನೇ. ಮೂ:**— ಜೊಲ್ಲು ಮಿತಿ ಮೀರಿ ಸೋರುತ್ತಿದ್ದರೆ ಪಾದರಸ ಬಹಳ ತೊಗೊಂಡಿದ್ದರೆ ಮೋರೆಯಮೇಲೆ ಬಿಳೀ ರಸಿಕಿ ಇದ್ದ ಬೊಕ್ಕೆಗಳೂ ಹುಣ್ಣುಗಳೂ ಆಗಿದ್ದರೆ.

**ನೇ. ಫಾ:**— ಚಟ್ಟೆಗಳಿಂದ ದಟ್ಟ ಕೆನೆಯಂಥ ಹಳದಿ, ಸ್ರಾವವಿದ್ದಲ್ಲಿ ಇದು ದಿವ್ಯ ಔಷಧವು. ನಾಲಿಗೆಯ ಮೇಲೆ ದಟ್ಟ ಹಳದಿ ಅಗ್ರ. ಮೇಯುತ್ತ ಹೋಗುವ ವ್ರಣ.

**ಕಾ. ಫಾ:**— ಬಾಯಿ ಜಾತದ್ದೂ. ದುಷ್ಟ ವ್ರಣ, ಬಾಯಿಗೆ ದುರ್ಗಂಧ ಬಹಳ. ಒಸಡಿಗಳಿಂದ ರಕ್ತಬರುವದು. ಬೂದಿಯ ಬಣ್ಣದ ವ್ರಣ; ಕಾ. ಮೂರ, ಜತೆಗೆ ಕೊಡಬೇಕು.

**ಸಿ:**— ಪ್ರಾಕೃತಿಕ ಅಥವಾ ಜಠರಗತ ವಿಕಾರ ಮೂಲಕ ಬಾಯಿಗೆ ದುರ್ಗಂಧ ಬರುತ್ತಿದ್ದರೆ.

**ಉಪಯುಕ್ತ ಸೂಚನೆ.**— ಸಾಕಷ್ಟು ಸ್ವಚ್ಛ ಬೈಲ ಹವೆ ಈ ಬೇನೆಯಲ್ಲಿ ಬಹಳೇ ಅವಶ್ಯವಿರುವದು. ತಾಯಿಯ ಪ್ರಕೃತಿಯು ಕೆಟ್ಟಿದ್ದರಿಂದ ಮಕ್ಕಳಿಗೆ ಈ ರೋಗವಾಗಿದ್ದಲ್ಲಿ ತಾಯಿಯ ಹಾಲು ಬಿಡಸಬೇಕು. ಎರಡನೆಯವರ ಹಾಲಾಗಲಿ ಮೇಲಿನ ಹಾಲಾಗಲಿ ಹಾಕಬೇಕು. ಟಾಕಣ ಕಾರ ಹಾಗೂ ಜೇನತುಪ್ಪ ಹಾಕಿ ಸಿದ್ಧಮಾಡಿದ ನೀರಿನಲ್ಲಿ ಸ್ವಚ್ಛ ಬಟ್ಟೆಯನ್ನು ಬತ್ತಿಯಂತೆ ಮಾಡಿ ಅದನ್ನು ತೋಯಿಸಿ ಬಾಯಿಯಲ್ಲಿ ಹಿಡಿಯಲಿಕ್ಕೆ ಮೇಲಿಂದ ಮೇಲೆ ಕೊಡುತ್ತಿರಬೇಕು. ಹಿರಿಯರು ಸಹ ಇಂಥ ನೀರಿನಿಂದ ಬಾಯಿ ಮುಕ್ಕಳಿಸಬೇಕು. ಹೊಟ್ಟೆಯಲ್ಲಿ ಕೊಡಲು ಯೋಚಿಸಿದ ಔಷಧದ ನೀರಿನಿಂದ ಹಿರಿಯರು ಸಹ ಬಾಯಿ ಮುಕ್ಕಳಿಸಬೇಕು. ಅದರಿಂದ ಉಪಯೋಗವಾಗುವದು.

---

# ಮುಡದೋಷ

**Marasmus** — ಮೆರ್ಯಾಸ್ಮಸ್.

ಕೂಸುಗಳು ಸವೆಯುತ್ತ ಹೋಗುವದೇ ಮುಡದೋಷವು. ಒಂದೆರಡು ಸಾರೆ ಬಹಳೇ ಜೋರಿನ ರೇಚಗಳಾದ್ದರಿಂದ ಹಾಗೂ ಇತರ ಕಾರಣಗಳಿಂದ ಸಹ ಕೂಸುಗಳು ಸವೆಯುತ್ತ ಹೋಗುವವು. ತೊಗಲು ನಿರಿಗಿ ಗಟ್ಟುವದು. ಹಿಂದೆ "ಅಸ್ಥಿಮಾರ್ದವ"ವೆಂಬ ವಿವರದಲ್ಲಿ ಹೇಳಿದ ಎಲ್ಲ ಭಾವನೆಗಳು ಇದರಲ್ಲಿ ಸಹ ಇರುವವು. ಅಸ್ಥಿಮಾರ್ದವತೆಯು ಮುಡದೋಷದ ಕಾರಣವಿರುವದು. ತಿನ್ನಬಾರದಂಥ ಅನ್ನ ತಿನ್ನುವದರಿಂದಲೂ ಸಾಕಷ್ಟು ಅನ್ನ ಸಿಗದಿದ್ದರಿಂದಲೂ, ಮೇಲಿಂದ ಮೇಲೆ ಆಗುವ ಅವರೋಧ, ವಾಂತಿ ಅಥವಾ ಅತಿಸಾರ ಇವುಗಳಿಂದಲೂ, ಆನುವಂಶಿಕ ಉಪದಂಶದಿಂದಲೂ, ಕ್ಷಯದಿಂದಲೂ ಈ ರೋಗವಾಗುವದುಂಟು. ಅನ್ನದೋಷವೇ ಕಾರಣವಿದ್ದಲ್ಲಿ ಹುಡುಗರು ಚಿರಡಿಖೋರವಾಗುವವು. ಶೌಚಕ್ಕೆ ಕಾಲಕ್ಕೆ ಸರಿಯಾಗಿ ಆಗುವದಿಲ್ಲ. ಅವರೋಧವಿರುವದು. ಶೌಚವು ಹಸರಾಗಲಿ ಬಿಳಿಯದಾಗಲಿ ಆಗುವದು. ತಿಂದ ಅನ್ನ ಹಾಗೇ ಬಿದ್ದುಹೋಗುವದು.

ಆನುವಂಶಿಕ ಉಪದಂಶವಿದ್ದಲ್ಲಿ ಮೊದಲಿನ ಆರೇ ತಿಂಗಳುಗಳಲ್ಲಿ ಕೂಸುಗಳು ಸವಿಯಲು ಹತ್ತುತ್ತವೆ. ತಲೆಗೆ ಸಹಸಾ ಬೆವರು ಬರುವದಿಲ್ಲ. ಅಸ್ಥಿ ಮಾರ್ದವತೆಯಲ್ಲಿ ಬೆವರು ಇರುವದು. "ಅಸ್ಥಿಮಾರ್ದವತೆ" ಎಂಬ ವಿಷರ ನೋಡಿರಿ.

**ಕಲ್ಕೆ. ಫಾ**:— ಹೊಯ್ ಹಾಲು ಕುಡಿಯುವ ಮಕ್ಕಳಿಗೆ ಆಗುವ ಮುಡದೋಷಕ್ಕೆ ಪೋಷಕ ಅನ್ನ ತಿನ್ನಲು ಸಿಗದ್ದರಿಂದಾಗುವ ಅಶಕ್ತತೆ ಹಲ್ಲುಗಳು ತಡ ಮಾಡಿ ಒಡೆಯುವವು. ನೀರಿನಂತೆ ತಿಳಿ ರೇಚಗಳು. ವಾತವು ಬಿಡುವದು. ಹೊಟ್ಟೆ ಉಬ್ಬಿದ್ದು; ತಿಂದ ನಂತರ ಹೊಟ್ಟೆಯಲ್ಲಿ ನೋಯುವದು. ಅನ್ನ ಪಚನವಾಗದೆ ಹಾಗೇ ಬಿದ್ದುಹೋಗುವದು. ಮುಖಚರ್ಯೆಯು ನಿಃಸತ್ವ, ಜೋತಂತೆ, ಮುದುಕರಂತೆ.

**ನೇಟ್ರಂ. ಸ**:— ಹೊಟ್ಟೆ ಉಬ್ಬಿದ್ದು ವಾಯುವು ತುಂಬಿಕೊಂಡಿದ್ದರಿಂದ ಗಡಗಡಿಸುವ ಸಪ್ಪಳಾಗುವದು. ಶೌಚಕ್ಕೆ ನೀರಿನ ಹಾಗೆ, ಹಳದಿ, ಒಮ್ಮೊಂದೊಮ್ಮೆ ಆಗುವಂಥಾದ್ದು ಆಗುವದು. ಪ್ರಾತಃಕಾಲದಲ್ಲಿ ಎದ್ದ ಕೂಡಲೆ ಶೌಚಕ್ಕೆ ಗಡಬಿಡಿಯಾಗುವದು. ಹೋಗಲೇಬೇಕಾಗುವದು.

**ಸಿ**:— ತಲೆಯು ದೊಡ್ಡದಾಗಿದ್ದು ಇತರ ಅವಯವಗಳು ಆ ಮಾನದಿಂದ ತೀರ ಬಡಕವಿರುವವು. ಬೆವರು ಬಹಳ ಬಿಡುವದು. ರೋಗಿಯು ತ್ರಾಸಿಕನೂ ಅಳಬುರಕನೂ ಇರುವನು. ಮುಖಚರ್ಯೆಯು ತೀರ ಬಡಕವೂ ಮುಪ್ಪಿನವರಂತೆಯೂ ಇರುವದು. ತಾಯಿಯ ಹಾಲು ಕುಡಿಯಲಿಕ್ಕೆ ಸಹ ಬೇಸರ. ಕುಡಿದಲ್ಲಿ ವಾಂತಿಯಾಗಿ ಬಿದ್ದುಹೋಗುವದು. ಶೌಚಕ್ಕೆ ತಿಳಿ ಹಾಗೂ ದುರ್ಗಂಧವೂ ಇರುವದು. ಹವೆಯಲ್ಲಿ ಸ್ವಲ್ಪ ಬದಲಾದರೂ ರೋಗಿಯು ದಣಿದಂತೆ ಆಗುವನು.

**ಕಾ. ಫಾ**:— ಅಸ್ಥಿಗಳೂ ಸ್ನಾಯುಗಳೂ ಸವೆದದ್ದು. ಕ್ಷೀಣತೆ ವುಂಟುಮಾಡುವ ಯಾವದೇ ರೋಗದಲ್ಲಿ ದುರ್ಗಂಧಯುಕ್ತ ಕೊಳಕು ರೇಚಗಳಾಗುತ್ತಿದ್ದಲ್ಲಿ, ಇದರ ಉಪಯೋಗವಾಗುವದು.

**ನೇ. ಮೂ**:— ಇತರ ಅವಯವಗಳ ಮಾನದಿಂದ ಹುಡುಗರ ಕುತ್ತಿಗೆಯು ತೀವ್ರವಾಗಿ ಬಹಳೇ ಸೊರಗುತ್ತ ಹೋಗುವದು.

ಹುಡುಗರು ತೀವ್ರವಾಗಿ ನಡೆಯಲಾರವು. ಮಲಾವರೋಧ, ತ್ವಚೆಯು ಮಣ್ಣಿನಂತೆ ಇದ್ದಲ್ಲಿ “ಅಸ್ಥಿಮಾರ್ದವತೆ” ಎಂಬ ವಿವರ ನೋಡಿರಿ.

**ಉಪಯುಕ್ತ ಸೂಚನೆ:—** ಈ ವಿಕಾರದಲ್ಲಿ ಉಪಾಯಕ್ಕಾಗಿ ಒಂದು ಹಂಚಿಕೆ ಮಾಡುವರು. ಮತ್ತು ಅದು ಯಶಸ್ವಿಯಾಗುವದೆಂದು ಹೇಳುವದುಂಟು. ಅದೇನಂದರೆ ಒಂದು ಗಜಗ ತೆಗೆದುಕೊಂಡು, ಅದರ ಒಳಗಿನ ಬೀಜವನ್ನು ತೆಗೆದು ಹಾಕಿ ಅದರೊಳಗೆ ಮೇಲಿನ (ಸೊಟ್ಟೆಯಲ್ಲಿ) ತುಂಬ ಪಾರಜ ಹಾಕಿ ಅದನ್ನು ಪುನಃ ಮುಚ್ಚಿಬಿಟ್ಟು ಕರೇ ದಾರದಲ್ಲಿ ಪೋಣಿಸಿ ಅದನ್ನು ರೋಗಿಯ ಕೊರಳಿನಲ್ಲಿ ಕಟ್ಟಿಬಿಡುವರು. ಪ್ರತಿ ಒಂದು ಹುಣ್ಣಿವಿಗೆ ಆ ದಾರವನ್ನು ತೆಗೆದುಹಾಕಿ ಮತ್ತೊಂದು ದಾರದಲ್ಲಿ ಪೋಣಿಸಿ ಮತ್ತೆ ಹಿಂದಿನಂತೆ ಕಟ್ಟುವರು. ಮುಂದೆ ಆದರೂ ಹೀಗೇ ಮಾಡುವರು. ಉಪದಂಶಜನ್ಯ ರೋಗಕ್ಕೆ ಪಾದರಸ ಔಷಧವೆಂದು ಕೊಡುವದುಂಟು. ಮುಡದೋಷವು ಉಪದಂಶಜನ್ಯ ರೋಗವಿದ್ದ ಮೂಲಕ ಮೈಮೇಲೆ ಪಾದರಸವು ಅಲ್ಲಾಡುತ್ತಿರುವದರಿಂದ ರೋಗಿಗೆ ಗುಣವಾಗುವ ಸಂಭವ ವಿದೆ. ಈ ಹಂಚಿಕೆ ಮಾಡುವದಿದ್ದರೆ ಇತರ ಸ್ತ್ರೀಯರು ಮುಟ್ಟಾಗಿದ್ದಾಗ ಅವರ ಸಂಸರ್ಗವು ಕೂಸಿಗೆ ಆಗಕೂಡದು ಎಂದು ಅನ್ನುವರು.

ಮಕ್ಕಳಿಗೆ ಬಹಳ ತಿನ್ನಲಿಕ್ಕೆ ಕೊಡೋಣ- ಸಾಕಷ್ಟು ತಿನ್ನಲಿಕ್ಕೆ ಕೊಡದಿರೋಣ, ಅಥವಾ ಪಚನಾಗದಂಥಾದ್ದನ್ನು ಕೊಡೋಣ- ಇವುಗಳನ್ನು ತಪ್ಪಿಸಬೇಕು. ನೀರು ಹಾಕದ ಹಾಲು ಪಚನಕ್ಕೆ ಕಠಿಣವಿರುವದು. ಮಕ್ಕಳಿಗೆ ಮೇಲಿಂದ ಮೇಲೆ ಹೊಟ್ಟೆಗೆ ಕೊಟ್ಟರೆ ಅವು ಸಶಕ್ತವಾಗುವವೆಂದು ಎಷ್ಟೋ ಸ್ತ್ರೀಯರ ತಿಳುವಳಿಕೆಯುಂಟು. ಆದ್ದರಿಂದ ಕೂಸುಗಳಿಗೆ ಬಹಳ ಸಾರೆ ಹೆಚ್ಚು ಕುಡಿಸುವರು. ಆದರೆ ಅದರಿಂದ ಅವುಗಳಿಗೆ ಅಪಾಯವೇ ಆಗುವದು. ಪಚನಶಕ್ತಿಯು ಕೆಟ್ಟದ್ದರಿಂದ ಮೇಲಿಂದ ಮೇಲೆ ತಿನಿಸುವದು ಅಪಾಯಕಾರಕವೇ ಸರಿ. ತಾಯಿಯ ಹಾಲು ಕೆಟ್ಟದ್ದರಿಂದ ಪೋಷಣವಾಗುವದು ಶಕ್ಯವಿರುವದಿಲ್ಲ. ಮೊದಲೇ ಕೂಸು ಹೊಟ್ಟೆಗೆ ತಿನ್ನುತ್ತಿರುವಾಗ (ಆದ) ಗರ್ಭದ ಪೋಷಣವು ಚೆನ್ನಾಗಿ ಆಗದ್ದರಿಂದ ಕೂಸು (ಗರ್ಭದಲ್ಲಿದ್ದದ್ದು) ಹುಟ್ಟಿದ ನಂತರ ಜನ್ಮತಃ ಅಶಕ್ತವಾಗುವದು.

ಆದ್ದರಿಂದ ಗರ್ಭಿಣಿ ಸ್ತ್ರೀಯರು ಮುಂಚಿತವಾದ ಕೂಸಿಗೆ ಹೊಟ್ಟೆಗೆ ಕುಡಿಸಬಾರದು. ಪೇಟಿಯಲ್ಲಿ ಮೊಹೊರಬಂದ ಡಬ್ಬಿಗಳೊಳಗಿಂದ ದೊರೆಯು ತಕ್ಕ ಹಾಲನ್ನಾಗಲಿ, ಔಷಧಿಯುಕ್ತ ಹಾಲನ್ನಾಗಲಿ, ಪಾಚಕ ಅನ್ನಗಳನ್ನಾಗಲಿ ಮೂಲತಃ ಕೊಡಬಾರದು. ಆಕಳ ಹಾಲು- ಅದು ಶಕ್ಯವಿಲ್ಲದಲ್ಲಿ ಎಮ್ಮೆಯ ಹಾಲು- ಚನ್ನಾಗಿದ್ದನ್ನು ತೆಗೆದುಕೊಂಡು ಅದರಲ್ಲಿ ಸುಣ್ಣದ ಮೇಲಿನ ತಿಳಿಯನ್ನೂ ಇಲ್ಲವೇ ಸ್ವಚ್ಛ ನೀರನ್ನೂ ಪಚನಶಕ್ತಿಯುಮಾನದಿಂದ (೧/೪, ೧/೩, ೧/೨ ಅಂಶ) ಕೂಡಿಸಿ ಕೊಡಬೇಕು. ಹಾಗೂ ಭಾವನಾನುಸಾರವಾಗಿ ೧೨ ಕ್ಷಾರಗಳೊಳಗಿನ ಔಷಧವನ್ನು ಕೊಟ್ಟಲ್ಲಿ ರೋಗವು ಹೋಗುವದು. ತಾಯಿಯಾದರೂ ಕೂಸಿನ ಪ್ರಕೃತಿಗನುಸರಿಸಿ ತಾವು ತನ್ನ ಊಟ ಮುಂತಾದ್ದರಲ್ಲಿ ಹೆಚ್ಚುಕಡಿಮೆ ಮಾಡಿ ತನ್ನ ಪ್ರಕೃತಿಯನ್ನು ಸುಧಾರಿಸುವದು ಅವಶ್ಯವದೆ.

---

# ಮುಷ್ಟಿಮೈಥುನ

**Masturbation.** **ಮಾಸ್ಟರ್ಬೇಶನ್.**

ಮುಷ್ಟಿಮೈಥುನದ ಚಟಿಯು ಬಹು ಘಾತುಕವಿರುವದು. ಇದನ್ನು ಸ್ತ್ರೀಯರಾಗಲಿ ಪುರುಷರಾಗಲಿ ಹಚ್ಚಿಕೊಳ್ಳಬಾರದು. ಅದರಿಂದ ಅಪಸ್ಮಾರ, ಸ್ಮರಣಶಕ್ತಿಯ ಹ್ರಾಸ, ಬುದ್ಧಿಮಾಂದ್ಯ, ಮಾನಸಿಕ ದುರ್ಬಲತೆ, ಧಾರಣಾಶಕ್ತಿಯ ಅಭಾವವು ಮುಂತಾದ ವಿಕೃತಿಗಳಾಗುವವು ಮತ್ತು ಸಣ್ಣ ವಯಸ್ಸಿನಲ್ಲುಂಟಾದ ವಿಕೃತಿಗಳು ಕಡೆಯ ವರೆಗೆ ಶರೀರದಲ್ಲಿ ವಾಸಮಾಡಿಕೊಂಡಿರುವವು.

**ಕಲ್ಕೆ. ಫಾ:—** ಪ್ರಮುಖ ಔಷಧವು. ಘಾತುಕ ಚಟಿಗಳಿಂದ ಉಂಟಾಗುವ ಅಶಕ್ತತೆಯ ಮೇಲೆ. ತರುಣ ವಯಸ್ಸಿನಲ್ಲಿ ಮುಷ್ಟಿಮೈಥುನದ ಪ್ರವೃತ್ತಿ ಇದ್ದಲ್ಲಿ ಇದನ್ನು ಕೊಡುವದು.

**ಕಾ. ಫಾ:—** ಪ್ರಬಲ ಕಾಮೋಚ್ಛೆಯ ಮೂಲಕ ಬಂದ ಮಾನಸಿಕ ಅಶಕ್ತತೆಯ ಮೇಲೆಯೂ ಇತರ ಭಾವನೆಗಳಿದ್ದಲ್ಲಿಯೂ.

**ನೇ. ಫಾ:—** ಪಚನಶಕ್ತಿಯು ಕೆಟ್ಟಿದ್ದಲ್ಲಿಯೂ ಸಾಧಾರಣವಾಗಿ ಶಕ್ತಿದಾಯಕ ಔಷಧವೆಂದು ಈ ರೋಗದಲ್ಲಿ ಇದರುಪಯೋಗವಾಗುವದು.

**ಉಪಯುಕ್ತ ಸೂಚನೆ:—** ಮುಷ್ಟಿಮೈಥುನದ ಚಟಿಯು ಬಹು ಕೆಟ್ಟದ್ದು. ಬೇಕಾದ ಪ್ರಯತ್ನ ಮಾಡಿ ಸಂಯಮನಮಾಡಿ ಅದನ್ನು ಕಳಕೊಳ್ಳಲೇಬೇಕು. ಇಲ್ಲದಿದ್ದರೆ ಶರೀರದ ಮೇಲೆ, ಮನಸ್ಸಿನ ಮೇಲೆ, ಬುದ್ಧಿಯ ಮೇಲೆ ಬಹು ಕೆಟ್ಟ ಪರಿಣಾಮಗಳಾಗುವವು. ಕೆಟ್ಟ ವಿಚಾರ ಬರುವಂಥ ಪುಸ್ತಕಗಳನ್ನು ಓದಬಾರದು. ಚಂದಾದ ವಿಚಾರ ಸೂಚಿಸುವಂಥ ಹಾಗೂ ಧಾರ್ಮಿಕ ಗ್ರಂಥಗಳನ್ನು ಓದಬೇಕು. ಕಾದಂಬರಿಗಳನ್ನೂ, ಶೃಂಗಾರ ಗ್ರಂಥಗಳನ್ನೂ, ನಾಟಕ–ಸಿನೆಮಾಗಳನ್ನೂ, ಜಾಗರಣೆ ಮಾಡುವದನ್ನೂ, ಕಮ್ಮಗಿನ ಪದಾರ್ಥ ತಿನ್ನುವದನ್ನೂ, ಮೆತ್ತನ ಹಾಸಿಗೆಯ ಮೇಲೆ ಮಲಗುವದನ್ನೂ ಈ ಮುಂತಾದವುಗಳನ್ನೂ ತೀರ ವರ್ಜಮಾಡಬೇಕು. ಸತ್‌ಸಂಗತಿಯಲ್ಲಿಯೇ ಇರಬೇಕು. ತಣ್ಣೀರಿನ ಸ್ನಾನವು ಹಿತಕರವು. ಪೌರುಷಹುಟ್ಟಿಸುವಂಥ ಹಾಗೂ ಬೈಲಿನಲ್ಲಿ ಆಡುವಂಥ ಆಟಗಳನ್ನೂ ಆಡಬೇಕು. "ಸ್ವಪ್ನಾವಸ್ಥೆ" ಎಂಬ ವಿವರ ನೋಡಿರಿ.

---

# ಮೂತ್ರೇಂದ್ರಿಯದ ರೋಗ

**Diseas of the Urinary System. ಡಿಸೀಜಿಸ್ ಆಫ್ ದಿ ಯುರಿನರಿ ಸಿಸ್ಟಿಮ್.**

ಸಕ್ಕರೆ, ರಕ್ತ, ಕೀವು, ಪಿತ್ತ, ಯೂರಿಯಾ (ಮೂತ್ರಾಮ್ಲ) ಮುಂತಾದ ಕ್ಷಾರ, ಅಲ್ಬ್ಯುಮಿನ, ಫಾಸ್ಫೇಟಗಳು, ವೀರ್ಯ (ಧಾತು) ಮುಂತಾದ ಪದಾರ್ಥಗಳು ಮೂತ್ರದೊಳಗಿಂದ ಹೋಗುವದೂ, ಹೆಚ್ಚಾಗಿ ಹೋಗುವದೂ, ಕಡಿಮೆ ಹೋಗುವದೂ, ಮೂತ್ರದ ಧಾರಿಯು ಸಣ್ಣದಾಗೋಣ, ಎರಡು ಧಾರಿಗಳಿಂದ ಮೂತ್ರವಾಗೋಣ, ಮೂತ್ರದ ಕಾಲಕ್ಕೆಯಾಗಲಿ ಮೂತ್ರವಾದನಂತರವಾಗಲಿ ಉರುಪುಬಿಡೋಣ, ಮೂತ್ರಕ್ಕೆ

ಅಡ್ಡಿಯಾಗೋಣ, ತುಂಬಿಕೊಂಡಿರೋಣ, ಅಶ್ಮರಿಯಾಗೋಣ, ದಾಹವಾಗೋಣ, ವೃಕ್ಕಭ್ರಂಶ, ಮೂತ್ರಶೂಲೆ, ಮೂತ್ರಸ್ತಂಭ, ಮೂತ್ರಾಘಾತ, ಮೂತ್ರಮಾರ್ಗಸಂಕೋಚನ, ಮುಂತಾದವುಗಳು ಮೂತ್ರರೋಗಗಳು. ಇವುಗಳಿಗೆ ಅವುಗಳ ಭಾವನೆಗಳ ಮೇಲಿಂದಲೂ ಅವುಗಳ ಸ್ವರೂಪಗಳ ಮೇಲಿಂದಲೂ ಬೇರೆಬೇರೆ ಹೆಸರು ಕೊಡಲ್ಪಟ್ಟಿವೆ. ಇವುಗಳಲ್ಲಿಯ ಮಧುಮೇಹ, ಬಹುಮೂತ್ರ, ಮೂತ್ರಾಶಯದಾಹ ಮುಂತಾದ ರೋಗಗಳ ಚಿಕಿತ್ಸೆ ಈ ಗ್ರಂಥದಲ್ಲಿ ಇತರತ್ರ ಮಾಡಿದೆ. ಇಲ್ಲಿ ಸಂಕೋಚದಿಂದ ಮೂತ್ರೇಂದ್ರಿಯದ ಎಲ್ಲ ರೋಗಗಳಿಗೆ ಉಪಯೋಗವಾಗುವಂಥ ಔಷಧಗಳ ಬಗ್ಗೆ ಸಮಾಚಾರ ಹೇಳಿದೆ.

**ಫೇ. ಫಾ:**— ಪ್ರಾರಂಭದಲ್ಲಿ ಯಾವದೇ ದಾಹದ ಭಾವನೆಯ ಮೇಲೆ. ಸಣ್ಣ ಹುಡುಗರು ಮಲಗಿದಾಗ ನಿದ್ದೆಯಲ್ಲಿಯೇ ಮೂತ್ರ ಮಾಡುವವು. ಸ್ನಾಯುಗಳ ಅಶಕ್ತತೆಯ ಮೂಲಕ ಹಾಸಿಗೆಯಲ್ಲಿಯೇ ತಿಳಿಯದೆ ಮೂತ್ರವಾಗುವದು. (ಕಾ. ಫಾ.) ವಿಶೇಷತಃ ಸ್ತ್ರೀಯರಿಗೆ ಕೆಮ್ಮುವಾಗ್ಗೇ ಮೂತ್ರವಾಗುವದು. ಬಾವು ಮುಂತಾದ ಭಾವನೆಗಳ ಮೂಲಕ ಮೂತ್ರಕ್ಕೆ ಪ್ರತಿಬಂಧವಾಗುವದು. ಮೇಲಿಂದ ಮೇಲೆ ಮೂತ್ರಕ್ಕೆ ಹೋಗಬೇಕೆಂದೆನಿಸುವದು. ಎಷ್ಟೋ ಕಾಲ ಮೂತ್ರವು ಸಂಚಿತವಾಗಿದ್ದಲ್ಲಿ ಸಹ ಹೀಗೆ ಆಗುವದು. ದರಸರ್ತೆ ಮೂತ್ರವು ಬಹಳಾಗುವದು. ಮೂತ್ರವು ಕೆಂಪುವರ್ಣದ್ದು ಇರುವದು. (ನೇ. ಫಾ. ಮತ್ತು ಕಾ. ಮೂ.)

**ಕಾ. ಮೂ:**— ಮೂತ್ರಾಶಯ ಹಾಗೂ ಮೂತ್ರಮಾರ್ಗದಲ್ಲಿಯ ದಾಹಯುಕ್ತ ಭಾವನೆಗಳ ದ್ವಿತೀಯಾವಸ್ಥೆ. ಮೂತ್ರದೊಳಗಿಂದ ದಟ್ಟ, ಬಿಳೇ, ಜಿಗಟು ಪದಾರ್ಥವು ಹೋಗುವದು. ಮೂತ್ರವು ಕರೇಬಣ್ಣದ್ದೂ ಅದನ್ನು ತಪಾಸಮಾಡಿದಲ್ಲಿ ಅದರಲ್ಲಿ 'ಯುರಿಕ ಆಸಿಡ್'ವೆಂಬ ಆಮ್ಲ ಪದಾರ್ಥದ ತರಗಳು ಕಂಡುಬರುವವು. ಯಕೃತಮಾಂದ್ಯವಿದ್ದಲ್ಲಿ ಈ ಔಷಧದಿಂದ ಗುಣವಾಗುವದು. (ನೇ. ಸ.)

**ಕಾ. ಫಾ:**— ದಾಹಾವಸ್ಥೆಯಲ್ಲಿ ತೀರ ಸೋತಂತೆ ಅನಿಸುತ್ತಿದ್ದಲ್ಲಿ. ಮಾನಸಿಕ ಅಸ್ವಸ್ಥತೆಯ ಮೂಲಕ ಮೂತ್ರವು ಬಹಳಾಗುತ್ತಿದ್ದಲ್ಲಿ.

ಮೂತ್ರಪಿಂಡಗಳಲ್ಲಿಯ ಸ್ನಾಯುಗಳ ಶಕ್ತಿಹೀನತೆ ಅದರಿಂದ ಮೂತ್ರವು ಸೋರಹತ್ತುವದು. ಮೂತ್ರವನ್ನು ನಿಲ್ಲಿಸಿ ಹಿಡಿಯಲು ಅಶಕ್ತತೆ. ಮೂತ್ರವು ಹೋಗುವ ಭಾಗದಲ್ಲಿ ಉರುಪು. ತೊಗಲು ಸುಲಿಯುತ್ತದೆ. ಮೂತ್ರಮಾರ್ಗದಿಂದ ರಕ್ತವು ಹೋಗುವದು. ಸ್ನಾಯುಗಳ ದುರ್ಬಲತೆಯ ಮೂಲಕ ಹಾಸಿಗೆಯಲ್ಲಿಯೇ ತಿಳಿಯದೆ ಮೂತ್ರವಾಗುವದು.

**ಫೇ. ಫಾ:**— ಮೂತ್ರಾಶಯದಲ್ಲಿಯೂ ಮೂತ್ರಮಾರ್ಗದಲ್ಲಿಯೂ ಕಡೆದಂತೆ ಒಂದೇಸವನೆ ವೇದನೆಯೂ ತಿಂಡೆಯೂ.

**ವ್ಹ್ಯಾ. ಫಾ:**— ಮೂತ್ರವಾಗುವದು ಒಮ್ಮಿಂದೊಮ್ಮೆ ನಿಲ್ಲುವದು. ಪುನಃ ಆಗುವದು. ಪುನಃ ನಿಲ್ಲುವದು. ಅಶ್ಮರಿ. ಆದರಿಂದ ಭಯಂಕರ ಕಳೆ. ಬಿಸಿನೀರಿನೊಳಗಿಂದ ಮೇಲಿಂದ ಮೇಲೆ ಕೊಡಬೇಕು. ತಿರುಗಾಡುವಾಗಲೂ ನಿಂತಾಗಲೂ ಮೂತ್ರಕ್ಕೆ ಹೋಗಬೇಕೆಂದೆನಿಸುವದು.

**ನೇ. ಸ:**— ಮೂತ್ರದಲ್ಲಿ ಇಟ್ಟಂಗಿಯ ಕಣಗಳಂಥವುಗಳ ತರವು ಕೆಳಗೆ ಕೂತದ್ದು ಮತ್ತು ಭಾಂಡಿಯ ಮಗ್ಗಲಿಗೆ ಅಂಟಿದಂತೆ ಕಾಣುವವು. ಮೂತ್ರವು ಕೆಂಪಗಿದ್ದು ವಿಶೇಷವಾಗಿ ಪಿತ್ತಪ್ರಕೋಪವಿದ್ದಲ್ಲಿ. ಮೂತ್ರದಲ್ಲಿ ಉಸುಬಿನ ಕಣಗಳು ದೊರೆಯುವವು. ಅಶ್ಮರಿ. ಮೂತ್ರ ಬಹಳಾಗುವದು. ಮೂತ್ರದೊಳಗಿಂದ ಪಿತ್ತವೂ ಹೋಗುವದು. ಬಹಳ ದಿವಸದ ಸಂಧಿವಾತವಿದ್ದಂಥ ರೋಗಿಗಳಿಗೆ ಇದರುಪಯೋಗ ಬಹಳಾಗುವದು.

**ನೇ. ಫಾ:**— ಜಂತಾಗಲಿ ಆಮ್ಲಪಿತ್ತವಾಗಲಿ ಇವುಗಳ ಭಾವನೆಗಳು ಇದ್ದ ಹುಡುಗರಿಗೆ ತಿಳಿಯದೆ ಹಾಸಿಗೆಯಲ್ಲಿಯೇ ಮೂತ್ರವಾಗುವದು. ಕಪ್ಪು, ಕೆಂಪು ಬಣ್ಣದ ಮೂತ್ರವಾಗುವದಾದರೆ ವಿಶೇಷತಃ ಸಂಧಿವಾತವಿದ್ದಲ್ಲಿ. ಅಶ್ಮರಿ. ಮೇಲಿಂದಮೇಲೆ ಮೂತ್ರಕ್ಕೆ ಹೋಗಬೇಕೆಂದೆನಿಸುವದು. ಮಧುಮೇಹ.

**ನೇ. ಮೂ:** — ನೀರಿನಂಥ ತಿಳಿ ಮೂತ್ರವು ಬಹಳ ಆಗುತ್ತಿದ್ದು ರೋಗಿಯು ಅಶಕ್ತನಾಗುತ್ತಿದ್ದಲ್ಲಿ. ಇದು ಪ್ರಮುಖ ಔಷಧವು.

ನೇ. ಮೂ. ದ ಇತರ ಭಾವನೆಗಳು ಇದ್ದಲ್ಲಿ (ಮೂಗು, ಕಣ್ಣು ಇವುಗಳು ಸೋರುವದು ನಾಲಿಗೆಯು ಸ್ವಚ್ಛವಿರುವದು), ಮೂತ್ರಾಶಯದಾಹ; ಮೂತ್ರದ ನಂತರ ಭರದ ಕಳೆಗಳು, ನಡೆಯುವಾಗಲೂ ಕೆಮ್ಮುವಾಗಲೂ ತಿಳಿಯದೆ ಮೂತ್ರ ಸೋರುತ್ತಿದ್ದಲ್ಲಿ.

**ಕಲ್ಕೆ. ಸಃ**— ಮೂತ್ರಾಶಯದಾಹ; ಕೀವು ಹೋಗುತ್ತಿದ್ದಲ್ಲಿ ಸೂಕ್ಷ್ಮ ಅಸ್ಥಿಜ್ವರವಿದ್ದು ಮೂತ್ರವು ಕೆಂಪು ವರ್ಣದಿದ್ದರೆ.

**ಕಲ್ಕೆ. ಫಾ**:— ಮೂತ್ರಪಿಂಡದ ಎಲ್ಲ ಹಳೇ ರೋಗಗಳಲ್ಲಿ ಇದನ್ನು ನಡುನಡುವೆ ಕೊಡತಕ್ಕದ್ದು. ಅಶ್ಮರಿ;. ಮೂತ್ರದಲ್ಲಿ ಫಾಸಫೇಟಗಳ ಅಥವಾ ಅಶ್ಮರಿಯ ಸಣ್ಣ ಗಸಿ ಕೂಡುವದಾದರೆ ನೇಟ್ರಂ. ಸ. ಬುರುಗು ವುಳ್ಳ ಮೂತ್ರವು. ಮೂತ್ರವು ಬಹಳಾಗೋಣ. ಸಣ್ಣಮಕ್ಕಳಿಗಾಗಲಿ ವೃದ್ಧರಿಗಾಗಲಿ ಮೂತ್ರ ಕಟ್ಟಿ ಹಿಡಿಯಲಿಕ್ಕೆ ಆಗದಿದ್ದರೆ ಮೂತ್ರವು ತಿಳಿಯದೆ ಉಗುತ್ತಿದ್ದರೆ ನೇ. ಸ. ದ ನಂತರ ಕೊಡುವದು. ಮೂತ್ರದೊಳಗಿಂದ ಧಾತು ಹೋಗುವದು. ಮೂತ್ರದೊಳಗಿಂದ ಬಿಳೇ ಅಕ್ಕೀಕಚ್ಚಿನಂಥ ಪದಾರ್ಥ ಹೋಗುವದಾದರೆ ನೇ. ಫಾ.

**ಸಿಲಿಕಾ**:— ಮೂತ್ರದೊಳಗಿಂದ ಕೀವಿನಂಥ ಅಥವಾ ಕಫದಂಥ ಜಿಗಟ ಸಿಂಬಳು ಹೋಗುತ್ತಿದ್ದಲ್ಲಿ ಯೂರಿಕ ಆಮ್ಲದ ಕೆಂಪು ಉಸುಗಿನಂಥ ಗಸಿ ಮೂತ್ರದಲ್ಲಿ ಕೂಡುವದಾದರೆ ಮೂತ್ರಕ್ಕಾಗಿ ರಾತ್ರಿಯಲ್ಲಿ ಏಳಲೇ ಬೇಕಾಗುವದಾದರೆ.

**ಕಲ್ಕೆ. ಫ್ಲೋ**:— ಮೇಲಿಂದ ಮೇಲೆ ಮೂತ್ರಕ್ಕೆ ಹೋಗುವ ಇಚ್ಛೆ ಇದ್ದು ಮೂತ್ರವೂ ಬಹಳ ಆಗುವದಾದರೆ, ಒಮ್ಮೊಮ್ಮೆ ಮೂತ್ರವು ಕೆಂಪು ಬಣ್ಣದ್ದು ಇದ್ದು ಕಡಿಮೆಯಾಗುವದು. ಮತ್ತು ಅದಕ್ಕೆ ಉಗ್ರ ನಾತ ಬರುವದು.

**ಉಪಯುಕ್ತ ಸೂಚನೆ**—ಮೂತ್ರವಾಗುವದು ಒಮ್ಮಿಂದೊಮ್ಮೆ ನಿಂತು ಹೋದಲ್ಲಿ ಮ್ಯಾ. ಫಾ. ವನ್ನು ಬಿಸಿನೀರಿನಲ್ಲಿ ಹಾಕಿ ಮೇಲಿಂದ ಮೇಲೆ ಕೊಡುವದು. ಮೂತ್ರಾಶಯದ ಸ್ಥಳದಲ್ಲಿ ಹೊರಗಿನಿಂದ ಉಣ್ಣೆಯ ಬಟ್ಟೆಯನ್ನು ಇಡಬೇಕು. ಸ್ತ್ರೀಯರಿಗೆ ಗರ್ಭಾಶಯದಲ್ಲಿ ಮತ್ತು ಪುರುಷ

ರಿಗೆ ಗುದದ್ವಾರದಲ್ಲಿ ಬಸ್ತಿ ಕೊಟ್ಟಲ್ಲಿ ಬಹಳ ಸಮಾಧಾನವಾಗುವದು. ಮೂತ್ರದಲ್ಲಿ ಯಾವ ಕ್ಷಾರಗಳು ಸಂಚಿತವಾಗಿರುವವು ಎಂಬದು ಮೂತ್ರದ ಪರೀಕ್ಷೆ ಮಾಡಿದರೆ ತಿಳಿಯುವದು. ಅದು ತಿಳಿಯುವದಕ್ಕಾಗಿ ತಜ್ಞ ಡಾಕ್ಟರರ ಕಡಿಂದ ಮೂತ್ರ ಪರೀಕ್ಷೆ ಮಾಡಿಸಿ ಕಡಿಮೆಯಾದ ಕ್ಷಾರದ ಯೋಜನೆ ಲಕ್ಷಣಗಳಿಗನುಸರಿಸಿ ಮಾಡಬೇಕು. ಹೊಗೆಸೊಪ್ಪು ಕಮ್ಮನ ಮಸಾಲೆ ಹಾಕಿದ ಪದಾರ್ಥಗಳನ್ನೂ ವರ್ಜ್ಯಮಾಡಬೇಕು.

---

# ಮೂತ್ರಪಿಂಡದಾಹ

**Nephritis.** **ನೆಫ್ರಾಯ್ಟಿಸ್.**

ವೃಕ್ಕದಾಹವೆಂದರೆ ಮೂತ್ರಪಿಂಡದಾಹ. ವೃಕ್ಕದಾಹದ ವಿವರದ ಕೆಳಗೆ ಇದರ ವಿಚಾರ ಆಗಿಯೇ ಇದೆ. ಅಲ್ಲಿ ಹೇಳಿದ ಜಲಶೋಥಜನ್ಯ ಭಾವನೆಗಳು ಈ ಸ್ಥಳದಲ್ಲಿ ಹೇಳದೆ ಕೆಳಗೆ ಹೇಳಿದ ಭಾವನೆಗಳ ವಿಚಾರ ವನ್ನಷ್ಟೇ ಮಾಡಿದೆ. ಬೆನ್ನಿನಲ್ಲಿ ಮೂತ್ರಪಿಂಡದ ಸ್ಥಳದಲ್ಲಿ ಒಂದುಕಡೆಗೆ ಆಗಲಿ ಎರಡೂ ಕಡೆಗೆ ಆಗಲಿ ಭಾರವೆನಿಸುವದು ಮತ್ತು ನೋವೂ ಇರುವದು. ಬೆನ್ನಿನಲ್ಲಿ ಆರಂಭವಾಗಿ ಹೊಟ್ಟೆಯಲ್ಲಿ ಹೊಕ್ಕಳ ಕೆಳಗಿನವರೆಗೆ ಕಳಿಗಳು (ಭರದ ವೇದನೆ) ಬರುವವು. ಮೂತ್ರದ ಸಲುವಾಗಿ ತಿಣಕಲು ಬರಲಾರದು. ಮೂತ್ರದ ಕಾಲಕ್ಕೆ ಕಷ್ಟವಾಗುವದು. ನೋವೂ ಇರುವದು. ಮೂತ್ರವು ಬಿಸಿಯಿದ್ದು ಕೆಂಪುಬಣ್ಣದ್ದು ಇರುವದು. ಒಮ್ಮೊಮ್ಮೆ ಮೂತ್ರವು ಆಗುವದೇ ಇಲ್ಲ. ಮಳಮಳಿಸುವದು, ವಾಂತಿ, ಕಳೆ, ತಿಣಕದ ಹೊರ್ತು ಮೂತ್ರವಾಗದಿರುವದು ಈ ಭಾವನೆಗಳು ಇರುವವು. ಬೆನ್ನು ಕೆಳಗೆ ಮಾಡಿ ಮಲಗಿದಲ್ಲಿಯೂ ಅಲ್ಲಾಡಿದ್ದರಿಂದಲೂ ನೋವು ಹೆಚ್ಚಾಗುವದು.

ಅಶ್ಮರಿ, ಆಪಘಾತ, ಪೆಟ್ಟುತಗಲೋಣ, ವಳೆಯೋಣ, ಮೂತ್ರ ಕಟ್ಟೋಣ, ಮೂಲವ್ಯಾಧಿ, ಥಂಡಿ ಮುಂತಾದವುಗಳಿಂದ ಮೇಲೆ ಹೇಳಿದ ಭಾವನೆಗಳುಂಟಾಗುವವು.

**ಫೇ. ಫಾ:—** ಜ್ವರ, ವೇದನೆ, ಮುಂತಾದ ದಾಹದ ಭಾವನೆಗಳ ಮೇಲೆ, ಹೊಟ್ಟೆಯಲ್ಲಿಯೂ ಕೊಡುವದು. ಹೊರಗಿನಿಂದ ಲೇಪವೂ ಮಾಡಬಹುದು.

**ಕಾಲೀ. ಮೂ:—** ಫೇರಂ ಫಾ. ಮತ್ತು ಇದು ಇವುಗಳನ್ನು ಸರ್ತಿ ಮೇಲೆ ಕೊಡುವದು. ಬಾವು, ಮೂತ್ರದಲ್ಲಿ ಬಿಳೀ ಗಶಿ ಕೂಡಿ ಕೊಳ್ಳುವದು. ನಾಲಿಗೆಯು ಮೇಲೆ ಬಿಳೀ ಅಗ್ರ. ಮೂತ್ರದಲ್ಲಿ ಅಲ್ಬ್ಯು ಮೆನ್ನದ ಅಂಶ ಬಹಳಿರುವದು.

**ನೇಟ್ರಂ. ಫಾ:—** ಮೂತ್ರವು ಕಟ್ಟಿದ್ದರೆ ಅದು ಆಗುವದಕ್ಕೋ ಸ್ಕರ–ಅಶ್ಮರಿ.

**ನೇಟ್ರಂ. ಮೂ:—** ಮೂತ್ರಪಿಂಡದ ಭಾಗದಲ್ಲಿ ಎಳೆದಂತೆಯೂ, ಬಿಸಿಯೂ ಅನಿಸುತ್ತದೆ. ಮೂತ್ರದಲ್ಲಿ ಇಟ್ಟಗಿಯ ಕಣದಂಥ ಗಸಿಯು ಕೆಳಗೆ ಕೂಡುತ್ತದೆ. ಮೂತ್ರದಲ್ಲಿಂದ ರಕ್ತವೂ ಹೋಗುವದು. ಅಲ್ಬ್ಯು ಮಿನದ ಅಂಶವನ್ನು ಕಡಿಮೆ ಮಾಡಲು ಇದರಲ್ಲಿ ಸಾಮರ್ಥ್ಯ ವಿರುವದು.

**ಕಾಲೀ. ಫಾ:—** ಮಾನಸಿಕ ತಾಪ ಬಹಳಿದ್ದು ಆಲ್‌ಬ್ಯುಮಿನ್ನವೂ ಬಹಳ ಹೋಗುತ್ತಿದ್ದರೆ ಇದನ್ನೂ ಕಲ್ಕೆಫಾಸವನ್ನೂ ಸರ್ತಿಯ ಮೇಲೆ ಕೊಡಬೇಕು. ಅಶಕ್ತತೆಯ ಮೂಲಕ ಹೃದಯದ ಬಡೆತಗಳು ತಪ್ಪಿ ಬೀಳುತ್ತವೆ. ಮಧುಮೇಹ.

**ಕಲ್ಕೆ ಫಾ:—** ಮೂತ್ರದೊಳಗಿಂದ ಅಲ್ಬ್ಯುಮಿನವು ಬಹಳ ಹೋಗುತ್ತಿದ್ದರೆ ಇದು ಮುಖ್ಯ ಔಷಧವು. ಇದರ ಜತೆಗೆ ಕಾಲೀ ಫಾ. ವನ್ನು ಕೊಡಬೇಕು. ವೃಕ್ಕದಾಹದ ಮೇಲಿನ ಮುಖ್ಯ ಔಷಧವು.

**ನೇ. ಸ:—** ಈ ಔಷಧ ಕೊಟ್ಟಲ್ಲಿ ಮೂತ್ರಪಿಂಡದ ಕ್ರಿಯೆ ಭರದಿಂದ ನಡೆದು ಮೂತ್ರವು ಹೆಚ್ಚು ಪ್ರಮಾಣದಲ್ಲಿ ಸಿದ್ಧವಾಗುತ್ತದೆ. ಮತ್ತು ಅಶ್ಮರಿಯು ಇಲ್ಲದಂತಾಗುವದಕ್ಕೆ ಸಹಾಯವಾಗುವದು.

**ಉಪಯುಕ್ತ ಸೂಚನೆ:—** ದಾಹಯುಕ್ತ ಭಾವನೆಗಳ ಮೇಲೆ ಕಾಲಕ್ಕೆ ಸರಿಯಾಗಿ ಫೇ. ಫಾ. ಮತ್ತು ಕಾಲಿ. ಮೂ. ಇವುಗಳನ್ನು

ಕೊಟ್ಟಲ್ಲಿ ಅಷ್ಟರಿಂದ ಸಹ ಕಾರ್ಯವಾಗುವದು. ವೃಕ್ಕದಾಹದ ಮೇಲೆ ಕಲ್ಕೆ. ಫಾ. ಮತ್ತು ಕಾಲಿ. ಫಾ. ಇವುಗಳನ್ನು ಸರ್ತಿಯು ಮೇಲೆ ಕೊಡಬೇಕು. ಅನ್ನ ಮುಂತಾದವುಗಳನ್ನು ಜ್ವರದ ರೋಗಿಗೆ ಕೊಡುವಂತೆ ಕೊಡಬೇಕು. ಜ್ವರ, ದಾಹ, ಈ ವಿವರಗಳನ್ನು ನೋಡಿರಿ.

---

# ಮೂತ್ರದಾಹ

**Inflamation of the baldder.** ಇನ್‌ಫ್ಲೇಮೇಶನ್ ಆಫ್ ದಿ ಬ್ಲ್ಯಾಡರ್.

ಈ ರೋಗದಲ್ಲಿ ಮೂತ್ರವಾಗಬೇಕಾದರೆ ವೇದನೆಯಾಗುವದು. ಒಮ್ಮೊಮ್ಮೆ ಮಾತ್ರ ಕಟ್ಟು ಆಗುವದು. ಮೂತ್ರಬಸ್ತಿಯು ಸ್ಥಾನದಲ್ಲಿ ಬಲವುಳ್ಳ ವೇದನೆ ಇರುವದು. ಒತ್ತಿದಲ್ಲಿಯೂ ಅಲ್ಲಾಡಿದ್ದರಿಂದಲೂ ವೇದನೆ ಹೆಚ್ಚು. ವೇದನೆ ಮೇಲೆ ಮೂತ್ರಪಿಂಡದವರೆಗೂ ಕೆಳಗೆ ಮೂತ್ರ ದ್ವಾರದ ಪರ್ಯಂತವೂ ಇರುವದು. ಬಸ್ತಿಯು ಸ್ಥಾನದಲ್ಲಿ ಉರುವೂ ನೋವೂ ಇರುವದು. ಮೇಲಿಂದ ಮೇಲೆ ಮೂತ್ರವಾಗುವದು. ಮೂತ್ರ ವಾಗುವಾಗ್ಗೆ ನೋಯುವದು. ಮೂತ್ರವು ಹನಿ ಹನಿಯಂತೆ ಬೀಳುವದು. ಬಹಳ ತಿಣಕಬೇಕಾಗುವದು. ಬಹಳ ಉರುವು ಇರುವದು. ಮೂತ್ರವು ರಕ್ತ, ಕೀವು, ಶ್ಲೇಷ್ಮ ಇವುಗಳಿಂದ ಕೂಡಿದ್ದು ಇರುವದು. ಮೂತ್ರವು ಕೆಂಪುಬಣ್ಣದ್ದು ಇರುವದು. ಒಮ್ಮೊಮ್ಮೆ ರಕ್ತವೂ ಬೀಳುವದು. ಒಮ್ಮೊಮ್ಮೆ ಜ್ವರವೂ ಬರುವದು. ವಾಂತಿ ಆಗುತ್ತದೆ. ಸೋತಂತೆ ಅನಿಸುತ್ತದೆ ಮತ್ತು ತಣ್ಣನ ಬೆವರೂ ಬಿಡುವದು. ಇವು ಬಸ್ತಿಯು ಶೀಘ್ರದಾಹದ ಲಕ್ಷಣಗಳು. ದೀರ್ಘದಾಹದಲ್ಲಿ ವೇದನೆ ಇಷ್ಟು ಬಹಳ ಇರುವದಿಲ್ಲ. ಆದರೆ ಮೂತ್ರಕ್ಕೆ ಮಾತ್ರ ಮೇಲಿಂದ ಮೇಲೆ ಹೋಗ ಬೇಕಾಗುವದು. ಮೂತ್ರವು ಮಣ್ಣಿನ ಬಣ್ಣದ್ದು ಇರುವದು. ಅದಕ್ಕೆ ಹೊಲಸುನಾತ ಇರುವದು. ಮೂತ್ರದ ಕೆಳಗೆ ದಟ್ಟ ಜಿಗಟು ತರ ಕೂತದ್ದು ಇರುವದು.

ಶೀತ, ಗಾಳಿ, ಅಪಘಾತ, ಮೂತ್ರಸ್ತಂಭ, ಉಪದಂಶದಂಥ ರೋಗ, ಕ್ಷೋಭದಾಯಕ ಔಷಧಗಳು, ಅಶ್ಮರಿ ಮುಂತಾದವುಗಳ ಮೂಲಕ ಈ ರೋಗವಾಗುವದು.

**ಫೇ. ಫಾ:**— ಜ್ವರ, ವೇದನೆ, ದಾಹದ ಭಾವನೆ ಮುಂತಾದವುಗಳ ಬಗ್ಗೆ ಮೊದಲು ಕೊಡುವದು. ಕೆಂಪು ಬಣ್ಣದ ಮೂತ್ರವು. ಮೇಲಿಂದ ಮೇಲೆ ಮೂತ್ರಕ್ಕೆ ಹೋಗುವ ಪ್ರವೃತ್ತಿ. ಒಮ್ಮೊಮ್ಮೆ ಮೂತ್ರವು ತೀರ ಕಟ್ಟುವದು.

**ಕಾ. ಮು:**— ರೋಗದ ದ್ವಿತೀಯಾವಸ್ಥೆ ಬಾವು ಇರುವದು. ಮೂತ್ರದೊಳಗಿಂದ ದಟ್ಟ ಬಿಳೀ ಜಿಗಟು ಸ್ರಾವವು ಹೋಗುವದು. ಬಸ್ತಿಯ ಬಹಳ ದಿವಸದ ಬಾವು.

**ಕಾಲೀ. ಫಾ:**— ದಣಿವಿಕೆ ಅತಿಶಯವಿರುವದು. ಮೂತ್ರದೊಳಗಿಂದ ಕೇವಲ ರಕ್ತವೇ ಹೋಗುವದು. ಬಸ್ತಿದಾಹ, ಮುಖ್ಯ ಔಷಧದ ಜತೆಗೆ ಸರ್ತಿಯ ಮೇಲೆ ಕೊಡುವದು.

**ಕ್ಯಾಲ್ಕೆ. ಸ:**— ರೋಗದ ತೃತೀಯಾವಸ್ಥೆಯಲ್ಲಿ ಮೂತ್ರದೊಳಗಿಂದ ಕೀವು ಹೋಗುತ್ತಿದ್ದಲ್ಲಿ.

**ಉಪಯುಕ್ತ ಸೂಚನೆ:**— ಫೇರಂ ಫಾಸ. ಕಾಲೀ. ಮು. ಇವುಗಳನ್ನು ಮೊದಲಿನಿಂದ ಕೊಟ್ಟಲ್ಲಿ ಕೆಲಸವಾಗುವದು. ಬಸ್ತಿಯ ಸ್ಥಳದಲ್ಲಿ ಕಾವು ಕೊಟ್ಟುದರಿಂದ ವೇದನೆ ನಿಂತು ಮೂತ್ರವಾಗುವದು. ಗುದದಲ್ಲಿಯೂ ಗರ್ಭಾಶಯ ಮಾರ್ಗದಲ್ಲಿಯೂ ಬಿಸಿ ನೀರಿನ ಬಸ್ತಿ ಕೊಟ್ಟಲ್ಲಿ ಗುಣವಾಗುವದು. ಶ್ರಮ ಮಾಡಬಾರದು. ಜ್ವರವಿದ್ದವರಿಗೆ ಕೊಡುವಂಥ ಅನ್ನ ಕೊಡಬೇಕು. ಮೂತ್ರಪಿಂಡದ ರೋಗ, ಮೂತ್ರ ಪಿಂಡದಾಹ, ಜ್ವರ, ದಾಹ ಮುಂತಾದ ವಿವರಗಳನ್ನು ನೋಡಿರಿ.

---

# ಮೂತ್ರಾಶಯ ಶೈಥಿಲ್ಯ

## Enuresis Incontinence of Urine.

## ಎನ್ಯೂರೆಸಿಸ್ ಇನ್‌ಕೌಂಟಿನನ್ಸ ಆಫ್ ಯುರಿನ್.

ಹಾಸಿಗೆಯಲ್ಲಿ ಮೂತ್ರವಾಗುವ ಭಾವನೆಯು ಸಣ್ಣ ಹುಡುಗರಲ್ಲಿ ಕಂಡುಬರುವದು. ಎಷ್ಟೋ ಹುಡುಗರಿಗೆ ಆ ಕೆಟ್ಟ ಚಟವೇ ಇರುವದು. ಸರ್ವಸಾಧಾರಣ ಅಶಕ್ತತೆ, ಮೂತ್ರ ಬಸ್ತಿಯಲ್ಲಿ ಕಣಗಳು (ಹರಳು) ಇರೋಣ, ಗಂಟಲದಲ್ಲಿ ಮಾಂಸಾಂಕುರ ಹುಟ್ಟುವದು. ಇವೇ ಈ ರೋಗದ ಕಾರಣಗಳು. ಒಮ್ಮೊಮ್ಮೆ ಈ ಭಾವನೆಯು ಮಗುವಿಗೆ ಹುಚ್ಚು ಹಿಡಿಯುವ ಪೂರ್ವಚಿನ್ಹವೆಂದು ತಿಳಿಯಲ್ಪಡುತ್ತದೆ. ಇದು ಮೂತ್ರೇಂದ್ರಿಯದಲ್ಲಿಯ ಸ್ನಾಯುಗಳ ಶೈಥಿಲ್ಯದ ಲಕ್ಷಣವೂ ಇರುವದು. ವೃದ್ಧರ ಮೂತ್ರಾಶಯ ಶೈಥಿಲ್ಯದಲ್ಲಿ ಈ ಲಕ್ಷಣವು ಕಂಡುಬರುವದು. ಸಿದ್ದೆ ಒಡಕ ಹುಡುಗರಲ್ಲಿ ಈ ಭಾವನೆ ಕಂಡುಬರುವದು. ೧೨।೧೩ ವರ್ಷಗಳ ಕಿಂತಲೂ ಹೆಚ್ಚಿನ ವಯಸ್ಸಿನ ಹುಡುಗರಲ್ಲಿ ಈ ಭಾವನೆ ಕಂಡುಬರುವದಿಲ್ಲ.

**ಫೇ. ಫಾ:**— ಬಹುಶಃ ಸಣ್ಣ ಮಕ್ಕಳು ರಾತ್ರಿಯಲ್ಲಿ ಹಾಸಿಗೆಯಲ್ಲಿ ಮೂತ್ರಮಾಡುವವು. ಮೂತ್ರಾಶಯಶೈಥಿಲ್ಯದ ಮೂಲಕ ಸ್ತ್ರೀಯರಿಗೆ ಕೆಮ್ಮು ಬರುವಾಗ ಮೂತ್ರವು ಆಗುವದು.

**ಕಲ್ಕೆ. ಫಾ:**— ಸಣ್ಣ ಹುಡುಗರಿಗೂ ವೃದ್ಧರಿಗೂ ಇದರ ಉಪಯೋಗವಾಗುವದು. ನೇಟ್ರಂ ಸ. ನಂತರ ನಡುನಡುವೆ ಇದನ್ನು ಕೊಡಬೇಕು.

**ನೇ. ಸ:**— ರಾತ್ರಿಯಲ್ಲಿ ನಿದ್ರಿಯಲ್ಲಿಯೇ ಮೂತ್ರವಾಗುವದಾದರೆ.

**ನೇ. ಫಾ:**— ಜಂತಿನ ಮೂಲಕವೂ ಪಿತ್ತದ ಮೂಲಕವೂ ಸಣ್ಣ ಮಕ್ಕಳಿಗೆ ತಿಳಿಯದೆ ಮೂತ್ರವಾಗುವದು.

**ಕಾಲೀ. ಫಾ**— ಮೂತ್ರಾಶಯದಲ್ಲಿಯ ಸ್ನಾಯುಗಳ ವೈಕ್ಲವ್ಯದ ಮೂಲಕ ಮೂತ್ರ ಕಟ್ಟು ಆಗುವದಿಲ್ಲ. ಅದು ತನ್ನಷ್ಟಕ್ಕೇ ಸೋರುತ್ತಿರುವದು.

**ಉಪಯುಕ್ತ ಸೂಚನೆ:**— ಮಲಗುವ ಕಾಲಕ್ಕೆ ಹುಡುಗರಿಗೆ ಮೂತ್ರ ಮಾಡಿಸಿ ತಂದು ಮಲಗಲು ಜಾಗ್ರತೆ ಇಡಬೇಕು. ಮೂರನೇ ಪ್ರಹರದ ನಂತರ ಹುಡುಗರಿಗೆ ಹೆಚ್ಚು ನೀರು ಕುಡಿಯಗೊಡಬಾರದು. ಹುಳಿ ಹಣ್ಣು, ಉತ್ತೇಜಕ ಪದಾರ್ಥ ಮುಂತಾದವುಗಳನ್ನು ತಿನ್ನಲಿಕ್ಕೆ ಕೊಡಬಾರದು. ಮಲಗುವದಕ್ಕಿಂತ ೧೦।೧೫ ಮಿನಿಟು ಮೊದಲು ಹುಡುಗರಿಗೆ ತಣ್ಣೀರಿನಲ್ಲಿ ಕೂಡಿಸಿದರೆ ಬಹಳ ಉಪಯೋಗವಾಗುವದು. ಮಲಗುವದಕ್ಕಿಂತ ೨ ತಾಸು ಪೂರ್ವದಲ್ಲಿ ಸಣ್ಣ ಮಕ್ಕಳಿಗೆ ಬೆಣ್ಣೆ ತಿನ್ನಲಿಕ್ಕೆ ಕೊಟ್ಟಲ್ಲಿ ಉಪಯೋಗವಾಗುವದು.

---

# ಮೂತ್ರಾಶ್ಮರಿ

**Urinary Stone.** ಯುರಿನರಿ ಸ್ಟೋನ.

ಮೂತ್ರದಲ್ಲಿ ಕಲ್ಲು ಸಿದ್ಧವಾಗುವದೆಂದರೇ ಮೂತ್ರಾಶ್ಮರಿಯೆಂಬ ರೋಗವು. ಮೂತ್ರದ ಸ್ವಾಭಾವಿಕ (ಮೂಳ) ಕ್ಷಾರಗಳಲ್ಲಿಯೇ ವೃದ್ಧಿಯಾಗಿ ಹೊಸ ಕ್ಷಾರಗಳು ಸಿದ್ಧವಾಗಿ ಅದರ ಹರಳುಗಳಾಗುವವು. ಈ ಹರಳುಗಳು ದೊಡ್ಡವಾದ ನಂತರ ಮೂತ್ರ ನಲಿಕೆಯೊಳಗಿಂದ ಹೊರಬೀಳಬೇಕಾದರೆ ಬಹಳೇ ಕಷ್ಟ ಕೊಡುವವು. ಆ ವೇದನೆಗೆ ಮೂತ್ರ ಶೂಲವೆನ್ನುವರು. ಆ ಹರಳುಗಳಿಂದ ಮೂತ್ರದ ಮಾರ್ಗವು ಮುಚ್ಚಿದ್ದರಿಂದ ಮೂತ್ರಾಘಾತದ ಭಾವನೆಗಳು ಕಂಡುಬರುವವು. ಮೂತ್ರಾಶಯದಲ್ಲಿ ಹರಳು ಸೇರಿದಲ್ಲಿ ಮೂತ್ರ ಬಸ್ತಿ ದಾಹವುಂಟಾಗುವದು. ಮೇಲಿಂದ ಮೇಲೆ ಮೂತ್ರಶೂಲ ಉತ್ಪನ್ನವಾಗುವದೇ ಈ ರೋಗದಲ್ಲಿಯು ಮುಖ್ಯ ಕಷ್ಟವು. ಸಂಧಿವಾತ ಅಂಗುಲಿವಾತವಾಗುವ ಜನರಿಗೆ ಇದರ ಕಷ್ಟ ಬಹಳೇ ಆಗುವದು. ಹಿಂದೆ 'ನಿದಾನ' ಪ್ರಕರಣದಲ್ಲಿ ಮೂತ್ರಶೂಲ ಮತ್ತು ಇತರ ಶೂಲ ಇವುಗಳಲ್ಲಿಯು ಭೇದ ತಿಳಿಸಿ ಹೇಳಲ್ಪಟ್ಟಿದೆ. ಅದನ್ನು ಪುನಃ ಓದಬೇಕು. ಮೂತ್ರಾಶಯರೋಗ, ಮೂತ್ರೇಂದ್ರಿಯದರೋಗ, ಹೊಟ್ಟೆಶೂಲೆ ಮುಂತಾದ ವಿವರದಲ್ಲಿ ಕೊಟ್ಟ ಔಷಧಗಳನ್ನು ನೋಡಿರಿ.

---

# ಮೂಲವ್ಯಾಧಿ

**Piles.** ಪಾಯಿಲ್ಸ.

**ಗುದದ್ವಾರದ** ಒಳಭಾಗದಲ್ಲಿ ಇಲ್ಲವೆ ತುದಿಯ ಭಾಗದಲ್ಲಿಯು ಶಿರಗಳು ಬಾಯುವವು ಮತ್ತು ಅವುಗಳಿಗೆ ಮೊಳಿಕೆಗಳ ಆಕಾರ ವಾಗೋಣವೇ ಮೂಲ ವ್ಯಾಧಿಯು. ಈ ಮೊಳೆ ಅಥವಾ ಮೊಳಿಕೆಗಳಿಂದ ರಕ್ತ ಬೀಳಲಾರಂಭವಾದರೆ ಅದಕ್ಕೆ ರಕ್ತ ಮೂಲವ್ಯಾಧಿ ಎಂದೆನ್ನುವರು. ಮಲದ ಸಂಗಡವೇ ಕೆಂಪು ರಕ್ತ ಬೀಳುವದು. ಒಂದೊಂದು ಸಾರೆ ೧೦-೧೨ ತೊಲೆಯಷ್ಟು ರಕ್ತ ಬೀಳುವದು. ಶೌಚದ ಕಾಲಕ್ಕೆ ವೇದನೆ ಇರುವದು. ಶೌಚವಾದನಂತರ ಸಹ ವೇದನೆ ಇರುವದು. ಉರುವು ಸಹ ಇರುವದು. ಮೊಳಕೆಗಳಲ್ಲಿ ದಾಹವು ಉತ್ಪನ್ನವಾದರೆ ಬಹಳೇ ವೇದನೆ ಹಾಗೂ ಅಸ್ವಸ್ಥತೆಯಾಗುವವು. ಅದರಿಂದ ರೋಗಿಯು ಎಷ್ಟೋ ದಿವಸ ಹಾಶಿಗೆಯ ಮೇಲೆ ಬಿದ್ದುಕೊಂಡಿರ ಬೇಕಾಗು ವದು. ಅಂಡಾಶಯದಲ್ಲಿಯೂ, ಮೂತ್ರಾಶಯದಲ್ಲಿಯೂ ಗೆಜ್ಜೆಗಳಲ್ಲಿಯೂ ವೇದನೆ ಇರುವದು. ಬಹುಶಃ ಅವರೋಧವಿರುವದು. ಶೌಚದ ಕಾಲಕ್ಕೆ ಬಹಳ ನೋವು ಆಗುವದರಿಂದ ರೋಗಿಯು ಶೌಚಕ್ಕೆ ಹೋಗುವದು ತಪ್ಪಿ ಸುವನು. ತಲೆಶೂಲೆ; ಸ್ವಭಾವವು ಚಿರಡಿಖೋರವಾಗುವದು, ಅಸ್ವಸ್ಥತೆ; ಈ ಭಾವನೆಗಳಿದ್ದು ರಕ್ತ ಬಹಳ ಬೀಳುವದರಿಂದ ಬವಳಿ ಬರುವದು; ಮುಂದೆ ಮುಂದೆ ಪಾಂಡು ರೋಗವೂ ಆಗುವದು. ಸ್ವಲ್ಪ ದಿನಾವಧಿ ಮೇಲೆ ಸಾಧಾರಣವಾಗಿ ೩-೪ ವಾರಗಳನಂತರ ರಕ್ತ ಬೀಳುವದು ನಿಲ್ಲುವದು ಮೊಳಕೆಗಳು ಮಾತ್ರ ಇರುವವು. ಅದರಿಂದಾಗುವ ಕಷ್ಟವೂ ಕಡಿಮೆ ಆಗುವದು; ಒಮ್ಮೊಮ್ಮೆ ಅವು ಬಾಯುವವು, ಚುಚ್ಚಿದಂತೆ ನೋಯುವವು; ಉರುವು, ಟೊಂಕದಲ್ಲಿ ವೇದನೆ, ಒಮ್ಮೊಮ್ಮೆ ರಕ್ತವೂ ಬೀಳದಿರೋಣ ಇವೇ ಮುಂತಾದ ಲಕ್ಷಣದ ಮೂಲವ್ಯಾಧಿಯ ಪ್ರಕಾರ ಸಹ ಇರುವದು. ತ್ವಚೆಗೆ ಒಡಕು ( ಬಿರಕು ) ಬಿಟ್ಟಿದ್ದರಿಂದಲೂ ಮಲದ ಸಂಗಡ ರಕ್ತ ಬೀಳುವದು. ಆದರೆ ಸ್ಥಳದಲ್ಲಿ ಮೊಳಿಕೆ ಏನೂ ಇರುವದಿಲ್ಲ. ಬಿರಕಿನಲ್ಲಿ ಮಲದ ಸಂಗಡ ರಕ್ತವು ಅಂಟಿಕೊಂಡು ಸಹಸಾ ಹೊರಬೀಳು ವದು. ಮೂಲವ್ಯಾಧಿ ರಕ್ತದ ಧಾರಿಯು ಹಿಡಿಯುವದು. ಬಿರುಕುಗಳಲ್ಲಿ

ವೇದನೆಗಿಂತ ಉರುಪು ಬಹಳಿರುವದು. ಟೊಂಕ ನೋವು ಮುಂತಾದ ಭಾವನೆಗಳು ಬಿರುಕುಗಳಲ್ಲಿ ಇರುವದಿಲ್ಲ.

ಯಕೃತ,-ಪುಪ್ಪುಸ,-ಹೃದಯುಗಳ ರೋಗ, ಸರ್ವಕಾಲ ಅವರೋಧ ಯಾವತ್ತೂ ತಿಣಕುವ ಚಟಿ ( ವಿಶೇಷವಾಗಿ ಸ್ತ್ರೀಯರಲ್ಲಿ ), ವ್ಯಾಯಾಮ ಮಾಡದೆ ಸ್ವಸ್ಥ ಕೂತುಕೊಂಡಿರೋಣ, ಯಾವತ್ತು ಗಾದಿ ಮುಂತಾದ ಮೆತ್ತನ ಆಸನಗಳ ಮೇಲೆ ಕೂತುಕೊಂಡಿರೋಣ, ಗರ್ಭಾಶಯ ಭ್ರಂಶ– ಇವೇ ಮುಂತಾದವು ಇದರ ಕಾರಣಗಳು.

ಯಕೃತದಲ್ಲಿ ನೇ. ಸ; ಮತ್ತು ಕಾಲೀಮೂರ ಕ್ಷಾರಗಳು ಕಡಿಮೆ ಯಾದಲ್ಲಿ ಪಿತ್ತವು ಗಟ್ಟಿಯಾಗುವದು ಇಲ್ಲವೆ ಕಡಿಮೆಯಾಗುವದು ಹಾಗೂ ಕರಳುಗಳಲ್ಲಿ ಕಲ್ಕೆ. ಫ್ಲೊ. ಕ್ಷಾರವು ಕಡಿಮೆಯಾಗುವದು. ಅದರಿಂದ ಮೂಲವ್ಯಾಧಿಯು ಉದ್ಭವಿಸುವದು. ಎಂದು ಜೀವನ ರಸಾಯನ ಶಾಸ್ತ್ರಜ್ಞರ ಮತವು.

**ಕಲ್ಕೇ. ಫ್ಲೊ**:— ಇದು ಪ್ರಮುಖ ಔಷಧವು. ರಕ್ತ ಬೀಳುವದು, ತಲೆಯ ಕಡೆಗೆ ರಕ್ತಾಧಿಕ್ಯ, ಬೆನ್ನಿನ ಕೆಳಭಾಗದಲ್ಲಿ ವೇದನೆ ದೀರ್ಘಕಾಲದ ಮಲಾವರೋಧವು, ತಿಂಡೆ ಇದ್ದ ಮೂಲವ್ಯಾಧಿ ಇದ್ದಲ್ಲಿ ಹೊಟ್ಟೆಯಲ್ಲಿ ಕೊಡತಕ್ಕದ್ದು. ಹೊರಗಿನಿಂದ ಲೇಪವೂ ಮಾಡುವದು. ಮೈಯು ಹೊರಬೀಳುವದು.

**ಕಾ. ಮೂ:**— ನಾಲಿಗೆಯು ಬೆಳ್ಳಗಿರುವದು. ಕರೇ ದಟ್ಟ ಸ್ರಾವವು ಯಕೃತಮಾಂದ್ಯ ಕಲ್ಕೇ. ಫ್ಲೊ. ಜತೆಗೆ ಕೊಡಬೇಕು.

**ನೇ. ಸ**:— ಪಿತ್ತವಾದಲ್ಲಿ ಗುದದ್ವಾರದಲ್ಲಿ ಉಷ್ಣತೆ. ಕಲ್ಕೆ. ಫ್ಲೊ. ಮತ್ತು ಇದು ಸರ್ತೆಮೇಲೆ ಕೊಡಬೇಕು,

**ಮ್ಯಾ ಫಾ:**— ತೀವ್ರ, ಭರದ, ಕೊರದಂಥ, ಚುಚ್ಚಿದಂಥ ವೇದನೆ. ಹೊರಗಿನಿಂದ ಬಿಸಿನೀರಲ್ಲಿ ಕಲಿಸಿ ಹಚ್ಚುವದು.

**ನೇ. ಮೂ:**— ಗಟ್ಟಿ, ಶುಷ್ಕ ( ಒಣಗಿದ ) ಮಲ; ಮಲವು ಸಣ ಸಣ, ಹರಳುಗಳಂತೆ ಆಗಿ ಬೀಳುವದು. ಗುದದ್ವಾರದಲ್ಲಿ ಉರುಪು ಇರು

ವದು. ತಿಂಡೆಬಿಡುವದು. ಚುಚ್ಚಿದಂತಾಗುವದು. ಜೊಲ್ಲು ಬಹಳ ಸೋರುವದು. ಕಲ್ಕೆ. ಫ್ಲೂ. ದ ಸಂಗಡ ಸರ್ತೆವೇಲೆ ಕೊಡಬೇಕು.

**ಕಲ್ಕೆ. ಫಾ:**— ಇತರ ಔಷಧಗಳು ನಡೆದಾಗ್ಗೆ ನಡುನಡುವೆ ಇದನ್ನು ಸಹಾಯಕ ಔಷಧವೆಂದು ಕೊಡಬೇಕು.

**ಉಪಯುಕ್ತ ಸೂಚನೆ:**— ಯೋಚಿಸಿದ ಔಷಧವನ್ನು ಇಲ್ಲವೆ ಕಲ್ಕೆ. **ಫ್ಲ** ೩ × ವನ್ನು ತುಪ್ಪದಲ್ಲಿ ಇಲ್ಲವೆ ಬೆಂಣೆಯಲ್ಲಿ ಇಲ್ಲವೆ ವ್ಯಾಸಲೀನದಲ್ಲಿ ಕಲಿಸಿ ಮುಲಮು ಮಾಡಿ ಹೊರಗಿಂದ ಹಚ್ಚಬೇಕು. ಮೂಲವ್ಯಾಧಿಯಲ್ಲಿ ಬಹುತರವಾಗಿ ಯಕೃತದಲ್ಲಿ ಇಲ್ಲವೆ ಪಚನೇಂದ್ರಿಯಗಳಲ್ಲಿ ಏನಾದರೂ ದೋಷಗಳಿರುವದು. ಅವುಗಳನ್ನು ನಾಶಗೊಳಿಸಲಿಕ್ಕೆ ಯತ್ನ ಮಾಡಬೇಕು. ಈ ದೋಷಗಳು ಹೋಗದ ಏಸಃ ಮೂಲವ್ಯಾಧಿಯು ಸಮೂಲ ನಾಶವಾಗಲಾರದು. ಕಾಫೀ, ಮೆಣಶಿನಕಾಯಿ, ಮಸಾಲೆ ಹಾಕಿದ ಕಮ್ಮಿನ ತಿಂಡಿ ಪದಾರ್ಥ, ಪಚನವಾಗದ ಅನ್ನ, ಇತರ ಯಾವದೇ ತರದ ಮಾದಕಪದಾರ್ಥ ಬಹಳ ಸೇವಿಸಬಾರದು. ಶಕ್ಯವಿದ್ದಲ್ಲಿ ತೀರ ಬಿಟ್ಟು ಬಿಡಬೇಕು. ಹಂಣು ಹಂಪಲ ತಪ್ಪಲ ಪಲ್ಲೆ ಹೆಚ್ಚಿಗೆ ತಿನ್ನಬೇಕು. ಚಕ್ಕೋತದ ಪಲ್ಲೆ, ಬೆಂಣಿ, ಮಜ್ಜಿಗಿ ಈ ಪದಾರ್ಥಗಳನ್ನು ಹೆಚ್ಚು ಪ್ರಮಾಣದಲ್ಲಿ ತಿನ್ನಬೇಕು. ನಡುನಡುವೆ ಉಗರು ಬೆಚ್ಚನ ನೀರಿನ ಬಸ್ತಿ ಕೊಟ್ಟರೆ ಬಹಳ ಹಿತಕರವು. ಕಲ್ಕೆ. ಫ್ಲೂ. ದ ಪುಡಿ ಹಾಕಿದ ನೀರಿನ ಪಾತ್ರೆಯಲ್ಲಿ ರೋಗಿಯನ್ನು ಕೂಡಿಸಿದರೆ ಮೂಲವ್ಯಾಧಿಯ ವೇದನೆ ಬಹಳ ಕಡಿಮೆ ಯಾಗುವದು. ಕೂತುಕೊಂಡಿರುವ ವ್ಯವಸಾಯಗಳನ್ನೂ ಕಡಿಮೆ ಮಾಡಿ ಸ್ವಚ್ಛ ಬೈಲ ಹವೆಯಲ್ಲಿ ತಿರುಗಾಡಬೇಕು. ಯಕೃತವು ಕೆಟ್ಟಲ್ಲಿ ಈ ವ್ಯಥೆಯಾಗುವದು. ಅಪಚನ ಮುಂತಾದ ಕಾರಣಗಳು ಇರುವವು. ಆದ್ದರಿಂದಲೇ ಯಕೃತದ ಭಾವನೆಗಳ ರೋಗಿಯಲ್ಲಿಯು ಇತರ ಭಾವನೆಗಳನ್ನೂ ಸಹ, ಲಕ್ಷದಲ್ಲಿ ತಂದು ಅವುಗಳಿಗನುಸರಿಸಿ ಔಷಧಗಳನ್ನು ಒಂದಕ್ಕೊಂದರ ಜತೆಗೆ ಕೊಡಬೇಕು.

---

# ಮೂರ್ಛೆ

**Fainting.** ಫೇಂಟಿಂಗ.

ಮೇಲಿಂದಮೇಲೆ ಅರಿವು ತಪ್ಪೋಣವೇ ಮೂರ್ಛೆ. ತರುಣ, ಪಾಂಡು ರೋಗವಾಗಿದ್ದ ಹಾಗೂ ಗಾಬರಿ ಪ್ರಕೃತಿಯ ಸ್ತ್ರೀಯರಿಗೆ ದುಃಖ, ಸಿಟ್ಟು ಮುಂತಾದ ಪ್ರಬಲ ಮನೋವಿಕಾರ ಮೂಲಕ ಮೇಲಿಂದಮೇಲೆ ಮೂರ್ಛೆ ಹೊಂದುವದು ಕಂಡುಬರುವದು. ವಿಷದ ಹವೆಯಿಂದ ದೂಷಿತವಾದ ಸ್ಥಳಗಳಲ್ಲಿ ಹೋದದ್ದರಿಂದ ಸಹ ಮೂರ್ಛೆ ಹೊಂದುವದು ಶಕ್ಯವಿದೆ. ಹಸಿವೆ ಆಗಿದ್ದು ಕಾಲಕ್ಕೆ ಸರಿಯಾಗಿ ತಿನ್ನಲಿಕ್ಕೆ ದೊರೆಯದಿರೋಣ, ಹಸಿವೆ ಕಟ್ಟುವದು, ಅಪಸ್ಮಾರದ ಸೌಮ್ಯ ಪ್ರಕಾರ ಇವುಗಳಲ್ಲಿ ಈ ಉಪದ್ರವ ಕಂಡುಬರುವದು.

**ಕಾ. ಫಾ:**— ಅಶಕ್ತ ಗಾಬರಿಯಾಗುವ ಸ್ವಭಾವದ ಪ್ರಕೃತಿಯವರಲ್ಲಿ ಮೇಲಿಂದಮೇಲೆ ಮೂರ್ಛೆಬರುವ ಪ್ರವೃತ್ತಿ ಇರುವದು. ಕಾ. ಫಾ. ವು ಇದರಲ್ಲಿಯ ಪ್ರಮುಖ ಔಷಧವು.

**ಕಲ್ಕೆ. ಫಾ:**— ಕಾ. ಫಾ. ದ ಜತೆಗೆ ಇದನ್ನು ಕೊಡಬೇಕು. ಸಾಧಾರಣವಾಗಿ ಶಕ್ತಿದಾಯಕ ಔಷಧವೆಂದು ಇದರ ಉಪಯೋಗವಾಗುವದು.

**ಉಪಯುಕ್ತ ಸೂಚನೆ:**— ಅಶಕ್ತ ಗಾಬರಿಯಾಗುವ ಸ್ತ್ರೀಯರಿಗೆ ಮನಸ್ತಾಪವಾಗುವ ಕೆಲಸಗಳನ್ನು ಮಾಡಗೊಡಬಾರದು. ಊಟ ಉಡಿಗೆಗಳನ್ನು ಕಾಲಕ್ಕೆ ಸರಿಯಾಗಿ ಮತ್ತು ನಿಯಮಿತವಾಗಿ ಇಡಬೇಕು. ಅಪಸ್ಮಾರದಮೂಲಕ ಮೂರ್ಛೆಯು ಬರುವದು ಕಂಡುಬಂದಲ್ಲಿ ಅದಕ್ಕನುಸರಿಸಿ ಚಿಕಿತ್ಸೆ ಮಾಡಬೇಕು.

---

# ಮೆದುಳಿನ ದಣಿವಿಕೆ

**Brain Fag** ಬ್ರೇನ ಫ್ಯಾಗ್.

ಯಾವದೂ ಕೆಲಸಮಾಡಲು ಉತ್ಸಾಹವೂ ಸಾಮರ್ಥ್ಯವೂ ಇರುವದಿಲ್ಲ. ಸ್ವಲ್ಪ ಕೆಲಸ ಮಾಡಿದಾಗ ಸಹ ದಣಿಕೆ ಬರುವದು. ಬವಳಿ ಬರು

ವದು. ತಲೆ ನೋಯುವದು. ನಿರುತ್ಸಾಹವಿರುವದು. ಸೋತಂತೆ ಅನಿಸು ತ್ತದೆ. ನಿದ್ದೆಗೇಡೂ ಅಪಚನವೂ ಇವುಗಳ ಉಪದ್ರವಗಳೂ ಒಮ್ಮೊಮ್ಮೆ ಕಂಡುಬರುವವು. ಸ್ವಭಾವವು ಚಿರಡಿಖೋರವಾಗುವದು. ಮಾನಸಿಕ ರೋಗವೆಂಬ ವಿವರ ನೋಡಿರಿ.

**ಕಾ. ಫೊ:**—ತನ್ನ ಶಕ್ತಿಮೀರಿ ಯಾವದೇ ಮಾನಸಿಕ ಶ್ರಮಮಾಡುವ ರಿಂದ ಆಗುವ ಕಷ್ನಧಾ ಮಾಂದ್ಯವು. ಸ್ವಭಾವವು ಯಾವದೂಸಹನಾಗ ದಂಥಾದ್ದು ಯಾವಕೆಲಸವೂ ಮಾಡಲು ಬೇಡೆನಿಸುವದು. ನಿರುತ್ಸಾಹ, ದಣಿಕೆ; ಕಳಕೊಂಡ ಶಕ್ತಿಯನ್ನು ಪುನರುಜ್ಜೀವನ ಮಾಡಲು ಈ ಔಷಧ ಉಪಯೋಗ ಬಹಳಾಗುವದು. ತಲೆಯ ಹಿಂಭಾಗದಲ್ಲಿ ಸಂಣಾದ ನೋವು. ಕಂಣುಮುಚ್ಚು ಬಡಿಯುವದು. ಅಸ್ವಸ್ಥತೆ ಬಾಯಿಗೆ ಹೊಲಸು ನಾತ.

**ಕಲ್ಕೆ. ಫಾ:**— ಮುಖಚರ್ಯೆಯು ಕುಂದಿದ್ದು, ಬಾವು ಬಂದ ಹಾಗೆ ಇರುವದು. ಔದಾಸೀನ್ಯ ಅಶಕ್ತತೆಯ ಮೂಲಕ ಕೈಕಾಲುಗಳು ಯಾವಾಗಲೂ ತಂಣಗಾಗಿರುವವು. ಎಲ್ಲ ಅವಯವಗಳಲ್ಲಿ ಶೈಥಿಲ್ಯವೂ, ಬಧಿರ ತೆಯೂ; ರಾತ್ರಿಯಲ್ಲಿ ಬೆವರು ಬಹಳ ಬಿಡುವದು ನಿದ್ದೆಗೇಡು; ಹಸಿವೆಗೇಡು ಬಲಹೀನತೆ ಜೋಪಾಪಿತನ.

**ಸಿ:**— ಚಿತ್ತವೃತ್ತಿ ಅಸ್ಥಿರ, ಲಕ್ಷ್ಯವು ಹತ್ತುವದೇ ಇಲ್ಲ. ಮನಸ್ಸಿನಲ್ಲಿ ಚಿಂತಾತುರತೆ. ಉದ್ವಿಗ್ನತೆ ಸ್ವಲ್ಪಾದರೂ ಬರೆಯುವದೂ ಓದುವದೂ ಸಹನ ವಾಗುವದಿಲ್ಲ. ಶಾಲೆಗೆ ಹೋಗುವ ಮಕ್ಕಳಲ್ಲಿ ಚಿತ್ತ ಸ್ಥಿರತೆಯೂ ಏಕಾಗ್ರ ತೆಯೂ ಆಗುವದಿಲ್ಲವಾದರೆ.

**ನೇ. ಮೂ:**— ಉದಾಸೀನ ವೃತ್ತಿ. ಮುಖವು ಬಾಡಿದ್ದು; ಯಾವಾ ಗಲೂ ಅಶುಭ ಚಿಂತನೆ, ಅಳಬುರಕತನ, ದೋಷೈಕ ದೃಷ್ಟಿ, ನಿದ್ದೆಗೇಡು ಸ್ವಲ್ಪು ಮಾತಾಡಿದ್ದರಿಂದಲೂ ಶ್ರಮವಾಗುವದು.

**ವ್ಯಾ. ಫಾ:**— ಶರೀರ ನಡಗುವದು. ಸಾಧಾರಣ ಅಶಕ್ತತೆ ನಾಡಿ ಗತ ವೇದನೆ ಮುಂತಾದ ಭಾವನೆಗಳಿದ್ದರೆ ಇದರ ಉಪಯೋಗವಾಗುವದು.

**ಉಪಯುಕ್ತ ಸೂಚನೆ:**— ಪೂರ್ಣ ಶಾರೀರಿಕ ಮತ್ತು ಮಾಸಸಿಕ ವಿಶ್ರಾಂತಿ ತೆಗೆದುಕೊಳ್ಳಬೇಕು. ಹವೆ ಬದಲು ಮಾಡಲು ಒಳ್ಳೇ ಸ್ಥಳಕ್ಕೆ

ಹೋಗಬೇಕು. ತಲೆಗೆ ತಾಪವಾಗುವಂಥ ಯಾವದೇ ವ್ಯವಸಾಯ ಮಾಡ ಬಾರದು. ವ್ಯಾಯಾಮ, ತಿನ್ನುವದು ಕುಡಿಯುವದು; ಮಲಗುವದು, ಮುಂತಾದ ಯಾವತ್ತೂ ವ್ಯವಹಾರಗಳಲ್ಲಿ ನಿಯಮಿತತನ ಕಾಯುವದು ಬಹಳೇ ಅವಶ್ಯವಿರುವದು. ಕಾಲೀಫಾ. ದಿಂದ ಚಿಕಿತ್ಸೆಗೆ ಪ್ರಾರಂಭಮಾಡಿ ಅದರ ಜತೆಗೆ ಭಾವನಾನುಸಾರವಾಗಿ ಕಲ್ಕೆ. ಫಾ; ಫೇ. ಫಾ. ನೇಟ್ರಂ ಫಾ. ಇವುಗಳನ್ನು ಕೊಡಬೇಕು. ಇವುಗಳಿಂದ ತೀವ್ರವೇ ಸಮಾಧಾನವಾಗು ವದು. ಮೊದಲು ಫಾಸ್ಫೇಟಗಳನ್ನು ಕೊಟ್ಟು ಜ್ಞಾನ ತಂತುಗಳಮೇಲೆ ಒಳ್ಳೇ ಪರಿಣಾಮವಾದನಂತರ ಕಲ್ಕೆ. ಫಾ. ವನ್ನು ಇವುಗಳಿಗೆ ಸಹಾಯಕರ ವಾಗಿ ಕೊಡಬೇಕು. ಈ ಔಷಧ ಎಷ್ಟೋ ತಿಂಗಳವರೆಗೆ ಅಥವಾ ವರ್ಷ ಗಟ್ಲೆ ಕೊಡಬೇಕಾಗುವದು. ಒಳ್ಳೇ ಪಾಚಕ ಅನ್ನ, ಸ್ವಚ್ಛ ಹವೆ, ನಿಯ ಮಿತತನ ಮುಂತಾದವುಗಳನ್ನು ಸಾಧಿಸಿ, ಜೀವನ ರಸಾಯನದ ಔಷಧವನ್ನು ಅವುಗಳ ಜತೆಗೆ ಕೊಟ್ಟಲ್ಲಿ ಮಾನಸಿಕ ರೋಗವು ತಪ್ಪದೆ ನೆಟ್ಟಗಾಗುವದು. ಹೀಗೆ ಅನುಭವವುಂಟು.

---

# ಮುಡಿಬಕ್ಕೆ

**Aene.** **ಆಕ್ನೆ.**

ತಾರುಣ್ಯಾವಸ್ಥೆಯಲ್ಲಿ ಸ್ತ್ರೀಯರಿಗೂ, ಪುರುಷರಿಗೂ, ಗಲ್ಲದಮೇಲೆ, ಮೂಗಿನಮೇಲೆ ಹಣೆಯಮೇಲೆ ಮೊಡೆ ಬೊಕ್ಕೆಗಳು ಏಳುವವು. ಬೆನ್ನಿನ ಮೇಲೆಯೂ, ಎದೆಮೇಲೆಯೂ, ಒಮ್ಮೊಮ್ಮೆ ಏಳುವವು. ಅವು ಹಂಣಾಗಿ ಒಡೆಯುವವು. ಅವುಗಳಿಂದ ಬಿಳೇ ಅಥವಾ ಹಳದಿ ಸ್ರಾವ ಹೊರಡುವದು. ಒಬ್ಬೊಬ್ಬರಿಗೆ ಮೇಲಿಂದಮೇಲೆಯೂ ಹೆಚ್ಚು ಕಡಿಮೆ ಪ್ರಮಾಣದಲ್ಲಿಯೂ ಏಳುವವು. ಮುಡಿಬಕ್ಕೆ ಎದ್ದವರ ಮುಖವು ಎಂಣೆಂಣೆ ಬಸಿಯುವದು. ಚರ್ಯೆಯು ಕರ್ರಗೂ ಹೊಗೆ ಸುತ್ತಿದಂತೆಯೂ ಕಾಣುವದು. ಅಪಚನ, ಅಶಕ್ತತೆ, ಮಾನಸಿಕ ಅಸ್ವಾಸ್ಥ್ಯ ಮುಂತಾದ ಕಾರಣಗಳ ಮೂಲಕ ಬಕ್ಕೆ ಗಳು ಏಳುವವು.

**೩ಲ್ಕೆ. ಸ:—** ಬಕ್ಕೆಗಳೊಳಗಿಂದ ದಟ್ಟ ಹಳದಿ ಕೀವು ಹೋಗು ತ್ತಿದ್ದರೆ.

**ಕಾ. ಮೂ:—** ವಯಸ್ಸಿಗೆ ಬಂದ ತರುಣಿಯರ ಗಲ್ಲದಮೇಲಿನ ಮುಡಿಬಕ್ಕೆಗಳು, ಗರ್ಭಾಶಯುದಲ್ಲಿ ದೋಷವಿದ್ದಲ್ಲಿ.

**ಕಾ. ಸ:—** ಬಕ್ಕೆಗಳೊಳಗಿಂದ ಹಳದಿ, ಹಸರು, ಜಿಗಟು ಅಥವಾ ತಿಳಿ ಸ್ರಾವ ಹೋಗುವದಾದರೆ.

**ಉಪಯುಕ್ತ ಸೂಚನೆ:—** ಔಷಧ ಬಹಳ ದಿವಸ ಹೊಟ್ಟೆಯಲ್ಲಿ ಕೊಡತಕ್ಕದ್ದು. ಕಡಿಮೆಶಕ್ತಿಯು ಔಷಧದ ಲೇಪ ಸಹ ಮಾಡುವದು. ಗರ್ಭಾಶಯುದಲ್ಲಿಯು ದೋಷಗಳನ್ನು ಲಕ್ಷ್ಯದಲ್ಲಿ ತಂದು ಅದರ ಮೇಲೆ ಸಹ ಉಪಚಾರಮಾಡಬೇಕು.

---

## ಮೋತಿಬಿಂದು

Cataract. ಕ್ಯಾಟರ್ಯಾಕ್ಟ.

ಮೋತಿಬಿಂದು ಅಥವಾ ಕಣ್ಣುಪರೆ ಎಂಬ ರೋಗವು ವೃದ್ಧಾವಸ್ಥೆ ಯಲ್ಲಿ ಆಗುವದು. ಒಮ್ಮೊಮ್ಮೆ ತರುಣ ವಯಸ್ಸಿನಲ್ಲಿಯೂ ಮಧ್ಯಾವಸ್ಥೆ ಯಲ್ಲಿಯೂ ಆಗುವದುಂಟು. ಕಣ್ಣಿನಲ್ಲಿ ಸ್ಫಟಿಕದಂಥ ಒಂದು ದ್ರವ ಪದಾರ್ಥವಿರುವದು. ಅದು ಪಾರದರ್ಶಕವಿರುವದು. ಅದರ ಪಾರದರ್ಶ ಕತ್ವವು ಹೋಗಿ ಅಪಾರದರ್ಶಕವಾದನಂತರ ಕಣ್ಣಿಗೆ ಕಾಣದಂತೆ ಆಗುವದು. ಈ ಸ್ಥಿತಿಗೆ "ಮೋತಿಬಿಂದು" ಅನ್ನುವರು. ಕಣ್ಣುಪರೆ ಅಂತಲೂ ಅನ್ನುವರು. ಈ ಸ್ಫಟಿಕದಂಥ ದ್ರವಪದಾರ್ಥದ ಪಾರದರ್ಶಕತನ ಹೋಗಲುಹತ್ತಿದ ನಂತರ ಕೆಳಗೆ ಹೇಳಿದ ಲಕ್ಷಣಗಳು ಕಂಡುಬರುವವು. ಮೋತಿಬಿಂದುವು ಮಣ್ಣಿನ ಬಣ್ಣದ್ದೂ ನಸುಗೆಂಪು ಬಣ್ಣದ್ದೂ ಬಿಳೀ ಬಣ್ಣದ್ದೂ ಇರುವದು. ಬೆಳಕಿನಲ್ಲಿ ಸಣ್ಣದೂ, ಕತ್ತಲೆಯಲ್ಲಿ ದೊಡ್ಡದೂ ಕಾಣುವದು. ರೋಗಿಗೆ ಬೆಳಕಿನಲ್ಲಿ ಮಧ್ಯಾಹ್ನದಲ್ಲಿ ಕಾಣುವದು ಕಡಿಮೆ. ಕತ್ತಲೆಯಲ್ಲಿಯೂ ಸಾಯಂಕಾಲದಲ್ಲಿಯೂ ಸ್ವಲ್ಪ ಹೆಚ್ಚು ಕಾಣುವದು.

ಮೊದಲು ಮೊದಲು ದೂರದಲ್ಲಿಯ ಪದಾರ್ಥಗಳು ಮಸಮಸಕು ಕಾಣು ವವು. ಮುಂದೆ ಮುಂದೆ ಸಮೀಪದಲ್ಲಿಯ ಪದಾರ್ಥಗಳು ಸಹ ಮಂದ ಕಾಣುವವು. ಮಸಮಸಕು ಕಾಣುವದು ಹೆಚ್ಚುತ್ತ ಹೆಚ್ಚುತ್ತ ಹೋಗಿ ಕೊನೆಗೆ ಏನೂ ಕಾಣದಂತಾಗುವದು. ಹೀಗೆ ಆದರೆ ಮೋತಿಬಿಂದು ಅಥವಾ ಪರೆಯು ಪಕ್ವವಾಯಿತೆಂದು ತಿಳಿಯುವದು. ಬೆಳಕು, ಕತ್ತಲೆ, ಕರೇ ಬಣ್ಣ, ಪ್ರತಿಚ್ಛಾಯೆ ಇವುಗಳನ್ನು ಗುರುತು ಹಿಡಿಯುವರು. ಬೊಟ್ಟು ಮಾತ್ರ ಗುರುತು ಹಿಡಿಯಲಾರರು. ಈ ರೋಗವು ಶಸ್ತ್ರಕ್ರಿಯೆಯ ವಿನಃ ನೆಟ್ಟಗಾಗಲಾರದೆಂದು ತಿಳುವಳಿಕೆಯುಂಟು ಮತ್ತು ಅದು ತಕ್ಕಷ್ಟರ ಮಟ್ಟಿಗೆ ನಿಜವೂ ಅದೆ. ಆದರೆ ಅದು ಎಷ್ಟೋ ಸಾರೆ ಹೊಟ್ಟೆಯಲ್ಲಿ ಔಷಧ ತೊಗೊಂಡಿದ್ದರಿಂದಲೂ ನೆಟ್ಟಗಾದದ್ದು ಕಂಡುಬಂದಿದೆ. ಕಣ್ಣಿಗೆ ಅಪಘಾತ, ಮಧುಮೇಹ, ದೋಷಿಜ್ವರ, ಕಣ್ಣಿನ ಇತರ ರೋಗ ಇವು ಸಹ ಇದರ ಕಾರಣವಿರಬಹುದು. ಆನುವಂಶಿಕ ಕಾರಣವೂ ಇರಬಹುದು.

**ಕಲ್ಕೆ. ಫ್ಲೊ:**— ಮೋತಿಬಿಂದು; ಬಹಳ ವೇಳೆ ಒಂದೇ ಕಡೆಗೆ ನೋಡಿದಲ್ಲಿಯೂ ಕೆಲಸ ಮಾಡಿದಲ್ಲಿಯೂ ಕಣ್ಣಿನ ಮುಂದೆ ಮಸಮಸುಕು ಕಾಣುವದು. ಕಣ್ಣು ನೋಯುವವು. ವಿಶ್ರಾಂತಿಯಿಂದ ನೆಟ್ಟಗೆ ಇರುವದು.

**ಕಲ್ಕೆ. ಫಾ:**— ಮೋತಿಬಿಂದುವಿನ ಬೆಳಿಗೆಯನ್ನು ನಿಲ್ಲಿಸಲಿಕ್ಕೆ ಇದರ ಉಪಯೋಗ ನಿಶ್ಚಿತವಾಗಿ ಆಗುವದು. ಮುಂದಿನ ಭಾವನೆ ಇದ್ದಲ್ಲಿ ಬಹಳ ಉಪಯೋಗವಾಗುವದು. ತಲೆಶೂಲೆ ವಿಶೇಷತಃ ಬಲಗಡೆ ಭಾಗದಲ್ಲಿ ಕಣ್ಣುಗಳಲ್ಲಿ ವೇದನೆ. ಬಲಗಡೆಯ ಕಣ್ಣಿನಲ್ಲಿ ದಣಿದಂತೆ ಕಾಣುವದು. ಕಲ್ಕೆ. ಫಾ. ದಿಂದ ಈ ಭಾವನೆ ನೆಟ್ಟಗಾಗುವವು. ಹೊರ್ತಾಗಿ ಕಣ್ಣುಗಳು ತಾಟಿಸಿದಂತೆಯೂ (ಬಿಗಿದಂತೆಯೂ) ವಿಸ್ತಾರ ಹೊಂದಿದಂತೆಯೂ ಕಾಣುವವು. ಬವಳಿಯೂ ಬರುವದು.

**ಉಪಯುಕ್ತ ಸೂಚನೆ:**— ಭಾವನಾನುಸಾರವಾಗಿ ನೇತ್ರ ರೋಗವೆಂಬ ಸದರಿಸ ಕೆಳಗೆ ಕೊಟ್ಟ ಔಷಧಗಳು ಉಪಯೋಗವಾಗುವ ಸಂಭವವಿದೆ. ಭಾವನಾನುಸಾರ ಮೇಲೆ ಹೇಳಿದ ಔಷಧಗಳನ್ನು ಹೊಟ್ಟೆ

ಯಲ್ಲಿ ಕೊಡಬೇಕು. ಮತ್ತು ಕಣ್ಣಿನಲ್ಲಿ ಹಾಕುವದರ ಸಲುವಾಗಿ ಡಾಕ್ಟರ ಮೇಸರ ಸಾಹೇಬರು ಶಿಫಾರಸು ಮಾಡಿದ "ಸಕ್ಕಸ ಸಾಯನೇರೆರಿಯಾ ಮಾರಿಟಮಾ" ಎಂಬ ಔಷಧವನ್ನು ಕಣ್ಣಿನಲ್ಲಿ ಹಾಕಬೇಕು. ಆ ಔಷಧ ಉರಿಯುವದಿಲ್ಲ. ಹಾಗೂ ಅಪಾಯವೂ ಮಾಡುವದಿಲ್ಲ. ಅಮೇರಿಕೆಯಲ್ಲಿ ದೊಡ್ಡ ದೊಡ್ಡ ಆಸ್ಪತ್ರಿಗಳಲ್ಲಿ ಇದೇ ಔಷಧ ಉಪಯೋಗ ಮಾಡುತ್ತಿದ್ದು ಶಸ್ತ್ರಕ್ರಿಯೆಯು ಹೊರತು ಮೋತಿಬಿಂದು ನೆಟ್ಟಗಾದ ಉದಾಹರಣೆಗಳು ಕೇಳಿಕೆಯಲ್ಲಿ ಇವೆ. ಮೋತಿಬಿಂದುವನ್ನು ತೀರ ಇಲ್ಲದಂತೆ ಮಾಡಿ ಕಣ್ಣುಗಳನ್ನು ಮೊದಲಿನಂತೆ ನೆಟ್ಟಗೆ ಮಾಡುವ ಶಕ್ತಿಯು ಈ ಔಷಧದಲ್ಲಿ ಇದ್ದಂತೆ ಹೇಳುತ್ತಾರೆ.

---

## ಯಕೃದ್ವಿಕೃತಿ

**Diseases of the liver.** **ಡಿಸೀಜಿಸ್ ಆಫ್ ದಿ ಲಿವ್ಹರ.**

ಯಕೃತದಲ್ಲಿ ರಕ್ತಸಂಚಯು, ಯಕೃತದಾಹ, ಯಕೃತವೃದ್ಧಿ ಯಕೃತಸಂಕೋಚ, ಯಕೃದ್ದಾಲ್ಯೂದರ, ಯಕೃತವೃದ್ಧಿ, ಕಾಮಣಿ, ಪಿತ್ತಾಶ್ಮರಿ, ಮುಂತಾದವುಗಳು ಯಕೃತದ ರೋಗಗಳು. ಜೋರಿನಿಂದ ಶ್ವಾಸ ಎಳಕೊಂಡ ನಂತರ ಯಕೃತ ಭಾಗದಲ್ಲಿ ಕೈಹಚ್ಚಿದಲ್ಲಿ ನೋಯುವದು, ಯಕೃತವೃದ್ಧಿಯಾಗುವದು, ಶ್ವಾಸ ಎಳಕೊಳ್ಳುವಾಗ ಕಷ್ಟವಾಗೋಣ, ಬಲಭುಜದ ಕಡೆಗೆ ವೇದನೆಯ ಭಾಸ, ತಲೆನೋವು, ಮಳಮಳಿಸುವದು ಹಸರು, ಜಿಗಟು ಶೌಚವಾಗೋಣ, ಅಪಚೋಧ ಅಥವಾ ರೇಚ ಇರುವದು, ಪಿತ್ತಯುಕ್ತ ಅಥವಾ ರಕ್ತಯುಕ್ತ ರೇಚವಿರೋಣ,- ಇವು ಯಕೃತದಲ್ಲಿಯ ರಕ್ತಸಂಚಯುದ ಲಕ್ಷಣಗಳೆಂದು ತಿಳಿಯಬೇಕು. (Congestion of the liver) ಈ ಲಕ್ಷಣಗಳು ತೀವ್ರವಾಗಿ ನೆಟ್ಟಗಾಗದಿದ್ದಲ್ಲಿ ರೋಗಕ್ಕೆ ಹಳೇ ಸ್ವರೂಪ ಪ್ರಾಪ್ತವಾಗುತ್ತದೆ ಮತ್ತು ಮೇಲೆ ಹೇಳಿದ ಲಕ್ಷಣಗಳು ಕಂಡುಬರುವವು. ಅದರಿಂದ ಯಕೃತವೃದ್ಧಿ ಯಕೃತಸಂಕೋಚ, ಯಕೃತಕಾಠಿಣ್ಯ ಮುಂತಾದ ವಿಕಾರಗಳು ಉದ್ಭವಿಸುವವು.

ಎಣ್ಣೆಯಲ್ಲಿ ಕರಿದ ಇಲ್ಲವೆ ಎಣ್ಣೆಯಲ್ಲಿ ಮಾಡಿದ, ಸಕ್ಕರೆಯ, ಸಿಹಿಯಾದ, ಹಾಗೂ ಕಮ್ಮಿನ ಪದಾರ್ಥ ಹೆಚ್ಚು ತಿನ್ನುವದು; ಮದಾತ್ಯಯ, ಮುಟ್ಟು ಅಥವಾ ಮೂಲವ್ಯಾಧಿಯ ರಕ್ತಸ್ರಾವವು ಒಮ್ಮಿಂದೊಮ್ಮೆ ನಿಲ್ಲುವದು; ಇವು ಇದರ ಕಾರಣಗಳುಂಟು.

ಯಕೃತ ಬೆಳೆದಿದ್ದು, ಯಕೃತ ಭಾಗದಲ್ಲಿ ವೇದನೆ; ಒಮ್ಮೊಮ್ಮೆ ಅವು ಬಹಳ ತೀವ್ರ ಮತ್ತು ಸಹನವಾಗದಂಥವು ಇರುವವು. ಅಲ್ಲಾಡಿದ್ದರಿಂದ, ಕೆಮ್ಮಿದ್ದರಿಂದ ಹೆಚ್ಚಾಗುವವು. ಬಲಭುಜದ ಭಾಗದಲ್ಲಿ ಸೋವು ಇರುವದು. ಹಾಗೂ ಶರೀರದ ಮೇಲೆ ಸ್ವಲ್ಪ ಒತ್ತಾಯವಾದಲ್ಲಿ ಉದರಭಾಗದ ಬಲಭಾಗದ ಸ್ನಾಯುಗಳಲ್ಲಿ ನೋಯುವದು. ಎಡಮಗ್ಗುಲ ಮೇಲೆ ಮಲಗಲಾಗದು. ಯಕೃತದಲ್ಲಿ ಬಾವು ಇರುವದು. ತ್ವಚೆ ಹೆಚ್ಚು ಕಡಿಮೆ ಹಳದಿ ಕಾಣುವದು. ಮೈಯಲ್ಲಿ ಚಳಿ ಸೇರಿ ಜ್ವರ ತುಂಬುವದು. ಇವು ಯಕೃತ ಭಾಗದ ಭಾವನೆಗಳು. ಯಕೃತರಕ್ತಸಂಚಯದ ಹಾಗೆಯೇ ಯಕೃತ ದಾಹಕ್ಕಾದರೂ ಕಾರಣಗಳಿರುವವು. ಹೊಟ್ಟೆಯ ಮೇಲೆ ಪೆಟ್ಟು ಹತ್ತೋಣ, ಶೈತ್ಯವು ಬಹಳಾಗೋಣ, ಉಷ್ಣತೆ ಇವುಗಳಿಂದ ಸಹ ಯಕೃತ ದಾಹವಾಗಬಹುದು.

ಯಕೃತದಾಹವು ಪ್ರಥಮಾವಸ್ಥೆಯಲ್ಲಿಯೂ ದ್ವಿತೀಯಾವಸ್ಥೆಯಲ್ಲಿಯೂ ನೆಟ್ಟಗೆ ಆಗದಿದ್ದರೆ ತೃತೀಯಾವಸ್ಥೆ ಆರಂಭವಾಗಿ ಕೀವಾಗ ಹತ್ತುವದು. ಆಗ ಜ್ವರವಿರುವ ಕಾಲಕ್ಕೇ ಇಲ್ಲವೆ ಜ್ವರ ಇಳಿಯುವ ಕಾಲಕ್ಕೇ ಪುನಃ ಥಂಡಿಯು ಕಡಕಡಿಸಿ ಬಂದು ಪುನಃ ಜ್ವರ ತುಂಬುವದು. ಬೆವರೂ ಬರುವದು. ಮುಂದೆ ಮತ್ತೂ ಥಂಡಿ ಮತ್ತೂ ಜ್ವರವು. ಹೀಗೆ ಮೇಲಿಂದ ಮೇಲೆ ಆಗುತ್ತ ಹೋದರೆ ಯಕೃತದಲ್ಲಿ ಕೀವಾಗಿದೆಂದು ತಿಳಕೊಳ್ಳತಕ್ಕದ್ದು. ಅಜೀರ್ಣದ ಚಿನ್ಹಗಳಿರುವವು. ನಾಡಿಯು ತೀವ್ರ ನಡೆಯುವದು. ರೋಗಿಯು ಅಶಕ್ತನಾಗುವನು. ನಾಲಗೆಯ ಮೇಲೆ ಬಿಳೇ ಅಗ್ರ. ವಾಂತಿಗಳಾಗುವವು. ಆಮಾಂಶವೂ ಇರುವದು. ಒಮ್ಮೊಮ್ಮೆ ತೀಕ್ಷ್ಣ ದಾಹದ ಭಾವನೆಗಳು ಇಲ್ಲದಲೇ ಮೇಲೆ ಹೇಳಿದ ಯಕೃತ ವಿದ್ರಧಿಯ ಲಕ್ಷಣಗಳು ಕಂಡುಬರುವದುಂಟು.

ಯಕೃತ–ಸಂಕೋಚದಲ್ಲಿ ( ಸಿರ್ಹೋಸಿಸ ಆಫ ಲಿವ್ಹರ ) ಯಕೃತವು ಸಣ್ಣದಾಗಿಯೂ ಬಹು ಕಠಿಣವಾಗಿಯೂ ಹತ್ತುವದು. ಅಜೀರ್ಣದ ಚಿನ್ಹಗಳೂ ಇರುವವು. ಒಮ್ಮೊಮ್ಮೆ ವಾಂತಿಯೊಳಗಿಂದಲೂ ಶೌಚ ದಿಂದಲೂ ರಕ್ತಬೀಳುವದು. ದಿನದಿನಕ್ಕೆ ಶಕ್ತಿಯು ಕ್ಷೀಣವಾಗುವದು. ಕಡೆಗೆ ಅದರ ಪರ್ಯವಸಾನವು ಜಳ್ಳೆಯುದಾಗುವದು. ಯಕೃತ ಸಂಕೋಚವಾಗುವ ಪೂರ್ವದಲ್ಲಿ ಯಕೃತವು ಬೆಳೆದದ್ದು ಇರುವದು. ರೋಗವು ಬೆಳೆದ ನಂತರ ಹೊಟ್ಟೆಯ ಮೇಲಿನ ಶಿರಗಳು ಸ್ಪಷ್ಟವಾಗಿ ಕಾಣುವವು. ಮತ್ತು ಹೊಟ್ಟೆಯು ಬಾತದ್ದು ಇದ್ದು ಡವುಡವು ಸಪ್ಪಳೂ ಆಗುವದು. ಸರಾಯಿ ಕುಡಿಯುವ ಜನರಲ್ಲಿಯೇ ಈ ರೋಗವು ಬಹು ತರವಾಗಿ ಆಗುವದು. ಸರಾಯಿ ಕುಡಿಯದಿದ್ದ ಜನರಲ್ಲಿ ಸಹ ಈ ರೋಗವಾಗುವದು, ಆದರೆ ಕಾರಣಗಳು ಬೇರೆ ಇರುವವು. ಅವೇನಂದರೆ— ಉಪದಂಶ, ಹಿಮಜ್ವರ, ಮುಟ್ಟು ಕಟ್ಟಾಗುವದು, ಉಣ್ಣಲು ತಿನ್ನಲು ಪೋಷಕ ಹಾಗೂ ಸಾಕಷ್ಟು ಅನ್ನ ಸಿಗದಿರೋಣವೂ–ಇವೇ ಮುಂತಾದವು ಕಾರಣಗಳು.

ಕಾಮಣಿ ಮತ್ತು ಪಿತ್ತಾಶ್ಮರಿ ಇವುಗಳ ಬಗ್ಗೆ ಇತರತ್ರ ನಾವು ವಿಚಾರಮಾಡಿದ್ದೇವೆ. ಯಕೃತದ ಎಲ್ಲ ರೋಗಗಳ ವಿಚಾರ ಮಾಡಿ ಕೆಳಗೆ ಹೇಳಿದ ಪ್ರಕಾರ ಒತ್ತಟ್ಟಿಗೆ ಚಿಕಿತ್ಸೆ ಹೇಳಿದೆ.

**ಫೇ. ಫಾ:**— ಪ್ರಾರಂಭದಲ್ಲಿ ಯಕೃತವು ಬಾಯುವದು, ರಕ್ತ ಸಂಚಯ, ಜ್ವರ, ವೇದನೆ ಮುಂತಾದವು.

**ಕಾ. ಮೂ:**— ಥಂಡಿಯ ಮೂಲಕ ಯಕೃತವು ಕೆಟ್ಟಿದ್ದರೆ ಕಾಮಣಿ ಯಕೃತ ಕ್ರಿಯೆಯು ಮಂದವಾಗಿದ್ದರೆ, ನಾಲಗೆಯಮೇಲೆ ಬಿಳೀ ಅಗ್ರ. ಶೌಚವು ಬೆಳ್ಳಗಿರುವದು. ಯಕೃತದಲ್ಲಿಯೂ ಬಲಗಡೆಯ ಹೆಗಲಿನ ಕೆಳಗೂ ನೋವು. ಮಲಾವರೋಧವೂ ಇರುವದು.

**ನೇ. ಸ:**— ಕಾಮಣಿ, ಹಸರು ಪಿತ್ತದ ರೇಚಗಳು. ನಾಲಗೆಯು ಹಸರೂ, ನಸುಗೆಂಪೂ ಇರುವದು. ಕಣ್ಣು ಹಳದಿ, ನಿಸ್ತೇಜ ಇರುವವು. ಪಿತ್ತದ ಕಹಿ ವಾಂತಿ ತ್ವಚೆ ನಿಃಸ್ತೇಜವೂ ಹಳದಿ ಬಣ್ಣದ್ದೂ, ಯಕೃತದಲ್ಲಿ

ರಕ್ತಸಂಚಯವೂ ಯಕೃತದಲ್ಲಿ ನೋವೂ. ಚುಚ್ಚಿದಂತೆ ವೇದನೆಯಾದರೆ ಜತೆಗೆ ಫೇ. ಫಾ. ಕೊಡುವದು. ಅಭ್ಯಾಸದಿಂದಾಗಲಿ ಇತರ ಮಾನಸಿಕ ತಾಪದಿಂದಾಗಲಿ ಪೈತ್ತಿಕ ಭಾವನೆಗಳು ಇದ್ದರೆ ಕಾ. ಫಾ. ಮತ್ತು ನೆ. ಸ. ಇವುಗಳನ್ನು ಸರ್ತಿಮೇಲೆ ಕೊಡಬೇಕು. ಪೈತ್ತಿಕ ಶೂಲೆ!

**ನೇ. ಮೂ:—** ಕಾಮಣಿ; ಜಠರಶೈತ್ಯ (ಹೊಟ್ಟೆಯಲ್ಲಿ ಥಂಡಿಯಾಗುವದು); ಮಾಂದ್ಯ; ಮೂಗಿನಿಂದ ನೀರು ಸೋರೋಣ.

**ಕಲ್ಕೆ ಸ:—** ಯಕೃತದಲ್ಲಿ ಕುರು. ವೇದನೆ ಅಶಕ್ತತೆ ಹೊಟ್ಟೆಯಲ್ಲಿ ನೋವು, ಮಳಮಿಳಿ, ಕೀವಾಗುವದನ್ನು ನಿಲ್ಲಿಸುವದಕ್ಕೋಸ್ಕರ.

**ಕಾ. ಫಾ:—** ಉದಾಸೀನತೆಯಿಂದಲೂ ಮಾನಸಿಕ ತಾಪದಿಂದಲೂ ಯಕೃತದ ಉಪದ್ರವಗಳು ಇದ್ದರೆ ಅತಿಶಯ ಚಿಂತೆ ಹಾಗೂ ಶ್ರಮ ಮಾಡಿದ್ದರಿಂದ ಆಗುವ ಪಿತ್ತಪ್ರಕೋಪದಲ್ಲಿ ನೇ. ಸ. ವನ್ನು ಜತೆಗೆ ಕೊಡಬೇಕು.

**ನೇ. ಫಾ:—** ಯಕೃತವು ಗಟ್ಟಿಯಾದಲ್ಲಿ ಔಷಧವು ಕಡಿಮೆ ಶಕ್ತಿಯುಳ್ಳದ್ದು ಇರಬೇಕು. ಯಕೃತ ಸಂಕೋಚಕಕ್ಕೂ ಇದರ ಉಪಯೋಗವಾಗುವದು.

**ಕಾ. ಸ:—** ಥಂಡಿಯ ಮೂಲಕ ಆಗುವ ಕಾಮಣಿ; ರೇಚಗಳಾಗುವದು.

**ಸಿ:—** ಯಕೃತದಲ್ಲಿ ಕುರು; ಯಕೃತ ಭಾಗದಲ್ಲಿ ವೇದನೆ.

**ಉಪಯುಕ್ತ ಸೂಚನೆ:—** ಬೇನೆಯ ಭರವಿದ್ದ ಕಾಲಕ್ಕೆ ಯಾವದೂ ಅನ್ನ ಕೊಡಬಾರದು. ಬಹಳಾದರೆ ಕೆನೆತೆಗೆದ ಹಾಲು ಕೊಡುವದು. ಮುಂದೆ ಮುಂದೆ ಪ್ರಕೃತ್ಯನುರೂಪ ಮೆಲ್ಲಮೆಲ್ಲನೆ ವಾಡಿಕೆಯ ಅನ್ನಕೊಡಲು ಅಡ್ಡಿ ಇಲ್ಲ. ತಾಜಾ ನೀರು ಯಥೇಚ್ಛ ಕುಡಿಯಲು ಕೊಡಬೇಕು. ದಾಹಯುಕ್ತ ವೇದನೆಗಾಗಿ ಬಿಸಿನೀರಿನ ಬಟ್ಟೆಯ ಪಟ್ಟಿ ಇಡಬೇಕು. ಬಿಸಿ ನೀರಿನ ಬಸ್ತಿ ಕೊಡಬೇಕು.

---

## ಯೋನಿಭ್ರಂಶ

“ ಗರ್ಭಾಶಯಭ್ರಂಶ”ವೆಂಬ ವಿವರ ನೋಡಿರಿ.

---

## ರಕ್ತಜ ಮೂರ್ಛೆ

“ ಸಂನ್ಯಾಸ”ವೆಂಬ ವಿವರ ನೋಡಿರಿ.

---

## ರಕ್ತಸ್ರಾವ

**Haemorrhage·** **ಹೆಮರೇಜ.**

ಮೂಗು, ಒಸಡಿ, ಹಲ್ಲು, ಎದೆ, ಹೊಟ್ಟೆ, ಗುದದ್ವಾರ, ಮೂತ್ರದ್ವಾರ ಗರ್ಭಾಶಯ, ಮುಂತಾದ ಭಾಗಗಳಿಂದ ಬೇರೆ ಬೇರೆ ರೋಗಗಳಲ್ಲಿ ರಕ್ತ ಸ್ರಾವವಾಗುವದುಂಟು. ಅಪಘಾತದಿಂದ ಬಾಹ್ಯೇಂದ್ರಿಯ ( ಹಸ್ತ, ಕಾಲು ಮೂಗು, ಹಲ್ಲು ಮುಂತಾದವು )ಗಳ ಮೇಲೆ ಪೆಟ್ಟು ಬಿದ್ದು ರಕ್ತ ಸ್ರಾವ ವಾಗುವದು. ಸ್ತ್ರೀಯರಲ್ಲಿ ಋತುಕಾಲದಲ್ಲಿಯೂ ಪ್ರಸೂತಿಯ ಸಮಯ ದಲ್ಲಿಯೂ ರಕ್ತಸ್ರಾವವು ಅಪರಿಹಾರ್ಯವಿರುವದು. ಪ್ರಮಾಣದಂತೆ ಆಗದಿದ್ದರೆ ಅದರ ಚಿಕಿತ್ಸೆಸಹ ಮಾಡುವ ಕಾರಣವಿಲ್ಲ. ಇಷ್ಟೇ ಅಲ್ಲ. ಋತುಕಾಲದಲ್ಲಿ ರಕ್ತಸ್ರಾವವಾಗದಿರೋಣವು ಭಗೇಂದ್ರಿಯ ರೋಗದ ನಿದರ್ಶಕವೇ ಸರಿ. ಕೆಲವರಿಕೆ ರಕ್ತಹೋಗುವ ಚಟವೇ ಇರುವದು. ಈ ರಕ್ತ ಸ್ರಾವವು ಒಮ್ಮಿಂದೊಮ್ಮೆ ನಿಂತಲ್ಲಿ ಅದು ಅಪಾಯಕರವೇ ಸರಿ. ಆದರೂ ಅಪಾಯವಾಗದೆ ರಕ್ತಸ್ರಾವದ ಚಟ ಹೇಗೆ ಕಳೆಯಬೇಕು, ಇದರ ವಿಚಾರಮಾಡುವದು ಅವಶ್ಯವು. ರಕ್ತ ಸ್ರಾವದ ಪ್ರಮಾಣವು ಹೆಚ್ಚು ಕಡಿಮೆ ಇರೋಣದರಮೇಲೆ ಅದರಿಂದಾಗುವ ಅನಿಷ್ಟ ಪರಿಣಾಮದ ಪ್ರಮಾಣವು ಅವಲಂಬಿಸಿರುವದಿಲ್ಲ. ಮೆದುಳಿನಲ್ಲಿ ಯತ್ಕಿಂಚಿತ್ ಸ್ರಾವ ವಾದುದು ಸಹ ಬಹಳೇ ಕೆಟ್ಟ ಪರಿಣಾಮವಾಗುವದುಂಟು. ಗುದದ್ವಾರ ದಿಂದ ಬಹಳ ರಕ್ತಸ್ರಾವವಾದಾಗ್ಯೂ ಅಷ್ಟು ಅನಿಷ್ಟ ಪರಿಣಾಮಗಳಾಗುವ

ದಿಲ್ಲ. ಎದೆಯೊಳಗಿಂದ ಆಗುವ ರಕ್ತ ಸ್ರಾವವು ಕ್ಷಯದ ಸೂಚಕವಿರುವದು. ಗಾಯದಿಂದ ರಕ್ತಸ್ರಾವವು ಬಹುದಿವಸ ಆಗುತ್ತ ಹೋದಲ್ಲಿ ಅಶಕ್ತತೆಯು ಬೆಳೆದು ಕಡೆಗೆ ಮರಣ ಸಹ ಒದಗುವದು. ರಕ್ತಸ್ರಾವವಾಗುವ ಚಟ ಇದ್ದವರ ಮುಖಚರ್ಯೆಯು ನಿಸ್ತೇಜವಿರುವದು. ಬವಳಿ ಬರುವದು, ಕಣ್ಣಿಗೆ ಕತ್ತಲೆ ಬರುವದು ಮುಂತಾದವು ಅಶಕ್ತತನದ ಲಕ್ಷಣಗಳು.

ರಕ್ತಸ್ರಾವವು ಎಲ್ಲಿಂದಾಗಲಿ, ಯಾವದೇ ಕಾರಣದಿಂದಾಗಲಿ ಸ್ರಾವದ ರಕ್ತದ ಬಣ್ಣ ಮತ್ತು ಇದರ ಸ್ವರೂಪ ನೋಡಿಕೊಂಡು ಕೆಳಗೆ ಹೇಳಿದ ೧೨ ಕ್ಷಾರಗಳಲ್ಲಿಯ ಉಪಯೋಗ ಬೀಳುವಂಥ ಯಾವದಾದರೊಂದು ಔಷಧವನ್ನು ಕೊಟ್ಟಲ್ಲಿ, ಆಗುವ ರಕ್ತ ಸ್ರಾವವು ನಿಲ್ಲುವದು.

**ಫೇ. ಫಾ:**— ತೀರ ಕೆಂಪು ರಕ್ತವಿದ್ದು ತೀವ್ರ ಗಟ್ಟಿಯಾಗುವಂಥಾದ್ದು ಇದ್ದರೆ ಇದು ಪ್ರಮುಖ ಔಷಧವು. ರಕ್ತವು ಯಾವಭಾಗದಿಂದ ಹೋದರೂ, ಯಾವ ಕಾರಣದಿಂದ ಹೋದರೂ ಮೇಲೆ ಹೇಳಿದ ಭಾವನೆ ಇದ್ದರೆ, ಇದನ್ನು ಕೊಡುವದು. ರಕ್ತವು ಎದೆಯೊಳಗಿಂದ ಬೀಳುವದಾದರೆ ಕೆಂಪು ಬಣ್ಣದ ರಕ್ತವು ಗಂಟುಗಂಟಾಗಿ ಬೀಳುವದಾದರೆ ಮೂಗು ಬಿಚ್ಚುವ ಪ್ರವೃತ್ತಿಯು (ವಿಶೇಷವಾಗಿ ಕ್ಷೀಣ ಪ್ರಕೃತಿಯ ಜನರಲ್ಲಿಯೂ ತೀವ್ರ ಬೆಳೆಯುವ ಮಕ್ಕಳಲ್ಲಿಯೂ) ಇದ್ದಲ್ಲಿ, ಕಲ್ಕೆ. ಫಾ. ಮತ್ತು ಕಾ. ಫಾ. ಇವು ಸಹ ಇದರಮೇಲೆ ಗುಣಕೊಡುವವು. ಫೇರಂ. ಫಾ. ವನ್ನು ಕಡಿಮೆಯ ಶಕ್ತಿಯನ್ನು ಉಪಯೋಗಿಸಬೇಕು.

**ಕಾ. ಫಾ:**— ಅಶಕ್ತ, ನಾಜೂಕ ಪ್ರಕೃತಿಯ ರೋಗಿಗಳಲ್ಲಿ ರಕ್ತಸ್ರಾವದ ಪ್ರವೃತ್ತಿ ಇದ್ದರೆ ಇದರ ಜತೆಗೆ ಫೇ. ಫಾ. ಮತ್ತು ಕಲ್ಕೆ. ಫಾ. ಇವುಗಳನ್ನೂ ಕೊಡಬೇಕು. ತುಸು ಕರೆಬಣ್ಣದ, ತೆಳ್ಳನ, ಹಾಗೂ ಗಟ್ಟಿಯಾಗದಂಥ ರಕ್ತ. ಹೊಲಸು ಕೊಳೆತಂಥ ರಕ್ತಸ್ರಾವವು. ಗರ್ಭಾಶಯಗತ ರಕ್ತಸ್ರಾವ.

**ಕಲ್ಕೆ. ಫ್ಲೊ:**— ಗರ್ಭಾಶಯದೊಳಗಿಂದ ರಕ್ತ ಸ್ರಾವವಾಗುತ್ತಿದ್ದರೆ ಕಾ. ಫಾ. ವನ್ನು ಜತೆಗೆ ಕೊಡಬೇಕು. ರಕ್ತವು ಬಹಳೇ ಹರಿಯುತ್ತಿದ್ದರೆ

ಸ್ನಾಯುಗಳ ಆಕಂಚನವನ್ನು ನಿಲ್ಲಿಸುವದಕ್ಕಾಗಿ ಜತೆಗೆ ಕಾಲೀ ಫಾ. ವನ್ನು ಕೊಡಬೇಕು; ಹಾಗೂ ರಕ್ತ ಮೂಲವ್ಯಾಧಿ ಇದ್ದಲ್ಲಿ.

**ಕಾ. ಮೂ:**— ಕರೇ ಬಣ್ಣದ ರಕ್ತ ಹಾಗೂ ಜಿಗಟೂ ತೀವ್ರವಾಗಿ ಗಟ್ಟಿಯಾಗುವಂಥಾದ್ದೂ ಇದ್ದರೆ ಮಧ್ಯಾಹ್ನದಲ್ಲಿ ಮೂಗು ಬಿಚ್ಚುವ ಚಟ ಇದ್ದಲ್ಲಿ,

**ನೇ. ಮೂ:**— ತಿಳಿ ನೀರಿನಂತೆ ಬೆಳ್ಳಗೆ, ಕೆಂಪು ಇದ್ದು ಗಟ್ಟಿಯಾಗದಂಥಾದ್ದೂ ಇದ್ದರೆ ಈ ಔಷಧದ ದುರುಪಯೋಗವಾದಲ್ಲಿ ಮೂಗಿನಿಂದ ರಕ್ತ ಹರಿಯುವದು ಕಂಡುಬಂದರೆ. ವಿಶೇಷವಾಗಿ ಅವಶ್ಯವಿಲ್ಲದೆ ೨೦೦ × ಶಕ್ತಿಯ ಔಷಧ ಕೊಟ್ಟಲ್ಲಿ ಮೂಗು ಬಾಯಿ ಮತ್ತು ಗುದದ್ವಾರ ಇವುಗಳಿಂದ ರಕ್ತ ಸ್ರಾವವಾಗಹತ್ತುವದು.

**ಕಲ್ಕೆ. ಫಾ:**— ಕ್ಷೀಣ ರಕ್ತವಿದ್ದಂಥ ರೋಗಿಗಳಿಗೆ ಮೇಲಿಂದ ಮೇಲೆ ಕೊಡುತ್ತಿರಬೇಕು.

**ಉಪಯುಕ್ತ ಸೂಚನೆ:**— ಶಕ್ಯವಿದ್ದಲ್ಲಿ ಅದೇ ಔಷಧದ ಲೇಪ ಮಾಡಬೇಕು. ರೋಗದ ಉಗ್ರ ಸ್ವರೂಪದಲ್ಲಿ ಸ್ರಾವವಾಗುವ ಸ್ಥಾನದಲ್ಲಿ ಔಷಧದ ಪುಡಿಯನ್ನು ದಟ್ಟಾಗಿ ಉದರಿಸಿ ಕಟ್ಟಿ ಬಿಡಬೇಕು. ಪುಪ್ಪುಸದೊಳಗಿಂದ ರಕ್ತ ಬಹಳ ಹೋಗುತ್ತಿದ್ದರೆ ಉಪ್ಪು ತಿನ್ನಲಿಕ್ಕೆ ಕೊಡಬೇಕು. ಶಕ್ತಿ ಇದ್ದರೆ ರೋಗಿಯನ್ನು ಎಬ್ಬಿಸಿ ಕೂಡಿಸಿ ಇಡಬೇಕು. ಶಕ್ತಿ ಇಲ್ಲದಿದ್ದರೆ ಎಲ್ಲ ಕಡೆಯಿಂದ ತಲೆಗಿಂಬು ಮತ್ತು ಗಿರ್ದೆ ಇವುಗಳನ್ನು ಆಧಾರಿಸಲಿಕ್ಕೆ ಕೊಟ್ಟು ಕೂಡುವಂತೆ ಮಾಡಬೇಕು. ರೋಗಿಯ ಸಮೀಪದಲ್ಲಿ ಶಾಂತತೆಯು ಬೇಕು. ಹತ್ತರ ಯಾರಿಗೂ ಮಾತಾಡಲೂ ಕೆಮ್ಮಲೂ ಗೊಡಬಾರದು, ಯಾವಾಗಲೂ ಈ ಬೇನೆಯಲ್ಲಿ ಫೇರಂ. ಫಾ. ಕಡಿಮೆ ಶಕ್ತಿಯನ್ನು ಕೊಡಬೇಕು.

---

# ಕಣ್ಣು ಚಿಟ್ಲಿ

**Stye.** ಸ್ಟಾಯ.

ಕಣ್ಣು ರೆಪ್ಪೆಯ ಹತ್ತರದ ಭಾಗದಲ್ಲಿ ಸ್ಥಾನಿಕದಾಹ ಉತ್ಪನ್ನವಾಗುವದು. ಅದಕ್ಕೆ ಕಣ್ಣುಚಿಟ್ಲಿ ಅನ್ನುತ್ತಾರೆ. ಆ ಭಾಗದಲ್ಲಿ ಬಾವೂ ಕೆಂಪಾಗುವದೂ ಇದ್ದು ರೆಪ್ಪೆಯಲ್ಲಿಯೂ ಶೋಥವಿರುವದು. ಒಮ್ಮೊಮ್ಮೆ ವೇದನೆ ಇರುವದಿಲ್ಲ. ಕೆಲವರಿಗೆ ಕಣ್ಣುಚಿಟ್ಲಿ ಮೇಲಿಂದಮೇಲೆ ಏಳುತ್ತವೆ. ಕಂಣಿನಲ್ಲಿ ಏನಾದರೂ ದೋಷವಾಗಿ ಇಲ್ಲದೆ ಸಾಧಾರಣ ಪ್ರಕೃತಿಯಲ್ಲಿ ಏನಾದರೂ ವ್ಯತ್ಯಾಸವುಂಟಾಗಿ ಚಿಟ್ಲಿಉಂಟಾಗಬಹುದು.

**ಫೇ. ಫಾ:**— ಆರಂಭದಲ್ಲಿ ಜ್ವರ, ಬಾವು. ವೇದನೆ ಮುಂತಾದವುಗಳ ಬಗ್ಗೆ ಆರಂಭದಿಂದ ಕೊಟ್ಟರೆ ರೋಗವೃದ್ಧಿಯಾಗದೆ ತೀವ್ರ ಸಮಾಧಾನವಾಗುವದು.

**ಸಿ:**— ಕೀವಾದನಂತರ ಇದನ್ನು ಕೊಟ್ಟರೆ ಕೀವು ಸೋರಿ ಹೋಗಲಿಕ್ಕೆ ಸಹಾಯವಾಗಿ ನೆಟ್ಟಗಾಗುವದು.

**ಉಪಯುಕ್ತ ಸೂಚನೆ:**— ಆರಂಭದಲ್ಲಿ ಬಿಸಿನೀರಿನಿಂದ ಕಾವು ಕೊಡಬೇಕು, ಬಾವು ಬಹಳ ಆದರೆ ಕಣಕದ ಪೋಟೀಸು ರಾತ್ರಿಯಲ್ಲಿ ಕಟ್ಟುವುದರಿಂದ ನೆಟ್ಟಗಾಗುವದು.

---

# ಗೂರುಬ್ಬಸು

**Bronchitis.** ಬ್ರಾಂಚಿಟಿಸ್.

ಶ್ವಾಸನಲಿಕೆಯ ಶ್ಲೇಷ್ಮಲ ತ್ವಚೆಯಲ್ಲಿ ಶೈತ್ಯವಾಗಿ ದಾಹ ಉತ್ಪನ್ನವಾಗುವದು. ಮೊದಲು ಎದೆಯಲ್ಲಿ ಗಟ್ಟಿಯಾಗಿ ಕಟ್ಟಿದಂತೆಯೂ ನೋವಾದಂತೆಯೂ ಅನಿಸುವದು. ಶ್ವಾಸ ಎಳಕೊಳ್ಳಲು ಕಷ್ಟವಾಗುವದು. ಗುರುಗುರು ಶಬ್ದವಾಗುವದು. ನಂತರ ಚಳಿ ತುಂಬಿ ೧೦೦-೧೦೧ ಅಂಶದವರೆಗೆ ಜ್ವರವೂ ಬರುವದು. ಸ್ವಲ್ಪ, ಜಿಗಟು ಕಫವು ಬಿಡುವದು. ಕಫ ಬಿಡ

ಬೇಕಾದರೆ ಮೊದಲು ಮೊದಲು ಬಹು ಕಷ್ಟವಾಗುವದು. ನಂತರ ತೆಳ್ಳಸ ದಿರಲಿ ಗಟ್ಟಿಯಾಗಿದ್ದು ಇರಲಿ ಬುರುಗು ಇದ್ದಂಥ ಬಹಳಷ್ಟು ಕಫ ಕಷ್ಟ ವಿಲ್ಲದೆ ಬಿಡುವದು. ಒಮ್ಮೊಮ್ಮೆ ಕಫದಲ್ಲಿ ರಕ್ತವೂ ಕೂಡಿರುವದು. ಹಸಿವೆ ಗೇಡು, ಅಶಕ್ತತೆ, ಆ ಪೊಲಸು ನಾಲಿಗೆಯು, ಚರ್ಮೆಯು ಒಣಗಿದ್ದೂ ಚಿಂತಾತುರವೂ ಇರುವದು—ಇಂಥ ಭಾವನೆಗಳಿರುವವು. ಎದೆಯಲ್ಲಿ ಭರ ದಿಂದ "ಸೂಸೂ" ಎಂಬ ಸಪ್ಪಳವೂ ಆಗುವದು. ಒಂದು ವಾರದದಿಂದ ಮೂರು ವಾರಗಳವರೆಗೆ ಇದರ ಕಷ್ಟವಿರುವದು. ಮುಂದೆ ಕಡಿಮೆ ಯಾಗುತ್ತ ಹೋಗುವದು. ಸಣ್ಣ ಮಕ್ಕಳಲ್ಲಿ ಈ ಬೇನೆಯು ಹೆಚ್ಚಾಗಿ ಕಾಣುವದು. ಕಾಲಕ್ಕೆ ಸರಿಯಾಗಿ ಚಿಕಿತ್ಸೆ ಮಾಡದಿದ್ದರೆ ಇಲ್ಲವೆ ಕುಪಥ್ಯ ಮಾಡಿದರೆ ನ್ಯುಮೋನಿಯಾ ಅಂದರೆ ಶ್ವಸನಕ ಜ್ವರವುಂಟಾಗುವ ಸಂಭವ ವಿರುವದು. ಮೇಲಿಂದ ಮೇಲೆ ಶೀಘ್ರದಾಹದ ಲಕ್ಷಣಗಳುಂಟಾದಲ್ಲಿ ಶ್ವಾಸನಲಿಕೆಯ ಶ್ಲೇಷ್ಮಲ ತ್ವಚೆಯಲ್ಲಿ ರಕ್ತಸಂಚಯವಾಗಿ ದೀರ್ಘದಾಹದ ಸ್ವರೂಪವುಂಟಾಗುವವು.

ದೀರ್ಘದಾಹದಲ್ಲಿ ಒಂದೇಸವನೆ ಕೆಮ್ಮು ಬರುತ್ತಿರುವದು. ಹಳದಿ ಕಫವು ಗಂಟುಗಟ್ಟಿ ಬೀಳುವದು. ಜ್ವರ ವೇದನೆ ಮುಂತಾದ ಭಾವನೆಗಳು ಇರುವದಿಲ್ಲ. ಚಳಿಗಾಲದಲ್ಲಿ ಹಾಗೂ ಮಳೆಗಾಲದಲ್ಲಿ ಇದರ ಭರವು ಬಹಳಿ ರುವದು. ಬೇಸಿಗೆ ಕಾಲದಲ್ಲಿ ಇದರ ತಾಪವು ಬಹಳಿರುವದಿಲ್ಲ. ಒಮ್ಮೊಮ್ಮೆ ಕೆಮ್ಮು ಜಿಗಟಾಗಿದ್ದು ಅದು ಬಿಡಬೇಕಾದರೆ ಕಷ್ಟವಾಗುವದು. ಮೇಲಿಂದ ಮೇಲೆ ಉಗಳಬೇಕಾಗುವದು. ಕಷ್ಟಶ್ವಾಸವಿರುವದು. ಕೆಮ್ಮುವಾಗ ಗಂಟಲದಲ್ಲಿ ಸೂಸೂ ಎಂಬ ಸಪ್ಪಳವಾಗುವದು. ರೋಗಿಗೆ ಇತರ ಯಾವದೇ ಪ್ರಾಕೃತಿಕ ಕಷ್ಟವಾಗುವದಿಲ್ಲ. ಶೈತ್ಯ, ಗಾಳಿ ಹತ್ತುವದು, ಹಸಿ ಬಟ್ಟೆ ಉಟ್ಟುತೊಟ್ಟುಕೊಳ್ಳುವದು ಇಲ್ಲವೆ ಬೆವರು ಬಂದಕಾಲಕ್ಕೆ ಗಾಳಿ ತಗಲುವದು ಗಂಟಲದಲ್ಲಿ ಧೂಳು ಸೇರುವದು ಮುಂತಾದವುಗಳಿಂದ ಈ ರೋಗವಾಗುವದುಂಟು.

**ಫೆ. ಫಾ:—** ಆರಂಭದಲ್ಲಿ ಜ್ವರ, ಉಷ್ಣತೆ, ರಕ್ತಸಂಚಯ ಮುಂತಾ ದವುಗಳ ಬಗ್ಗೆ ಕೊಡಬೇಕು. ಶೀಘ್ರ ಪರಿಣಾಮ ಕೆಮ್ಮು ಇದ್ದು ವೇದನೆ

ಇದ್ದದ್ದಾದರೆ ಶ್ವಾಸವು ತೀವ್ರವೂ ಕಷ್ಟಮಯವೂ ಇದ್ದರೆ ಕಫವು ಸಡಿಲಾಗಿ ಬೀಳುವದಿಲ್ಲವಾದರೆ, ಸಣ್ಣ ಮಕ್ಕಳಿಗೆ ಆಗುವ ಹೊಟ್ಟೆ ಹಾರುವ ಬೇನೆಯಲ್ಲಿ.

**ಕಾ. ಮೂ:**— ದ್ವಿತೀಯಾವಸ್ಥೆಯಲ್ಲಿ ಕಫವು ದಟ್ಟ, ಬಿಳೀದು, ಜಿಗಟು ಇದ್ದು ನಾಲಿಗೆಯು ಬಿಳೀದು ಇಲ್ಲವೆ ಬೂದಿ ಬಣ್ಣದ್ದು ಇದ್ದರೆ.

**ಕಾ. ಸ:**— ತ್ರಿತೀಯಾವಸ್ಥೆ ಕಫವು ಹಳದಿ ಸೀರಿಸಂತೆಯೂ ಇರುವದು ಹಾಗೂ ಸಡಿಲಾಗಿ ಬಹಳ ಬೀಳುವದು.

**ಸಿ:**— ದಟ್ಟ, ಹಳದಿ, ಕಫ. ತಣ್ಣಗಿನ ಪೇಯದಿಂದ ಕೆಮ್ಮು ಹೆಚ್ಚಾಗುವದು. ಬಿಸಿ ಪೇಯದಿಂದ ಸಮಾಧಾನವಾಗುವದು.

**ನೇ. ಮೂ:**— ಸ್ವಚ್ಛ, ಬುರುಗುವುಳ್ಳ, ತೆಳ್ಳನ ಕಫ. ಗಂಟಲದಲ್ಲಿ ಘುರಘುರ ಸಪ್ಪಳಿದ್ದು ಕಫವು ಬಹು ಕಷ್ಟದಿಂದ ಸಡಿಲಾಗುವದು.

**ನೇಟ್ರಂ ಸ:**— ಕಫ ಬೀಳುವಾಗ ಗಂಟಲದಲ್ಲಿ ನೋಯುವದು, ತಿಂಡಿ ಬಿಡುತ್ತದೆ. ಕೆಮ್ಮುವಾಗ ಎದೆ ಹಿಡಿದುಕೊಂಡು ಕೂಡಬೇಕಾಗುವದು. ಶೀತ ಹವೆಯಲ್ಲಿ, ತೇವ ಸ್ಥಳದಲ್ಲಿ, ಮಳೆಗಾಲದಲ್ಲಿ ಕೆಮ್ಮಿನ ಕಷ್ಟವು ಹೆಚ್ಚಾಗುವದು.

**ಕಲ್ಕೆ. ಫಾ:**— ತತ್ತಿಯಲ್ಲಿಯ ಲೋಳೆಯಂಥ ಕಫವು. ರಕ್ತಹೀನ ರೋಗಿಗಳಿಗೆ ಇದರ ಉಪಯೋಗವಾಗುವದು. ಜ್ವರದಲ್ಲಿ ಇದನ್ನು ಫೇ. ಫಾ. ದ ಜತೆಗೆ ಕೊಡಬೇಕು.

**ಉಪಯುಕ್ತ ಸೂಚನೆ:**— ಫೇ. ಫಾ. ದಿಂದಲೇ ಬಹುಶಃ ಈ ಬೇನೆಯು ನೆಟ್ಟಗಾಗುವದು. ಒಮ್ಮೊಮ್ಮೆ ಫೇರಂ. ಫಾ. ನಂತರ ಇಲ್ಲವೆ ಫೇರಂಫಾದ ಜತೆಗೆ ಕಾ. ಮೂ. ಕೊಟ್ಟರೆ ರೋಗವು ನೆಟ್ಟಗಾಗುವದು. ದೀರ್ಘದಾಹದಲ್ಲಿ ಫೆ. ಫಾ. ಮತ್ತು ಕಾಲಿ. ಮೂ. ಇವುಗಳನ್ನು ಬಹಳ ದಿವಸ ಕೊಟ್ಟಲ್ಲಿ ಸಮಾಧಾನವಾಗುವದು. ಭಾವನಾನುಸಾರ ಇತರ ಔಷಧಗಳನ್ನೂ ಕೊಡಬೇಕು. ಮೇಲಿಂದ ಮೇಲೆ ಕುಡಿಯಲಿಕ್ಕೆ ಬಿಸಿ ನೀರು ಕೊಟ್ಟು ಹಾಗೂ ಮೈಮೇಲೆ ಹೊದಿಕೆ ಹಾಕಿ ಬೆವರು ಬರುವ ಯತ್ನಮಾಡಬೇಕು. ಅಕ್ಕೀ ನುಚ್ಚಿನ ತೆಳ್ಳನ ಅನ್ನ, ಗಂಜಿ, ಜವೆಗೋದಿಯ

ನೀರು ಮುಂತಾದವುಗಳನ್ನು ಕೊಡಬೇಕು. ರೋಗವು ಉಗ್ರವಿದ್ದರೆ ಎದೆಯ ಮೇಲೆಯೂ ಬೆನ್ನಿನ ಮೇಲೆಯೂ ಅಗಸಿಯ ಪೋಟೀಸ ಮಾಡಿ ಕಟ್ಟಿದಲ್ಲಿ ಉಪಯೋಗವಾಗುವದು. ರೋಗವು ಇಲ್ಲದಂತಾದ ಸಂತರ ಅಶಕ್ತತೆಯ ಬಗ್ಗೆ ನಾವು ಸಿದ್ಧಮಾಡಿದ "ಸೆಲ್‌ಟಾನಿಕ" ಅಥವಾ "ಪಿಂಡ ಪೌಷ್ಟಿಕ ಚೂರ್ಣ" ವನ್ನು ಕೊಟ್ಟದ್ದರಿಂದ ರೋಗವು ತೀವ್ರವಾಗಿ ಹೋಗುವದು ಮತ್ತು ಪ್ರಕೃತಿಯು ತೀವ್ರ ಸಶಕ್ತವಾಗುವದು. ಪ್ರಥಮಾವಸ್ಥೆಯಲ್ಲಿ ಜ್ವರ ಮತ್ತು ಇತರ ದಾಹಯುಕ್ತ ಭಾವನೆಗಳು ಇಲ್ಲದಂತಾಗುವವರೆಗೆ ಫೇರಂ. ಫಾ. ಕೊಡಬೇಕು. ಸಂತರ ಕಫಕ್ಕೆ ಅನುಸರಿಸಿ ಯೋಜನೆ ಮಾಡಿದ ಇತರ ಔಷಧಗಳ ಜತೆಗೆ ಫೇ. ಫಾ. ವನ್ನು ತೀವ್ರ ತೀವ್ರ ಕೊಡದೆ ಬಹಳ ಅವಧಿಯ ನಂತರ ಕೊಡುತ್ತ ಹೋಗಬೇಕು. ಬೇನೆಯ ಆರಂಭದಿಂದಲೇ ಔಷಧ ಕೊಡಲು ಹತ್ತಿದರೆ ಫೇರಂಫಾ. ಮತ್ತು ಕಾಲೀಮೂರ ಇವುಗಳಿಂದಲೇ ಕಾರ್ಯವಾಗುವದು. ಇತರ ಔಷಧದ ಅವಶ್ಯಕತೆ ಉಂಟಾಗಲಿಕ್ಕಿಲ್ಲ.

---

## ಉಳುಕು, ಜಜ್ಜಿದಗಾಯ-ಗಾಯ

**Sprain, Bruise, Wounds.** ಸ್ಪ್ರೇನ, ಬ್ರುಯಿಜ, ಊಂಡ್ಸ.

ಯಾವದೇ ಅವಯವಗಳಲ್ಲಿಯ ಅಸ್ಥಿಬಂಧನ ಅಥವಾ ಸ್ನಾಯುಗಳ ಮೇಲೆ ಒತ್ತಾಯವಾಗುವದು ಅಥವಾ ಅವುಗಳಿಗೆ ಪೆಟ್ಟು ತಗಲೋಣ ವೆಂದರೆ ಉಳುಕು ಕೈಕಾಲುಗಳು ಜೋರಿನಿಂದ ಒಳಿಯುವದೇ ಇದರ ಕಾರಣವಿರುವದು. ಅಲ್ಲಾದಿದ್ದರಿಂದ ವೇದನೆ ಹೆಚ್ಚಾಗುವದು. ಬಾವು ಇರುವದು ಹಾಗೂ ರಕ್ತ ಕಂದುಗಟ್ಟಿದ್ದಿರುವದು. ಪೆಟ್ಟು ಬಹಳು ಬಿದ್ದದರಿಂದ ಮೈಯು ಜಜ್ಜಿದಂತಾಗಿರುವದು. ಆ ಸ್ಥಳದಲ್ಲಿ ಗಂಟು ಹಿಡಿಯುವದು.

**ಫೇ. ಫಾ**:— ಮೃದುಭಾಗದಲ್ಲಿ ಪೆಟ್ಟು ಹತ್ತಿದ್ದರೆ ಹಾಗೂ ಉಳುಕು ಆದಲ್ಲಿಯೂ ಜಜ್ಜಿದಲ್ಲಿಯೂ ಮೊದಲು ಈ ಔಷಧವನ್ನು

ಹೊಟ್ಟೆಯಲ್ಲಿ ಕೊಡಬೇಕು. ಇದನ್ನು ಕೊಟ್ಟಲ್ಲಿ ವೇದನೆ ನಿಲ್ಲುವದು. ರಕ್ತಸಂಚಯವಾಗುವದಿಲ್ಲ. ಬಾವೂ ಜ್ವರವೂ ಹೋಗುವವು. ಗಾಯವು ತಾತ್ಕಾಲಕ್ಕೆ ಆದದ್ದು ಇದ್ದರೆ ತೀವ್ರವಾಗಿ ತುಂಬಿ ಬರುವದು. ೬x ಶಕ್ತಿಯನ್ನೇ ಕೊಡಬೇಕು. ಮೇಲೆ ಅದರ ನೀರಿನಲ್ಲಿ ತೋಯಿಸಿದ ಬಟ್ಟೆ ಇಡಬೇಕು. ನೋವು ನಿಲ್ಲುವವರೆಗೆ ಹೀಗೆ ಮಾಡಬೇಕು.

**ಕಾ. ಸ:**—ತೃತೀಯಾವಸ್ಥೆ ತಾತ್ಕಾಲ ಉಪಾಯ ಮಾಡದೇ ಬೇನೆಗೆ ತಾತ್ಸಾರ ಮಾಡಿದ್ದರೆ; ಗಾಯದಿಂದ ತೆಳ್ಳನ ನೀಲಿ ಬಣ್ಣದ ಸ್ರಾವವು ಬರಹತ್ತಿದರೆ.

**ಕಾ. ಮು:**— ದ್ವಿತೀಯಾವಸ್ಥೆ-ಜೆಜ್ಜಿದ (ಅಥವಾ ಗಾಯವಾದ ಸ್ಥಳದಲ್ಲಿ) ಬಾವು ಮುಂತಾದ್ದು ಹೆಚ್ಚಿಗೆ ಬಂದಿದ್ದರೆ ಫೇ. ಫಾ. ದ ನಂತರ ಕಾ. ಮು. ವನ್ನು ಕೊಟ್ಟರೆ ಎಣ್ಣೆಯಲ್ಲಿ ಖಲನಮಾಡಿ ಪೆಟ್ಟು ಹತ್ತಿದಲ್ಲಿ ಲೇಪ ಮಾಡಿದರೆ ಶಕ್ತಿ ಕಂದುಗಟ್ಟಿ ಕರ್ರಗೆ, ನೀಲಿ ಆದದ್ದು ನೆಟ್ಟಗಾಗುವದು.

**ಸಿ:**— ದಟ್ಟನ, ಹಳದೀಬಣ್ಣದ ಸ್ರಾವವೂ ಕೀವೂ ಇದ್ದರೆ, ಗಾಯವಾದ ಕೂಡಲೆ ಉಪಚಾರ ಮಾಡದೇ ಇದ್ದರೆ ಕೀವಾಗುವ ಹೆದರಿಕೆ ಇರುವದು. ಆಗ್ಗೆ ಇದನ್ನು ಕೊಟ್ಟು ನಂತರ ಕಲ್ಕೆ. ಸ. ಕೊಡಬೇಕು.

**ಕಲ್ಕೆ. ಸ:**— ಕೀವು ಹರಿಯುವದು ನಿಲ್ಲದಿದ್ದರೆ; ಬಹಳ ದಿವಸ ಕೀವು ಹರಿಯುತ್ತ ಇದ್ದರೆ, ದಟ್ಟನ, ಹಳದಿ, ಕೀವೂ ರಕ್ತವೂ ಹರಿಯುತ್ತಿದ್ದರೆ.

**ಕಲ್ಕೆ. ಫ್ಲೊ:**— ಎಲುಬಿನ ಮೇಲೆ ಪೆಟ್ಟು ಬಿದ್ದು ಜೆಜ್ಜಿದಂತೆ ಇದ್ದರೆ (ಕ. ಫಾ.)

**ನೇ. ಸ:**— ತಲೆಯ ಬುರಡಿಗೆ ಪೆಟ್ಟು ತಗಲಿ ಅದರಿಂದಾಗುವ ದುಷ್ಪರಿಣಾಮದ ಮೇಲೆ.

**ಉಪಯುಕ್ತ ಸೂಚನೆ:**— ಶರೀರದ ಮೇಲೆ ಪೆಟ್ಟು ಬಿದ್ದಕೂಡಲೆ ತತ್ಕಾಲ ಶಕ್ಯವಿದ್ದಷ್ಟು ತೀವ್ರ ಫೇ. ಫಾ. ವನ್ನು ಲೇಪ ಮಾಡಲೂ ಹೊಟ್ಟೆಯಲ್ಲಿ ಕೊಡಲೂ ಆರಂಭಮಾಡಬೇಕು. ಜೆಜ್ಜಿದ್ದರಿಂದಲೂ ಪೆಟ್ಟು

ಹತ್ತಿದ್ದರಿಂದಲೂ ಇವೇ ಮುಂತಾದವುಗಳಲ್ಲಿ ರಕ್ತವು ಅಂದರೆ ಲೋಹದ ಬಹಳೇ ಅಂಶವು ಶರೀರದಿಂದ ಹೊರಬಿದ್ದು ಹೋಗುವದು. ಈ ಕೊರತೆಯನ್ನು ಪೂರೈಸಿ ಕೊಡುವದರಗೋಸ್ಕರ ಲೋಹ (ಫೇ. ಫಾ.) ದ ಅವಶ್ಯಕತೆ ಬಹಳೇ ಇರುವದು. ಸೂಕ್ಷ್ಮ ಪ್ರಮಾಣದಲ್ಲಿ ಲೋಹವೆಂದರೆ ಫೇ. ಫಾ. ವನ್ನು ಕೊಟ್ಟರೆ ಗಾಯವು ತೀವ್ರವೇ ತುಂಬಿ ಬರುವದು. ಗಾಯವಾದಲ್ಲಿ ಹಚ್ಚತಕ್ಕ ಔಷಧವನ್ನು ನೀರಿನಲ್ಲಿ ಒಗೆದು ಅದರಲ್ಲಿ ಬಟ್ಟೆ ತೊಯಿಸಿ ಅದನ್ನು ಅಲ್ಲಿ ಇಡಬೇಕು. ಬಾತ ಸಳಕುಹಿಡಿಯೋಣ ಮುಂತಾದವುಗಳಲ್ಲಿ ಪೂರ್ಣ ವಿಶ್ರಾಂತಿಯು ಅವಶ್ಯಕತೆ ಇರುವದು.

---

# ವಾತಶೂಲೆ

**Neuralgia.** ನ್ಯೂರಲ್ಗಿಯಾ.

ನೋವು, ವೇದನೆ, ಇವು ಸಂಜ್ಞಾ ಸಹ ನಾಡಿಯು ಅಥವಾ ಜ್ಞಾನ ತಂತುವಿನ ಗುಣಧರ್ಮಗಳೇ ಸರಿ. ನಾಡಿಗಳ ಮೇಲೆ ಒತ್ತಾಯವಾಗೋಣ, ನಾಡಿಗಳಲ್ಲಿ ದಾಹ ಉದ್ಭವಿಸೋಣ, ನಾಡಿಗಳ ಕ್ಷೋಭವಾಗೋಣ,—ಇವುಗಳ ಮೂಲಕ ಈ ಬಾಧೆಯುಂಟಾಗುವದು. ನೋಯೋಣ, ವೇದನೆ ಉಂಟಾಗೋಣ, ಠುಸುಠುಸು ಅನಿಸೋಣ, ಚುಚ್ಚಿದಂತೆ, ಬಾಣ ಹೊಡೆದಂತೆ, ಕಡಿದಂತೆ, ಉರುಪು ಉತ್ಪನ್ನ ಮಾಡುವಂಥ ವಿದ್ಯುಲ್ಲತೆಯಂತೆ ಒಮ್ಮಿಂದೊಮ್ಮೆ ವಿಳುವಂಥ, ನಿಂತು ನಿಂತು ಆಗುವಂಥ—ಎಷ್ಟೋ ತರಹದ ವೇದನೆಗಳಿರುವದುಂಟು. ಇಂಥ ವೇದನೆಗಳಿಗೆ ಇಂಗ್ಲಿಷ ಭಾಷೆಯಲ್ಲಿ (Neuralgia) ನ್ಯೂರಲ್ಗಿಯಾ ಅನ್ನುತ್ತಾರೆ. ಮಹಾರಾಷ್ಟ್ರ ಭಾಷೆಯಲ್ಲಿ ವಾತಶೂಳವೆಂಬ ಹೆಸರು. ಕನ್ನಡ ಭಾಷೆಯಲ್ಲಿ ಹರಿವಾತ ಇಲ್ಲವೆ ಕಸವೆನ್ನುವರು. ಈ ಶೂಲೆಯಲ್ಲಿ ನಾಡಿಗಳಲ್ಲಿ ಯಾವದೇ ವಿಕೃತಿ ಕಂಡುಬರುವದಿಲ್ಲ. ರಕ್ತದಲ್ಲಿಯ ದೋಷದಿಂದಾಗಲಿ ಇತರ ಕಾರಣದಿಂದಾಗಲಿ ನಾಡಿಗಳಲ್ಲಿ ಒಂದು ತರದ ಕ್ಷೋಭವುಂಟಾಗಿ ಅದರಿಂದ ವೇದನೆಗಳುಂಟಾಗುವವು. ಒಮ್ಮೊಮ್ಮೆ ವೇದನೆಗಳು ಅತಿ ದುಃಸಹ ಹಾಗೂ ಪ್ರಾಣಾಂತಕವಿರುವವು. ಈ ವೇದನೆಗಳು ಕೊರೆದಂತೆಯೂ ಬೆಂಕಿಹತ್ತಿ

ದಂತೆಯೂ ದುಃಸಹವಿರುವವು. ಅವು ನಿಂತು ನಿಂತು ಒಮ್ಮೊಮ್ಮೆ ಏಳುವವು. ವೇದನೆ ಇದ್ದ ಭಾಗದಲ್ಲಿ ಸ್ವಲ್ಪ ಕೈ ಹತ್ತಿದರು ಸಹ ವೇದನೆ ಹೆಚ್ಚಾಗುವದು. ಆದರೆ ಅಲ್ಲಿ ಒತ್ತಿದಲ್ಲಿ ಸಮಾಧಾನವಾಗುವದು. ಇತರ ವೇದನೆಗಳಲ್ಲಿ ಈ ಲಕ್ಷಣವು ಕಂಡುಬರುವದಿಲ್ಲ. ಹೊಟ್ಟೆಯಲ್ಲಿ ವಾಯುವು ತುಂಬಿಕೊಂಡಿದ್ದರಿಂದ ಉತ್ಪನ್ನವಾಗುವ ಶೂಲಕ್ಕೆ (ಕಾಲಿಕ್) ನಾವು ವಾತಶೂಲ ಎಂಬ ಹೆಸರು ಕೊಟ್ಟಿದ್ದೇವೆ. ಆದರೆ ಈ ಸಂಕುಚಿತ ಅರ್ಥದಲ್ಲಿ ಈ ಶಬ್ದದ ಉಪಯೋಗ ಮಾಡಿಲ್ಲ. ವಾಯುವು ತುಂಬಿಕೊಂಡಿದ್ದರಿಂದ ನಾಡಿಯ ಮೇಲೆ ಒತ್ತಾಯವಾಗಿ ಅದು ಹಿಂಡಿದಂತಾಗಿ ಹೊಟ್ಟೆಯಲ್ಲಿ ವಾತಶೂಲ ಉತ್ಪನ್ನವಾಗುವದು. ಆದರೆ ಈ ಕ್ಷೋಭಜನ್ಯ ವಾತಶೂಲದಲ್ಲಿ ಮೇಲೆ ಹೇಳಿದಂತೆ ನಾಡಿಯಲ್ಲಿ ಏನೂ ವಿಕೃತಿಯುಂಟಾದ್ದು ಕಂಡುಬರುವದಿಲ್ಲ. ಮೇಲೆ ಹೇಳಿದಂತೆ ಯಾವದೇ ಶರೀರದ ಭಾಗದಲ್ಲಿ ಉತ್ಪನ್ನವಾಗುವ ದುಃಸಹ ವೇದನೆಗೆ ವಾತಶೂಲ (Neuralgia) ವೆನ್ನುವೆವು. ಮತ್ತು ಇದೇ ಅರ್ಥದಲ್ಲಿ ಈ ಶಬ್ದವನ್ನು ಉಪಯೋಗಿಸಿದ್ದೇವೆ. ಈ ಶೂಲದ ಬೇರೆ ಬೇರೆ ಪ್ರಕಾರದ ವೇದನೆಗಳಿಗನುಸರಿಸಿ ಉಪಯೋಗ ಮಾಡತಕ್ಕಂಥ ಔಷಧಗಳ ವಿವೇಚನ ಕೆಳಗೆ ಮಾಡಿವೆ.

**ಫೇ. ಫಾ**:— ಶೀತದಿಂದ ಉತ್ಪನ್ನವಾಗುವ ದಾಹಯುಕ್ತ ವೇದನೆ ಇದ್ದರೆ ತಲೆಯಲ್ಲಿ ಮೊಳೆ ಸೇರಿದಂಥ ಅತಿ ತೀಕ್ಷ್ಣ ವೇದನೆ ಇದ್ದರೆ ಶಿತೋಪಚಾರದಿಂದ ಸಮಾಧಾನ. ಒಂದೇ ಕಣ್ಣು ಹುಬ್ಬಿನಮೇಲೆ ಇಲ್ಲವೆ ಗದ್ದದ ಮೇಲೆ ತಲೆಯ ಮುಗ್ಗಲದ ಮೇಲೆ ಕಠೋರ ವೇದನೆ ಇದ್ದರೆ. ಫೇ. ಫಾ. ದಿಂದ ಗುಣ ಬಾರದಿದ್ದರೆ ಕಲ್ಕೆ. ಫಾ. ಕೊಡಬೇಕು. ಬಲಭಾಗದಲ್ಲಿ ನೋವು ಇದ್ದು ಮುಂಜಾನೆ ಹೆಚ್ಚಾಗುವದು ಇವೇ ಈ ಬೇನೆಯ ವಿಶೇಷ ಲಕ್ಷಣಗಳು. ಸ್ತನಗಳಲ್ಲಿ ಬಹಳ ವೇದನೆ. ನಾಡಿಯು ತಟ ತಟ ಹಾರುವದು. ಮುಖಚರ್ಯೆಯು ಕೆಂಪಾಗಿರುವದು. ಉರುವು, ಜ್ವರ ಮುಂತಾದವುಗಳು ಇದ್ದರೆ.

**ಮ್ಯಾ. ಫಾ**:— ತೀವ್ರ, ಅತಿ ಕಠೋರ ನೋವು ಬರುತ್ತಿದ್ದಲ್ಲಿ ಬೈಲು ಹವೆಯಲ್ಲಿಯೂ ಶೀತೋಪಚಾರದಿಂದಲೂ ಹೆಚ್ಚಾಗುವದು. ಬೆಚ್ಚನ ಸ್ಥಳದಲ್ಲಿಯೂ ಉಷ್ಣೋಪಚಾರದಿಂದಲೂ ಸಮಾಧಾನವಾಗುವದು.

**ಕಾ. ಫಾ:—** ವೇದನೆಯ ಮೂಲಕ ನಿರುತ್ಸಾಹವೂ ನಿಃಶಕ್ತತೆಯೂ ಅನಿಸುವದು. ನಿದ್ದೆಗೇಡು. ಸಿಟ್ಟಿನ ಸ್ವಭಾವವು ಹೆಚ್ಚಾಗುವದು. ಬೆಳಕೂ ಸಪ್ಪಳವೂ ಸಹನವಾಗುವದಿಲ್ಲ. ಬಲಭಾಗಕ್ಕೆ ವೇದನೆ ಹೆಚ್ಚು ಇದ್ದು ಶೀತೋಪಚಾರದಿಂದ ಸಮಾಧಾನ. ಹಲ್ಲಿನ ಹಿಡಿದು ಕಿವಿಯ ಪರ್ಯಂತರ ಕಳೆ, ಕಿವಿಯಲ್ಲಿ ಸಪ್ಪಳ, ಮೆಲ್ಲಮೆಲ್ಲನೆ ನಡೆದರೆ ಹಾಗೂ ಚಿತ್ತಾಲ್ಹಾದಕ ಉಪಚಾರದಿಂದ ಸಮಾಧಾನವಾಗುವದು. ಏಳುವಾಗ, ಹೆಚ್ಚು ಶ್ರಮ ಮಾಡಿದಾಗ, ಅಥವಾ ರೋಗಿಯೂ ಒಬ್ಬನೇ ಇದ್ದಾಗ ವೇದನೆ ಹೆಚ್ಚು.

**ಕಲ್ಕೆ. ಫಾ:—** ಒಮ್ಮೊಮ್ಮೆ ಎಂದಾದರು ಉದ್ಭವಿಸುವ ವೇದನೆ ವಿಶೇಷವಾಗಿ ರಾತ್ರಿಯಲ್ಲಿ ಅಸ್ಥಿಗಳ ಒಳಭಾಗದಲ್ಲಿ ವೇದನೆ. ವೇದನೆಗಳು ವಿದ್ಯುಲ್ಲತೆಯ ಸಿಡಿತದಂತೆ ಬಡಿಯುವವು. ಸ್ನಾಯುಗಳು ಹಾರುವವು. ಗುದದ್ವಾರದಲ್ಲಿ ಶೂಲೆ. ಶೌಚದನಂತರ ಹೆಚ್ಚಾಗುವದು. ಅಲ್ಲಿ ಬಹಳ ಹೊತ್ತು ನೋವು ಇರುವದು. ವೇದನೆಯ ಸ್ಥಾನದಲ್ಲಿ ತಣ್ಣಗಾಗಿರುವದು. ಬಧಿರತೆಯು ಇರುವದು. ಜುಮ್ಮು ಹಿಡಿದಂತೆಯೂ ಇರುವದು.

**ನೇ. ಮೂ:—** ತೀವ್ರವಾಗಿ, ಬಾಣಬಡೆದಂತೆ, ಜಣಜಣಿಸುವ ಹಾಗೂ ಎಷ್ಟೋಕಾಲದವರೆಗೆ ಇರುವಂಥ ವೇದನೆ; ಮ್ಯಾ. ಫಾ. ದಲ್ಲಿಯೂ ನೇ. ಮೂ. ದಲ್ಲಿಯೂ ವೇದನೆ ಸರಿಯಾಗಿರುವದು. ಸ್ರಾವವಿರುವದು; ಮ್ಯಾ. ಫಾ. ದಲ್ಲಿ ಇರುವದಿಲ್ಲ. ಶಾಲೆಗೆ ಹೋಗುವ ಹುಡುಗರಲ್ಲಿ ಕಂಣಿನಿಂದ ನೀರುಸೋರುತ್ತಿರುವವು.

**ಕಾ. ಮೂ:—** ನಾಲಿಗೆಯು ಬಿಳೀ ಬಂಣದ್ದು ಇಲ್ಲವೆ ಬೂದಿ ಬಂಣದ್ದು ಇದ್ದು ಕಳೆ ಬಹಳಾಗಿದ್ದರೆ ಟೊಂಕದಿಂದ ಪಾದದವರೆಗೆ ಭಾಲೆ ಚುಚ್ಚಿದಂತೆ ವೇದನೆ ಇದ್ದಲ್ಲಿ ರಾತ್ರಿಯಲ್ಲಿ ಹೊದಿಕೆ ಹೊದ್ದುಕೊಂಡಲ್ಲಿ ವೇದನೆ ಹೆಚ್ಚು ಸಮಾಧಾನವಾಗುವದಕ್ಕೋಸ್ಕರ ಹಾಸಿಗೆಯಿಂದೆದ್ದು ಖುರ್ಚಿಯಮೇಲೆ ಕೂಡಬೇಕೆಂದೆನಿಸುವದು.

**ಕಾ. ಸ:—** ಸಾಯಂಕಾಲದಲ್ಲಿಯೂ ಬೆಚ್ಚನ ಖೋಲಿಯಲ್ಲಿಯೂ ವೇದನೆ ಹೆಚ್ಚಾಗುವದು. ತಂಣನ ಹವೆಯಲ್ಲಿ ಸಮಾಧಾನವಾಗುವದು.

ಶರೀರದ ಒಂದು ಕಡೆಯಿಂದ ಮತ್ತೊಂದು ಕಡೆಗೆ ಮೇಲಿಂದಮೇಲೆ ಹರದಾಡುವ ವೇದನೆ ಹಾಗೂ ಮೇಲಿಂದಮೇಲೆ ಬದಲಾಗುವ ವೇದನೆ.

**ನೇ. ಸ:**— ಶೀತ ಮತ್ತು ತೇವು ಸ್ಥಳದಲ್ಲಿದ್ದದರಿಂದ ಉಂಟಾಗುವ ವೇದನೆ (ಕಳೆ). ನಾಲಿಗೆಯಮೇಲೆ ಹಳದಿ, ನಸುಗೆಂಪು ಅಗ್ರ.

**ಸಿ:—** ಹಲ್ಲಿಸಲ್ಲಿ ವೇದನೆ ಇದ್ದರೆ- ಹೊಟ್ಟೆಯಲ್ಲಿಯೂ, ಟೊಂಕ ದಲ್ಲಿಯೂ ಬರುವ ಕಳೆ (ವೇದನೆ) ಬೆಚ್ಚನ ಬಟ್ಟೆ ಸುತ್ತಿದರೆ ಉಪಶಮನ ವಾಗುವದು.

**ಉಪಯುಕ್ತ ಸೂಚನೆ:**— ಮೇಲಿಂದ ಮೇಲೆ ಶೂಲೆ ಬರುವಂಥವರಿಗೆ, ಹಾಲು, ಕೆನೆ ಮುಂತಾದ ಪದಾರ್ಥಗಳನ್ನು ಪಚನಾಗುವಷ್ಟು ತಿನ್ನಲಿಕ್ಕೆ ಕೊಡಬೇಕು. ಶೀತ ಹಾಗೂ ಗಾಳಿಯ ಉಪದ್ರವಾಗದಂತೆ ವ್ಯವಸ್ಥೆ ಇಡಬೇಕು. ಉಣಿಯ ಬಟ್ಟೆಗಳನ್ನು ಉಪಯೋಗಿಸಬೇಕು. ಮತ್ತು ವಿಶ್ರಾಂತಿಯನ್ನೂ ಅನುಭೋಗಿಸಬೇಕು. ಮೇಲೆ ಹೇಳಿದ ಔಷಧ ಗಳ ಹೊರ್ತಾಗಿ ಭಾವನಾನುಸಾರವಾಗಿ ಇತರ ಔಷಧ ಯೋಜನೆ ಮಾಡ ಬಹುದು. ಬಿಸಿನೀರಿನಿಂದ ಮೇಲಿಂದ ಮೇಲೆ ತೀವ್ರ ತೀವ್ರವಾಗಿ ಕೊಡಬೇಕು. ಹಾಗಾದರೆ ತಾತ್ಕಾಲ ಗುಣಬರುವುದು. ಹೊಟ್ಟೆಯಲ್ಲಿ ಕೊಡಲು ಯೋಚಿಸಿದ ಔಷಧದ ತೀರ ಸಹ ಮಾಡಬಹುದು.

---

# ವಾಂತಿ

**Vomiting.** **ವೋಮಿಟಿಂಗ.**

ಮಹಾಪ್ರಾಚೀರ ಹಾಗೂ ಜಠರ ಇವುಗಳು ಆಕುಂಚನ ಹೊಂದಿದರೆ ವಾಂತಿಯು ಉತ್ಪನ್ನವಾಗುವದು. ಹೆಚ್ಚಿಗೆ ತಿನ್ನೋಣ, ಜಠರದಾಹ, ಜಠರವ್ರಣ, ಜಠರಾರ್ಬುದ, ಮೆದುಳಿನ ಅಪಘಾತ, ಮೆದುಳಿನ ಇತರ ರೋಗ, ಗರ್ಭಿಣಿ ಆಗೋಣ, ವಿಷಪದಾರ್ಥ ಹೊಟ್ಟೆಯಲ್ಲಿ ಸೇರೋಣ, ಮಲಾವರೋಧ, ಜಂತು, ಯಕೃತ ಹಾಗೂ-ಕರುಳೂ ಇವುಗಳ ರೋಗ,

ದುರ್ಗಿಣಬೇನೆ ( ಮಹಾಮಾರಿ ), ಪಿತ್ತಪ್ರಕೋಪ, ಮುಂತಾದ ರೋಗ ಗಳಲ್ಲಿಯೂ ಸಮುದ್ರ ಪ್ರವಾಸದಲ್ಲಿಯೂ ಈ ಭಾವನೆ ಉಂಟಾಗುವದು.

**ಫೇ. ಫಾ** — ಆಮ ವಾಂತಿ ( ಅಪಕ್ವ ಅನ್ನದ ವಾಂತಿ ಒಮ್ಮೊಮ್ಮೆ ಹುಳಿ ಇರುವಂಥಾದ್ದು ಆಗುವದು. ( ಸೇ. ಫಾ. ಮತ್ತು ನೇ. ಮೂ. ) ತಲೆ ನೋಯುವದು. ಮುಟ್ಟು ಆದಾಗ ವಾಂತಿಯಾಗುವದು. ತೀವ್ರ ಗಟ್ಟಿ ಯಾಗುವ ಕೆಂಪು ರಕ್ತದ ವಾಂತಿಯು. ವೇದನೆ ಅಥವಾ ಇತರ ಯಾವದೇ ತರದ ಉಪದ್ರವವಾಗದೆ ಊಟವಾದನಂತರ ಆಗುವ ವಾಂತಿ. ವಾಂತಿಯು ಭರವು ನಡೆಯುವದರಿಂದ ನಿಲ್ಲುವದು.

**ಕಾ. ಮೂ**:— ಬಹಳೇ ಕಪ್ಪುಬಣ್ಣದ ಗಟ್ಟಿಯಾದ ಜಿಗಟ ರಕ್ತದ ವಾಂತಿ. ದಟ್ಟಸ ಕಫವೂ ಬೀಳುವದಾದರೆ ನಾಲಗೆಯ ಮೇಲೆ ಬಿಳೇ ಅಗ್ರವು.

**ನೇ. ಮೂ**:— ಬಾಯಿಗೆ ನೀರು ಬರುವದು. ಅವರೋಧವೂ ಇರುವದು. ನೀರಿನಂಥ ತೆಳ್ಳಸ, ಸ್ವಚ್ಛ ಎಳೆಯುಳ್ಳ ವಾಂತಿಯು. ವಾಂತಿಗೆ ಹುಳಿ ಉಪ್ಪು ರುಚಿಯು ಒಮ್ಮೊಮ್ಮೆ ಕಾಫೀ ಬಣ್ಣದ ಕರೇವಾಂತಿ ಅಥವಾ ಮಸರಿನಂಥ ಗಟ್ಟಿ ಕರಣೆಗಳು ವಾಂತಿಯು ಸಂಗಡ ಬೀಳುವವು.

**ಕಾ. ಫಾ** — ಕಾಫಿಯ ಗಶಿ ಯಂಥ ಕರೇ ವಾಂತಿ, ಮಳಮಳಿ, ಹುಳಿ, ಕಹಿ, ಅನ್ನ ಅಥವಾ ರಕ್ತಸಹ ವಾಂತಿಯಾಗುವದು.

**ನೇ. ಫಾ**:— ಮಸರಿನಂಥ ಗಟ್ಟಿ ಅಥವಾ ಹುಳಿ, ತೆಳ್ಳಸ ವಾಂತಿ ಯಾಗುವದು. ಗಂಟಲಿನಲ್ಲಿ ಸುಡುವ ಭಾವನೆ; ನಾಲಿಗೆಯ ಬೊಡ್ಡೆಯಲ್ಲಿ ಹಳದಿ ಅಗ್ರ.

**ಸಿ**:— ಕೂಸು ಹೊಟ್ಟೆಗೆ ಕುಡಿದನಂತರ, ವಾಂತಿಯಾಗುವದು ಮುಂಜಾನೆ ವಾಂತಿ ಇದ್ದು ಮೈಮೇಲೆ ಮುಳ್ಳು ಬರುವವು.

**ನೇ. ಸ**:— ಪಿತ್ತದ ವಾಂತಿಯು ಬಾಯಿಗೆ ಕಹಿ ರುಚಿ; ಹಸರ ಬಣ್ಣದ ವಾಂತಿಯೂ ಇರುವದು. ಒಂದೇಸವನೆ ವಾಂತಿಯಾಗುತ್ತಿರ ವದು. ಅನ್ನವು ಯೋಗ್ಯರೀತಿಯಿಂದ ಪಚನವಾಗದೇ ಇದ್ದಲ್ಲಿ, ಹಗಲಾಗ ರಾತ್ರಿಯಲ್ಲಾಗಲಿ ನಿಯಮಿತಕಾಲಕ್ಕೆ ಆಗುವ ವಾಂತಿ ಶೀತ ಪೇಯ

ಮೂಲಕ ಸಣ್ಣಮಕ್ಕಳು ಮೇಲಿಂದಮೇಲೆ ಕಾರುತ್ತಿದ್ದರೆ ಹಲ್ಲು ಒಡೆಯುವಕಾಲಕ್ಕೆ ಆಗುವ ವಾಂತಿ, ಸಣ್ಣಮಕ್ಕಳು ಒಂದೇಸವನೆ ಕುಡಿಯಲು ಬೇಡುತ್ತಾರೆ.

**ವ್ಯಾ. ಫಾ:—** ಹೊಟ್ಟೆಯಲ್ಲಿ ಕಠಿಣ ವೇದನೆ ಆಗುತ್ತಿದ್ದು ನಿಂತು ನಿಂತು ಒಂದೇಸವನೆ ವಾಂತಿಯಾಗುತ್ತಿದ್ದಲ್ಲಿ.

**ಕಲ್ಕೆ. ಫ್ಲೊ:—** ಅಪಕ್ವ ಅನ್ನದ ವಾಂತಿಯು ಫೇರಂ ಫಾ. ದಿಂದ ಗುಣಬಾರದೇ ಇದ್ದಲ್ಲಿ.

**ಉಪಯುಕ್ತ ಸೂಚನೆ:—** ಗರ್ಭಿಣಿಯರಿಗೆ ಆಗುವ ವಾಂತಿಯಲ್ಲಿ ಸಹ ಮೇಲೆ ಹೇಳಿದ ಔಷಧಗಳ ಉಪಯೋಗವಾಗುವದು. ಇತರ ಕಾರಣಗಳಿಂದಾಗುವ ವಾಂತಿಯು ತೀವ್ರವಾಗಿ ನೆಟ್ಟಗಾಗುವದು. ಆದರೆ ಗರ್ಭಿಣಿಯರಿಗೆ ಆಗುವ ವಾಂತಿಯು ನೆಟ್ಟಗಾಗಬೇಕಾದರೆ ಕಾಲಾವಧಿ ಬೇಕಾಗುವದು. ಭಾವನಾನುಸಾರ ಔಷಧಗಳನ್ನು ಅದಲುಬದಲುಮಾಡಿ ಕೊಡಬೇಕು. ಜಠರ ಕ್ಷೋಭದ ಮೂಲಕ ವಾಂತಿಯಾಗುತ್ತಿದ್ದರೆ ಮೇಲಿಂದ ಮೇಲೆ ಬಿಸಿ ನೀರು ಕೊಟ್ಟದ್ದರಿಂದ ಬಹಳೇ ಗುಣವಾಗುವದು. ಎಷ್ಟೋ ಸಾರೆ ಬರ್ಫಿನ ಚೂರು ಕೊಟ್ಟರೆ ತಾತ್ಕಾಲ ಸಮಾಧಾನವಾಗುವದು.

---

# ಮುಟ್ಟು

**Menstruation.** **ಮೆನ್‌ಸ್ಟ್ರುಯೇಶನ್.**

ವಿಶಿಷ್ಟ ಕಾಲಕಾಲಕ್ಕೆ (೨೭।೨೮ ದಿವಸದ ನಂತರ) ಗರ್ಭಾಶಯದಿಂದ ರಕ್ತಸ್ರಾವವಾಗುವದಂದರೇ ಮುಟ್ಟು. ಸಾಧಾರಣವಾಗಿ ತಿಂಗಳಿಗೊಮ್ಮೆ ಮುಟ್ಟು ಆಗುವದು. ಗರೋದರ ಸ್ಥಿತಿಯಲ್ಲಿಯೂ ಪ್ರಸೂತಿಯಾದ ನಂತರವೂ ಸ್ವಲ್ಪ ದಿವಸ ಮುಟ್ಟು ಕಟ್ಟಿರುವದು. ಅದೇ ಪ್ರಕಾರ ವಯಸ್ಸಿನ ೧೨।೧೪ ವರ್ಷಗಳ ವರೆಗೆ ಹಾಗೂ ರುತು ಪ್ರಾಪ್ತಿಯ ಬಳಿಕ ೩೩।೩೫ ವರ್ಷದ ನಂತರ ಅಂದರೆ ವಯಸ್ಸಿನ ೪೫।೪೭ ವರ್ಷಗಳ ನಂತರ ಮುಟ್ಟು ನಿಂತು ಹೋಗುವದು. ಈ ಮೂರು ಕಾರಣಗಳ ಹೊರ್ತಾಗಿ

ಮುಟ್ಟು ನಿಂತರೆ ರೋಗವಿರುವದೆಂದು ತಿಳಿಯಬೇಕು. ಮುಟ್ಟು ಆಗುವಾಗ್ಗೆ ವೇದನೆ ಆಗದಿರೋಣ ಹಾಗೂ ಯಾವದೂ ಇತರ ತಾಪವಾಗದಿರೋಣ—ಇದು ಒಳ್ಳೇ ಪ್ರಕೃತಿಯ ಲಕ್ಷಣವು. ಆದರೂ ಪ್ರಕೃತಿಯು ಸಶಕ್ತ ಇದ್ದು ಸಹ ಒಮ್ಮೊಮ್ಮೆ ಹೊಟ್ಟೆಕಡತ, ತಲೆಶೂಲೆ, ಮಾಂದ್ಯ ಮುಂತಾದ ಲಕ್ಷಣಗಳು ಹೆಚ್ಚು ಕಡಿಮೆ ಪ್ರಮಾಣದಲ್ಲಿ ಕಂಡು ಬರುವವು. ಆದರೂ ತೀವ್ರ ತೀವ್ರವಾಗಿ ಇಲ್ಲವೆ ತಡವಾಗಿ ಮುಟ್ಟು ಆಗೋಣ. ಪ್ರಮಾಣಕ್ಕಿಂತ ಹೆಚ್ಚು ಇಲ್ಲವೆ ತೀರ ಕಡಿಮೆ ರಕ್ತಸ್ರಾವವಿರೋಣ, ಉರುಪು, ಮುಟ್ಟಿನ ಕಾಲಕ್ಕೆ ವೇದನೆ ಇರೋಣ; ತಲೆನೋವು, ಇತರ ಮನಸ್ತಾಪವಾಗೋಣ,– ಇವು ಮುಟ್ಟಿನ ಸಂಬಂಧದಿಂದಾಗುವ ಬೇನೆಯ ಲಕ್ಷಣಗಳು ಇರುವವು. ಈ ಲಕ್ಷಣಗಳಿಗನುಸರಿಸಿ ಉಪಯೋಗವಾಗುವ ಔಷಧಗಳನ್ನು ಕೆಳಗೆ ವಿವರಿಸಿದ್ದೇವೆ.

**ಫೇ. ಫಾ:—** ಮುಟ್ಟಿನ ಕಾಲಕ್ಕೆ ಹೊಟ್ಟೆಯಲ್ಲಿ ವೇದನೆ. ಮುಖ ಜರ್ಯ ಕೆಂಪು. ನಾಡಿಯು ತೀವ್ರ. ಅಪಕ್ವ ಅನ್ನದ ವಾಂತಿ. ತೀರ ಕೆಂಪು ರಕ್ತದ ಸ್ರಾವವು. ರಕ್ತವು ತೀವ್ರ ಗಟ್ಟಿಯಾಗುವದು. ದರಸರ್ತಿ ಮುಟ್ಟಿನ ಕಾಲಕ್ಕೆ ಕಷ್ಟವಾಗುತ್ತಿದ್ದಲ್ಲಿ, ಮುಟ್ಟಿನ ಅವಧಿಯ ಪೂರ್ವದಲ್ಲಿ ಸ್ವಲ್ಪ ದಿವಸ ಇದನ್ನು ಕೊಡಬೇಕು.

**ಕಾ. ಮೂ:—** ಮುಟ್ಟು ಸರಿಯಾದ ಕಾಲಕ್ಕೆ ಆಗುವದಿಲ್ಲ ಇಲ್ಲವೆ ತೀರ ಆಗುವದೇ ಇಲ್ಲ. ಶೈತ್ಯಮೂಲಕ ಅನಾರ್ತವ ( ಮುಟ್ಟು ಆಗದಿರೋಣ ) ಅಥವಾ ಮುಟ್ಟು ಮೇಲಿಂದ ಮೇಲೆಯೂ ಇಲ್ಲವೆ ಬಹಳೇ ತೀವ್ರವಾಗಿಯೂ ಆಗುವದು. ಸ್ರಾವವು ಡಾಂಬರಿನಂತೆ ಕರ್ರಗಾಗಿರುವದು ಹಾಗೂ ತೀವ್ರ ಗಟ್ಟಿಯಾಗುವದು. ಮುಟ್ಟಿನ ಸ್ರಾವವು ಬಹಳ ದಿವಸ ಆಗುತ್ತ ಇರುವದು. ನಾಲಗೆಯ ಮೇಲೆ ಬೂದಿ ಬಣ್ಣದ ಅಗ್ರುವಿರುವದು.

**ಕಾ. ಫಾ:—** ಮುಟ್ಟು ಅನಿಯಮಿತ, ವಿಶೇಷವಾಗಿ ಅಶಕ್ತ, ಕೋಮಲ ಮನಸ್ಸಿನ ಮತ್ತು ಚಿರಡಿಖೋರ ಹೆಂಗಸರಲ್ಲಿ ಮಾನಸಿಕ ದಣಿವಿಕೆ, ನಿರುತ್ಸಾಹ; ಮುಟ್ಟು ಬಹಳ ತಡಮಾಡಿ ಆಗುವದು. ಅದು

ಅತ್ಯಂತ ವಿಪುಲವಿರುವದು ಅಥವಾ ತೀರ ಸ್ವಲ್ಪ ಇರುವದು. ಮುಟ್ಟಿನ ಕಾಲಕ್ಕೆ ಹೊಟ್ಟೆ ನೋಯುವದು. ಕೆಂಪು ಅಥವಾ ಕರ್ರಸ, ತೆಳ್ಳನ ಸ್ರಾವವು. ರಕ್ತವು ಗಟ್ಟಿಯಾಗುವದಿಲ್ಲ. ಒಮ್ಮೊಮ್ಮೆ ಅದಕ್ಕೆ ಕೆಟ್ಟ ವಾತವಿರುವದು. ಮುಟ್ಟಿನ ನಂತರ ಪ್ರಬಲ ಕಾಮೇಚ್ಛೆ.

**ನೇ. ಮೂ:—**ನೀರಿನಂಥ ತೆಳ್ಳನ ಪಾಂಡುರ ಸ್ರಾವ. (ಕಾ. ಫಾ.); ವಿಶೇಷವಾಗಿ ಪಾಂಡುರೋಗವಿದ್ದ ಹುಡುಗೆಯರಲ್ಲಿ. ಮಾಂದ್ಯ, ನಿರುತ್ಸಾಹ, ಮುಂಜಾನೆ ತಲೆ ಮಂದವಿದ್ದು ನೋವೂ ಇರುವುದು. ಸ್ರಾವವು ಅತಿ ತೀವ್ರ ಹೋಗುವದು. ನಿದ್ದೆಯಲ್ಲಿ ಕಳ್ಳರ ಹೆದರಿಕೆ, ಹುಳಿ ಪದಾರ್ಥ ತಿನ್ನುವ ಇಚ್ಛೆ; ಕಾರಿಕೆ; ೧೨× ಅಥವಾ ೩೦× ಶಕ್ತಿಯನ್ನು ಉಪಯೋಗಿಸಬೇಕು.

**ಮ್ಯಾ. ಫಾ:—** ಮುಟ್ಟಿನ ಪೂರ್ವದಲ್ಲಿಯೂ ನಂತರವೂ ವೇದನೆ; ಹೊಟ್ಟೆ ಮುರಿಯುವದು. ವೇದನೆ ನಿಂತು ನಿಂತು ಬರುವವು. ಬಲಪಾರ್ಶ್ವದಲ್ಲಿ ಹೆಚ್ಚು, ಮುಟ್ಟು ಸ್ವಲ್ಪೇ ಆಗುತ್ತಿದ್ದು ವೇದನೆಯೂ ಆಗುತ್ತಿದ್ದಲ್ಲಿ, ಮ್ಯಾ. ಫಾ. ಕೊಟ್ಟಲ್ಲಿ ಆಗತಕ್ಕಷ್ಟು ಮುಟ್ಟು ಆಗಲಾರಂಭಿಸುವದು.

**ಕಲ್ಕೆ. ಫ್ಲು:—** ಮುಟ್ಟು ತೀರ ಹೆಚ್ಚಾಗುವದು. ಪ್ರಸವ ಕಾಲಕ್ಕೆ ಆಗುವಂಥ ವೇದನೆ. ಇಂಥ ವೇದನೆ ಇದ್ದಲ್ಲಿ. ಗರ್ಭಾಶಯದಿಂದ ಏನಾದರೂ ಇಳಿಯುತ್ತದೆ ಎಂಬುವ ಭಾಸವು. ಕಾ. ಫಾ. ವನ್ನು ಸರ್ತಿಯ ಮೇಲೆ ಕೊಡಬೇಕು.

**ಕಲ್ಕೆ. ಫಾ:—** ತರುಣ ಹುಡುಗೆಯರು ಮುಟ್ಟು ತೀವ್ರವಾಗಿ ಆಗುವರು. ಹಾಗೂ ದೊಡ್ಡ ಹೆಂಗಸರು ತಡಮಾಡಿ ಆಗುವರು. ಇತರ ಔಷಧಗಳ ಸಂಗಡ ಇದನ್ನು ನಡುನಡುವೆ ಕೊಡಬೇಕು. ಪಾಂಡುರೋಗವಿದ್ದ ತರುಣ ಹುಡುಗೆಯರ ಮುಟ್ಟು ಅನಿಯಮಿತವಿದ್ದರೆ. ಮುಟ್ಟು ಬಹಳ ತೀವ್ರವಾಗಿ ಆಗುತ್ತಿದ್ದಲ್ಲಿ. ಮುಟ್ಟಿನ ಕಾಲಕ್ಕೆ ಹೊಟ್ಟೆ ಕಡತವಿದ್ದರೆ. ಬಾಣಂತಿ ಇದ್ದಾಗ್ಗೆ ಮುಟ್ಟು ಆಗುವದಾದರೆ. ಮ್ಯಾ. ಫಾ. ದ ನಂತರ ಕೊಡಬೇಕು. ಮುಟ್ಟಾಗುವ ಪೂರ್ವದಲ್ಲಿ ಪ್ರಬಲ ಕಾಮೇಚ್ಛೆ ಮತ್ತು ನಂತರ ಅಶಕ್ತತೆ, ಸ್ವಸ್ಥ ಕೂಡಬೇಕೆಂಬ ಪ್ರವೃತ್ತಿ.

**ನೇಟ್ರಂ. ಫಾ:—** ಮುಟ್ಟು ವಿಷವುಳ್ಳದ್ದೂ, ಹುಳಿ, ದುರ್ಗಂಧ ವಿದ್ದದ್ದು. ಮುಟ್ಟು ತಗಲುವ ಭಾಗಕ್ಕೆ ಉರುಪು ಇರುವದು. ಉರುಪುವುಳ್ಳ ಮುಟ್ಟು. ನಾಲಗೆಯು ಮೇಲೆ ಹಳದಿ, ಕೆನೆಯಂಥ ದಟ್ಟ ಅಗ್ರ.

ಸಿ:— ಮಲಾವರೋಧವಿದ್ದರೆ. ಹೊಲಸು ನಾತವಿದ್ದ ಮುಟ್ಟು. ತಣ್ಣನ ಸ್ಥಳದಲ್ಲಿ ಕೆಲಸ ಮಾಡಿದ್ದರಿಂದಲೂ ಬಟ್ಟೆ ಒಗೆಯುವ ಕೆಲಸ ಮಾಡಿದಲ್ಲಿಯೂ ಮುಟ್ಟು ಹೆಚ್ಚಾಗುವದು. ಮುಟ್ಟು ಇದ್ದಾಗ್ಗೆ ಬಹಳೇ ಶೀತವೆನಿಸುವದು. ಕಾಮೇಚ್ಛೆ ಅನಾವರ.

**ಕಾ. ಸ:—** ಮುಟ್ಟು ಕಾಲಕ್ಕೆ ಸರಿಯಾಗಿ ಆಗದೆ ಬಹಳೇ ತಡವಾಗಿ ಆಗುವದು ಮತ್ತು ಬಹಳೇ ಕಡಿಮೆ ಆಗುವದು. ಹೊಟ್ಟೆಯಲ್ಲಿ ತುಂಬಿ ದಂತೆಯೂ ಜಡವಾದಂತೆಯೂ ಭಾವನೆ. ನಾಲಿಗೆಯು ಮೇಲೆ ಹಚ್ಚ ಹಳದೀ ಅಗ್ರ.

**ಕಲ್ಕೆ. ಸ:—** ಮುಟ್ಟು ತಡಮಾಡಿ ಆಗುವದು. ಬಹಳ ದಿವಸ ಆಗುತ್ತಿರುವದು. ತಲೆಶೂಲೆ, ಅಶಕ್ತತೆ.

**ಉಪಯುಕ್ತ ಸೂಚನೆ:—** ಪಾಂಡುರೋಗ, ಕ್ಷಯರೋಗ ಮುಂತಾದವುಗಳಂಥ ಪ್ರಾಕೃತಿಕ ದೋಷಗಳಿಂದಲೇ ಮುಟ್ಟು ಹೆಚ್ಚು ಕಡಿಮೆ ಆಗುವದು ಇಲ್ಲವೆ ತೀರ ನಿಲ್ಲುವದು. ಈ ಪ್ರಾಕೃತಿಕ ದೋಷವು ನಿಲ್ಲದ ಹೊರತು ಈ ರೋಗವು ಇಲ್ಲದಾಗುವದು ಶಕ್ಯವಿಲ್ಲ. ಆದರೆ ಆ ದೋಷಗಳನ್ನು ಹೋಗಲಾಡಿಸುವದರ ಕಡೆಗೆ ಲಕ್ಷ್ಯವಿಡಬೇಕು. ತಾತ್ಕಾಲಿಕ ಕಾರಣಗಳಿಂದ ಮುಟ್ಟು ನಿಂತಿದ್ದರೆ ಬಿಸಿನೀರಿನಲ್ಲಿ ಕಾಲು ಇಟ್ಟು ಕೊಂಡು ಕುಳಿತದ್ದರಿಂದಲೂ ಹೊಟ್ಟೆಯ ಸುತ್ತಮುತ್ತಲು ಉಣ್ಣೆಯ ಬಟ್ಟೆ ಸುತ್ತಿಕೊಂಡಿದ್ದರಿಂದಲೂ ಉಪಯೋಗವಾಗುವದು. ರಕ್ತಸ್ರಾವವು ಬಹಳ ಆಗುತ್ತಿದ್ದಲ್ಲಿ ರೋಗಿಯ ಕುತ್ತಿಗೆಯ ಕೆಳಗೆ ತಲೆಗಿಂಬು ಕೊಟ್ಟು ಕಾಲು ಎತ್ತರ ಮಾಡಿ ಮಲಗಿಸಬೇಕು. ಮತ್ತು ಕಲ್ಕೆ. ಫ್ಲೋ. ಮತ್ತು ಫೇ. ಫಾ. ಇವುಗಳನ್ನು ಸರ್ತಿಯ ಮೇಲೆ ಕೊಡಬೇಕು. ಮುಟ್ಟಿನ ಕಾಲಕ್ಕೆ ಬರುವ ತೀಕ್ಷ್ಣ ವೇದನೆ, ಕಾವು ಕೊಟ್ಟದ್ದರಿಂದಲೂ, ೩× ಶಕ್ತಿಯ ಮ್ಯಾ. ಫಾ. ಹಾಕಿದ ಬಿಸಿನೀರಿನಲ್ಲಿ ಕಾಲು ಇಟ್ಟುಕೊಂಡು ಕುಳಿತದ್ದ

ರಿಂದಲೂ ಕಡಿಮೆಯಾಗುವವು. ಪಾಂಡುರೋಗದ ಸ್ತ್ರೀಯರಿಗೆ ನಮ್ಮ "ಪಾಂಡುರೋಗ ಚೂರ್ಣ"ವೆಂಬ ಔಷಧವನ್ನು ದಿನಾಲು ಕೊಡಬೇಕು. "ಸಪೀಡಾರ್ತವ"ವೆಂಬ ವಿವರ ನೋಡಿರಿ.

---

# ವಿಷಮಜ್ವರ

**Typhoid Fever.** ಟಾಯಫಾಯ್ಡ ಫೀವರ.

ವಿಷಮಜ್ವರ (ಇದಕ್ಕೆ ಮಧುರಾ ಎಂದೂ ಅನ್ನುವರು) ವು ಒಂದು ತರದ ಸಾಂಸರ್ಗಿಕ ಜ್ವರವು. ಇದಕ್ಕೆ ಆಂತ್ರಜ್ವರವೆಂದೂ ಅನ್ನುವರು. ಇದರ ಕಾಲಾವಧಿಯು ೩-೪ ವಾರ ( ಅಥವಾ ೨೨-೨೮ ದಿವಸ ) ದ ವರೆಗೆ ಇರುವದು. ರೇಚಕದ ಪ್ರವೃತ್ತಿ ಇರುವದು. ಮಾಂದ್ಯ. ಕಣ್ಣುಮುಚ್ಚುವದು, ಬಡಬಡಿಸುವದು, ಭ್ರಮ ಮುಂತಾದ ವಾತದ ಭಾವನೆಗಳಿರುವವು. ಮಧುರೆ ಎಂಬ ಬಕ್ಕೆ ಎದೆಯ ಮೇಲೆ ಏಳುವದು. ಮೊದಲು ತಲೆನೋವು. ಮನಸ್ಸಿನಲ್ಲಿ ಅಸಮಾಧಾನ ಗ್ಲಾನಿ, ಅವರೋಧ, ನಿದ್ರಾಲುತ್ವ, ಅಸ್ವಸ್ಥತೆ ಮುಂತಾದ ಭಾವನೆಗಳಿಗೆ ಪ್ರಾರಂಭವಾಗುವದು. ಹೊಟ್ಟೆಯಲ್ಲಿ ಸ್ವಲ್ಪ ನೋವೂ ಹುಟ್ಟುವದು. ಶೌಚಕ್ಕೆ ತೆಳ್ಳಗಾಗುವದು. ಅರುಚಿ, ನಾಲಗೆಯ ಮೇಲೆ ಅಗ್ರ, ಅಶಕ್ತತೆಯ ಮೂಲಕ ಬಿದ್ದುಕೊಂಡೇ ಇರುವ ಇಚ್ಛೆ, ಹೊಟ್ಟೆ ಒತ್ತಿದಲ್ಲಿ ನೋವು, ಮುಂತಾದ ಲಕ್ಷಣಗಳಿರುವವು. ಸಾಯಂಕಾಲದಲ್ಲಿ ಜ್ವರ ಹೆಚ್ಚು. ಆ ಮಾನದಿಂದ ಮುಂಜಾನೆ ಕಡಿಮೆ ಇರುವದು. ಈ ಬೇನೆಯಲ್ಲಿ ಜ್ವರವು ನಿಯಮಿತತನದಿಂದ ಏರುವದು ಮತ್ತು ಕಡಿಮೆಯಾಗುವದು. ಒಮ್ಮಿಂದೊಮ್ಮೆ ಏರುವದೂ ಕಡಿಮೆಯಾಗುವದೂ ಆಗುವದಿಲ್ಲ. ಇದೇ ಈ ಜ್ವರದ ವಿಶೇಷ ಲಕ್ಷಣವು. ಮುಂಜಾವಿಗಿಂತ ಸಂಜೆಯ ಕಾಲಕ್ಕೆ ೨ ಅಂಶದಷ್ಟು ಏರುವದು. ಸಾಯಂಕಾಲದಿಂದ ಮುಂಜಾವಿನ ವರೆಗೆ ೧ ಅಂಶದಷ್ಟು ಕಡಿಮೆಯಾಗುವದು. ಸಾಧಾರಣವಾಗಿ ೩ನೇ ೪ನೇ ದಿವಸ ಸಾಯಂಕಾಲದಲ್ಲಿ ೧೦೪°। ೧೦೪°॥ ವರೆಗೆ ಏರುವದು. ಮುಂಜಾವಿನಲ್ಲಿ ೧೦೨°। ೧೦೨°॥ ಅಂಶದ ವರೆಗೆ

ಇರುವದು. ಮೊದಲಿನ ೩-೪ ದಿವಸದಲ್ಲಿಯು ಜ್ವರದ ಏರು ಇಳಿಯುವಿಕೆಯು ಪ್ರಮಾಣದ ಮೇಲಿಂದಲೆ ಜ್ವರದ ಲಕ್ಷಣವು (ವಿಷಮಜ್ವರ ಅಹುದೋ ಅಲ್ಲವೋ ಎಂಬದು) ಕಂಡುಬರುವದು. ಮೊದಲಿನ ಮೂರು ದಿವಸಗಳಲ್ಲಿಯು ಎರಡು ದಿವಸಗಳಲ್ಲಿ ಜ್ವರದ ಏರುವಿಕೆಯು ಹಾಗೂ ಇಳಿತದ ಪ್ರಮಾಣ ಸರಿಯಾಗಿ ಉಳಿದರೆ, ಇಲ್ಲವೆ ಮೊದಲು ಎರಡು ದಿವಸ ಜ್ವರ ೧೦೪°, ಅಥವಾ ಅದಕ್ಕೂ ಹೆಚ್ಚು ಅಂಶದ ವರೆಗೆ ಏರುತ್ತ ಹೋದರೆ ಅದು ವಿಷಮ ಜ್ವರವಲ್ಲವೆಂದು ಸ್ಥೂಲಮಾನದಿಂದ ತಿಳಿಯಲು ಬಾಧಕವಿಲ್ಲ.

ಮೊದಲನೇ ವಾರದಲ್ಲಿ ಸಾಧಾರಣವಾಗಿ ಜ್ವರದ ಪ್ರಮಾಣವು ಮೇಲೆ ಹೇಳಿದಂತೆ ಉಳಿಯುವದು. ಎರಡನೇ ವಾರದಲ್ಲಿ ಅಂದರೆ ೭ನೇ ೮ನೇ ದಿವಸ ಎದೆಯಮೇಲೆಯೂ ಹೊಟ್ಟೆಯಮೇಲೆಯೂ ಗುಲಾಬೀ ಬಣ್ಣದ ಬಕ್ಕೆ ಕಾಣಹತ್ತುವದು. ಬಕ್ಕೆ ಬತ್ತಿದಲ್ಲಿ ಇಲ್ಲದಂತಾಗುವದು, ಮತ್ತು ಪುನಃ ಕಾಣಹತ್ತುವದು. ಎಷ್ಟೋ ರೋಗಿಗಳಿಗೆ ಬಕ್ಕೆ ಏಳುವದೇ ಇಲ್ಲ. ಜ್ವರದ ಪ್ರಮಾಣವು ಸಾಧಾರಣವಾಗಿ ಮೊದಲನೇ ವಾರದಂತೆಯೇ ಇರುವದು. ಜ್ವರವು ೧೦೬ ಅಂಶದವರೆಗೂ ಏರುವದು. ಈ ವಾರದಲ್ಲಿ ಜ್ವರದ ಏರು ಇಳಿವಿಕೆಯ ಪ್ರಮಾಣ ಸಾಧಾರಣ ಸ್ಥಿರವಿರುವದು. ೨ನೇ ವಾರದಲ್ಲಿ ಅಶಕ್ತತೆ ಹೆಚ್ಚಾಗಿ ಕಂಡುಬರುವದು. ವಾತದ ಲಕ್ಷಣಗಳು ಕಂಡುಬರುವವು. ಗ್ಲಾನಿಯೂ ಕಣ್ಣು ಮುಚ್ಚು ಹಾಕುವದೂ ಇರುವದು. ಹೊಟ್ಟೆ ಉಬ್ಬಿದಂತಾಗುವದು. ಬಿಕ್ಕು ಬರುವವು. ಹೊಟ್ಟೆಯು ಡಮ ಡಮಿಸುವದು. ೩ನೇ ವಾರದಲ್ಲಿ ಜ್ವರದ ಏರು ಇಳಿವಿಕೆಯಲ್ಲಿಯು ಅಂತರವು ಬಹಳ ಇದ್ದದ್ದು ಕಂಡುಬರುವದು. ೪ನೇ ವಾರದಲ್ಲಿ ಮುಂಜಾವಿನಲ್ಲಿ ತೀರ ಇಳಿಯುವದು ಮತ್ತು ಸಾಯಂಕಾಲದಲ್ಲಿ ಮೆಲ್ಲಮೆಲ್ಲನೆ ಬರುವದೂ ನಿಲ್ಲುವದು. ಒಂದೇಸಮನೆ ಎರಡುದಿವಸ ಜ್ವರ ಸಾಯಂಕಾಲದಲ್ಲಿ ಬರದೇ ಇದ್ದರೆ ಜ್ವರವು ಹಿಮ್ಮೆಟ್ಟಿತೆಂದು ತಿಳಿಯಬೇಕು. ಎಷ್ಟೋ ಸರ್ತೆ ೧೦-೧೨ ದಿವಸದ ನಂತರ ಸಹ ಜ್ವರ ಮರಕಳಿಸಿ ಬರುವದು. ಈ ಜ್ವರದಲ್ಲಿ ಪ್ಲೀಹೆ ಬಹಳಮಾಡಿ ಬೆಳೆದದ್ದು ಇರುವದು. ಅಲ್ಲಿ ಕೈಹಚ್ಚಿದಲ್ಲಿ ನೋಯುವದು. ಹೊಟ್ಟೆ ಬಾಯುವದು ಮತ್ತು ನಗಾರಿಯಂತೆ ಸಪ್ಪಳಾಗುವದು. ಈ ಲಕ್ಷಣಗಳು ವಿಶೇಷವಾಗಿ ೨ನೇ ೩ನೇ ವಾರದಲ್ಲಿ ಕಂಡು

ಬರುವವು. ಮಧುರೆಯ ಬಕ್ಕೆಗಳು ೨ನೇ ವಾರದಲ್ಲಿ ಬಂದು ೩ನೇ ವಾರದಲ್ಲಿ ಇಲ್ಲವಾಗುವವು. ಅಸ್ವಸ್ಥತೆಯು ಹಾಗೂ ಅಸಮಾಧಾನದ ಭಾವನೆ ಮೊದಲಿನಿಂದ ಕಡೆಯವರೆಗೆ ಇರುವದು.

ಮಾಂದ್ಯ, ಕಣ್ಣುಮುಚ್ಚು, ಭ್ರಮ, ಬಡಬಡಿಸುವದು ಮುಂತಾದ ವಾತದ ಲಕ್ಷಣಗಳು ೨ನೇ ಮೂರನೇ ವಾರದಲ್ಲಿ ಬಹಳವಾಗಿ ಇರುವವು. ಮೊದಲನೇ ವಾರದಲ್ಲಿ ನಾಲಗೆಯ ತುದಿಗಳು ಕೆಂಪು ಇದ್ದು ನಡುವೆ ಬಿಳೇ ತೆಳ್ಳನ ಅಗ್ರುವಿರುವದು. ಎರಡನೆ ವಾರದಲ್ಲಿ ನಾಲಗೆಯು ಸ್ವಚ್ಛವಿರುವದು ಪೃಷ್ಠಭಾಗ ಬೆನ್ನು ಮುಂತಾದ ಪ್ರಾಂತದಲ್ಲಿ ಅಶಕ್ತತೆಯ ಮೂಲಕ ೨ನೇ ೩ನೇ ವಾರದಲ್ಲಿ ಬೆನ್ನು ಸುಲಿದು ಹುಣ್ಣುಗಳಾಗುವವು. ಈ ಜ್ವರದಲ್ಲಿ ನಾಡಿಯು ಜ್ವರದ ಮಾನದಿಂದ ತೀವ್ರ ಹಾರುವದಿಲ್ಲ. ಅದು ಮಂದವೂ ತುಂಬಿದಂತೆಯೂ ನಡೆಯುತ್ತಿದ್ದು ಅದರ ಮೇಲಿನ ಒತ್ತಾಯ ಕಡಿಮೆ ಯಾದಂತೆ ಭಾಸವಾಗುವದು. ಮೂರನೇ ವಾರದಲ್ಲಿ ನ್ಯುಮೋನಿಯಾ, ಉದರಾವರಣದಾಹ, ಮುಖ ಗ್ರಂಥಿಗಳ ಬಾವು, ಕರುಳುಗಳಲ್ಲಿ ಕ್ಷತಗಳು ಬಿದ್ದು, ರಕ್ತ ಸಹಿತ ಮಲವು ಆಗುವದು, ಮೂಗು ಬಿಚ್ಚುವದು, ಮುಂತಾದ ಉಪದ್ರವಗಳಾಗುವ ಸಂಭವವಿರುವದು. ಕರಳುಗಳೊಳ ಗಿಂದಲೂ ಇತರ ದ್ವಾರಗಳಿಂದಲೂ ರಕ್ತ ಸ್ರಾವ ಹೋಗೋಣ, ಹೊಟ್ಟೆಯು ವಾತದಿಂದ ತುಂಬಿಕೊಂಡು ಡಮುಡಮಿಸುವದು, ಅರಿವು ತಪ್ಪೋಣ ತುಟಿ ಯಲ್ಲಿಯೇ ಪಟ ಪಟ ಮಾತಾಡೋಣ, ಕಂಪವೂ ೧೦೪° ಕ್ಕಿಂತ ಹೆಚ್ಚು ಅಂಶದವರೆಗೆ ಜ್ವರ ಸ್ಥಿರವಾಗಿರೋಣ– ಇವು ಅನಿಷ್ಟ ಲಕ್ಷಣಗಳೆಂದು ತಿಳಿಯಬೇಕು. ನಾಡಿಯು ಮಂದವೂ ತುಂಬಿದಂತೆಯೂ ನಡೆಯುತ್ತಿದ್ದು, ವಾತದ ಭಾವನೆಗಳಿರದಿದ್ದರೆ ಜ್ವರ ಬಹಳ ಇದ್ದಾಗೂ ಹೆದರುವ ಕಾರಣವಿಲ್ಲ.

**ಫೇ. ಫಾ:**—ಪ್ರಾರಂಭದಲ್ಲಿ. ಚಳಿ, ಜ್ವರ ಮುಂತಾದವುಗಳಿಗೋಸ್ಕರ ದಾಹದ ಲಕ್ಷಣಗಳಿರುವವರೆಗೆ ಇತರ ಔಷಧಗಳ ಜತೆಗೆ ಕೊಡಬೇಕು. ಮುಖಚರ್ಯೆ, ತುಟಿ, ಶ್ಲೇಷ್ಮಲ ತ್ವಚೆ ಕೆಂಪಾಗಿರುತ್ತವೆ. ನಾಡಿಯು ತೀವ್ರಹಾರುವದು ಆದರೂ ಸಶಕ್ತವಿದ್ದು ಅನಿಯಮಿತವಿರುವದು. ರಕ್ತ ಸ್ರಾವ, ಶಕ್ತಿಪಾತ;

**ಕಾ. ಮೂ:**— ಮುಖ್ಯ ಔಷಧವು ಸರ್ತೆಮೇಲೆ ಫೇರಂ. ಫಾ. ಪನ್ನು ಜತೆಗೆ ಕೊಡಬೇಕು. ನಾಲಗೆಯಮೇಲೆ ಬೂದಿ ಬಣ್ಣದ ಅಗ್ರ. ಹೊಟ್ಟೆ ಜಾಡಿಸುವದು. ರೇಚವು ಹಳದೀವರ್ಣದಮೇಲೆ ಇದ್ದು ಬುರುಗುವುಳ್ಳದ್ದೂ ಇರುವದು. ಹೊಟ್ಟೆ ಉಬ್ಬಿದ್ದು; ಸ್ಪರ್ಶ ಸಹನ ವಾಗುವದಿಲ್ಲ. ರಕ್ತವು ಕರೇಬಣ್ಣದ್ದು ಇದ್ದು ಗಟ್ಟಿಯಾಗುವಂಥಾದ್ದು ಬೀಳುವದು.

**ನೇ. ಮೂ:**— ರೋಗದ ಪ್ರಾರಂಭದಲ್ಲಿ ಸರ್ತೆಮೇಲೆ ಇದರ ಜತೆಗೆ ಫೇ. ಫಾ. ಕೊಡಬೇಕು. ಕಷ್ಟಸಾಧ್ಯ ಲಕ್ಷಣಗಳಾವವೆಂದರೆ- ನಾಲಗೆಯು ಒಣಗಿದ್ದು, ನೀರಿನಪಾಂತಿ, ಮಾಂದ್ಯ, ಕಣ್ಣುಮುಚ್ಚುವದು, ಸರ್ವಾಂಗವೆಲ್ಲ ಸಣ ಸಣ ಸೆಳೆತ; ಸ್ನಾಯುಗಳ ಸ್ಫುರಣ.

**ಕಾ. ಫಾ:**— ಕಷ್ಟಸಾಧ್ಯ ಲಕ್ಷಣಗಳು- ಮಲವು ಕೆಟ್ಟ ನಾತ ವುಳ್ಳದ್ದು, ಶಕ್ತಿಪಾತ, ನಿದ್ರೆಗೇಡು, ಬಾಯಿಗೆ ದುರ್ಗಂಧ, ಹೃದಯದ ಅಶಕ್ತತೆ; ಭ್ರಮ, ನಾಲಗೆಯು ಒಣಗಿದ್ದು, ನಾಲಗೆಯಮೇಲೆ ಸಾಸಿವಿಯ ಲೇಪದ ವರ್ಣದ ಕರೇ ಅಗ್ರ. ( ನೇ. ಮೂ. ), ಹಲ್ಲಿನ ಮೇಲೆ ಸಹ ಕಿಟ್ಟ, ನಾಡಿಯ ಕ್ಷೀಣತೆ, ತುಟಿಗಳು ಸುಲಿಯೋಣ, ನಾಲಗೆಯು ಒಣಗಿದ್ದರಿಂದ ಮಾತಾಡಲಿಕ್ಕೆ ಬರುವದಿಲ್ಲ, ಸ್ರಾವವು ಕೆಟ್ಟ ನಾತವುಳ್ಳದ್ದು (ಬೆವರು, ಮಲ ಮುಂತಾದ್ದು ), ನಾಡಿಯು ಅಶಕ್ತ, ತೀವ್ರ ಹಾಗೂ ಅನಿಯಮಿತ, ಜ್ವರವೂ ಬಹಳ ಜೋರಿನದು ಇರುವದಿಲ್ಲ (ಕಡಿಮೆ ಇರುವದು), ಅಸ್ವಸ್ಥತೆ, ಮುಖಚರ್ಯೆ ಇಳಿದದ್ದೂ ನಿಸ್ತೇಜವೂ ಇರುವದು, ಸೌಮ್ಯ ಬಡಬಡಿಸು ವದು, ಇವೇ ಮುಂತಾದವು ಅನಿಷ್ಟ ಲಕ್ಷಣಗಳು. ಶಾರೀರಿಕ ಭಾವನೆಗಳಿ ಗಿಂತ ಮಾನಸಿಕ ಭಾವನೆಗಳೇ ಹೆಚ್ಚು ಭರವುಳ್ಳವು ಇರುವವು.

**ಮ್ಯಾ. ಫಾ:** — ಸೆಳೆತ, ಮೈಯೆಲ್ಲ ಸೆಳೆತವಿರುವದು. ಹೊಟ್ಟೆಯಲ್ಲಿ ನೋವು ಇದ್ದು ಅಲ್ಲಿ ಜಡವೆನಿಸುವದು. ನಾಲಗೆಯಮೇಲೆ ಹಳದಿ ಹೊಳ ಪುಳ್ಳ ಅಗ್ರ;

**ನೇ. ಸ:**— ನಾಲಗೆಯಮೇಲೆ ಹೊಲಸು. ನಸುಗೆಂಪು, ಹಸರು ಅಗ್ರ; ಪಿತ್ತಪ್ರಕೋಪ.

**ಕಲ್ಕೆ. ಫಾ:**— ನಡುನಡುವೆ ಕೊಡಬೇಕು. ಆರೋಗ್ಯ ಸ್ಥಾಪನಾವಸ್ಥೆಯಲ್ಲಿ ಶಕ್ತಿ ಬರುವದಕ್ಕೋಸ್ಕರ.

**ಕಾಲಿ. ಸ**:— ಸಾಯಂಕಾಲದಲ್ಲಿ ಜ್ವರ ಹೆಚ್ಚು ಇದ್ದು ಮುಂಜಾನೆ ಕಡಿಮೆ ಇರುವದು. ನಾಡಿಯು ತೀವ್ರ ನಡೆಯುವದು. ರಕ್ತ ದೂಷಿತವಾದಲ್ಲಿ ಮಂದ ಹಾಗೂ ಸಾವಕಾಶ ನಡೆಯುವದು.

**ಉಪಯುಕ್ತ ಸೂಚನೆ:**— ರೋಗದ ಆರಂಭಾವಸ್ಥೆಯಲ್ಲಿ ಫೇ. ಫಾ. ಕಾ. ಫಾ. ಮತ್ತು ಕಾ. ಮೂ. ಇವುಗಳನ್ನು ಕೊಡಲಾರಂಭಿಸಬೇಕು. ತ್ವಚೆಯು ಒಣಗಿದ್ದು ಇದ್ದು ಮೈಮೇಲೆ ( ಥಂಡಿಯ ) ಮುಳ್ಳು ಬರುವದಾದರೆ ಕಾ. ಮೂ. ರದ ಬದಲು ಕಾ. ಸ. ವನ್ನು ಕೊಡಬೇಕು. ಕೆಲ ಡಾಕ್ಟರರು ಹೀಗೆ ಅನ್ನುವರು— ರೋಗದ ಪ್ರಾರಂಭದಲ್ಲಿ ಫೇ. ಫಾ. ಮತ್ತು ನೇ. ಮೂ. ಇವುಗಳನ್ನು ತೀವ್ರ ತೀವ್ರವಾಗಿ ಒಂದೇಸವನೆ ಸರ್ತಿಮೇಲೆ ಕೊಡುತ್ತ ಹೋಗಬೇಕು. ನಮಗಂತೂ ಮೊದಲು ಹೇಳಿದ ಪ್ರಕಾರವು ಸಮ್ಮತವಿರುವದು. ಭಾವನಾನುಸಾರವಾಗಿ ಅದರಲ್ಲಿ ಹೆಚ್ಚು ಕಡಿಮೆ ಮಾಡುವದು ಅವಶ್ಯಕಂಡಲ್ಲಿ ಹಾಗೆ ಮಾಡಬೇಕು. ಮೊದಲಿನಿಂದಲೆ ಈ ಔಷಧಗಳನ್ನು ಬಿಸಿ ನೀರಿನಲ್ಲಿ ಹಾಕಿ ಕೊಟ್ಟು ಮತ್ತು ದಿನಾಲು ಬಿಸಿ ನೀರಿನ ಬಸ್ತಿಯನ್ನು ಕೊಟ್ಟಲ್ಲಿ ಇದರ ಉಪದ್ರವ ಯಾವವೂ ಆಗದೆ ರೋಗಿಯು ತೀವ್ರವಾಗಿ ನೆಟ್ಟಗಾಗುವನು. ರೋಗದ ಭರವು ಹೆಚ್ಚು ಇದ್ದಲ್ಲಿ ಕಾ. ಫಾ. ವನ್ನು ಪ್ರಮುಖ ಔಷಧವೆಂದು ತಿಳಿದು ಅದನ್ನು ಒಂದೇಸವನೆ ಕೊಡುವ ಕ್ರಮವಿಡಬೇಕು. ಜ್ವರದ ಸಲುವಾಗಿ ಫೇ. ಫಾ. ಕೊಡಬೇಕು. ಸಾಯಂಕಾಲಕ್ಕೆ ಜ್ವರ ಬರುತ್ತಿದ್ದರೆ ಕಾ. ಫಾ. ವನ್ನು ಫೇರಂ ಫಾ. ದ ಜತೆಗೆ ಕೊಡಬೇಕು. ಮಲವು ಹಸರು ಬಣ್ಣದ್ದಾಗುತ್ತಿದ್ದಲ್ಲಿ ನೇ. ಸ. ವನ್ನು ನಡುನಡುವೆ ಕೊಡಬೇಕು. ಮಾಂದ್ಯ, ಭ್ರಮ, ದಣಿವಿಕೆ, ನಾಲಗೆಯಮೇಲೆ ಜೊಲ್ಲಿನ ಗುಳ್ಳೆಗಳು, ಚಿತ್ತದ ಅಸ್ವಸ್ಥತೆ ಮುಂತಾದ ಲಕ್ಷಣಗಳು ಇದ್ದರೆ ಕಾಲಿ. ಫಾ. ಮತ್ತು ನೇ. ಸ. ಇವುಗಳನ್ನು ಜತೆಗೆ ಕೊಡಬೇಕು. ಈ ರೋಗದಲ್ಲಿ ಕೆಲ ಜನರಿಗೆ ಕಡಿಮೆ ಶಕ್ತಿಯ ಔಷಧಗಳು ಉಪಯೋಗವಾಗುತ್ತವೆ. ಆದರೆ ಕೆಲ ಜನರಿಗೆ ಹೆಚ್ಚಿನ ಶಕ್ತಿಯ

ಔಷಧಗಳನ್ನೇ ಕೊಡಬೇಕಾಗುವದು. ಇದನ್ನು ಲಕ್ಷ್ಯದಲ್ಲಿಟ್ಟುಕೊಳ್ಳಬೇಕು. ಒಬ್ಬರಿಗೆ ಒಂದು ಶಕ್ತಿಯು ಉಪಯೋಗವಾಗಲಿಲ್ಲವೆಂದು ಆ ಔಷಧದ ಉಪಯೋಗ ಇನ್ನೊಬ್ಬರಿಗೆ ಆಗುವದಿಲ್ಲವೆಂದು ಮಾತ್ರ ತಿಳಿಯಕೂಡದು. ಇಂಥ ಸಮಯದಲ್ಲಿ ಔಷಧದ ಶಕ್ತಿಯನ್ನು ಬದಲಿಸಿ ನೋಡಬೇಕು. ಈ ಔಷಧಗಳನ್ನು ಕೊಡುತ್ತಾ ಹೋದಲ್ಲಿ ಸಾಧಾರಣವಾಗಿ ರಕ್ತಸ್ರಾವ ವಾಗುವದೇ ಇಲ್ಲ. ಆದರೂ ರಕ್ತಸ್ರಾವವು ಹುಟ್ಟಿದಲ್ಲಿ ಕಾ. ಫಾ. ಫೇ. ಫಾ. ಮತ್ತು ಸೇ. ಮೂ ಈ ಔಷಧಗಳನ್ನು ಹೊಟ್ಟೆಯಲ್ಲಿ ಕೊಡಬೇಕು. ಮತ್ತು ನೀರಿನಲ್ಲಿ ಉಪ್ಪು ಹಾಕಿ ಅದರ ಬಸ್ತಿಯನ್ನು ಕೊಡಬೇಕು. ರಕ್ತವು ಕರ್ರಗೂ ಗಂಟುಗಂಟಾಗಿಯೂ ಬೀಳುತ್ತಿದ್ದಲ್ಲಿ ಕಾ. ಮೂ. ವನ್ನು ಕೊಡಬೇಕು. ನಾಲಿಗೆಯು ನಸುಗೆಂಪಾಗಿದ್ದು ವಾತವೂ ಆದರೆ ಇಲ್ಲವೆ ರೋಗಿಯು ಗಾಬರಿಯಾಗಿದ್ದರೆ ಕಾ. ಫಾ. ವನ್ನು ಕೊಡಬೇಕು. ನಾಲಿಗೆಯು ನಸುಗೆಂಪೂ ಹೊಳಪು ಉಳ್ಳದ್ದೂ ಇದ್ದು, ಹೊಟ್ಟೆಯಲ್ಲಿ ವೇದನೆಯೂ ಇದ್ದರೆ ಮತ್ತು ಹೊಟ್ಟೆಯು ತುಂಬಿದಂತೆ ಅನಿಸುತ್ತಿದ್ದರೆ ಮ್ಯಾ. ಫಾ. ವನ್ನು ಕೊಡಬೇಕು. ದಟ್ಟ, ಹಳದಿ, ಅಗ್ರವಿದ್ದರೆ ನೇಟ್ರಂ. ಫಾ. ಕೊಡಬೇಕು. ನಸುಗೆಂಪು, ಹಸರು ಹೊಲಸು ಅಗ್ರವಿದ್ದರೆ, ನೇ. ಸ. ಕೊಡಬೇಕು. ಆರೋಗ್ಯ ಸ್ಥಾಪನಾವಸ್ಥೆಯಲ್ಲಿ ಕಲ್ಕೆ. ಫಾ. ಕೊಡಲು ಮರೆಯಬಾರದು. ಅದೇ ಪ್ರಕಾರ ಕಲ್ಕೆ. ಫಾ. ಫೇ. ಫಾ. ಮತ್ತು ಕಾ. ಫಾ. ಇವುಗಳನ್ನು ಶಕ್ತಿವರ್ಧಕವೆಂದು ಕೊಡಬೇಕು. ಇವುಗಳ ಬಗ್ಗೆ ನಾವು ಮಾಡಿದ " ಸೆಲ್‌ಟಾನಿಕ " ಅಥವಾ " ಪಿಂಡ ಪೌಷ್ಟಿಕ ಚೂರ್ಣ " ಕೊಟ್ಟಲ್ಲಿ ಬಹಳ ಗುಣವಾಗುವದು. ಗಂಜಿ, ಸಾವಿಯ ಅರಳು, ದಾಳಿಂಬ, ದ್ರಾಕ್ಷ, ಮುಂತಾದವುಗಳ ಹೊರ್ತು ಇತರ ಯಾವದೇ ಪದಾರ್ಥ ಕೊಡಬಾರದು. ಆರೋಗ್ಯ ಸ್ಥಾಪನಾವಸ್ಥೆಯಲ್ಲಿ ಹಸಿವೆ ಬಹಳಾಗುವದು. ಆ ಕಾಲಕ್ಕೆ ಮಾತ್ರ ರೋಗಿಯನ್ನು ಜಪ್ಪಿಸಬೇಕು. ಇಲ್ಲದಿದ್ದರೆ ಕೇವಲ ಅಪಥ್ಯದಿಂದಲೇ ರೋಗವು ಮರಕಳಿಸಿ ಬರುವದು. ಶೌಚಕ್ಕೆ ಸ್ವಚ್ಛವಾಗುವದಕ್ಕೋಸ್ಕರ ಉಗುರು ಬೆಚ್ಚನ ನೀರಿನ ಬಸ್ತಿಯನ್ನು ಆಗಲಿ ಗ್ಲಿಸರೀನದ ಪಿಚಲಳಿಗೆಯನ್ನು ದಿನಾಲು ಕೊಡಬೇಕು. ಜ್ವರ ಬಹಳ, ನಾಡಿಯು ತೀವ್ರ, ರೋಗವು ಬೆಳೆಯುತ್ತಿರುವದೂ ಇದ್ದರೆ ಬಿಸಿನೀರಿನ

ಬಸ್ತಿಯ ಉಪಯೋಗ ಬಹಳಾಗುವದು. ರೋಗವು ಯಾವದೇ ಸ್ಥಿತಿಯಲ್ಲಿ ದ್ದರೂ ಬಿಸಿನೀರಿನ ಬಸ್ತಿಯನ್ನು ಕೊಡಲು ತಪ್ಪಬಾರದು.

'ಜ್ವರ'ವೆಂಬ ವಿವರ ನೋಡಿರಿ.

---

# ಚಿತ್ತವಿಭ್ರಮ-ಹುಚ್ಚುತನ-ಮರುಳು

**Delirium, Madness. Insanity.**

**ಡೆಲೀರಿಯಮ್, ಮ್ಯಾಡ್‌ನೆಸ್, ಇನ್‌ಸ್ಯಾನಿಟಿ.**

ಚಿತ್ತವಿಭ್ರಮ, ಭ್ರಮ, ಹುಚ್ಚು, ಮರುಳು ಮುಂತಾದವುಗಳೆಲ್ಲ ಮನಸ್ಸಿನ ವಿಕೃತಿಯ ರೋಗಗಳೇ ಸರಿ. ಈ ಎಲ್ಲ ವಿಕಾರಗಳಲ್ಲಿ ಮನಸ್ಸಿನ ಪ್ರಕ್ಷುಬ್ಧ ಸ್ಥಿತಿಯು ಹೆಚ್ಚು ಕಡಿಮೆ ಪ್ರಮಾಣದಲ್ಲಿ ಅತಿರೇಕ ಹೊಂದಿದ್ದಿರುತ್ತದೆ. ಈ ಪ್ರಕ್ಷುಬ್ಧ ಸ್ಥಿತಿಯನ್ನುಂಟುಮಾಡುವ ಕಾರಣಗಳು ಬೇರೆ ಬೇರೆ ಇರುವವು. ಆದ್ದರಿಂದ ಅವುಗಳಿಗೆ ಬೇರೆ ಬೇರೆ ಹೆಸರುಗಳು ಸಹ ಇಡಲ್ಪಟ್ಟಿವೆ. ಟಾಯಫಾಯಿಡ, ನ್ಯುಮೋನಿಯಾ ಮುಂತಾದ ತೀವ್ರಗಾಮಿ ದುಷ್ಟ ರೋಗಗಳಲ್ಲಿ ಪ್ರಕ್ಷುಬ್ಧ ಮನಃಸ್ಥಿತಿಯು ಉತ್ಪನ್ನವಾದಲ್ಲಿ ಅದಕ್ಕೆ ವಾತ, ಭ್ರಮವೆನ್ನುವರು. ಅಂದರೆ ವಾತ ಹಾಗೂ ಭ್ರಮವೆಂಬುವ ವಿಕೃತಿಯು ರೋಗಜನ್ಯವಿದ್ದು ಬಹುದಿವಸ ತಡೆಯುವಂಥಾದ್ದು ಇರುವದಿಲ್ಲ. ರೋಗವಿಲ್ಲವಾದಕೂಡಲೆ ಈ ಪ್ರಕ್ಷುಬ್ಧ ಮನಃಸ್ಥಿತಿಯೂ ಇಲ್ಲವಾಗುವದು. ಇಂಥ ಶಾರೀರಕ ಕಾರಣಗಳೇನೂ ಇಲ್ಲದಲೇ ಕೇವಲ ಮಾನಸಿಕ ಪರಿಸ್ಥಿತಿಯ ಮೂಲಕ ವಿಕೃತಿಯು ಉತ್ಪನ್ನವಾದರೆ ಆ ವಿಕೃತಿಗೆ ಹುಚ್ಚು ಅನ್ನುವರು. ಶಕ್ತಿಯನ್ನು ಕ್ಷೀಣಮಾಡುವ ರೋಗವು ಬಂದು ಹೋದ ನಂತರ ಮನಸ್ಸಿನ ಮೇಲೆ ಪರಿಣಾಮವಾಗಿ ಅದು ದುರ್ಬಲವಾದ್ದರಿಂದಲೂ ಅಥವಾ ಮಾನಸಿಕ ರೋಗದಿಂದಲೂ ಹೆಚ್ಚಿನ ಭಾವನೆಗಳು ಕಂಡುಬರುವವು. ತಿಳುವಳಿಕೆ ತಪ್ಪುವದು, ಬಡಬಡಿಸುವದು, ಮನಸ್ಸಿನ ಚಂಚಲತೆ, ಅನಿಶ್ಚಿತತೆ, ನಿದ್ದೆಗೇಡು, ಅಸ್ವಸ್ಥತೆ, ಆಭಾಸಾತ್ಮಕ ಕಲ್ಪನೆ, ಭ್ರಮಿಷ್ಠತೆ, ನಮ್ರತಾತಿರೇಕತೆ, ಮರ್ಯಾದೆ

ಗೇಡು, ನಿಷ್ಕಾರಣ ನಗುವದು, ಅಳುವದು, ಹಾಡೋಣ, ಓಡುತ್ತ ಹೋಗೋಣ, ಯದ್ವಾತದ್ವಾ ಚೇಷ್ಟೆಮಾಡೋಣ, ನೈತಿಕ, ಧಾರ್ಮಿಕ ಹಾಗೂ ಇತರ ಯಾವದೇ ಸಂಗತಿಗಳ ಬಗ್ಗೆ ಅಸಂಬದ್ಧ ಬಡಬಡಿಸೋಣ, ತುಟಿಯಲ್ಲಿ ಪಟ ಪಟ ಮಾತಾಡೋಣ, ಮುಂತಾದ ಚೇಷ್ಟೆಗಳು ಹುಚ್ಚಾಟ ದಲ್ಲಿ ಕಂಡುಬರುವವು. ಜ್ವರವು ಇರುವದಿಲ್ಲ. ವಾತದಲ್ಲಿ ಸಹ ಇವೆಲ್ಲ ಲಕ್ಷಣಗಳು ಹೆಚ್ಚು ಕಡಿಮೆ ಪ್ರಮಾಣದಲ್ಲಿ ಕಂಡುಬರುವವು. ವಾತದಲ್ಲಿ ಜ್ವರ ಮಾತ್ರ ಇರುವದು. ಒಮ್ಮೊಮ್ಮೆ ಜ್ವರವಿಳಿದ ನಂತರ ಸಹ ಈ ಭಾವನೆಗಳು ಸ್ವಲ್ಪ ದಿವಸ ಇರುವದುಂಟು. ವಾತವಿಕೃತಿಯಾಗುವಂಥ ರೋಗಗಳಲ್ಲಿ ರೋಗದ ಭರವು ಕಡಿಮೆಯಾದನಂತರ ವಾತವಿಕೃತಿಯಾದರೂ ಕಡಿಮೆಯಾಗುವದೆಂದು ಮೇಲೆ ಹೇಳಿಯೇ ಇದೆ. ಮೇಲೆ ಹೇಳಿದ ಹುಚ್ಚುತನದ ತರಂಗಗಳು ಮೇಲಿಂದ ಮೇಲೆ ಬರುವವು ಮತ್ತು ಹೆಚ್ಚು ಕಡಿಮೆ ಅವಧಿಯವರೆಗೆ ನಿಲ್ಲುವವು. ಮುಂದೆ ತೀರ ನಿಂತುಹೋಗುವವು. ಇದಕ್ಕೆ ಇಂಗ್ಲಿಷ ಭಾಷೆಯಲ್ಲಿ "ಮ್ಯಾನಿಯಾ" (Mania) ಅನ್ನುವರು. ಉನ್ಮಾದವೆಂದೂ ಅನ್ನುವರು. ಮೇಲೆ ಹೇಳಿದ್ದೊಂದೇ ಹುಚ್ಚಿನ ಪ್ರಕಾರ ವಲ್ಲ. ಎಲ್ಲ ಪ್ರಕಾರಗಳನ್ನು ಲಕ್ಷ್ಯದಲ್ಲಿ ತಂದರೆ "ಹುಚ್ಚು" ಎಂಬ ಶಬ್ದದ ವ್ಯಾಖ್ಯೆ ಮಾಡುವದೇ ಕಠಿಣವಾಗುವದು. ಹುಚ್ಚಿನ ಯಾವದೇ ಪ್ರಕಾರ ದಲ್ಲಿ ಮನುಷ್ಯನ ವಿಚಾರಶಕ್ತಿ, ನಿರ್ಣಯಬುದ್ಧಿ, ಧಾರಣೆ, ಅಥವಾ ಆಕಲನ ಶಕ್ತಿ ಹೆಚ್ಚು ಕಡಿಮೆ ಪ್ರಮಾಣದಲ್ಲಿ ವಿಕೃತಿಹೊಂದಿರುವದು. ಹುಚ್ಚಿನ ಬೇರೆ ಬೇರೆ ಪ್ರಕಾರಗಳಲ್ಲಿ ಕಂಡುಬರುವ ಭಾವನೆಗಳು ಸಹ ರೋಗಿಯ ವಿಚಾರಶಕ್ತಿಯ ವಿಕೃತಿಯ ನಿದರ್ಶಕಗಳೆಂಬದು ಕಂಡುಬರುವದು. ದಾಂಡಿಗತನ, ಕೊಲೆ, ಆತ್ಮಹತ್ಯೆಯ ಪ್ರಯತ್ನ, ಅರಿವೆ ಹರಿಯೋಣ, ಬೀದಿ ಗಳಲ್ಲಿ ಬತ್ತಲೆ ಬಟ್ಟೆ ಇಲ್ಲದೆ, ಅಸ್ತವ್ಯಸ್ತ ರೀತಿಯಿಂದ ತಿರುಗಾಡೋಣ, ಬಡಬಡಿಸೋಣ, ತಿನ್ನುವ ಉಣ್ಣುವ ಅರಿವು ಇರದಿರೋಣ ಸ್ವತಃ ತನ್ನ ಸಂಬಂಧದಿಂದ ಹುಚ್ಚು ಕಲ್ಪನೆ ಮಾಡಿಕೊಂಬೋಣ,– ಮುಂತಾದವು ಗಳೆಲ್ಲ ವಿಚಾರಶಕ್ತಿಯ ಹೆಚ್ಚು ಕಡಿಮೆ ಪ್ರಮಾಣದಲ್ಲಿ ವಿಕೃತಿಹೊಂದಿದ ಲಕ್ಷಣಗಳೇ ಸರಿ. ಕೆಲಜನರ ಹುಚ್ಚು ಸ್ವಲ್ಪ ದಿವಸದ ಪೂರ್ತಿಯೇ ಇರುವದು. ಇತರ ಕಾಲದಲ್ಲಿ ಅವರ ನಡತೆ ಸರ್ವಸಾಧಾರಣ ಇತರ

ಜನರಂತೆ ಇರುವದು. ಕೆಲವರ ಹುಚ್ಚು ಕೆಲ ವಿಷಯುಗಳ ಸಂಬಂಧದ ಬಗ್ಗೆಯೇ ಇರುವದು. ಇತರ ವಿಷಯುಗಳಲ್ಲಿ ಅವರ ವ್ಯವಹಾರ ಇತರ ಜನರಂತೆ ಸರಲವಿರುವವು. ಕೆಲ ವಿಷಯುಗಳ ಸಂಬಂಧದ ಹುಚ್ಚಿಗೆ ಇಂಗ್ಲಿಷದಲ್ಲಿ (Monomonia) ಅಥವಾ ವಿಶಿಷ್ಟೋನ್ಮಾದವೆನ್ನುವರು. ಈ ವಿಕೃತಿಯಲ್ಲಿ ರೋಗಿಯ ಚಿತ್ತವೃತ್ತಿಯು ತೀರ ಭ್ರಷ್ಟ ಅಥವಾ ವಿಚಾರಶಕ್ತಿ ಶೂನ್ಯವಿರುವದಿಲ್ಲ. ಒಂದೇ ಸಂಗತಿಯ ಸಂಬಂಧದಿಂದ ವಿಚಾರಶಕ್ತಿಯು ನಷ್ಟವಾಗಿರುವದು. ಅದೊಂದು ಸಂಗತಿಯಲ್ಲಿ ಅಷ್ಟೇ ಖರೆಯಾವದು ಖೊಟ್ಟಿಯಾವದು ಇದನ್ನು ತಿಳಕೊಳ್ಳುವ ಪಾತ್ರತೆ ಇರುವದಿಲ್ಲ. ತನಗೆ ಯಾರಾದರೂ ಹೊಡೆಯುವವರಿದ್ದಾರೆ ವಿನಾಕಾರಣ ತನಗೆ ಛಳಿಸುತ್ತಾರೆ, ವಿಷ ಹಾಕುವವರಿದ್ದಾರೆ, ಈ ಕಲ್ಪನೆಯು ಸನ್ನೆ ಬಡೆದದ್ದರಿಂದ ಅವನು ಬೆದರಬಡಕನಾಗಿರುವನು. ಕೆಲವರಿಗೆ ತಾವು ಶ್ರೀಮಂತರಿದ್ದೇವೆ, ವಿದ್ವಾನರಿದ್ದೇವೆ, ಪ್ರತಿಷ್ಠಿತರಿದ್ದೇವೆ ಹೀಗೆ ಕಲ್ಪನೆ ಇರುವದು. ತಾನು ಅರಸನಿದ್ದಾನೆ, ಸತ್ತಾಧಾರಿಯು ಇದ್ದಾನೆ, ಹೀಗೆ ಕಲ್ಪನೆ ಮಾಡಿಕೊಂಡು ಆಜ್ಞೆಮಾಡುತ್ತಿರುವನು. ಹಲವರು ಕಾಮ ಜ್ವರದಿಂದ ಪೀಡಿತರಾಗಿ ಯಾವನೊಬ್ಬ ಶ್ರೀಮಂತನ ಮಗಳು ತನ್ನನ್ನು ವರಿಸುವಳು, ಯಾವಳೊಬ್ಬಳ ಪ್ರೇಮ ತನ್ನ ಮೇಲಿರುವದು ಇಂಥ ಮುಂತಾದ ಕಾಮುಕ ಸಂಗತಿಗಳ ಬಗ್ಗೆ ಬಡಬಡಿಸುತ್ತಿರುವನು. ತಾನೇ ಧರ್ಮಾವತಾರನೆಂದು ಕಲ್ಪಿಸಿ ಧರ್ಮದ ಸಂಬಂಧದಿಂದ ಪ್ರವಚನಗಳನ್ನು ಮಾಡುವದರಲ್ಲಿ ತೊಡಗಿರುವನು. ಕೆಲವರು ನೈತಿಕ ವಿಷಯುಗಳ ಮೇಲೆ ಆದರೆ ಕೆಲವರು ಇತರ ವಿಷಯುಗಳ ಮೇಲೆ ಒಳ್ಳೇ ವ್ಯಾಖ್ಯಾನ ಕೊಡುವರು. ಕೆಲವರಂತೂ ಆನಂದಸಮುದ್ರದಲ್ಲಿ ತೇಲುತ್ತಿರುತ್ತೇವೆಂದು ಕಲ್ಪನೆ ಮಾಡಿಕೊಳ್ಳುವರು. ಕೆಲವರು ದುಃಖಾರ್ಣವದಲ್ಲಿ ಮುಳುಗಿದಂತೆ ಅಳುತ್ತ ಕೂಡುವರು. ಕೆಲವರು ತಮಗೆ ಭಯಂಕರ ಆಪತ್ತು ಒದಗುವದೆಂದು ಕಲ್ಪನೆ ಮಾಡಿಕೊಂಡು, ಖಿನ್ನ, ವಿಷಣ್ಣಚಿತ್ತ ಹಾಗೂ ಚಿಂತಾಕ್ರಾಂತರಾಗಿರುವಂತೆ ಕಾಣುವರು. ಈ ಪ್ರಕಾರಗಳೆಲ್ಲ ಮೊನೊಮ್ಯಾನಿಯಾ ಅಥವಾ ವಿಶೇಷೋನ್ಮಾದದ ಪ್ರಕಾರಗಳೇ ಸರಿ. ಮೇಲಿಂದ ಮೇಲೆ ಸಂಕಟ ಪರಂಪರೆ, ಒದಗೋಣ, ಚಿಂತೆ ಉತ್ಪನ್ನವಾಗೋಣ, ಮನಸ್ಸಿನಂತೆ ಆಗದಿರೋಣ,

ಎಲ್ಲ ಸಂಗತಿಗಳಲ್ಲಿ ನಿರಾಶೆ ಆಗೋಣ ಇಂಥ ಕಾರಣಗಳು ಮೇಲಿಂದ ಮೇಲೆ ಹುಚ್ಚಿನ ಲಹರಿಗಳಲ್ಲಿ ಮುಣಗಿದ್ದರಿಂದ ಬುದ್ಧಿಯು ನಷ್ಟಶಕ್ತಿಯಾಗುವದು ಅದರಿಂದ ವಿಚಾರಶಕ್ತಿಯು ತೀರ ನಷ್ಟವಾಗುವದು. ಇಂಥ ರೋಗಿಗಳಿಗೆ ಹುಚ್ಚರೆನ್ನುವರು. ಸಾಧಾರಣವಾಗಿ ಈ ವಿಕೃತಿಯು ಆಗುವ ಪೂರ್ವದಲ್ಲಿ ಅಂದರೆ ರೋಗಿಯು ಹುಚ್ಚನಾಗುವ ಪೂರ್ವದಲ್ಲಿ ರೋಗಿಯ ಬೌದ್ಧಿಕ ಹಾಗೂ ನೈತಿಕ ವರ್ತನದಲ್ಲಿ ಬದಲು ಕಂಡುಬರುವವು. ಇತರ ಯಾವವೂ ಸ್ಪಷ್ಟಭಾವನೆಗಳು ಕಂಡುಬಾರದೆ ಈ ಬದಲು ಕೆಲವು ತಿಂಗಳ ಅಥವಾ ಕೆಲವು ವರ್ಷಗಳ ವರೆಗೆ ಸಹ ಇರುವದು. ರೋಗಿಯು ಪ್ರತಿ ಒಂದು ಸಂಗತಿಯಲ್ಲಿ ನಿಷ್ಕಾಳಜಿಯಾಗಿಯೂ ನಿರ್ಬಂಧವಿಲ್ಲದಂತೆಯೂ ನಡೆಯು ವನು. ಕಾರಣವಿಲ್ಲದೆ ವಿತಿಮೀರಿ ಖರ್ಚು ಮಾಡುತ್ತಿರುವನು. ಚಿರಡಿ ಖೋರನೂ ಸಿಟ್ಟುಬುರುಕನೂ ಇರುವನು. ತನ್ನ ಹೆಂಡತಿಯ ಸಂಬಂಧ ದಿಂದಲೂ ಕುಟುಂಬದಲ್ಲಿಯ ಇತರ ಜನರ ಸಂಬಂಧದಿಂದಲೂ ಇದ್ದ ಅಂತಃಕರಣ ಕಡಿಮೆಯಾಗುವದು. ಅವರ ದ್ವೇಷ ವಿನಾಕಾರಣ ಮಾಡು ತ್ತಿರುವನು. ನಾಲಗೆ, ತುಟಿ ಕೈ ಮುಂತಾದವುಗಳಲ್ಲಿ ಕಂಪವು ಆಗಲಾರಂ ಭಿಸುವದು. ಗತಿಯಲ್ಲಿ (ನಡೆಯೋಣ) ಅನಿಶ್ಚಿತತೆ-ಚಂಚಲತೆ-ಕಂಡು ಬರುವದು. ನಡೆಯುವಾಗ ಲಟಲಟ ನಡಗುವನು. ಮಾತಾಡುವಾಗ ಶಬ್ದವು ಸ್ಪಷ್ಟ ಹೊರಬೀಳುವದಿಲ್ಲ. ಬರೆಯುವಾಗ ಶಬ್ದಗಳು ತಪ್ಪುವವು. ಎಲ್ಲಿಯಾದರೂ ಒತ್ತಟ್ಟಿಗೆ ದೃಷ್ಟಿಯು ಹತ್ತಿದ್ದಿರುತ್ತದೆ. ಮುಂದೆ ಮುಂದೆ ಬೇಕಾದದ್ದು ಬಡಿಬಡಿಸುವನು. ಒಮ್ಮೊಮ್ಮೆ ಮೌನವನ್ನೂ ಧರಿಸುವನು. ಸುಖ, ದುಃಖ, ಲೋಭ, ಮೋಹ, ಇವುಗಳ ಜ್ಞಾನ ಸಹ ಇರುವದಿಲ್ಲ. ಮಲಮೂತ್ರ ವಿಸರ್ಜನದ ಎಚ್ಚರಿಕೆ ಸಹ ಇರುವದಿಲ್ಲ. ಇನ್ನೊಬ್ಬರ ಮಾತು ಸಹ ತಿಳಕೊಳ್ಳಲು ಅರುವು ಇರುವದಿಲ್ಲ. ಅರ್ಥಶೂನ್ಯ ಶಬ್ದ ಗಳನ್ನುಚ್ಚರಿಸುವನು. ಇಂಗ್ಲಿಷ ಭಾಷೆಯಲ್ಲಿ ಈ ಭಾವನೆಗಳುಳ್ಳ ರೋಗಕ್ಕೆ (Dimensia) ಎನ್ನುವರು. ಇದಕ್ಕೆ ಬುದ್ಧಿಭ್ರಂಶವೆನ್ನುವರು. ಡಿಮೆನ್ಷ ಶಿಯಾದಲ್ಲಿ ಮೊನೊಮ್ಯಾನಿಯಾದಲ್ಲಿಯ ಭಾವನೆಗಳು ಸಹ ಇರುವವು. ಮೊನೊಮ್ಯಾನಿಯಾದಲ್ಲಿ ಹುಚ್ಚಿಗೆ ಕಾರಣೀಭೂತ ವಿಷಯದ ಹೊರತು ಇತರ ಎಲ್ಲ ಸಂಗತಿಗಳಲ್ಲಿ ರೋಗಿಗೆ ತಿಳುವಳಿಕೆ ಇರುವದು ಮತ್ತು ತನ್ನ

ಇತರ ಎಲ್ಲ ವ್ಯವಹಾರಗಳನ್ನು ವ್ಯವಸ್ಥಿತರೀತಿಯಿಂದ ಮಾಡುವನು. ಹುಚ್ಚಿನಲ್ಲಿ ಎಲ್ಲ ತರಹದಿಂದ ರೋಗಿಯ ಬುದ್ಧಿಯು ನಷ್ಟವಾಗಿರುವದು. ದಿನದಿನಕ್ಕೆ ಮನೋದುರ್ಬಲತೆ ಬೆಳೆಯುತ್ತ ಹೋಗುವದು. ಶರೀರದ ಅಶಕ್ತತೆಯೂ ಇರುವದು, ರೋಗಿಯು ಕೂತುಕೊಂಡೂ ಇರಲಾರನು. ಮಲಗಿಕೊಂಡೇ ಇರುವನು. ಒಮ್ಮೊಮ್ಮೆ ವ್ಯೈಯ್ಯೂ ಸೆಟೆಯುವದು. ಮಲಮೂತ್ರದ ಅರುವು ಉಳಿಯುವದಿಲ್ಲ. ಕಡೆಗೆ ನ್ಯುಮೋನಿಯಾ ಮುಂತಾದ ವಿಕಾರಗಳಾಗಿ ರೋಗಿಯು ಮರಣಹೊಂದುವನು.

ಎಷ್ಟೋ ಜನರು ಹುಟ್ಟ ಹುಚ್ಚು ಇರುವರು. ಜನ್ಮತಃ ಬುದ್ಧಿಯ ವಿಕಾಸವು ಆಗಿರುವದೇ ಇಲ್ಲ. ಅವರ ಮೋರೆಯ ಮೇಲೆಯೇ ಹುಚ್ಚು ಕಳೆ ಸುರಿಯುವದು. ಅವನು ಮಾತಾಡಲಾರನು. ಅವನು ಗುರುತು ಸಹ ಹಿಡಿಯಲಾರನು. ಮಾತಾಡಿದರೂ ಹುಚ್ಚುಪಚ್ಚು ಮಾತಾಡುವನು. ಕಾರಣವಿಲ್ಲದೆ ನಗುವನು. ಸ್ಮರಣಶಕ್ತಿಯು ಇರುವದಿಲ್ಲ. ಅವನು ಪಶುತುಲ್ಯನೇ ಇರುವನು. ಮಲಮೂತ್ರದ ಸಹ ಅರಿವು ಇರದು. ಈ ಬೇನೆಗೆ ಈಡಿಯಸಿ (idiocy) ಎಂದು ಇಂಗ್ಲಿಷದಲ್ಲಿ ಅನ್ನುವರು. ಸರಾಯಿಯ ವ್ಯಸನವಿರುವ, ಮೂರ್ಛೆಬೇನೆ ಇರುವ, ಹುಚ್ಚುಹತ್ತಿರುವ ಇಲ್ಲವೆ ಇತರ ಮಾನಸಿಕ ರೋಗವಿರುವ ತಂದೆತಾಯಿಗಳ ಮಕ್ಕಳಲ್ಲಿ ಜನ್ಮತಃ ಹುಚ್ಚು ಇರುವದು ಕಂಡುಬರುತ್ತದೆ.

ಸಹಸಾ ೩೦-೪೦ ವರ್ಷದ ವಯಸ್ಸಿನ ಸಶಕ್ತ ಜನರಿಗೆ ಹುಚ್ಚು ಹಿಡಿಯುವದು ಕಂಡುಬರುತ್ತದೆ. ಆದರೂ ಈ ಬೇನೆಯು ಯಾವದೇ ವಯಸ್ಸಿನವರಿಗೆ ಆಗಬಹುದು. ಸ್ತ್ರೀಯರಿಗಿಂತ ಗಂಡಸರಲ್ಲಿ ಈ ಬೇನೆಯ ಪ್ರಮಾಣವು ಹೆಚ್ಚು ಇರುವದು. ಅದು ಆನುವಂಶಿಕವೂ ಇರುವದು ಮತ್ತು ಅದು ಮಾನಸಿಕ ರೋಗವಿರುವ ಕುಟುಂಬದ ಜನರಲ್ಲಿಯೇ ಹೆಚ್ಚಾಗಿ ಕಂಡುಬರುವದು. ಸರಾಯಿ ಕುಡಿಯೋಣ, ಅತಿಶಯ ಸಂಭೋಗ, ಚಿಂತಾತಿಶಯ, ಮಾನಸಿಕ ಶ್ರಮಾತಿರೇಕ ಇವು ಈ ರೋಗದ ಉತ್ಪತ್ತಿಗೆ ಕಾರಣಗಳಾಗುವವು.

ವಾತ, ಭ್ರಮ, ಹುಚ್ಚು, ಮುಂತಾದವುಗಳ ಮೇಲಿನ ಔಷಧಗಳ ವಿವೇಚನೆಯನ್ನು ಕೆಳಗೆ ಮಾಡಿದೆ.

**ಕಾ. ಫಾ:—** ಬಹಳ ಭರದ ಬಡಬಡಿಸುವಿಕೆ; ಬಹಳ ಅಸ್ವಸ್ಥತೆ. ರೋಗಿಯು ಸಂಶಯಖೋರನಾಗುವನು. ಔಷಧದಲ್ಲಿ ವಿಷವಿದೆ ತನಗೆ ಯಾರಾದರೂ ಹೊಡೆಯುತ್ತಾರೆ ಎಂಬುವ ಕಲ್ಪನೆ. ಅಸಂಬದ್ಧ ಪ್ರಲಾಪ; ತನ್ನ ಹತ್ತರ ಏನಾದರೊಂದು ಪದಾರ್ಥ ಇರುವದು ಎಂಬುವ ಖೊಟ್ಟಿ ಕಲ್ಪನೆಮಾಡಿಕೊಂಡು ಅದನ್ನು ತೆಗೆದುಕೊಳ್ಳುವ ಇಲ್ಲವೆ ತಪ್ಪಿಸುವ ಪ್ರಯತ್ನ ಮಾಡುವನು. ನಿದ್ರೆಯು ಬರುವದೇ ಇಲ್ಲ. ಹೆದರಿಕೆ ಇರುವದು. ನೇಟ್ರಂಮೂರ ಸರ್ತಿಬದಲಿಸಿ ಕೊಡಬೇಕು.

**ನೇ. ಮೂ:—** ಭರದ ಬಡಬಡಿಸೋಣ. ಇಲ್ಲವೆ ತುಟಿಯಲ್ಲಿಯೇ ಪುಟಪುಟಿಸುವದು. ನಾಲಗೆಯ ಮೇಲೆ ಬುರುಗು ಇದ್ದು ಜೊಲ್ಲಿನ ಗುಳಿಗೆಗಳು ಇದ್ದರೆ ಇದರ ಉಪಯೋಗವಾಗುವದು. ಈ ರೋಗದಲ್ಲಿ ನೇ. ಮೂ. ವನ್ನು ಅವಶ್ಯ ಕೊಡತಕ್ಕದ್ದು. ಅದರಿಂದ ಸಮಾಧಾನ ವಾಗದಿದ್ದರೆ ಕಾ. ಫಾ. ವನ್ನು ಕೊಡಬೇಕು. ಅಥವಾ ಕಾ. ಫಾ. ಮತ್ತು ನೇ. ಮೂ. ಸರ್ತಿಮೇಲೆ ಕೊಡಬೇಕು.

**ಫೇ. ಫಾ:—** ಜ್ವರವಿದ್ದಲ್ಲಿ ಇತರ ಔಷಧಗಳ ಜತೆಗೆ ಇದನ್ನು ಕೊಡುವದು. ಇದನ್ನು ನಡುನಡುವೆ ಕೊಡುತ್ತಿರಬೇಕು.

**ಉಪಯುಕ್ತ ಸೂಚನೆ:—** ಜ್ವರ ಮುಂತಾದ ರೋಗಗಳಲ್ಲಿ ಉತ್ಪನ್ನವಾಗುವ ಭ್ರಮದ ಮೇಲೆ ಮತ್ತು ಬಡಬಡಿಸುವದರ ಮೇಲೆ ಅಷ್ಟೇ ಈ ಔಷಧಗಳುಪಯೋಗವಾಗುವದು ಹೀಗೆ ತಿಳಿಯಕೂಡದು. ಸರಾಯಿ ಮುಂತಾದವುಗಳ ವ್ಯಸನದಿಂದ ಭ್ರಮಿಷ್ಟರಾದವರಿಗೂ, ಇತರ ಕಾರಣಗಳಿಂದ ಹುಚ್ಚಾದವರಿಗೂ ಆಗುತ್ತಿರುವವರಿಗೂ ಈ ಔಷಧದ ಉಪಯೋಗವಾಗುವದು. ನಡುನಡುವೆ ಬರತಕ್ಕ ಹುಚ್ಚಿನ ಲಹರಿಗಳ ಮೇಲೆ ಈ ಔಷಧವನ್ನು ಬಿಟ್ಟುಬಿಡದೆ ಹಾಗೂ ವ್ಯವಸ್ಥಿತರೀತಿಯಿಂದ ಕೊಟ್ಟಲ್ಲಿ ಈ ಬೇನೆಯೂ ತೀರ ಇಲ್ಲದಂತಾಗುವ ಸಂಭವವಿರುವದು. "ಮಾನಸಿಕ ರೋಗ"ವೆಂಬ ವಿವರ ನೋಡಿರಿ. ಹುಚ್ಚಿನ ಲಹರಿ ಬಂದ ಕಾಲಕ್ಕೆ ರೋಗಿಯನ್ನು ಏಕಾಂತ ಸ್ಥಳಕ್ಕೆ ಕರಕೊಂಡು ಹೋಗಿ ಅಲ್ಲಿ ಅವನನ್ನಿಟ್ಟು ಅವನಿಗೆ ನಿದ್ದೆಹತ್ತುವ ಯತ್ನಮಾಡಬೇಕು. ಸಕ್ಕರೆ ಹಾಕದೇ

ಇದ್ದ ಉತ್ತಮ ಕಾಫಿ ಕುಡಿಯಲಿಕ್ಕೆ ಕೊಡಬೇಕು. ಅದರಿಂದುಪಯೋಗ ವಾಗುವದು. ತಲೆಯ ಮೇಲೆ ತಣ್ಣೀರಿನ ಪಟ್ಟಿ ಇಡಬೇಕು. ಇಲ್ಲವೆ ತಣ್ಣೀರಿನ ಧಾರಿಹಿಡಿಯಬೇಕು. ರೋಗಿಯ ಮೇಲೆ ಸಿಟ್ಟಾಗಬಾರದು. ದಯೆಯಿಂದಲೂ ಪ್ರೇಮದಿಂದಲೂ ಅವನನ್ನು ಸಂತೈಸಬೇಕು. ರೋಗಿಯನ್ನು ಉತ್ತಮ ಹವೆಯಲ್ಲಿಡಬೇಕು. ಅವನಿಗೆ ತಾಪವಾಗುವಂತೆ ಏನೂ ಮಾಡಬಾರದು.

---

# ವೃಷಣದಾಹ

**Orchitis.** **ಆರ್‌ಚಾಯಿಟಿಸ್**

ವೃಷಣಭಾಗದಲ್ಲಿ ದಾಹವು ಉತ್ಪನ್ನವಾಗಿ ಅದರಿಂದ ಅಲ್ಲಿ ಬಾವು ವೇದನೆ, ಕೆಂಪು ಮುಂತಾದ ಲಕ್ಷಣಗಳು ಕಂಡುಬರುವವು. ಅಲ್ಲಿ ಪೆಟ್ಟು ತಗಲೋಣ, ಉಪದಂಶ, ಪ್ರಮೇಹ ಮುಂತಾದ ರೋಗ– ಇವುಗಳ ಮೂಲಕ ಈ ರೋಗದ ಉತ್ಪತ್ತಿಗೆ ಕಾರಣಗಳು. ಬಹಳ ದಿವಸದ ರೋಗದಲ್ಲಿ ಅದರ ಪರ್ಯವಸಾನವು ವೃಷಣ ಭಾಗದಲ್ಲಿ ನೀರು ತುಂಬಿಕೊಂಡಿರುವದರಲ್ಲಿ ಆಗುವದು. ಅದಕ್ಕೆ ಜಲಮುಷ್ಕ, ಜಲಾಂಡ, ಮೂತ್ರಜವೃಷಣವೃದ್ಧಿ ಎಂಬ ಹೆಸರುಗಳು ಇರುವವು. ಬಹು ದಿವಸದ ವೃಷಣದಾಹದಲ್ಲಿ ವೇದನೆ ಇರುವದಿಲ್ಲ.

**ಕಾ. ಮೂ:—** ಪ್ರಮೇಹವನ್ನು ನಿರ್ಬಂಧಿಸಿದಲ್ಲಿ ಅಂಡದ ಬಾವು, ಕೆಂಪಾಗುವದು, ವೇದನೆ ಮುಂತಾದ ಭಾವನೆಗಳು ಉಂಟಾಗುವವು.

**ಫೇ. ಫಾ:—** ಜ್ವರ, ಅಂಡವು ಕೆಂಪಾಗಿರುವದು, ಬಾವು, ವೇದನೆ ಮುಂತಾದ ಭಾವನೆಗಳಿದ್ದಲ್ಲಿ.

**ಕಲ್ಕೆ. ಫಾ:—** ಬಹಳ ದಿವಸದ ರೋಗದಲ್ಲಿ ನಡುನಡುವೆ ಇತರ ಔಷಧಗಳ ಜತೆಗೆ ಕೊಡಬೇಕು.

**ಕಲ್ಕೆ. ಫ್ಲೋ:—** ಅಂಡಗಳ ಗ್ರಂಥಿಯು ಗಟ್ಟಿಯೂ ಕಠಿಣವೂ ಆಗಿದ್ದರೆ.

**ಉಪಯುಕ್ತ ಸೂಚನೆ:—** ಹೊಟ್ಟೆಯಲ್ಲಿ ಕೊಡತಕ್ಕ ಔಷಧವನ್ನು ( ಒಂದು ಬಟ್ಟಲತುಂಬ ನೀರಿಗೆ ೨೦ ಗ್ರೇನ ಔಷಧದ ಪುಡಿಯಂತೆ ) ಒಂದು ಭಾಂಡಿಯಲ್ಲಿ ಹಾಕಿ ಅದರ ಉಗೆ ಕೊಡಬೇಕು. ಹೋಮಿಯೋಪಥಿಯಲ್ಲಿಯ " ಪಲ್ಸೆಟಿಲಾ " ಎಂಬ ಔಷಧದ ಮೂಲ ಅರ್ಕದ ಧಾವನ ಪಟ್ಟಿಯನ್ನು ಸಿದ್ಧಮಾಡಿ ಅದರ ಉಗೆ ಕೊಟ್ಟಲ್ಲಿ ಬಹಳೇ ಗುಣವಾಗುವದೆಂಬ ಅನುಭವವುಂಟು. ಮೂಲ ಅರ್ಕವು ಕಾಲಕ್ಕೆ ದೊರೆಯದಿದ್ದರೆ " ಪಲ್ಸೇಟಿಲಾ "ದ ೩೦ × ಶಕ್ತಿ–ಅಥವಾ ಮತ್ಯಾವ ಶಕ್ತಿಯಾದರೂ ಅಡ್ಡಿ ಇಲ್ಲ–ಅದನ್ನು ಹೊಟ್ಟೆಯಲ್ಲಿ ಕೊಟ್ಟಲ್ಲಿ ಸಹ ಕಾರ್ಯವಾಗುವದು.

---

## ವೃಷಣಶೋಥ

**Hydrocele.** ಹಾಯಡ್ರೊಸೀಲ

ವೃಷಣಗಳಲ್ಲಿ ಅಥವಾ ಅಂಡಾಶಯದಲ್ಲಿ ನೀರು ತುಂಬಿರೋಣವೇ ವೃಷಣಜಲವೃದ್ಧಿ ಅಥವಾ ವೃಷಣಶೋಥವು. ಗಾಯವಾಗುವದು, ಮೇಲಿಂದಮೇಲೆ ವೃಷಣದ ದಾಹವಾಗೋಣ, ಅಂಗುಲಿತವಾತ, ಚಳಿಜ್ವರ ಮುಂತಾದವೇ ಇದರ ಕಾರಣಗಳು. ಈ ರೋಗವು ಆನುವಂಶಿಕವೂ ಇರುವದು. ಜಲವೃದ್ಧಿಯಲ್ಲಿ ಅಂಡದ ಭಾಗವು ಹೊಳೆಯುವಂತೆ ಕಾಣುವದು. ಅಂಡಗಳ ಕೆಳಭಾಗದಲ್ಲಿ ನೀರು ಇದ್ದು ಅಂಡಗ್ರಂಥಿಯು ಮೇಲೆ ಸರಿದಂತೆ ಕಾಣುವದು. ಅಂತರ್ಗಳದಲ್ಲಿ ಅಂಡಗಳಲ್ಲಿ ಕರುಳು ಇಳಿದದ್ದರಿಂದ ಅಂಡವು ದೊಡ್ಡದಾದಂತೆ ಕಾಣುವದು. ಆದರೆ ಕರುಳು ಮೇಲೆ ಸರಿದಲ್ಲಿ (ಮಲಗಿದಾಗ ಮೇಲೆ ಸರಿಯುವದು) ಈ ಬಾವು ಇಲ್ಲದಂತಾಗುವದು. ವೃಷಣಜಲಶೋಥದಲ್ಲಿ ಅದು ಇಲ್ಲದಂತಾಗುವದಿಲ್ಲ.

**ನೇ. ಮೂ:—** ವೃಷಣಶೋಥ; ಒಳಗೆ ನೀರು ತುಂಬಿದ್ದು ಇರುವದು.

**ನೇ. ಸ:—** ಅಂಡಾಶಯವು ಕೆಂಪಾಗಿರುವದು, ಬಾವೂ ನೋವೂ ಇರುವವು. ನೇ. ಮೂರದ ಜತೆಗೆ ಕೊಡಬೇಕು.

**ಕಲ್ಕೆ. ಫಾ:—** ನೇ. ಮೂ. ದಿಂದ ಗುಣವು ಬಾರದೇ ಇದ್ದಲ್ಲಿ ಇತರ ಔಷಧ ಕೊಡುತ್ತಿರುವಾಗ ಇದನ್ನು ನಡುನಡುವೆ ಕೊಡಬೇಕು.

**ಕಲ್ಕೆ. ಫ್ಲೂ:—** ವೃಷಣಸ್ನಾಯುಗಳ ಶಿಥಿಲತೆಯನ್ನು ಕಳೆಯುವದಾಗಿ ಅಂಡಾಶಯದಲ್ಲಿಯೂ ಅಂಡದಲ್ಲಿಯೂ ಬಾವೂ ಕಠಿಣತೆಯೂ ಇದ್ದರೆ.

**ಸಿ:—** ಬಹುದಿವಸದ ವೃಷಣಶೋಥ. ಹೊಸದಾಗಿ ಆದ ವೃಷಣಶೋಥದ ಮೇಲೆ ಸಹ ಇದನ್ನು ಕೊಡುವದು. ಅಶಕ್ತ ಹಾಗೂ ತಿನ್ನಲಿಕ್ಕೆ ಸಾಕಷ್ಟು ಪೋಷಕ ಅನ್ನ ದೊರೆಯದಿರುವ ಮಕ್ಕಳ ರೋಗಗಳ ಮೇಲೆ ಇದರ ಉಪಯೋಗವಾಗುವದು.

**ಉಪಯುಕ್ತ ಸೂಚನೆ:—** ಶಸ್ತ್ರಕ್ರಿಯೆಯಿಂದಲೇ ಈ ರೋಗ ನೆಟ್ಟಗೆಮಾಡುವ ಪ್ರವೃತ್ತಿಯುಂಟು. ಆದರೆ ಹೊಟ್ಟೆಯಲ್ಲಿ ಔಷಧ ಕೊಟ್ಟು ರೋಗಿಯನ್ನು ನೆಟ್ಟಗೆ ಮಾಡಲು ಅಡ್ಡಿಯಿಲ್ಲ.

---

# ವ್ರಣ

**Ulcer.** **ಅಲ್ಸರ.**

ಕೊಳೆಯುವಂಥ, ಮೇಯುತ್ತ ಹೋಗುವಂಥ, ದಾಹ ಉತ್ಪನ್ನ ಮಾಡುವಂಥ, ಸೋರುವಂಥ- ಇಂಥ ಅನೇಕ ವಿಧದ- ವ್ರಣಗಳು ಇರುವದುಂಟು. ಸಾಮಾನ್ಯ ವ್ರಣಗಳಲ್ಲಿಯ ಮಾಂಸಾಂಕುರಗಳು ಕೆಂಪಾಗಿದ್ದು ಅವುಗಳೊಳಗಿಂದ ತೆಳ್ಳನ ಸ್ರಾವವು ಹೋಗುತ್ತಿರುವದು. ಸ್ವಲ್ಪ ಕೀವೂ ಹೋಗುವದು. ಅದಕ್ಕೆ ಹೊಲಸು ನಾತವಿರುವದಿಲ್ಲ. ಈ ವ್ರಣಗಳು ತೀವ್ರವಾಗಿ ತುಂಬಿಕೊಳ್ಳುವವು. ಕೆಲ ವ್ರಣಗಳು ತೀವ್ರ ತುಂಬಿಕೊಳ್ಳುವದಿಲ್ಲ. ಅವು ಮೇಯುತ್ತ ಹೋಗುತ್ತವೆ. ಅವುಗಳೊಳಗಿಂದ ಗಟ್ಟಿ, ತೆಳ್ಳನ, ಹಳದಿ, ಹಸರು, ಬೆಳ್ಳಗೆ, ಮಣ್ಣಿನಬಣ್ಣದ, ದುರ್ಗಂಧವಿರುವ ಸ್ರಾವವು ಹೋಗುತ್ತಿರುವದು. ಸುತ್ತಮುತ್ತಲಿನ ತ್ವಚೆ ಬಾಯುವದು, ನೋಯುವದು, ಉರಿಯುವದು, ಹೀಗೆ ಅನೇಕ ಪ್ರಕಾರ

ಗಳಿರುವವು. ಕೆಲ ವ್ರಣಗಳು ಕೊಳೆಯುತ್ತ ಹೋಗುವವು. ಪೆಟ್ಟು ತಗಲುವದು, ಉಪದಂಶ, ಅಂಗುಲಿವಾತ, ಮಾಂಸಾರ್ಬುದ ಬಾಯಿಬರು ವದು, ತ್ವಗ್ರೋಗ, ಇವುಗಳ ಮೂಲಕ ವ್ರಣಗಳಾದದ್ದು ಕಂಡುಬರುತ್ತದೆ. ಮಧುಮೇಹ, ಅಂಗುಲಿವಾತ ಇದ್ದ ರೋಗಿಗಳ ವ್ರಣಗಳು ತೀವ್ರವಾಗಿ ತುಂಬಿಕೊಳ್ಳುವದಿಲ್ಲ. ಉಪದಂಶಜನ್ಯವ್ರಣಗಳು ನೆಟ್ಟಗಾಗಲು ಕಷ್ಟಸಾಧ್ಯ ವಿರುವವು. ವ್ರಣಗಳು ಯಾವ ಕಾರಣದಿಂದಾಗಿಯೂ ಇರಲಿ, ಅವುಗಳ ಲ್ಲಿರುವ ಸ್ರಾವ ಮುಂತಾದ ಭಾವನೆಗಳಿಗನುಸರಿಸಿ ಜೀವನರಸಾಯನದ ಯಾವ ಔಷಧಗಳು ಉಪಯೋಗವಾಗುವದೆಂಬದನ್ನು ಕೆಳಗೆ ಹೇಳಿದೆ.

**ಫೇ. ಫಾ:—** ವ್ರಣವು ಕೆಂಪಾಗಿದ್ದು ಉರುವೂ ವೇದನೆಯೂ ಇರುವದಾದರೆ, ರಕ್ತ ಸ್ರಾವವಿದ್ದು ಜ್ವರ ಇದ್ದರೆ ಗ್ರಂಥಿ ವ್ರಣದಲ್ಲಿ ಇದ್ದ ಬಲವತ್ತರ ನೋವನ್ನೂ ಇತರ ಭಾವನೆಗಳನ್ನೂ ನಾಶಗೊಳಿಸಲಿಕ್ಕೆ ಇದರ ಉಪಯೋಗವಾಗುವದು.

**ಕಾ. ಮ:—** ಶರೀರದಲ್ಲಿ ಯಾವದೇ ಭಾಗದಲ್ಲಿ ವ್ರಣವಾಗಿರಲಿ, ಅದರೊಳಗಿಂದ ದಟ್ಟ, ಬಿಳೀ ಉರುಪಿಲ್ಲದಂಥ ಸೌಮ್ಯ ( ಫಿಪ್ರಸಯುಕ್ತ ) ಸ್ರಾವವಿದ್ದರೆ ಗರ್ಭಾಶಯದ್ವಾರದಲ್ಲಿಯೂ ಹಿಂಗುತಿಗೆಯಲ್ಲಿಯೂ ಆಗುವ ವ್ರಣವಿದ್ದರೆ; ಕಣ್ಣುಗುಡ್ಡಿಯ ಮೇಲಿನ ವ್ರಣ. (ಹೂವು) ಕೆಂಪಾಗಿಯೂ ಸಣ್ಣ ಸಣ್ಣ ಕಣಗಳಿಂದ ಯುಕ್ತವಾಗಿಯೂ ಇರುವದಾದರೆ ನಾಲಿಗೆಯು ಬೆಳ್ಳಗಾಗಿದ್ದರೆ.

**ಕಾ. ಸ:—** ಜೀರ್ಣ ಹಾಗೂ ತುಂಬಿಕೊಳ್ಳದಂಥ ವ್ರಣ; ಅದರೊಳ ಗಿಂದ ಹಳದೀ ಬಣ್ಣದ ಕೀವು, ರಸಿಕೆಯೂ ಒಂದೇಸವನೆ ಸೋರುತ್ತಿರುವ ದಾದರೆ ಈ ಔಷಧ ಉಪಯೋಗವಾಗುವದು.

**ಸಿ:—** ಕೈಕಾಲುಗಳಲ್ಲಿ ಆಗುವ ಒಳತನಕ ಮುಟ್ಟಿದ ವ್ರಣ; ಎಲುಬು ಗಳಿಗೆ ಆಗುವ ವ್ರಣ; ತೆಳ್ಳನ, ಹಳದಿ, ದುರ್ಗಂಧವುಳ್ಳ ಸ್ರಾವವು ಹೋಗು ತ್ತಿದ್ದಲ್ಲಿ ಆರಪಾರವಿರುವ ವ್ರಣ ( ಭಗಂದರ ), ಅಶಕ್ತ ಹಾಗೂ ವಿಶ್ರಾಂತಿ ಇಲ್ಲದ ರೋಗಿಗಳಿಗೆ ಆದ ವ್ರಣ ತೀವ್ರ ತುಂಬಿಕೊಳ್ಳುವದಿಲ್ಲವಾದರೆ ಬಾವು ಗಟ್ಟಿಯೂ ಕಠಿಣವೂ ಇದ್ದು ಕೀವು ಸೋರುತ್ತಿದ್ದರೆ ಈ ಔಷಧ

ವನ್ನು ಹೆಚ್ಚು ಪ್ರಮಾಣದಲ್ಲಿ ಕೊಟ್ಟಲ್ಲಿ ಇದರ ಉಪಯೋಗವಾಗುವದು. ಹೊಟ್ಟೆಯಲ್ಲಿ ಕೊಡಬೇಕು. ಮೇಲಿಂದ ಲೇಪ ಸಹ ಮಾಡಬೇಕು.

**ಕಲ್ಕೆ. ಸ:**— ಬಹಳ ದಿವಸ ಗಾಯವು ಸೋರುತ್ತಿದ್ದಲ್ಲಿ ಸಿ. ನಂತರ ಇದನ್ನು ಕೊಡಬೇಕು. ಗ್ರಂಥಿಯಲ್ಲಿಯೂ ಕಾಲಿನಲ್ಲಿಯೂ ಆಗುವ ವ್ರಣ ಗಳೊಳಗಿಂದ ರಕ್ತ ಮಿಶ್ರಿತ, ಹಳದೀ ಸ್ರಾವವು ಇದ್ದರೆ ಹುಣ್ಣು ಒಡೆದದ್ದ ರಿಂದಲೂ, ಕೊಯಿದದ್ದರಿಂದಲೂ, ಸುಟ್ಟದ್ದರಿಂದಲೂ ಪೆಟ್ಟು ಹತ್ತಿದ್ದ ರಿಂದಲೂ ಆದ ಗಾಯದಿಂದ ಕೀವು ಹರಿಯುವದಾದರೆ ತೃತೀಯಾವಸ್ಥೆಯಲ್ಲಿ.

**ಕಲ್ಕೆ. ಫ್ಲೋ**:— ತೀವ್ರವಾಗಿ ತುಂಬದೇ ಇದ್ದ ಅಸ್ಥಿ ವ್ರಣ ( ಎಲುಬಿನ ಹುಣ್ಣು ) ಶಿರಾವ್ರಣ; ದಟ್ಟನ ಹಳದೀ ಕೀವು ಹೋಗುವ ದಾದರೆ ವ್ರಣಗಳ ಅಂಚುಗಳು ಎತ್ತರಾಗಿದ್ದು ಕರ್ರಗೂ, ನೀಲವರ್ಣದ್ದೂ ಕಾಣುವವು.

**ಕಲ್ಕೆ. ಫಾ**: — ವಿಶೇಷವಾಗಿ ಎಲುಬಿನ ವ್ರಣವಿದ್ದಲ್ಲಿ ಇತರ ಔಷಧ ಗಳ ಜತೆಗೆ ನಡುನಡುವೆ ಇದನ್ನು ಕೊಡಬೇಕು.

**ನೇ. ಫಾ:**— ಜಠರದಲ್ಲಿಯು ಹಾಗೂ ಕರುಳುಗಳಲ್ಲಿಯು ವ್ರಣ. ಅದರಿಂದ ಹುಳಿ ಪದಾರ್ಥ ಅಥವಾ ಕಾಫಿಯಂತೆ ಕರ್ರನ ವಾಂತಿಯಾಗುತ್ತಿ ದ್ದರೆ ಉಪದಂಶಜನ್ಯ ವ್ರಣವಿದ್ದರೆ ನಾಲಗೆಯಮೇಲೆ ಕೆನೆಯಂಥ ಹಳದಿ ಅಗ್ರುವಿದ್ದರೆ.

**ಉಪಯುಕ್ತ ಸೂಚನೆ:**— ಕುರುಹು ಎಂಬ ವಿವರ ನೋಡಿರಿ. ವ್ರಣದ ಚಿಕಿತ್ಸೆ ಮಾಡುವಾಗ ಹೊಟ್ಟೆಯಲ್ಲಿ ಕೊಡತಕ್ಕ ಔಷಧದ ಲೇಪ ಸಹ ಮಾಡಬೇಕು. ಒಣ ಪುಡಿ ಹುಣ್ಣಿನಮೇಲೆ ಉದರಿಸಬೇಕು. ಮತ್ತು ಪುಡಿ ನೀರಲ್ಲಿ ಹಾಕಿ ಆ ನೀರನ್ನು ಉಪಯೋಗಿಸಬೇಕು. ಗಾಯ ನೆಟ್ಟಗೆ ಸ್ವಚ್ಛ ತೊಳದು ಹುಳ ಬೀಳದ ಹಾಗೆ ಕಟ್ಟಿ ಇಡಬೇಕು. ವ್ರಣದ ಗಾಯ ತೊಳೆಯ ಬೇಕಾದರೆ ಕ್ಯಾಲೆಂಡೂಲಾದ ಧಾವನಜಲ ಸಿದ್ಧಮಾಡಿ ಅದರ ಉಪಯೋಗ ಮಾಡಬೇಕು.

---

# ಶಿರಗಳ ರೋಗಗಳು

**Diseases of the veins.** **ಡಿಸೀಜಿಸ್ ಆಫ್ ದಿ ವ್ಹೇನ್ಸ್.**

ಶಿರಗಳಲ್ಲಿ ರಕ್ತ ಗಟ್ಟಿಯಾಗುವದು, ಶಿರಗಳ ದಾಹವಾಗೋಣ, ಶಿರಗಳು ಸ್ಥಿರವಾಗಿಯೂ ನಾಗವೋಡಿ ಆಕಾರದ್ದೂ ಆಗೋಣ ಇವೇ ಮುಂತಾದವು ಶಿರಗಳ ರೋಗಗಳು. ರಕ್ತವು ಗಟ್ಟಿಯಾದಲ್ಲಿಯೇ ಬಾವು ಬರುವದು. ಅಲ್ಲಿಯ ಶಿರಗಳು ವಿಸ್ತಾರಹೊಂದುವವು. ಮತ್ತು ಒಳಗೆ ವೇದನೆ ಇರುವಂತೆ ಭಾಸವಾಗುವದು. ಗರ್ಭಿಣಿ ಸ್ಥಿತಿಯಲ್ಲಿ ಒಂದು ಕಾಲು ಬೆಳ್ಳಗಾಗಿಯೂ ಬಾತದ್ದೂ ಇರುವದು, ಅದಕ್ಕೆ ಶ್ವೇತ ಶಕ್ತಿ ಅನ್ನುವರು, ಇದು ಶಿರದಲ್ಲಿ ರಕ್ತ ಗಟ್ಟಿಯಾಗುವದರ ಉದಾಹರಣವೇ ಸರಿ. ಅಲ್ಲಿ ಒತ್ತಿದರೆ ಅಥವಾ ನಡೆಯುವಾಗ ನೋಯುವದು, ಇದರಿಂದ ಇಲ್ಲವೆ ಪೆಟ್ಟಿಸಿಂದ ಶಿರಗಳ ದಾಹ ಉತ್ಪನ್ನವಾಗುವದು. ಮತ್ತು ಆ ಸ್ಥಳದಲ್ಲಿ ದಾಹದ ಬಾವೂ ಕೆಂಪೂ, ವೇದನೆಯೂ ಉಂಟಾಗುವವು. ಒಂದೇಸವನೆ ನಿಂತು ಕೆಲಸಮಾಡುವ ಪರಿಪಾಠವಿದ್ದದರಿಂದಲೂ ಮೂಲ ವ್ಯಾಧಿ ಮುಂತಾದ ರೋಗಗಳಿಂದಲೂ ಶಿರಗಳು ನಾಗವೋಡಿಯ ಆಕಾರ ವುಳ್ಳವು ಆಗುವವು. ಜನ್ಮತಃ ಅಶಕ್ತವಿದ್ದವರಿಗೆ ಈ ರೋಗವಾಗಬಹುದು. ಹೆಂಗಸರಿಗಿಂತ ಗಂಡಸರಿಗೆ ಈ ರೋಗವಾಗುವದು ಹೆಚ್ಚಿಗೆ ಕಂಡು ಬರುವದು. ಆದರೆ ಗರೋದರ ಸ್ಥಿತಿಯಲ್ಲಿಯೂ ಇದು ಕಂಡುಬರುವದು.

**ಕಲ್ಕೆ. ಫ್ಲೂ:—** ಶಿರಗಳು ವಿಸ್ತಾರಹೊಂದಿದಲ್ಲಿಯೂ ದೊಡ್ಡ ವಾಗಿದ್ದರೂ ಇದು ಪ್ರಮುಖ ಔಷಧವು. ನಾಗವೋಡಿಯ ಆಕಾರದ ಶಿರಗಳು; ಶಿರಗಳ ಶೈಥಿಲ್ಯ; ಶಿರವ್ರಣ ಧಾವನಪಟ್ಟಿ ಸಿದ್ಧಮಾಡಿ ಅದನ್ನು ಶಿರ ವ್ರಣದ ಮೇಲೆಯೂ ವಿಸ್ತಾರಹೊಂದಿದ ಶಿರಗಳ ಮೇಲೆಯೂ ಇಡಬೇಕು. ಬಹು ತೀವ್ರ ವೇದನೆ ಇದ್ದರೂ ಹೀಗೆಯೆ ಮಾಡುವುದು.

**ಫೇ. ಫಾ:—** ಶಿರದ ರೋಗಗಳ ಮೇಲಿನ ರಾಮಬಾಣ ಔಷಧವಿದು. ಅಂಡಾಶಯದಲ್ಲಿಯ ಶಿರಗಳ ವೇದನೆ ಇದ್ದಲ್ಲಿ (ವೃಷಣಗ್ರಂಥಿ) (Varicocal) ಕಲ್ಕೆ. ಫ್ಲೂ. ಮತ್ತು ಇದು ಸರ್ತಿಮೇಲೆ ಕೊಡಬೇಕು.

**ಉಪಯುಕ್ತ ಸೂಚನೆ**:— ನಾಗವೋಡಿಯ ಆಕಾರದ ದಪ್ಪ ಶಿರಗಳು ಆಗಿದ್ದರೆ ಅವಶ್ಯವಿರುವದಕ್ಕಿಂತ ಹೆಚ್ಚು ವೇಳೆ ನಡೆಯಬಾರದು. ಮತ್ತು ಎದ್ದು ನಿಂದರಬಾರದು. ಪೂರ್ಣ ವಿಶ್ರಾಂತಿಯು ಅವಶ್ಯವದೆ; ಶಿರಗಳ ಸುತ್ತಮುತ್ತಲು ರಬ್ಬರಿನ ಪಟ್ಟಿ ಕಟ್ಟಿ ಬಿಡಬೇಕು. ಹೊಟ್ಟೆಯಲ್ಲಿ ಕೊಡುವಂಥ ಔಷಧದ ಥಾವನಪಟ್ಟ ಸಿದ್ಧಪಡಿಸಿ ಅದನ್ನೂ ಹಾಕಿ ಇಡಬೇಕು. ಶ್ವೇತ ಸಕ್ಥಿಯಮೇಲೆಯೂ ಸೇ. ಸ. ದ ಉಪಯೋಗ ವಾಗುವದು. ಭಾವನಾನುಸಾರವಾಗಿ ಇತರ ಔಷಧ ಸಹ ಕೊಡಬೇಕು. ಶಿರದ ದಾಹದ ಮೇಲೆ ಫೆರಂ. ಫಾ. ಕಾಲೀಮೂರ ಮುಂತಾದ ದಾಹದ ಮೇಲಿನ ಔಷಧಗಳನ್ನು ಭಾವನಾನುಸಾರವಾಗಿ ಕೊಡತಕ್ಕದ್ದು.

---

# ಶ್ಲೇಷ್ಮಕಜ್ವರ

**Influenza.** ಇನ್‌ಫ್ಲು ಎಂಜಾ.

ಈ ರೋಗವು ಸಾಂಸರ್ಗಿಕವಿರುವದು. ಆರಂಭದಲ್ಲಿ ಇದರ ಭಾವನೆ ಗಳು ಸಾಧಾರಣವಾಗಿ ಭರದ ನೆಗಡಿಯಂಥವು ಇರುವವು. ೧೦೨-೧೦೩ ಅಂಶಗಳವರೆಗೆ ಜ್ವರ, ಸರ್ವಾಂಗ ನೋವು, ತಲೆ ಟೊಂಕ ಇವುಗಳಲ್ಲಿ ನೋವು ಹೆಚ್ಚಿಗೆ ಇರೋಣ, ಕೆಮ್ಮು, ಎದೆಯಲ್ಲಿ ನೋವು, ಮುಂತಾದ ಲಕ್ಷಣಗಳಿರುವವು. ಆದರೆ ತೀವ್ರವೇ ಅದರ ಉಗ್ರ ಸ್ವರೂಪವು ಕಂಡು ಬರುವದು ಮತ್ತು ರೋಗಿಯು ದಣಿದಂತೆಯೂ ಗಲಿತನಾದಂತೆಯೂ ಕಂಡುಬರುವನು. ಶ್ವಸನೇಂದ್ರಿಯವೂ ಕೆಟ್ಟು ( ಶ್ವಸನಕ ಜ್ವರ ) ನ್ಯುಮೋ ನಿಯಾ ಸಹ ಆಗುವದು. ಮತ್ತೇನೂ ಉಪದ್ರವವಾಗಬಾರದಾಗಿಯೂ ರೋಗಕ್ಕೆ ಉಗ್ರ ಸ್ವರೂಪವೂ ಆಗಬಾರದಾಗಿ ರೋಗಿಯು ಹಾಸಿಗೆಯ ಮೇಲೆ ಸ್ವಸ್ಥ ಮಲಗಿಕೊಂಡು ಇರಬೇಕು. ಮತ್ತು ವಿಶ್ರಾಂತಿ ತೆಗೆದು ಕೊಳ್ಳಬೇಕು. ಮಲಶುದ್ಧಿಯಾಗುವದಕ್ಕೋಸ್ಕರ ಉಗುರು ಬೆಚ್ಚನ ನೀರಿನ ಅಥವಾ ಗ್ಲಿಸರೀನದ ಬಸ್ತಿ ದಿನಾಲು ತೆಗೆದುಕೊಳ್ಳುವದು ಅವಶ್ಯಕ ವಿರುವದು.

**ನೇ. ಸ:—** ಪ್ರಮುಖ ಔಷಧವು. ಇತರ ಔಷಧ ಕೊಟ್ಟು ಜ್ವರವು ನಿಂತನಂತರ ಉಳಿದ ರೋಗಗಳ ಮೇಲೆ ಇದರ ಉಪಯೋಗವಾಗುವದು. ಸರ್ವಾಂಗವು ನೋಯುವದು. ವಿಶೇಷವಾಗಿ ಟೊಂಕ ಹಾಗೂ ಎಲುಬು ಗಳೂ ಬಹಳ ನೋಯುವವು. ನುಂಗುವಾಗ ಗಂಟಲದಲ್ಲಿಯೂ ನೋಯು ವದು. ನಾಲಗೆಯು ತುಸು ಕರ್‍ರಸ, ನಸುಗೆಂಪು, ತುಸು ಹಳದಿ ಬಾಯಿಯು ಕಹಿ. ಪಿತ್ತದ ಕಹಿ ವಾಕರಿಕೆ ತಲೆಯ ಹಿಂಭಾಗದಲ್ಲಿ ನೋವು ತಲೆ ಜಡ ವಿರುವದು.

**ಫೇ. ಫಾ:—** ರೋಗದ ಆರಂಭದಲ್ಲಿ ಜ್ವರ, ರಕ್ತಸಂಚಯು, ಮುಂತಾದವುಗಳ ಸಲುವಾಗಿ ಮೇಲಿಂದಮೇಲೆ ಕೊಡಬೇಕು. ಬೆವರು ಬರುವದಕ್ಕಾಗಿ ಕಾ. ಸ. ಮತ್ತು ಇದನ್ನು ಸರ್ತಿಮೇಲೆ ಕೊಡಬೇಕು.

**ಕಾ. ಮ್ಯೂ:—** ದ್ವಿತೀಯಾವಸ್ಥೆ, ನಾಲಗೆಯು ಬೆಳ್ಳಗಾಗಿರುವದು. ಗಂಟಲು ನೋಯುವದು. ಸಂಧಿವಾತಜನ್ಯ ವೇದನೆ.

**ನೇ ಮ್ಯೂ:—** ಸೀನುಗಳು, ಕಣ್ಣಿನಿಂದಲೂ ಮೂಗಿನಿಂದಲೂ ನೀರು ಸೋರುವದು. ನಾಲಿಗೆಯ ಮೇಲಿನ ಅಗ್ರ ನೋಡಬೇಕು.

**ಕಾ. ಪಾ:—** ಇನ್‌ಫ್ಲುಎಂಜಾದನಂತರ ಮಾನಸಿಕ ದುರ್ಬಲತೆಯೂ ಅಶಕ್ತತೆಯೂ ಆಗಿ ಮುಂಜಾನೆ ದಣಿದಂತೆನಿಸುವದು. ಬೇರೆ ಬೇರೆ ಸ್ನಾಯು ಗಳ ಹಾರುವಿಕೆ ಹಾಗೂ ನಾಡೀಗತ ವೇದನೆ ಈ ಭಾವನೆಗಳ ಮೇಲೆ ಇದರ ಉಪಯೋಗವಾಗುವದು.

**ಮ್ಯಾ. ಪಾ:—** ಇನ್‌ಫ್ಲುಎಂಜಾದನಂತರ ನಾಡೀಗತ ವೇದನೆ ನಿಂತು ನಿಂತು ಮೇಲಿಂದಮೇಲೆ ಬರುವದಾದರೆ ಮತ್ತು ಅವು ಉಷ್ಣೋಪ ಚಾರದಿಂದ ನಿಲ್ಲುವದಾದರೆ ಈ ಔಷಧದಿಂದ ತಪ್ಪದೆ ಗುಣಬರುವದು.

" ಶೀತ, " " ನೆಗಡಿ " ಎಂಬ ವಿವರ ನೋಡಿರಿ.

**ಉಪಯುಕ್ತ ಸೂಚನೆ:—** ನೇ. ಸ. ವು ಈ ರೋಗದ ಮೇಲಿನ ಪ್ರಮುಖ ಔಷಧವಿದ್ದು ಪ್ರತಿಬಂಧಕವೆಂದು ಪಿಡಗಿನ ಕಾಲಕ್ಕೆ ( Epidemic ) ಕೊಡಲಿಕ್ಕೆ ಅಡ್ಡಿ ಇಲ್ಲ. ಆರಂಭದಲ್ಲಿ ಜ್ವರ ಮುಂತಾದ ದಾಹದ ಭಾವನೆಗಳಿಗೆ ಫೇ. ಫಾ. ಕೊಡಬೇಕು. ಗಂಟಲು ನೋಯು

ತ್ತಿದ್ದು ನಾಲಿಗೆಯು ಬೆಳ್ಳಗಾಗಿದ್ದರೆ ಫೇ. ಫಾ. ಮತ್ತು ಕಾ ಮೂ. ಗಳನ್ನು ಸರ್ತಿಮೇಲೆ ಕೊಡಬೇಕು. ಭಾವನೆಗಳ ಬಲವು ಸಾಯಂಕಾಲ ದಲ್ಲಿ ಹೆಚ್ಚಾಗುವದಾದರೆ, ಇಲ್ಲವೆ ಆ ಕಾಲಕ್ಕೆ ಚಳಿಯು ಆಗುತ್ತಿದ್ದರೆ ಫೇ. ಫಾ. ಮತ್ತು ಕಾಲೀ ಸ. ಇವುಗಳನ್ನು ಜತೆಗೆ ಕೊಡಬೇಕು. ರೋಗಿಯು ಗಾಬರಿಯಾಗಿದ್ದರೆ, ಕಾಲಿ. ಫಾ. ಮತ್ತು ಫೇ. ಫಾ. ಇವು ಗಳನ್ನು ಕೂಡಿಸಿ ಕೊಡಲಿಕ್ಕೆ ಅಡ್ಡಿ ಇಲ್ಲ. ಸೀನುಗಳು ಬರುತ್ತಿದ್ದರೆ ಮೂಗಿನಿಂದಲೂ ಕಣ್ಣಿನಿಂದಲೂ ನೀರು ಸೋರುತ್ತಿದ್ದಲ್ಲಿ ನೇ. ಮೂ. ಇದೇ ಗುಣ ಕೊಡುವದು. ಬಿಸಿ ನೀರಿನಿಂದ ಮೈ ವರಿಸಿ ತೆಗೆಯಬೇಕು. ಮತ್ತು ಕುಡಿಯಲಿಕ್ಕೆ ಸಾಕಷ್ಟು ಕೊಡಬೇಕು. ಬಿಸಿನೀರು ಇನ್‌ಫ್ಲು ಎಂಜಾದ ಕ್ರಿಮಿಗಳ ಮರಣವೇ ಎಂದು ತಿಳಿಯಬೇಕು. ಇದರಮೇಲೆ ನಾವು ಬರದ "ಇನ್‌ಫ್ಲುಎಂಜಾ" ಎಂಬುವ ಹೆಸರಿನ ಪುಸ್ತಕವನ್ನು ಓದಬೇಕು.

---

## ಶ್ವಸನಜ್ವರ

Pneumonia. ನ್ಯೂಮೋನಿಯಾ.

ಪುಪ್ಪುಸದಲ್ಲಿ ದಾಹವು ಉತ್ಪನ್ನವಾಗುವದು ಅಂದರೆ ನ್ಯೂಮೋ ನಿಯಾ ಅಥವಾ ಶ್ವಸನಕ ಜ್ವರವು. ಆರಂಭಕ್ಕೆ ೧-೨ ದಿವಸ ನೆಗಡಿ ಬಂದಂತೆ ಕಾಣುತ್ತದೆ. ತಲೆ ಹಾಗೂ ಟೊಂಕ ನೋಯುವವು. ಇತರ ದಾಹಯುಕ್ತ ಜ್ವರಗಳಲ್ಲಿಯಂತೆ ಇದರಲ್ಲಿಯೂ ಮೊದಲು ಬಹಳ ಚಳಿ ( ೨೦ ೩೫ ಮಿನಿ ಟಿನ ವರೆಗೆ ) ಬರುವದು. ಬಹಳಮಾಡಿ ವಕ್ಕರಿಕೆಯೂ ಇರುವದು. ಮುಂದೆ ಜ್ವರವು ತುಂಬುವದು. ಸಾಯಂಕಾಲದಲ್ಲಿ ಜ್ವರವು ೧೦೪-೧೦೫ ಅಂಶಗಳ ವರೆಗೆ ಏರುವದು. ಮುಂಜಾನೆ ೧-೨ ಅಂಶದಿಂದ ಇಳಿಯುವದು. ನಾಡಿಯು ಬಡೆತಗಳು ೧೨೦ ರಿಂದ ೧೩೦ ದ ವರೆಗೆ ಇರುವವು. ಶ್ವಾಸವು ತೀವ್ರವಿರು ವದು. ದೀರ್ಘಶ್ವಾಸ ತೆಗೆದುಕೊಳ್ಳಲು ಬರಲಾರದು. ಶ್ವಾಸೋಚ್ಛ್ವಾ ಸವು ದರಮಿನಿಟಿಗೆ ೩೦-೪೦-೫೦ರ ವರೆಗೆ ಇರುವದು. ಒಮ್ಮೊಮ್ಮೆ ಥಂಡಿಯು ಮೂಲತಃ ಇರುವದೇ ಇಲ್ಲ. ಒಮ್ಮೊಮ್ಮೆ ನಿಂತು ನಿಂತು

ಎಷ್ಟೋಸಾರೆ ಚಳಿ ತುಂಬುವದು ಹಾಗೂ ಸೆಟೆ ಬೇನೆಯೂ ಬಂದು ಅರುವು ತಪ್ಪುವದು. ಯಾವ ಮಗ್ಗಲದ ಪುಪ್ಪುಸ ಕೆಟ್ಟಿರುವದೋ ಆ ಮಗ್ಗಲಿನ ಗಲ್ಲ ನೀಲಿ ವರ್ಣದ್ದೊ ಕೆಂಪು ಬಣ್ಣದ್ದೊ ಕಾಣುವದು. ಅದೇ ಮಗ್ಗಲಿನ ತುಟಿಯಮೇಲೆ ಬಕ್ಕೆ ಏಳುವವು. ಯಾವ ಮಗ್ಗಲಿನ ಫುಪ್ಪುಸ ಕೆಟ್ಟಿರುವದೊ ಆ ಮಗ್ಗಲದಮೇಲೆ ದೇಹದ ಭಾರಹಾಕಿ ಮಲಗುವನು. ಶ್ವಾಸೋಚ್ಛ್ವಾಸವು ಹೆಚ್ಚು ಜೋರಿನಿಂದ ಆಗಹತ್ತಿದರೆ ಆ ಪಕ್ಕೆಯಮೇಲೆ ಮಲಗಲು ಅಸಾಧ್ಯವಿದ್ದದರಿಂದ ರೋಗಿಯು ಹೊಟ್ಟೆ ಮೇಲೆಮಾಡಿ ಮಲಗುವನು. ಶೀಘ್ರ ಪರಿಣಾಮದ ಹಾಗೂ ಒಣ ಕೆಮ್ಮು ಇರುವದು. ಕೆಮ್ಮುವಾಗ ಎದೆನೋಯುವದು, ಆದ್ದರಿಂದ ಕೆಮ್ಮು ತಪ್ಪಿಸುವ ಪ್ರವೃತ್ತಿ ಇರುವದು. ಆರಂಭದಲ್ಲಿ ಒಣಕೆಮ್ಮಿನ ಪಸಿಕೆಯು ಹತ್ತುವದು. ೩ ಅಥವಾ ೪ನೇ ದಿವಸ ಅಂಟಿನಂಥ ಜಿಗಟು, ಎಳೆಯುಳ್ಳ ಕಫ ಬಹಳ ಕಷ್ಟದಿಂದ ಬಿಡುವದು. ಅದನ್ನು ರೋಗಿಯು ಉಗಳಲಾರನು. ತುಟಿಗೆ ಅಂಟಿಗೊಳ್ಳುವದು. ಅದನ್ನು ಪರಿಶಿ ತಗಿಯಬೇಕಾಗುವದು. ಶ್ವಾಸ ಎಳಕೊಳ್ಳುವಾಗಲೂ ಕೆಮ್ಮುವಾಗಲೂ ಎದೆಯಲ್ಲಿ ನೋವು ಹೆಚ್ಚಾಗುವದು. ನಂತರ ಕಫವು ನಸುಗೆಂಪು ಬಣ್ಣದ್ದಾಗುವದು. ತಿಂದ ಎಲೆಯ ಚೊಂತಿಯ ಬಣ್ಣದಂಥ ಕಫವು ಬೀಳಹತ್ತಿದರೆ ನ್ಯೂಮೋನಿಯಾ ಆದದ್ದು ನಿಶ್ಚಿತವೆಂದು ತಿಳಿಯಬಹುದು; ಆದರೆ ಈ ಭಾವನೆಯು ಯಾವಾಗಲೂ ಕಂಡುಬರುವದೆಂದು ಹೇಳಕೂಡದು. ಅಲ್ಲಾಡಿದ್ದರಿಂದ, ಮಾತಾಡಿದ್ದರಿಂದ ಕೆಮ್ಮು ಬೆಳೆಯುವದು. ಎದೆಯಲ್ಲಿ ಬಿಗಿದು ಕಟ್ಟಿದಂತೆ ಅನಿಸುವದು. ಆರಂಭದಲ್ಲಿ ನಾಡಿಯು ತುಂಬಿದಂತೆಯೂ, ಸಶಕ್ತವೂ ಸಾಧಾರಣ ತೀವ್ರವೂ ಇರುವದು. ಮುಂದೆ ಮುಂದೆ ನಾಡಿಯೂ ನಿಃಶಕ್ತ, ಕ್ಷೀಣ, ಅನಿಯಮಿತವಾಗುವದು ಮತ್ತು ಬಹಳೇ ತೀವ್ರ ಹಾರುವದು. ಹಸಿವೆ ಇರುವದಿಲ್ಲ. ನಾಲಗೆಯು ಒಣಗಿದ್ದೂ ಕರ್ಪಸದೂ ಇರುವದು. ಮಾಂದ್ಯವೂ ಭ್ರಮವೂ ಇರುವವು. ಧ್ವನಿ ಒಳಗೆ ಎಳೆದಂತೆಯೂ ಇದ್ದು ರೋಗಿಯು ಹರುಕು ಮುರುಕು ಮಾತನಾಡುವನು ಮೂತ್ರವು ನಸುಗೆಂಪು ಬಣ್ಣದ್ದೂ ಸ್ವಲ್ಪ ಸ್ವಲ್ಪ ಆಗುವದು. ೭ನೇ ಇಲ್ಲವೇ ೯ನೇ ದಿವಸ ಜ್ವರವು ಒಮ್ಮಿಂದೊಮ್ಮೆ ಇಳಿದು ರೋಗಿಯು ನೆಟ್ಟಗಾಗುವ ಚಿನ್ಹಗಳು ಸ್ಪಷ್ಟವಾಗಿ ಕಂಡುಬರುವವು.

ಶ್ವಾಸೋಚ್ಛ್ವಾಸವೂ ನಾಡಿಯ ಬಡಿತವೂ ಸಾಧಾರಣವಾಗಿ ಇರುವಂತೆ ಇರುವವು. ಬೆವರು ಬಹಳ ಬಿಡುವದು. ಒಮ್ಮೊಮ್ಮೆ ರೇಚ ಸಹ ಆಗುವದು. ವಿಷಮ ದಿವಸಗಳಲ್ಲಿ (ಸಾಧಾರಣತಃ ೫ನೇ ೭ನೇ ೯ನೇ ಅಥವಾ ೧೧ನೇ ದಿವಸ) ಈ ಜ್ವರ ಒಮ್ಮಿಂದೊಮ್ಮೆ ಇಳಿಯುವದು. ಜ್ವರವು ವಿಷಮ ದಿವಸದಲ್ಲಿ ಇಳಿದು ನಾಡಿ ಮತ್ತು ಶ್ವಾಸೋಚ್ಛ್ವಾಸ ಪೂರ್ವಸ್ಥಿತಿಗೆ ಬರದಿದ್ದರೆ ಇನ್ನೂ ರೋಗಿಯು ಸುಧಾರಿಸುವ ಮಾರ್ಗಕ್ಕೆ ಹತ್ತಿಲ್ಲವೆಂದು ತಿಳಿಯಬೇಕು. ಈ ರೋಗದಲ್ಲಿ ಜ್ವರವು ಬಹುಧಾ ಒಮ್ಮಿಂದೊಮ್ಮೆಯೇ ಇಳಿಯುವದು. ಜ್ವರವು ಕ್ರಮಕ್ರಮದಿಂದ ಇಳಿಯುವದು ಈ ರೋಗದಲ್ಲಿ ಕಂಡುಬರುವದಿಲ್ಲ. ಈ ರೋಗವು ಸಾಧಾರಣವಾಗಿ **೨।೩** ವಾರ ತಡೆಯುವದು. ಇದಕ್ಕೂ ಹೆಚ್ಚು ದಿವಸ ಹತ್ತಿದಲ್ಲಿ ಕ್ಷಯದ ಬೀಜ ಊರಲ್ಪಟ್ಟಿದೆ ಎಂದು ತಿಳಿಯಬೇಕು. ಎದೆಯಲ್ಲಿ ಗಟ್ಟಿಯಾಗಿ ಬಿಗಿದಂತೆ ಇರುವ ಭಾವನೆ ನಿಲ್ಲುವದು ಹಾಗೂ ಕಫವು ಹಳದೀ ಇದ್ದು ಅದು ಸಡಿಲಾಗಿ ಬೀಳಹತ್ತುವದು– ಇವು ಶುಭ ಲಕ್ಷಣಗಳೆಂದು ತಿಳಿಯಬೇಕು. ನಾಡಿಯು ಬಹಳ ತೀವ್ರ, ಅಶಕ್ತ. ಹಾಗೂ ಸೂಕ್ಷ್ಮ ಇರುವದು, ಗಲಿತವಾದಂತೆ ಅನಿಸೋಣ, ಎದೆಯಲ್ಲಿ ಬಿಗಿದಂತೆ ಅನಿಸೋಣ ಇವು ದುಷ್ಟ ಲಕ್ಷಣಗಳೆಂದು ತಿಳಿಯಬೇಕು. ಸಣ್ಣಮಕ್ಕಳಲ್ಲಿ (೬ ವರ್ಷದ ಒಳಗಿನ ವಯಸ್ಸಿನ) ಈ ವಿಕಾರ ಹೆಚ್ಚಾಗಿ ಕಂಡುಬರುವದು. ಯಾವದೇ ವಯಸ್ಸಿನವರಿಗೆ ಈ ರೋಗವಾಗುವದು. ಸಣ್ಣಮಕ್ಕಳಿಗೂ, ವೃದ್ಧರಿಗೂ ಆದರೆ ಚಿಂತಾಜನಕವಿರುವದು, ತರುಣ ವಯಸ್ಸಿನ ಸಶಕ್ತರಿಗೆ ಆದ ನ್ಯುಮೋನಿಯಾ ಬೇನೆಯು ಬಹುತರವಾಗಿ ಅಸಾಧ್ಯವೇ ಇರುವದು. ಸರಾಯಿಯ ವ್ಯಸನವಿದ್ದವರಿಗೆ ಹಾಗೂ ಇತರ ರೋಗದಿಂದ ಅಶಕ್ತರಾದವರಿಗೂ ಈ ರೋಗವಾಗುವ ಸಂಭವ ಹೆಚ್ಚು. ಈ ರೋಗವು ಒಮ್ಮೆ ಆದನಂತರ ಪುನಃ ಮೇಲಿಂದ ಮೇಲೆ ಆಗುವ ಅಂಜಿಕೆ ಇರುತ್ತದೆ. ಅದೇ ಪ್ರಕಾರ ಈ ರೋಗವಾದವರಿಗೆ ಕ್ಷಯವಾಗುವ ಅಂಜಿಕೆಯೂ ಹೆಚ್ಚು. ತಂಡಿಯಲ್ಲಿ ತಿರುಗಾಡೋಣ, ತೇವು ಸ್ಥಳದಲ್ಲಿ ಮಲಗೋಣ, ಇವು ಈ ಬೇನೆಯ ಮುಖ್ಯ ಕಾರಣಗಳು. ಪ್ಲೇಗು, ಸನ್ನಿಪಾತಜ್ವರ, ಮುಂತಾದ ಶೀಘ್ರ ಪರಿಣಾಮದ ರೋಗಗಳಲ್ಲಿ ಈ ರೋಗವಾಗುವ ಅಂಜಿಕೆ ಬಹಳ.

**ಫೇ. ಫಾ:**— ಪ್ರಥಮಾವಸ್ಥೆಯಲ್ಲಿ ಬೆವರು ಬಿಟ್ಟು ಸಮಾಧಾನ ವೆನಿಸುವವರೆಗೆ ಕೊಡಬೇಕು. ಚಳಿ ಹತ್ತುವದು, ಜ್ವರ, ಶ್ವಾಸವು ತೀವ್ರವೂ, ಕಷ್ಟದಾಯಕವೂ, ಶೀಘ್ರ ಪರಿಣಾಮದ ಒಣ ವೇದನೆ ಇದ್ದ ಕೆಮ್ಮು. ರೋಗಿಯು ಉದಾಸೀನನಿದ್ದು ಕಣ್ಣು ಮುಚ್ಚಿಹಾಕುವವು. ಅಲ್ಲಾಡಿದ್ದರಿಂದ ವೇದನೆ, ಅಸ್ವಸ್ಥತೆಯೂ ಕಂಡುಬರುವವು. ನಾಡಿಯು ತೀವ್ರ ತುಂಬಿದಂತಿರುವದು, ಸಶಕ್ತವೂ ಇರುವದು. ಗಂಟಲದಲ್ಲಿ ತಿಂಡಿ ಬಿಡುವದು. ನಸುಗೆಂಪು ಬಣ್ಣದ ಕಫ. ಬೆವರು ಬರುವದರ ಸಲುವಾಗಿ ಆರಂಭದಲ್ಲಿ ಕಾಲೀ. ಸ. ಮತ್ತು ಇದನ್ನು ಸರ್ತಿಯ ಮೇಲೆ ಕೊಡುವದು. ದ್ವಿತೀಯಾವಸ್ಥೆಯು ಪ್ರಾರಂಭವಾದ ನಂತರ ಮುಖ್ಯ ಔಷಧವೆಂದು ಫೆರಂ. ಫಾ. ದ ಉಪಯೋಗ ಬಹಳಾಗುವದಿಲ್ಲ. ಹುಡುಗರಿಗೂ ಮುದುಕರಿಗೂ ಆಗುವ ನ್ಯುಮೋನಿಯಾದಲ್ಲಿ ಇದರ ಉಪಯೋಗ ಬಹಳಾಗುವದು.

**ಕಾ. ಮೂ:**— ದ್ವಿತೀಯಾವಸ್ಥೆ, ಫೇ. ಫಾ. ದ ಜತೆಗೆ ಕೊಡ ಬೇಕು. ಜಿಗಟ, ಬಿಳೀ ಕಫ, ಕೆಮ್ಮು, ನಾಲಗೆಯು ದಟ್ಟ ಮತ್ತು ಬಿಳೀದು. ದ್ವಿತೀಯಾವಸ್ಥೆಯಲ್ಲಿ ಆಗುವ ಸ್ರಾವವನ್ನು ಶೋಷಣ ಮಾಡುವದಕ್ಕೋಸ್ಕರ.

**ನೇ. ಮೂ:**— ಒಣ, ತಿಂಡಿ ಹುಟ್ಟಿಸುವ ಕೆಮ್ಮು ಫೇರಂಫಾಸದ ನಂತರ ನೆಟ್ಟಗಾಗದಿದ್ದರೆ ಇದನ್ನು ಕೊಡಬೇಕು. ಗಂಟಲದಲ್ಲಿ ಘುರಘುರಿಸು ವದು, ಕಫ ಸಡಿಲಾದದ್ದು ಸ್ವಚ್ಛ, ಬುರುಗು ಇದ್ದದ್ದು ಇದ್ದರೆ, ಕೆಮ್ಮು ವಾಗ ಕಣ್ಣಿನಿಂದ ನೀರು ಸೋರುವದು. ತಲೆಶೂಲೆ ಬಹಳ. ಕಪಾಳದ ಮೇಲಿನ ನಾಡಿಗಳು ತಡತಡ ಹಾರುವವು. ನಾಲಗೆಯ ಮೇಲೆ ಜೊಲ್ಲು ಬುರುಗು ಮತ್ತು ಗುಳ್ಳೆಗಳಿದ್ದದ್ದು, ಸಾರಾಯಿಯ ವ್ಯಸನವಿದ್ದವರಿಗೆ ಆಗುವ ನ್ಯುಮೋನಿಯಾದ ಮೇಲೆ ಇದರ ಉಪಯೋಗ ಬಹಳಾಗುವದು.

**ಕಾ. ಸ:**— ಬೆವರು ಬರದಿದ್ದರೆ ಮೊದಲು ಫೇ. ಫಾ. ಮತ್ತು ನಂತರ ಇದನ್ನು ಸರ್ತಿಯ ಮೇಲೆ ಕೊಡಬೇಕು. ಹಳದಿ, ತೆಳ್ಳನ ಕಫ ಸಡಿಲಾ ಗುವದು. ಒಮ್ಮೊಮ್ಮೆ ಕಫವು ಹೊರಬೀಳದೆ ಗಂಟಲದಲ್ಲಿಯೇ ಇಳಿಯು ವದು ನಂತರ ನುಂಗಲ್ಪಡುವದು. ಎದೆಯಲ್ಲಿ ಸೂಂಸೂಂ ಮತ್ತು ಘುರ

ಘುರವೆಂಬ ಸಪ್ಪಳವಾಗುವದು. ಉಸುರು ಕಟ್ಟಿದಂತಾಗುವದು ಮತ್ತು ತಣ್ಣನ ಹವೆಯ ಅಪೇಕ್ಷೆ ಬಹಳು ಇರುವದು. ಸಂಜೆಯಿಂದ ಮಧ್ಯ ರಾತ್ರಿಯ ವರೆಗೆ ಜ್ವರವು ಏರುವದು. ನಂತರ ಕಡಿಮೆಯಾಗುವದು.

**ಕಲ್ಕೆ. ಸ:—** ತೃತೀಯಾವಸ್ಥೆ. ಕಫವು ಹಸಿ ಕೀವಿನಂಥ ಕಫದ ಲೊದಡೆಗಳು ಸಹಜವಾಗಿ ಸಡಿಲಾಗಿ ಬೀಳುವವು. ಒಮ್ಮೊಮ್ಮೆ ಅವುಗಳ ಸಂಗಡ ರಕ್ತ ಸಹ ಬೀಳುವದು.

**ಕಾ. ಫಾ:—** ರೋಗದ ಕಡೆಯ ಸ್ಥಿತಿಯಲ್ಲಿ ಇದರ ಉಪಯೋಗ ವಾಗುವದು. ಶಕ್ತಿಯ ಕ್ಷೀಣತೆ, ನಾಡಿಯ ನಿಃಶಕ್ತತೆ ಶೌಚಕ್ಕೂ ಬೆವರಿಗೂ ದುರ್ಗಂಧ ನಾತ ಬರುವದು. ನಿದ್ದಿಗೇಡು, ಭ್ರಮ, ಬಡಬಡಿ ಸುವದು, ಅರಿವು ತಪ್ಪುವದು ಮುಂತಾದ ಭಾವನೆಗಳು ಇರುವವು. ಕಫ ಗಟ್ಟಿ. ಹಳದಿ, ಉಪ್ಪುಪ್ಪು, ಕೊಳೆತದ್ದೂ ಹೊಲಸೂ ಇರುವದು. ನಡು ನಡುವೆ ಬುರುಗೂ ಕಫವೂ ಕೂಡಿ ಬೀಳುವದು ಅದರಿಂದ ಶ್ವಾಸಕಟ್ಟಿ ದಂತಾಗುವದು.

**ನೇ. ಫಾ:—** ಈ ರೋಗದಲ್ಲಿ ಪಿತ್ತದ ಭಾವನೆಗಳು ಇದ್ದಲ್ಲಿ. ಕಫವು ದಟ್ಟಾಗಿರುವದು, ಹಸರು, ಕೀವಿನಂತಿರುವದು ಅದು ತಂತುಯು ಕ್ತವೂ ( ಎಳೆಯುಳ್ಳದ್ದೂ ) ಇರುವದು. ಎದೆಯಲ್ಲಿ ನೋಯುವದು. ಒತ್ತಿದಲ್ಲಿ ಸಮಾಧಾನವಾಗುವದು. ಕೆಮ್ಮುವಾಗ ಎದೆ ಒತ್ತಿ ಹಿಡ ಕೊಂಡರೆ ಸಮಾಧಾನವಾಗುವದು. ತೇವು ಸ್ಥಳದಲ್ಲಿ ಎಲ್ಲ ಭಾವನೆಗಳು ಹೆಚ್ಚಾಗುವವು.

**ಸಿ:—** ಬೆನ್ನಿನ ಮೇಲೆ ಮಲಗಿದಲ್ಲಿ ಶ್ವಾಸೋಚ್ಛ್ವಾಸಕ್ಕೆ ಕಷ್ಟ ವಾಗುವದು. ಪುಪ್ಪುಸದಲ್ಲಿ ಎಲ್ಲಿಯಾದರೂ ತೀರ ಒಳಭಾಗಕ್ಕೆ ನೋವು ಇದ್ದಂತೆ ಅನಿಸುವದು. ಕಫವು ಸಹಜ ಸಡಿಲಾಗುವದು. ಗಂಟಲದಲ್ಲಿ ಘುರಘುರಿಸುವದು. ಕಫವು ಬಹಳು ಜಿಗಟು ಹೊಲಸು ನಾತವುಳ್ಳದ್ದು, ಹಳದಿ ಅಥವಾ ಹಸರು ಇರುವದು. ಎಲುಬಿನಲ್ಲಿಯ ಜ್ವರ, ರಾತ್ರಿಯಲ್ಲಿ ವಿಪುಲ ಬೆವರು ಬರುವದು, ಅಶಕ್ತತೆ ಈ ಭಾವನೆಗಳು ನ್ಯುಮೋನಿಯಾದ ನಂತರ ಇದ್ದಲ್ಲಿ ಇದರ ಉಪಯೋಗ ಬಹಳಾಗುವದು.

**ಕಲೆ. ಫಾ:—** ಸಣ್ಣ ಹುಡುಗರಿಗೆ ಆಗುವ ನ್ಯುಮೋನಿಯಾದ ಮೇಲೆ ಇದರ ಉಪಯೋಗ ಬಹಳಾಗುವದು. ಕಫವು ಹಳದಿ ಇದ್ದರೆ ಹಾಗೂ ಸಾಯಂಕಾಲಕ್ಕೆ ರೋಗದ ಭರವು ಹೆಚ್ಚಾಗುತ್ತಿದ್ದರೆ ಎದೆಯಲ್ಲಿ ಚುಚ್ಚಿದಂಥ ನೋವು ಇದ್ದು ಚಳಿಯಿಂದ ಹೆಚ್ಚಾಗುತ್ತಿದ್ದರೆ.

**ಉಪಯುಕ್ತ ಸೂಚನೆ:—** ಇತರ ದಾಹಯುಕ್ತ ರೋಗಗಳಲ್ಲಿ ಕೂಡುವಂತೆ ಈ ರೋಗದಲ್ಲಿಯೂ ಫೆ. ಫಾ. ಮತ್ತು ಕಾ. ಮೂ. ಇವುಗಳನ್ನು ಆರಂಭದಿಂದ ಮೇಲಿಂದ ಮೇಲೆ ಕೊಟ್ಟರೆ ಬಹುತರವಾಗಿ ರೋಗಿಯು ನೆಟ್ಟಗಾಗದೆ ಇರಸು. ಜ್ವರ, ದಾಹ, ರಕ್ತಸಂಚಯು ಇವುಗಳ ಮೇಲೆ ಫೇರಂ. ಫಾ. ಕೊಡಬೇಕು. ಮತ್ತು ಅದರ ಜತೆಗೆ ಕಾ. ಮೂ. ಸಹ ಕೊಡಬೇಕು. ಬುರುಗು ಇದ್ದ ಕಫವಿದ್ದರೆ ನೇ. ಮೂ. ದ ಉಪಯೋಗವಾಗುವದು. ದ್ವಿತೀಯಾವಸ್ಥೆಯಲ್ಲಿ ವಿಶೇಷವಾಗಿ ತ್ವಚೆ ಬಹಳೇ ಒಣಗಿದಂತೆ ಇದ್ದರೆ ಕಾ. ಸ. ವನ್ನು ಬೆವರು ಬಿಡುವ ವರೆಗೆ ಕೊಡುತ್ತಿರಬೇಕು. ಬಿಸಿನೀರಿನೊಳಗಿಂದ ಕಾ. ಸ. ಕೊಟ್ಟಲ್ಲಿ ಬೆವರು ಬರದೇ ಇರಲಾರದು. ದಿನಾಲು ನೀರಿನ ಬಸ್ತಿ ಕೊಡಬೇಕು. ದಿನಾಲು ೧।೨ ಸರ್ತೆ ಬಿಸಿನೀರಿನಲ್ಲಿ ತೋಯಿಸಿದ ಅರಿವೆಯಿಂದ ಮೈ ಒರಸಿ ತೆಗೆಯಬೇಕು. ಅದರಿಂದ ರೋಗ ನೆಟ್ಟಗಾಗಲಿಕ್ಕೆ ಸಹಾಯವಾಗುವದು. ಬೆವರು ಬರುವದಕ್ಕಾಗಿ ಉಣ್ಣೆಯ ಬಟ್ಟೆಗಳನ್ನು ಹೊದ್ದುಕೊಳ್ಳಬೇಕು. ಬಿಸಿನೀರು ಕುಡಿಯಬೇಕು ಮತ್ತು ಬಿಸಿನೀರಿನಲ್ಲಿ ಕಾಲು ಇಟ್ಟುಗೊಂಡು ಕೂಡಬೇಕು. ಎದೆಯ ಮೇಲೆ ಉಣ್ಣೆಯ ಜಾಕೀಟ ಹಾಕಿಕೊಳ್ಳಬೇಕು. ಅಗಸಿಯ ಪೋಟೀಸಿನಿಂದಾಗಲಿ, ಅಥವಾ ಫೆರಂ. ಫಾ. ಹಾಕಿದ ನೀರಿನಲ್ಲಿ ತೊಯಿಸಿದ ಅರಿವಿಯಿಂದಾಗಲಿ ಎದೆ ಕಾಯಿಸಬೇಕು. ರೋಗಿಗೆ ಕಫ ಉಗಳಲಿಕ್ಕೆ ಸಹ ಏಳಗೊಡಬಾರದು. ಸ್ವಚ್ಛ ಬಟ್ಟೆಯಿಂದ ಬಾಯಿಯಲ್ಲಿ ಉಳಿದ ಕಫವನ್ನು ಒರಿಸಿ ತಗಿಯಬೇಕು. ಮತ್ತು ಆ ಬಟ್ಟೆಗಳನ್ನು ಚೆಲ್ಲಿಬಿಡಬೇಕು. "ಪ್ಲೂರಿಸಿ" ಎಂಬ ವಿವರದ ಕೆಳಗೆ ಕೊಟ್ಟ ಸೂಚನೆಗಳನ್ನೂ ನಾವು ಬರೆದ ಇನ್‌ಫ್ಲುಎಂಜಾದ ಪುಸ್ತಕವನ್ನೂ ಓದಬೇಕು.

---

# ಆರ್ತವಶೂಲೆ

**Dysmenarrhia. ಡಿಸ್‌ಮೆನೋರಿಯಾ.**

ಮುಟ್ಟು ಆಗುವ ಕಾಲಕ್ಕೆ ಸ್ವಲ್ಪಕಾಲ ಹೊಟ್ಟೆಯಲ್ಲಿ, ಗರ್ಭಾಶಯದಲ್ಲಿ ತೊಡೆಗಳಲ್ಲಿ ಪಿಂಡರಿಗಳಲ್ಲಿ ಮುಂತಾದ ಸ್ಥಾನಗಳಲ್ಲಿ ಬಲವತ್ತರ ವೇದನೆಗಳು ಉತ್ಪನ್ನವಾಗುವವು. ಈ ಬೇನೆಗೆ ಸಪೀಡಾರ್ತವ, ಪೀಡಿತಾರ್ತವ, ಆರ್ತವಶೂಲೆ ಎಂದು ಅನ್ನುವರು. ಎಷ್ಟೋ ಸ್ತ್ರೀಯರಿಗೆ ಮುಟ್ಟಾಗುವ ಕಾಲಕ್ಕೆ ಹೊಟ್ಟೆಯಲ್ಲಿ ನೋವು ಆಗುವದು; ಇತರತ್ರವೂ ಸ್ವಲ್ಪ ಕಷ್ಟವಾಗುವದು. ಆದರೆ ಅದು ಸಪೀಡಾರ್ತವವಲ್ಲ. ಮುಟ್ಟು ಆದನಂತರ ಒಮ್ಮೊಮ್ಮೆ ವೇದನೆ ಕಡಿಮೆಯಾಗುವದು. ಒಮ್ಮೊಮ್ಮೆ ಮುಟ್ಟಿನ ೩-೪ ದಿವಸಗಳು ಆಗಿಹೋಗುವವರೆಗೆ ಸಹ ವೇದನೆ ಇರುವದು. ವೇದನೆ ಎಷ್ಟೋತರಹದ್ದು ಇರುವದು. ಮುಟ್ಟಿನ ಸ್ರಾವವು ಕರ್‍ರಗೂ ಕೆಂಪೂ, ತೆಳ್ಳಗೂ ಗಟ್ಟಿಯೂ, ಇರುವದು. ಒಮ್ಮೊಮ್ಮೆ ಮುಟ್ಟಿನ ಸ್ರಾವದೊಳಗಿಂದ ಮಾಂಸದ ಚೂರುಗಳು, ರಕ್ತದ ಕೆಂಪು, ಕರೇ, ಗಂಟುಗಳೂ ಬೀಳುವವು. ಮುಟ್ಟಿನ ಸ್ರಾವವು ಇದ್ದಕಾಲಕ್ಕೆ ನಿಂತನಂತರ ಅಥವಾ ಅದರ ಪೂರ್ವದಲ್ಲಿ ಮಳಮಳಿಸುವದು, ತಲೆನೋವು, ಕಪಾಳಶೂಲೆ ಅಪಚನದ ವಿಕಾರಗಳೂ ಮುಂತಾದ ಲಕ್ಷಣಗಳು ಕಂಡುಬರುವವು. ಮಾನಸಿಕ ತಾಪವೂ ಇರುವದು. ಗರ್ಭಾಶಯದ ಬೆಳೆವಣಿಗೆ ಸಾಕಷ್ಟು ಆಗದಿರೋಣ, ಗರ್ಭಾಶಯದ ದಾಹಜನ್ಯ ರೋಗ, ಗರ್ಭಾಶಯಭ್ರಂಶ, ಗರ್ಭಾಶಯದಲ್ಲಿ ಅರ್ಬುದ, ಇವೇ ಮುಂತಾದವು ಈ ರೋಗದ ಕಾರಣಗಳು. ಇವುಗಳಲ್ಲಿ ಸ್ರಾವಕ್ಕೆ ಪ್ರತಿಬಂಧವಾಗುವದು. ಗರ್ಭಾಶಯದ ಪೊಳ್ಳಿನಲ್ಲಿ ಗಂಟುಗಳು ಉತ್ಪನ್ನವಾಗಿ ಅವು ಹೊರಬೀಳಬೇಕಾದರೆ ನಾನಾತರದ ವೇದನೆಯಾಗುವದುಂಟು. ಪೌಷ್ಟಿಕ ಅನ್ನ ಸಾಕಷ್ಟು ದೊರೆಯದಂಥ ಅಶಕ್ತ ಸ್ತ್ರೀಯರಿಗೆ, ಪಾಂಡುರೋಗಿ ಸ್ತ್ರೀಯರಿಗೆ, ಮನಸ್ಸಿನಿಂದ ದುರ್ಬಲ ಸ್ತ್ರೀಯರಿಗೆ ಇದರ ತಾಪವಾಗುವದು.

**ವ್ಯಾ. ಧ:—** ಕಳೆ, ವೇದನೆ, ಪ್ರಸವತುಲ್ಯ ವೇದನೆ. ಗರ್ಭಾಶಯದಿಂದೇನಾದರೂ ಬರುತ್ತಿರುವಂತೆ ಭಾಸ, ಉಷ್ಣೋಪಚಾರದಿಂದ

ಸಮಾಧಾನವಾಗುವದು. ೩ × ಶಕ್ತಿಯ ಔಷಧ ಬಿಸಿನೀರಿನಲ್ಲಿ ಹಾಕಿ ಕೊಡಬೇಕು.

**ಫೇ. ಫಾ:**— ಸಪೀಡಾರ್ತವ; ಸ್ರಾವವು ಕೆಂಪಾಗಿರುವದು. ಮುಖಚರ್ಯೆಯು ಕೆಂಪು. ನಾಡಿಯು ತೀವ್ರ ಹಾರುವದು. ಅಪಕ್ವ ಅನ್ನದ ವಾಂತಿ. ಮುಟ್ಟು ಆಗುವ ಪೂರ್ವದಲ್ಲಿ ತೆಗೆದುಕೊಂಡಲ್ಲಿ ವೇದನೆ ಕಡಿಮೆ ಯಾಗುವದು. ವೇದನೆ ಇದ್ದ ಕಾಲಕ್ಕೆ ಮ್ಯಾ. ಫಾ. ವನ್ನು ಜತೆಗೆ ಕೊಡಬೇಕು.

**ಕಾ. ಫಾ:**— ರುತುಕಾಲದಲ್ಲಿ ಕಳೆ ಬರುವವು. ಸ್ರಾವವು ತುಸು ಕರ್ರಗೂ, ವಿವರ್ಣವಾದದ್ದೂ ಇರುವದು. ಕೋಮಲಾಂತಃಕರಣವಿದ್ದ, ಮನಸ್ಸಿಗೆ ಹಚ್ಚಿಕೊಂಬುವಂಥ, ಯಾವದೇ ತಾಪ ಸಹನವಾಗದಂಥ, ಅಳದಕ್ಕಿ ಸ್ತ್ರೀಯರಿಗೆ ಇದು ಬಹಳ ಗುಣಕೊಡುವದು. ಜತೆಗೆ ಫೇರಂ. ಫಾ. ಕೊಡಬೇಕು.

**ಕಲ್ಕೆ ಫಾ:**— ಪಾಂಡುರೋಗಿ ಸ್ತ್ರೀಯರಿಗೆ ನಡುನಡುವೆ ಕೊಡಬೇಕು.

**ಕಾ. ಮ್ಯೂ:**— ಶೀತವಾದ್ದರಿಂದ ರಕ್ತ ಕರ್ರಗೂ, ಕೆಂಪೂ, ಇರುವದಾದರೆ.

**ಕಲ್ಕೆ. ಫ್ಲೂ:**— ಸಪೀಡಾರ್ತವ, ಗರ್ಭಾಶಯ ಕಠಿಣವಾದ್ದರಿಂದ.

**ಉಪಯುಕ್ತ ಸೂಚನೆ:**— ವೇದನೆ ಕಳೆಯುವದಾಗಿ ಮ್ಯಾ. ಫಾ. ಕೊಡಬೇಕು. ಅರ್ಧ ಬಟ್ಟಲತುಂಬ ನೀರಿನಲ್ಲಿ ೧೫ ಗ್ರೇನ ೩× ಶಕ್ತಿಯನ್ನು ಹಾಕಿ ಅದನ್ನು ಮೇಲಿಂದ ಮೇಲೆ ಒಂದೊಂದು ಗುಟುಕು ತೊಗೊಳ್ಳಬೇಕು. ಮ್ಯಾ. ಫಾ. ವನ್ನು ಎಸರುಬರುವ ನೀರಿನಲ್ಲಿ ಹಾಕಿ ಅದನ್ನು ಒಲೆಯಮೇಲೆ ಇಟ್ಟು ಅದರಲ್ಲಿ ಬಟ್ಟೆಯನ್ನು ಎದ್ದಿ ಅದನ್ನು ಹಿಂಡಿ ಅದರಿಂದ ಗರ್ಭಾಶಯಕ್ಕೆ ಕಾವು ಕೊಡಬೇಕು. ಬಹಳ ಬಿಸಿನೀರು ಕುಡಿದರೂ ಗುಣವಾಗುವದು. ಮುಟ್ಟಾಗುವ ಕಾಲಕ್ಕೆ ಮತ್ತೆ ಪೀಡೆಯಾಗಬಾರದೆಂದು ಯೋಚನೆಮಾಡಿದ ಔಷಧವನ್ನು ನಿತ್ಯ ತೊಗೊಳ್ಳಬೇಕು. ಬಹಳ ದಿವಸದ ಸಪೀಡಾರ್ತವದಲ್ಲಿ ಮುಟ್ಟಿನ ಕಾಲದ ಪೂರ್ವದಲ್ಲಿ ಪ್ರತಿಬಂಧಕ

ಪೆಂದು ಫೇ. ಫಾ. ಕೊಡಬೇಕು. ಮತ್ತು ಅದರ ಜತೆಗೆ ಕಾಲಿ. ಫಾ. ಪಸ್ನು ಮತ್ತು ನಡುನಡುವೆ ಸ್ವಲ್ಪ ದಿವಸ ಔಷಧ ಕೊಡುತ್ತಿದ್ದಲ್ಲಿ ರೋಗಿಯು ಬಹಳವಾಗಿ ನೆಟ್ಟಗಾಗುವನು ಎಂಬ ಅನುಭವವುಂಟು. ಇಂಥ ಸ್ತ್ರೀಯರಿಗೆ ಗರ್ಭಧಾರಣವಾಗುವದಿಲ್ಲ. ಶಸ್ತ್ರಕ್ರಿಯೆ ಸಹ ಮಾಡ ಬೇಕಾಗುವದು. ಆದರೆ ಜೀವನ ರಸಾಯನ ಔಷಧ ಬಿಟ್ಟುಬಿಡದೆ ಬಹು ದಿವಸ ತೊಗೊಂಡರೆ ಬೇನೆ ಹೋಗಿ ಗರ್ಭಧಾರಣೆಗೆ ಸಹಾಯವಾಗುವದು. ರೋಗಿಗೆ ಧೈರ್ಯ ಕೊಡಬೇಕು. ಹೆದರಗೊಡಬಾರದು. ಆಹಾರನಿದ್ರೆ ಮುಂತಾದ ವ್ಯವಹಾರನಿಯಮಿತ ಇರಬೇಕು. ಕೈಕಾಲು ಬೆಚ್ಚಗೆ ಇಡಬೇಕು. ಶೀತದಲ್ಲಿ ತಿರುಗಾಡಬಾರದು. ಅಪಚನವಾಗದಂಥ ಪೌಷ್ಟಿಕ ಅನ್ನ ಕೊಡಬೇಕು. "ಮುಟ್ಟು" ಎಂಬ ವಿವರ ನೋಡಿರಿ.

---

# ಸಂಧಿವಾತ

**Rheumatism.** **ರ್ಹ್ಯುಮಾಟಿಸಮ್.**

ಸಂಧಿವಾತವು ಸಂದುಗಳಲ್ಲಿಯೇ ಆಗುವದಲ್ಲದೆ ಅದು ಸ್ನಾಯು, ಅಸ್ಥಿ ಅವುಗಳ ಬಂಧನಗಳು, ಹೃದಯ, ಸಂದುಗಳಮೇಲಿನ ಆವರಣಗಳು ಮುಂತಾದವುಗಳಲ್ಲಿ ಸಹ ಆಗುವದುಂಟು. ಇದರಲ್ಲಿ ಎರಡು ವಿಧಗಳುಂಟು. ಶೀಘ್ರ ಮತ್ತು ದೀರ್ಘ (ಎಂದರೆ ಬಹಳ ದಿವಸದ್ದು) ಎಂಬ ೨ ಪ್ರಕಾರಗಳು. ಶೀಘ್ರ ಸಂಧಿವಾತದ ಭಾವನೆಗಳು ಕೆಳಗೆ ಬರೆದಂತೆ ಇರುವವು.

ಜ್ವರಬರುವದಕ್ಕಿಂತ ಮೊದಲು ೧।೨ ದಿವಸ ಕಿರಿನಾಲಗೆಯು ದಾಹ ಏರುವದು. ಮುಂದೆ ಜ್ವರ ಬರುವವು. ಅವು ಬಹಳವಾಗಿ ೧೦೨° ೧೦೪° ಅಂಶಗಳಕಿಂತ ಹೆಚ್ಚಾಗಿರುವವು. ಸಂದುಗಳು ಹಿಡಕೊಳ್ಳುವವು. ಅಲ್ಲಿ ಬಾವೂ ಕೆಂಪೂ ಇರುವವು. ಮತ್ತು ವೇದನೆಯೂ ಇರುವದು. ಮೂತ್ರವು ಕೆಂಬಣ್ಣದ್ದು ಇದ್ದು ಸ್ವಲ್ಪ ಸ್ವಲ್ಪ ಆಗುವದು. ನಾಲಗೆಯ ಮೇಲೆ ಅಗ್ರವಿರುವದು. ನಾಡಿಯು ತೀವ್ರವಿದ್ದು ತುಂಬಿದಂತೆ ಇರುವದು. ನಾಡಿಯ ಬಡೆತಗಳು ೧೦೦ರ ಕಿಂತ ಹೆಚ್ಚು ಇರುವವು. ಮೊದಲು ಮೊಳ

ಕಾಲು, ಮೊಳಕೈ, ಮುಂಗೈ, ಹೆಗಲು ಮುಂತಾದ ದೊಡ್ಡ ದೊಡ್ಡ ಸಂದುಗಳಲ್ಲಿ ನೋವು ಆರಂಭವಾಗುತ್ತದೆ. ಮುಂದೆ ಉಳಿದ ಸಂದುಗಳು ಸಹ ನೋಯಹತ್ತುವವು. ವೇದನೆ ಅಸಹ್ಯವಿರುವದು. ಕೈಕಾಲು ಅಲ್ಲಾಡಿಸಕೂಡದು. ಮುದಡಿಕೊಂಡು ಬೀಳಬೇಕಾಗುವದು. ಬೆವರಿಗೆ ಹುಳಿ ವಾಸನೆ ಇರುವದು. ಈ ಭಾವನೆ ಸಹಸಾ ಇತರ ರೋಗಗಳಲ್ಲಿ ಕಂಡುಬರುವದಿಲ್ಲ. ಸಣ್ಣ ಮಕ್ಕಳಿಗೆ ಆಗುವ ಸಂಧಿವಾತದಲ್ಲಿ ಸಹಸಾ ಹುಳಿವಾಸನೆ ಇರುವದಿಲ್ಲ. ಒಂದು ಸಂದಿನಿಂದ ಇನ್ನೊಂದು ಸಂದಿನಲ್ಲಿ ನೋವು ಸರಿಯೋಣ, ಅಲ್ಲಿ ಕೆಂಪಾಗುವದು ಹಾಗೂ ಬಾವೂ ಇರೋಣ, ಇವು ಈ ಬೇನೆಯ ವಿಶೇಷ ಲಕ್ಷಣಗಳು. ಒಮ್ಮೆ ಒಂದು ಸಂದು ಬಿಗಿಯುವದು ಮುಂದೆ ಮತ್ತೊಂದು ಬಿಗಿಯುವದು ಮೊದಲಿನದು ಸಡಿಲಾದ ನಂತರ ಎರಡನೇದು ಬಿಗಿಯುವದು ಮುಂದೆ ಪುನಃ ಮೊದಲಿನದು ಬಿಗಿಯುವದು. ಹೀಗೆ ಎಷ್ಟೋ ಸಂದುಗಳು ಬಿಗಿಯುವವು. ಸಂಧಿವಾತದ ವೇದನೆ ದಾಹಯುಕ್ತವೇ ಇರುವದು. ಆದರೆ ಅದರಲ್ಲಿ ಕೀವು ಆಗುವ ಅಂಜಿಕೆ ಇರುವದಿಲ್ಲ. ಸಂಧಿವಾತದಲ್ಲಿ ಪುಪ್ಪುಸ, ಮೆದುಳು, ಹೃದಯ, ಕಣ್ಣು ಮುಂತಾದವುಗಳ ಆವರಣದಲ್ಲಿ ಸಹ ದಾಹವಾಗುವದು. ಒಮ್ಮೆ ಸಂಧಿವಾತವಾಯಿತೆಂದರೆ ಅದು ಪುನಃ ಆಗುವ ಸಂಭವವಿರುವದು. ಇದರಲ್ಲಿ ಹೃದಯದಲ್ಲಿ ವ್ಯತ್ಯಾಸವಾಗಿ ಅದು ಸ್ಥಿರವಾಗಿ ಕೆಟ್ಟಿರುವ ಅಂಜಿಕೆ ಇರುವದು. ಈ ರೋಗವು ನೆಟ್ಟಗಾಗಲಿಕ್ಕೆ ಸಾಧಾರಣವಾಗಿ ೪–೫ ವಾರಗಳು ಬೇಕಾಗುವವು. ಪುನಃ ೧೫ ದಿವಸಗಳಲ್ಲಿಯೇ ಬರುವ ಸಂಭವವಿರುವದು.

ಶೀತ, ಥಂಡಿ, ತೇವವಿದ್ದ ಸ್ಥಳದಲ್ಲಿ ಮಲಗೋಣ– ಇವೇ ಮೊದಲಾದವು ಈ ರೋಗಕ್ಕೆ ಕಾರಣಗಳು. ಇದು ಆನುವಂಶಕವೂ ಇರುವದು. ಉಪದಂಶ ಮತ್ತು ಪ್ರಮೇಹ ಇವು ಸಹ ಇದರ ಕಾರಣಗಳಿರುವವು.

ಒಂದೆರಡು ಸಾರೆ ಶೀಘ್ರ ಸಂಧಿವಾತವಾದನಂತರ ಅದಕ್ಕೆ ದೀರ್ಘ ದಾಹದ ಸ್ವರೂಪವುಂಟಾಗುವದು. ಇದರಲ್ಲಿ ಜ್ವರವಿರುವದಿಲ್ಲ. ಸಂದು ತಾಟಿಸಿ ಇರುವವು. ಮುದುಡಲು ಬರಲಾರವು. ಅವುಗಳಲ್ಲಿ ಕರಕರವೆಂಬ ಸಪ್ಪಳಾಗುವದು. ಸಂದಿನಲ್ಲಿ ಬಾವು ಸ್ವಲ್ಪ ಹೆಚ್ಚು ಕಡಿಮೆ

ಇರುವದು. ಒಮ್ಮೊಮ್ಮೆ ಸ್ಪರ್ಶವೂ ಸಹಸವಾಗುವದಿಲ್ಲ. ಇತರ ವಿಷಯದಲ್ಲಿ ಪ್ರಕೃತಿಯು ಸಾಧಾರಣವಾಗಿ ಚನ್ನಾಗಿರುವದು. ಇದರಲ್ಲಿ ಶೀಘ್ರ ಸಂಧಿವಾತದಂತೆ ಹೃದಯದ ಮೇಲೂ ಮೂತ್ರಪಿಂಡದಮೇಲೂ ಪರಿಣಾಮವಾಗುವ ಪ್ರವೃತ್ತಿ ಇರುವದಿಲ್ಲ. ವೇದನೆ ಹೆಚ್ಚುಕಡಿಮೆ ಇರುವದು. ಮುಖಚರ್ಯೆಯು ಪಾಂಡುರೋಗವಿದ್ದವರಂತೆ ನಿಸ್ತೇಜ ವಿರುವದು. ಈ ರೋಗದಿಂದ ರೋಗಿಯು ಸಹಸಾ ಮರಣಹೊಂದುವದಿಲ್ಲ.

'ಅಂಗುಲಿವಾತ' ಮತ್ತು 'ಸಂಧಿವಾತ' ಇವುಗಳಲ್ಲಿಯ ಭೇದ ನಿದಾನ ಪ್ರಕರಣವನ್ನು ನೋಡಿರಿ.

**ಫೇ. ಫಾ:—** ಪ್ರಥಮಾವಸ್ಥೆಯಲ್ಲಿ ಯಾವದೇ ಭಾಗದಲ್ಲಿ ಪ್ರಬಲ ವಾತವು. ಮೈತುಂಬ ವೇದನೆ. ಅವು ಎದೆಯ ಮೇಲ್ಭಾಗದ ವರೆಗೆ ಹೋಗುವವು. ಒಂದು ಸಂದು ಹಿಡಿದ ನಂತರ ಎರಡನೇದು ಹಿಡಿಯುವದು. ತಾಟ ಆಗಿರುವದು. ಟೊಂಕಶೂಲೆ; ಅಲ್ಲಾಡಿದ್ದರಿಂದ ಕಳ (ವೇದನೆ) ಹೆಚ್ಚಾಗುವವು. ಕಾವು ಕೊಟ್ಟಲ್ಲಿ ಸಮಾಧಾನವಾಗುವದು. ಶೀತದಿಂದ ಕುತ್ತಿಗೆ ಜಗಿದಿದ್ದರೆ.

**ಕಾ. ಮೂ:—** ದ್ವಿತೀಯಾವಸ್ಥೆಯಲ್ಲಿ ಸ್ರಾವಾರಂಭವಾದನಂತರ ಬಾವು ಬಂದ ನಂತರ ಫೇ. ಫಾ. ಸರ್ತಿಮೇಲೆ ಕೊಡಬೇಕು. ನಾಲಗೆಯ ಮೇಲೆ ಬಿಳೀ ದಟ್ಟನ ಅಗ್ರ. ಅಲ್ಲಾಡಿದಲ್ಲಿ ಹೆಚ್ಚು. ಬಹುದಿವಸದ ಸಂಧಿವಾತ; ಬಾವು ಇರುವದು.

**ನೇ. ಫಾ:—** ಸಂದುಗಳು ಹಿಡಿದದ್ದಾದರೆ ಇದು ಪ್ರಮುಖ ಔಷಧವು. ಶೀಘ್ರ ಪರಿಣಾಮದ ಹಾಗೂ ಬಹುದಿವಸದ ಸಂಧಿವಾತ; ಮೈ ಸಟೆದದ್ದು. ಸಂದುಗಳೊಳಗೆ ಕರಕುರ ಸಪ್ಪಳ ಇದ್ದರೆ ಸಾಯಂಕಾಲದಲ್ಲಿ ಬೇನೆ ಹೆಚ್ಚು. ನಾಲಿಗೆಯ ಮೇಲೆ ಹಳದೀ ಅಗ್ರ. ಬೆವರು ಬಹಳ ಇದ್ದು ಅದಕ್ಕೆ ಹುಳಿನಾತವಿದ್ದರೆ.

**ಕಾ. ಸ:—** ಮೇಲಿಂದ ಮೇಲೆ ಸ್ಥಾನ ಬದಲಿಸುವಂಥ ವೇದನೆ; ಒಂದು ಭಾಗದಿಂದ ಇನ್ನೊಂದು ಭಾಗದಲ್ಲಿ ಕಳ ಒಮ್ಮಿಂದೊಮ್ಮೆ ಹೋಗುವವು. ಸಾಯುಂಕಾಲದಲ್ಲಿ ಬೆಚ್ಚನ ಖೋಲಿಯಲ್ಲಿ ಹೆಚ್ಚಾಗುವವು. ತಂಣನ

ಹವೆಯಲ್ಲಿ ಸಮಾಧಾನವಾಗುವದು. ಸಂಧಿವಾತ ಜನ್ಯ ತಲೆನೋವು. ಬೆನ್ನು ಕುತ್ತಿಗೆ, ಮತ್ತು ಇತರ ಅವಯುವಗಳಲ್ಲಿ ಮೇಲಿಂದಮೇಲೆ ಬದಲಿಸುವಂಥ ವೇದನೆ. ಪ್ರಾತಃ ಕಾಲದಲ್ಲಿಯು ೩ ಘಂಟೆಯಿಂದ ಏಳುವ ವರೆಗೆ ಸಂದುಗಳಲ್ಲಿ ನೋಯುತ್ತಿದ್ದರೆ ಇದರ ಉಪಯೋಗ ಬಹಳಾಗುವದು.

**ಕಾ. ಫಾ:**-- ಶೀಘ್ರ ಪರಿಣಾಮೀ ಅಥವಾ ಬಹುದಿವಸದ ಸಂಧಿ ವಾತ; ಮೈ ಸೆಟೆದಿದ್ದು. ಮಾಂದ್ಯ. ಎಳೆದಂತೆ ಭಾಸವಾಗುವ ವೇದನೆ; ಪ್ರಾತಃಕಾಲದಲ್ಲಿಯೂ ಅಲ್ಲಾಡಲಿಕ್ಕಾರಂಭವಾಗಲೂ ಕಳೆ ಬೆಳೆಯುತ್ತವೆ. ಅಲ್ಲಾಡುವದು ಆರಂಭವಾದನಂತರ ಕಡಿಮೆ ಆಗುವವು. ಬಹಳ ವೇಳೆ ಹಾಗೂ ಒಂದೇಸವನೆ ನಡೆದಾಡಿದಲ್ಲಿಯೂ ವೇದನೆ ಹೆಚ್ಚಾಗುವವು. ಗೃಧ್ರಸಿ ( Goitre ) ಅಸ್ವಸ್ಥತೆ ಬಹಳ ಇರುವದಾದರೆ ಗಲಿತವಾದಂತೆ ಭಾಸ. ಮಾನಸಿಕ. ದಣಿವಿಕೆ.

**ನೇ. ಮೂ:**— ಗಟ್ಟಿಯಾಗಿ ಮನೆಮಾಡಿಕೊಂಡಂಥ ಸಂಧಿವಾತ; ತಲೆ ಹಾಗೂ ಮೂಗಿನೊಳಗಿಂದ ಒಂದೇಸವನೆ ನೀರು ಸೋರುವದು, ಸಂದುಗಳು ಬಿಗಿಯುವದು, ಸಂದುಗಳಲ್ಲಿ ಕರಕರ ಸಪ್ಪಳ, ನಾಲಿಗೆಯು ಸ್ವಚ್ಛವಿದ್ದು ನೇಟ್ರಂ ಮೂ. ದ ಇತರ ಭಾವನೆಗಳು ಇದ್ದಲ್ಲಿ ಕಾಲಿ. ಮೂ. ನಂತರ ಕೊಡಬೇಕು.

**ವ್ಯಾ. ಫಾ:**— ಸಂದುಗಳಲ್ಲಿ ಜೋರಿನ ಹಾಗೂ ನಿಂತು ನಿಂತು ಬರುವಂಥ ವೇದನೆ ತರಂಗಗಳು ಕಳೆ ಭಯಂಕರವಿದ್ದು ಪ್ರಾಣಹರಣ ಮಾಡುವಂಥ ತೀವ್ರವಿರುವವು. ಸ್ವಲ್ಪ ಸ್ಪರ್ಶದಿಂದಲೂ ವೇದನೆ ಬಹಳಾಗುವದು. ಕಾವು ಕೊಟ್ಟಲ್ಲಿ ಅಥವಾ ಗಟ್ಟಿಯಾಗಿ ಒತ್ತಿದಲ್ಲಿ ಸಮಾಧಾನ ವಾಗುವದು. ಮುಖ್ಯ ಔಷಧದ ಜತೆಗೆ ಇದನ್ನು ಕೊಡಬೇಕು.

**ಕಲ್ಕೆ ಫಾ:**— ನಡುನಡುವೆ ಕೊಡಬೇಕು. ಉಷ್ಣವಿರಲಿ ಶೀತವಿರಲಿ ಹವೆ ಬದಲಿಸಿದ್ದರಿಂದ ಹಾಗೂ ರಾತ್ರಿಯಲ್ಲಿ ಅಂಗುಲಿವಾತದಲ್ಲಿ ವೇದನೆ ಹೆಚ್ಚಾಗುವದು. ಸಂದುಗಳಲ್ಲಿ ಜುಂಯಿ ಹಿಡಿದಂತೆಯೂ ಶೀತ ಸೇರಿ ದಂತೆಯೂ ಭಾಸವಾಗುವದು. ಚಳಿಯಿಂದ ಕುತ್ತಿಗೆ ಸೆಟೆದದ್ದು. ಫೇರಂ. ಫಾ. ದ ಜತೆಗೆ ಕೊಡಬೇಕು. ನೋವು ಇದ್ದು ಸಂದುಗಳಲ್ಲಿ ಇರುವು

ನಡೆದಂತೆ ಭಾಸ-ಟೊಂಕ ನೋವು ( ಫೇ. ಫಾ ). ಮೊಳಕಾಲಿನಲ್ಲಿಯೂ ತೊಡೆಯಲ್ಲಿಯೂ ಬಾವು ನೀತ ಸ್ಥಳದಲ್ಲಿ ಸರ್ವಾಂಗ ನೋವು.

**ನೇ. ಸ:—** ಹಳೇ ಅಂಗುಲಿ ವಾತದಲ್ಲಿ ( ಗಾವುಟ ) ಶೀಘ್ರ ಪರಿಣಾಮದ ರೋಗದಲ್ಲಿ ಫೇ. ಫಾ. ದ ಜತೆಗೆ ಸರ್ತೆಮೇಲೆ ಕೊಡಬೇಕು. ಕುತ್ತಿಗೆ, ಟೊಂಕ, ಸಂದುಗಳು ವಿಶೇಷತಃ ಬಟ್ಟುಗಳು, ತೊಡೆ ಇವುಗಳಲ್ಲಿ ಮುಂತಾದ ಸ್ಥಳಗಳಲ್ಲಿ ಹಾಗೂ ಶಟಿತವಿರುವದು. ಅಲ್ಲಾಡಿದ್ದರಿಂದಲೂ ಮಳೆಗಾಲಕ್ಕೂ ಹೆಚ್ಚಾಗುವದು. ಪೈತ್ತಿಕ ಭಾವನೆಗಳು ಇದ್ದರೆ ಇದರ ಉಪಯೋಗವಾಗುವದು. ರೋಗಿಯು ಮಾದಕ ಹಾಗೂ ಜಡ ಅನ್ನ ವರ್ಜಿಸಬೇಕು.

**ಕಲ್ಕೆ. ಫ್ಲೋ:—** ಮೇಲಿಂದಮೇಲೆ ಸಂಧಿವಾತವಾದ್ದರಿಂದ ಸಂದುಗಳು ದೊಡ್ಡವಾಗಿದ್ದರೆ ನೇಟ್ರಂ ಸಲ್ಫದ ಜತೆಗೆ ಸರ್ತೆಮೇಲೆ ಕೊಡಬೇಕು.

**ಉಪಯುಕ್ತ ಸೂಚನೆ:—** ಈ ಬೇನೆಯು ಎಲ್ಲರಿಗೆ ಪರಿಚಯವುಳ್ಳದು. ನಿತ್ಯದಲ್ಲಿ ಕಂಡು ಬರುವಂಥಾದ್ದು ಇರುವದು. ಅದು ಸಹಸ ತೀವ್ರ ನೆಟ್ಟಗಾಗುವ ಬೇನೆ ಅಲ್ಲ. ಬಹಳ ದಿವಸ ಬಿಟ್ಟು ಬಿಡದೆ ಔಷಧ ತೆಗೆದುಕೊಳ್ಳಬೇಕು. ನೋಯುತ್ತಿದ್ದ ಸಂದುಗಳಮೇಲೆ ಹತ್ತಿ ಮುಡಿಚಗಳಿಗಿಮಾಡಿ ಇಡಬೇಕು. ಉಣೆಯ ಬಟ್ಟೆ, ಹೊದಿಕೆ ಹೊದ್ದು ಕೊಂಡು ಸ್ವಸ್ಥ ಬಿದ್ದುಕೊಂಡು ಇರಬೇಕು. ಶೌಚಕ್ಕೆ ಸ್ವಚ್ಛವಾಗುವದಕ್ಕೋಸ್ಕರ ಗ್ಲಿಸರೀನದ ಪೀಕಳಿಯ ಉಪಯೋಗಮಾಡಬೇಕು. ಹಾಲಿನ ಹೊರ್ತು ಇತರ ಯಾವದೇ ಅನ್ನ ಕೊಡಗೂಡದು. ಜ್ವರವಿದ್ದರೆ ಸಾಪಿಯ ಅರಳು, ಸಾಬುದಾಣೆಯ ಗಂಜಿ ಮುಂತಾದ ತೆಳ್ಳನ ಅನ್ನ ಕೊಡಬೇಕು. ಕಾಲಕ್ಕೆ ಸರಿಯಾಗಿ ವ್ಯವಸ್ಥಿತ ರೀತಿಯಿಂದ ಔಷಧಕೊಟ್ಟಲ್ಲಿ, ಫೇ. ಫಾ. ನೇ. ಫಾ. ಕಾ. ಮೂ. ಇವುಗಳಿಂದಲೇ ಬೇನೆ ಹೋಗುವದು. ಆಮ್ಲತೆ ಹಾಗೂ ಸಂಧಿವಾತ ಇವುಗಳ ವಿಶೇಷ ಸಂಬಂಧವಿರಬೇಕೆಂದು ಕೆಲ ಡಾಕ್ಟರರ ಮತವಿದೆ. ಈ ಆಮ್ಲತೆಯನ್ನು ತೆಗೆದುಹಾಕಬೇಕಾದರೆ ಭಾಷನಾನುಸಾರವಾಗಿ ಯೋಚಿಸಿದ ಇತರ ಔಷಧದ ಜತೆಗೆ ನೇ. ಫಾ. ವನ್ನು ಅವಶ್ಯ ಕೊಡಬೇಕು.

---

## ಸನ್ನಿಪಾತ

Apoplex . ಎಪಾಪ್ಲೆಕ್ಸಿ.

ಮೆದುಳಿನಲ್ಲಿ ಒಮ್ಮಿಂದೊಮ್ಮೆ ರಕ್ತಸ್ರಾವವಾಗಿ ಅರಿವು ತಪ್ಪುವದು. ಅಲ್ಲಾಡುವದು ನಿಂತುಹೋಗುವದು. ರೋಗಿಯು ಸತ್ತಂತೆ ಬೀಳುವನು. ಶ್ವಾಸೋಚ್ಛಾಸವೂ ಹೃದಯ ಕ್ರಿಯೆಯೂ ಮಾತ್ರ ನಡೆದಿರುವವು. ಬಹಳ ವಾಗಿ ಈ ರೋಗವು ಒಮ್ಮಿಂದೊಮ್ಮೆ ಆಗುವದು. ಒಮ್ಮೊಮ್ಮೆ ತಲೆ ನೋವು, ಚಿತ್ತ ಭ್ರಮ ಮುಂತಾದ ಪೂರ್ವ ಲಕ್ಷಣಗಳೂ ಕಂಡುಬರುವವು. ಇವುಗಳ ಸಂಗಡವೇ ಮೂಗು ಬಿಚ್ಚುವದು, ಸ್ಮರಣಶಕ್ತಿ ಮಂದವಾಗೋಣ ಒಂದೇಸವನೆ ಮಲಗಿಕೊಳ್ಳುವ ಇಚ್ಛೆ. ನಿದ್ರಾತಿಶಯ. ಗಾಢ ನಿದ್ರೆ ಹತ್ತಿದರೂ ರೋಗಿಯು ಗುರಿಕೆಹಾಕುತ್ತಿರುವನು, ನಿದ್ದೆಯಲ್ಲಿ ಕೆಟ್ಟ ಸ್ವಪ್ನ ಬೀಳೋಣ. ಆಕಳಿಕೆ ಬಹಳ ಬರೋಣ, ಹಲ್ಲು ಕಟಕರಿಸೋಣ, ಕಂಣಿನ ತಿರಗಳು ಉಬ್ಬಿದಂತಿರೋಣ, ಶಬ್ದೋಚ್ಚಾರ ಜಡವಾಗೋಣ. ಉದ್ವಿಗ್ನತೆ, ಸ್ವಲ್ಪ ಶ್ರಮದಿಂದ ದಣಿವಿಕೆ. ಶಕ್ತಿ ಹೀನತೆಯ ಭಾಸ. ಮುಂತಾದ ಲಕ್ಷಣಗಳು ಕಂಡುಬರುವವು. ಈ ಪೂರ್ವ ಲಕ್ಷಣಗಳನ್ನು ಲಕ್ಷದಲ್ಲಿ ತಂದು ಕಾಲಕ್ಕೆ ಸರಿಯಾಗಿ ಉಪಚಾರ ಮಾಡಿದಲ್ಲಿ ಮುಂದಾಗುವ ಅರಿಷ್ಟವು ತಪ್ಪುವದು. ಈ ಪೂರ್ವ ಲಕ್ಷಣಗಳಿಲ್ಲದೆ ಮೇಲೆ ಹೇಳಿದಂತೆ ರೋಗಿಯು ಅರಿವು ತಪ್ಪಿ ಪ್ರೇತವತ್ ಬೀಳುವನು. ಆರಂಭದಲ್ಲಿ ಮೈಯು ಶಿಟಿಯು ವದು. ಶ್ವಾಸವನ್ನು ಕಷ್ಟವಿಲ್ಲದೆ ಬಿಡಲಾರ. ಕೈಕಾಲು ತೀರ ಗಲಿತ ವಾಗುವವು. ಅವುಗಳನ್ನು ಅಲ್ಲಾಡಿಸಲಾರ. ಒಂದೊಂದು ಶಬ್ದ ಉಚ್ಚಾರ ವಾದರೆ ಅದು ಸಹ ಬಹುಕಷ್ಟದಿಂದ ಬಹಳಮಾಡಿ ಬಾಯಿಂದ ಶಬ್ದವೇ ಹೊರಡುವದಿಲ್ಲ. ಮುಖಚರ್ಯೆಯು ಕೆಂಪಗೆ ಕರೆ ನೀಲವರ್ಣದ್ದಾಗಲಿ ಬಾತಂತೆಯೂ ಇರುವದು. ಬಾಯಿಯಿಂದ ಬುರುಗು ಸಹ ಹೊರಡುವದು. ಶ್ವಾಸೋಚ್ಛ್ವಾಸವು ಮಂದವಿದ್ದು ಘುರುಘುರು ಸಪ್ಪಳವೂ ಇರುವದು. ಒಂದೆರಡು ದಿವಸ ರೋಗಿಯು ನಿಶ್ಚೇಷ್ಟವಾಗಿ ಬಿದ್ದುಕೊಂಡಿರುವನು. ಮಲಮೂತ್ರ ವಿಸರ್ಜನವಾಗುವದಿಲ್ಲ. ಮೈ ತಂಣಗಾಗುವದು. ಒಮ್ಮೊಮ್ಮೆ ಅಂಥ ಸ್ಥಿತಿಯಲ್ಲಿಯೇ ಬಿದ್ದುಕೊಂಡು ಮರಣಹೊಂದುವನು. ಇಲ್ಲವೆ ಸಾವಕಾಶವಾಗಿ ಅರಿವು ಬರುವದು. ಒಮ್ಮೊಮ್ಮೆ ಅರ್ಧಾಂಗ ವಾಯು

ಸಹ ಆಗುವದು ರಕ್ತ ಸ್ರಾವವು ಒಮ್ಮೆಲೆ ಹೆಚ್ಚು ಆದಲ್ಲಿ ಪುನಃ ಅರಿವು ತಪ್ಪುವದು. ರಕ್ತಸ್ರಾವ ಕಡಿಮೆ ಇದ್ದರೆ ಅರಿವು ತಪ್ಪದೆ ಅರ್ಧಾಂಗ ವಾಯುವೂ ಆಗುವದುಂಟು.

ಅನ್ನವು ಗಂಟಲದಲ್ಲಿ ಇಳಿಯದಿರೋಣ, ಶ್ವಾಸೋಚ್ಛ್ವಾಸಕ್ಕೆ ಕಷ್ಟ, ಅರಿವುತಪ್ಪೋಣ, ಇವು ಶುಭಲಕ್ಷಣಗಳೆಂದು ತಿಳಿಯಬೇಕು. ಸ್ತ್ರೀಯರಿಗಿಂತ ಗಂಡಸರಲ್ಲೇ ಈ ರೋಗವು ಹೆಚ್ಚಾಗಿ ಕಂಡುಬರುವದು. ಮೂತ್ರಪಿಂಡ, ಹೃದಯ, ರಕ್ತವಾಹಿನಿ ಇವುಗಳ ರೋಗ, ಸರಾಯಿ, ಹೊಗೆಸೊಪ್ಪು ಮುಂತಾದವುಗಳ ಅತಿರಿಕ್ತ ಸೇವನ, ಬಿಸಲಿನಲ್ಲಿ ಕೆಲಸ ಮಾಡುವದು, ತಿಣಕುವದು, ಸಿಟ್ಟು ಬಹಳ ಬಂದು ಮೆದುಳಿನಲ್ಲಿ ರಕ್ತ ಸಂಚಯಾತಿರೇಕ ಇವೇ ಇದರ ಕಾರಣಗಳು.

**ಫೇ. ಫಾ**: -- ಈ ರೋಗದಲ್ಲಿಯ ಪ್ರಮುಖ ಔಷಧ. ಇದರಿಂದ ರಕ್ತ ಸಂಚಯ ನಿಲ್ಲುವದು. ಮುಖಚರ್ಯೆ, ಕೆಂಪು, ಕರ್‍ರಗೆ, ನೀಲ, ಅಥವಾ ನಿಸ್ತೇಜ ಕುತ್ತಿಗೆಯ ಮೇಲಿನ ಹಾಗೂ ತಲೆಯಮೇಲಿನ ನಾಡಿಗಳೂ ಧಮನಿಗಳೂ ಉಬ್ಬಿದ್ದು ಇದ್ದು ಒಂದೇಸವನೆ ಹಾರುತ್ತಿರುವವು. ಮೂರ್ಛೆಯು ಬರುವದನ್ನು ತಪ್ಪಿಸಲಿಕ್ಕೂ ಬಂದರೆ ತೀವ್ರವಾಗಿ ನೆಟ್ಟಗೆ ಮಾಡುವ ಸಾಮರ್ಥ್ಯ ಈ ಔಷಧದಲ್ಲಿದೆ.

**ಕಲ್ಕೆ. ಫಾ:**— ಈ ರೋಗದ ಮೇಲಿನ ಪ್ರಮುಖ ಔಷಧವಿದು. ಇದರಿಂದ ರಕ್ತಸಂಚಯವಾಗುವದು ನಿಲ್ಲುವದು. ಧಮನಿ ಒಡೆದು ರಕ್ತ ಹೋಗುತ್ತಿದ್ದರೆ ಅದನ್ನು ನಿಲ್ಲಿಸುವದು. ಮುಖಚರ್ಯೆಯು ಕೆಂಪು, ಕರೇದು, ನೀಲವರ್ಣದ್ದು ಇಲ್ಲವೆ ನಿಸ್ತೇಜನವಿರುವದು. ಕುತ್ತಿಗೆಯ ಮೇಲಿನ ಹಾಗೂ ತಲೆಯಮೇಲಿನ ನಾಡಿಗಳೂ ಧಮನಿಗಳೂ ಉಬ್ಬಿದಂತಿದ್ದು ಒಂದೇಸವನೆ ಹಾರುತ್ತಿರುವವು. ಮೂರ್ಛೆ ಬರಲು ನಿಲ್ಲಿಸುವ ಹಾಗೂ ಬಂದರೆ ಅದನ್ನು ನೆಟ್ಟಗೆಮಾಡುವ ಸಾಮರ್ಥ್ಯ ಇದರಲ್ಲಿ ಉಂಟು.

**ಕಲ್ಕೆ. ಫ್ಲೊ:**— ಫೇ. ಫಾ. ದ ಜತೆಗೆ ಕೊಡಬೇಕು. ರಕ್ತವಾಹಿನಿಗಳನ್ನು ಆಕುಂಚನಮಾಡುವ ಸಾಮರ್ಥ್ಯ ಇದರಲ್ಲಿ ಅದೆ. ರೋಗದ ಆರಂಭಾವಸ್ಥೆಯಲ್ಲಿ ಕೊಟ್ಟಲ್ಲಿ ಮುಂದಿನ ಗಂಡಾಂತರ ತಪ್ಪುವದು.

**ಮ್ಯಾ. ಫಾ:—** ಮೂರ್ಛೆ ಬಂದು ಸ್ನಾಯುಗಳಲ್ಲಿ ಬಹು ಬಲದ ಒಟ್ಟಿಗಳು ಬರುವದಾದರೆ ಇದರ ಉಪಯೋಗವಾಗುವದು. ಜತೆಗೆ ಫೇ. ಫಾ. ವನ್ನು ಕೊಡಬೇಕು.

**ಕಾ. ಫಾ:—** ಮೂರ್ಛೆಬರುವ ಪೂರ್ವದಲ್ಲಿ, ಹಾಗೂ ಮೂರ್ಛೆ ಬಂದಾಗ್ಗೆ ಸಹ ಸಿಡ್ಸೆಗೇಡು. ಇದ್ದಲ್ಲಿ ಅರ್ಧಾಂಗವಾಯುದ ಲಕ್ಷಣಗಳೂ ಇತರ ಮಾನಸಿಕ ಕಷ್ಟವೂ ಇದ್ದಲ್ಲಿ ಇದರ ಉಪಯೋಗವಾಗುವದು. ಫೇರಂ ಫಾ. ದ ಜತೆಗೆ ಕೊಡಬೇಕು.

**ನೇ. ಸ:—** ಮೂರ್ಛೆ ಬರುವ ಪೂರ್ವದಲ್ಲಿ ತಲೆಯ ಕಡೆಗೆ ರಕ್ತದ ಪ್ರವಾಹವಿದ್ದರೆ ಅಥವಾ ಪೈತ್ತಿಕ ಭಾವನೆ ಇದ್ದರೆ ಉಪಯೋಗಬೀಳುವದು.

**ಉಪಯುಕ್ತ ಸೂಚನೆ :—** ರೋಗಿಯು ತಲೆಯು ಸ್ವಲ್ಪ ಎತ್ತರಿಸಿ ಮತ್ತು ಕೈಕಾಲು ಉದ್ದಮಾಡಿ ತಂಪಾದ ಸ್ಥಳದಲ್ಲಿ ಮಲಗಬೇಕು. ಕುತ್ತಿಗೆಯ ಸುತ್ತುಮುತ್ತಲು ಇದ್ದ ಬಟ್ಟೆಗಳನ್ನು ತೆಗೆದುಬಿಡಬೇಕು. ಸ್ವಚ್ಛ ಬೈಲ ಹವೆ ಯಥೇಚ್ಛ ಬರಗೊಡಬೇಕು. ಕಾಲುಗಳನ್ನು ಬಿಸಿ ನೀರಿನಲ್ಲಿ ಇಡಬೇಕು. ಇಲ್ಲವೆ ಕಾಲು ಜೋರಿನಿಂದ ತಿಕ್ಕಬೇಕು. ಕಾಲಿನ ಕಡೆಗೆ ರಕ್ತ ಇಳಿಯುವಂತೆ ಉಪಚಾರ ಮಾಡಬೇಕು. ತಲೆಗೆ ಕಾವು ಕೊಡಬೇಕು. ತೀರ ಹಗುರ ಹಾಗೂ ಸುಲಭರೀತಿಯಿಂದ ಪಚನವಾಗು ವಂಥ ಅನ್ನ ಸ್ವಲ್ಪ ಸ್ವಲ್ಪ ಕೊಡಬೇಕು. ಔಷಧ ಮಾತ್ರ ೫-೫-೧೦-೧೦ ಮಿನಿಟಿಗೊಮ್ಮೆಯಂತೆ ಕೊಡಬೇಕು. ಈ ರೋಗ ಮೇಲಿಂದಮೇಲೆ ಆಗುವವರು ಮಾದಕ ಅನ್ನ, ಪೇಯಗಳನ್ನೂ ಅಜೀರ್ಣವಾಗುವಂಥ ಅನ್ನ ವನ್ನೂ ವರ್ಜಮಾಡಬೇಕು. ಬಿಸಿಲಿನಲ್ಲಿ ತಿರುಗಾಡಬಾರದು. ಮನಃ ಕ್ಷೋಭವಾಗುವಂಥ ಯಾವದೇ ಕೃತ್ಯಮಾಡಬಾರದು.

---

# ಮೊಲೆಹುಣ್ಣು

**Mastitis.** **ಮ್ಯಾಸ್ಟಾಯ್ಟಿಸ್.**

ಸ್ತನಗಳಲ್ಲಿ ಬಾವೂ, ಕೆಂಪೂ, ವೇದನೆಯೂ ಇರುವವು. ಸ್ತನಗಳು ಬಿರುಸಾಗಿರುವವು. ಹಾಗೂ ಹುಣ್ಣು ಆಗುವ ಇತರ ಲಕ್ಷಣಗಳೂ

ಇರುವವು. ಯಾವದಾದರೂ ಭಾಗವು ಒಡೆದು ಅಲ್ಲಿಂದ ಕೀವು ಬರಲಾರಂಭಿಸುವದು ಮತ್ತು ಇತರ ಭಾಗವು ಕಠಿಣವೂ ಕೆಂಪೂ ಇರುವವು. ಅಲ್ಲಲ್ಲೆ ಗಟ್ಟಿ ಗಂಟುಗಳು ಕಾಣುವವು. ಹೊಟ್ಟೆಗೆ ಕುಡಿಯುವಂಥ ಸ್ತ್ರೀಯರಿಗೆ ಬಹುತರವಾಗಿ ಈ ರೋಗವಾಗುವದು. ಸ್ತನದಲ್ಲಿ ಹಾಲು ಹೆಚ್ಚಾಗಿ ಉಳಿಯುವದೇ ಇದರ ಕಾರಣ. ಪೆಟ್ಟು ತಗಲೋಣ ಇಲ್ಲವೆ ಚಳಿ, ಶೀತ, ಇವುಗಳಿಂದ ಸಹ ಇದು ಆಗಬಹುದು. ಭಾವನಾನುಸಾರವಾಗಿ "ಹುಣ್ಣು" ಎಂಬ ವಿವರ ನೋಡಿರಿ.

**ಉಪಯುಕ್ತ ಸೂಚನೆ:—** ಸ್ತನಗಳಲ್ಲಿ ಸಾಕಷ್ಟಕ್ಕಿಂತ ಹೆಚ್ಚು ಹಾಲು ಉಳಿದರೆ ಹೆಚ್ಚಿನ ಹಾಲು ತೆಗೆದುಹಾಕುವ ಪ್ರಯತ್ನಮಾಡಬೇಕು. ಆ ಕಾಲಕ್ಕೆ ಕಾ. ಮ್ಯೂ. ಕೊಡಬೇಕು. ಇದರಿಂದ ಬಾವು ಇಲ್ಲದಾಗುವದು. ಫೇ. ಫಾ. ದ ಜತೆಗೆ ಇದನ್ನು ಕೊಟ್ಟರೆ ದಾಹದ ಭಾವನೆಗಳೂ ಇಲ್ಲದಾಗಿ ಹುಣ್ಣು ಮಾಡುವ ಪ್ರಸಂಗವೇ ಬರುವದಿಲ್ಲ. ಕೀವು ಆದಲ್ಲಿ ಸಿ. ಕೊಡಬೇಕು. ಅವಶ್ಯವಿದ್ದಲ್ಲಿ ಕಲ್ಕೆ. ಸ. ದಿಂದ ಕಾರ್ಯವಾಗುವದು. ಸ್ತನಗಳಲ್ಲಿ ಗಟ್ಟಿ ಗಂಟುಗಳು ಇದ್ದಲ್ಲಿ ಕಲ್ಕೆ. ಫ್ಲೂದ ಉಪಯೋಗವಾಗುವದು. ಸ್ತನಗಳ ಚೂಚುಕಗಳ ಮೇಲೆ ಕೊರಕಲ, ಬಿರುಕು ಬಿದ್ದಿದ್ದರೆ ಸಿ. ಕೊಡಬೇಕು. ಕೊಳೆಯುವದು ನಿಲ್ಲಿಸಬೇಕಾದರೆ ಸಿಲಿಕಾದ ಉಪಯೋಗವಾಗುವದು. ಸ್ತನಗಳಲ್ಲಿ ಉರುವು, ಕಠಿಣತೆ, ನೋವು ಇದ್ದಲ್ಲಿ ಕಲ್ಕೆ. ಫಾ. ದ ಉಪಯೋಗವಾಗುವದು. ಸ್ತನಗಳನ್ನು ವಿನಾಕಾರಣ ಹಿಂಡಬಾರದು. ಅನ್ನವು ಹಗುರು ಹಾಗೂ ಸಹಜ ಪಚನವಾಗುವಂಥಾದ್ದು ಇರಬೇಕು. ಹೊಟ್ಟೆಯಲ್ಲಿ ಕೊಡಲು ಯೋಜಿಸಿದ ಔಷಧ ಮೇಲಿಂದ ಸಹ ಲೇಪ ಮಾಡಬೇಕು.

---

## ಸ್ರಾವ

**Exudations** ಎಗ್ಝ್ಯುಡೇಶನ್ಸ.

ಬೇರೆ ಬೇರೆ ಶೀತದಿಂದಾಗುವ ದಾಹಜನ್ಯ ರೋಗದಲ್ಲಿ (ಕಫ, ಪ್ರದರ, ಸಿಂಬಳ, ಕಜ್ಜಿ, ಕೀವು ಮುಂತಾದವು) ಹಾಗೂ ವ್ರಣದಿಂದಲೂ

ಹೊರಡತಕ್ಕ ಸ್ರಾವದ ಲಕ್ಷಣಗಳನ್ನು ನೋಡಿಕೊಂಡು ಅವುಗಳಿಗನುಸರಿಸಿ ಔಷಧ ಯೋಜಿಸತಕ್ಕ ಅವಶ್ಯಕತೆಯುಂಟು. ಬೇರೆ ಬೇರೆ ವಿವರಗಳ ಕೆಳಗೆ ಇದರ ವಿವೇಚನವಮಾಡಿಯೇ ಇದೆ. ಔಷಧ ಯೋಜನೆಯ ದೃಷ್ಟಿಯಿಂದ ಅದು ಅವಶ್ಯಕವಿದ್ದದರಿಂದ ಇಲ್ಲಿ ಒಂದೇ ಸ್ಥಳದಲ್ಲಿ ಕೊಟ್ಟಿದೆ. ಸ್ರಾವವು ಎಲ್ಲಿಂದ ಬಂದರೂ ಅದರಿಂದ ಔಷಧ ಆರಿಸುವದರಲ್ಲಿ ಅದರ ದೇನೂ ಪ್ರತಿಬಂಧವಿಲ್ಲ. ಸ್ರಾವದ ಬಣ್ಣ, ರೂಪ, ಮುಂತಾದವು ಕೂಡಿ ದರೆ ಔಷಧ ಯೋಜನೆ ಮಾಡಲು ಅಡ್ಡಿಬರಲಾರದು. ಹೊಟ್ಟೆಯಲ್ಲಿ ಕೊಡ ತಕ್ಕ ಔಷಧವನ್ನು ಹೊರಗಿನಿಂದ ಲೇಪದಂತೆಯೂ ಉಪಯೋಗಿಸಬೇಕು.

**ಕಾಲೀ ಮೂ:**— ಸ್ರಾವವು ದಟ್ಟ, ಬಿಳೀ, ಹಳದಿ, ಅಥವಾ ಬಿಳೀ ಹಳದಿ ಕೂಡಿದ್ದು, ಉರುಪು ಇಲ್ಲದ್ದು.

**ಕಲ್ಕೆ. ಫಾ:**— ತತ್ತಿಯಲ್ಲಿಯ ಲೋಳೆಯಂಥ ಸ್ವಚ್ಛ, ಬಿಳೀ, ಸ್ರಾವ.

**ಕಲ್ಕೆ. ಫ್ಲೋ:**— ಹಳದಿ, ಸಣ್ಣ ಸಣ್ಣ, ಜಿಗಟು ಗಂಟುಗಳು ಸ್ರಾವ ದೊಳಗಿಂದ ಹೋಗುತ್ತಿದ್ದಲ್ಲಿ ವಿಶೇಷತಃ ಕೆಮ್ಮಿನಲ್ಲಿ.

**ಕಾ. ಸ:**— ಹಳದಿ, ಜಿಗಟು ತೆಳ್ಳನ ಸ್ರಾವ; ಹಸರು, ತೆಳ್ಳಗಿನ ಸ್ರಾವದ ಮೇಲೆಯೂ ಇದರ ಉಪಯೋಗವಾಗುವದು.

**ನೇ. ಫಾ:**— ಬಂಗಾರದಂಥ ಹಳದಿ ಕೆನೆಯಂಥ ಸ್ರಾವ.

**ನೇ. ಮೂ:**— ಸ್ವಚ್ಛ ಪಾರದರ್ಶಕ, ನೀರಿನಂಥ ತೆಳ್ಳನ ಸ್ರಾವ.

**ಕಲ್ಕೆ. ಸ:**— ದಟ್ಟ, ಹಳದಿ, ಹಾಗೂ ಒಮ್ಮೊಮ್ಮೆ ರಕ್ತ ಸಹ ಇರುವಂಥ ಸ್ರಾವ.

**ಸಿ:**— ದಟ್ಟ, ಹಳದಿ, ದುರ್ಗಂಧ ಸ್ರಾವ.

**ನೇ. ಸ:**— ತೆಳ್ಳನ, ಹಳದಿ, ಹಸರು ಸ್ರಾವ.

**ಕಾಲೀ. ಫಾ:**— ಬಹು ದುರ್ಗಂಧ ಹೊಲಸು ಸ್ರಾವ. ಸ್ರಾವ ಹೋಗುವ ಭಾಗದಲ್ಲಿ ಉರುಪು ಹುಟ್ಟಿಸುವಂಥ ಸ್ರಾವವಿದ್ದಲ್ಲಿ ನೇ. ಮೂ. ಮತ್ತು ಕಾಲೀಸ. ದ ಉಪಯೋಗವಾಗುವದು.

---

# ಸ್ವಪ್ನಾವಸ್ಥೆ

ಸ್ವಪ್ನಾವಸ್ಥೆ ಅಂದರೆ ನಿದ್ರೆಯಲ್ಲಿ ರೇತಸ್ಖಲನವೇ ಸರಿ. ರೇತಸ್ಖಲನವು ನಿದ್ರೆಯಲ್ಲಿಯೇ ತಿಳಿಯದೆ ಆಗುತ್ತದೆ. ಹೀಗೆ ಅಲ್ಲದೆ ಜಾಗ್ರತಾವಸ್ಥೆಯಲ್ಲಿ ಸಹ ಮೂತ್ರದ ಸಂಗಡವೂ ಸ್ತ್ರೀಸಂಗದ ಸಂಬಂಧದಿಂದ ಮನೋವಿಕಾರದ ಪ್ರಾಬಲ್ಯವಾದಲ್ಲಿಯೂ ಸಹ ರೇತಸ್ಖಲನವಾಗುವದು. ಮೂತ್ರ ಮಾಡುವಾಗ ಪ್ರಾರಂಭದಲ್ಲಿಯೂ ಮೂತ್ರವಾದ ನಂತರವೂ ರೇತಸ್ಖಲನವಾಗುವದು. ಮಲಾವರೋಧವಾದಲ್ಲಿಯೂ ತಿಣಕುವಾಗ ಸಹ ಆಗುವದುಂಟು. ವಿಷಯ ಸುಖದ ಕತೆಗಳನ್ನು ಮನಸ್ಸಿನಲ್ಲಿ ತರುವದರಿಂದಲೂ, ಅಂಥ ಕಾದಂಬರಿ ಮುಂತಾದ ಗ್ರಂಥಗಳನ್ನು ಓದುವದರಿಂದಲೂ ರೇತಃಸ್ರಾವವಾಗುವದು. ತರುಣ ವಯಸ್ಸಿನಲ್ಲಿ ೮।೧೫ ದಿವಸದ ಅವಧಿಯ ನಂತರವೂ ಸ್ವಪ್ನಾವಸ್ಥೆ ಆಗುವದು ಸ್ವಾಭಾವಿಕ ಮಾತು. ಆದರೆ ಮೇಲಿಂದ ಮೇಲೆ ರೇತಸ್ಖಲನವಾಗುವದು ರೋಗವು. ವಿದ್ಯಾರ್ಥಿಗಳಲ್ಲಿ ಈ ರೋಗವು ಹೆಚ್ಚಾಗಿ ಕಂಡುಬರುವದು. ವಿಧುರರಿಗೂ ಇದು ಆಗುವದು. ಇದರಿಂದ ಮನಸ್ಸಿನ ಮೇಲೆ ಕೆಟ್ಟ ಪರಿಣಾಮವಾಗುವದು. ಮುಷ್ಟಿಮೈಥುನವೆಂಬ ವಿವರ ನೋಡಿರಿ.

**ನೇ. ಫಾ**:— ಆಮ್ಲಪಿತ್ತದ ಭಾವನೆಗಳಿದ್ದು ವೀರ್ಯಸ್ಖಲನ; ದಿನಾಲು ರಾತ್ರಿ ಸ್ವಪ್ನಾವಸ್ಥೆ. ಕಾಮೇಚ್ಛೆ ತೀರ ಸಪ್ಪವಾಗಿರುವದು. ನೀರಿನಂತೆ ತಿಳಿ ಶುಕ್ರ ವೀರ್ಯನಾಶದ ಮೂಲಕ ದಣಿವಿಕೆ ಅಥವಾ ಕಂಪ.

**ಕಾ. ಫಾ**:— ಕೆಟ್ಟ ಚಟಗಳ ಮೂಲಕ ವೀರ್ಯಸ್ಖಲನವಾಗುತ್ತಿದ್ದರೆ ಪ್ರಬಲ ಕಾಮೇಚ್ಛೆಯ ಮೂಲಕ ಆಗುವ ದುಷ್ಪರಿಣಾಮ. ನಪುಂಸಕತ್ವ, ಮೈಥುನದ ನಂತರ ದಣಿವಿಕೆಯೂ ಅಶಕ್ತತೆಯೂ ನಿಗ್ರಹದಿಂದ ದುಷ್ಟ ಚಟದ ತ್ಯಾಗ ಮಾಡಬೇಕು.

**ಕಲ್ಕೆ. ಫಾ**:— ಸರ್ವಸಾಧಾರಣ ಅಶಕ್ತತೆ; ತರುಣ ವಯಸ್ಸಿನಲ್ಲಿ ಮುಷ್ಟಿಮೈಥುನದ ಪ್ರವೃತ್ತಿ ರೇತಃಸ್ಖಲನ.

**ಮ್ಯಾ. ಫಾ**:— ಧಾತು ಕ್ಷಯದ ಮೂಲಕ ಅಪಸ್ಮಾರದ ಶಿಡತಗಳು ಬರಹತ್ತಿದರೆ ಇದು ಒಳ್ಳೇ ಗುಣಕರವು.

**ನೇ. ಮೂ:—** ಮೂತ್ರದಿಂದ ಅಕ್ಕಿಕಚ್ಚಿನಂಥ ಬಿಳೇ ಪದಾರ್ಥ ಹೋಗೋಣ. ರೇತಃಸ್ಖಲನದ ನಂತರ ಬರುವ ಮಾಂದ್ಯ. ಮೈಮೇಲೆ ಮುಳ್ಳು ಒರುವವು. ಮೈಥುನದ ಇಚ್ಛೆ ಬೆಳೆಯುವದು. ನಪುಂಸಕತ್ವ.

**ಕಲ್ಕೆ. ಫ್ಲೂ:—** ಇಂದ್ರಿಯದಿಂದ ಹನಿ ಹನಿ ವೀರ್ಯ ಹೋಗುತ್ತಿರುವದು. ಅಂಡಾಶಯವು ಆಕುಂಚಿತವಾದ್ದು ಇರುವದು.

**ಸಿ:—** ಸ್ತ್ರೀ ಸಂಭೋಗದ ಸಂಬಂಧದಿಂದ ಒಂದೇಸವನೆ ವಿಚಾರ ಬರುತ್ತಿರುವವು. ಒಮ್ಮೊಮ್ಮೆ ಸ್ವಪ್ನಾವಸ್ಥೆಯೂ ಆಗುವದು. ಸಂಭೋಗದ ಇಚ್ಛೆ ಮಿತಿಮೀರಿದ್ದು.

**ಉಪಯುಕ್ತ ಸೂಚನೆ:—** ಬಹಳ ದಿವಸ ಔಷಧದ ಅವಶ್ಯಕತೆ ಇರುವದು. ಮುಷ್ಟಿಮೈಥುನದಂಥ ದುಷ್ಟ ವ್ಯಸನಗಳನ್ನು ನಿಗ್ರಹ ಮತ್ತು ನಿಷ್ಠುರ ಮನಸ್ಸಿನಿಂದ ತ್ಯಾಗಮಾಡದಿದ್ದರೆ ಔಷಧದ ಉಪಯೋಗ ವಾಗಲಾರದು. ರಾತ್ರಿಯಲ್ಲಿ ಅಜೀರ್ಣವಾಗುವಂತೆ ತಿನ್ನಬಾರದು. ಧರ್ಮಪರ ಹಾಗೂ ನೀತಿಪರ ವಾಚನ ಮುಂತಾದವುಗಳಲ್ಲಿ ಮನಸ್ಸು ಇಟ್ಟು ಮೈಥುನದ ವಿಚಾರ ಸಹ ಮನಸ್ಸಿನಲ್ಲಿ ತರಬಾರದು. ಶೃಂಗಾರಯುಕ್ತ ಕಾದಂಬರಿ ಗ್ರಂಥಗಳನ್ನೂ ನಾಟಕಾದಿಗಳನ್ನೂ ಸಿನೆಮಾ ಮುಂತಾದವುಗಳನ್ನೂ ವರ್ಜ್ಯಮಾಡಬೇಕು. ಏಕಾಂತ ಪ್ರಿಯತೆಯನ್ನು ಬಿಡಬೇಕು. ವ್ಯಾಯಾಮ ಯಥೇಷ್ಟ ಮಾಡಬೇಕು. ತಂಣೀರಿನಿಂದ ಸ್ನಾನಮಾಡಬೇಕು.

---

## ಹಸ್ತಕಂಪ

**Writer's Cramp.** **ರಾಯ್ಟರ್ಸ ಕ್ರ್ಯಾಂಪ.**

ಲೇಖಕರಿಗೂ, ತಂತುವಾದ್ಯ ಬಾರಿಸುವ ಜನರಿಗೂ ಈ ರೋಗ ವಾಗುವದು. ಸ್ವಲ್ಪ ವೇಳೆ ಬರೆದನಂತರ ಬೊಟ್ಟುಗಳು ಸಟೆಯುವವು. ಮುಂದೆ ಒರೆಯಲು ಬರುವದಿಲ್ಲ. ಒಮ್ಮೊಮ್ಮೆ ಬರೆದನಂತರ ಬಟ್ಟುಗಳು ನೋಯುವವು. ಮತ್ತು ಹಾರಹತ್ತುವವು. ಮೊದಲು ಮೊದಲು ಬರೆಯು ವಾಗಲೇ ಒಟ್ಟುಗಳು ನೋಯುವವು. ಮುಂದೆ ಮುಂದೆ ಬರೆಯದಲೇ

ಬಟ್ಟುಗಳು ಸೆಟೆಯುವವು ಅವು, ಹಾರುವವು, ಮುಂತಾದ ಉಪದ್ರವ ವಾಗುವದು. ಹಿಡಿಯೋಣ, ಒತ್ತಿ ಹಿಡಿಯೋಣ ಮುಂತಾದವುಗಳಿಗೆ ಬೇಕಾದ ಕೈಯಲ್ಲಿಯ ಸಾಮರ್ಥ್ಯವು ಕಡಿಮೆಯಾಗಿರುವದು.

**ಮ್ಯಾ. ಫಾ**:— ಲೇಖಕರಿಗೂ ವಾದ್ಯಗಳನ್ನು ಬಾರಿಸುವವರಿಗೂ ಆಗುವ ಹಸ್ತಕಂಪದ ಮೇಲಿನ ಇದು ಪ್ರಮುಖ ಔಷಧವು.

**ನೇ. ಫಾ:**— ಬರೆಯುವಾಗ ಕೈನಡಗುವದು, ಸಂಧಿವಾತ ಜನ್ಯ ಕಂಪವಿದ್ದರೆ ಮ್ಯಾ. ಫಾ. ದ ಜತೆಗೆ ಕೊಡಬೇಕು. ಮುಂಗೈಯಲ್ಲಿ ನೋವು ಇದ್ದರೆ.

**ಕಾ. ಮ್ಯೂ:**— ಬರೆಯುವಾಗ ನಡುವೇ ಕೈಸೆಟೆಯುವದು ಮತ್ತು ಮುಂದೆ ಸಾಗುವದಿಲ್ಲ.

**ಕಲ್ಕೆ. ಫಾ:**— ಬಟ್ಟುಗಳೂ ಮುಂಗೈಯ್ಯೂ ಸೆಟೆಯುವವು. ಮತ್ತು ವೇದನೆ ಇರುವದು.

**ಉಪಯುಕ್ತ ಸೂಚನೆ:**— ಗುಣವು ಸ್ಥಿರವಾಗಿರಬೇಕಾಗುವದಾಗಿ ಕೈಗೆ ಪೂರ್ಣ ವಿಶ್ರಾಂತಿ ಕೊಡಬೇಕು. ನಡುನಡುವೆ ಕೈ ಬಿಸಿನೀರಿನಲ್ಲಿ ಇಟ್ಟುಕೊಂಡು ಕೂತದ್ದರಿಂದ ವಿಶೇಷ ಗುಣವಾಗುವದು. ಔಷಧ ಬಹಳ ದಿವಸ ತೆಗೆದುಕೊಳ್ಳುವ ಅವಶ್ಯಕತೆ ಇರುವದು.

---

## ಚಳಿಜ್ವರ

**Malaria.** **ಮಲೇರಿಯಾ.**

ಸಾಧಾರಣವಾಗಿ ಈ ಜ್ವರದ ಮೂರು ಅವಸ್ಥೆಗಳು ಕಲ್ಪಿಸಲ್ಪಟ್ಟಿವೆ. ಪ್ರಥಮಾವಸ್ಥೆಯಲ್ಲಿ ಅಥವಾ ಶೀತಾವಸ್ಥೆಯಲ್ಲಿ ಚಳಿ ಹತ್ತುವದು. ಮೈಯಲ್ಲಿ ಮುಳ್ಳು ತುಂಬುವದು ಇಲ್ಲವೆ ಚಳಿಯು ಬಹು ಭರದಿಂದ ತುಂಬುವದು ಮುಖಚರ್ಯೆಯೂ ಉಗುರುಗಳೂ ನೀಲವರ್ಣದ್ದು ಇರುವವು. ಈ ಶೀತಾವಸ್ಥೆಯ ಅವಧಿ ಒಮ್ಮೊಮ್ಮೆ ೧೫ ಮಿನಿಟಿನಿಂದ ೨-೩ ತಾಸಿನ ವರೆಗೂ ಇರುವದು. ನಂತರ ಉಷ್ಣಾವಸ್ಥೆಯು ಪ್ರಾರಂಭವಾಗುವದು.

ಜ್ವರವು ೧೦೪-೧೦೬ ಅಂಶದವರೆಗೂ ಏರುವದು. ಈ ಸ್ಥಿತಿಯಲ್ಲಿ ಮುಖ ಚರ್ಮೆಯು ಕೆಂಪಾಗಿರುವದು. ಆಗ ತಲೆ, ಬೆನ್ನು, ಟೊಂಕ ಹಾಗೂ ಇತರ ಭಾಗದಲ್ಲಿಯೂ ನೋವು ಇರುವದು. ಮಳಮಳಿಯೂ, ವಾಕರಿಕೆಯೂ ಇರುವದು. ನೀರಡಿಕೆಯು ಬಹಳ ತಳಮಳಿಯೂ ಅಸ್ವಸ್ಥತೆಯೂ ಇರುವದು. ಈ ಅವಸ್ಥೆಯು ೩-೪ ತಾಸು ಅಥವಾ ಅದಕ್ಕೂ ಹೆಚ್ಚು ಕಾಲ ತಡೆಯುವದು. ನಂತರ ಸ್ವೇದಾವಸ್ಥೆ ಪ್ರಾರಂಭವಾಗುವದು. ಒಮ್ಮೊಮ್ಮೆ ಬೆವರು ಬಹಳ ಬಿಟ್ಟು ಅಥವಾ ಕಡಿಮೆ ಬಿಟ್ಟು ಸಹ ಜ್ವರ ಇಳಿಯಲು ಪ್ರಾರಂಭವಾಗುತ್ತದೆ. ಬೆವರು ಬಂದು ಹೋದನಂತರ ಸ್ವಲ್ಪ ದಣಿವಿಕೆಯು ಬರುವದು. ಮತ್ತು ಮಾಂದ್ಯವೂ ಬರುವದು. ಅಪಚನದ ಉಪದ್ರವಗಳೂ ಇರುವವು. ನಾಲಗೆಯ ಮೇಲೆ ಅಗ್ರ, ತ್ವಚೆ ಒಣಗಿದ್ದೂ ಹುರ ಬರಕವೂ ಇರುವದು. ಶ್ವಾಸೋಚ್ಛ್ವಾಸಕ್ಕೆ ಕಷ್ಟ, ಹೊಟ್ಟೆ ಮುರಿಯುವದು, ರೇಚ ಅಥವಾ ಅವರೋಧ, ಪಕ್ಕೆಲುಬಿನ ಕೆಳಗೆ ಭಾರವೆನಿಸುವದು. ಮೂತ್ರವು ಕೆಂಪಾಗಿರುವದು ಮುಂತಾದವುಗಳಲ್ಲಿಯ ಎಷ್ಟೋ ಲಕ್ಷಣಗಳು ಈ ಜ್ವರದಲ್ಲಿ ಕಂಡು ಬರುವವು ಮತ್ತು ಬೆವರು ಬಿಟ್ಟು ಲಕ್ಷಣಗಳು ಕಡಿಮೆಯಾಗುವವು. ಜ್ವರ ಇಳಿಯಲಿಕ್ಕೆ ಹತ್ತಿದನಂತರ ಒಂದೆರಡು ತಾಸುಗಳಲ್ಲಿ ಇಲ್ಲವೆ ೪-೬ ತಾಸುಗಳಲ್ಲಿ ಜ್ವರ ತೀರ ಇಳಿದು ಹೋಗುವದು. ಈ ಮೂರೂ ಅವಸ್ಥೆಯ ಅವಧಿಯು ಹೆಚ್ಚು ಕಡಿಮೆಯಾಗುವದು. ಕ್ವಚಿತ್ ಚಳಿಜ್ವರದಲ್ಲಿ ಬಹಳಮಾಡಿ ಮೈಯುಂಡ ಚಳಿಜ್ವರದಲ್ಲಿ ಮೊದಲಿನ ಹಾಗು ಮೂರನೇ ಅವಸ್ಥೆಯು ಒಮ್ಮೊಮ್ಮೆ ಇರುವದಿಲ್ಲ. ಅಂದರೆ ಚಳಿ ಒರದೆ ಜ್ವರ ಬರುವದು, ಬೆವರು ಬಿಡದೆ ಜ್ವರ ಇಳಿಯುವದು. ರೋಗವು ದಿನಾಲು ಇಲ್ಲವೆ ೧-೨-೪-೬ ದಿನಬಿಟ್ಟು ಇಲ್ಲವೆ ಅದಕ್ಕೂ ಹೆಚ್ಚು ದಿನಬಿಟ್ಟು (ಅಂದರೆ ೮ - ೧೫ ದಿವಸಕ್ಕೊಮ್ಮೆಯೂ) ಬರುವದು. ಜ್ವರದ ಸರ್ತಿ ಬಂದುಹೋದನಂತರ ರೋಗಿಗೆ ನಡುವಿನ ಅವಧಿಯಲ್ಲಿ ಏನೂ ಕಷ್ಟವಿರುವದಿಲ್ಲ. ಜ್ವರವು ಮೈವುಂಡಿತೆಂದರೆ ಮೇಲಿಂದ ಮೇಲೆ ಬರುತ್ತಿರುವದು. ಆದರಿಂದ ರೋಗಿಯು ಅಶಕ್ತನಾಗುವನು. ಆವನಿಗೆ ಪಾಂಡುರೋಗವೂ ಆಗುವದು. ಅವನ ಹೃದಯ ಮುಂತಾದ ಮಹತ್ವದ ಇಂದ್ರಿಯುಗಳು ಅಶಕ್ತವಾಗುವವು. ಪ್ಲೀಹೆಯು ಬೆಳೆದದ್ದಿರು

ವದು. ಯಕೃತವೂ ದೊಡ್ಡದಾಗುವದು ಮತ್ತು ಅಲ್ಲಿ ನೋವೂ ಇರುವದು. ಮಾಂದ್ಯವು ಹೆಚ್ಚಾಗುವದು.

ಈ ರೋಗದಲ್ಲಿ ರೋಗಿಯು ಬಹುತರವಾಗಿ ಸಾಯುವದಿಲ್ಲ. ಆದರೆ ಈ ರೋಗದಲ್ಲಿ ಭ್ರಮ, ಜಠರದಿಂದಲೂ ಕರಳುಗಳಿಂದಲೂ ರಕ್ತಸ್ರಾವ, ಮಹಾಮಾರಿಯಲ್ಲಿಯಂಥ ರೇಚ, ಸಟಿತ, ಮುಂತಾದ ಉಪದ್ರವವಾದಲ್ಲಿ ಚಿಂತಾಜನಕ ಸ್ಥಿತಿಯು ಒದಗುವದು. ಈ ರೋಗದಲ್ಲಿ ರಕ್ತದಲ್ಲಿಯ ಕಣಗಳು ಕಡಿಮೆಯಾಗಿ ಶ್ವೇತ ಕಣಗಳು ಬೆಳೆಯುವವು. ಆದ್ದರಿಂದ ರೋಗಿಯು ನಿಸ್ತೇಜನೂ, ಹಳದಿ ವರ್ಣದವನೂ ಆಗುವದು. ಗರೋದರ ಸ್ತ್ರೀಯರಿಗೆ ಅಸ್ಥಿತಿಯ ಕಡೆಯ ೩-೪ ತಿಂಗಳುಗಳಲ್ಲಿ ಈ ರೋಗವು ಗಂಟು ಬಿದ್ದರೆ, ಅವರು ಅಶಕ್ತರಾಗುವರು. ಆದರಿಂದ ಪ್ರಸೂತಿಯು ಯೋಗ್ಯ ಕಾಲಕ್ಕೆ ಆಗದೆ ಇದ್ದದರಿಂದ ಗಂಡಾಂತರ ಸಂಭವಿಸುವದು. ಕಾಮಣಿಯೂ ಆಗುವ ಸಂಭವವಿರುವದು.

**ನೇ. ಸ:**— ಚಳಿಜ್ವರದ ಮೇಲಿನ ಪ್ರಮುಖ ಔಷಧವು. ಸಾಧಾರಣ ವಾಗಿ ೩ x ಶಕ್ತಿಯನ್ನು ಕೊಡಬೇಕು. ಜಲಾಧಿಕ್ಯವನ್ನು ಕಳೆದು ಜ್ವರ ಕಳೆಯುವ ಶಕ್ತಿ ಈ ಔಷಧದಲ್ಲುಂಟು. ಪಿತ್ತದಮೇಲೆ ರಾಮಬಾಣ ಔಷಧವು. ಬಾಯಿ ಕಹಿ, ಹೊಟ್ಟೆಶೂಲಿ, ಹೊಟ್ಟೆ ಜಾಡಿಸುವದು, ಹಳದಿ ನಾಲಗೆ, ಮಾಂದ್ಯ, ಕೆಂಣುಮುಚ್ಚು. ವಾಂತಿಯ ದ್ವಾರಾ ಕಹಿ ಪಿತ್ತ ಅಥವಾ ಕಹಿ ನೀರು ಬೀಳುವದು ಮುಂತಾದ ಭಾವನೆಗಳಿರುವವು. ಮಲಾವ ರೋಧ. ದಿನ ಬಿಟ್ಟು ದಿನ ಬರುವ ಜ್ವರ ಮುಂತಾದ ಲಕ್ಷಣಗಳಮೇಲೆ.

**ಫೇ. ಫಾ:**— ಜ್ವರ, ನೀರಡಿಕೆ, ತಂಡಿ, ಮೈಸೋವು, ಮಸ್ತಕ ಶೂಲೆ, ಪಚನವಾಗದೇ ಇದ್ದ ಅನ್ನ ವಾಂತಿಯಾಗಿ ಬೀಳೋಣ, ಮುಂತಾದ ಭಾವನೆಗಳ ಮೇಲಿನ ಮುಖ್ಯ ಔಷಧವು. ನೇಟ್ರಂ ಸ. ಮತ್ತು ಇದನ್ನು ಸರ್ತಿಮೇಲೆ ಕೊಡಬೇಕು.

**ನೇ. ಮೂ:**— ಕ್ವಿನೀನದ ದುರುಪಯೋಗವಾಗಿದ್ದಲ್ಲಿ ನೀರಡಿಕೆ ಮಿತಿ ಮೀರಿ ತುಟಿಯಮೇಲೆ ಒಡೆದಿದ್ದರೆ, ತಲೆನೋವು; ವಾಂತಿ, ಮೂಗಿ ನಿಂದ ಕಣ್ಣಿನಿಂದ ನೀರು ಸೋರುವದು. ನಾಲಗೆಯಮೇಲೆ ತೆಳ್ಳನ ಅಗ್ರ

ಮತ್ತು ಬುರುಗು. ಹಗಲು. ೧೨-೧೨ ಗಂಟೆಗೆ ಚಳಿ ತುಂಬಿ ಜ್ವರ ಬರುವದು. ಎಲ್ಲ ಅವಸ್ಥೆಗಳಲ್ಲಿ ನೀರಡಿಕೆ ಬಹಳ ಇರುವದು. ತಲೆಶೂಲೆ ಬಹಳ ಬೆವರು ಬಿಟ್ಟನಂತರ ನಿಲ್ಲುವದು. ತುಟಿಯ ಮೇಲೆ ಜ್ವರದ ಬಕ್ಕೆಗಳು ಏಳುವವು.

**ಕಾ. ಫಾ:**— ಅಶಕ್ತತೆ ಬಹಳಿದ್ದು ಬೆವರು ಬಹಳ ಬರುವದಾದರೆ ಚಾತುರ್ಥಿಕ ಜ್ವರ.

**ಕಾ. ಮ್ಯೂ:**— ನಾಲಗೆಯಮೇಲೆ ದಟ್ಟ, ಬಿಳೀಬಣ್ಣದ ಇಲ್ಲವೆ ಬೂದಿಬಣ್ಣದ ಅಗ್ರ ಮುಖ್ಯ ಔಷಧದ ಜತೆಗೆ ಸರ್ತಿ ತಪ್ಪಿಸಿ ಕೊಡಬೇಕು.

**ಮ್ಯಾ. ಫಾ:**— ಜ್ವರದಲ್ಲಿ ಪಿಂಡರಿಗಳಲ್ಲಿ ಸೆಳತವೂ ಉಳುಕೂ ಇದ್ದರೆ ನೇ. ಸ. ಮತ್ತು ಇದು ಸರ್ತಿ ತಪ್ಪಿಸಿ ಕೊಡುವವು. ಸಾಯಂಕಾಲದ ೭ ಗಂಟೆಗೆ ಚಳಿಯು ಮುಳ್ಳು ಬೆನ್ನಿನೊಳಗಿಂದ ಮೇಲೆಯೂ ತೆಳಗೂ ಇರುವವು. ಚಳಿಯು ಬರುವ ಪೂರ್ವದಲ್ಲಿಯೂ ಚಳಿ ಇದ್ದಾಗೂ ನೀರಡಿಕೆ ಬಹಳ, ಆದರೆ ಜ್ವರದಲ್ಲಿ ಹಾಗೂ ಬೆವರು ಬಿಟ್ಟಾಗೂ ಇರುವದಿಲ್ಲ. ಮುಂಜಾನೆ ೯ ಗಂಟೆಯ ಸುಮಾರಕ್ಕೂ ಚಳಿ ತುಂಬುವದು.

**ನೇ. ಫಾ:**— ಹುಳಿ ಪಿತ್ತದ ವಾಂತಿಗಳು ಆಗುತ್ತಿದ್ದಲ್ಲಿ.

**ಕಲ್ಕೆ. ಫಾ:**— ಸಣ್ಣಮಕ್ಕಳ ಮೈಯಿಂದ ಚಳಿಜ್ವರವಿದ್ದರೆ.

**ಸಿ:**— ಕಾಲಿನ ಬೆವರು ಮೈಯಲ್ಲಿಯೇ ಇಂಗಿದ್ದರಿಂದ ದಿವಸವೆಲ್ಲ ಚಳಿ ಇರುವದು. ಆದರೆ ಪ್ರಾತಃಕಾಲದ ಮೂರುಗಂಟೆಯ ಸುಮಾರಕ್ಕೆ ಚಳಿಯ ಬಲ ಹೆಚ್ಚಾಗುವದು. ಚರ್ಯೆಯಮೇಲೂ ಎದೆಯಮೇಲೂ ಬೆವರು ಬಹಳ ಬಿಡುವದು. ಕಾಲಿಗೆ ಬರುವ ಬೆವರು ಹೊಲಸು ನಾರುವದು.

**ಉಪಯುಕ್ತ ಸೂಚನೆ:**— ನೇ. ಸ. ವೆಂಬ ಕ್ಷಾರವು ಕಡಿಮೆಯಾದ್ದರಿಂದಲೇ ಚಳಿಜ್ವರವು ಉತ್ಪನ್ನವಾಗುವದೆಂದು ಜೀವನ ರಸಾಯನ ಶಾಸ್ತ್ರಜ್ಞರ ಮತವು. ಆದ್ದರಿಂದ ಚಳಿಜ್ವರದ ಮೇಲೆ ನೇ. ಸ. ಕ್ಷಾರವು ಪ್ರಮುಖ ಔಷಧವೆಂದು ತಿಳಿಯುವದುಂಟು. ನೇಟ್ರಂ. ಸ. ದ. ಸಂಗಡ ಫೇ. ಫಾ. ವನ್ನು ಕೊಡಬೇಕು. ಮಾಂದ್ಯ ಹಾಗೂ ಕಣ್ಣುಮುಚ್ಚು

ವಿಶೇಷತಃ ಮಧ್ಯಾಹ್ನದಲ್ಲಿ ಇದ್ದರೆ ಸೇ. ಮೂ. ವನ್ನು ದಿವಸದಲ್ಲಿ ೨-೩ ಸಾರೆ ಕೊಡಬೇಕು. ಭಾವನಾನುಸಾರ ಇತರ ಔಷಧ ಕೊಡಬೇಕು. ಚಳಿಜ್ವರದ ರೋಗಿಗಳು ತಣ್ಣನ ಹವೆಯಲ್ಲಿಯೂ ಪ್ರಾತಃಕಾಲಕ್ಕೆ, ಸಾಯಂ ಕಾಲಕ್ಕೆ ತಣ್ಣನ ಹವೆಯಲ್ಲಿ ಮನೆಯ ಹೊರಗೆ ಹೋಗಿ ತಿರುಗಾಡಬಾರದು. ತಿರುಗಾಡುವ ಅವಶ್ಯಕತೆ ಇದ್ದಲ್ಲಿ ಏನಾದರೂ ತಿಂದನಂತರ ಹೊರಬೀಳ ಬೇಕು. ಮೈಗೆ ತಂಣನ ಹವೆ ಹತ್ತುವಂಥ ಸ್ಥಳದಲ್ಲಿ ಕೂಡಬಾರದು. ದಣಿವಿಕೆ ಬರುವಂಥ ಶಾರೀರಿಕವಾಗಲಿ ಮಾನಸಿಕವಾಗಲಿ ಶ್ರಮಮಾಡ ಬಾರದು. ಜ್ವರದ ಸರ್ತಿಯ ದಿನ ತೀರ ಹಗುರ ಅನ್ನ ತಿನ್ನಬೇಕು. ಜ್ವರ ದಲ್ಲಿ ಗಂಜಿಯಂಥ ತೆಳ್ಳನ ಅನ್ನದ ಹೊರ್ತು ಇತರ ಏನೂ ತಿನ್ನಬಾರದು. ಹುಳಿ, ವಾತುಲ ಪದಾರ್ಥ ವರ್ಜ್ಯಮಾಡಬೇಕು. ಅಕ್ಕಿಯ ಅನ್ನ ಮತ್ತು ಇತರ ಅನ್ನ ಕಡಿಮೆಮಾಡಿ ಗೋದಿಯ ರೊಟ್ಟಿ, ತುಪ್ಪ, ಸಕ್ಕರೆ ಇವುಗಳನ್ನು ತಿನ್ನುತ್ತಿದ್ದರೆ, ಹಿಮಜ್ವರದ ರೋಗಿಗೆ ಬಹಳೇ ಗುಣವಾಗುವದು ಎಂದು ವಿಷ್ಟೋಜನರ ಅನುಭವವುಂಟು.

---

# ಒಸಡೆಯ ರೋಗ

**Gumboil.** ಗಮ್‌ಬಾಯಿಲ್.

ಒಸಡೆಯೊಳಗಿಂದ ರಕ್ತ ಹೋಗುವದು, ಕೀವು ಹೋಗುವದು, ಹುಂಣು ಆಗುವದು. ವ್ರಣ ಮುಂತಾದವು ಒಸಡೆ ರೋಗಗಳು ಪಾಂಡು ರೋಗಗಳು. ಪಾಂಡುರೋಗದಲ್ಲಿ ಒಸಡೆಗಳು ಬೆಳ್ಳಗಾಗುವವು. ಮುಖ ಪಾಕದಲ್ಲಿ ಇಲ್ಲವೆ ಪಾರಜದ ಔಷಧ ಬಹಳ ಸೇವನ ಮಾಡಿದ್ದರಿಂದ ಒಸಡಿ ಗಳು ಕೆಂಪಾಗುವವು. ಮತ್ತು ವ್ರಣಗಳೂ ಆಗುವವು. ರಕ್ತ ಹೋಗುವದು. ಒಸಡೆಯ ಮೇಲೆ ನೀಲಿಬಂಣದ ಗೆರಿ ಕಾಣುವದು, ಶರೀರದಲ್ಲಿ ಸೀಸಿನ ವಿಷ ಸೇರಿದ್ದರ ಲಕ್ಷಣವು. ಛಾಪಖಾನೆಯಲ್ಲಿ ಮಳೆ ಜೋಡಿಸುವವರಲ್ಲಿ ಇದು ಬಹುತರವಾಗಿ ಕಂಡುಬರುವದು. ಚಿಕಿತ್ಸೆಗಾಗಿ ಹಲ್ಲು ರೋಗ ಮತ್ತು ಹುಂಣು ಈ ವಿವರಗಳನ್ನು ನೋಡಿರಿ.

---

# ಹೃದಯರೋಗ

ಹೃದಯದ ಸ್ಥಾನದಲ್ಲಿ ದಾಹ ಉತ್ಪನ್ನವಾಗುವದು, ಹೃದಯದಲ್ಲಿ ಧಡಧಡಿಸುವದು, ಹೃದಯದಲ್ಲಿ ಶೂಲೆಯುಂಟಾಗುವದು. ಇವೇ ಮುಂತಾದವು ಹೃದಯದ ಸರ್ವಸಾಧಾರಣ ರೋಗಗಳು. ಇದರ ಹೊರ್ತಾಗಿ ಯಾವುದರಿಂದ ಹೃದಯದಲ್ಲಿ ಬದಲುಂಟಾಗುವದು, ಅಸ್ವಾಭಾವಿಕ ಶಬ್ದ ಕೇಳ ಬರುವವು. ಇಂಥವು ಕೆಲವು ಹೃದಯದ ರೋಗಗಳೂ ಉಂಟು; ಸಾಮಾನ್ಯ ಜನರಿಗೆ ಈ ರೋಗಗಳನ್ನು ಗುರ್ತು ಹಿಡಿಯುವದು ಕಠಿಣವೇ ಸರಿ. ಶ್ವಾಸೋಚ್ಛ್ವಾಸಕ್ಕೆ ಕಷ್ಟವಾಗೋಣ, ಜಲಶೋಥ, ಮುಖಚರ್ಯೆಯು ಕಪ್ಪಗಾಗೋಣ, ನೀಲವರ್ಣದ್ದಾಗೋಣ, ಹೃದಯದಲ್ಲಿ ಧಡಧಡಿಸೋಣ, ಹೃದಯದಲ್ಲಿ ಗಟ್ಟಿಯಾಗಿ ಬಿಗಿದಂತೆ ಭಾವನೆ, ವೇದನೆಯಾಗೋಣ, ಮೂರ್ಛೆ ಹೊಂದೋಣ, ಶೀಘ್ರಗಾಮಿ ರೋಗವಿದ್ದಲ್ಲಿ ಜ್ವರ ಬರೋಣ,– ಇವೇ ಮುಂತಾದವು ಹೃದಯ ವಿಕಾರದ ಸ್ಥೂಲಮಾನದ ಲಕ್ಷಣಗಳು.

ಹೃದಯಾವರಣ ದಾಹದಲ್ಲಿ ಜ್ವರವು ಹೆಚ್ಚು ಕಡಿಮೆ ಬರುವುದು. ಜ್ವರ ಬರುವ ಪೂರ್ವದಲ್ಲಿ ಒಮ್ಮೊಮ್ಮೆ ಚಳಿ ಬರುವದು. ನಾಡಿಯು ಬಹಳ ಭರದಿಂದ ನಡೆಯುವದು. ಹೃದಯದಲ್ಲಿ ಧಡಧಡಿಸುವದು ಇರುವದು. ಪುಪ್ಪುಸಾವರಣ ದಾಹದಲ್ಲಿಯಂತೆಯೇ ಹೃದಯಾವರಣ ದಾಹದಲ್ಲಿ ಹೃದಯ ಪ್ರಾಂತದಲ್ಲಿ ಚುಚ್ಚಿದಂತೆಯೂ ಕೊರೆದಂತೆಯೂ, ತೀವ್ರ ವೇದನೆ ಇರುವದು. ಅಲ್ಲಾಡುವದು, ದೀರ್ಘಶ್ವಾಸವನ್ನು ಎಳೆದುಕೊಳ್ಳುವದು, ಹೊರಗಿನಿಂದ ಒತ್ತಾಯವಾಗುವದೂ, ಇವುಗಳಿಂದ ವೇದನೆ ಹೆಚ್ಚಾಗುವದು. ಶ್ವಾಸ ಎಳೆದುಕೊಳ್ಳಲು ಬಹು ಕಷ್ಟವಾಗುವದು. ಒಮ್ಮೊಮ್ಮೆ ರೋಗಿಗೆ ಮಲಗುವದು ಸಹ ಅಸಾಧ್ಯವಾಗುವದು. ಒಮ್ಮೊಮ್ಮೆ ಕೆಮ್ಮು ಇರುವದಿಲ್ಲ. ಒಮ್ಮೊಮ್ಮೆ ಒಣ ಉಸುರುಗಟ್ಟಿ ನಿಂತು ನಿಂತು ಬರುವಂಥ ಕೆಮ್ಮು ಇರುವದು. ರೋಗಿಯು ಬಲ ಮಗ್ಗುಲ ಮೇಲೆ ಇಲ್ಲವೆ ಬೆನ್ನಿನ ಮೇಲೆಯೇ ಮಲಗಿರುವನು. ರೋಗಿಯು ಅಸ್ವಸ್ಥನಿರುವನು. ಅವನಿಗೆ ತೀರ ಅಸಮಾಧಾನವಿರುವದು.

ಹೃದಯುದ ಅಂತಸ್ತ್ವಚೆಯು ದಾಹದಲ್ಲಿ ಸ್ಫುಟವಾಗಿ ಕಂಡು ಬರುವಂಥ ಭಾವನೆಗಳು ಇರುವದಿಲ್ಲ. ಆದರೆ ಸಂಧಿವಾತದಲ್ಲಿಯೂ ಇತರ ರೋಗಗಳಲ್ಲಿಯೂ ಒಮ್ಮೊಂದೊಮ್ಮೆ ಧಡಧಡಿಸಲಾರಂಭಿಸುತ್ತದೆ. ಏನೂ ಬಾಹ್ಯ ಕಾರಣವಿಲ್ಲದೆ ಜ್ವರ ಏರುವದು ಮುಂತಾದ ಭಾವನೆಗಳು ಕಂಡು ಬಂದಲ್ಲಿ ಬಹುಶಃ ಹೃದಯುದ ಅಂತಸ್ತ್ವಚೆಯು ದಾಹವಿದೆಯೆಂದು ತಿಳಿಯುವದು. ಈ ದಾಹದಲ್ಲಿ ವೇದನೆಯೂ ಅಸ್ವಸ್ಥತೆಯೂ ಇರುವದಿಲ್ಲ. ಇದು ಲಕ್ಷ್ಯದಲ್ಲಿಡತಕ್ಕ ಸಂಗತಿಯು.

ಅಪಘಾತ, ಸಂದಿವಾತ, ವಿಷಮುಜ್ವರ, ಇನ್‌ಫ್ಲುಎಂಜಾ, ವೃಕ್ಕದಾಹ, ಅಂಗುಲಿವಾತ, ಕ್ಷಯ, ಮುಂತಾದವುಗಳೇ ಈ ದಾಹದ ಕಾರಣಗಳಿರುವವು.

ಹೃದಯುದ ಬಡೆತಗಳು ಬಹು ತೀವ್ರವಾಗಿ ಬಡಿಯೋಣವೆಂದರೇ ಧಡಿಧಡಿಸೋಣ. ಪಾಂಡುರೋಗದಲ್ಲಿ ಈ ಭಾವನೆಯು ಬಹುಶಃ ಕಂಡು ಬರುವದು ಮತ್ತು ಒಮ್ಮೊಮ್ಮೆ ಬಹಳ ಕಷ್ಟಮಯವಿರುವದು. ಅಪಚನ ಮೂಲಕ ಈ ಭಾವನೆಯು ರಾತ್ರಿಯಲ್ಲಿ ಬಹುತರವಾಗಿ ಕಂಡುಬರುವದು. ಆ ಕಾಲಕ್ಕೆ ಕಷ್ಟಮಯುಶ್ವಾಸ, ವೇದನೆ, ತೀವ್ರವಾಗಿ ಸಾಯುವೆನೆಂಬುವ ಹೆದರಿಕೆ, ಇವೇ ಮುಂತಾದ ಭಾವನೆಗಳು ಕಂಡುಬರುವವು. ಗಲಗಂಡ ( Goitre ಗಂಟ್ಲವಾಳ ) ವಿರುವಭಾಗದಲ್ಲಿ ಅರ್ಬುದವಾಗೋಣ, ಕ್ಷಯುದ ಪೂರ್ವಾವಸ್ಥೆಯಲ್ಲಿ, ಎದೆಯಲ್ಲಿ ಧಡಧಡಿಸುವಿಕೆ—ಈ ಭಾವನೆಗಳು ಕಂಡು ಬರುವವು. ಹೆದರಿಕೆ, ಇತರ ಪ್ರಬಲ ಮನೋವಿಕಾರ, ರೋಗದ ನಂತರ ಬರುವ ಅಶಕ್ತತೆ, ಫುಪ್ಫುಸದ ರೋಗದಿಂದಲೂ, ಇಲ್ಲವೆ ಸಾಧಾರಣ ಜ್ವರ, ಹಿಸ್ಟೇರಿಯಾ (ಉನ್ಮಾದವಾಯು) ಇವುಗಳಿಂದಲೂ ಹೊಗೆಸೊಪ್ಪು, ಸರಾಯು, ಚಹ, ಕಾಫೀ, ಮುಂತಾದ ಮಾದಕಪದಾರ್ಥಗಳನ್ನು ಹೆಚ್ಚು ಪ್ರಮಾಣದಲ್ಲಿ ಸೇವಿಸುವದರಿಂದ, ಎದೆಯಲ್ಲಿ ಧಡಧಡಿಸಲಾರಂಭಿಸುವದು. ಈ ವಿಕಾರ ಇಲ್ಲವಾದಲ್ಲಿ, ಹೃದಯುದ ಬಡೆತಗಳು ಕಡಿಮೆಯಾಗುವವು ಮತ್ತು ಧಡಧಡಿಸುವಿಕೆಯು ನಿಲ್ಲುವದು.

ಹೃದಯುವೃದ್ಧಿ, ಹೃದಯ ಸ್ನಾಯುಗಳ ದಾಹ, ಹೃದಯುಪಟಲದ ರೋಗ, ಮುಂತಾದ ಹೃದಯುದ ಇತರ ರೋಗಗಳು ಸಾಧಾರಣ ಜನರಿಗೆ

ತಿಳಿಯಲು ಶಕ್ಯವಿಲ್ಲದ್ದರಿಂದ ಅದರ ವಿವೇಚನೆ ಇಲ್ಲಿ ಮಾಡಿದೆ. ಹೃದಯ ಶೂಲಿಯ ಸಮಾಚಾರವನ್ನು ಹೃದಯಶೂಲವೆಂಬ ವಿವರದ ಕೆಳಗೆ ಕೊಟ್ಟಿದೆ. ಅದನ್ನು ನೋಡಬೇಕು. ಹೃದಯರೋಗದ ವಿಶಿಷ್ಟ ಲಕ್ಷಣ ಯಾವುದೂ ಕಂಡು ಬಾರದೆ ಒಮ್ಮೆಂದೊಮ್ಮೆ ಮರಣವು ಒದಗುವದು ಹೃದಯ ವಿಕಾರದ ಲಕ್ಷಣವೇ ಸರಿ. ಹೃದಯ ಪ್ರಾಂತದಲ್ಲಿ ರಕ್ತವು ಗಟ್ಟಿಯಾಗೋಣವೂ, ಒಂದು ಕಾರಣವಿರಬಹುದು. ಹೃದಯದಲ್ಲಿಯ ಕಷ್ಟಗಳು ಯಾವಾಗಲೂ ಹೃದಯವಿಕಾರದಿಂದಲೇ ಆಗುತ್ತವೆಂತಲ್ಲ, ಹೃದಯದಲ್ಲಿ ಪ್ರತ್ಯಕ್ಷ ಯಾವದೂ ವಿಕೃತಿಯು ಕಂಡುಬಾರದೆ ಸಹ ಎದೆಯಲ್ಲಿ ಧಡಧಡಿಸುವಿಕೆಯೂ, ಸ್ವಾಸೋಚ್ಛ್ವಾಸಕ್ಕೆ ಕಷ್ಟವಾಗೋಣವೂ, ಅಟ್ಟದ ಪಾವಟಿಗೆಗಳನ್ನು ಇಲ್ಲವೆ ಎತ್ತರ ಸ್ಥಳವನ್ನು ಏರುವದರಿಂದ ಶ್ವಾಸಕ್ಕೆ ಕಷ್ಟವಾಗೋಣವೂ ಮುಂತಾದ ಲಕ್ಷಣಗಳು ಹೃದಯ ವಿಕಾರದ ದ್ಯೋತಕಗಳೆಂದು ತಿಳಿದುಕೊಳ್ಳಬೇಕು.

ಶಾರೀರಿಕಶ್ರಮ, ಮಾನಸಿಕ ಶ್ರಮ, ಮಿತಿಮೀರಿ ಕೆಲಸ ಮಾಡೋಣವು ಇಲ್ಲವೆ ಬಹಳ ಚಿಂತೆ ಮಾಡುವದೂ ಈ ರೋಗಕ್ಕೆ ಕಾರಣವಾಗುವದುಂಟು. ಶರೀರದಲ್ಲಿಯ ಇತರ ಇಂದ್ರಿಯಗಳ ರೋಗದಿಂದ ಸಹ ಹೃದಯದ ಕಷ್ಟಗಳು ಅಷ್ಟರ ಮಟ್ಟಿಗೆ ಉತ್ಪನ್ನವಾಗುವದುಂಟು. ರೋಗವು ನೆಟ್ಟಗಾದ ಕೂಡಲೆ ಆ ಕಷ್ಟಗಳೂ ಇಲ್ಲದಂತಾಗುವವು. ಉದಾಹರಣಾರ್ಥವಾಗಿ ಇದನ್ನು ಹೇಳಬಹುದು— ಅಪಚನ ಮೂಲಕ, ಹೊಟ್ಟೆಯಲ್ಲಿ ವಾಯುವು ತುಂಬಿಕೊಂಡಿರುವದರಿಂದ, ಒಮ್ಮೊಮ್ಮೆ ಎದೆಯಲ್ಲಿ ಧಡಧಡಿಸಲಾರಂಭಿಸುವದು ಮತ್ತು ವಾತವು ಕಡಿಮೆಯಾದ ಕೂಡಲೆ ಧಡಧಡಿಸುವದೂ ನಿಲ್ಲುವದು.

**ಕಾಲೀ. ಫಾ:—** ಹೃದಯದ ಅನಿಯಮಿತ ಕ್ರಿಯೆಯು; ಹೃದಯದ ಅಶಕ್ತತೆ: ಎದೆಯಲ್ಲಿ ಧಡಧಡಿಸುವದು; ನಾಡಿಯ ಬಡತಗಳು ತಪ್ಪಿ ಬೀಳುವವು. ನಡುನಡುವೆ ತೀರ ಸೋತಂತಾಗುವದು, ಹೃದಯದ ಅಶಕ್ತತೆಯ ಮೂಲಕ, ಅಥವಾ ಹೆದರಿಕೆಯಿಂದಾಗಲಿ ಶ್ರಮದಿಂದಾಗಲಿ, ಗ್ಲಾನಿಯುಂಟಾಗುವದು, ಶಕ್ತಿಕ್ಷೀಣವಾಗುವ ರೋಗಗಳಲ್ಲಿ ಈ ಔಷಧವು

ಹೃದಯಕ್ಕೆ ಶಕ್ತಿದಾಯಕವೆಂದೂ ಉತ್ತೇಜಕವೆಂದೂ ಬಹಳೇ ಗುಣ ದಾಯಕವಿದೆ. ನಾಡಿಯು ಕೈಗೆ ಸಹ ಹತ್ತದಂತೆ ಅಶಕ್ತವಾಗಿರುತ್ತದೆ; ಸಂಧಿವಾತದ ನಂತರ ಎದೆಯಲ್ಲಿ ಧಡಧಡಿಸುತ್ತದೆ. ಅಟ್ಟದ ಪಾವಟಿಗೆ ಗಳನ್ನು ಏರುವಾಗ ಶ್ವಾಸೋಚ್ಛ್ವಾಸಕ್ಕೆ ಕಷ್ಟವಾಗುವದು ಮತ್ತು ಹೃದಯದ ಕ್ರಿಯೆಯು ಭರದಿಂದ ಆರಂಭವಾಗುವದು. ಇಂಥ ಸಮಯ ದಲ್ಲಿ ಸ್ವಲ್ಪ ಪ್ರಮಾಣದಲ್ಲಿ ಒಂದೇಸವನೆ ಕೊಡುತ್ತಿರಬೇಕು.

**ಫೇ. ಫಾ:**— ಹೃದಯದಲ್ಲಿ ದಾಹವುಂಟಾಗುವಂಥ ರೋಗದ ಪ್ರಥಮಾವಸ್ಥೆಯಲ್ಲಿ ಹೃದಯದ ಹಾಗೂ ರಕ್ತವಾಹಿನಿಗಳ ವಿಸ್ತಾರ; ಕಲ್ಕೆ. ಫ್ಲೋ. ಎಂಬ ಮುಖ್ಯ ಔಷಧದ ಜತೆಗೆ ಕೊಡಬೇಕು. ಹೃದಯ ಪ್ರಾಂತದಲ್ಲಿ ಭಾರವೆನಿಸಿ ಸ್ವಲ್ಪ ಸ್ವಲ್ಪ ನೋವಿದ್ದಲ್ಲಿ ನಾಡಿಯು ತೀವ್ರವಿದ್ದು ತುಂಬಿದಂತೆಯೂ ಕಠಿಣವೂ ಹತ್ತುತ್ತಿದ್ದಲ್ಲಿ ಧಡ ಧಡಿಸುವದಿದ್ದಾಗ ಕಾಲೀ. ಫಾ. ಮತ್ತು ಇದು ಸರ್ತಿ ಮೇಲೆ ಕೊಡಬೇಕು.

**ಕಲ್ಕೆ. ಫ್ಲೋ**:— ಹೃದಯದ ಹಾಗೂ ರಕ್ತವಾಹಿನಿಗಳ ವಿಸ್ತಾರ ವನ್ನೂ ಹೃದಯಗಳಲ್ಲಿಯ ಸ್ನಾಯುಗಳ ಶಿಥಿಲತೆಯನ್ನೂ ಇಲ್ಲದಂತೆ ಮಾಡುವದು. ಜತೆಗೆ ಫೇರಂ ಫಾ. ಕೊಡಬೇಕು. ಹೃದಯದಲ್ಲಿ ರಕ್ತವು ತುಂಬಿ ನಿಂತದ್ದರಿಂದ ಹೃದಯದ ಕ್ರಿಯೆಯು ಮಂದವೂ ನಿಶ್ಶ ಕ್ತವೂ ನಡೆಯುವದು.

**ಕಾ. ಮೂ:**— ದಾಹಯುಕ್ತ ರೋಗಗಳ ದ್ವಿತೀಯಾವಸ್ಥೆಯಲ್ಲಿ, ಹೃದಯದಲ್ಲಿಯ ಧಡಧಡಿಕೆ. ಹೃದಯದ ಅಶಕ್ತತೆಯು ಮಂದನಾಡಿಯು ರಕ್ತವಾಹಿನಿಗಳಲ್ಲಿ ರಕ್ತದ ಗಂಟು ( embolus ) ಆಗಿ ಅದರಿಂದ ರಕ್ತಾ ಭಿಸರಣಕ್ಕೆ ವ್ಯತ್ಯಾಸವಾಗೋಣ.

**ನೇಟ್ರಂ. ಮೂ:**— ಪಾಂಡುರೋಗವುಳ್ಳ ರೋಗಿಗಳ ಹೃದಯವು ಅಶಕ್ತವಿದ್ದು ಧಡಧಡಿಸುತ್ತಿದ್ದಲ್ಲಿ ರಕ್ತವು ನೀರಿನಂತೆ ತಿಳುವಿದ್ದು ದೇಹದಲ್ಲಿ ಅಲ್ಲಲ್ಲಿ ನೀರುವುಳ್ಳ ಬಾವು ಬಂದಿದ್ದಲ್ಲಿ ರೋಗಿಯು ದುಃಖವುಳ್ಳವನೂ ಖಿನ್ನನೂ ಇದ್ದಲ್ಲಿ ಹೃದಯದಲ್ಲಿ ಬಿಗಿದಂತೆ ಅನಿಸುತ್ತಿದ್ದಲ್ಲಿ ನಾಡಿಯು

ತೀವ್ರ ಹಾರುವದು. ನಾಡಿಯ ಬಡಿತಗಳು ತಪ್ಪಿ ಬೀಳುತ್ತಿದ್ದಲ್ಲಿ ಪ್ರಾತಃಕಾಲದಲ್ಲಿ ತಲೆನೋವು ಇದ್ದಲ್ಲಿ.

**ವ್ಯಾ. ಫಾ:—** ಹೃದಯ ಭಾಗದಲ್ಲಿಯೂ, ಹೃದಯದಲ್ಲಿಯೂ, ಬಾಣ ಚುಚ್ಚಿದಂತೆ ತೀವ್ರ ವೇದನೆ ಇದ್ದರೆ ಒಮ್ಮೊಂದೊಮ್ಮೆ ಎದೆಯಲ್ಲಿ ಧಡಧಡಿಸುತ್ತಿದ್ದರೆ.

**ಕಾ. ಸ:—** ನಾಡಿಯು ತೀವ್ರವು. ಮಂದ ಹಾಗೂ ಬಲದಿಂದ ಆಗುವಂಥ ವೇದನೆ. ಮುಖಚರ್ಯೆಯು ಬಾಡಿದ್ದು. ಮಾತಾಡಲು ಶಕ್ತಿ ಇಲ್ಲ. ಸ್ವಸ್ಥ ಅಲ್ಲಾಡದೆ ಬಿದ್ದುಕೊಂಡಿರಬೇಕೆಂಬ ಭಾವನೆ. ಇದರ ಜತೆಗೆ ಫೇರಂ ಫಾ. ಕೊಡಬೇಕು. ಜಲಶೋಧಯುಕ್ತ ಹೃದಯ ರೋಗವಿದ್ದಲ್ಲಿ.

**ಕಲ್ಕೆ. ಫಾ:—** ಹೃದಯದ ಕ್ರಿಯೆಯು ಅಶಕ್ತವಿರುವದು. ಶ್ವಾಸ ಎಳೆದುಕೊಳ್ಳುವಾಗ ತೀವ್ರ ವೇದನೆ. ಹೃದಯದಲ್ಲಿಯ ಧಡಧಡಿಸುವದೂ ಅದರಿಂದಾಗುವ ಅಶಕ್ತತೆಯೂ ಮಂದ ರಕ್ತಾಭಿಸರಣವೂ ಕೈಕಾಲುಗಳು ಅತಿ ಶೀತ; ಹೊಟ್ಟೆಯಲ್ಲಿ ವಾಯು ತುಂಬಿಕೊಂಡಿದ್ದರಿಂದ ಧಡಧಡಿಸುವದು. ಇತರ ಔಷಧಗಳ ಸಂಗಡ ಇದನ್ನು ನಡುನಡುವೆ ಕೊಡುವದು.

**ಉಪಯುಕ್ತ ಸೂಚನೆ:—** ಹೃದಯದ ವಿಕಾರಗಳು ಯಾವ ಇತರ ರೋಗಗಳಿಂದಾಗಿರುವವೋ ಆ ರೋಗಗಳ ಬಗ್ಗೆ ಉಪಚಾರ ಮಾಡಬೇಕು. ಪ್ರತ್ಯಕ್ಷ ಹೃದಯದಲ್ಲಿ ವಿಕಾರವಾದ ಕಾಲಕ್ಕೆ ಹೆಚ್ಚಿಗೆ ಜಾಗ್ರತೆ ಬೇಕು. ಹೃದಯಕ್ಕೆ ತಾಪವಾಗುವಂಥ ಯಾವದೂ ಕೆಲಸ ಮಾಡಬಾರದು. ಜಾಣ ಡಾಕ್ಟರರ ಕಡಿಂದ ಪರೀಕ್ಷೆ ಮಾಡಿಸಿ ಕೊಳ್ಳಬೇಕು. ಮಿತಿಮೀರಿ ತಿನ್ನುವದು, ಚಹ, ಕಾಫಿ, ಮದ್ಯ ಮುಂತಾದವುಗಳನ್ನೂ ಮಿತಿಮೀರಿ ಸೇವಿಸೋಣ, ಅನಿಯಮಿತ ಇರುವಿಕೆ ಮಿತಿಗೆಟ್ಟು ಶ್ರಮಬಡೋಣ, ಅಟ್ಟದ ಪಾವಟಿಗೆ ಮುಂತಾದ ಎತ್ತರವನ್ನು ಏರೋಣ ಇಂಥವುಗಳನ್ನು ತಪ್ಪಿಸಬೇಕು. ಮನಕ್ಕೆ ಸಂತಾಪವಾಗುವಂಥ, ಚಿಂತೆ ಉತ್ಪನ್ನವಾಗುವಂಥ ಯಾವದೇ ಕಾರ್ಯ ಮಾಡಬಾರದು. ಶೌಚವು ಸಾಫವಾಗುವಂತೆ ವ್ಯವಸ್ಥೆ ಇಡಬೇಕು. ಹೊಟ್ಟೆಯಲ್ಲಿ ವಾಯುವು

ತುಂಬಿಕೊಂಡಿರಬಾರದಾಗಿಯೂ ಕರುಳುಗಳು ಸ್ವಚ್ಛವಿರಬೇಕೆಂಬದಾಗಿ ಬಿಸಿನೀರಿನ ಬಸ್ತಿಯನ್ನು ಮೇಲಿಂದ ಮೇಲೆ ತೆಗೆದುಕೊಳ್ಳಬೇಕು. ಹೃದಯದಲ್ಲಿ ಧಡಧಡಿಸುವದೂ ವೇದನೆಯೂ ಆಗಬಾರದಾಗಿ ಮಾನಸಿಕ ಮತ್ತು ಶಾರೀರಿಕ ವಿಶ್ರಾಂತಿಯನ್ನು ಆವಶ್ಯಕ ತೆಗೆದುಕೊಳ್ಳಬೇಕು. ಸ್ವಸ್ಥ ಬಿದ್ದುಕೊಂಡಿರಬೇಕು. ಹಾಗೇ ಮಾಡದಿದ್ದರೆ ಒಮ್ಮಿಂದೊಮ್ಮೆ ಹೃದಯದ ಕ್ರಿಯೆಯು ನಿಂತು ಹೋಗಿ (ಕೊನೆಯ) ಅಪಾಯವಾಗುವ ಸಂಭವವಿದೆ.

---

# ಹೃದಯ ಶೂಲೆ

**Angina Pectoris** ಅಂಜಾಯ್ನಾ ಪೆಕ್ಟೋರಿಸ್.

ಹೃದಯದಲ್ಲಿ ನಿಂತು ನಿಂತು ಒಮ್ಮಿಂದೊಮ್ಮೆ ಉದ್ಭವಿಸುವ ಶೂಲೆಗೆ ಹೃದಯಶೂಲೆ ಎನ್ನುವರು. ಹೃದಯದಲ್ಲಿ ಕಸುವಿನಿಂದ ಬಿಗಿದಂತೆ ಅನಿಸುವದು. ನಿಂತು ನಿಂತು ಮರಣಪ್ರಾಯ ವೇದನೆ ಉದ್ಭವಿಸುವದು ಮತ್ತು ಉಸುರುಗಟ್ಟಿದಂತಾಗುವದು. ಎದೆಯ ಎಡಗಡೆಯ ಭಾಗದಲ್ಲಿ ನೋಯುವದು. ಸ್ವಲ್ಪ ಶ್ರಮ ಮಾಡಿದ ಕೂಡಲೆ ಹೃದಯದಲ್ಲಿಯ ಶೂಲೆಯ ಲಹರಿ ಬರುವದು (ಏಳುವದು) ವೇದನೆ. ಎದೆಯ ಎಡಭಾಗದಿಂದ ಎಡಗೈಗೆ ಇಳಿಯುವದು. ಮುಖಚರ್ಯೆಯು ಮೇಲಿಂದ ರೋಗಿಗೆ ಬಹಳೇ ಭಯಂಕರ ವೇದನೆ ಆಗುತ್ತಿರಬಹುದೆಂದು ಕಲ್ಪನೆಯುಂಟಾಗುವದು. ಮುಖಚರ್ಯೆಯು ಪ್ರೇತದಂತೆ ನಿಸ್ತೇಜ ಕಾಣುವದು. ಸರ್ವಾಂಗವೆಲ್ಲ ಜಿಗಟು ಬೆವರು ಬಿಡುವದು. ರೋಗಿಯು ತೀರ ಅಸ್ವಸ್ಥನಿದ್ದು ಹೇಗಾದರೂ ಸಮಾಧಾನವಾಗುವದಕ್ಕೋಸ್ಕರ ಅವನ ಎಲ್ಲ ಪ್ರಯತ್ನ ನಡೆದಿರುವದು. ಉಸುರುಗಟ್ಟಿದಂತಾಗುವದು ಮತ್ತು ಎದೆಯಲ್ಲಿ ಗಟ್ಟಿಯಾಗಿ ಬಿಗಿದಂತೆ ಭಾವನೆಯುಂಟಾಗುವದು. ಆದರಿಂದ ಬಹಳೇ ಅಸಹ್ಯ ಕಷ್ಟವಾಗುವದು. ೧೨ ಮಿನಿಟಿನಿಂದ ೧।೨ ತಾಸುಗಳ ವರೆಗೆ ಸಹ ಈ ದುಃಖ ಸಹನಮಾಡಬೇಕಾಗುವದು. ಒಮ್ಮೊಮ್ಮೆ ರೋಗಿಯು

ಆದರಲ್ಲಿಯೇ ಮರಣಹೊಂದುವನು. ಇಂಥ ಸಮಯದಲ್ಲಿ ನಾಡಿಯು ಕ್ಷೀಣವೂ ಮಂದವೂ ಇರುವದು. ಇದು ಅಶುಭ ಚಿನ್ಹವೆಂದು ತಿಳಿಯಬೇಕು. ಮೂತ್ರವು ಬಹಳಾಗುವದೂ, ಇಲ್ಲವೆ ಬೆವರು ಬಹಳು ಬಿಡುವದೂ- ಈ ಲಕ್ಷಣಗಳು ಬಹುಶಃ ಬೇನೆಯು ನಿಲ್ಲುವ ಕಾಲದ ಲಕ್ಷಣಗಳು. ವಾಂತಿಯೂ ಸೆಟೆಯುವದೂ ಕಂಡುಬರುವವು. ಇಳಿತರ ವಯಸ್ಸಿನವರಲ್ಲಿಯೇ ಈ ರೋಗವು ಕಂಡುಬರುವದು. ಶ್ರೀಮಂತರಲ್ಲಿಯೂ ಬುದ್ಧಿವಂತರಲ್ಲಿಯೂ ಈ ಬೇನೆಯ ಪ್ರಮಾಣವು ಹೆಚ್ಚು. ಹೃದಯದ ವಿಕಾರದಲ್ಲಿಯೂ ಧಮನಿಗಳ ವಿಕಾರದಲ್ಲಿಯೂ ರೋಗವಾಗುವದು.

ಮಾನಸಿಕ ಹಾಗೂ ಶಾರೀರಿಕ ಶ್ರಮ ಹೆಚ್ಚು ಮಾಡಿದಲ್ಲಿ ಈ ರೋಗವು ಮೇಲಿಂದ ಮೇಲೆ ಉದ್ಭವಿಸುವದಾದ್ದರಿಂದ ಶಾರೀರಿಕ ಹಾಗೂ ಮಾನಸಿಕ ವಿಶ್ರಾಂತಿಯು ಅವಶ್ಯಕತೆ ಇರುವದು.

**ಕಾ. ಫಾ:—** ಸಂದಿವಾತದ ಸಂತರವೂ ಶಕ್ತಿಯನ್ನು ಕ್ಷೀಣ ಮಾಡುವ ರೋಗಗಳಲ್ಲಿಯೂ ಎದೆ ಧಡಧಡಿಸುವದೂ ಹೃದ್ರೋಗವೂ ಇರುವದು ಆಗಾಗ ಧಡಧಡಿಸುವದರಿಂದಾಗುವ ಅಸ್ವಸ್ಥತೆ, ಸಾಧಾರಣ ಮಾನಸಿಕ ದುರ್ಬಲತೆ ಉದಾಸೀನತೆ, ಖಿನ್ನತೆ, ಗ್ಲಾನಿಯ ಪ್ರವೃತ್ತಿ; ಮುಖಚರ್ಯೆಯು ನಿಃಸತ್ವ; ಮ್ಯಾ. ಫಾ. ದ ಸಂಗಡ ಅದಲುಬದಲು ಮಾಡಿಕೊಡಬೇಕು.

**ಮ್ಯಾ. ಫಾ:—** ನಿಂತು ನಿಂತು ಎದೆ ಧಡಧಡಿಸುವದು. ಹೃದಯ ಶೂಲೆ. ಹೃದಯದಲ್ಲಿಯೂ ಹೃದಯದ ಸುತ್ತಮುತ್ತಲೂ ತೀವ್ರ ಬಾಣ ಬಡೆದಂತೆ ವೇದನೆ ಇದ್ದರೆ ಬಿಸಿನೀರಿನೊಳಗಿಂದ ಕೊಡಬೇಕು.

**ನೇಟ್ರಂ. ಮೂ:—** ರಕ್ತ ಕ್ಷೀಣವಾದ ರೋಗಿಗಳ ಎದೆಯಲ್ಲಿ ಧಡ ಧಡಿಸುವದು. ರಕ್ತವು ನೀರಿನಂತೆ ತಿಳುವು. ಕೈಕಾಲಿಗೆ ಬಾವು, ರೋಗಿಯು ಖಿನ್ನನೂ ಮ್ಲಾನನೂ ಇದ್ದರೆ.

**ಫೇ. ಫಾ:—** ದಾಹಯುಕ್ತ ರೋಗಗಳಲ್ಲಿ ಹೃದಯದ ಸುತ್ತ ಮುತ್ತಲು ಮಂದ ನೋವು. ತಲೆಯ ಕಡೆಗೆ ರಕ್ತಾಧಿಕ್ಯವಿದ್ದಮೂಲಕ

ಮುಖಚರ್ಯೆಯು ಕೆಂಪಾಗಿರುವದು. ಮ್ಯಾ. ಫಾ. ಮತ್ತು ಇದನ್ನು ಸರ್ತೆಯ ಮೇಲೆ ಕೊಡುವದು.

**ಕಲ್ಕೆ. ಫ್ಲೋ:**— ಹೃದಯದ ಕ್ರಿಯೆಯು ಮಂದವಿದ್ದು ರೋಗಿಯು ಅಶಕ್ತನಿರುವನು.

**ಉಪಯುಕ್ತ ಸೂಚನೆ:**— ಹೃದಯರೋಗದಂಥ ಕಠಿಣ ರೋಗವಾದಲ್ಲಿ ತಜ್ಞ ವೈದ್ಯರ ಕಡಿಂದಲೇ ಉಪಚಾರಮಾಡಿಸಬೇಕು. ಸಾಧಾರಣ ಜನರಿಗೆ ಈ ಬೇನೆಯ ನಿದಾನವಾಗುವದು ದುಸ್ತರ. ಕೆಲವು ರೋಗಗಳು ನೆಟ್ಟಗಾಗುವದೇ ಅಶಕ್ಯ. ರೋಗಿಯು ಶ್ರಮ ಮತ್ತು ಕಷ್ಟಬಡಬಾರದು. ಮದ್ಯ, ಕಾಫಿ, ಹೊಗೆಸೊಪ್ಪು ಮುಂತಾದ ಮಾದಕಪದಾರ್ಥಗಳನ್ನು ತೀರ ವರ್ಜಿಸಬೇಕು. ಧಡಧಡಿಸುವದೂ ನೋವೂ ಇದ್ದಾಗ ಪೂರ್ಣ ವಿಶ್ರಾಂತಿಯು ಅವಶ್ಯಕವಿದೆ. ಅನ್ನವು ಹಗುರು ಇದ್ದು ಪೌಷ್ಟಿಕವಿರಬೇಕು. ಉಣ್ಣೆಯ ಬೆಚ್ಚನ ಬಟ್ಟೆಯನ್ನು ಎದೆಯ ಸುತ್ತಮುತ್ತಲು ಸುತ್ತಿಕೊಳ್ಳಬೇಕು. ಶೌಚಕ್ಕೆ ಸ್ವಚ್ಛವಾಗುವದಕ್ಕಾಗಿ ಯಾವತ್ತು ಜಾಗರೂಕರಿರಬೇಕು.

---

# ಕ್ಷಯರೋಗ

**Consumption.** **ಕನ್ ಸಮ್ ಶನ್.**

ಕ್ಷಯರೋಗವು ಬಹಳ ಭಯಂಕರ ರೋಗವು. ಈ ರೋಗವಾದವರು ಬಹಳಮಟ್ಟಿಗೆ ನೆಟ್ಟಗಾಗುವದಿಲ್ಲ. ರೋಗಿಯ ಮರಣವಾದ ಕೂಡಲೆ ರೋಗದ ಅಂತವಾಗುತ್ತದೆ ಅಂತಲ್ಲ. ರೋಗಿಯ ಮಕ್ಕಳು ಮರಿಗಳಿಗೆ ಸಹ ಈ ರೋಗದ ಕಷ್ಟಭೋಗಿಸಬೇಕಾಗುವದು. ಈ ರೋಗವು ಪುಪ್ಪುಸದಲ್ಲಿಯೇ ಆಗುತ್ತದೆಂತಲ್ಲ. ಅದು ತ್ವಚೆ, ಮೆದುಳು, ವೃಕ್ಕ, ಗರ್ಭಾಶಯ, ಕಂಠ, ಅಸ್ಥಿ ಮುಂತಾದವುಗಳಲ್ಲಿ ಸಹ ಆಗುವದುಂಟು.

ಶರೀರದಲ್ಲಿ ಇತರ ಯಾವ ಲಕ್ಷಣಗಳೂ ಇರದೆ ದಿನಾಲು ಸ್ವಲ್ಪ ಜ್ವರ ಬಹುದಿವಸ ಬರುವದು. ಕ್ಷಯದ ಲಕ್ಷಣವೆಂದು ತಿಳಿಯುತಕ್ಕದ್ದು.

ಜ್ವರವಿಲ್ಲದೆ ಕ್ಷಯದ ಬೀಜವು ಬೆಳೆಯಲಾರದು. ಆದ್ದರಿಂದ ಸ್ವಲ್ಪ ಜ್ವರವಿದ್ದರೆ ಶರೀರದಲ್ಲಿ ಎಲ್ಲಿಯಾದರೂ ಕ್ಷಯದ ಬೀಜವು ಬೆಳೆಯಹತ್ತಿದೆಂದು ಸ್ಪಷ್ಟವಾಗಿ ತಿಳಿಯಬೇಕು. ಏನೂ ಕಾರಣವಿಲ್ಲದೆಯೂ ಇತರ ಯಾವ ಭಾವನೆಗಳೂ ಇರದೆ, ಶಕ್ತಿಯು ಕ್ಷೀಣವಾಗುತ್ತಿರುವದು ಇದ್ದರೆ ಮುಂದಾಗುವ ಕ್ಷಯರೋಗದ ಲಕ್ಷಣವೆಂದು ತಿಳಿಯಬೇಕು. ಕ್ಷಯಕ್ಕೆ ದೃಶ್ಯಸ್ವರೂಪ ಬರಹತ್ತಿದನಂತರ, ಅಶಕ್ತತೆ, ಅಪಚನದ ರೋಗಿಗಳು, ಮಾಂದ್ಯ, ದಣುವಿಕೆ ಮುಂತಾದ ಕ್ಷುದ್ರ ಕಾಣುವ ಲಕ್ಷಣಗಳು ಕಂಡು ಬರುವವು. ಆದರೆ ಅವು ಬಹುದಿವಸ ಮನೆಮಾಡಿಕೊಂಡು ನಿಂತರೆ ಕ್ಷಯ ರೋಗವಾಗುವ ಸಂಭವವಿದೆ ಎಂದು ತಿಳಿದುಕೊಂಡು ಯೋಗ್ಯ ಚಿಕಿತ್ಸೆ ಮಾಡುವದು ಲೇಸು. ಕಫಕ್ಷಯವೂ ಸಂಗ್ರಹಣಿಯೂ ಎಲ್ಲರ ಪರಿಚಯದ ಬೇನೆಗಳು ಇದ್ದು ಈ ಎರಡೂ ಬೇನೆಗಳ ಚಿಕಿತ್ಸೆ ಕಫಕ್ಷಯ ಮತ್ತು ಅತಿಸಾರ ಈ ವಿವರಗಳಲ್ಲಿ ಕೊಟ್ಟಿದೆ. ಅದನ್ನು ನೋಡಬೇಕು. ಕ್ಷಯ ರೋಗದ ಲಕ್ಷಣಗಳು ಕಂಡುಬಂದ ಕೂಡಲೆ ಬೈಲುಹವೆಯಲ್ಲಿ ಹೋಗಿ ಇರಬೇಕು. ಬೆಂಣೆ, ಹಸಿ ಹಾಲುಗಳನ್ನು ಹೆಚ್ಚು ಪ್ರಮಾಣದಲ್ಲಿ ತೆಗೆದು ಕೊಳ್ಳಬೇಕು. ಆಡಿನಹಾಲು ಇಂಥ ರೋಗಿಗಳಿಗೆ ಉಪಯೋಗವಾಗುವದು. ತೀರ ಆಡಿನ ಹಾಲಿನಿಂದಲೇ ಇಂಥ ರೋಗಿಗಳು ನೆಟ್ಟಗಾದ ಉದಾಹರಣಗಳು ಕಂಡುಬಂದಿವೆ. ಸ್ತ್ರೀಸಂಗವನ್ನು ವರ್ಜಿಸಬೇಕು. ಸಿ. ಮತ್ತು ಇತರ ಔಷಧಗಳನ್ನು ಭಾವನಾನುಸಾರ ಕೊಡಬೇಕು. ಕಫಕ್ಷಯದ ಕೆಳಗಿನ ಉಪಯುಕ್ತ ಸೂಚನೆಗಳನ್ನು ಓದಿರಿ.

---

## ಹಸಿವೆಗೇಡು

ಜಠರವು ಬಹಳೇ ಸೂಕ್ಷ್ಮ ಇಂದ್ರಿಯವಿದ್ದು ಶರೀರದಲ್ಲಿ ಎಲ್ಲಿಯೂ ವಿಕೃತಿಯಾದಲ್ಲಿ ಅದರ ಪರಿಣಾಮವು ಜಠರದ ಮೇಲೆ ಆಗುವದು. ಬಹಳ ಮಾಡಿ ಎಲ್ಲ ಶೀಘ್ರಗಾಮಿ ರೋಗಗಳಲ್ಲಿಯೂ ಬಹುದಿವಸದ ರೋಗಗಳಲ್ಲಿಯೂ ಹಸಿವೆಗೇಡೆಂಬ ಭಾವನೆ ಆಗುವದುಂಟು. ಅಗ್ನಿಮಾಂದ್ಯದಲ್ಲಿ

ಅದು ಪ್ರಮುಖವಾಗಿ ಕಂಡುಬರುವದು. ಹಸಿವಿಗೇಡು ಇದೊಂದೇ ಭಾವನೆಯನ್ನು ಲಕ್ಷ್ಯದಲ್ಲಿ ತಂದು ಅದರ ಮೇಲೆ ಉಪಯೋಗವಾಗುವಂಥ ಎಲ್ಲ ಔಷಧಗಳನ್ನು ಈ ಕೆಳಗೆ ಹೇಳಿದ್ದೇವೆ.

**೯೬. ಫಾ:—** ಮೈಯಲ್ಲಿ ಜ್ವರದ ಲಕ್ಷಣಗಳಿದ್ದು ಹಸಿವೆ ಇಲ್ಲದಿದ್ದರೆ.

**೯೭. ಫಾ:—** ಆಮ್ಲಪಿತ್ತದ ಮೂಲಕ ಹಸಿವೆ ಇಲ್ಲದಾಗಿದ್ದರೆ, ಎದೆಯಲ್ಲಿ ಹುಳಿಸುಡುತ್ತಿದ್ದರೆ ನಾಲಗೆಯ ಹಿಂಭಾಗದ ಮೇಲೆ ಹಳದಿ (ಅರಶಿನಬಣ್ಣದ) ಅಗ್ರುವಿದ್ದರೆ.

**೯೮. ಫಾ:—** ಅಪಚನದ ಮೂಲಕ ಹಸಿವೆ ಆಗದಿದ್ದರೆ, ರಕ್ತಕ್ಷೀಣತೆಯ ಮೂಲಕ ಬರುವ ಅಶಕ್ತತೆಯಲ್ಲಿ ಹಸಿವೆ ಬೆಳೆಸುವದಕ್ಕೆ ದಿವ್ಯ ಔಷಧವಿದು.

**ಉಪಯುಕ್ತ ಸೂಚನೆ:—** ಹಸಿವೆಯ ಬಗ್ಗೆ ಆಗುವ ತೊಂದರೆಗಳೆಲ್ಲ ಶರೀರದಲ್ಲಾಗಿರುವ ಇತರ ಯಾವದಾದರೊಂದು ರೋಗದ ಲಕ್ಷಣವೆಂದು ತಿಳಿಯಲ್ಪಡುತ್ತದೆ. ಎಷ್ಟೋ ಸಾರೆ ಹೊಟ್ಟೆಗೆ ವಿಶ್ರಾಂತಿ ಕೊಡುವದು ಅಂದರೆ ಏನೂ ತಿನ್ನದಿರೋಣ, ಲಂಘನ ಮಾಡೋಣ ಇದೇ ಆ ರೋಗದಮೇಲಿನ ಉಪಚಾರವಿರುವದು. ಇಷ್ಟರಿಂದ ಕಾರ್ಯಭಾಗವಾಗದಿದ್ದರೆ ಮತ್ತೇನಾದರೂ ಚಿಂತೆಮಾಡುವಂಥ ಬೇನೆಯಾಗಿದೆಂದು ತಿಳಿದು ಕಾಲಕ್ಕೆ ಸರಿಯಾಗಿ ಬೇನೆಯಕಡೆಗೆ ಲಕ್ಷ ಕೊಡುವದು ಅವಶ್ಯವಿರುವದು. ಇಲ್ಲದಿದ್ದರೆ ಅಪಾಯವಾಗುವ ಸಂಭವವಿರುವದು. ರೋಗಿಗೆ ಹಸಿವೆ ಇಲ್ಲದಲೆ ತಿನ್ನಲಿಕ್ಕೆ ಕೊಡಬಾರದು. ಹಸಿವೆ ಬೆಳೆಯುವಂತೆ ಉಪಚಾರ ಮಾಡಬೇಕು. ಇಚ್ಛೆ ಇಲ್ಲದೆ ನಿಸರ್ಗದ ವಿರುದ್ಧ ವರ್ತಿಸಿದರೆ ಅಪಾಯವಾಗದೆ ಇರದು ಎಂಬದು ಮರೆಯಕೂಡದು. ಬಹುದಿವಸ ರೋಗದಲ್ಲಿ ಹಸಿವೆಯು ಇಚ್ಛೆಯಾಗುವದು ಗುಣಮುಖದ ಲಕ್ಷಣವೆಂದು ತಿಳಿದು ರೋಗಿಯ ಇಚ್ಛೆಯಂತೆ ಸ್ವಲ್ಪ ಅನ್ನ ಕೊಟ್ಟಲ್ಲಿ ಅದರಿಂದ ಗುಣವಾಗುವದು. ಆದರೆ ಖರೇ ಹಸಿವೆ ಯಾವುದು ಸುಳ್ಳು ಹಸಿವೆ ಯಾವುದು ಇದನ್ನು ಯೋಗ್ಯರೀತಿಯಿಂದ ತಿಳಿದುಕೊಳ್ಳಬೇಕು. ಯಾವುದರಿಂದ

ಹೊಟ್ಟೆಯಲ್ಲಿ ಜಾಡ್ಯವಾಗಲಿಕ್ಕಿಲ್ಲ ಮತ್ತು ಪಚನ ಶಕ್ತಿಯಮೇಲೆ ಒತ್ತಾಯವಾಗಿ ಪಚನಶಕ್ತಿಯು ಕೆಡಲಿಕ್ಕಿಲ್ಲ ಇಂಥ ಅನ್ನವನ್ನು ಬೇಕಾದಷ್ಟು ಕೊಡದೆ ಸ್ವಲ್ಪೇ ಪ್ರಮಾಣದಲ್ಲಿ ಕೊಟ್ಟು ಮೆಲ್ಲಮೆಲ್ಲಗೆ ಅನ್ನವನ್ನು ಬೇಳೆಸುವದೇ ಜಾಣತನದ ಲಕ್ಷಣವು. ಮತ್ತು ಇದರಿಂದಲೇ ಕಡೆಗೆ ಗುಣವಾಗುವದು. ಉಣ್ಣುವಾಗ ನೀರು ಮೂಲತಃ ಕುಡಿಯಬಾರದು. ಕುಡಿಯುವದಾದರೆ ತೀರ ಕಡಿಮೆ ಕುಡಿಯಬೇಕು. ಊಟದ ಪೂರ್ವದಲ್ಲಿ ಇಲ್ಲವೇ ಊಟವಾದ ೨ತಾಸಿನಮೇಲೆ ಬೇಕಷ್ಟು ನೀರು ಕುಡಿಯಬೇಕು. ವ್ಯಾಯಾಮವನ್ನು ಪ್ರಾತಃಕಾಲದಲ್ಲಿ ವಿಶೇಷತಃ ಸೂರ್ಯೋದಯದ ಪೂರ್ವದಲ್ಲಿ ನಿಯಮಿತತನದಿಂದ ತೆಗೆದುಕೊಳ್ಳುತ್ತಿದ್ದಲ್ಲಿ ಅದರಿಂದ ಬಹಳೇ ಹಿತವಾಗುವದು.

---

# ಭಾವನಾಕೋಶ

ಯಾವ ಚಿಕಿತ್ಸಾಶಾಸ್ತ್ರದಲ್ಲಿ ಭಾವನೆಗಳಿಗೆ ಹೆಚ್ಚು ಮಹತ್ವ ಕೊಡಲ್ಪಡುವದೋ— ಅದಕ್ಕೆ ಭಾವನಾಪ್ರಧಾನ ಚಿಕಿತ್ಸಾಶಾಸ್ತ್ರ ಎಂದೂ ಅನ್ನಬಹುದು. ಅದರಲ್ಲಿ ಭಾವನಾಕೋಶದ ಮಹತ್ವ ಬಹಳ ಇರುವದುಂಟು. ರೋಗಿಗಳಲ್ಲಿ ಕಂಡುಬರುವ ಭಾವನೆಗಳನ್ನು ನೋಡಿಕೊಂಡು ರೋಗದ ಹೆಸರು ನಿಶ್ಚಯಮಾಡುವದು ಇಲ್ಲವೆ ರೋಗಿಗಳ ಅಂತರಿಂದ್ರಿಯಗಳಲ್ಲಿ ವಿಕೃತ ವಿಜ್ಞಾನಶಾಸ್ತ್ರದೃಷ್ಟಿಯಿಂದ (ಪ್ಯಾಥಾಲೊಜಿ Pathology) ಯಾವ ವ್ಯತ್ಯಾಸ ಅಥವಾ ಹೆಚ್ಚು ಕಡಿಮೆ ಆಗಿರುವದೋ ಇದರ ಅನುಮಾನ ಮಾಡುವದು ಮತ್ತು ಆನಂತರ ರೋಗದ ಹೆಸರಿಗೆ ಅನುಸರಿಸಿ ಇಲ್ಲವೆ ಅಂತರಿಂದ್ರಿಯದಲ್ಲಿಯ ವ್ಯತ್ಯಾಸದ ಮೇಲಿಂದ ಔಷಧವನ್ನು ನಿಶ್ಚಿಸುವದು ಇಂಥ ಸಂಗತಿಯು ( ಅಂದರೆ ಪ್ರಕಾರವು ) ಭಾವನಾಪ್ರಧಾನ ಚಿಕಿತ್ಸಾಶಾಸ್ತ್ರದಲ್ಲಿ ಕಂಡುಬರುವದಿಲ್ಲ. ಜೀವನ ರಸಾಯನ ಶಾಸ್ತ್ರವು ಭಾವನಾಪ್ರಧಾನ ಚಿಕಿತ್ಸಾಶಾಸ್ತ್ರವು ಇದರಲ್ಲಿ ರೋಗಿಗಳಲ್ಲಿ ಕಂಡುಬರುವ ಭಾವನೆಗಳ ಮೇಲಿಂದ ರೋಗವು ಯಾವುದಾಗಿರುವದು ಇದನ್ನು ನಿಶ್ಚಯಿಸುವದರ ಕಡೆಗೆ ಮುಖ್ಯವಾಗಿ ಲಕ್ಷವಿಲ್ಲ. ಲಕ್ಷಣಗಳ ಮೇಲಿಂದ ಯಾವ ಕ್ಷಾರಗಳು ಕಡಿಮೆಯಾಗಿರಬಹುದು. ಅನುಮಾನಮಾಡಿ ಯಾವ ಯಾವ ಕ್ಷಾರಗಳು ಕಡಿಮೆಯಾಗಿರಬಹುದು ಅವುಗಳನ್ನು ಸೂಕ್ಷ್ಮ ಪ್ರಮಾಣದಿಂದ ರೋಗಿಯ ಶರೀರಕ್ಕೆ ತುಂಬಿಕೊಡುವದು ಅಂದರೆ ಭರ್ತಿ ಮಾಡುವದು, ಇದೇ ಈ ಶಾಸ್ತ್ರದ ಮುಖ್ಯ ತತ್ವವಿದ್ದುದರಿಂದ, ಭಾವನೆಗಳು ಕಂಡಕೂಡಲೆ ಯಾವ ಕ್ಷಾರದ (ಗಳ) ಕೊರತೆಯ ದ್ಯೋತಕಗಳು ಆ ಭಾವನೆಗಳು ಇರುವದು (ವು), ಅದರ ಬಗ್ಗೆಯೇ ಮುಖ್ಯವಾಗಿ ವಿಚಾರಮಾಡುವದು ವಿಹಿತ. ಯಾವದೇ ವಿಶಿಷ್ಟ ಭಾವನೆಯ ಮೇಲಿಂದ ರೋಗವು ಯಾವದಾಗಿರುವದೆಂಬದನ್ನು ನಿಶ್ಚಯಿಸುವದು ಕಠಿಣವಿರುವದು. ಒಂದೇ ಭಾವನೆಯು ಒಂದರ

ಕಿಂತ ಹೆಚ್ಚು ರೋಗಗಳಲ್ಲಿ ಕಂಡುಬರುವದುಂಟು. ಆದ್ದರಿಂದ ರೋಗವನ್ನು ನಿಶ್ಚಯಿಸುವಕಾಲಕ್ಕೆ ಬೇರೆ ಯಾವ ಭಾವನೆಗಳು ಕಂಡುಬರುವವು ಅವುಗಳ ವಿಚಾರ ಸಹ ಮಾಡಬೇಕಾಗುವದು. ಆದರೆ ಈ ಶಾಸ್ತ್ರದಲ್ಲಿ ಭಾವನೆಯು (ಗಳ) ಮೇಲಿಂದ ಯಾವ ಕ್ಷಾರ ಕಡಿಮೆ ಆಗಿರುವದು (ವು) ಇದನ್ನು ತಿಳಿದುಕೊಳ್ಳಲು ಶಕ್ಯವಿದೆ; ಮತ್ತು ಆ ಕ್ಷಾರವನ್ನು (ಗಳನ್ನು) ಕೊಟ್ಟು ಆ ಭಾವನೆಯನ್ನು (ಗಳನ್ನು) ಇಲ್ಲದಂತೆ ಮಾಡಬಹುದು. ಒಂದೇ ರೋಗದಿಂದ ಗ್ರಸ್ತವಾದ ಅನೇಕ ರೋಗಿಗಳಲ್ಲಿ ಬೇರೆ ಬೇರೆ ಭಾವನೆಗಳು ಕಂಡುಬರುವವು. ರೋಗದ ಹೆಸರಿನ ಮೇಲಿಂದ ಔಷಧ ಕೊಡುವದು ನಿಶ್ಚಯಿಸಬೇಕಾದಲ್ಲಿ ಒಂದೇ ರೋಗದಿಂದ ಗ್ರಸ್ತವಾದ ಎಲ್ಲ ರೋಗಿಗಳಿಗೆ ಸಾಧಾರಣವಾಗಿ ಅದೇ ಔಷಧ ಕೊಡಬೇಕಾಗುವದು. ಆದರೆ ಜೀವಸ ರಸಾಯನ ಶಾಸ್ತ್ರದಲ್ಲಿ ಹೀಗೆ ಮಾಡಲಾಗದು. ಬೇರೆ ಬೇರೆ ಭಾವನೆಗಳ ಮೇಲಿಂದ ಬೇರೆ ಬೇರೆ ಕ್ಷಾರಗಳು ಕಡಿಮೆ ಆಗಿರಬಹುದಾಗಿರಬೇಕೆಂದು ತಿಳಿದುಕೊಂಡು ಆ ಅನುಮಾನಕ್ಕನುಸರಿಸಿ ಬೇರೆ ಬೇರೆ ರೋಗಿಗಳಿಗೆ ಒಂದೇ ರೋಗದಲ್ಲಿ ಸಹ ಬೇರೆ ಬೇರೆ ಔಷಧಗಳನ್ನು ಕೊಡಬೇಕಾಗುವದು. ಉದಾಹರಣಾರ್ಥವಾಗಿ ಚಳಿಜ್ವರದ ಉದಾಹರಣ ತೆಗೆದುಕೊಳ್ಳುವ- ಒಬ್ಬ ರೋಗಿಗೆ ಮಧ್ಯಾಹ್ನದ ಒಂದು ಗಂಟೆಗೆ ಜ್ವರಬರುವವು. ಮತ್ತೊಬ್ಬನಿಗೆ ಮುಂಜಾನೆ ೧೦-೧೧ ಗಂಟೆಯಲ್ಲಿ ಜ್ವರ ಬರುವವು. ಇನ್ನೊಬ್ಬನಿಗೆ ಸಾಯಂಕಾಲದಲ್ಲಿ-ಹೀಗೆ ತಿಳಕೊಳ್ಳುವ ಈ ಭಾವನೆಗಳು ಇದ್ದಲ್ಲಿ ಸಹ ರೋಗ ಒಂದೇ ಇದ್ದರೂ ಔಷಧ ಬೇರೆ ಬೇರೆ ಅಂದರೆ ಅನುಕ್ರಮದಿಂದ ಆಯಾ ರೋಗಿಗಳಿಗೆ ಫೇ. ಫಾ., ನೇ. ಮೂ., ಮತ್ತು ಕಾ. ಸ. ಎಂಬ ಬೇರೆ ಬೇರೆ ಔಷಧಗಳನ್ನು ಕೊಡಬೇಕಾಗುವದು. ಯಾಕಂದರೆ ಆಯಾ ಕ್ಷಾರಗಳು ಕಡಿಮೆ ಆದ್ದರಿಂದ ಆಯಾ ಬೇರೆ ಬೇರೆ ಭಾವನೆಗಳು ಕಂಡು ಬರುವವು. ಮತ್ತು ಅವುಗಳಿಗನುಸರಿಸಿ ಔಷಧ ಯೋಜನೆ ಮಾಡಬೇಕಾಗುವದು. ಮತ್ತೊಂದು ಉದಾಹರಣ ತೆಗೆದುಕೊಳ್ಳುವ. ಹಲ್ಲುನೋವು ಇದ್ದ ಒಬ್ಬಗೆ ಉಷ್ಣೋಪಚಾರದಿಂದ ಹಾಗೂ ಒತ್ತಿದ್ದರಿಂದ ಸಮಾಧಾನವೆನಿಸುವದು ಮತ್ತು ಶೀತೋಪಚಾರದಿಂದ ವೇದನೆ ಹೆಚ್ಚಾಗುವದು. ಈ ತರದ ಭಾವನೆ ಇದ್ದಲ್ಲಿ ಮ್ಯಾ. ಫಾ. ಎಂಬ ಔಷಧ ಕೊಡತಕ್ಕದ್ದು.

ಆದರೆ ಇನ್ನೊಬ್ಬ ರೋಗಿಗೆ ಉಷ್ಣೋಪಚಾರದಿಂದ ವೇದನೆ ಹೆಚ್ಚಾಗುವದೂ ಶೀತೋಪಚಾರದಿಂದ ವೇದನೆ ಕಡಿಮೆ ಆಗುವದೂ ಹೀಗೆ ಭಾವನೆ ಇದ್ದಲ್ಲಿ ಫೇ. ಪಾ ಎಂಬ ಔಷಧ ಕೊಡಬೇಕಾಗುವದು. ಮ್ಯಾ. ಫಾ. ವನ್ನು ಕೊಟ್ಟುದರಿಂದ ಗುಣಬರಲಾಗದು. ಹಲ್ಲು ಶೂಲೆ ಇದೆ ಇಷ್ಟರ ಮೇಲಿಂದಲೇ ಮ್ಯಾ. ಫಾ, ಇಲ್ಲವೆ ಫೇ, ಫಾ, ಇವುಗಳನ್ನು ಕೊಟ್ಟುದರಿಂದ ಗುಣ ಬರಲಾಗದು, ಅಪಚನದಲ್ಲಿ ನಾಲಗೆಯ ಮೇಲೆ ಬಿಳಿ, ಹಳದಿ, ಹಸರು ಮುಂತಾದ ಬೇರೆ ಬೇರೆ ತರಹದ ಅಗ್ರ (ಕಿಟ್ಟ) ಇರಬಹುದು. ಇದೊಂದೇ ಭಾವನೆಯ ಮೇಲಿಂದ ಅಪಚನವಾಗಿರಬಹುದೆಂಬ ಅನುಮಾನ ಮಾಡ ಬಹುದು, ಆದ್ದರಿಂದ ಸಾಧಾರಣವಾಗಿ ಇಷ್ಟರಮೇಲಿಂದಲೇ ಜೀವನ ರಸಾಯನ ಶಾಸ್ತ್ರದಿಂದ ಔಷಧ ಯೋಜನೆ ಮಾಡುವದು ಶಾಸ್ತ್ರ ದೃಷ್ಟಿ ಯಿಂದ ಸರಿಯಾಗಲಾರದು. ಹೀಗೆ ಮಾಡುವದು ಬಹ್ವಂಶ ತಪ್ಪು ಆಗುವದು. ನಾಲಗೆಯ ಮೇಲಿನ ಅಗ್ರದ (ಕಿಟ್ಟದ) ಸ್ವರೂಪದಮೇಲಿಂದ ಯಾವ ಯಾವ ಕ್ಷಾರಗಳು ಕಡಿಮೆಯಾಗಿರಬಹುದೆಂಬ ಅನುಮಾನಮಾಡಿ ಆಯಾ ಕ್ಷಾರಗಳನ್ನು ಆಯಾ ರೋಗಿಗಳಿಗೆ ಕೊಟ್ಟಿದ್ದರಿಂದಲೇ ರೋಗಿಗೆ ಗುಣಬರುವದು. ನಾಲಗೆಯಮೇಲೆ ಬಿಳಿ ಅಗ್ರವಿದ್ದಲ್ಲಿ ಕಾ. ಮೂ. ಎಂಬ ಔಷಧವನ್ನೇ ಕೊಡಬೇಕಾಗುವದು. ಬಂಗಾರದಂಥ ಹಳದಿ ಕಿಟ್ಟ (ಅಗ್ರ) ವಿದ್ದರೆ ನೇ. ಫಾ. ದಿಂದಲೇ ಗುಣಬರುವದು. ಸ್ವಲ್ಪದರಲ್ಲಿ ಹೇಳುವದಾದರೆ ಭಾವನೆ (ಲಕ್ಷಣ)ಗಳು ಯಾವ ರೋಗದಿಂದಾಗಿರಬಹುದೆಂಬ ಅನುಮಾನ ಮಾಡದೆ ಅವು ಯಾವ ಕ್ಷಾರದ ಕೊರತೆಯಿಂದುಂಟಾಗುವವು, ಇದನ್ನೇ ನೋಡುವದು ಹೆಚ್ಚಿನ ಮಹತ್ವವುಳ್ಳದ್ದು. ಈ ರೀತಿಯಿಂದ ವಿಚಾರ ಮಾಡಲಾಗಿ ಯಾವತ್ತು ಭಾವನೆಗಳು ಅವುಗಳಿಗೆ ಸರಿಯಾಗುವಂಥ ಉಪ ಯೋಗ ಬೀಳುವಂಥ ಯಾವತ್ತೂ ಕ್ಷಾರಗಳನ್ನೂ ತಿಳಿಸಿ ಹೇಳುವಂಥ ಮಾಹಿತಿಯನ್ನು ಒತ್ತಟ್ಟಿಗೆ ಕೊಡುವದು ಎಷ್ಟು ಉಪಯುಕ್ತ ಅಥವಾ ಮಹತ್ವದ್ದಿದೆ ಎಂಬುವದು ಸಹಜವೇ ಲಕ್ಷದಲ್ಲಿ ಬರುವದು.

ಈ ಪ್ರಕರಣದಲ್ಲಿ ಮನುಷ್ಯನ ಶರೀರದಲ್ಲಿ ವಿಕೃತ ಸ್ಥಿತಿಯಲ್ಲಿ ಕಂಡು ಬರುವಂಥ, ಯಾವತ್ತೂ ಭಾವನೆಗಳ ಯಾದಿ ಬಹಳಮಾಡಿ ಒತ್ತಟ್ಟಿಗೆ

ಕೊಡುವ ಪ್ರಯತ್ನಮಾಡಿದೆ. ಶರೀರದ ಬೇರೆ ಬೇರೆ ಅವಯುವಗಳಲ್ಲಿ ಕಂಡು ಒರುವ ಲಕ್ಷಣಗಳನ್ನು ಅಕಾರದಿಂದ ಅನುಕ್ರಮವಾಗಿ ಕೊಟ್ಟಿರುತ್ತದೆ. ಅವಯುವಗಳ ಹಾಗೂ ಕೆಲ ರೋಗಗಳ ಬೇರೆ ಬೇರೆ ವಿವರಗಳನ್ನು ತಯಾರಿಸಿ ಅವುಗಳನ್ನು ಸಹ ಅಕಾರದಿಂದ ಅನುಕ್ರಮವಾಗಿ ಛಾಪಿಸಿದೆ, ಆ ಆ ಒಳಭಾಗ ಗಳಲ್ಲಿ ( ಪೋಟ ಸದರು ) ಭಾವನೆಗಳನ್ನೂ ಶಕ್ಯವಿದ್ದಷ್ಟರಮಟ್ಟಿಗೆ ಅಕಾರ ಅನುಕ್ರಮದಿಂದ ಕೊಡುವ ಯತ್ನಮಾಡಿದೆ ಒಂದೇ ವಿವರದಲ್ಲಿ ಭಾವನೆಗಳ ಬೇರೆ ಬೇರೆ ಪ್ರಕಾರಗಳು ಇರುವದು ಶಕ್ಯವಿದೆ. ಉದಾಹರಣಾರ್ಥವಾಗಿ "ಮುಟ್ಟು" ಎಂಬ ವಿವರ ನೋಡಿರಿ, ಇದರಲ್ಲಿ ಮುಟ್ಟು ಯಾವ ವರ್ಣದ್ದು ಇರುವದು, ತಡವಾಗಿ ಆಗುವದೋ ತೀವ್ರವಾಗಿ ಆಗುವದೋ, ಹೆಚ್ಚಾಗುವದೋ ಕಡಿಮೆ ಆಗುವದೋ, ಆ ಕಾಲಕ್ಕೆ ಇತರ ಭಾವನೆಗಳು ಯಾವವು ಇರುವವು, ಮುಂತಾದ ಅನೇಕ ಪ್ರಕಾರಗಳು ಕಂಡುಬರುವವು. ಈ ಪ್ರಕಾರಗಳನ್ನು ಸ್ಥೂಲ ಮಾನದಿಂದ ಲಕ್ಷದಲ್ಲಿಟ್ಟುಕೊಂಡು ಅವುಗಳಲ್ಲಿ ಸಹ ಅಕಾರ ಪ್ರಕಾರ ಅನುಕ್ರಮದಿಂದ ಕೊಡುವ ಯತ್ನಮಾಡಿದೆ. ಆಯಾ ವಿವರಗಳಲ್ಲಿ ಯಾವತ್ತು ಭಾವನೆಗಳನ್ನು ಸ್ವತಂತ್ರವಾಗಿ ಕೊಟ್ಟು ಆಯಾ ಭಾವನೆಗಳಿಗೆ ಸರಿಯಾಗಿ ಉಪಯೋಗವಾಗುವ ಔಷಧಗಳನ್ನು ಸಹ ಅಲ್ಲಲ್ಲಿ ಭಾವನೆಗಳ ಎದುರಿನಲ್ಲಿ ಹೇಳಿದೆ.

ಎಷ್ಟೋ ಸ್ಥಳಗಳಲ್ಲಿ ಒಂದೊಂದು ಭಾವನೆಯ ಎದುರಿನಲ್ಲಿ ಒಂದರ ಕಿಂತ ಹೆಚ್ಚು ಔಷಧಗಳ ನಿರ್ದೇಶ ಕಂಡುಬರುವದು. ಆದರಿಂದ ಆ ಭಾವನೆಯಮೇಲೆ ಅಂದರೆ ಆ ಭಾವನೆಯನ್ನು ಇಲ್ಲಗೊಳಿಸಬೇಕಾದರೆ ಆಯಾ ಔಷಧಗಳು ಗುಣಕರವಾಗುವವು ಎಂಬದು ಅದರ ಅರ್ಥ. ಇಲ್ಲವೆ ಭಾವನೆಗಳ ಎದುರಿನಲ್ಲಿ ನಿರ್ದಿಷ್ಟಮಾಡಿದ ಕ್ಷಾರಗಳಲ್ಲಿ ( ಔಷಧಗಳಲ್ಲಿ ) ಯಾವುಗಳ ಕೊರತೆ ಶರೀರದಲ್ಲಿ ಆದ್ದರಿಂದ ಆ ಭಾವನೆಗಳುಂಟಾಗುವವು ಮತ್ತು ಕೊರತೆ ಹೊಂದಿದ ಯಾವ ಕ್ಷಾರಗಳನ್ನು ಪೂರೈಸಿ ಕೊಟ್ಟಲ್ಲಿ ಆ ಭಾವನೆ ಕಡಿಮೆಯಾಗುವವು ಎಂಬದನ್ನು ತಿಳಿದುಕೊಳ್ಳುವದು ಎಂಬುವದೇ ಜೀವನ ರಸಾಯನ ಶಾಸ್ತ್ರದ ಅರ್ಥವದೆ ಎಂದು ಅನ್ನ ಬಹುದು.

ಭಾವನೆಗಳ ಎದುರಿಸಲ್ಲಿ ತೋರಿಸಲ್ಪಟ್ಟ ಅನೇಕ ಔಷಧಗಳಲ್ಲಿ ಆ ಭಾವನೆ ಇಲ್ಲದಂತೆ ಮಾಡುವದಕ್ಕಾಗಿ ಯಾವ ಔಷಧದ ಉಪಯೋಗ ವಾಗುವದು ಎಂಬ ವಿಚಾರ ಸಹಜ ರೀತಿಯಿಂದುಂಟಾಗುವದು. ಒಂದೇ ಭಾವನೆಯ ಮೇಲಿಂದ ಔಷಧದ ಯೋಜನೆ ಮಾಡತಕ್ಕದ್ದಿರುವದಿಲ್ಲ. ರೋಗಿಯಲ್ಲಿ ಕಂಡುಬರುವ ಇತರ ಭಾವನೆಗಳ ಮೇಲಿಂದ ಸಹ ಔಷಧ ಯೋಜನೆ ಮಾಡುವದಿರುತ್ತದೆ. ಯಾವಾಗ್ಗೆ ಎಲ್ಲ ಭಾವನೆಗಳು ಒಂದೇ ಔಷಧದ ದ್ಯೋತಕಗಳಿರುವವು ಆಗ್ಗೆ ಮಾತ್ರ ಅದೊಂದೇ ಔಷಧ ಕೊಟ್ಟು ಎಲ್ಲ ಭಾವನೆಗಳನ್ನು ಇಲ್ಲಗೊಳಿಸಲು ಶಕ್ಯವಿದೆ. ಆದರೆ ಬೇರೆ ಬೇರೆ ಭಾವನೆ ಗಳ ಮೇಲಿಂದ ಒಂದಕ್ಕಿಂತ ಹೆಚ್ಚು ಕ್ಷಾರಗಳು ಕಡಿಮೆಯಾಗಿವೆಂದು ಕಂಡುಬರುವದೋ ಆಗ್ಗೆ ಕೊರತೆಯ ದ್ಯೋತಕಗಳಾದ ಎಲ್ಲ ಕ್ಷಾರಗಳನ್ನು ಕೊಡುವದು, ಅತ್ಯವಶ್ಯಕ. ಇದನ್ನು ಈ ಮೊದಲೇ "ವಿಷಯ ಪ್ರವೇಶ" ವೆಂಬ ಪ್ರಕರಣದಲ್ಲಿ "ಔಷಧಗಳ ಯೋಜನೆ" ಎಂಬ ವಿವರದ ಕೆಳಗೆ ಹೇಳಿದ್ದೇವೆ. ಅದಕ್ಕೆ ಅನುಸರಿಸಿ ಔಷಧ ಯೋಜನೆ ಮಾಡತಕ್ಕದ್ದು.

ಎಷ್ಟೋ ಸಾರೆ ಕೆಲ ರೋಗಿಗಳಲ್ಲಿ ಎಷ್ಟೋ ಮಹತ್ತ್ವವಿಲ್ಲದ ಭಾವನೆ ಗಳು ಕಂಡುಬರುತ್ತಿದ್ದು ಯಾವದೊಂದು ಲಕ್ಷಣವು ಪ್ರಧಾನರೂಪದಿಂದ ಕಂಡುಬರುವದು ಇಲ್ಲವೆ ಇತರ ಯಾವ ಲಕ್ಷಣಗಳು ಇಲ್ಲದೆ ಒಂದೆರಡು ಭಾವನೆಗಳು ಅಥವಾ ಲಕ್ಷಣಗಳು ತಾಪ ಕೊಡುವಂಥವು ಕಂಡುಬರುತ್ತವೆ, ಈ ವಿಶಿಷ್ಟಭಾವನೆಗಳು ಯಾವ ಕ್ಷಾರಗಳ ಕೊರತೆಯ ದ್ಯೋತಕಗಳೆಂಬ ದನ್ನು ಹುಡಿಕಿ ತೆಗೆಯುಲು ಭಾವನಾಕೋಶದ ಉಪಯೋಗ ಬಹಳೇ ಆಗುವದು, ಯಾವದೊಂದು ವಿಶಿಷ್ಟಭಾವನೆಗಳ ಮೇಲಿನ ಔಷಧ ಯಾವಾ ಗಲೂ ಸ್ಮರಣಕ್ಕೆ ಬರುವವು ಎಂದು ನಿಶ್ಚಿತವಾಗಿ ಹೇಳಕೂಡದು. ಗ್ರಂಥದಲ್ಲಿ ಹುಡಿಕಿ ತಗೆಯಬೇಕಾದರೆ ಸುಲಭವೂ ಚಿಲ್ಲನೆ ವೇಳೆಯೂ ಬೇಕಾಗುವದು. ಇಂಥ ಪ್ರಸಂಗಗಳು ಯಾವಾಗಲೂ ಬರುವವು ಆದ್ದರಿಂದ ಎಲ್ಲ ಭಾವನೆಗಳ ಸಂಗ್ರಹ ಅಥವಾ ಸಮಾವೇಶ ಮಾಡಿದಂಥ ಭಾವನಾಕೋಶದ ಉಪ ಯುಕ್ತತೆಯು ಬಹಳೇ ಇರುವದು ಎಂಬದನ್ನು ಹೇಳುವ ಆವಶ್ಯ ಕತೆಯೇ ಇಲ್ಲ.

ರೋಗಿಗಳಲ್ಲಿ ಇತರ ಯಾವ ಭಾವನೆಗಳೂ ಇರದೆ ಒಂದೇ ಭಾವನೆ ಇದ್ದು ಅದರ ಮೇಲೆ ಉಪಯೋಗವಾಗತಕ್ಕಂಥ ಎಷ್ಟೋ ಔಷಧಗಳನ್ನು, ಕೋಶದಲ್ಲಿ ಕೊಟ್ಟದ್ದು ಕೆಲಕಡೆಯಲ್ಲಿ ಕಂಡುಬರುವದು. ಇಂಥ ಪ್ರಸಂಗದಲ್ಲಿ ಆಯಾ ಔಷಧಗಳ ಗುಣಧರ್ಮ ಪ್ರಕರಣದಲ್ಲಿ ಕೊಟ್ಟ ಲಕ್ಷಣಗಳನ್ನು ನೋಡಿಕೊಂಡು, ಅವುಗಳಲ್ಲಿಯು ಸಾಮ್ಯ ಹಾಗೂ ಭೇದದರ್ಶಕ ಭಾವನೆಗಳ ವಿಚಾರಮಾಡಿ ಅವುಗಳಿಗೆ ಅನುಸರಿಸಿ ಮತ್ತೆ ಏನಾದರೂ ಭಾವನೆಗಳು ಉಂಟೋ ಇಲ್ಲವೋ ಎಂಬದರ ಸೂಕ್ಷ್ಮ ವಿಚಾರ ಮಾಡಬೇಕು. ಬಹುತರವಾಗಿ ಇಂಥ ಲಕ್ಷಣಗಳು ಕಂಡುಬರುವವು, ಅವುಗಳಿಗೆ ಅನುಸರಿಸಿಯೇ ಉಪಯೋಗವಾಗುವಂಥ ಔಷಧವನ್ನು ನಿಶ್ಚಯಿಸಬೇಕು. ಈ ದೃಷ್ಟಿಯಿಂದ ಭಾವನಾಕೋಶದ ಉಪಯೋಗ ಬಹಳಾಗುವಂತಿವೆ. ಭಾವನೆಗಳ ಬೇರೆ ಬೇರೆ ವಿಧಗಳೂ ಅವುಗಳ ದಿಗ್ದರ್ಶನವೂ ಭಾವನಾಕೋಶದಲ್ಲಿ ಒತ್ತಟ್ಟಿ- ಕೊಟ್ಟದ್ದು ಕಂಡುಬರುವದು. ಯಾವದಾದರೊಂದು ಭಾವನೆಗಾಗಿ ಭಾವನಾ ಕೋಶದಲ್ಲಿ ಹುಡಕುವಾಗ ಮತ್ತ್ಯಾವವಾದರೂ ಭಾವನೆಗಳು ರೋಗಿಗಳಲ್ಲಿ ದೊರೆಯುವವು ಎಂಬದು ಸಹಜರೀತ್ಯಾ ತಿಳಿದು ಬರುವದು. ಉದಾಹರಣಾರ್ಥ- " ತಲೆನೋವು " "ತಲೆಶೂಲೆ" ಎಂಬ ವಿವರ ನೋಡಿರಿ. "ಬಹಳ ದಿವಸದ ತಲೆನೋವು" ಎಂಬ ವಿವರದ ಕೆಳಗೆ ಕಲ್ಕೆ. ಫಾ; ನೇ. ಮ್ಯೂ.; ಸಿ. ಎಂಬ ಮೂರು ಔಷಧಗಳನ್ನು ಕೊಟ್ಟಿವೆ, ಆದರೆ ಅದೇ ವಿವರದ ಕೆಳಗೆ ತಲೆ ನೋವಿನ ಇತರ ಎಷ್ಟೋ ಪ್ರಕಾರಗಳನ್ನೂ ಸಹ ಹೇಳಿದೆ, ಉದಾಹರಣಾರ್ಥವಾಗಿ, ಒಮ್ಮೊಂದೊಮ್ಮೆ ತಲೆ ನೋಯಲು ಆರಂಭವಾಗುತ್ತದೆ, ಇದರ ಮೇಲೆ ನೇ. ಸ. ಔಷಧವೆಂದು ಹೇಳಲಾಗಿದೆ, ಅದೇ ಪ್ರಕಾರ ಪ್ರಾತಃ ಕಾಲದಲ್ಲಿ ತಲೆನೋವು, ದಂತೋದ್ಭವದ ಕಾಲಕ್ಕೆ ತಲೆನೋವು ಈ ಲಕ್ಷಣಗಳನ್ನು ಹೇಳಿ ಅದರ ಕೆಳಗೆ ಅವುಗಳಮೇಲೆ ಉಪಯೋಗವಾಗುವಂಥ ಔಷಧಗಳನ್ನು ಹೇಳಿರುತ್ತದೆ. ತಲೆ ನೋಯುವಕಾಲಕ್ಕೆ ಅವರೋಧ, ತಲೆಯಲ್ಲಿ ಸಪ್ಪಳಾಗೋಣ, ಕಣ್ಣುಗಳ ಮುಂದೆ ಚಿಕ್ಕೆಗಳು ಕಾಣೋಣ ಕಣ್ಣುಗಳೊಳಗಿಂದ ನೀರು ಸೋರೋಣ, ಆಕಳಿಕೆ ಬರೋಣ ಮುಂತಾದ ಭಾವನೆಗಳೂ ಆ ಕಾಲಕ್ಕೆ ಇರುವದು ಶಕ್ಯವಿದೆ, ಇದಕ್ಕೆ ಅನುಸರಿಸಿ ಇತರ ಭಾವನೆಗಳ ವಿಚಾರ ಹೇಗೆ ಮಾಡಬೇಕು, ಎಂಬದು ತೋಚುತ್ತದೆ, ಮತ್ತು

ಅದರ ಮೇಲಿಂದ ಔಷಧ ಯೋಜನೆ ಮಾಡಲು ಸುಲಭವಾಗುತ್ತದೆ. ಸ್ವಲ್ಪ ರಲ್ಲಿ ಹೇಳುವದೆಂದರೆ, ಜೀವನ ರಸಾಯನ ಚಿಕಿತ್ಸಾ ಶಾಸ್ತ್ರದಲ್ಲಿ ರೋಗಿ ಗಳಿಗೆ ಆಗುತ್ತಲಿರುವ ಭಾವನೆಗಳ ಮೇಲಿಂದ ಔಷಧ ಹೇಗೆ ಹುಡಿಕಿ ತಗೆಯ ಬೇಕು ಮತ್ತು ಆ ಭಾವನೆಗಳ ಬೇರೆ ಬೇರೆ ಪ್ರಕಾರಗಳನ್ನು ಲಕ್ಷ್ಯದಲ್ಲಿ ತಂದು ಕೊಂಡು ರೋಗಿಗೆ ಆಗಿದ್ದ ರೋಗದ ವಿಚಾರವನ್ನು ಯಾವಮಾರ್ಗದಿಂದ ನಡಿಸಬೇಕು, ಇದರ ಸ್ಥೂಲಮಾನದಿಂದ ದಿಗ್ದರ್ಶನದ ಭಾವನಾಕೋಶದಿಂದ ಸಹಜವೇ ಕಂಡುಬರುವಂತೆ ಇದೆ. ಸ್ವಲ್ಪರಲ್ಲಿ ಭಾವನಾಕೋಶವು ಔಷಧ ವನ್ನು ಹುಡಿಕಿ ತಗೆಯುವ ಉತ್ತಮ ಸಾಧನವೇ ಇದೆಂದು ತಿಳಿಯಲು ಸಂದೇಹವಿಲ್ಲ.

---

ಅಗ್ನಿಮಾಂದ್ಯ

ಕಲ್ಕೆ. ಫಾ.; ಫೇ. ಫಾ; ಕಾ. ಮೂ; ಕಾ. ಫಾ; ಕಾಲೀ. ಸ; ನೇ. ಮೂ.; ನೇ. ಫಾ; ಸಿ.

ಹಳೇ (ಬಹುದಿವಸದ)

ಅಗ್ನಿಮಾಂದ್ಯ— ಸಿ.

ಗಂಟಲದಲ್ಲಿ ಹುಳಿಸುಡೋಣ— ನೇ. ಫಾ.; ಸಿ.;

ಗಂಟಲದಲ್ಲಿ ಸುಡೋಣ— ಸಿ.

ಮುಖಚರ್ಯೆಯು ಕೆಂಪಾಗಿದ್ದಲ್ಲಿ— ಫೇ. ಫಾ.

ನಾಲಗೆಯು ಬಿಳೀ ಬೂದಿ ಬಣ್ಣದ್ದು ಇದ್ದಲ್ಲಿ— ಕಾ. ಮೂ.

ತಣ್ಣನ ಪೇಯಗಳನ್ನು ಕುಡಿಯುವ ಇಚ್ಛೆ ಇದ್ದಲ್ಲಿ— ಫೇ. ಫಾ.; ಕಾ. ಮೂ.;

ಜೊಲ್ಲು ಸೋರುವದು. ಬಾಯಿಗೆ ನೀರುಬಿಡೋಣ ಹಾಗೂ ವೇದನೆ— ನೇ. ಮೂ.;

ಹೊಟ್ಟೆಯಲ್ಲಿ ಜಡ ಒಜ್ಜೆ ಇದ್ದಂತೆ ಭಾವನೆ— ಕಾ. ಸ.;

ವಾತಜನ್ಯ ಅಗ್ನಿಮಾಂದ್ಯ— ಮ್ಯಾ. ಫಾ.; ಕಲ್ಕೆ. ಫಾ;

ವಾಯುವು ಬಹಳು ಸರಿಯುತ್ತಿದ್ದಲ್ಲಿ— ಕಲ್ಕೆ. ಫಾ.;

ಏನಾದರೂ ತಿಂದನಂತರ ವೇದನೆ— ಫೇ. ಫಾ.; ನೇ. ಸ.;

ಉಂಡನಂತರ ಮಳಮಳಿಸುವದೂ ವಾಂತಿಯೂ— ಫೇ. ಫಾ.;

ಉಂಡನಂತರ ಹೊಟ್ಟೆ ಕಡಿತ— ಕಲ್ಕೆ. ಫಾ.; ಫೇ. ಫಾ.; ನೇ. ಫಾ.;

ಊಟವಾದ ನಂತರ ಸುಮಾರು ೨ ತಾಸಿನ ಮೇಲೆ ಹೊಟ್ಟೆ ನೋವು— ನೇ. ಫಾ.

ಹಳೇ ಅಗ್ನಿಮಾಂದ್ಯದಲ್ಲಿ ಅಂಗಳದಲ್ಲಿ ತೆಳ್ಳನ ಹಳದೀ ಕೆನೆಯಂಥ ಲೇಪ— ನೇ. ಫಾ.;

ಅಂಗವಧ (ಅರ್ಧಾಂಗವಾಯು)

ಪ್ರಮುಖ ಔಷಧವು— ಕಾ. ಫಾ.

ಸರ್ತೆಮೇಲೆ ಕೊಡುವ ಎರಡನೇ ಔಷಧವು— ಮ್ಯಾ. ಫಾ.; ಕಲ್ಕೆ. ಫಾ.

ಒಮ್ಮಿಂದೊಮ್ಮೆ ಆಗುವ— ಕಾ. ಫಾ.

ಮೆಲ್ಲಮೆಲ್ಲನೆ ಆಗುವ— ಕಾ. ಫಾ.

ಕಂಪವಾಯು ಮೈ ನಡಗುವದು— ಮ್ಯಾ. ಫಾ.

ಗಾತ್ರಗಳನ್ನು ಕೃಶಮಾಡುವ— ಕಾ. ಫಾ.

ಸ್ನಾಯುಗಳನ್ನು ,, — ಕಾ. ಫಾ.

ಮುಖಚರ್ಯೆಯಲ್ಲಿಯ ಅರ್ದಿತ— ಕಾ. ಫಾ.

ಬಾಲಪಕ್ಷಘಾತ (ಸಣ್ಣಮಕ್ಕಳ ಅರ್ಧಾಂಗ)— ಕಾ. ಫಾ.
ಮೂತ್ರಾಶಯದ ಪಕ್ಷಘಾತ— ಕಾ. ಫಾ.
ಯಾವದೇ ವಿಶಿಷ್ಟ ಭಾಗದಲ್ಲಾಗುವ — ಕಾ. ಫಾ.; ನೇ. ಮೂ.
ಕಾಲಿನಮೇಲಿನ ಬೆವರು ಅಡಗಿದ್ದರಿಂದಾಗುವ— ಸಿ.
ಸಂಧಿವಾತಜನ್ಯ— ಕಲೆ . ಫಾ.; ಫೇ. ಫಾ.; ಕಾ. ಫಾ.
ಜ್ವರ ಮುಂತಾದ ಸಾರ್ವತ್ರಿಕ ಸಾಂಸರ್ಗಿಕ ಬೇನೆಯ ನಂತರ ಆಗುವ— ಕಾ. ಫಾ.
ಅಶಕ್ತತೆ ಇದ್ದು— ಕಲ್ಕೆ. ಫಾ.
ಸ್ಪರ್ಶಜ್ಞಾನವಿಲ್ಲದಿರೋಣ— ಕಾ. ಫಾ.
ಅಲ್ಲಾಡುವ ಶಕ್ತಿ ಇಲ್ಲದಂತಾಗೋಣ — ಕಾ. ಫಾ.
ಘಟಸರ್ಪದ ಮೂಲಕವಾಗಲಿ ವೇದನೆಯ ಮೂಲಕವಾಗಲಿ, ಸಂಭೋಗಾತಿರೇಕದಿಂದಾಗಲಿ, ಮಾನಸಿಕ ದಣುವಿಕೆಯಿಂದಾಗಲಿ— ನೇ. ಮೂ.
ಕಾಲಿಗೆ ಬರುವ ಬೆವರು ಅಡಗಿದ್ದರಿಂದ— ಸಿ.
ಹರಿದಂತೆ ಆಗುವ ವೇದನೆ, ಸ್ವಸ್ಥ ಕೂತದ್ದರಿಂದ, ಮತ್ತು ವಿಶ್ರಾಂತಿಯ ನಂತರ ಮೊದಲು ಅಲ್ಲಾಡಿದ ಕೂಡಲೆ ಹೆಚ್ಚಾಗುವ ಹಾಗೂ ಸ್ವಲ್ಪ ಸ್ವಲ್ಪ ಮೆಲ್ಲಗೆ ನಡೆದದ್ದರಿಂದ ಹಗುರು ಅನಿಸುವದು— ಕಾ. ಫಾ.
ಸಂತಾಪಜನ್ಯ ಅರ್ಧಾಂಗ ವಾಯು— ನೇ. ಮೂ.
ಅರ್ಧಾಂಗವಾಯು ಈ ವಿವರ ನೋಡಿರಿ.

## ಅಂಗಾಲು

ಅಂಗುಲಿಯಲ್ಲಿ ಉರುಪು — ಕಲ್ಕೆ. ಸ.; ನೇ. ಸ.; ಕಾ. ಫಾ.; ನೇ. ಮೂ; ಸಿ.
ತಿಂಡೆ— ಕಲ್ಕೆ. ಸ.; ಕಾ. ಫಾ.
ಅಂಗುಲಿನಲ್ಲಿ ವೇದನೆ— ನೇ. ಮೂ.; ಸಿ.
ಎಳೆದಂತೆ ಆಗುವದು — ಕಾ. ಫಾ.; ನೇ. ಫಾ.
ಅಂಗಾಲು ಬಾತದ್ದು— ಕಾ. ಮೂ.
ಅಂಗಾಲು ಸೆಟೆಯುವವು— ಸಿ.
ಅಂಗಾಲಿನಲ್ಲಿಯ ಉರುಪು ಮೊಳಕಾಲಿನವರೆಗೆ ಹಬ್ಬುವದು— ನೇ. ಸ.
ಉರಿಹತ್ತಿದಂತೆ, ಕೊಂಡೆಹೊಡದಂತೆ -- ಕಲ್ಕೆ. ಫಾ.
ಅಂಗುಷ್ಠದಲ್ಲಿ ನೋವು — ನೇ. ಮೂ.

